೭



# ನಾಗಚಂದ್ರ ಸಂಪುಟ

## ರಾಮಚಂದ್ರಚರಿತ ಪುರಾಣಂ
## ಮಲ್ಲಿನಾಥ ಪುರಾಣಂ

ಸಂಪಾದಕರು
ಡಾ. ಶಾಂತಿನಾಥ ದಿಬ್ಬದ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

| | | |
|---|---|---|
| ೧. | ಪಂಪ ಸಂಪುಟ | ಸಂ. ಪ್ರೊ. ಟಿ.ವಿ. ವೆಂಕಟಾಚಲ ಶಾಸ್ತ್ರೀ |
| ೨. | ಶಿವಕೋಟ್ಯಾಚಾರ್ಯ-ಚಾವುಂಡರಾಯ ಸಂಪುಟ | ಸಂ. ಪ್ರೊ. ಕಮಲಾ ಹಂಪನಾ |
| ೩. | ಪೊನ್ನ-ಕಮಲಭವ ಸಂಪುಟ | ಸಂ. ಪ್ರೊ. ಹಂಪ ನಾಗರಾಜಯ್ಯ |
| ೪. | ರನ್ನ ಸಂಪುಟ | ಸಂ. ಪ್ರೊ. ಹಂಪ ನಾಗರಾಜಯ್ಯ |
| ೫. | ನಾಗವರ್ಮ ಸಂಪುಟ | ಸಂ. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ |
| ೬. | ಶಾಂತಿನಾಥ-ಆಂಡಯ್ಯ ಸಂಪುಟ | ಸಂ. ಪ್ರೊ. ಪಿ.ವಿ. ನಾರಾಯಣ |
| ೭. | ನಾಗಚಂದ್ರ ಸಂಪುಟ | ಸಂ. ಡಾ. ಶಾಂತಿನಾಥ ದಿಬ್ಬದ |
| ೮. | ನಯಸೇನ ಸಂಪುಟ | ಸಂ. ಪ್ರೊ. ಎಸ್.ಪಿ. ಪಾಟೀಲ |
| ೯. | ಬ್ರಹ್ಮಶಿವ-ವೃತ್ತವಿಲಾಸ ಸಂಪುಟ | ಸಂ. ಡಾ. ಎಂ.ಎಂ. ಕಲಬುರ್ಗಿ |
| ೧೦. | ನೇಮಿಚಂದ್ರ ಸಂಪುಟ | ಸಂ. ಪ್ರೊ. ದೇ. ಜವರೇಗೌಡ |
| ೧೧. | ಬಂಧುವರ್ಮ ಸಂಪುಟ | ಸಂ. ಬಿ.ಎಸ್. ಸಣ್ಣಯ್ಯ |
| ೧೨. | ಅಗ್ಗಳ-ಆಚಣ್ಣ ಸಂಪುಟ | ಸಂ. ಜಿ.ಜಿ. ಮಂಜುನಾಥನ್ |
| ೧೩. | ಜನ್ನ ಸಂಪುಟ | ಸಂ. ಪ್ರೊ. ಸಿ.ಪಿ. ಕೃಷ್ಣಕುಮಾರ್ |
| ೧೪. | ಇಮ್ಮಡಿ ಗುಣವರ್ಮ-ಪಾರ್ಶ್ವಪಂಡಿತ ಸಂಪುಟ | ಸಂ. ವೈ.ಸಿ. ಭಾನುಮತಿ |
| ೧೫. | ಬಾಹುಬಲಿ-ಮಧುರ ಸಂಪುಟ | ಸಂ. ಪ್ರೊ. ಎನ್. ಬಸವಾರಾಧ್ಯ |
| ೧೬. | ಮೂರನೇ ಮಂಗರಸ ಸಂಪುಟ | ಸಂ. ಡಾ. ಬಿ.ವಿ. ಶಿರೂರ |
| ೧೭. | ರತ್ನಾಕರವರ್ಣಿ ಸಂಪುಟ | ಸಂ. ಪ್ರೊ. ಎಂ.ಜಿ. ಬಿರಾದಾರ |
| ೧೮. | ಸಾಳ್ವ ಸಂಪುಟ | ಸಂ. ಡಾ. ಎಂ.ಎ. ಜಯಚಂದ್ರ |
| ೧೯. | ದೇವಚಂದ್ರ ಸಂಪುಟ | ಸಂ. ಪ್ರೊ. ಎಚ್. ಜೆ. ಲಕ್ಕಪ್ಪಗೌಡ |
| ೨೦. | ವಾಕ್ಯ ಮಾಣಿಕ್ಯ ಸಂಪುಟ | ಸಂ. ಪ್ರೊ. ಜಿ.ಎಸ್. ಶಿವರುದ್ರಪ್ಪ |

ಸುವರ್ಣ ಕರ್ನಾಟಕ - ೨೦೦೬

# ನಾಗಚಂದ್ರ ಸಂಪುಟ

## ಮಲ್ಲಿನಾಥಪುರಾಣಂ-ರಾಮಚಂದ್ರ ಚರಿತ ಪುರಾಣಂ

ಸಂಪಾದಕರು

**ಡಾ. ಶಾಂತಿನಾಥ ದಿಬ್ಬದ**




ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ - ಹಂಪಿ

೨೦೦೬

**Samagra Kannada Jaina Sahitya Series - 7**

NAGACHANDRA'S SAMPUTA

Mallinatha Puranam-Ramachandra Charita Puranam

*Edited by*

**Dr. Shantinath Dibbad**
Reader in Kannada
Karnataka University Kittur Rani Channamma
Post Graduate Centre
Belgaum

*Published by*

**Prof. Mallepuram G. Venkatesha**
Director, Prasaranga
Kannada University, Hampi
Vidyaranya - 583 276

Pages : **LXXX + 828** **Price : Rs. 100/-**

First Impression : 2006

www.Kannadauniversity.org



ಪ್ರಕಾಶನ

**ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಮುದ್ರಣ

**ಸತ್ಯಶ್ರೀ ಪ್ರಿಂಟರ್ಸ್ (ಪ್ರೈ) ಲಿ.,**
ನಂ. ೧೬/೧, ೨ನೇ ಮುಖ್ಯ ರಸ್ತೆ, ೩ನೇ ಅಡ್ಡ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೨೬
ದೂರವಾಣಿ : ೦೮೦-೩೨೫೦೩೭೩೮ / ೨೨೪೨೫೭೩೬

# ಅಱಿವುದು ಧರ್ಮಮಂ ಕಾವ್ಯಧರ್ಮಮುಮಂ

ಕನ್ನಡ ವಿಶ್ವವಿದ್ಯಾಲಯವು ಕರ್ನಾಟಕ ಸರಕಾರದ ಆರ್ಥಿಕ ನೆರವಿನಿಂದ ರೂಪಿಸಿ, ಪ್ರಕಟಿಸುತ್ತಿರುವ ಸಮಗ್ರ ಕನ್ನಡ ಜೈನಸಾಹಿತ್ಯ ಸಂಪುಟಗಳ ಯೋಜನೆಯು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಮಹತ್ವಪೂರ್ಣವಾದದ್ದು. ೨೦೦೬ರ ಶ್ರವಣಬೆಳಗೊಳದ ಐತಿಹಾಸಿಕ ಗೊಮ್ಮಟ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯು ಈ ಸಮಗ್ರ ಕನ್ನಡ ಜೈನಸಾಹಿತ್ಯ ಸಂಪುಟಗಳ ಯೋಜನೆಯನ್ನು ರೂಪಿಸಿ ಕರ್ನಾಟಕ ಸರ್ಕಾರಕ್ಕೆ ಸಲ್ಲಿಸಿತು. ಕರ್ನಾಟಕ ಸರ್ಕಾರವು ಈಗಾಗಲೇ ಸಮಗ್ರ ವಚನಸಾಹಿತ್ಯ ಮತ್ತು ದಾಸಸಾಹಿತ್ಯ ಸಂಪುಟಗಳನ್ನು ಹೊರತಂದಿದ್ದು, ಈಗ ಸಮಗ್ರ ಜೈನಸಾಹಿತ್ಯ ಸಂಪುಟಗಳ ಪ್ರಕಟಣೆಯ ಮೂಲಕ ಪ್ರಾಚೀನ ಕನ್ನಡ ಸಾಹಿತ್ಯದ ಬಹಳ ಮಹತ್ವದ ಶರೀರವೊಂದನ್ನು ಪೂರ್ಣಗೊಳಿಸುತ್ತಿದೆ. ಈ ಸಮಗ್ರ ಜೈನಸಾಹಿತ್ಯ ಸಂಪುಟದ ಯೋಜನೆಯನ್ನು ೨೦೦೬ರ ಶ್ರವಣಬೆಳಗೊಳದ ಮಹಾಮಸ್ತಕಾಭಿಷೇಕದ ಭಾಗವಾಗಿ ಕರ್ನಾಟಕ ಸರಕಾರ ಅಂಗೀಕರಿಸಿ ಸಾರಸ್ವತ ಮಹಾಮಸ್ತಕಾಭಿಷೇಕ ಮಾಡಿದ ಪುಣ್ಯಕ್ಕೆ ಪಾತ್ರವಾಗಿದೆ. ಈ ಯೋಜನೆಯ ಮಹತ್ವವನ್ನು ಮನಗಂಡು ಉದಾರವಾದ ಆರ್ಥಿಕ ನೆರವು ನೀಡಿದ ಆಗಿನ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎನ್. ಧರ್ಮಸಿಂಗ್ ಅವರಿಗೂ, ಉಪಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಅವರಿಗೂ, ಸನ್ಮಾನ್ಯ ಲೋಕೋಪಯೋಗಿ ಸಚಿವರಾದ ಶ್ರೀ ಎಚ್.ಡಿ. ರೇವಣ್ಣ ಅವರಿಗೂ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಅಂದು ಚಾಲನೆಗೊಂಡ ಯೋಜನೆಗೆ ಮತ್ತೆ ಜೀವ ತುಂಬಿದ ಈಗಿನ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಚ್.ಡಿ. ಕುಮಾರಸ್ವಾಮಿ, ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರಿಗೆ ವಿಶೇಷ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಪ್ರಸ್ತಾವವನ್ನು ವಿಧಾನ ಪರಿಷತ್ತಿನಲ್ಲಿ ಮಂಡಿಸಿದ ಪರಿಷತ್ತಿನ ಸದಸ್ಯರಾದ ಡಾ. ಎಂ.ಆರ್. ತಂಗಾ, ಡಾ. ಚಂದ್ರಶೇಖರ ಕಂಬಾರ, ಡಾ. ಎಲ್. ಹನುಮಂತಯ್ಯ, ಶ್ರೀ ಹಸನಬ್ಬ ಅವರ ನೆರವನ್ನು ವಿಶೇಷವಾಗಿ ಸ್ಮರಿಸುತ್ತೇನೆ. ಕನ್ನಡದ ಹಿರಿಯ ಸಾಹಿತಿಗಳಾದ ಮತ್ತು ಜೈನಸಾಹಿತ್ಯದಲ್ಲಿ ವಿಶೇಷ ಪಾಂಡಿತ್ಯವುಳ್ಳ ಡಾ. ಹಂಪ. ನಾಗರಾಜಯ್ಯ ಮತ್ತು ಡಾ. ಕಮಲಾ ಹಂಪನಾ ಅವರು ಈ ಸಂಪುಟಗಳ ರೂಪರೇಷೆಯಿಂದ ತೊಡಗಿ ಕರ್ನಾಟಕ ಸರ್ಕಾರಕ್ಕೆ ಇದರ ಮಹತ್ವವನ್ನು ಮನವರಿಕೆ ಮಾಡಿಕೊಡುವವರೆಗೆ ವಿಶೇಷವಾದ ಕಾಳಜಿ ವಹಿಸಿ ಸಹಕರಿಸಿದ್ದಾರೆ.

ಪ್ರಾಚೀನ ಕನ್ನಡ ಸಾಹಿತ್ಯ ಆರಂಭವಾಗುವುದೇ ಜೈನ ಸಾಹಿತ್ಯ ಕೃತಿಗಳ ಮೂಲಕ. ಆದಿಕವಿ ಪಂಪನ **ವಿಕ್ರಮಾರ್ಜುನ ವಿಜಯ** ಮತ್ತು **ಆದಿಪುರಾಣಗಳು** ಕನ್ನಡ ಸಾಹಿತ್ಯದ ಮೊತ್ತಮೊದಲ ಮಹಾಕಾವ್ಯಗಳು. ಶಿವಕೋಟ್ಯಾಚಾರ್ಯರ **ವೊಡ್ಡಾರಾಧನೆ** ಕನ್ನಡದ ಮೊತ್ತಮೊದಲ ಉಪಲಬ್ಧ ಗದ್ಯಗ್ರಂಥ. ಸಂಸ್ಕೃತವೇ ಸಾಹಿತ್ಯನಿರ್ಮಾಣದ ಪ್ರಧಾನ ಭಾಷೆಯಾಗಿದ್ದ ಭಾರತ ದೇಶದಲ್ಲಿ ಕನ್ನಡದಂತಹ ಪ್ರಾದೇಶಿಕ ಭಾಷೆಯಲ್ಲಿ ಕಾವ್ಯರಚನೆ ಮಾಡುವ ಮೂಲಕ ಜೈನಕವಿಗಳು, ಪ್ರಾದೇಶಿಕ ಸಾಹಿತ್ಯ ನಿರ್ಮಾಣಕ್ಕೆ ನಾಂದಿ ಹಾಡಿದರು. ಆದಿಕವಿ ಪಂಪ **ಇದು ನಿಚ್ಚಂ ಪೊಸತು ಅರ್ಣವಂಬೋಲ್ ಅತಿ ಗಂಭೀರಂ ಕವಿತ್ವಂ** ಎಂದು ಹೇಳಿದ್ದಾನೆ. ಪಂಪಕವಿಯು ಆದಿಪುರಾಣದಲ್ಲಿ ಆದಿನಾಥನ ಭವಾವಳಿಗಳನ್ನು ಮತ್ತು ಆತನ ಮಕ್ಕಳಾದ ಭರತ ಬಾಹುಬಲಿಯರು ರಾಜ್ಯದ ಒಡೆತನಕ್ಕಾಗಿ ಪರಸ್ಪರ ಎದುರಾಳಿಗಳಾಗುವ ಸನ್ನಿವೇಶವನ್ನು ಚಿತ್ರಿಸಿದ್ದಾನೆ. ಅಣ್ಣ ತಮ್ಮಂದಿರ ನಡುವೆ ಮುಖಾಮುಖಿ ಯುದ್ಧದಲ್ಲಿ ಅಣ್ಣ ಭರತ ಸೋಲುತ್ತಾನೆ, ತಮ್ಮ ಬಾಹುಬಲಿ ಗೆಲ್ಲುತ್ತಾನೆ. ಆದರೆ ಈ ರೀತಿ ಗೆದ್ದ ಬಾಹುಬಲಿಯು ರಾಜ್ಯದ ಒಡೆತನವನ್ನು ನಿರಾಕರಿಸಿ ವೈರಾಗ್ಯಪರನಾಗಿ ಪ್ರತಿಮಾ ಯೋಗದಲ್ಲಿ ನಿಂತು ಗೊಮ್ಮಟನಾಗುತ್ತಾನೆ. ಅಂತಹ ವೈರಾಗ್ಯದ ಪ್ರತಿಮೆಯಾದ ಗೊಮ್ಮಟನ ಮಹಾಮಸ್ತಕಾಭಿಷೇಕದ ನೆನಪಿಗಾಗಿ ಕನ್ನಡ ಸಾಹಿತ್ಯದ ಗೊಮ್ಮಟ ಸದೃಶ ಜೈನಕೃತಿಗಳನ್ನು ಮತ್ತೆ ಹೊಸದಾಗಿ ಶುಭ್ರಗೊಳಿಸಿ ಸಾಹಿತ್ಯ ಮತ್ತು ಶಾಸ್ತ್ರದ ವಿಭಿನ್ನ ಅರ್ಚನೆಗಳ ಮೂಲಕ ಅವುಗಳಿಗೆ ಪ್ರಕಟಣೆಯ ಅಭಿಷೇಕವನ್ನು ಮಾಡಲಾಗಿದೆ.

ಆದಿಕವಿ ಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ **ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ** ಎಂದು ಹೇಳಿಕೊಂಡಿದ್ದಾನೆ. ಹೀಗಾಗಿ ಪ್ರಾಚೀನ ಕಾವ್ಯಗಳಲ್ಲಿ ಲೌಕಿಕ ಮತ್ತು ಆಗಮಿಕ ಎನ್ನುವ ಕಾವ್ಯ ಮತ್ತು ಪುರಾಣಗಳ ನಿರ್ಮಾಣದ ಒಂದು ಪರಂಪರೆ ಕಾಣಿಸಿಕೊಳ್ಳುತ್ತದೆ. ಪಂಪನಿಂದ ತೊಡಗಿ ಪೊನ್ನ, ರನ್ನರಿಂದ ಮುಂದುವರಿದು ಮುಂದಿನ ಕವಿಗಳಲ್ಲಿ ಆಗಮಿಕ ಕಾವ್ಯಗಳಾದ ತೀರ್ಥಂಕರರ ಪುರಾಣ ಕೃತಿಗಳ ನಿರ್ಮಾಣ ಒಂದು ನೋಂಪಿಯಂತೆ ಕಾಣಿಸಿಗುತ್ತದೆ. ಇನ್ನೊಂದು ಕಡೆ ನಯಸೇನ, ಜನ್ನ, ಬ್ರಹ್ಮಶಿವ, ವೃತ್ತವಿಲಾಸರಂತಹ ಕವಿಗಳು ಲೌಕಿಕ ಕಥೆಗಳಿಗೆ ಜೈನ ಆವರಣವನ್ನು ನಿರ್ಮಾಣ ಮಾಡಿ ಲೌಕಿಕ-ಧಾರ್ಮಿಕಗಳನ್ನು ಒಂದು ಗೂಡಿಸುವ ವಿಶಿಷ್ಟ ಕಲೆಗಾರಿಕೆಯನ್ನು ಮೆರೆಯುತ್ತಾರೆ. ಹೀಗೆ ೨೪ ತೀರ್ಥಂಕರರ ಪುರಾಣಕಾವ್ಯ ಒಂದು ಧಾರೆಯಾದರೆ ಚರಿತ್ರೆ ಲೌಕಿಕಕಥೆ ನೀತಿಕಥೆಗಳ ಮೂಲಕ ಸಮಕಾಲೀನ ಬದುಕಿಗೆ ಸ್ಪಂದಿಸಿದ ವೈವಿಧ್ಯಮಯ ಕಾವ್ಯಪರಂಪರೆಯು ಪ್ರಾಚೀನ ಜೈನಸಾಹಿತ್ಯದ ಇನ್ನೊಂದು ಮುಖ್ಯಧಾರೆಯಾಗಿದೆ. ಇದರೊಂದಿಗೆ ಗದ್ಯ ಸಾಹಿತ್ಯದ ದೃಷ್ಟಿಯಿಂದ ಶಿವಕೋಟ್ಯಾಚಾರ್ಯರ **ವೊಡ್ಡಾರಾಧಾನೆ** ಮತ್ತು ಚಾವುಂಡರಾಯನ **ಚಾವುಂಡರಾಯ ಪುರಾಣ** ಇನ್ನೊಂದು ಪರಂಪರೆಯನ್ನು ಕಟ್ಟಿಕೊಡುತ್ತದೆ. ಒಂದು ಕಡೆ ಜೈನಧರ್ಮದ ಚೌಕಟ್ಟಿನ ಒಳಗಡೆ ಕತೆಗಳು ಮಾಧ್ಯಮವಾಗಿ ಬಳಕೆಯಾದರೆ, ಇನ್ನೊಂದೆಡೆ ಜೈನಧರ್ಮದ ಮೇಲ್ಮೆಗಾಗಿ ಸಾಧನೆ ಮಾಡಿದ ಸಾಂಸ್ಕೃತಿಕ ವ್ಯಕ್ತಿಯ ಸುತ್ತ ಕಥನವೊಂದು ನಿರ್ಮಾಣವಾಗುತ್ತದೆ. ಇವುಗಳ ನಡುವೆ ಇಮ್ಮಡಿ ನಾಗವರ್ಮನಂತಹ ಶಾಸ್ತ್ರಕಾರನು ಭಾಷೆ ಮತ್ತು ಕಾವ್ಯ ಲಕ್ಷಣಕ್ಕೆ ಸಂಬಂಧಿಸಿದ ಶಾಸ್ತ್ರಗ್ರಂಥಗಳನ್ನು ರಚಿಸಿದ್ದಾನೆ. ಮಧ್ಯಯುಗೀನ ಕಾಲದಲ್ಲಿ ರತ್ನಾಕರವರ್ಣಿಯಂತಹ ಕವಿಯು ಸಾಂಗತ್ಯದಲ್ಲಿ **ಭರತೇಶ**

ವೈಭವ ಕಾವ್ಯರಚಿಸಿ ಜೈನ ಕಾವ್ಯಗಳ ಆಶಯದ ಸಾಂಸ್ಕೃತಿಕ ಪಲ್ಲಟವನ್ನು ದಾಖಲಿಸುತ್ತಾನೆ. ೧೮೦೦ರ ಕಾಲಕ್ಕೆ ಬರುವ ದೇವಚಂದ್ರನ **ರಾಜಾವಳಿ ಕಥೆಯು** ಆಧುನಿಕ ಕನ್ನಡದ ಪೂರ್ವದ ಕಥಾರಚನೆಯ ಅರುಣೋದಯದ ಹೆಜ್ಜೆಯಾಗಿ ಮುಖ್ಯವಾದ ಕೃತಿಯಾಗಿದೆ.

ಒಂದು ಅಂದಾಜಿನ ಪ್ರಕಾರ ಸುಮಾರು ೪೫೦ ಜೈನಕವಿಗಳು ೫೨೦ಕ್ಕೂ ಹೆಚ್ಚಿನ ಕನ್ನಡ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸುಮಾರು ಅರ್ಧದಷ್ಟು ಕೃತಿಗಳು ಲಭ್ಯವೆಂದು ನಾವು ಭಾವಿಸಿದರೂ ಇವುಗಳ ಪ್ರಮಾಣ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಗಣನೀಯ ಎನ್ನಿಸುತ್ತದೆ. ಮಹಾಕಾವ್ಯದಿಂದ ತೊಡಗಿ ಮುಕ್ತಕದ ವರೆಗೆ, ಗಣಿತಶಾಸ್ತ್ರದಿಂದ ಹಿಡಿದು ಸೂಪಶಾಸ್ತ್ರದ ವರೆಗೆ, ಜನಪದ ಕಥೆಯಿಂದ ಆರಂಭಿಸಿದ ವಿಡಂಬನ ಸಾಹಿತ್ಯದ ವರೆಗೆ ಕನ್ನಡ ಜೈನಸಾಹಿತ್ಯದ ಹರಹು ವ್ಯಾಪಿಸಿಕೊಂಡಿದೆ.

ಪಂಪ ಕವಿಯು ತನ್ನ ಕಾವ್ಯದಲ್ಲಿ ಮಾರ್ಗ ಮತ್ತು ದೇಸಿಗಳ ಕುರಿತು ಮಾತನಾಡುತ್ತಾನೆ. ಕನ್ನಡ ಜೈನಸಾಹಿತ್ಯದ ಬಗ್ಗೆ ಹೇಳುವಾಗ ಜೈನ ಪುರಾಣಗಳ ಪರಿಭಾಷೆ ಮತ್ತು ಪರಿಮಾಣಗಳು ಮಾರ್ಗವಾದರೆ, ಇತಿಹಾಸ, ಸಮಾಜ, ಲೌಕಿಕ ಪ್ರಪಂಚ ದೇಸಿಯಾಗುತ್ತದೆ. ಪಂಪನ ಕಾವ್ಯಗಳ ನಾಣ್ನುಡಿಯಿಂದ ತೊಡಗಿ, ವಡ್ಡಾರಾಧನೆ ಕತೆಗಳ ಗ್ರಾಮೀಣ ಬದುಕಿನಿಂದ ಮುಂದುವರಿದು, ನಯಸೇನನ ಧರ್ಮಾಮೃತದ ಕಥೆಗಳ ಮಾಲೋಪಮೆಗಳಿಂದ ಹಾದು ಬಂದು, ರತ್ನಾಕರನ ಭರತೇಶ ವೈಭವದ ನುಡಿಗಟ್ಟುಗಳ ವರೆಗೆ ಕನ್ನಡದ ನಿಜವಾದ ದೇಸಿಯನ್ನು ಜೈನ ಸಾಹಿತ್ಯ ನಿರ್ಮಿಸಿಕೊಂಡಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಂಪೂಕಾವ್ಯ ಪ್ರಕಾರ ಜೈನರಿಂದ ಆರಂಭವಾಯಿತು. ಸಾಂಗತ್ಯ ಕಾವ್ಯ ಪ್ರಕಾರಕ್ಕೆ ನಾಂದಿ ಹಾಡಿದವರು ಜೈನಕವಿಗಳು. ಗದ್ಯವನ್ನು ಮೊದಲು ಮಾಡಿದವರು ಜೈನ ಕಥೆಗಾರರು. ಕಾವ್ಯಶಾಸ್ತ್ರ, ಛಂದಸ್ಸು, ವ್ಯಾಕರಣ, ಸೂಪಶಾಸ್ತ್ರದಂತಹ ಶಾಸ್ತ್ರ ಪಾಂಡಿತ್ಯವನ್ನು ಕನ್ನಡದಲ್ಲಿ ಕಟ್ಟಿಕೊಟ್ಟವರು ಜೈನರು. ಹೀಗೆ ಕನ್ನಡದ ವಿದ್ವತ್ತು, ವಿವೇಕ ಮತ್ತು ವಿಸ್ಮಯ ಕನ್ನಡ ಸಾಹಿತ್ಯದಲ್ಲಿ ಜೈನ ಕವಿಗಳಿಂದ ಅಪೂರ್ವವಾಗಿ ನಿರ್ಮಾಣವಾಗಿದೆ ಮತ್ತು ಪ್ರಸಾರವಾಗಿದೆ.

ಈ ಹಿನ್ನೆಲೆಯಲ್ಲಿ ಸಮಗ್ರ ಕನ್ನಡ ಜೈನ ಸಾಹಿತ್ಯ ಯೋಜನೆಯನ್ನು ನಿಗದಿತ ಕಾರ್ಯವಿಧಾನದ ಮೂಲಕ ರೂಪಿಸಿಕೊಂಡು ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಬೇಕೆಂದು ನಾವು ತೀರ್ಮಾನಿಸಿಕೊಂಡೆವು. ಇದಕ್ಕಾಗಿ ಈ ಕ್ಷೇತ್ರದಲ್ಲಿ ನುರಿತ ನಾಡಿನ ಹಿರಿಯರನ್ನೊಳಗೊಂಡ ಉನ್ನತ ಸಲಹಾ ಸಮಿತಿ ಹಾಗೂ ಸಂಪನ್ಮೂಲ ವಿದ್ವಾಂಸರನ್ನು ಈ ಯೋಜನೆಯ ವ್ಯಾಪ್ತಿಗೆ ಒಳಗೊಳ್ಳಲು ಬಯಸಲಾಯಿತು. ಅದರಂತೆ ನಾಡಿನ ಗಣ್ಯ ವಿದ್ವಾಂಸರು ಈ ಬೃಹತ್ ಯೋಜನೆಯಲ್ಲಿ ಪಾಲ್ಗೊಂಡರೆಂಬುದು ಕನ್ನಡ ವಿಶ್ವವಿದ್ಯಾಲಯಕ್ಕೆ ಹೆಮ್ಮೆಯ ಸಂಗತಿ.

ಸಮಗ್ರ ಕನ್ನಡ ಜೈನ ಸಾಹಿತ್ಯ ಸಂಪುಟದ ಯೋಜನೆಯ ಉನ್ನತ ಸಲಹಾ ಸಮಿತಿಯ ಸದಸ್ಯರಾದ ಡಾ. ದೇ. ಜವರೇಗೌಡ, ಡಾ. ಜಿ.ಎಸ್. ಶಿವರುದ್ರಪ್ಪ, ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ, ಡಾ. ಹಂಪ. ನಾಗರಾಜಯ್ಯ, ಡಾ. ಕಮಲಾ ಹಂಪನಾ, ಡಾ. ಚಂದ್ರಶೇಖರ ಕಂಬಾರ, ಡಾ. ಎಂ.ಎಂ. ಕಲಬುರ್ಗಿ, ಡಾ. ಎಚ್.ಜೆ. ಲಕ್ಕಪ್ಪಗೌಡ, ಡಾ. ಎಂ.ಜಿ. ಬಿರಾದಾರ ಮತ್ತು ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು, ಕರ್ನಾಟಕ ಸರ್ಕಾರದ ಕಂದಾಯ ಮತ್ತು

ಮುಜರಾಯಿ ಇಲಾಖೆಯ ಕಾರ್ಯದರ್ಶಿಗಳು ತಮ್ಮ ಸೂಚನೆ ಸಲಹೆಗಳಿಂದ ಈ ಸಂಪುಟಗಳ ಸ್ವರೂಪ ಮತ್ತು ಅನುಷ್ಠಾನಗಳ ಎಲ್ಲಾ ಹಂತಗಳಲ್ಲಿಯೂ ಮಾರ್ಗದರ್ಶನ ಕೊಟ್ಟಿದ್ದಾರೆ. ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರು ಸಮಿತಿಯ ಸಂಚಾಲಕರಾಗಿ ಇಡೀ ಯೋಜನೆಯ ಅನುಷ್ಠಾನದ ಕೆಲಸವನ್ನು ಹೆಜ್ಜೆ ಹೆಜ್ಜೆಗೂ ಸಮರ್ಥವಾಗಿ ನಿರ್ವಹಿಸಿದ್ದಾರೆ. ಹಿಂದಿನ ಕುಲಸಚಿವರಾಗಿದ್ದ ಪ್ರೊ. ಕರಿಗೌಡ ಬೀಚನಹಳ್ಳಿ ಅವರು ಯೋಜನೆಯ ಆಡಳಿತಾತ್ಮಕ ನಿರ್ವಹಣೆಯನ್ನು ಅಚ್ಚುಕಟ್ಟಾಗಿ ನಡೆಸಿಕೊಟ್ಟಿದ್ದಾರೆ. ಇಂದಿನ ಕುಲಸಚಿವರಾದ ಶ್ರೀ ವಿ. ಶಂಕರ್ ಅವರು ಈ ಯೋಜನೆಯ ಆಡಳಿತಾತ್ಮಕ ನಿರ್ವಹಣೆಯನ್ನು ನಡೆಸಿಕೊಡುತ್ತಿದ್ದಾರೆ. ನಮ್ಮ ವಿಶ್ವವಿದ್ಯಾಲಯದ ಜೈನ ಸಂಸ್ಕೃತಿ ಅಧ್ಯಯನ ಪೀಠದ ಸಂಚಾಲಕರಾದ ಡಾ. ಎಂ. ಉಷಾ ಅವರು ಈ ಯೋಜನೆಯನ್ನು ರೂಪಿಸುವಲ್ಲಿ ವಿಶೇಷವಾಗಿ ಸಹಕರಿಸಿದ್ದಾರೆ.

ವಿಶ್ವವಿದ್ಯಾಲಯವು ಈ ಯೋಜನೆಯನ್ನು ಕೈಗೆತ್ತಿಕೊಂಡಾಗ ಪ್ರಕಟಣಾ ಸ್ವರೂಪವನ್ನು ಸ್ಥೂಲವಾಗಿ ಹೀಗೆ ಗುರುತಿಸಿಕೊಳ್ಳಲಾಯಿತು. ಇದು ಡೆಮ್ಮಿ ೧/೮ ಆಕಾರದ ಸುಮಾರು ಇಪ್ಪತ್ತು ಸಂಪುಟಗಳಿಂದ ಕೂಡಿರಬೇಕು. ಪ್ರತಿ ಸಂಪುಟವೂ ಅಂದಾಜು ೬೦೦ ಪುಟಗಳಾಗಿರಬೇಕು. ಸಂಪುಟದ ಸಂಪಾದಕರು ಆಯಾ ಸಂಪುಟಕ್ಕೆ ಸೂಕ್ತವಾದ ಕವಿ ಕಾವ್ಯ ಪರಿಚಯ, ಚಾರಿತ್ರಿಕ ಹಾಗೂ ಸಾಹಿತ್ಯಿಕ ಮಹತ್ವ ಇತ್ಯಾದಿ ವಿವರಗಳನ್ನು ಒಳಗೊಂಡ ಪ್ರಸ್ತಾವನೆ ಬರೆಯಬೇಕೆಂದು ನಿರ್ಣಯಿಸಲಾಯಿತು. ಸಂಪುಟಗಳು ಜನಪ್ರಿಯ ಆವೃತ್ತಿ ಆಗಿರುವುದರಿಂದ ಪದ್ಯಗಳಲ್ಲಿ ಪಾಠಾಂತರಗಳನ್ನು ನೀಡಬೇಕಾಗಿಲ್ಲ. ಪ್ರತಿಯೊಬ್ಬ ಕವಿಯ ಸಮಗ್ರ ಕಾವ್ಯವನ್ನು ಒಂದು ಸಂಪುಟದಲ್ಲಿ ತರುವುದೆಂದು ಸಮಿತಿ ತೀರ್ಮಾನಿಸಿತು. ವಸ್ತು ವಿಷಯಕ್ಕೆ ಅನುಗುಣವಾಗಿ ಬೇರೆ ಬೇರೆ ಎರಡೆರಡು ಕಾವ್ಯಗಳನ್ನು ಒಂದೇ ಸಂಪುಟದಲ್ಲಿ ಅಳವಡಿಸುವುದು ಸೂಕ್ತವೆಂದು ತೀರ್ಮಾನ ತೆಗೆದುಕೊಳ್ಳಲಾಯಿತು. ಈಗಾಗಲೇ ಸಂಪಾದನೆಗೊಂಡು, ಪ್ರಕಟವಾಗಿರುವ ಕಾವ್ಯಗಳನ್ನು ಮೊದಲ ಹಂತದಲ್ಲಿ ತೆಗೆದುಕೊಳ್ಳುವುದೆಂದೂ ಅಪೂರ್ವ ಕೃತಿಗಳನ್ನು ಈ ಮಾಲೆಯಲ್ಲಿ ಸೇರಿಸಿಕೊಳ್ಳುವುದೆಂದೂ ನಿಶ್ಚಯಿಸಲಾಯಿತು. ಪಂಪ, ಪೊನ್ನ, ರನ್ನ, ಜನ್ನ, ನಾಗವರ್ಮ, ನಯಸೇನ, ಸಾಳ್ವ ಮುಂತಾದವರ ಕಾವ್ಯಗಳು ಈಗಾಗಲೇ ಮುದ್ರಣಗೊಂಡಿವೆ. ಆದರೂ ಪಾಠಕ್ಲೇಶ ಅರ್ಥಕ್ಲೇಶಗಳು ಹೇಗೋ ಉಳಿದುಬಿಟ್ಟಿವೆ. ಆದುದರಿಂದ ಎಲ್ಲ ಮುದ್ರಿತ ಪಾಠಗಳನ್ನು ಗಮನಿಸಿ ಈ ಎಲ್ಲ ಕ್ಲೇಶಗಳನ್ನು ನಿವಾರಿಸಿ ಸರ್ವಪ್ರತಿಪಾಠಗಳನ್ನು ಇಟ್ಟುಕೊಳ್ಳುವುದು ಅಗತ್ಯವೆಂದು ಸಮಿತಿ ಭಾವಿಸಿತು. ಗ್ರಂಥದ ಕೊನೆಗೆ ಶಬ್ದಾರ್ಥಕೋಶ, ಪಾರಿಭಾಷಿಕಕೋಶ, ಸಹಾಯಕ ಸಾಹಿತ್ಯ ನೀಡುವುದು ಅಗತ್ಯವೆಂದು ಸಂಪಾದಕರಿಗೆ ವಿನ್ನವಿಸಿಕೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಇಪ್ಪತ್ತು ಸಂಪುಟಗಳು ನಿಮ್ಮ ಎದುರಿಗಿವೆ. ಶ್ರಮಸಾಧ್ಯವಾದ ಇಂಥ ಕಾವ್ಯಗಳನ್ನು ಸಂಪಾದಿಸಿಕೊಟ್ಟ ಕನ್ನಡದ ಹಿರಿಯ ವಿದ್ವಾಂಸರಾದ ಎಲ್ಲ ಸಂಪಾದಕರಿಗೆ ಕೃತಜ್ಞತೆ ಹೇಳುವುದು ಮಾತ್ರ ಈಗ ನಮಗೆ ಸಾಧ್ಯವಾಗಿದೆ.

ಪ್ರಾಚೀನ ಕನ್ನಡ ಜೈನಕಾವ್ಯ ಪರಂಪರೆಯಲ್ಲಿ ನಾಗಚಂದ್ರನ **ಮಲ್ಲಿನಾಥಪುರಾಣಂ** ಮತ್ತು **ರಾಮಚಂದ್ರ ಚರಿತ ಪುರಾಣಂ** ಪಂಪನ ಕಾವ್ಯಮಾರ್ಗವನ್ನು ಸಾರ್ಥಕವಾಗಿ ಪಲ್ಲಟ ಮಾಡಿದ

ರಚನೆಗಳು. ಪಂಪನು ಲೌಕಿಕ ಭಾರತವನ್ನು **ವಿಕ್ರಮಾರ್ಜುನ ವಿಜಯಂ** ಎಂಬ ಹೆಸರಿನಲ್ಲಿ ರಚಿಸಿದರೆ, ನಾಗಚಂದ್ರನು ಜೈನರಾಮಾಯಣವನ್ನು **ರಾಮಚಂದ್ರ ಚರಿತ ಪುರಾಣಂ** ಎಂಬ ಹೆಸರಿನಲ್ಲಿ ನಿರ್ಮಿಸಿದ್ದಾನೆ. ಹತ್ತೊಂಬತ್ತನೆಯ ತೀರ್ಥಂಕರನಾದ ಮಲ್ಲಿನಾಥನನ್ನು ಕುರಿತು ಒಂದು ಪುರಾಣ ಕಾವ್ಯವನ್ನು ರಚಿಸಿರುವುದರ ಜತೆಗೆ ಜೈನರಾಮಾಯಣ ಪರಂಪರೆಗೆ ಸೇರಿದ ಕಥೆಯನ್ನು ಇನ್ನೊಂದು ಕಾವ್ಯವನ್ನಾಗಿ ರೂಪಿಸಿದ್ದಾನೆ. ಮೇಲ್ನೋಟಕ್ಕೆ ಎರಡೂ ಜೈನಪುರಾಣಗಳೇ. ಆದರೆ, ಇವೆರಡು ಪುರಾಣ ಕಾವ್ಯಗಳ ವಸ್ತು, ವಿನ್ಯಾಸ, ಆಶಯಗಳು ಒಂದೇ ಅಲ್ಲ. ವಿಮಲಸೂರಿ, ರವಿಷೇಣ ಇವರ ಜೈನರಾಮಾಯಣ ಪರಂಪರೆಗೆ ಹೆಚ್ಚು ಋಣಿಯಾಗಿರುವ ನಾಗಚಂದ್ರನು ವೈದಿಕ ರಾಮಾಯಣವನ್ನು ಒಡೆದು ಜೈನರಾಮಾಯಣವೊಂದನ್ನು ಕಟ್ಟುವುದರ ಹಿಂದೆ ೧೨ನೇ ಶತಮಾನದ ಕರ್ನಾಟಕದ ಜೈನಧರ್ಮದ ಉದಾರೀಕರಣದ ಕುರುಹು ಕೂಡಾ ದೊರೆಯುತ್ತದೆ. ಜನಪದ ಪರಂಪರೆಯ ರಾಮಾಯಣದ ವಸ್ತುವನ್ನು ಒಪ್ಪಿಕೊಂಡೇ ವೈದಿಕ ರಾಮಾಯಣದ ಆಶಯವನ್ನು ನಿರಾಕರಿಸುವ ಪ್ರತಿರೋಧದ ಕಾರ್ಯತಂತ್ರವನ್ನು ಪಂಪರಾಮಾಯಣದಲ್ಲಿ ಗುರುತಿಸಬಹುದಾಗಿದೆ. ಪ್ರತಿವಾಸುದೇವನಾಗಿ ರಾವಣನನ್ನು ಸಚ್ಚಾರಿತ್ರ್ಯದ ಪಾತ್ರವನ್ನಾಗಿ ಕಲ್ಪಿಸಿ ಸಣ್ಣ ಲೋಪದಿಂದ ದುರಂತ ಸಂಭವಿಸುವ, ಕ್ಷಮೆ ಹಾಗೂ ಪ್ರಾಯಶ್ಚಿತ್ತದಿಂದ ಪರಿಶುದ್ಧವಾಗುವ ಜೈನದಾರ್ಶನಿಕತೆಯ ತತ್ತ್ವ ಇಲ್ಲಿ ಮುಖ್ಯವಾಗುತ್ತದೆ. ಒಂದರ್ಥದಲ್ಲಿ ರಾವಣನೇ ಹಂತಹಂತವಾಗಿ ಪರಿಪಕ್ವವಾಗುವ ಪರಿಕಲ್ಪನೆ ಜೈನಪುರಾಣಗಳ ಭವಾವಳಿಗಳ ಮಾದರಿಯನ್ನು ಹೊಂದಿದೆ. ಲೌಕಿಕ ಕಾವ್ಯಗಳ ರಾಗ, ದ್ವೇಷ, ಆಸೆ, ಪ್ರಾಯಶ್ಚಿತ್ತಗಳ ಮೂಲಕವೇ ಶಾಂತತೆಯ ಸ್ಥಿತಿಯೊಂದಕ್ಕೆ ತಲುಪುವ ಆದರ್ಶ ಈ ಕಾವ್ಯದಲ್ಲಿದೆ.

ಹತ್ತೊಂಬತ್ತನೆಯ ತೀರ್ಥಂಕರನ ಕಥಾನಕವುಳ್ಳ ನಾಗಚಂದ್ರನ **ಮಲ್ಲಿನಾಥ ಪುರಾಣಂ** ಒಬ್ಬ ಜೈನಕವಿಯಾಗಿ ಮತ್ತು ಶಾಸ್ತ್ರಕವಿಯಾಗಿ ನಾಗಚಂದ್ರನ ಪಾಂಡಿತ್ಯದ ನಿರ್ಮಾಣವಾಗಿದೆ. ಮೂಲದ ಪುರಾಣ ಕಥೆಯನ್ನು ಪ್ರೌಢ ಮಹಾಕಾವ್ಯದ ರೂಪದಲ್ಲಿ ವಿಸ್ತರಿಸಿರುವ ನಾಗಚಂದ್ರನು ತನ್ನ ಹಿಂದಿನ ಜೈನಕವಿಗಳ ಪುರಾಣ ಕಾವ್ಯಗಳ ಶರೀರದೊಳಗಡೆ ಪರಕಾಯ ಪ್ರವೇಶ ಮಾಡಿದ್ದಾನೆ. ಜೈನಪುರಾಣ ಕಾವ್ಯದ ಎಲ್ಲ ಅವಯವಗಳನ್ನು ಅವಸ್ಥಾಂತರಗಳನ್ನು ಶ್ರದ್ಧೆ-ಭಕ್ತಿಗಳಿಂದ ಮೈಮರೆಸುವಂತೆ ವಿಸ್ತರಿಸುವ ಕಲೆಗಾರಿಕೆ ನಾಗಚಂದ್ರನಿಗೆ ಸಿದ್ಧಿಸಿದೆ. ಮಹಾಕಾವ್ಯವೊಂದರ ನಿರ್ಮಾಣದ ಸ್ಥೂಲ ಸಿದ್ಧ ಮಾದರಿಯನ್ನು ಇಟ್ಟುಕೊಂಡು ಅದರೊಳಗೆ ತನ್ನ ಅನನ್ಯವಾದ ಶೈಲಿಯನ್ನು ನಾಗಚಂದ್ರ ಆವಾಹನೆ ಮಾಡಿದ್ದಾನೆ.

ಡಾ. ಶಾಂತಿನಾಥ ದಿಬ್ಬದ ಅವರು ಉತ್ತಮ ಪ್ರಾಧ್ಯಾಪಕರು. ಹಳಗನ್ನಡ, ಅದರಲ್ಲೂ ಜೈನ ಸಾಹಿತ್ಯವನ್ನು ಕುರಿತು ವಿಶೇಷ ಒಲವು ಹೊಂದಿದವರು. ತಮ್ಮ 'ಪಂಪ : ಒಂದು ಸಾಂಸ್ಕೃತಿಕ ಅಧ್ಯಯನ', 'ವಾಗ್ದೇವಿ ಭಂಡಾರದ ಮುದ್ರೆ' 'ಆಗಮಿಕ', 'ಜೀವಪರ-ಜನಪರ' ಮೊದಲಾದ ಕೃತಿಗಳಿಂದ ವಿದ್ವಾಂಸ ವಲಯದಲ್ಲಿ ಗುರುತಿಸಲ್ಪಟ್ಟವರು. ನಾಗಚಂದ್ರನ **ಮಲ್ಲಿನಾಥ ಪುರಾಣ** ಮತ್ತು **ರಾಮಚಂದ್ರ ಚರಿತ ಪುರಾಣ**ಗಳ ಪೂರ್ಣ ಸಂಪಾದನೆಯ ಹಾಗೂ ಸಂಗ್ರಹ ಸಂಪಾದನೆಯ ಪಠ್ಯಗಳನ್ನು ಪರಿಶೀಲಿಸಿ ಮತ್ತು ನಾಗಚಂದ್ರನನ್ನು ಕುರಿತು ಈವರೆಗೆ ಬಂದಿರುವ ಸಂಶೋಧನೆಯ ಬರೆಹಗಳನ್ನು ಸಮಗ್ರವಾಗಿ ಅವಲೋಕಿಸಿ ವಿದ್ವತ್ಪೂರ್ಣವಾಗಿ ಈ ಎರಡು

ಕಾವ್ಯಗಳನ್ನು ಸಂಪಾದಿಸಿದ್ದಾರೆ ಮತ್ತು ವಿಸ್ತೃತವಾದ ಅಧ್ಯಯನಪೂರ್ಣವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಅವರು ವಿವರವಾದ ಪ್ರಸ್ತಾವನೆಯೊಂದಿಗೆ ನಾಗಚಂದ್ರ ಸಂಪುಟವನ್ನು ಸಿದ್ಧಪಡಿಸಿಕೊಟ್ಟಿದ್ದು ಅಭಿನಂದನೆಗೆ ಅರ್ಹರಾಗಿದ್ದಾರೆ. ಅವರಿಗೆ ಕನ್ನಡ ವಿಶ್ವವಿದ್ಯಾಲಯದ ಪರವಾಗಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥವನ್ನು ಅಚ್ಚುಕಟ್ಟಾಗಿ ಹೊರತರಲು ಶ್ರಮಿಸಿದ ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ ಅವರನ್ನು ವಿಶೇಷವಾಗಿ ನೆನೆಯುತ್ತೇನೆ.

**ಬಿ.ಎ. ವಿವೇಕ ರೈ**
ಕುಲಪತಿ

# ಸಂಪಾದಕರ ಮಾತು

ನಾಗಚಂದ್ರನ ಮಲ್ಲಿನಾಥ ಪುರಾಣವನ್ನು ಎಸ್.ಜಿ. ನರಸಿಂಹಾಚಾರ್ ಮತ್ತು ಆರ್. ನರಸಿಂಹಾಚಾರ್ಯರು(ಮೈಸೂರು) ಸೇರಿ ೧೮೯೫ರಲ್ಲಿ ಮೊದಲ ಬಾರಿಗೆ ಸಂಪಾದಿಸಿ ಪ್ರಕಟಿಸಿದ್ದಾರೆ. ಅದರ ತರುವಾಯ 'ಮಲ್ಲಿನಾಥ ಪುರಾಣ'ದ ಮಹತ್ವದ ಆವೃತ್ತಿ ಎಂದರೆ ಡಾ.ಬಿ.ಬಿ. ಹೆಂಡಿಯವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಮೂಲಕ ೧೯೭೪ರಲ್ಲಿ ಪ್ರಕಟಿಸಿದ "ನಾಗಚಂದ್ರ ಕವಿ ಕೃತ ಮಲ್ಲಿನಾಥ ಪುರಾಣಂ" ಎಂಬುದಾಗಿದೆ. ಈ ಕೃತಿಗೆ ಮುನ್ನುಡಿ ಬರೆಯುತ್ತ ಪ್ರಧಾನ ಸಂಪಾದಕರಾಗಿದ್ದ ಡಾ|| ಆರ್.ಸಿ. ಹಿರೇಮಠ ಅವರು ಡಾ. ಹೆಂಡಿಯವರು ಬಳಸಿದ ಹಸ್ತಪ್ರತಿಗಳ ವಿವರಗಳನ್ನು ನೀಡಿದ್ದಾರೆ : : ಒಟ್ಟು ಅವರು ಐದು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಆಗಲೇ ಮುದ್ರಿತವಾಗಿದ್ದ ಆರ್. ನರಸಿಂಹಾಚಾರ್ಯ ಮತ್ತು ಎಸ್.ಜಿ. ನರಸಿಂಹಾಚಾರ್ ಅವರ ಕೃತಿಯನ್ನು 'ಪ' ಎಂಬ ಸಂಕೇತಾಕ್ಷರದೊಂದಿಗೆ ಹೆಂಡಿಯವರು ಬಳಸಿಕೊಂಡಿದ್ದಾರೆ. ಆದರೆ ಮುದ್ರಿತ ಪ್ರತಿಯ ಸ್ಥಿತಿ, ಅದನ್ನು ಕೊಟ್ಟವರು ಇತ್ಯಾದಿ ಯಾವುದೇ ವಿವರಗಳನ್ನು ಅವರು ಕೊಟ್ಟಿಲ್ಲ. ಬಹುಶಃ ಅವುಗಳ ಅಲಭ್ಯತೆ ಅದಕ್ಕೆ ಕಾರಣವಾಗಿರಬಹುದು. ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟ್‌ನ ಕೆ.೧೫ ಸಂಖ್ಯೆಯ ಸುಸ್ಥಿತಿಯಲ್ಲಿರುವ ೧೮೩ ತಾಳೆಗರಿಗಳನ್ನು ಹೊಂದಿರುವ ಹಸ್ತಪ್ರತಿಯನ್ನು ಅವರು 'ಮ' ಎಂಬ ಸಂಕೇತಾಕ್ಷರದೊಂದಿಗೆ ಬಳಸಿಕೊಂಡಿದ್ದಾರೆ. ಓರಿಯಂಟಲ್ ಲೈಬ್ರರಿ ಮೈಸೂರಿನಲ್ಲಿ ದೊರೆತ ಸಾಧಾರಣ ಸ್ಥಿತಿಯಲ್ಲಿರುವ ೧೦೩ ತಾಳೆಗರಿಗಳನ್ನು ಹೊಂದಿದ ಕಾಗದದ ಪ್ರತಿಯನ್ನು 'ಮಾ' ಎಂಬ ಹೆಸರಿನೊಂದಿಗೆ ಇರಿಸಿಕೊಂಡಿದ್ದಾರೆ. ಅವುಗಳ ಜೊತೆಗೆ 'ವರಂಗ'ದ ಜೈನ ಮಠದಲ್ಲಿದ್ದ ೧೦೩ ತಾಳೆಗರಿಗಳನ್ನು ಹೊಂದಿದ ಹಸ್ತ ಪ್ರತಿಯನ್ನು 'ರ' ಎಂದು ಗುರ್ತಿಸಿ ಬಳಸಿಕೊಂಡಿರುವುದಾಗಿ ಅಲ್ಲಿ ತಿಳಿಸಲಾಗಿದೆ. ಮುದ್ರಿತ ಪ್ರತಿಯೊಂದು ಲಭ್ಯವಿರುವಾಗಲೂ ಸಹಿತ ಅದರೊಂದಿಗೆ ಮತ್ತೆ ನಾಲ್ಕು ಹಸ್ತಪ್ರತಿಗಳನ್ನು ಪಕ್ಕದಲ್ಲಿಟ್ಟು ತಾಳೆನೋಡಿರುವುದು ಒಳ್ಳೆಯ ಕ್ರಮವಾಗಿದ್ದು ಕವಿಪಾಠದ ಬಗೆಗೆ ಸಂಪಾದಕರಿಗಿದ್ದ ಕಾಳಜಿಯನ್ನು ಇದು ತೋರಿಸುತ್ತದೆ.

ಹೆಂಡಿಯವರು ತಮ್ಮ ಕೃತಿಗೆ ೫೦ ಪುಟಗಳಷ್ಟು ಸುದೀರ್ಘವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಇದರಲ್ಲಿ ಕವಿಯ ಚರಿತ್ರೆ ವ್ಯಕ್ತಿ ಚಿತ್ರ, ಕಾಲ, ಸ್ಥಳ, ಕೃತಿಗಳು ಮತ್ತು ಕಥೆಯ ಮುಖ್ಯಾಂಶಗಳು ಹಾಗೂ ಕಥೆಯ ಮೂಲ, ಶೈಲಿ, ಮೊದಲಾದ ವಿವರಗಳನ್ನು ಪೂರೈಸಿದ್ದಾರೆ. ಪ್ರತಿಯೊಂದು ಪದ್ಯಗಳಲ್ಲಿ ಕಂಡುಬರುವ ಪಾಠಾಂತರಗಳನ್ನು ಆಯಾ ಪುಟಗಳ ಕೊನೆಗೆ ಕೊಡಲಾಗಿದೆ. ಮುದ್ರಿತ ಪ್ರತಿಯಲ್ಲಿಯ ಸರಿಯಾದ ಪಾಠಗಳನ್ನು ಉಳಿಸಿಕೊಳ್ಳುವುದರೊಂದಿಗೆ ಅಲ್ಲಲ್ಲಿ ಬೇರೆ ಹಸ್ತಪ್ರತಿಗಳ ಕೆಲವು ಪಾಠಗಳನ್ನು ಪಠ್ಯದಲ್ಲಿ ಸೇರಿಸಿಕೊಳ್ಳಲಾಗಿದೆ.

೧೯೭೫ರಲ್ಲಿ ಡಾ.ಎಂ.ಎಂ. ಕಲಬುರ್ಗಿಯವರು ಹೊರತಂದ 'ಮಲ್ಲಿನಾಥ ಪುರಾಣ' ಸಂಗ್ರಹ ಕೃತಿಯು ಗ್ರಂಥ ಸಂಪಾದನೆಯ ದೃಷ್ಟಿಯಿಂದ ತುಂಬಾ ಮಹತ್ವದ್ದಾಗಿದೆ. ಸ್ವತಃ 'ಗ್ರಂಥ ಸಂಪಾದನಾ ಶಾಸ್ತ್ರ''ವೆಂಬ ಕೃತಿಯನ್ನು ರಚಿಸಿದ ಅವರು (೧೯೭೨) ಸ್ವಾಭಾವಿಕವಾಗಿ ಮಲ್ಲಿನಾಥ ಪುರಾಣ ಸಂಗ್ರಹದ ರಚನೆಯ ಸಂದರ್ಭದಲ್ಲಿ ಉತ್ತಮಿಕೆಯನ್ನು ಪ್ರಕಟಿಸಿದ್ದಾರೆ. ಪ್ರಸ್ತುತ ಕೃತಿಯು ತನಗಿಂತ ಪೂರ್ವದ 'ಆದಿಪುರಾಣ ಸಂಗ್ರಹ' ಗದಾಯುದ್ಧ ಸಂಗ್ರಹ' ಮತ್ತು 'ಪಂಪರಾಮಾಯಣ' ಸಂಗ್ರಹ, ಮೊದಲಾದವುಗಳ ಮಾದರಿಯಲ್ಲಿ ರಚನೆಗೊಂಡಿದೆ. ಕೆಲವು ಪದ್ಯಗಳನ್ನು ಕೈಬಿಡುವಲ್ಲಿ ಮತ್ತು ಗದ್ಯವನ್ನು ಸಂಗ್ರಹಿಸುವಲ್ಲಿ ಹೆಚ್ಚಿನ ಸ್ವಾತಂತ್ರ್ಯವಹಿಸಿರುವುದು ಇಲ್ಲಿ ಕಂಡುಬರುತ್ತದೆ. ತಮ್ಮ ಕೃತಿಗಾಗಿ ಡಾ. ಕಲಬುರ್ಗಿಅವರು ಡಾ. ಹೆಂಡಿಯವರ 'ಮಲ್ಲಿನಾಥ ಪುರಾಣಂ' ಕೃತಿಯನ್ನೇ ಆಕರವನ್ನಾಗಿ ಬಳಸಿಕೊಂಡಿದ್ದಾರೆ. ಆದರೆ, ತಮಗೆ ಅಪಪಾಠಗಳೆಂದು ಕಂಡುಬಂದಿರುವ ಪಾಠಗಳನ್ನು ಕೈಬಿಟ್ಟು ಪಾಠಾಂತರದಲ್ಲಿದ್ದ ಸರಿಯಾದ ಪಾಠಗಳನ್ನು ಪಠ್ಯದಲ್ಲಿ ಸೇರಿಸಿ ಕೊಂಡಿದ್ದಾರೆ. ಮತ್ತೆ ಕೆಲವೆಡೆ ಊಹಾತ್ಮಕ ಪಾಠಗಳನ್ನು ಸೇರಿಸಿದ್ದು ಅವುಗಳನ್ನು ಚೌಕು ಕಂಸಿನೊಳಗೆ ಇರಿಸಲಾಗಿದೆ. ಈ ಕೃತಿಯ ಪ್ರಸ್ತಾವನೆಯು ಯುಗ ಪರಿಚಯ ಕವಿಪರಿಚಯ ಮತ್ತು ಕೃತಿ ಪರಿಚಯ ಎಂಬ ಮೂರು ಭಾಗಗಳಲ್ಲಿ ಹರಡಿಕೊಂಡಿದೆ. ಕವಿ ಪರಿಚಯದಲ್ಲಿ ಕೆಲವು ಹೊಸ ವಿಷಯಗಳನ್ನು ತಿಳಿಸಿರುವುದು ವಿಶೇಷವಾಗಿದೆ. ಕೃತಿಯಲ್ಲಿ ೪೨ ಪುಟಗಳ ದೀರ್ಘ ಟಿಪ್ಪಣಿಯಿದ್ದು ಕೃತಿಯ ಮೌಲಿಕತೆಯನ್ನು ಹೆಚ್ಚಿಸಿದೆ.

ಒಂದು ಪ್ರಾಚೀನ ಕಾವ್ಯದ ಗ್ರಂಥಸಂಪಾದನೆಯ ಚರಿತೆಯನ್ನು ಗುರುತಿಸುವ ಸಂದರ್ಭದಲ್ಲಿ ಅದರ ಸಂಗ್ರಹರೂಪಗಳನ್ನೂ ಗಣನೆಗೆ ತೆಗೆದುಕೊಳ್ಳುವುದು ಯುಕ್ತವೆಂದು ತೋರುತ್ತದೆ. ಏಕೆಂದರೆ ಸಂಗ್ರಹಕಾರನು ಸಾಮಾನ್ಯವಾಗಿ ತನಗಿಂತ ಮೊದಲು ಹೊರಬಂದ ಎಲ್ಲ ಮುದ್ರಿತ ಸಂಪಾದನೆಗಳ ಮೇಲೂ ದೃಷ್ಟಿಹಾಯಿಸಿರುತ್ತಾನೆ. ಆ ಕಾರಣದಿಂದ ಅವನು ಕೆಲವಾದರೂ ಪಾಠಾಂತರಗಳನ್ನು ಗುರುತಿಸಿ ತಿದ್ದಬಲ್ಲವನಾಗಿರುತ್ತಾನೆ. ಮುದ್ರಿತ ಸಂಪಾದಿತ ಪ್ರತಿಗಳನ್ನಲ್ಲದೆ ಆತ ಇತರ ಹಸ್ತಪ್ರತಿಗಳನ್ನು ಗಮನಿಸಿ ತನ್ನ ಸಂಗ್ರಹವನ್ನು ಸಿದ್ಧಪಡಿಸಿದ್ದರಂತೂ ಅವನ ಸಂಗ್ರಹಕ್ಕೆ ಇನ್ನಷ್ಟು ಹೆಚ್ಚಿನ ಮಹತ್ವ ಪ್ರಾಪ್ತವಾಗುತ್ತದೆ. ಏನಿದ್ದರೂ ಒಬ್ಬ ಸಂಗ್ರಹಕಾರನು ಎಷ್ಟು ಕಾಳಜಿಯಿಂದ ಮತ್ತು ಎಷ್ಟು ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದ್ದಾನೆಯೆಂಬುದರ ಮೇಲೆ ಇದೆಲ್ಲ ಅವಲಂಬಿತವಾಗಿರುತ್ತದೆ. ಇನ್ನೊಂದೆಡೆ ಮುದ್ರಿತ ಸಂಪಾದಿತ ಪ್ರತಿಯೊಂದನ್ನೇ ಇರಿಸಿಕೊಂಡು ಸಂಗ್ರಹಗಳನ್ನು ತಯಾರಿಸುವ ಪರಿಪಾಠವಿದ್ದು ಇಂಥ ಸಂದರ್ಭಗಳಲ್ಲಿ ಅವುಗಳ

ಪ್ರಯೋಜನ ಕಡಿಮೆಯೆಂದೇ ಹೇಳಬೇಕು. ಆದರೂ ತಮ್ಮ ಕೃತಿಗೆ ಬರೆದಿರುವ ಪೀಠಿಕೆ. ಉನ್ನತ ವಿಮರ್ಶೆ ಮೊದಲಾದ ಭಾಗಗಳ ಮೂಲಕ ಅವರೂ ಕೆಲವು ಹೆಚ್ಚಿನ ಅಂಶಗಳನ್ನು ಹೊರಹಾಕಿರುವ ಸಾಧ್ಯತೆಗಳಿರುತ್ತವೆ. ಕಾರಣ ಅವುಗಳನ್ನು ಗಮನಿಸುವುದು ಸೂಕ್ತ.

ಪ್ರಸ್ತುತ ಆವೃತ್ತಿಗಾಗಿ ಡಾ. ಆರ್.ಸಿ. ಹಿರೇಮಠರ ಪ್ರಧಾನ ಸಂಪಾದಕತ್ವದಲ್ಲಿ ಡಾ. ಬಿ.ಬಿ. ಹೆಂಡಿಯವರು ಸಂಪಾದಿಸಿಕೊಟ್ಟಿರುವ, ಕರ್ನಾಟಕ ವಿಶ್ವ ವಿದ್ಯಾಲಯ ಕನ್ನಡ ಅಧ್ಯಯನ ಪೀಠವು ಪ್ರಕಟಿಸಿದ ನಾಗಚಂದ್ರ ಕವಿಕೃತ ಮಲ್ಲಿನಾಥ ಪುರಾಣಂ ಎಂಬ ಕೃತಿಯನ್ನು ಪ್ರಧಾನ ಆಕರವನ್ನಾಗಿ ಬಳಸಲಾಗಿದೆ. ಇದು ಜನಪ್ರಿಯ ಆವೃತ್ತಿಯಾಗಿರುವುದರಿಂದ ಮೂಲದ ಕವಿಪಾಠವನ್ನು ಹಿಂದಿನ ಸಂಪಾದಕರು ಕೊಟ್ಟಿರುವಂತೆ ಸಂಪೂರ್ಣರೂಪದಲ್ಲಿ ಉಳಿಸಿಕೊಳ್ಳಲಾಗಿದೆ. ಸಾಮಾನ್ಯ ಓದುಗರಿಗೂ ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಪಾಠಾಂತರ ಮತ್ತು ಅಡಿಟಿಪ್ಪಣಿಯ ವಿವರಗಳನ್ನು ಕೈಬಿಡಲಾಗಿದೆ. ಸೂಕ್ಷ್ಮ ಓದಿಗೆ ಕಂಡುಬಂದ ಮುದ್ರಣ ದೋಷಗಳನ್ನು ತಿದ್ದಲಾಗಿದೆ. ಕೆಲವೆಡೆ ಅಡಿಟಿಪ್ಪಣಿಗಳಲ್ಲಿ ಕೊಟ್ಟಿರುವ ಪಾಠಾಂತರಗಳಲ್ಲಿನ ಸರಿಯಾದ ಪಾಠಗಳನ್ನು ಪದ್ಯದಲ್ಲಿ ಅಳವಡಿಸಲಾಗಿದೆ. ಆಶ್ವಾಸ / ಸಂಧಿಗಳ ವಿಂಗಡಣೆ ಹಾಗೂ ಪದ್ಯ ಸಂಖ್ಯೆಗಳನ್ನು ಮೂಲದಂತೆ ಉಳಿಸಿಕೊಳ್ಳಲಾಗಿದೆ. ವಿವರವಾದ ಪ್ರಸ್ತಾವನೆಯನ್ನು ಕೊಡಲಾಗಿದೆ. ಉಳಿದಂತೆ ಪಾರಿಭಾಷಿಕ ಪದಕೋಶ, ಪದ್ಯಗಳ ಅಕಾರಾದಿ ಮತ್ತು ಕಠಿಣ ಶಬ್ದಗಳ ಅರ್ಥವನ್ನು ಮೂಲದಲ್ಲಿದ್ದಂತೆ ಕೊಡಲಾಗಿದೆ.

ಕವಿ ನಾಗಚಂದ್ರನನ್ನು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಮೊದಲ ಬಾರಿಗೆ ಪರಿಚಯಿಸಿ ಕೊಟ್ಟ ಕೀರ್ತಿ ಹರ್ಮನ್ ಮೊಗ್ಲಿಂಗ್ ಅವರಿಗೆ ಸಲ್ಲತಕ್ಕದ್ದು. ಜರ್ಮನಿ ಮೂಲದವನಾದ ಮೊಗ್ಲಿಂಗ್ ಕರ್ನಾಟಕದ ಶಿಕ್ಷಣ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅನುಪಮವಾದುದಾಗಿದೆ. ೧೮೩೪ರಲ್ಲಿ ಸ್ಯಾಮುಯಲ್ ಹೆಬಿಕ್ ಎಂಬುವನು ಸ್ಥಾಪಿಸಿದ 'ಬಾಸೆಲ್ ಮಿಷನ್' ಮಿಷನರಿಗಳಲ್ಲಿ ಮೊಗ್ಲಿಂಗ್ ಕೂಡ ಒಬ್ಬರು. ಅವರು ಭಾರತಕ್ಕೆ ಬಂದ ಮೇಲೆ ಕನ್ನಡ ಸಾಹಿತ್ಯ ಪ್ರಸಾರದ ದೃಷ್ಟಿಯಿಂದ 'ಬಿಬ್ಲಿಯಾಥಿಕಾ ಕರ್ನಾಟಕ' ಎಂಬ ಕಾವ್ಯ ಪ್ರಕಟಣಾ ಮಾಲಿಕೆಯೊಂದನ್ನು ಆರಂಭಿಸಿದರು. ಆ ಮಾಲಿಕೆಯಲ್ಲಿ ಜೈಮಿನಿಭಾರತ, ಕುಮಾರವ್ಯಾಸಭಾರತ, ಪಂಪರಾಮಾಯಣ, ಹರಿಭಕ್ತಿಸಾರ, ಬಸವಪುರಾಣ, ಚನ್ನಬಸವಪುರಾಣ, ತೊರವೆ ರಾಮಾಯಣ, ಮತ್ತು ದಾಸರ ಪದಗಳು ಎಂಬ ಅನೇಕ ಮಹತ್ವದ ಗ್ರಂಥಗಳನ್ನು ಪ್ರಕಟಿಸಿದರು. ಈ ಮಾಲಿಕೆಯಲ್ಲಿ ಪಂಪರಾಮಾಯಣ ಮೊದಲ ಸಲ ಪ್ರಕಟವಾಗಿದ್ದು ೧೮೪೮ರಲ್ಲಿ. ೧೮೭೦ರಲ್ಲಿ ಡಾ. ವಿ. ಶೇಖರ್ ಮತ್ತು ಡಾ. ಎ.ಸಿ. ಬರ್ನೆಲ್ ಅವರು ನಾಗಚಂದ್ರನ ಪಂಪರಾಮಾಯಣವನ್ನು ಸಂಪಾದಿಸಿ ಪ್ರಕಟಿಸಿದರು. ತರುವಾಯ ಬಿ.ಎಲ್. ರೈಸ್ ಅವರು ಆ ಕೃತಿಯ ಐದು ಆಶ್ವಾಸಗಳನ್ನು ಗ್ರಂಥಸಂಪಾದನಾ ಶಾಸ್ತ್ರದ ಹಿನ್ನೆಲೆಯಲ್ಲಿ ೧೮೭೪ರಲ್ಲಿ ಪ್ರಕಟಿಸಿದರು. ಅದು ಮದರಾಸು ವಿಶ್ವವಿದ್ಯಾಲಯದ ಬಿ.ಎ. ತರಗತಿಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವಾಗಿದ್ದಿತು. ಮುಂದೆ ರೈಸ್ ಅವರೇ ಎಂಟು ವರ್ಷ ಕಳೆದ ಮೇಲೆ ೧೮೮೨ರಲ್ಲಿ 'ರಾಮಚಂದ್ರ ಚರಿತ ಪುರಾಣ'ವನ್ನು ಇಡಿಯಾಗಿ ಸಂಪಾದಿಸಿ ಪ್ರಕಟಿಸಿದರು. ಈ ಕೃತಿಗೆ ಅವರು

ಬರೆದ ವಿದ್ವತ್ ಪೂರ್ಣ ಪೀಠಿಕೆ ನಾಡಿನ ವಿದ್ವಾಂಸರ ಗಮನ ಸೆಳೆಯಿತು. ಮೊಗ್ಲಿಂಗ್ ಮತ್ತು ಕಿಟೆಲ್‌ರವರಂತೆ ಬಿ.ಎಲ್. ರೈಸ್ ಕೂಡ, ಬಿಬ್ಲಿಯೋಥಿಕ ಕರ್ನಾಟಕ ಎಂಬ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿದ್ದರು. ಪಂಪರಾಮಾಯಣವನ್ನು ಒಳಗೊಂಡಂತೆ ಕೆಲವು ಕನ್ನಡ ಕೃತಿಗಳನ್ನು ಆ ಸಂಸ್ಥೆಯ ಮೂಲಕ ಪ್ರಕಟಿಸಿದರು. ರೈಸ್ ಅವರು ಪಂಪ ರಾಮಾಯಣ ಸಂಪಾದನೆಗಾಗಿ ಮೂರು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಪ್ರಾಚೀನತೆಯ ದೃಷ್ಟಿಯಿಂದ ಕ್ರಿ.ಶ. ೧೪೨೮ರ ಒಂದು ಪ್ರತಿ ಇದ್ದಾಗ್ಯೂ ರೈಸ್ ೧೫೧೭ರ ಪ್ರತಿಯಲ್ಲಿನ ಪಾಠಗಳಿಗೆ ಆದ್ಯತೆ ನೀಡಿರುವುದು ಕುತೂಹಲದ ಅಂಶವಾಗಿದೆ. ತಾವು ಬಳಸಿದ ಹಸ್ತಪ್ರತಿಗಳಿಗೆ ಸಂಕೇತಗಳನ್ನು ನೀಡದಿರುವುದು ಮತ್ತು ಪಾಠಾಂತರಗಳನ್ನು ನಮೂದಿಸದಿರುವುದು ಇವರ ಗ್ರಂಥ ಸಂಪಾದನ ವಿಧಾನದ ಮಿತಿಗಳಾಗಿವೆ. ಗ್ರಂಥ ಸಂಪಾದನೆಯ ಶಾಸ್ತ್ರೀಯತೆಯ ತಮ್ಮ ಕೊರತೆಯನ್ನು 'ರೈಸ್' ಅವರು ತರುವಾಯದ ಕೃತಿಗಳ ಸಂಪಾದನೆಯ ಸಂದರ್ಭದಲ್ಲಿ ಪೂರೈಸಿಕೊಂಡಿರುವುದನ್ನು ಗುರುತಿಸಬಹುದಾಗಿದೆ.

ಇದರ ಮುಂದಿನ ಹಂತವಾಗಿ ಬೆಂಗಳೂರಿನ 'ಕರ್ನಾಟಕ ಸಾಹಿತ್ಯ ಪರಿಷತ್ತು' ೧೯೨೧ರಲ್ಲಿ 'ರಾಮಚಂದ್ರ ಚರಿತ ಪುರಾಣ' ಕೃತಿಯನ್ನು ಪ್ರಕಟಿಸಿತು. ಇದಕ್ಕಾಗಿ ಪರಿಷತ್ತು ಮೂರು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಿತು. ಮುಂದೆ ೧೯೫೧ರಲ್ಲಿ ಡಿ.ಎಲ್ ನರಸಿಂಹಚಾರ್ ಅವರು 'ಪಂಪ ರಾಮಾಯಣ ಸಂಗ್ರಹ' ಎಂಬ ಹೆಸರಿನಲ್ಲಿ ಸಂಪಾದಿಸಿದ ಕೃತಿಯನ್ನು ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿತು. 'ತಿರುವಳ್ಳೂರ್' ಶ್ರೀನಿವಾಸ ರಾಘವಾಚಾರ್ಯರು ಈ ಕೆಲಸದಲ್ಲಿ ಅವರೊಂದಿಗೆ ದುಡಿದಿದ್ದಾರೆ. ಪ್ರಸ್ತುತ ಕೃತಿಯು ೧೯೨೧ರಲ್ಲಿ ಪ್ರಕಟವಾದ ಕರ್ನಾಟಕ ಸಾಹಿತ್ಯ ಪರಿಷತ್ತಿನ ಪಂಪರಾಮಾಯಣವನ್ನು ಇಟ್ಟುಕೊಂಡು ಸಂಗ್ರಹ ಮಾಡಿದ್ದಾಗಿದೆ. ಇದು ಇಲ್ಲಿಯವರೆಗೆ ಐದು ಮುದ್ರಣಗಳನ್ನು ಕಂಡಿದೆ. ಪರಿಷತ್ತು ಪಾಠಾಂತರದ ರೂಪದಲ್ಲಿ ಕೊಟ್ಟಿದ್ದ ಕೆಲವು ಪಾಠಗಳು ಕವಿಯ ಮೂಲ ಪಾಠಗಳೆನಿಸಿದ್ದರಿಂದ ಡಿ.ಎಲ್.ಎನ್. ಅಂಥವುಗಳನ್ನು ಪಠ್ಯ ಭಾಗದಲ್ಲಿ ಸೇರಿಸಿದ್ದಾರೆ. ಮುಖ್ಯಕಥೆಗೆ ಭಂಗಬಾರದಂತೆ ಮತ್ತು ಸೊಗಸಾದ ಕಾವ್ಯಭಾಗಗಳು ಕೈಬಿಟ್ಟು ಹೋಗದಂತೆ ಡಿ.ಎಲ್.ಎನ್. ಎಚ್ಚರಿಕೆ ವಹಿಸಿರುವುದು ವಿಶೇಷವಾಗಿದೆ. ಕಾವ್ಯದ ಮೂಲಕೃತಿಯನ್ನು ಓದಿ ಪ್ರಕ್ಷಿಪ್ತಭಾಗಗಳನ್ನು ಗುರುತಿಸಿ, ಕೈ ಬಿಡಬಹುದಾದ ಭಾಗಗಳನ್ನು ಕೈಬಿಟ್ಟು, ಸೂಕ್ತ ಪಾಠಗಳನ್ನು ಗುರುತಿಸುವುದು ಸಮರ್ಥರಾದವರಿಗೆ ಮಾತ್ರ ಸಾಧ್ಯ. ಆ ಕೆಲಸವನ್ನು ಇಲ್ಲಿ ಡಿ.ಎಲ್.ಎನ್. ತುಂಬ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ವಿಸ್ತೃತವಾದ ಕವಿ ಪಾಠವನ್ನು ಶೋಧಿಸಿ ಸಂಗ್ರಹಿಸುವ ಕೆಲಸ ತುಂಬ ಕಠಿಣವಾದದ್ದು. ಅದನ್ನು ಕೂಡ ಡಿ.ಎಲ್.ಎನ್. ತುಂಬಾ ಅಚ್ಚುಕಟ್ಟಾಗಿ ಸಾಧಿಸಿದ್ದಾರೆ. ಡಿ.ಎಲ್.ಎನ್. ಈ ಕೃತಿಗೆ ನೀಡಿದ ಪೀಠಿಕೆ ಮೌಲಿಕವಾದುದಾಗಿದೆ.

ಇಂದಿಗೂ ಕನ್ನಡ ವಿದ್ವತ್‌ಲೋಕ ಅದನ್ನು ತುಂಬಾ ಗೌರವದಿಂದ ಕಾಣುತ್ತದೆ. ಕವಿಯ ಕಾಲ ಜೈನ ವೈದಿಕ, ಮತ್ತು ಬೌದ್ಧ ರಾಮಾಯಣಗಳ ಕುರಿತಾದ ಸುದೀರ್ಘಚರ್ಚೆಗಳು ತುಂಬ ಮಹತ್ವದ ಭಾಗಗಳಾಗಿವೆ. ಜೈನ ರಾಮಾಯಣದಲ್ಲಿ ಉಂಟಾದ ಮಾರ್ಪಾಟುಗಳನ್ನು ಗುರುತಿಸಿರುವುದು ಅವರ ಸೂಕ್ಷ್ಮ ಅಧ್ಯಯನಕ್ಕೆ ಸಾಕ್ಷಿ ಆಗಿದೆ. 'ವಿಮಲ ಸೂರಿ'ಯ 'ಪಉಮ ಚರಿಯವು' ಜೈನ ರಾಮಾಯಣಗಳಲ್ಲೇ ಪ್ರಾಚೀನವಾದುದೆಂದು ಡಿ.ಎಲ್.ಎನ್. ಅಭಿಪ್ರಾಯ

ಪಡುತ್ತಾರೆ. ಅಲ್ಲದೆ ಗುಣಭದ್ರಾಚಾರ್ಯರ ಇನ್ನೊಂದು ರಾಮಾಯಣ ಕಥಾ ಪರಂಪರೆಯು ಜೈನರಲ್ಲಿದ್ದುದನ್ನು ಅವರು ಗುರುತಿಸಿದ್ದಾರೆ. ಪಂಪರಾಮಾಯಣವು 'ವಿಮಲ ಸೂರಿಯ' ಸಂಪ್ರದಾಯಕ್ಕೆ ಸೇರಿದ್ದೆಂದೂ 'ನಾಗಚಂದ್ರ'ನ ರಾವಣನ ಪಾತ್ರಕ್ಕೆ ವಿಮಲ ಸೂರಿಯ ರಾವಣನ ಪಾತ್ರವೇ ಪ್ರೇರಣೆ ನೀಡಿದೆ ಎಂದೂ ಡಿ.ಎಲ್.ಎನ್. ಗುರುತಿಸಿದ್ದಾರೆ. ಸುಮಾರು ಐದು ಪುಟಗಳ ವ್ಯಾಪ್ತಿಯಲ್ಲಿ ನಾಗಚಂದ್ರನ ರಾವಣನ ವ್ಯಕ್ತಿತ್ವವನ್ನು ಪರಿಚಯಿಸಿ ಕೊಟ್ಟಿದ್ದಾರೆ. ನಾಗಚಂದ್ರನ ಸಂಗ್ರಹ ದೃಷ್ಟಿಯನ್ನು ಡಿ.ಎಲ್.ಎನ್ ಉದಾಹರಣೆ ಸಹಿತವಾಗಿ ಗುರುತಿಸಿದ್ದಾರೆ. ಮೂಲಕ್ಕೆ ಹೋಲಿಸಿದರೆ, ನಾಗಚಂದ್ರನ ಕೃತಿ ಹತ್ತರಲ್ಲಿ ಒಂದು ಪಾಲು ಕೂಡ ಇಲ್ಲ ಎಂದು ತಿಳಿಸುತ್ತ, ನಾಗಚಂದ್ರನ ಸಂಗ್ರಹ ಬುದ್ಧಿಯನ್ನು ಅವರು ಕೊಂಡಾಡಿದ್ದಾರೆ. ನಾಗಚಂದ್ರ ಕೆಲವು ಹೊಸ ಪ್ರಸಂಗಗಳನ್ನು ಸೇರಿಸಿ ತನ್ನ ಕೃತಿಗೆ ಹೇಗೆ ಜೀವ ತುಂಬಿದ್ದಾನೆ ಎಂಬುದನ್ನು ಡಿ.ಎಲ್.ಎನ್. ತೋರಿಸಿಕೊಟ್ಟಿದ್ದಾರೆ. ನಾಗಚಂದ್ರನ ಶೈಲಿಯ ಬಗೆಗೂ ಸುದೀರ್ಘ ಚರ್ಚೆ ನಡೆಸಿದ್ದಾರೆ. ಹೀಗೆ ಡಿ.ಎಲ್.ಎನ್. ಅವರು ಪಂಪರಾಮಾಯಣದ ಸಂಗ್ರಹದ ಸಂದರ್ಭದಲ್ಲಿ ಏಕಕಾಲದಲ್ಲಿ ಸಂಶೋಧಕ ಮತ್ತು ವಿಮರ್ಶಕ ಎರಡೂ ಆಗಿ ಸಮರ್ಥರೀತಿಯಲ್ಲಿ ಕಾರ್ಯನಿರ್ವಹಿಸಿದ್ದಾರೆ. ಅಂತೆಯೇ ಡಿ.ಎಲ್.ಎನ್. ಅವರ ಪಂಪರಾಮಾಯಣ ಸಂಗ್ರಹದ ಮುನ್ನುಡಿಯನ್ನು ಹೋಲುವಂತಹುದು ಕನ್ನಡದಲ್ಲಿ ಮತ್ತೊಂದು ದೊರಕುವುದು ಅಸಂಭವ ಎಂದು ಚಿದಾನಂದ ಮೂರ್ತಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಡಿ.ಎಲ್.ಎನ್. ತರುವಾಯದ 'ರಾಮ ಚಂದ್ರಚರಿತ ಪುರಾಣ'ದ ಮತ್ತೊಂದು ಮೈಲಿಗಲ್ಲು ಡಾ॥ ಆರ್.ಸಿ. ಹಿರೇಮಠ ಅವರದು. ಅವರ "ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ" ಎಂಬ ಕೃತಿಯು "ಭಾರತೀಯ ಜ್ಞಾನಪೀಠ" ಪ್ರಕಾಶನದ ಮೂಲಕ ೧೯೭೫ರಲ್ಲಿ ಪ್ರಕಟವಾಗಿದೆ. ಸಂಶೋಧನಾತ್ಮಕ ರೀತಿಯಿಂದ ಪರಿಷ್ಕರಿಸಿ, ಮೂಲದ ಪಾಠಗಳನ್ನು ಮತ್ತು ಪಾಠಾಂತರಗಳನ್ನು ಗುರುತಿಸಿರುವುದು ಹಾಗೂ ಜೊತೆಗೆ ಪದ್ಯಗಳಿಗೆ ಹೊಸಗನ್ನಡ ಅನುವಾದವನ್ನು ಕೊಟ್ಟಿರುವುದು. ಡಾ॥ ಆರ್.ಸಿ. ಹಿರೇಮಠರವರ ವೈಶಿಷ್ಟ್ಯವಾಗಿದೆ. ಈ ಕೃತಿಗೆ ಡಾ॥ ಹಿರೇಮಠರು ಬರೆದ ೩೬ ಪುಟಗಳ ಸುಧೀರ್ಘ ಪ್ರಸ್ತಾವನೆ ಇದೆ. ಈ ಭಾಗದಲ್ಲಿ ನಾಗಚಂದ್ರನ ಕೃತಿಗಳು 'ಪಉಮ ಚರಿಯ' ಕಥಾಸಾರ, ಕೃತಿ ವಿಮರ್ಶೆ, ಮೊದಲಾದ ವಿಷಯಗಳಿದ್ದು, ಪ್ರಸ್ತಾವನೆಯು ಅಧ್ಯಯನ ಪೂರ್ಣವಾಗಿದೆ. ಸಂಪಾದಕೀಯದ, ರೂಪದಲ್ಲಿ ಡಾ॥ ಆ.ನೆ. ಉಪಾಧ್ಯೆ ಅವರು ಕೃತಿಯ ಆರಂಭದಲ್ಲಿ ಬರೆದಿರುವ ಕೆಲವು ಮಾತುಗಳು ನಾಗಚಂದ್ರನ ಬಗ್ಗೆ ಮಾತನಾಡುವುದರೊಂದಿಗೆ ಪ್ರಾಕೃತ ಮತ್ತು ಸಂಸ್ಕೃತದಲ್ಲಿ ಪ್ರಕಟವಾದ ಜೈನ ಸಾಹಿತ್ಯದ ಬಗೆಗೂ ಮಾತನಾಡುತ್ತವೆ. ಅದರಲ್ಲಿ ಅವರು ಪ್ರಸ್ತುತ ಕೃತಿಯು ೧೮೮೨ರಲ್ಲಿ ಬಿ.ಎಲ್. ರೈಸ್ ಅವರಿಂದ ಮತ್ತು ೧೯೨೧ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಹಾಗೂ ೧೯೫೧ರಲ್ಲಿ ಡಿ.ಎಲ್.ಎನ್. ಅವರಿಂದ (ಮೈ.ವಿ.ವಿ.) ಪ್ರಕಟವಾದುದನ್ನು ಪ್ರಸ್ತಾಪಿಸಿದ್ದಾರೆ. ಜೊತೆಗೆ ಆರ್.ಸಿ. ಹಿರೇಮಠ ಅವರ ವಿದ್ವತ್ತು ಮತ್ತು ಸಂಪಾದನೆಯ ಕಾರ್ಯ ವಿಧಾನವನ್ನು ಮುಕ್ತಕಂಠದಿಂದ ಪ್ರಶಂಸಿಸಿದ್ದಾರೆ. ರಾಮನ ಕಥೆಯು ಪ್ರಾಕೃತದ ಕ್ರಿ.ಶ. ೫-೬ನೇ ಶತಮಾನದ ವಸುದೇವ ಹಿಂಡಿ ಕೃತಿಯಲ್ಲಿ ಬಂದಿರುವುದರ ಬಗ್ಗೆ ಗಮನ ಸೆಳೆದ ಉಪಾಧ್ಯೆ

ಅವರು ವಸುದೇವ ಹಿಂಡಿಯ ಕುರಿತಾದ ವಿವರವಾದ ಅಧ್ಯಯನ ನಡೆಯಬೇಕೆಂದು ಅಪೇಕ್ಷೆ ಪಟ್ಟಿದ್ದಾರೆ. ಭಾರತದ ಬೇರೆ ಬೇರೆ ಭಾಷೆಗಳಲ್ಲಿ, ಜಾನಪದರ ಮೌಖಿಕ ಪರಂಪರೆಯಲ್ಲಿ ರಾಮಕಥೆ ಹರಡಿದ್ದು ಅದರ ಅಧ್ಯಯನದ ಅಗತ್ಯವನ್ನು ಉಪಾಧ್ಯೆ ಅವರು ಪ್ರತಿಪಾದಿಸಿದ್ದಾರೆ.

ತಮ್ಮ 'ರಾಮಚಂದ್ರ ಚರಿತ ಪುರಾಣಂ' ಕೃತಿಯ ಪಾಠ ನಿರ್ಣಯದ ಸಂದರ್ಭದಲ್ಲಿ ಮೂಡುಬಿದರೆ ಹಸ್ತಪ್ರತಿ ಮತ್ತು ಪರಿಷತ್ತಿನ ಆವೃತ್ತಿಗಳ ನೆರವು ಪಡೆದುದಾಗಿ ಡಾ|| ಹಿರೇಮಠರು ತಿಳಿಸಿದ್ದಾರೆ. ಪರಿಷತ್ತಿನ ಆವೃತ್ತಿಯಲ್ಲಿ ಕಾಣಿಸಿಗದ ಕೆಲವು ಯೋಗ್ಯ ಪಾಠಗಳನ್ನು ಮೂಡುಬಿದರೆ ಪ್ರತಿಯ ಆಧಾರದಿಂದ ಗುರುತಿಸಿರುವುದಾಗಿಯೂ ಅವರು ಹೇಳಿದ್ದಾರೆ. ಪಂಪರಾಮಾಯಣಕ್ಕೆ ತಾವು ಬರೆದ ಹೊಸಗನ್ನಡ ಅನುವಾದದ ಅಗತ್ಯದ ಬಗೆಗೂ ಒಂದೆರಡು ಮಾತುಗಳನ್ನು ತಿಳಿಸಿದ್ದಾರೆ. ಒಂದು ಕಡೆ ಸಾಮಾನ್ಯ ಓದುಗರ ದೃಷ್ಟಿಯಿಂದ ಅನುವಾದವನ್ನು ಕೊಡುವುದು ಅಗತ್ಯ. ಇದರ ರೂಢಿ ತಪ್ಪಿದ ದೇಸೀ ಪದ ರೂಪುಗೆಟ್ಟ ಅಪಪಾಠ ಇದ್ದಲ್ಲಿ ಅನುವಾದ ಮಾಡುವುದು ಕಷ್ಟದ ಕೆಲಸವೇ ಎಂದು ಹೇಳುತ್ತ ಅನುವಾದದ ಸಂದರ್ಭದಲ್ಲಿ ತಾವು ಅನುಭವಿಸಿದ ದಿವ್ಯಗಳ ಬಗೆಗೆ ಕೂಡ ಅವರು ಮಾತನಾಡಿದ್ದಾರೆ. ಒಟ್ಟಾರೆ ನಾಗಚಂದ್ರ ಕವಿಯನ್ನು ಕನ್ನಡ ಜನತೆಗೆ ಆತ್ಮೀಯನನ್ನಾಗಿಸುವಲ್ಲಿ ಹಿರೇಮಠರ ಕೃತಿಯು ತುಂಬಾ ಮಹತ್ವದ ಪಾತ್ರವಹಿಸಿದೆ. ತಾವು ಬಳಸಿದ ಮೂಡಬಿದರೆ ಮತ್ತು ಪರಿಷತ್ತಿನ ಪ್ರತಿಗಳಿಗೆ ಕ್ರಮವಾಗಿ 'ಅ' ಮತ್ತು 'ಆ' ಎಂಬ ಸಂಕೇತಗಳನ್ನು ನೀಡಿ ಪಾಠಾಂತರಗಳನ್ನು ಕೊಡುತ್ತ ಹೋಗಿದ್ದಾರೆ. ಹೀಗೆ ಮೊಗ್ಲಿಂಗ್‌ರಿಂದ ಆರಂಭವಾದ 'ರಾಮಚಂದ್ರ ಚರಿತ ಪುರಾಣಂ' ಕೃತಿಯ ಗ್ರಂಥ ಸಂಪಾದನಾ ಪ್ರಕ್ರಿಯೆಯು ರೈಸ್, ಡಿ.ಎಲ್.ಎನ್. ಮೊದಲಾದವರಲ್ಲಿ ಗಟ್ಟಿಗೊಂಡು ಆರ್.ಸಿ. ಹಿರೇಮಠ ಅವರಲ್ಲಿ ಹೆಚ್ಚಿನ ಪರಿಶುದ್ಧತೆಯನ್ನು ಪಡೆದುಕೊಂಡಿದೆ ಎನ್ನಬಹುದು. ಇದರ ತರುವಾಯ ರಾಮಚಂದ್ರಚರಿತ ಪುರಾಣವನ್ನು ಸಂಗ್ರಹಿಸುವ ಕೆಲವು ಪ್ರಯತ್ನಗಳು ನಡೆದಿದ್ದು ಅವುಗಳಲ್ಲಿ ೨೦೦೪ರಲ್ಲಿ ಹೊರಲಾದ ಡಾ|| ಶಾಂತಿನಾಥ್ ಮತ್ತು ಡಾ|| ಎಸ್. ಶಿವಾನಂದ ಅವರ 'ರಾಮಚಂದ್ರಚರಿತ ಪುರಾಣ ಸಂಗ್ರಹ' ಎಂಬ ಕೃತಿಯು ಗಮನಾರ್ಹವಾಗಿದೆ. ಇದು ಗುಲಬರ್ಗ ವಿಶ್ವವಿದ್ಯಾಲಯದ ಪ್ರಕಟಣೆಯಾಗಿದ್ದು ಇದನ್ನು ಸಿದ್ಧಪಡಿಸಲು ಸಂಗ್ರಹಕಾರರು ಡಾ. ಆರ್.ಸಿ. ಹಿರೇಮಠ ಅವರ 'ರಾಮಚಂದ್ರ ಚರಿತ ಪುರಾಣಂ' ಮತ್ತು ಡಿ.ಎಲ್.ಎನ್. ಹಾಗೂ ತಿರುವಳ್ಳವರ್ ಶ್ರೀನಿವಾಸ ರಾಘವಾಚಾರ್ ಅವರ 'ರಾಮಚಂದ್ರ ಚರಿತ ಪುರಾಣ ಸಂಗ್ರಹ' ಎಂಬ ಕೃತಿಗಳನ್ನು ಬಳಸಿಕೊಂಡಿದ್ದಾರೆ. "ಆಸಕ್ತ ಓದುಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಕಥೆಯ ಮುಖ್ಯ ಭಾಗಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿಕೊಡಲಾಗಿದೆ" ಎಂದು ತಿಳಿಸಿರುವ ಸಂಗ್ರಹಕಾರರು ಇದು ಕೇವಲ ಸಂಗ್ರಹಿತ ಭಾಗವೇ ಹೊರತು ಮೂಲ ಸಂಪಾದನೆಯಲ್ಲ ಎಂದೂ ತಿಳಿಸಿದ್ದಾರೆ. ಕೃತಿ ಚಿಕ್ಕದಾದರೂ ೫೨ ಪುಟಗಳ ವಿಸ್ತಾರವಾದ ಪ್ರಸ್ತಾವನೆ ಇದೆ. ಗದ್ಯ-ಪದ್ಯಭಾಗಗಳನ್ನು ಆಯ್ದುಕೊಳ್ಳುವಲ್ಲಿ ಹೆಚ್ಚಿನ ಸ್ವಾತಂತ್ರ್ಯವಹಿಸಲಾಗಿದೆ. ಆಶ್ವಾಸಗಳನ್ನು ಹೊಸದಾಗಿ ನಿರ್ಮಿಸಿಕೊಳ್ಳಲಾಗಿದೆ. ಅವುಗಳಿಗೆ ಕವಿ ಪಾಠದಿಂದ ಎತ್ತಿಕೊಳ್ಳಲಾದ ಸೂಕ್ತ ಶೀರ್ಷಿಕೆಗಳನ್ನು ಕೊಡಲಾಗಿದೆ. ಏಳು ಆಶ್ವಾಸಗಳಲ್ಲಿ ಮುಖ್ಯ ಕಥೆಯನ್ನು ಸಂಗ್ರಹಿಸಿಕೊಡಲಾಗಿದೆ. ಪ್ರಸ್ತಾವನೆಯಲ್ಲಿ ಕವಿಯ ಕಾಲ, ಸ್ಥಳ, ಪರಿಸರ, ವ್ಯಕ್ತಿತ್ವ, ಕೃತಿಪರಿಚಯ, ವಿವಿಧ ರಾಮಾಯಣ

ಪರಂಪರೆಗಳು, ಕನ್ನಡ ಜೈನ ರಾಮಾಯಣ ಪರಂಪರೆ, ರಾಮಚಂದ್ರ ಚರಿತ ಪುರಾಣದ ಆಕರ ಮತ್ತು ವಸ್ತು ಆಯ್ದ ಪದ್ಯಭಾಗ ಕಥಾಸಾರ ಮುಂತಾದ ಅನೇಕ ವಿವರಗಳಿವೆ. ಒಟ್ಟಾರೆ ಸಾಮಾನ್ಯ ಓದುಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಸುಲಭವಾಗಿ ತಲುಪುವ ಗುಣವನ್ನು ಈ ಸಂಗ್ರಹವು ಹೊಂದಿದೆ.

'ರಾಮಚಂದ್ರ ಚರಿತ ಪುರಾಣಂ'ನ ಈ ಆವೃತ್ತಿಗಾಗಿ ಭಾರತೀಯ ಜ್ಞಾನಪೀಠದ ಪ್ರಕಾಶನದ ಮೂಲಕ ಡಾ. ಆರ್.ಸಿ. ಹಿರೇಮಠ ಅವರು ೧೯೭೭ರಲ್ಲಿ ಸಂಪಾದಿಸಿರುವ 'ನಾಗಚಂದ್ರ ವಿರಚಿತ ರಾಮಚಂದ್ರ ಚರಿತ ಪುರಾಣಂ' ಎಂಬ ಕೃತಿಯನ್ನು ಪ್ರಧಾನ ಆಕರವನ್ನಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ತಿರುಪಳ್ಳೂರ್ ಶ್ರೀನಿವಾಸ ರಾಘವಾಚಾರ್ ಮತ್ತು ಡಿ.ಎಲ್.ಎನ್ ಅವರು ೧೯೮೦ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಮೂಲಕ ಪ್ರಕಟಿಸಿದ 'ಪಂಪರಾಮಾಯಣ ಸಂಗ್ರಹ'ವನ್ನೂ ಪೂರಕ ಆಕರವನ್ನಾಗಿ ಬಳಸಲಾಗಿದೆ. ತಮಗಿಂತ ಮೊದಲು ನಡೆದಿದ್ದ 'ರಾಮಚಂದ್ರ ಚರಿತ ಪುರಾಣಂ'ನ ಸಂಪಾದನೆಗಳಿಗಿಂತ ಡಾ. ಆರ್.ಸಿ. ಹಿರೇಮಠ ಅವರು ಶುದ್ಧವಾದ ಮತ್ತು ಸಂಪೂರ್ಣವಾದ ಪಾಠವನ್ನು ಕೊಟ್ಟಿದ್ದಾರೆ. ಹಿಂದಿನ ಸಂಪಾದನೆಯಲ್ಲಿ ಬರಲಾರದ ಹಲವಾರು ಪದ್ಯ ಮತ್ತು ಗದ್ಯ ಭಾಗಗಳನ್ನು ಡಾ॥ ಹಿರೇಮಠ ಅವರು ಬೇರೊಂದು ಹಸ್ತಪ್ರತಿಯ ಮೂಲಕ ಪಡೆದುಕೊಂಡು ತಮ್ಮ ಪರಿಷ್ಕರಣಕ್ಕೆ ಪೂರ್ಣತೆಯನ್ನು ಒದಗಿಸಿದ್ದಾರೆ. ಅಲ್ಲದೆ 'ಪಉಮಚರಿಯ'ದ ಕಥಾಸಾರ ಸಮೇತವಾಗಿ ವಿದ್ವತ್ ಪೂರ್ಣವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಕಾರಣ ಸದ್ಯಕ್ಕೆ ಡಾ. ಆರ್.ಸಿ. ಹಿರೇಮಠ ಅವರ ಸಂಪಾದನೆಯೇ ಅಧಿಕೃತವಾಗಿದ್ದು ಅದರ ನೆರವಿನಿಂದ ಈ ಕೃತಿಯನ್ನು ಸಿದ್ಧಪಡಿಸಲಾಗಿದೆ. ಓದುಗರಿಗೆ ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಪಾಠಾಂತರ ಮತ್ತು ಅಡಿಟಿಪ್ಪಣಿಯ ವಿವರಗಳನ್ನು ಕೈಬಿಡಲಾಗಿದೆ. ಸಂಧಿಗಳ ವಿಂಗಡಣೆ ಮತ್ತು ಪದ್ಯಸಂಖ್ಯೆಗಳನ್ನು ಮೂಲದಂತೆ ಉಳಿಸಿಕೊಳ್ಳಲಾಗಿದೆ. ವೈದಿಕ, ಬೌದ್ಧ, ಜೈನ, ರಾಮಾಯಣ ಪರಂಪರೆಗಳ ಪರಿಚಯ ಕನ್ನಡ ಜೈನ ರಾಮಾಯಣ ಪರಂಪರೆ, ರಾಮಚಂದ್ರ ಚರಿತ ಪುರಾಣಂನಲ್ಲಿ ಕಾಣುವ ಸೂಕ್ಷ್ಮ ಜೈನ ಅಂಶಗಳು ಪ್ರಮುಖ ಕಾವ್ಯ ಪ್ರಸಂಗಗಳು ಪ್ರಮುಖ ಪಾತ್ರಗಳು ಮೊದಲಾದ ವಿವರಗಳಿಂದ ಕೂಡಿದ ಪ್ರಸ್ತಾವನೆಯನ್ನು ಹೊಸದಾಗಿ ಬರೆದು ಸೇರಿಸಲಾಗಿದೆ. ಇದಕ್ಕಾಗಿ ಗುಲಬರ್ಗಾ ವಿಶ್ವವಿದ್ಯಾಲಯದ ಮೂಲಕ ಡಾ॥ ಶಾಂತಿನಾಥ ದಿಬ್ಬದ ಮತ್ತು ಡಾ॥ ಎಸ್. ಶಿವಾನಂದ ಅವರು ಪ್ರಕಟಿಸಿದ ರಾಮಚಂದ್ರ ಚರಿತ ಪುರಾಣಂನ ನೆರವು ಪಡೆಯಲಾಗಿದೆ. ಉಳಿದಂತೆ ಪದ್ಯಗಳ ಅಕಾರಾದಿ, ಕಠಿಣ ಶಬ್ದಕೋಶಗಳನ್ನು ಮೂಲದಲ್ಲಿ ಇದ್ದಂತೆ ಹೊಂದಿಸಿಕೊಳ್ಳಲಾಗಿದೆ.

ಹಳಗನ್ನಡದ ಮಹತ್ವದ ಜೈನಕಾವ್ಯಗಳನ್ನು ಜನಪ್ರಿಯ ಆವೃತ್ತಿಗಳ ರೂಪದಲ್ಲಿ ಪ್ರಕಟಿಸಲು ಮುಂದಾಗಿರುವ ಕರ್ನಾಟಕ ಸರಕಾರ ಮತ್ತು ಆ ಯೋಜನೆಯನ್ನು ಸಮರ್ಥವಾಗಿ ನಿರ್ವಹಿಸುತ್ತಿರುವ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಇವು ಅಭಿನಂದನೆಗೆ ಯೋಗ್ಯವಾಗಿವೆ. ಈ ಯೋಜನೆಯ ವಿಶೇಷ ಚಾಲಕ ಶಕ್ತಿಗಳಾಗಿರುವ ಉನ್ನತ ಸಲಹಾ ಸಮಿತಿಯ ಅಧ್ಯಕ್ಷರೂ ಕುಲಪತಿಗಳೂ ಆಗಿರುವ ಡಾ.ವಿವೇಕ ರೈ ಅವರಿಗೆ ಮತ್ತು ಪ್ರಸಾರಾಂಗದ ನಿರ್ದೇಶಕ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರಿಗೆ ನನ್ನ ಕೃತಜ್ಞತೆಗಳು. ನಾಗಚಂದ್ರನ ಕೃತಿಗಳನ್ನು ಈ

ಮೊದಲು ಸಂಪಾದಿಸಿದ ಎಲ್ಲ ವಿದ್ವಾಂಸರಿಗೆ ಮತ್ತು ಪ್ರಕಟಿಸಿದ ಪ್ರಕಾಶನ ಸಂಸ್ಥೆಗಳಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಈ ಯೋಜನೆಯ ಮೂಲಕ ಹಳೆಗನ್ನಡ ಜೈನ ಕಾವ್ಯಗಳು ಮರು ಹುಟ್ಟು ಪಡೆದು ಮತ್ತೊಮ್ಮೆ ಓದುಗರ ಕೈಸೇರುತ್ತಿವೆ. ಇದು ಸಂತೋಷದ ಸಂಗತಿ. ಇದಕ್ಕೆ ಕಾರಣ ಕರ್ತರಾದ ಎಲ್ಲರಿಗೂ ನನ್ನ ಕೃತಜ್ಞತೆಗಳು. ಕೃತಿ ವಿನ್ಯಾಸದ ವಿವಿಧ ಹಂತಗಳಲ್ಲಿ ಸಹಕರಿಸಿದ ನನ್ನ ವಿದ್ಯಾರ್ಥಿ ಸಿ. ಮಂಜುನಾಥ ಅವರಿಗೂ, ಕೃತಿಯನ್ನು ಅಂದವಾಗಿ ಮುದ್ರಿಸಿದ ಸತ್ಯಶ್ರೀ ಪ್ರಿಂಟರ್ಸ್ ಅವರಿಗೂ ನನ್ನ ಕೃತಜ್ಞತೆಗಳು.

ಬೆಂಗಳೂರು

೨೦-೦೧-೨೦೦೬

**ಡಾ. ಶಾಂತಿನಾಥ ದಿಬ್ಬದ**

# ಪ್ರಸ್ತಾವನೆ

## ಕವಿ-ಕಾವ್ಯ ಪರಿಚಯ

ಅಭಿನವ ಪಂಪನೆಂದು ತನ್ನನ್ನು ಅಭಿಮಾನದಿಂದ ಕರೆದುಕೊಂಡಿರುವ ಕವಿ ನಾಗಚಂದ್ರ ಬಿರುದಿಗೆ ತಕ್ಕ ಹಾಗೆ ಪಂಪನ ತರುವಾಯದ ಕವಿಗಳಲ್ಲಿ ಮಹತ್ವದವನಾಗಿದ್ದಾನೆ. ಜೈನ ಧಾರ್ಮಿಕ ಪರಿಸರ ಮತ್ತು ಕನ್ನಡ ಕಾವ್ಯ ಪರಿಸರಗಳಿಂದ ಪ್ರಭಾವಿತನಾದ ನಾಗಚಂದ್ರ ತರುವಾಯದ ಈ ಎರಡು ಕ್ಷೇತ್ರಗಳ ಮೇಲೆ ಸಾಕಷ್ಟು ಪ್ರಭಾವ ಬೀರಿದ್ದಾನೆ. ಲೌಕಿಕ-ಆಗಮಿಕ ಎಂಬ ಹಳೆಯ ಕಾವ್ಯ ಪದ್ಧತಿಯನ್ನು ಮೀರಿ ಇವನು ಆಗಮಿಕ ಕಾವ್ಯಗಳನ್ನೇ ಬರೆದಿದ್ದಾನೆ. ತಾನು ಬದುಕಿದ ಧಾರ್ಮಿಕ, ಸಾಮಾಜಿಕ ಪರಿಸರ ಮತ್ತು ಜೈನ ಧರ್ಮದ ಬಗ್ಗೆ ಹೊಂದಿದ ಕಡುನಿಷ್ಠೆಗಳು ಈ ಬದಲಾವಣೆಯ ಹಿಂದಿನ ಕಾರಣಗಳಾಗಿರಬಹುದು. ಪಂಪ, ಮಹಾಭಾರತದ ವಸ್ತುವನ್ನು ಕನ್ನಡಕ್ಕೆ ಪರಿಚಯಿಸಿದ ಮೊದಲ ಕವಿಯಾಗಿರುವಂತೆ ನಾಗಚಂದ್ರ ರಾಮಾಯಣದ ವಸ್ತುವನ್ನು ಕನ್ನಡಕ್ಕೆ ಪರಿಚಯಿಸಿದ ಮೊದಲ ಕವಿಯಾಗಿದ್ದಾನೆ. ಲಭ್ಯವಾಗಿರುವ ಕೆಲವು ಆಧಾರಗಳು ತನ್ನ ಕಾಲದಲ್ಲಿ ನಾಗಚಂದ್ರ ಕವಿ ತುಂಬಾ ಪ್ರಭಾವಶಾಲಿಯಾಗಿದ್ದನೆಂಬುದನ್ನು ತಿಳಿಸುತ್ತವೆ. ಆದರೂ ನಾಗಚಂದ್ರನ ಚರಿತ್ರೆಯನ್ನು ಇಡಿಯಾಗಿ ಕಟ್ಟಿಕೊಡುವುದಕ್ಕೆ ಅಗತ್ಯವಾದ ಸಾಮಗ್ರಿಗಳು ಕಡಿಮೆಯೆಂದೇ ಹೇಳಬೇಕು. ಕವಿಯ ಕೃತಿಗಳಲ್ಲಿ ಮತ್ತು ತರುವಾಯದ ಇತರರ ಕೃತಿಗಳಲ್ಲಿ ಬಂದಿರುವ ಕೆಲವು ಉಲ್ಲೇಖಗಳನ್ನಾಧರಿಸಿ ನಾಗಚಂದ್ರನ ಚರಿತ್ರೆಯನ್ನು ಕಟ್ಟಿಕೊಳ್ಳಬೇಕಾಗುತ್ತದೆ. ವಿದ್ವಾಂಸರು ಆ ಬಗ್ಗೆ ಸಾಕಷ್ಟು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದಾರೆ. ಅದರಲ್ಲಿ ಕೆಲವು ಪ್ರಮುಖ ಅಂಶಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

### ಕಾಲ

ಪ್ರಮಾಣಗಳ ಅಸ್ಪಷ್ಟತೆ ಮತ್ತು ಕೊರತೆಯಿಂದಾಗಿ ನಾಗಚಂದ್ರನ ಜೀವಿತದ ಅವಧಿಯನ್ನು ಗೆರೆ ಎಳೆದು ತಿಳಿಸುವುದು ಕಷ್ಟದ ಕೆಲಸವಾಗಿದೆ. ಕಾಲ ನಿಷ್ಕರ್ಷೆಯ ದೃಷ್ಟಿಯಿಂದ ವಿದ್ವಾಂಸರ ಗಮನವನ್ನು ಹೆಚ್ಚಾಗಿ ಸೆಳೆದಿರುವ ಕನ್ನಡ ಕವಿಗಳಲ್ಲಿ ನಾಗಚಂದ್ರನೂ ಒಬ್ಬನೆನ್ನಬಹುದು. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಆರಂಭವಾದ ಈ ಬಗೆಯ ಚರ್ಚೆ ಇಂದಿಗೂ ಮುಂದುವರಿದಿದೆ.

ಪಂಪ ರಾಮಾಯಣವನ್ನು ಮೊದಲ ಬಾರಿಗೆ ಸಂಪಾದಿಸಿಕೊಟ್ಟ ಬಿ.ಎಲ್. ರೈಸ್ ಅವರು ನಾಗಚಂದ್ರನ ಕಾಲವು ಕ್ರಿ.ಶ. ೧೧೪೦ ಎಂದು ತಮ್ಮ ವಾದವನ್ನು ಮಂಡಿಸಿದ್ದಾರೆ.

ಅವರ ಹಾಗೆಯೇ ತಮತಮಗೆ ಮಹತ್ವದವೆನ್ನಿಸಿದ ಆಂತರಿಕ ಮತ್ತು ಬಾಹ್ಯ ಪ್ರಮಾಣಗಳನ್ನು ಆಧರಿಸಿ ತರುವಾಯದ ಹತ್ತು-ಹನ್ನೆರಡು ಜನ ವಿದ್ವಾಂಸರು ನಾಗಚಂದ್ರನ ಕಾಲವನ್ನು ಬೇರೆ ಬೇರೆಯಾಗಿ ಗುರುತಿಸಿದ್ದಾರೆ. ಶ್ರೀ ಕೆ.ಬಿ. ಪಾಠಕ್ ಅವರು ಕ್ರಿ.ಶ. ೧೧೪೫ ಕವಿಯ ಕಾಲವೆಂದು ಹೇಳಿದರೆ, ಆರ್. ನರಸಿಂಹಾಚಾರ್ ಅವರು ಕ್ರಿ.ಶ. ೧೧೦೦ ಎಂದಿದ್ದಾರೆ. ಎ. ವೆಂಕಟಸುಬ್ಬಯ್ಯ ಅವರ ಪ್ರಕಾರ ಕವಿ ಬದುಕಿದ್ದು ಕ್ರಿ.ಶ. ೧೧೪೦ಕ್ಕೆ ಹಿಂದೆ. ಎಂ. ಗೋವಿಂದ ಪೈ ಅವರು ಕವಿಯ ಜೀವನದ ವಿವಿಧ ಕಾಲಘಟ್ಟಗಳ ಬಗ್ಗೆ ವ್ಯಾಪಕ ಚರ್ಚೆ ಮಾಡಿದ್ದಾರೆ. ಅವರ ಪ್ರಕಾರ ನಾಗಚಂದ್ರ ಹುಟ್ಟಿದ್ದು ಕ್ರಿ.ಶ. ೧೦೯೦ರಲ್ಲಿ, ಮಲ್ಲಿನಾಥಪುರಾಣವನ್ನು ಬರೆದದ್ದು ಕ್ರಿ.ಶ. ೧೧೩೦ರಲ್ಲಿ ಹಾಗೂ ಪಂಪ ರಾಮಾಯಣವನ್ನು ಬರೆದದ್ದು ಕ್ರಿ.ಶ. ೧೧೪೦ರಲ್ಲಿ ಎಚ್. ಶೇಷ ಅಯ್ಯಂಗಾರ್ ಅವರು ಕವಿಯ ಕಾಲ ಕ್ರಿ.ಶ. ೧೧೧೫ ಎಂದಿದ್ದಾರೆ. ಡಿ.ಎಲ್.ಎನ್. ಅವರ ಪ್ರಕಾರ ಹನ್ನೆರಡನೆಯ ಶತಮಾನದ ಪೂರ್ವಾರ್ಧ. ಅದೇ ರೀತಿ ರಂ.ಶ್ರೀ. ಮುಗಳಿಯವರು ಹನ್ನೊಂದನೆಯ ಶತಮಾನದ ಕೊನೆಯ ಘಟ್ಟ ಮತ್ತು ಹನ್ನೆರಡನೆಯ ಶತಮಾನದ ಮೊದಲ ಘಟ್ಟಗಳ ನಡುವೆ ಕವಿ ಬದುಕಿದ್ದಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ. ಹನ್ನೊಂದು ಮತ್ತು ಹನ್ನೆರಡನೆಯ ಶತಮಾನಗಳ ಮಧ್ಯದಲ್ಲಿ ಬದುಕಿದ ಕವಿ ಸಾಹಿತ್ಯ ರಚನೆ ಮಾಡಿದ್ದು ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿ ಎಂಬುದು ಡಾ. ಎಂ.ಎಂ. ಕಲಬುರ್ಗಿಯವರ ಅಭಿಪ್ರಾಯವಾಗಿದೆ. ನಾಗಚಂದ್ರನ ಕಾಲದ ಬಗ್ಗೆ ಜಿಜ್ಞಾಸೆ ನಡೆಸಿರುವ ಡಾ. ಆರ್.ಸಿ. ಹಿರೇಮಠ ಅವರ ಪ್ರಕಾರ ಕವಿಯ ಜೀವಿತ ಅವಧಿ ಕ್ರಿ.ಶ. ೧೦೦೦ ದಿಂದ ಕ್ರಿ.ಶ. ೧೦೪೯. ಸೀತಾರಾಮ ಜಾಗೀರದಾರ ಅವರ ಪ್ರಕಾರ ಕವಿ ಬದುಕಿದ್ದು ಕ್ರಿ.ಶ. ೧೦೮೦ರ ಆಸುಪಾಸಿನಲ್ಲಿ. ಕವಿಯು ಕ್ರಿ.ಶ. ೧೧೦೦ ಎಂದು ಆರ್.ಎಸ್. ರಾಮರಾವ್ ಅವರು, ಕ್ರಿ.ಶ. ೧೧೪೦ ಎಂದು ಸಿ.ಪಿ.ಕೆ. ಅವರು ಅಭಿಪ್ರಾಯ ಪಟ್ಟಿದ್ದಾರೆ. ಮೊದಲು ತಿಳಿಸಿದ ಹಾಗೆ ಈ ಚರ್ಚೆ ಇನ್ನೂ ಮುಂದುವರಿದಿದ್ದು ಸಧ್ಯಕ್ಕೆ ಇವರೆಲ್ಲರ ಅಭಿಪ್ರಾಯಗಳನ್ನು ಸಮೀಕರಿಸಿ ಕವಿ ನಾಗಚಂದ್ರನ ಕಾಲವನ್ನು ಗುರುತಿಸಬೇಕಾಗುತ್ತದೆ. ಇವರೆಲ್ಲರ ವಾದಗಳ ಪ್ರಕಾರ ನಾಗಚಂದ್ರನು ಬದುಕಿದ್ದು ಕ್ರಿ.ಶ.ಸು. ಹನ್ನೊಂದನೆಯ ಶತಮಾನದ ಪೂರ್ವಾರ್ಧದಿಂದ ಕ್ರಿ.ಶ. ಹನ್ನೆರಡನೆಯ ಶತಮಾನದ ಮಧ್ಯದವರೆಗಿನ ಅವಧಿಯಲ್ಲಿ ಎಂಬ ಸೂಚನೆ ದೊರೆಯುತ್ತದೆ. ಡಾ. ವಿಜಯಾ ದಬ್ಬೆ ಅವರು ತಮ್ಮ "ನಾಗಚಂದ್ರ ಒಂದು ಅಧ್ಯಯನ" ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ಕವಿಯ ಕಾಲದ ಬಗ್ಗೆ ಮೌಲಿಕವಾದ ಚರ್ಚೆಯನ್ನು ನಡೆಸಿ ಆ ಕುರಿತು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ. ಕವಿಯ ಕಾಲದ ಬಗ್ಗೆ ಇದುವರೆಗಿನ ವಿದ್ವಾಂಸರು ಮಾಡಿದ ಚರ್ಚೆಗಳನ್ನು ಒಂದೆಡೆ ಸಂಗ್ರಹಿಸಿಕೊಂಡು, ಅವರು ಬಳಸಿದ ಪ್ರಮಾಣಗಳ ಸಕ್ಷಮತೆಯನ್ನು ಪರಿಶೀಲಿಸಿ ಡಾ. ದಬ್ಬೆ ಅವರು ಕವಿಯ ಕಾಲವನ್ನು ಕ್ರಿ.ಶ. ೧೦೫೦ - ಕ್ರಿ.ಶ. ೧೧೦೦ ಎಂಬುದಾಗಿ ಗುರುತಿಸಿದ್ದಾರೆ. ಈ ಅಭಿಪ್ರಾಯವು ಸದ್ಯಕ್ಕೆ ಬಹುಜನ ಮಾನ್ಯವಾಗಿದೆ.

**ಸ್ಥಳ**

ನಾಗಚಂದ್ರನ ಕಾಲ ನಿಷ್ಕರ್ಷೆಯ ಹಾಗೆ ಸ್ಥಳ ನಿಷ್ಕರ್ಷೆಯೂ ತುಂಬಾ ಚರ್ಚೆಗೆ ಒಳಗಾಗಿರುವ ವಿಷಯವಾಗಿದೆ. ನಾಗಚಂದ್ರನ ಮಲ್ಲಿನಾಥಪುರಾಣದ (೧೪-೨೧೧)

ನಿಜ ವಿಭವೋದಯಂ ಸಫಲಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ
ವಿಜಯಪುರಕ್ಕಲಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮಂ

ಸುಜನ ಸಭಾವತಂಸಮೆನೆ ಪೇಟ್ಟುದಿ ತೋದಿತಮಾಗ ಮಾಡಿದಂ
ನಿಜ ಕವಿತಾಗುಣೋದಮೆಂಬಿನಮೀ ಕೃತಿ ನಾಗಚಂದ್ರನಾ ॥

ಎಂಬ ಪದ್ಯದಲ್ಲಿ ಕವಿಯ ಊರಿನ ಬಗ್ಗೆ ಒಂದು ಸೂಚನೆ ದೊರೆಯುತ್ತದೆ. ನಾಗಚಂದ್ರನು 'ವಿಜಯಪುರ' ದಲ್ಲಿ ಮಲ್ಲಿನಾಥ ದೇವಾಲಯ ಕಟ್ಟಿಸಿದುದನ್ನು ತಿಳಿಸುವ ಈ ಪದ್ಯವು ಕವಿಯ ಊರು ವಿಜಯಪುರವೇ ಆಗಿರುವ ಸಾಧ್ಯತೆಯತ್ತ ಬೆರಳು ಮಾಡಿ ತೋರಿಸುತ್ತದೆ. ಜೈನಧರ್ಮದ ಮೇಲೆ ನಿಷ್ಠೆಯನ್ನಿರಿಸಿದ ಕವಿ ತನ್ನ ಊರಿನ ಮೇಲಿನ ಅಭಿಮಾನದಿಂದ ಆ ಮಲ್ಲಿನಾಥ ಜಿನಗೇಹವನ್ನು ವಿಜಯಪುರದಲ್ಲಿಯೇ ಕಟ್ಟಿಸಿರುವುದು ಸಾಧ್ಯವಿದೆ.

ಇದಲ್ಲದೆ ತನ್ನ ರಾಮಚಂದ್ರಚರಿತಪುರಾಣದ ಎರಡು ಬೇರೆ ಬೇರೆ ಎಡೆಗಳಲ್ಲಿ ವಿಜಯಪುರದಲ್ಲಿ ಮೇಲಿನ ಅಭಿಮಾನವನ್ನು ಕವಿ ವ್ಯಕ್ತಪಡಿಸಿರುವುದನ್ನು ನಾವಿಲ್ಲಿ ಗಮನಿಸಬೇಕು.

೧. "ದೇವನಿರ್ಮಿತವೆನಿಸಿರ್ದಾ ನಗರಿಯೊಳ್ ಅಪ್ರಾಕೃತ ಮಾನಧನಂ ಸುಖದಿ ನಿರ್ದನಭಿನವ ಪಂಪಂ" (ರಾಚಂಪು ೮-೧)

೨. ಅದೇ ಸಂದರ್ಭದ ಆಶ್ವಾಸ ೮-೧ರ ವಚನ ಭಾಗದಲ್ಲಿ ರಾಮ-ಲಕ್ಷ್ಮಣರು ವಿಜಯಪುರದಲ್ಲಿದ್ದರೆಂದು ಕವಿ ತಿಳಿಸಿದ್ದಾನೆ. ಈ ಪ್ರಮಾಣಗಳನ್ನು ಆಧರಿಸಿ ನೋಡಿದಾಗ ಕವಿ ವಿಜಯಪುರದವನೆಂಬುದು ಸ್ಪಷ್ಟವಾಗುತ್ತದೆ. ಆದರೆ ತಲಕಾಡಿನ ಪ್ರದೇಶದಲ್ಲಿ ಇನ್ನೊಂದು ವಿಜಯಪುರವಿದ್ದು ಇವೆರಡರಲ್ಲಿ ಕವಿ ಬದುಕಿದ್ದು ಎಲ್ಲಿ? ಎಂಬ ಪ್ರಶ್ನೆ ಎದುರಾಗುತ್ತದೆ. ಈ ಕುರಿತೂ ವಿದ್ವಾಂಸರು ಸಾಕಷ್ಟು ಚರ್ಚೆ ಮಾಡಿದ್ದಾರೆ.

ಅವರ ಅಭಿಪ್ರಾಯಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ನಾಗಚಂದ್ರ ಕವಿಯು ಬನವಾಸಿ ದೇಶದ ಪಡುಗಡಿಯ ಕಡಲದಂಡೆಯ ಯಾವುದೋ ಊರಿನವನಾಗಿರಬೇಕು, ಹೊಯ್ಸಳರ ರಾಜಧಾನಿಯಾಗಿದ್ದ ದ್ವಾರಸಮುದ್ರದಲ್ಲಿ ಅವನು ಕೆಲಕಾಲ ವಾಸಿಸಿರಬೇಕೆಂದು ಎಂ. ಗೋವಿಂದ ಪೈ ಅವರು ಅಭಿಪ್ರಾಯ ಪಟ್ಟಿದ್ದಾರೆ. ಹೊಯ್ಸಳರ ಅಧಿಕಾರದಲ್ಲಿ ತಲಕಾಡಿನ ವಿಜಯಪುರ ಕವಿಯ ಊರಾಗಿದ್ದಿರಬಹುದು ಎಂಬುದು ಡಿ.ಎಲ್.ಎನ್. ಅವರ ವಿಚಾರವಾಗಿದೆ. ಉತ್ತರ ಕರ್ನಾಟಕದ ಈಗಿನ ಬಿಜಾಪುರವೇ ನಾಗಚಂದ್ರ ತಿಳಿಸಿದ ವಿಜಯಪುರ ಎಂದು ಆರ್. ನರಸಿಂಹಾಚಾರ್ಯರು ಪ್ರಬಲವಾಗಿ ವಾದಿಸಿದ್ದಾರೆ. ಈ ಅಭಿಪ್ರಾಯವನ್ನೇ ದ.ರಾ. ಬೇಂದ್ರೆಯವರು ಎತ್ತಿ ಹಿಡಿದ್ದಾರೆ. ಬಾಬಾನಗರದಲ್ಲಿ ಈಗ ಜೀರ್ಣ ಸ್ಥಿತಿಯಲ್ಲಿರುವ ಕಟ್ಟಡ ಜೈನ ಬಸದಿಯಾಗಿದ್ದಿತೆಂದೂ, ಅದೇ ನಾಗಚಂದ್ರನ ಮೊಮ್ಮಕ್ಕಳ ಉಲ್ಲೇಖವಿರುವ ಶಾಸನವನ್ನು ಒಳಗೊಂಡಿರುವ ಮಲ್ಲಿನಾಥ ಜಿನ ಬಸದಿಯಾಗಿದ್ದಿರಬೇಕೆಂದೂ ಡಾ. ಎಂ.ಎಂ. ಕಲಬುರ್ಗಿಯವರು ಊಹಿಸಿದ್ದಾರೆ.

ಇವರೆಲ್ಲರ ಅಭಿಪ್ರಾಯಗಳನ್ನು ತೂಗಿ ನೋಡಿದ ಡಾ. ವಿಜಯಾ ದಬ್ಬೆ ಅವರು ಉತ್ತರ ಕರ್ನಾಟಕದ ಬಿಜಾಪುರವೇ ಕವಿಯ ಊರು ಎಂಬುದನ್ನು ಸಾಧಿಸಿದ್ದಾರೆ. ನಾಗಚಂದ್ರನ ಇತಿಹಾಸವನ್ನು ತಿಳಿಸುವ ಇನ್ನೊಂದು ಶಾಸನವು ಈ ಭಾಗದ ಕಣ್ಣೂರಿನಲ್ಲಿರುವುದು, ನಾಗಚಂದ್ರನ ಮೊಮ್ಮಕ್ಕಳ ಉಲ್ಲೇಖವಿರುವ ಶಾಸನವು ಬಿಜಾಪುರದ ಸಮೀಪದ ಬಾಬಾ ನಗರದಲ್ಲಿರುವುದು - ಈ ಅಂಶಗಳನ್ನಾಧರಿಸಿ ಡಾ. ದಬ್ಬೆಯವರು ತಮ್ಮ ಅಭಿಪ್ರಾಯವನ್ನು ಮಂಡಿಸಿದ್ದಾರೆ.

## ಕವಿಯ ಪರಿಸರ

ಯಾವುದೇ ಕವಿಯು ತಾನು ಬದುಕಿದ ಪರಿಸರದ ಪ್ರಭಾವದಿಂದ ಹೊರಗುಳಿಯಲಾರ. ತನ್ನ ಕಾಲದ ರಾಜಕೀಯ, ಧಾರ್ಮಿಕ ಮತ್ತು ಸಾಹಿತ್ಯಕ ವಲಯಗಳು ಅವನ ಮೇಲೆ ಗಾಢವಾದ ಪ್ರಭಾವವನ್ನು ಬೀರಿರುತ್ತವೆ. ತನ್ನ ಕಾಲಕ್ಕಾಗಲೇ ಗಟ್ಟಿಗೊಂಡ ಕನ್ನಡ ಕಾವ್ಯ ಪರಂಪರೆಯ ಮಹತ್ವದ ಕಾಲಘಟ್ಟದಲ್ಲಿ ಸಾಹಿತ್ಯವನ್ನು ವಿಶೇಷವಾಗಿ ಪ್ರೋತ್ಸಾಹಿಸುವ ರಾಜಕೀಯ ಮತ್ತು ಧಾರ್ಮಿಕ ಪರಿಸರದಲ್ಲಿ ಕಾವ್ಯ ರಚನೆಗೆ ತೊಡಗಿರುವ ಕವಿಯ ಮೇಲಂತೂ ರಾಜಕೀಯ, ಧಾರ್ಮಿಕ, ಸಾಹಿತ್ಯಕ ವಲಯಗಳು ತುಂಬಾ ದಟ್ಟವಾದ ಪ್ರಭಾವವನ್ನು ಬೀರಿವೆ.

ಕ್ರಿ.ಶ. ಹನ್ನೊಂದನೆಯ ಶತಮಾನದ ಉತ್ತರಾರ್ಧವು ಕಲ್ಯಾಣಿ ಚಾಲುಕ್ಯರ ಆಡಳಿತ ಕಾಲವಾಗಿತ್ತು. ಕ್ರಿ.ಶ. ೧೦೭೬ ರಿಂದ ಕ್ರಿ.ಶ. ೧೧೨೬ರ ವರೆಗೆ ಈ ಮನೆತನದ ಶ್ರೇಷ್ಠ ದೊರೆ ಆರನೆಯ ವಿಕ್ರಮಾದಿತ್ಯ ರಾಜ್ಯಭಾರದ ಹೊಣೆಯನ್ನು ಹೊತ್ತಿದ್ದ. ಅವನು ರಾಜ್ಯದಲ್ಲಿ ಶಾಂತಿ ಸ್ಥಾಪನೆ ಮಾಡಿದುದಲ್ಲದೆ ಸಾಹಿತ್ಯಕ, ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿದ್ದ. ಸ್ವತಃ ಪಂಡಿತನಾಗಿದ್ದ ಆತ ಬಿಲ್ಹಣ, ವಿಜ್ಞಾನೇಶ್ವರ ಮೊದಲಾದ ಶ್ರೇಷ್ಠ ಸಂಸ್ಕೃತ ಕವಿಗಳಿಗೆ ಆಶ್ರಯ ನೀಡಿದ್ದ. ಈ ಅವಧಿಯಲ್ಲಿ ದಕ್ಷಿಣ ಕರ್ನಾಟಕವನ್ನು ಆಳುತ್ತಿದ್ದ ಹೊಯ್ಸಳ ವಂಶದ ವಿನಯಾದಿತ್ಯ (ಕ್ರಿ.ಶ. ೧೦೪೭-೧೦೯೮) ಮತ್ತು ಎರೆಯಂಗ (ಕ್ರಿ.ಶ. ೧೦೬೩-೧೧೦೦) ಇವರು ವಿಕ್ರಮಾಧಿತ್ಯನ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದರು. ಈ ಅವಧಿಯ ಕರ್ನಾಟಕದ ಬಹುತೇಕ ರಾಜಮನೆತನಗಳು ಜೈನಧರ್ಮಕ್ಕೆ ಸಾಕಷ್ಟು ರಕ್ಷಣೆ ಮತ್ತು ಪ್ರೋತ್ಸಾಹ ನೀಡಿದ್ದವು. ಆದರೂ ಸಹಿತ ಕವಿ ನಾಗಚಂದ್ರನು ಯಾವುದೇ ರಾಜನ ಆಶ್ರಯವನ್ನು ಪಡೆದಿರಲಿಲ್ಲವೆಂಬುದು ಕುತೂಹಲದ ಸಂಗತಿಯಾಗಿದೆ. ಇದಕ್ಕೆ ಅವನ ಸ್ವತಂತ್ರ ಪ್ರವೃತ್ತಿಯು ಕಾರಣವಾಗಿದ್ದರೂ ಆಗಿರಬಹುದು.

ನಾಗಚಂದ್ರನ ಕಾಲ ಕರ್ನಾಟಕವು ಬಹುತೇಕ ಸ್ವತಂತ್ರ ಕರ್ನಾಟಕವಾಗಿದ್ದಿತು. ಅನ್ಯರ ಆಕ್ರಮಣಗಳ ತೊಂದರೆ ಇರಲಿಲ್ಲವಾದ ಕಾರಣ ಅಂದಿನ ಸಾಮಾಜಿಕ ಸ್ಥಿತಿ ಸಾಕಷ್ಟು ನಿರ್ಬಾಧಿವಾಗಿದ್ದಿತು. ಹಿಂದಿನ ಶತಮಾನಗಳ ಜೀವನಕ್ರಮವೇ ಕವಿಯು ಕಾಲದಲ್ಲೂ ಮುಂದುವರೆದ್ದಿತು. ಜನತೆಯಲ್ಲಿ ಧಾರ್ಮಿಕ ನಿಷ್ಠೆ ಮತ್ತು ಪರಂಪರಾಗತ ವಿಷಯಗಳ ಬಗ್ಗೆ ಹೆಚ್ಚಿನ ಶ್ರದ್ಧೆ ಇದ್ದಿತು. ಕ್ಷಾತ್ರ ಜೀವನದ ನಂಬಿಕೆ, ಆಚರಣೆಗಳು ತಮ್ಮ ಪ್ರಭಾವವನ್ನು ದಟ್ಟವಾಗಿ ಉಳಿಸಿಕೊಂಡಿದ್ದವು. ಲಲಿತಕಲೆಗಳನ್ನು ಜನರು ಪ್ರೀತಿಸುತ್ತಿದ್ದರು ಮತ್ತು ಪ್ರೋತ್ಸಾಹಿಸುತ್ತಿದ್ದರು.

ನಾಗಚಂದ್ರನಿಗಿಂತ ಮೊದಲಿನ ನಾಲ್ಕಾರು ಶತಮಾನಗಳ ಕಾಲವು ಕರ್ನಾಟಕದ ಜೈನಧರ್ಮದ ವೈಭವದ ಕಾಲವಾಗಿದ್ದಿತಾದರೂ ಹನ್ನೊಂದನೆಯ ಶತಮಾನದಲ್ಲಿ ಆ ವೈಭವ ಮಸಳಿಸತೊಡಗಿತು. ಚೋಳ ಕಳಚೂರಿ ರಾಜನಮನೆತನಗಳ ಅಸಹನೆ ಮತ್ತು ಶೈವಧರ್ಮದ ಆಕ್ರಮಣದಿಂದಾಗಿ ಈ ಅವಧಿಯಲ್ಲಿ ಉತ್ತರ ಕರ್ನಾಟಕದಲ್ಲಿ ಜೈನಧರ್ಮವು ಸಾಕಷ್ಟು ಅಡ್ಡಿ ಆತಂಕಗಳನ್ನು ಎದುರಿಸಬೇಕಾಗಿ ಬಂದಿತು. ಈ ಸಂದರ್ಭದಲ್ಲಿ ಬಂದ ಕವಿ ನಾಗಚಂದ್ರನಿಗೂ ಇದರ ಬಿಸಿ ತಟ್ಟಿರಬೇಕು. ಆ ಕಾರಣವಾಗಿಯೇ ಅವನು ತನ್ನೆರಡೂ ಕಾವ್ಯಗಳನ್ನು ಜೈನಧರ್ಮದ ಸಮರ್ಥನೆ ಮತ್ತು ಪ್ರಚಾರಕ್ಕಾಗಿ ಬಳಸಿಕೊಂಡಿರಬೇಕು. ಕವಿಯು ಸಂಪೂರ್ಣ ಜೈನ ಪರಿಸರದಲ್ಲಿ ಬದುಕಿದ್ದುದು ಮತ್ತು ಪ್ರಬಲವಾದ ಜೈನನಿಷ್ಠೆಯನ್ನು ಹೊಂದಿದ್ದುದು ಇದರಿಂದ ಸ್ಪಷ್ಟವಾಗುತ್ತದೆ.

ಸಾಹಿತ್ಯದ ದೃಷ್ಟಿಯಿಂದ ನೋಡುವುದಾದರೆ ನಾಗಚಂದ್ರನ ಕಾಲಕ್ಕಾಗಲೇ ಪ್ರಸಿದ್ಧ ಕವಿಗಳಾದ ಪಂಪ-ಪೊನ್ನ-ರನ್ನರಿಂದಾಗಿ ಕನ್ನಡ ಕಾವ್ಯ ಕ್ಷೇತ್ರ ತನ್ನ ಪರಾಕಾಷ್ಠೆಯನ್ನು ತಲುಪಿತ್ತು. ಸಂಸ್ಕೃತದ ಪ್ರಾಬಲ್ಯವನ್ನು ಕಡೆಗಣಿಸಿ ಕನ್ನಡದ ಸಾರ್ವಭೌಮತ್ವವನ್ನು ಸಾಧಿಸಿಯಾಗಿತ್ತು. ಹಳೆಗನ್ನಡ ಕಾವ್ಯಗಳೆಂದರೆ ಜೈನ ಕಾವ್ಯಗಳೇ ಎನ್ನುವಷ್ಟರ ಮಟ್ಟಿಗೆ ಜೈನ ಕಾವ್ಯಗಳು ಜನಪ್ರಿಯತೆಯನ್ನು ಸಂಪಾದಿಸಿಕೊಂಡಿದ್ದುವು.

ಒಟ್ಟಾರೆ ಪಂಪಪೂರ್ವಯುಗ ಮತ್ತು ಪಂಪಯುಗದ ವ್ಯಾಪಕವಾದ ಅನುಭವ ಮತ್ತು ಒನ್ನೆಲೆಗಳು ನಾಗಚಂದ್ರ ಕವಿಗೆ ಒದಗಿಬಂದಿದ್ದುವು. ಪ್ರಾಕೃತ ಮತ್ತು ಸಂಸ್ಕೃತ ಭಾಷೆಗಳಿಂದ ವಸ್ತುವನ್ನು ಪಡೆಯುವುದು, ಚಂಪೂಕಾವ್ಯ ಪದ್ಧತಿಯನ್ನು ಅನುಸರಿಸುವುದು, ಒಂದು ಲೌಕಿಕ ಮತ್ತು ಇನ್ನೊಂದು ಆಗಮಿಕ ಕಾವ್ಯ ರಚಿಸುವುದು - ಇವು ನಾಗಚಂದ್ರನ ಕಾಲದ ಕಾವ್ಯ ಕ್ಷೇತ್ರದ ಪರಿಪಾಠಗಳಾಗಿದ್ದುವು. ನಾಗಚಂದ್ರ ಮೊದಲಿನ ಎರಡನ್ನು ಪಾಲಿಸಿದ. ಎರಡೂ ಆಗಮಿಕ ಕಾವ್ಯಗಳನ್ನು ರಚಿಸುವ ಮೂಲಕ ಲೌಕಿಕ - ಆಗಮಿಕ ಕಾವ್ಯ ಪದ್ಧತಿಯನ್ನು ಮಾತ್ರ ಮೀರಿ ನಡೆದ. ಒಟ್ಟಾರೆ ತನ್ನ ಪೂರ್ವಕಾಲದಿಂದ ಪ್ರತಿಷ್ಠಾಪನೆಗೊಂಡು ಬಂದಿದ್ದ ಕನ್ನಡ ಕಾವ್ಯ ಕ್ಷೇತ್ರದ ಘನತೆ, ಗೌರವಗಳನ್ನು ನಾಗಚಂದ್ರ ಕವಿ ಸಮರ್ಥ ರೀತಿಯಲ್ಲಿ ಮುನ್ನಡೆಸಿಕೊಂಡು ಬಂದಿದ್ದಾನೆ. ವಿಶೇಷವೆಂದರೆ ಬಹುತೇಕ ಹಳಗನ್ನಡ ಕಾವ್ಯ ಕ್ಷೇತ್ರದ ಚಟುವಟಿಕೆಗಳು ಜರುಗಿದ್ದು ಉತ್ತರ ಕರ್ನಾಟಕದ ಭಾಗದಲ್ಲಿ ಎಂಬುದು.

**ಕವಿಯ ವ್ಯಕ್ತಿತ್ವ**

ತನ್ನ ಸ್ವಂತ ಜೀವನದ ವಿಷಯಗಳನ್ನು ತಿಳಿಸುವಲ್ಲಿ ನಾಗಚಂದ್ರ, ಪಂಪಾದಿ ಕವಿಗಳಷ್ಟು ಉತ್ಸಾಹವನ್ನು ತೋರಿಸಿಲ್ಲ. ಆದರೂ ತನ್ನ ಎರಡು ಕಾವ್ಯಗಳ ಮೂಲಕ ತನ್ನ ವ್ಯಕ್ತಿತ್ವದ ಸ್ಥೂಲವಾದ ನೋಟವನ್ನು ನಮ್ಮ ಮುಂದೆ ಮೂಡಿಸುತ್ತಾನೆ. ಕಾವ್ಯಗಳ ಪ್ರತಿ ಆಶ್ವಾಸದ ಮೊದಲ ಮತ್ತು ಕೊನೆಯ ಪದ್ಯಗಳಲ್ಲಿ ಕವಿ ನಾಗಚಂದ್ರ ಸೂಚ್ಯವಾಗಿ ತನ್ನ ವ್ಯಕ್ತಿತ್ವವನ್ನು ಪ್ರಕಟಿಸಿದ್ದಾನೆ. ಕೆಲವೆಡೆ ಕೆಲವು ಪಾತ್ರಗಳ ಜೊತೆಗೆ ಕವಿ ತನ್ನನ್ನು ಸಮೀಕರಿಸಿಕೊಂಡಿರುವ ಸಾಧ್ಯತೆಯನ್ನು ಗುರುತಿಸಲಾಗಿದೆ. "ರಾಮಚಂದ್ರಚರಿತ ಪುರಾಣ"ದ

ಶ್ರೀಯುಂ ವಿತರಣದೊಳ್ ದಾನ್
ಶ್ರೀಯುಂ ಸೌಜನ್ಯ ವೃತ್ತಿಯೊಳ್ ವಿಮಳಯುತಃ
ಶ್ರೀಯುಂ ಜಿನ ಪ್ರವಚನ
ಶ್ರೇಯದೊಳತಿಶಯಿಸಿ ನೆಗಳ್ದನಭಿನವಪಂಪಂ (ಆ ೨-೧)

ಎಂಬ ಪದ್ಯದಲ್ಲಿ ತನ್ನ ಆರ್ಥಿಕ ಸಂಪತ್ತನ್ನು ದಾನಕ್ಕಾಗಿ, ಶಾಬ್ದಿಕ ಸಂಪತ್ತನ್ನು ಉತ್ತಮ ಕಾವ್ಯಗಳಿಗಾಗಿ ಹಾಗೂ ಪ್ರಸಿದ್ಧಿಯನ್ನು ಜಿನಪ್ರವಚನಗಳಿಗಾಗಿ ಸದ್ವಿನಿಯೋಗ ಮಾಡಿಕೊಂಡಿರುವುದಾಗಿ ಕವಿ ಅಭಿ -ಮಾನದಿಂದ ಹೇಳಿಕೊಂಡಿದ್ದಾನೆ. ಇದನ್ನು ಸಮರ್ಥಿಸುವ ರೀತಿಯಲ್ಲಿ ಕವಿ ಬ್ರಹ್ಮ ಶಿವ ಹೇಳಿರುವ

ವಿತ್ತಂ ಸತ್ಪಾತ್ರಕ್ಕಾ
ಯತ್ತಂ ನಿಜವಾಣಿ ತೀರ್ಥಂಕರ ಕೀರ್ತನೆಗಾ
ಯತ್ತಂ ವ್ರತಕ್ಕೆ ತನುವಾ
ಯತ್ತವನಲ್ನಾಗಚಂದ್ರ ಬುಧನಿತ್ಯಾರ್ಥಂ (ಸಮಯ ಪರೀಕ್ಷೆ ೧-೨೬)

ಎಂಬ ಮಾತನ್ನು ಇಲ್ಲಿ ಬಳಸಿಕೊಳ್ಳಬಹುದು. ಮೇಲಿನ ಪದ್ಯದಲ್ಲಿ ನಾಗಚಂದ್ರ ಹೇಳಿಕೊಂಡ ವಿವರಗಳೆಲ್ಲವನ್ನೂ ಬ್ರಹ್ಮಶಿವ ಪುನರುಚ್ಚರಿಸಿರುವುದು ವಿಶೇಷವಾಗಿದ್ದು ಆ ಕಾಲದಲ್ಲಿ ನಾಗಚಂದ್ರ ಹೊಂದಿದ ಪ್ರಸಿದ್ಧಿಗೆ ಸಾಕ್ಷಿಯಾಗಿದೆ.

ರಾಮಚಂದ್ರಚರಿತ ಪುರಾಣದ ಮೂರನೆಯ ಆಶ್ವಾಸದಲ್ಲಿ ದಶರಥನನ್ನು ಹೊಗಳುವ ನೆಪದಲ್ಲಿ "ಜನತಾಜಂಗಮ ಕಲ್ಪವೃಕ್ಷ", "ಅರ್ಥಿಜನಕ್ಕೆ ಕಲ್ಪವೃಕ್ಷ", "ಧರ್ಮಕಾರ್ಯನಿರತ" ಹಾಗೂ "ಉದಾತ್ತಚಿತ್ತ" ಎಂಬೆಲ್ಲ ಶಬ್ದಗಳ ಮೂಲಕ ತನ್ನನ್ನೇ ತಾನು ಹೊಗಳಿಕೊಂಡಂತಿದೆ. ಇದನ್ನು ಸಮರ್ಥಿಸುವ ಇನ್ನೊಂದು ಪದ್ಯ ಮಲ್ಲಿನಾಥಪುರಾಣದಲ್ಲಿದ್ದು ಅದು ಹೀಗಿದೆ :

ಶ್ರೀಯಂ ಧರೆ ಪೊಗಟ್ವೆನೆಗಂ
ನ್ಯಾಯಾರ್ಜಿತಮೆನಿಸಿ ಪಡೆದಂ ತಕ್ಕಿಡೆಗಳೆದೊ
ಲ್ದೀಯುತ್ತಮಮಲ ಕೀರ್ತಿ
ಶ್ರೀಯನುಪಾರ್ಜಿಸಿದುದಾತ್ತನಭಿನವ ಪಂಪಂ (೩-೧)

ಈ ಪದ್ಯವನ್ನು ನೋಡಿದರೆ ನಾಗಚಂದ್ರನು ನ್ಯಾಯಯುತವಾಗಿ ದುಡಿದು ಧನವನ್ನು ಸಂಪಾದಿಸಿದ ಶ್ರೀಮಂತನಾಗಿದ್ದುದೂ, ಆ ಶ್ರೀಮಂತಿಕೆಯನ್ನು ಸತ್ಕಾರ್ಯಗಳಿಗಾಗಿ ವಿನಿಯೋಗಿಸುತ್ತಿದ್ದುದೂ ಸ್ಪಷ್ಟವಾಗುತ್ತದೆ. "ಭೂವಿಶ್ರುತ ವಿಭವ" ಎಂಬ ವಿಶೇಷಣವು ಇದನ್ನು ಸಮರ್ಥಿಸುತ್ತದೆ. "ನಿಜವಿಭವೋದಯ ಸಫಳಮಾಯ್ತೆನೆ....." (ಮಲ್ಲಿನಾಥ ಪುರಾಣ ೧೪ - ೨೧೧) ಎಂಬ ಪದ್ಯ ಕವಿಯ ಧಾರ್ಮಿಕ ಮತ್ತು ಸಾಹಿತ್ಯಕ ಸಾಧನೆಗಳೆರಡನ್ನೂ ಪರಿಚಯಿಸಿಕೊಡುತ್ತದೆ. ಹೇರಳವಾದ ಆರ್ಥಿಕ ಸಂಪತ್ತನ್ನು ಹೊಂದಿದ ಕವಿಯು ವಿಜಯಪುರದಲ್ಲಿ ಮಲ್ಲಿಜಿನೇಂದ್ರ ಗೇಹವನ್ನು ನಿರ್ಮಿಸಿದ್ದ. ಅದೇ ರೀತಿ ಹೇರಳವಾದ ಪ್ರತಿಭಾ ಸಂಪತ್ತನ್ನು ಹೊಂದಿದ ಅವನು ಮಲ್ಲಿನಾಥಪುರಾಣ ಮತ್ತು ರಾಮಚಂದ್ರಚರಿತ ಪುರಾಣದಂತಹ ಶ್ರೇಷ್ಠ ಕಾವ್ಯಗಳನ್ನು ರಚಿಸಿದ.

ತನ್ನ ಕಾವ್ಯಗಳಲ್ಲಿ ಅನೇಕ ಕಡೆ ಕವಿ ತನ್ನ ಜಿನಧರ್ಮನಿಷ್ಠೆಯನ್ನು ವ್ಯಕ್ತಪಡಿಸಿದ್ದಾನೆ. ಆತನು ತಾನು "ಜೈನಾಗಮ ವನ ವಸಂತ"ನಂತೆ (ಮ.ಪು-೬-೧)

ಜಿನಪತಿಗಂ ಜಿನಮುನಿಗಂ
ಜಿನಾಗಮಕ್ಕಂ ಜಿನಾಧಿಪತಿ ಭವನಕ್ಕಂ
ಜಿನಗುಣ ಸಂಪತ್ತಿಗಮೆಜಿ
ಪನೆಜಿಗನುಟಿದವರ್ಗೆ ನಾಗಚಂದ್ರ ಕವೀಂದ್ರಂ.

ಎಂಬ ಪದ್ಯವಂತೂ ನಾಗಚಂದ್ರನ ಜೈನನಿಷ್ಠೆಗೆ ಬರೆದ ವ್ಯಾಖ್ಯಾನದಂತಿದೆ. "ಜಿನಪತಿಸಭೆಯೊಳ್ ಪೂಜ್ಯಂ ಮುನಿಪತಿಸಭೆಯೊಳ್ ಪದಾರ್ಥ ನಿಪುಣಂ ವಿದ್ವಜ್ಜನ ಸಭೆಯೊಳ್ ಚಾರುಚರಿತಂ...." (ಮ.ಪು. ೧-೪೧) ಎಂಬ ಅಭಿಮಾನದ ಮಾತುಗಳನ್ನು ತನ್ನ ಬಗ್ಗೆ ಕವಿ ಹೇಳಿಕೊಂಡಿದ್ದಾನೆ. ಇಲ್ಲಿಯ "ಜಿನಪತಿ" ಎಂಬ ಶಬ್ದವನ್ನು ಕೆಲವರು "ಜನಪತಿ" ಇದ್ದಿರಬೇಕೆಂದು ಭಾವಿಸಿದ್ದಾರೆ. ಒಟ್ಟಾರೆ ಸಾಮಾಜಿಕವಾಗಿ ಗಣ್ಯನೂ, ಧಾರ್ಮಿಕವಾಗಿ ಪದಾರ್ಥ ನಿಪುಣನೂ, ವಿದ್ವಜ್ಜನರಲ್ಲಿ ಮಾನ್ಯನೂ ಆಗಿದ್ದ ಕವಿ ನಾಗಚಂದ್ರ ಬಹುಮುಖ ವ್ಯಕ್ತಿತ್ವವನ್ನು ಹೊಂದಿದವನಾಗಿದ್ದಾನೆ.

ಜೈನತತ್ತ್ವ ಪ್ರತಿಪಾದನೆಯೆಂದರೆ ಕವಿಗೆ ಎಲ್ಲಿಲ್ಲದ ಉತ್ಸಾಹ. ಇದಕ್ಕೆ ಅವನ ಎರಡೂ ಕಾವ್ಯಗಳ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು. ದುಡಿಮೆ, ಹಣದ ಉತ್ಪಾದನೆ ಹಾಗೂ

ಅವರ ಹಂಚಿಕೆಗಳ ವಿಷಯದಲ್ಲಿ ನಾಗಚಂದ್ರ ಕವಿ ಜೈನ ಧೋರಣೆಯನ್ನು ಅನುಸರಿಸಿರುದು ಕೆಲವು ಪದ್ಯಗಳಿಂದ ವಿದಿತವಾಗುತ್ತದೆ. ಲೌಕಿಕವಲ್ಲಿದ್ದುಕೊಂಡೇ ಅಲೌಕಿಕದತ್ತ ಕೈಚಾಚ ಬೇಕೆಂಬುದು ಅವನ ನಿಲುವಾಗಿದ್ದಿತು.ಎಲ್ಲವೂ ನ್ಯಾಯಸಮ್ಮತವಾಗಿರಬೇಕು, ಸದುದ್ದೇಶದಿಂದ ಕೂಡಿದ ಸಪ್ಪಳಿಕೆಯಾಗಿರಬೇಕೆಂಬುದು ಕವಿಯ ಹಂಬಲವಾಗಿದೆ. "ನ್ಯಾಯಾರ್ಜಿತಮಲ್ಲಮೆನಿಪ ಧನಮೇಘಂಡಂ" (ರಾಚಂಪು-೬-೧೨೬) ಎಂಬ ಮಾತೂ ಕವಿಯ ನ್ಯಾಯಯುತವಾದ ಮಡಿಮೆಯ ಧೋರಣೆಯನ್ನು ನಿಚ್ಚಳವಾಗಿ ತಿಳಿಸುತ್ತದೆ. ಹೀಗೆ ತಾತ್ವಿಕವಾಗಿ ಮತ್ತು ಲೌಕಿಕವಾಗಿ ಶ್ರೀಮಂತನಾಗಿದ್ದ ನಾಗಚಂದ್ರನು ತನ್ನ ಕಾಲದ ಸಾಹಿತ್ಯಕ, ಸಾಮಾಜಿಕ ಕ್ಷೇತ್ರಗಳೆರಡನ್ನೂ ಶ್ರೀಮಂತಗೊಳಿಸಿದ್ದಾನೆ.

ತನ್ನ ಎರಡೂ ಕಾವ್ಯಗಳಲ್ಲಿ ನಾಗಚಂದ್ರನು-ಭೂತಬಲಿ, ಪುಷ್ಪದಂತ, ಜಿನಸೇನ ಮೊದಲಾದ ಸಾಂಪ್ರದಾಯಿಕ ಗುರುಪರಂಪರೆಯನ್ನು ಸ್ತುತಿಸಿದ್ದಾನೆ. ರಾಮಚಂದ್ರಚರಿತ ಪುರಾಣದಲ್ಲಿ ಶುಭಕೀರ್ತಿ, ವಾಸುಪೂಜ್ಯ ಮುನಿ, ವೀರನಂದಿ ಸೈದ್ಧಾಂತಿಕ ಹಾಗೂ ಶ್ರುತಕೀರ್ತಿ ತ್ರೈವಿದ್ಯರನ್ನು ವಿಶೇಷವಾಗಿ ಕೊಂಡಾಡಿದ್ದಾನೆ. ಎರಡೂ ಕಾವ್ಯಗಳ ಪ್ರತಿ ಆಶ್ವಾಸದ ಕೊನೆಯಲ್ಲಿ ನಾಗಚಂದ್ರ ತನ್ನನ್ನು "ಪರಮ ಜಿನ ಸಮಯ ಕುಮುದಿನೀ ಶರಚ್ಚಂದ್ರ ಭಾಲಚಂದ್ರ ಮುನೀಂದ್ರ ಚರಣ ನಖಕಿರಣ ಚಂದ್ರಿಕಾ ಚಕೋರಂ" ಎಂದು ಗೌರವದಿಂದ ಸ್ತುತಿಸಿದ್ದು, ಈ ಭಾಲಚಂದ್ರ ಮುನೀಂದ್ರನು ನಾಗಚಂದ್ರನ ಪರಮ ಗುರುವಾಗಿದ್ದಿರುವಂತೆ ತೋರುತ್ತದೆ. ಅಂತೆಯೇ ಎರಡೂ ಕೃತಿಗಳಲ್ಲಿ ಬಾಲಚಂದ್ರ ಮುನೀಂದ್ರನನ್ನು ಮನದುಂಬಿ ಹೊಗಳಿದ್ದಾನೆ.

ಪ್ರೌಢ ಕವಿತ್ವಶಕ್ತಿಯನ್ನು ಹೊಂದಿದ ನಾಗಚಂದ್ರ "ಭಾರತೀ ಕರ್ಣಪೂರ", "ಕವಿತಾ ಮನೋಹರ", "ಚತುರ ವಿದ್ಯಾಧರ" "ಚತುರ ಕವಿಜನಾಸ್ಥಾನ ಪ್ರದೀಪ", "ಸಾಹಿತ್ಯ ಸರ್ವಜ್ಞ" "ಸೂಕ್ತಿಮುಕ್ತಾವತಂಸ" ಎಂಬೆಲ್ಲ ಬಿರುದುಗಳಿಗೆ ಪಾತ್ರನಾಗಿದ್ದಾನೆ.

**ಕೃತಿ ಪರಿಚಯ**

'ಮಲ್ಲಿನಾಥಪುರಾಣ "ಮತ್ತು ರಾಮಚಂದ್ರಚರಿತ ಪುರಾಣ" ಎಂಬ ನಾಗಚಂದ್ರನ ಎರಡು ಕೃತಿಗಳು ಲಭ್ಯವಾಗಿವೆ. ಇವಲ್ಲದೆ "ಜಿನಮುನಿ ತನಯ" ಮತ್ತು "ಜಿನಾಕ್ಷರಮಾಲೆ" ಎಂಬ ಮತ್ತೆರಡು ಕೃತಿಗಳನ್ನು ನಾಗಚಂದ್ರ ಬರೆದಿರುವುದಾಗಿ ದೇವಚಂದ್ರಕವಿ ತಿಳಿಸಿದ್ದಾನೆ. ದೇವಚಂದ್ರನ ಅಭಿಪ್ರಾಯ ನಂಬಿಕೆಗೆ ಅರ್ಹವಲ್ಲ ಎಂಬ ವಾದಗಳೂ ಉಂಟು. "ಜಿನಮುನಿ ತನಯ"ವು ನೀತಿಶತಕವೆಂಬುದಾಗಿ ಹಸ್ತಪ್ರತಿಯ ಮೇಲ್ಭಾಗದಲ್ಲಿ ಬರೆಯಲಾಗಿದೆ. ಅದರಲ್ಲಿ ೧೦೩ ಕಂದಪದ್ಯಗಳಿದ್ದು ಅವು ನೀತಿಬೋಧಕ ಪದ್ಯಗಳಾಗಿವೆ. "ಜಿನಾಕ್ಷರಮಾಲೆ" ಎಂಬ ಕೃತಿ ಉಪಲಬ್ಧವಾಗಿಲ್ಲ.

ಮುಖ್ಯವಾಗಿರುವ ನಾಗಚಂದ್ರನ ಎರಡು ಕೃತಿಗಳಲ್ಲಿ ಯಾವುದು ಮೊದಲಿಗೆ ರಚನೆಗೊಂಡಿದೆ ಎಂಬುದರ ಬಗ್ಗೆ ಸಾಕಷ್ಟು ಚರ್ಚೆಗಳಾಗಿವೆ. ಕವಿಯು ಕೃತಿಗಳಲ್ಲಿ ಅವುಗಳ ರಚನಾಕಾಲವನ್ನು ತಿಳಿಸಲಾರದೆ ಇರುವುದು ಈ ಸಂಶಯಕ್ಕೆ ಎಡೆಮಾಡಿಕೊಟ್ಟಿದೆ. ಆದರೂ ವಿದ್ವಾಂಸರು ಕವಿಯ ಭಾಷೆ, ಶೈಲಿ, ಬರವಣಿಗೆ ಮತ್ತು ಮಲ್ಲಿನಾಥಪುರಾಣದ ಕೆಲವು ಪದ್ಯಗಳು ಇನ್ನಷ್ಟು ಸುಪುಷ್ಟ ರೂಪದಲ್ಲಿ ರಾಮಚಂದ್ರಚರಿತ ಪುರಾಣದಲ್ಲಿ ದೊರೆತಿರುವುದು - ಇವೇ ಮೊದಲಾದ ಅಂಶಗಳನ್ನು ಗಮನಿಸಿ ಮಲ್ಲಿನಾಥಪುರಾಣವು ನಾಗಚಂದ್ರನ ಮೊದಲ

ಕೃತಿಯೆಂದೂ, ರಾಮಚಂದ್ರಚರಿತ ಪುರಾಣವು ನಂತರದ ಕೃತಿಯೆಂದೂ ತರ್ಕ ಮಾಡಿದ್ದಾರೆ.

೨೪ ಜಿನ ತೀರ್ಥಂಕರರಲ್ಲಿ ಮಲ್ಲಿನಾಥ ಹತ್ತೊಂಬತ್ತನೆಯವನೆಂದು ಪರಿಗಣಿಸಲಾಗಿದೆ. ಇವನ ಚರಿತ್ರೆಯೇ ಮಲ್ಲಿನಾಥ ಪುರಾಣ. ನಾಗಚಂದ್ರನು ತನ್ನ ಈ ಕೃತಿಗೆ ವಸ್ತುವನ್ನು ಕ್ರಿ.ಶ. ೯ನೆಯ ಶತಮಾನದ ಜಿನಸೇನ ಮತ್ತು ಗುಣಭದ್ರಾಚಾರ್ಯರ ಮಹಾಪುರಾಣದಿಂದ ಪಡೆದುಕೊಂಡಿದ್ದಾನೆ. ಮೂಲದಲ್ಲಿ ೧೨೫ ಶ್ಲೋಕಗಳಲ್ಲಿದ್ದ ಮಲ್ಲಿನಾಥನ ಕಥೆಯನ್ನು ನಾಗಚಂದ್ರನು ತನ್ನ ಪ್ರತಿಭಾಕೌಶಲದಿಂದ ವಿಸ್ತರಿಸಿ ಹೇಳಿದ್ದಾನೆ. ಮೊದಲು ಮಹಾಪುರಾಣದ ಒಂದು ಭಾಗವೆನಿಸಿದ್ದ ಮಲ್ಲಿನಾಥನ ಕಥೆಯು ನಾಗಚಂದ್ರನ ಈ ಪ್ರಯತ್ನದಿಂದಾಗಿ ಮೊದಲ ಸ್ವತಂತ್ರ ಮಲ್ಲಿನಾಥಪುರಾಣವಾಗಿ ರೂಪುಗೊಂಡಿದೆ.

ಈ ಮೊದಲು ತಿಳಿಸಿದಂತೆ ನಾಗಚಂದ್ರನ ಈ ಎರಡೂ ಕೃತಿಗಳು ಆಗಮಿಕಗಳೇ. ಮಲ್ಲಿನಾಥ ಪುರಾಣ ತೀರ್ಥಂಕರ ಚರಿತೆಯಾದರೆ ರಾಮಚಂದ್ರಚರಿತ ಪುರಾಣ ಜೈನ ರಾಮಾಯಣವಾಗಿದೆ. ೬೩ ಜನರನ್ನು ಜೈನದರ್ಶನವು ಗಣ್ಯರೆಂದು ಭಾವಿಸಿದ್ದು, ಅವರನ್ನು "ತ್ರಿಷಷ್ಠಿಶಲಾಕಾ ಪುರುಷ"ರೆಂದು ಗೌರವಿಸಿದೆ ಹಾಗೂ ಅವರ ಚರಿತ್ರೆಗಳನ್ನು "ಪ್ರಥಮಾನುಯೋಗ" ಎಂಬ ತನ್ನ ಚರಿತ್ರ ಸಾಹಿತ್ಯದ ಗುಂಪಿನಲ್ಲಿ ಸೇರಿಸಿದೆ. ಈ ೬೩ ಜನರನ್ನು ತೀರ್ಥಂಕರರು, ಚಕ್ರವರ್ತಿಗಳು, ಬಲದೇವರು, ವಾಸುದೇವರು ಹಾಗೂ ಪ್ರತಿವಾಸುದೇವರು ಎಂಬ ವಿವಿಧ ಗುಂಪು ಮಾಡಿಕೊಳ್ಳಲಾಗಿದೆ. ಆ ಸರಣಿಯಲ್ಲಿ ಕ್ರಮವಾಗಿ ಎಂಟನೆಯ ಬಲದೇವ, ವಾಸುದೇವ, ಪ್ರತಿವಾಸುದೇವರಾದ ರಾಮ, ಲಕ್ಷ್ಮಣ, ರಾವಣರ ಚರಿತ್ರೆಯನ್ನು ನಾಗಚಂದ್ರನ ರಾಮಚಂದ್ರಚರಿತ ಪುರಾಣ ಒಳಗೊಂಡಿದೆ.

### ಭಾಷೆ ಮತ್ತು ಶೈಲಿ

ನಾಗಚಂದ್ರ ಹಳಗನ್ನಡದ ಪ್ರಮುಖ ಕವಿಗಳಲ್ಲಿ ಒಬ್ಬ. ಕನ್ನಡಕ್ಕೆ ಎರಡು ಜೈನಪುರಾಣಗಳನ್ನು ಕೊಟ್ಟಿರುವ ಅವನು ಮಾರ್ಗಶೈಲಿಯ ಅನುಯಾಯಿ. ಪ್ರಾಚೀನವಾದ ಚಂಪೂಕಾವ್ಯ ಪದ್ಧತಿಯನ್ನು ಅನುಸರಿಸಿರುವ ನಾಗಚಂದ್ರ ಭಾಷೆಯನ್ನು ದುಡಿಸಿಕೊಳ್ಳುವಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಮೆರೆದಿದ್ದಾನೆ.

ಸರಿಸುಮಾರು ಪಂಪನ ಹಾಗೆ ನಾಗಚಂದ್ರನ ಭಾಷೆಯೂ ಪುಲಿಗೆರೆ ಪ್ರಾಂತದ ತಿರುಳ್ಗನ್ನಡ ಮಾದರಿಯದೇ ಆಗಿದೆ. ಹೆಚ್ಚು ಧ್ವನಿಪೂರ್ಣತೆ ಅಥವಾ ವ್ಯಂಗ್ಯವನ್ನು ನಾಗಚಂದ್ರ ಬಯಸುವುದಿಲ್ಲ. ತನ್ನ ಕಾವ್ಯ ಜನಸಾಮಾನ್ಯರಿಗೂ ಅರ್ಥವಾಗಲಿ ಎಂಬುದು ಅವನ ಆಶಯ. ಅಂತೆಯೇ ಸರಳತೆ ಮತ್ತು ವಾಚ್ಯಕ್ಕೆ ಅವನು ಹೆಚ್ಚಿನ ಒತ್ತು ಕೊಟ್ಟಿದ್ದಾನೆ. ಮೊರನೋಟಕ್ಕೆ ನಾಗಚಂದ್ರನ ಕೃತಿಗಳ ಭಾಷೆ ಒಂದಿಷ್ಟು ಕ್ಲಿಷ್ಟವೆನಿಸಿದರೂ, ಓದುಗನನ್ನು ತಮ್ಮತ್ತ ಸೆಳೆದುಕೊಳ್ಳುವ ಭಾಷಾ ಸೌಷ್ಠವ ಮತ್ತು ಸಹಜತೆಗಳು ಅಲ್ಲಿವೆ. ನಾಗಚಂದ್ರನ ಭಾಷೆ ಗಂಭೀರವಾಗಿದೆ, ಆದರೆ ಗಡುಚಾಗಿಲ್ಲ. ಮಾರ್ದವ -ವಾಗಿದೆ ಆದರ ಪೇಲವವಾಗಿಲ್ಲ. ಭಾಷೆಯ ಶಾಸ್ತ್ರಮುಖ, ವ್ಯವಹಾರ ಮುಖಗಳೆರಡನ್ನೂ ತಿಳಿದಿದ್ದ ಆತ ಅದರ ಬಳಕೆಯಲ್ಲಿ ಸಮತೂಕದ ಸಮನ್ವಯವನ್ನು ಸಾಧಿಸಿಕೊಂಡು ಹೋಗಿದ್ದಾನೆ. ಶಬ್ದಗಳ ಬಳಕೆಯ ವಿಷಯದಲ್ಲಿ ಅವನು ಧಾರಾಳಿಯೂ ಅಲ್ಲ, ಕೃಪಣನೂ ಅಲ್ಲ. ಇದನ್ನೇ ನಾವು 'ಹಿತಮಿತ ಮೃದುವಚನ' ಎಂದು ಗುರುತಿಸಬಹುದು. ನೈತಿಕತೆ, ಧಾರ್ಮಿಕತೆ, ಶಾಂತಿ,

ಸೌಕುಮಾರ್ಯಗಳಿಂದ ಕೂಡಿದ ನಾಗಚಂದ್ರನ ವ್ಯಕ್ತಿತ್ವ ಅವನ ಭಾಷೆಯ ಮೇಲೂ ಪ್ರಭಾವ ಬೀರಿದ ಹಾಗೆ ಕಾಣುತ್ತದೆ. ಭಾಷೆಯ ಬಳಕೆಯ ವಿಷಯದಲ್ಲಿ ಅವಾಚ್ಯ, ಅಸಭ್ಯಗಳು ಅವನ ಸಮೀಪ ಕೂಡಾ ಸುಳಿಯಲಾರವು. ಭಾಷೆಗಿರಬೇಕಾದ ಪಾವಿತ್ರ್ಯ, ಪರಿಣಾಮ ಗಂಭೀರತೆ ಮತ್ತು ಸಾಮಾಜಿಕ ಜವಾಬ್ದಾರಿಗಳನ್ನು ನಾಗಚಂದ್ರ ಸರಿಯಾಗಿ ಅರ್ಥಮಾಡಿಕೊಂಡಿದ್ದಾನೆ. ಹಾಗಾಗಿ ಮಹಾಕಾವ್ಯಕ್ಕೆ ಹೇಳಿ ಮಾಡಿಸಿದ ಭಾಷಾ ಪ್ರವಾಹ ಅವನಿಂದ ಹರಿದುಬರುತ್ತದೆ. ಹೇಳಬೇಕಾದುದನ್ನು ಸಂಕ್ಷಿಪ್ತವಾಗಿ, ನೇರವಾಗಿ ತಿಳಿಸುವ ಗುಣ ನಾಗಚಂದ್ರನ ಭಾಷೆಗಿದೆ.

ಅವಿಚಾರಂ ಕಳೆದೆನ್ನನಿಂತಿನಿತು ನೋವಂ ಮಾಡಿದಿರ್ ದೇವರಂ
ಮ ವಿಷಾದಂ ಮಿಗೆ ನೊಂದು ಸೀತೆ ನುಡಿದಳ್ ತಾನಂತದಂ ಕೇಳ್ದು ರಾ
ಘವ ದೇವಂ ಜನತಾಪವಾದ ಭಯದಿಂದೀ ಭೇದಮಂ ಮಾಡಿದಂ
ಭುವನ ಖ್ಯಾತಮೆನಿಪ್ಪ ನಿನ್ನ ಚರಿತಂ ಪೇಱಾರ್ಗಮಜ್ಞಾತಮೇ (ರಾಚಂಪು-೧೬-೨೫)

ಎರಡು ಮೂರು ಸಂಸ್ಕೃತ ಪದಗಳನ್ನು ಬಿಟ್ಟರೆ ಈ ಪದ್ಯ ಸಂಪೂರ್ಣ ಕನ್ನಡಮಯವೂ ಸ್ಪಷ್ಟವೂ ಆಗಿದೆ. ಸಂಸ್ಕೃತ ಪದಗಳ ಬಳಕೆಯ ಬಗ್ಗೆ ನಾಗಚಂದ್ರ ಒಂದಿಷ್ಟು ತೆರೆದ ಮನಸ್ಸಿನ ಒಪ್ಪಂದ ಮಾಡಿಕೊಂಡಿರುವ ಹಾಗೆ ಕಾಣುತ್ತದೆ. ಆ ಕಾಲದ ಹಳಗನ್ನಡ ಭಾಷಾಶೈಲಿಯೂ ಅದನ್ನು ಮಾನ್ಯಮಾಡುತ್ತಾ ಬಂದಿತ್ತು.

ಶಾಂತ ರಸವನ್ನು ಪ್ರಧಾನವಾಗುಳ್ಳ ನಾಗಚಂದ್ರನ ಕೃತಿಗಳ ಭಾಷೆ ಶಾಂತಿ ಮತ್ತು ಸೌಕುಮಾರ್ಯಗಳತ್ತ ವಾಲಿದೆ. ಬಹುಶಃ ಇದೇ ಕಾರಣಕ್ಕಾಗಿ ನಾಗಚಂದ್ರನ ಭಾಷೆ ಘೋರ್ಗರೆವ ಮೊರೆತವನ್ನು ಮರೆಮಾಡಿ, ಮಂಜುಳ ನಿನಾದದೊಂದಿಗೆ ಪ್ರವಹಿಸುತ್ತದೆ. ಯುದ್ಧ, ಭೀಭತ್ಸ, ವೀರ ಮೊದಲಾದ ಭಾವಗಳನ್ನು ಸ್ಫುರಿಸಲು ನಾಗಚಂದ್ರನ ಭಾಷೆ ಅಷ್ಟಾಗಿ ಒಗ್ಗದು. ಅದರ ಬದಲು ಶಾಂತ, ಕರುಣ, ಶೃಂಗಾರ ಭಾವನೆಗಳನ್ನು ಅದು ಸಮರ್ಥವಾಗಿ ಹೊತ್ತು ನೀಗಿಸುತ್ತದೆ.

ಬಾಲಿಕೆ ಮುಗ್ಧ ತಕ್ಕುದಱೆಯಳ್ ಪಲರಂ ಪಱಗಿಕ್ಕಿ ಸೂಡಿದಳ್
ಮಾಲೆಯನಾಕೆಯಂ ಕಳೆದುಕೊಳ್ವುದು ದೇಸಿಗನಂ ತಗುಳ್ವುದೀ
ಕಾಲ ವಿಳಂಬಮೇವುದೆನುತುಂ ರಣಬಾಲಕರಾ ಸಮಸ್ತ ಭೂ
ಪಾಲಕ ಬಾಲಕರ್ ಕದನಕೇಳಿಗೆ ಮಚ್ಚರದಿಂದೊಡರ್ಚಿದರ್ (ಆ-೩-೪೭)

ಈ ಪದ್ಯದಲ್ಲಿ ತನ್ನ ಸರಳತೆ ಮತ್ತು ಸಂವಹನಶೀಲತೆಯಿಂದ ನಾಗಚಂದ್ರನ ಭಾಷೆ ಎದ್ದು ಕಾಣುತ್ತದೆ. ಅದೇ ರೀತಿ ಪರಿಣಾಮಕಾರಿಯಾದ ಚಿಕ್ಕ ಚಿಕ್ಕ ಕಂದಪದ್ಯಗಳನ್ನು ಕಟ್ಟಿಕೊಡುವಲ್ಲಿ ನಾಗಚಂದ್ರ ತನ್ನ ಭಾಷಾ ಕೌಶಲವನ್ನು ಮೆರೆದಿದ್ದಾನೆ.

ಎನ್ನೆವರಂ ವೈರಾಗ್ಯಂ
ತನ್ನೊಳ್ ತಲೆದೋಱದನ್ನೆವರಮೊಲವಕ್ಕುಂ
ತನ್ನಂ ತಾನಱಿದ ಬೞಕೆ
ಕೆನ್ನರ್ಗಂ ವಿಷಯ ಸುಖದೊಳಲವಾದಪುದೇ (ಆ-೬-೧೨೮)

ಲಲಿತ ಕೋಮಲವಾದ ಇಲ್ಲಿಯ ಶಬ್ದಸರಣಿ ಓದುಗರನ್ನು ಸುಲಭವಾಗಿ ತನ್ನತ್ತ ಸೆಳೆದು ಕೊಳ್ಳುತ್ತದೆ. ಜೊತೆಗೆ ದಶರಥನ ಮನಸ್ಥಿತಿಯನ್ನು ಒಂದು ಶಬ್ದಚಿತ್ರದ ರೂಪದಲ್ಲಿ ಜೀವಂತವಾಗಿ ಒಡಿದಿಡುವ ಈ ಕೆಳಗಿನ ಕಂದಪದ್ಯವನ್ನು ನೋಡಬಹುದು.

ಒಡನೆ ದಶರಥನ ಕಣ್ಗಳ್
ನಡೆದುವು ಕಣ್ಣೊಡನೆ ತಲರ್ದು ನಿಲ್ಲದೆ ಮನಮುಂ
ನಡೆದುದದಱೊಡನೆ..... ನೃಪತಿ ಮೂರ್ಛೆಗೆ ಸಂದಂ (೮-೬-೧೫೦)

ಅಲ್ಲದೆ -

ನಿನಗೆ ರಸಪ್ಪೊಂದ ಶಾಂತಮೆ
ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾ
ಹನಮಿರ್ದು ಮಿಕ್ಕ ರಸಮಂ
ಕನಸಿನೊಳಂ ನೆನೆಯದಂತು ಮಾಡೆಮಗರುಹಾ (೯-೭-೪೨)

ಎಂಬ ಪದ್ಯವಂತೂ ನಾಗಚಂದ್ರನ ಇಡೀ ಭಾಷಾನೀತಿಗೆ ಶಾಂತತೆಯ ಮುದ್ರೆಯನ್ನು ಒತ್ತಿದ ಹಾಗೆ ಕಂಡುಬರುತ್ತದೆ. ಅರಿಹಂತನನ್ನು ಕುರಿತು ನೇರಸಂವಾದ ನಡೆಸುವ ಮಾದರಿಯಲ್ಲಿ ಈ ಕಂದಪದ್ಯ ಮೂಡಿಬಂದಿದೆ. ಈ ಬಗೆಯ ಸಂವಾದ ಸಂಭಾಷಣೆ ಹಾಗೂ ಸಂವಹನ ಶೀಲತೆಗಳು ಉತ್ತಮ ಕವಿಯ ಉತ್ತಮ ಭಾಷೆಯ ಲಕ್ಷಣಗಳಾಗಿರುತ್ತವೆ.

ಗದ್ಯದ ಬಳಕೆಯಲ್ಲೂ ನಾಗಚಂದ್ರ ವಿಶೇಷ ಪರಿಣತಿ ಹೊಂದಿದವನಾಗಿದ್ದಾನೆ. ಹದವರಿತ ಸಂಸ್ಕೃತ ಕನ್ನಡಪದಗಳ ಮಿಶ್ರಣದಿಂದ ನಾಗಚಂದ್ರನ ಗದ್ಯ ಪ್ರಶಾಂತ ಗಂಭೀರವಾಗಿ ಪ್ರವಹಿಸುತ್ತದೆ. "ಆ ಮಹಾಗಹನಮಂ ಪೊಕ್ಕು ತನ್ಮಧ್ಯ ನಿರ್ಝರ ವಾರಿಧಾರಪರೀತ ಗಿರಿದರೀ ಪ್ರದೇಶದೊಳ್ ಮಹಾಸತಿಯಂ ರಥದಿಂದಿೞಿಪಿ ಮನ್ಯುಗದ್ಗದಕಂಠನಾಗಿ ಕಣ್ಣೀರ್ಗಳಂ ನೆಗಪ್ಪುವುಮಂ ಕೃತಾಂತವಕ್ತ್ರನಂ ಸೀತಾದೇವಿ ಕಂಡಿದೇಕೆ ಶೋಕಂಗೆಯ್ವಪೆ ಪೇೞ್ ಎಂದೊಡಾತ -ನುಮ್ಮಾ ನಿಮ್ಮ ಮೇಲೆ ಲೋಕಮೆಲ್ಲಮಭಿಯೋಗಮನಿಟ್ಟೊರಸಂ ನಿಮ್ಮ ನಡವಿಯೊಳ್ ಬಿಸುಟ್ಟು ಬರವೇೞ್ದೊಡಿಲ್ಲಿಗೆ ತಂದೆನೆನೆ ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಱಿದುಂ ಬೇಗದಿಂದ ಚೇತರಿಸಿ ಕೃತಾಂತ ವಕ್ತ್ರಂಗೆ ರಾಮದೇವರ್ ಸಕಲ ವಸುಧಾತಲಮಂ ನ್ಯಾಯದಿಂ ಪ್ರತಿಪಾಲಿಸುವುದು ದೇವಗುರುಪೂಜೆಯುಂ ಮಱ◻ಯುದಿರ್ಪುಮ ಜನಾಪವಾದ ಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದೆನಗೆ ದಯೆಗೆಯ್ವುದಿರಪ್ಪುದೆಂದಳಿಂದುಂ ಮಱೆಯದೆ ಪೇೞೆಂದು ಬಾಷ್ಪಲುಲಿತಲೋಚನೆ ತಲೆಯಂ ಬಾಗಿ ನೆಲನಂ ಬರೆಯುತ್ತುಮಿರ್ದಳಂ ಕೃತಾಂತವಕ್ತ್ರಂ ನೋಡಿ" (೮-೬-೧೧೨ ಗದ್ಯ)

ತೊಳೆ ತೊಳೆಯಾಗಿ ವಿಷಯಗಳನ್ನು ತಿಳಿಸುವ ಈ ಗದ್ಯಭಾಗವು ಕೆಲವೊಮ್ಮೆ ಪದ್ಯಭಾಗಕ್ಕಿಂತ ಹೆಚ್ಚು ಸುಭಗವಾಗಿ ಮತ್ತು ಸುಂದರವಾಗಿ ಕಂಡುಬರುತ್ತದೆ.

ತಾನು ಹೇಳಹೊರಟಿರುವ ರಾಮಕಥೆಯು ಸಂಕ್ಷಿಪ್ತವಾಗಿರಬೇಕು, ದೇಸೀ-ಮಾರ್ಗಗಳ ಸಮನ್ವಯವಾಗಿರಬೇಕು, ರಸವತ್ತಾಗಿರಬೇಕು, ಪಂಡಿತ ಮಂಡಲಿಗೆ ಮೆಚ್ಚುಗೆಯಾಗುವಂತಿರಬೇಕು, ಒಟ್ಟಾರೆ ತನ್ನ ಕೃತಿ ಸರಸ್ವತಿಯಿಂದ ಪಡೆದ ವರದ ಹಾಗೆ ಅನನ್ಯವೂ, ಅವಿರೋಧವೂ ಆಗಿರಬೇಕೆಂಬ ಬಯಕೆಗಳನ್ನು ಹೊಂದಿದ ನಾಗಚಂದ್ರ ತನ್ನ ಸಮರ್ಪಕ ಭಾಷಾ ಬಳಕೆಯ ಮೂಲಕ, ಈ ಎಲ್ಲ ಬಯಕೆಗಳನ್ನು ಸಾಕ್ಷಾತ್ಕರಿಸಿಕೊಂಡಿದ್ದಾನೆ. ಶೈಲಿ ಎಂದರೆ ಭಾಷೆ. ಈ ಮಾತಿನ ಬೆಳಕಿನಲ್ಲಿ ನಾಗಚಂದ್ರನ ಭಾಷೆಯನ್ನು ಅಭ್ಯಸಿಸಿದರೆ ಅವನ ಶೈಲಿಯನ್ನು ಅಭ್ಯಸಿಸಿದ ಹಾಗೆಯೇ.

## ಮಲ್ಲಿನಾಥಪುರಾಣದ ಕಥೆಯ ಮೂಲ

ತನ್ನ 'ಮಲ್ಲಿನಾಥ ಪುರಾಣ' ಕೃತಿಗೆ ಆಕರ ಯಾವುದೆಂಬುದನ್ನು ನಾಗಚಂದ್ರ ಸ್ಪಷ್ಟವಾಗಿ ಹೇಳಿಲ್ಲ. ಎಲ್ಲರ ಹಾಗೆ ತೀರ್ಥಂಕರರ ಸಮ್ಮುಖದಲ್ಲಿ ಗಣಧರರಿಂದ ನಿರೂಪಿಸಲ್ಪಟ್ಟ ಕಥೆಯನ್ನು ತಾನು ಹೇಳಿರುವುದಾಗಿ ಆತ ತಿಳಿಸಿದ್ದಾನೆ. ಆದಿ ತೀರ್ಥಂಕರರ ಸನ್ನಿಧಿಯಲ್ಲಿ ಅವರ ಗಣಧರನಾದ ವೃಷಭಸೇನನು ಭರತಚಕ್ರವರ್ತಿಗೂ ಕೊನೆಯ ತೀರ್ಥಂಕರ ವರ್ಧಮಾನರ ಸನ್ನಿಧಿಯಲ್ಲಿ ಅವರ ಗಣಧರ ಗೌತಮನು ಮಗಧೇಶ್ವರನಿಗೆ ತಿಳಿಸಿದ ಕಥೆಯನ್ನು ತಾನು ಹೇಳಿರುತ್ತಿರುವುದಾಗಿ ನಾಗಚಂದ್ರ ತಿಳಿಸಿದ್ದಾನೆ. ಕವಿ ನೇರವಾಗಿ ತಿಳಿಸದಿದ್ದರೂ ಅವನು ಮಹಾಪುರಾಣ ಮತ್ತು ಚಾವುಂಡರಾಯ ಪುರಾಣದ ನೆರವು ಪಡೆದುಕೊಂಡಿರುವುದು ಸಾಧ್ಯವಿದೆ. ಹಾಗೆಯೇ ಪ್ರಾಕೃತದಲ್ಲಿರುವ ಪುಷ್ಪದಂತನ 'ತಿಷಟ್ಠಿಮಹಾಪುರಿಸಗುಣಾಲಂಕಾರ' ಎಂಬ ಕೃತಿಯನ್ನು ನೋಡಿಕೊಂಡಿರುವುದು ಸಾಧ್ಯವಿದೆ. ಏನಿದ್ದರೂ ನಾಗಚಂದ್ರನನ್ನು ಹೊರತು ಪಡಿಸಿ ಇತರ ಜೈನ ಕವಿಗಳು ಮಲ್ಲಿನಾಥ ಪುರಾಣದಿಂದ ಆಕರ್ಷಿತರಾದಂತೆ ತೋರುವುದಿಲ್ಲ. ಕಥೆ ತುಂಬ ಚಿಕ್ಕದು ಎಂಬುದು ಇದಕ್ಕೆ ಕಾರಣವಾಗಿರಬಹುದು. ಓದುಗರ ಅನುಕೂಲಕ್ಕಾಗಿ ಜೈನ ಪುರಾಣಗಳು ತಲಕಾವೇರಿಯಂತೆ ಇರುವ ಮಹಾಪುರಾಣದಲ್ಲಿ (ಉತ್ತರ ಪುರಾಣದಲ್ಲಿ) ಬಂದಿರುವ ಮಲ್ಲಿನಾಥನ ಕಥೆಯನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

ಕಚ್ಚಕಾವತಿ ವಿಷಯದ ವೀತಶೋಕಪುರದ ದೊರೆ ವೈಶ್ರವಣ. ಒಂದು ದಿನ ಮಳೆಗಾಲದಲ್ಲಿ ಆತ ವನಸಂಪತ್ತನ್ನು ವೀಕ್ಷಿಸಲು ಉತ್ಸುಕನಾಗುತ್ತಾನೆ. ಶಾಖೋಪಶಾಖೆಗಳಿಂದ ಹಸರಿಸಿ ಭೂಮಿಯಲ್ಲಿ ಆಳವಾಗಿ ಬೇರು ಬಿಟ್ಟಿದ್ದ ಆಲದ ಮರವೊಂದನ್ನು ಕಂಡು "ಈ ಮರವು ತನ್ನ ಉನ್ನತಿ ವಿಸ್ತಾರ ಹಾಗೂ ಚೆನ್ನಾಗಿ ಬಿಟ್ಟಿರುವ ಬೇರುಗಳಿಂದ ನನ್ನನ್ನೇ ಹೋಲುತ್ತಿದೆ" ಎಂದು ಸಂಭ್ರಮಿಸಿದ. (ನಾಗಚಂದ್ರ ಈ ಪ್ರಸಂಗವನ್ನು ಬದಲಿಸಿ, ವೈಶ್ರವಣನು ತನ್ನ ಚತುರಂಗ ಬಲದ ಸಡಗರವನ್ನು ನೋಡಲು ಬಯಸಿದನೆಂದು ತಿಳಿಸಿದ್ದಾನೆ. ಈ ಬದಲಾವಣೆ ಕಥೆಗೆ ಹೆಚ್ಚಿನ ವಾಸ್ತವಿಕತೆ ಮತ್ತು ಸಹಜತೆಯನ್ನು ಒದಗಿಸಿದೆ).

ವನದಲ್ಲಿ ಸುತ್ತಾಡಿ ಮರಳಿ ಬರುವಾಗ ಸಿಡಿಲಿನ ಹೊಡೆತದಿಂದ ಬುಡಮೇಲಾಗಿ ಬಿದ್ದಿದ್ದ ಆಲದ ಮರವನ್ನು ನೋಡಿ, ವೈಶ್ರವಣನಿಗೆ ಭ್ರಮನಿರಸನವುಂಟಾಗುತ್ತದೆ. ಸಂಸಾರದ ಅಸಾರತೆಯನ್ನು ಅರ್ಥ ಮಾಡಿಕೊಂಡ ಅವನು ರಾಜ್ಯವನ್ನು ಮಗನಿಗೆ ಒಪ್ಪಿಸಿ ತಪಸ್ಸಿಗೆ ತೆರಳುತ್ತಾನೆ. ಮರಣ ಹೊಂದಿ ಅಪರಾಜಿತ ವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟುತ್ತಾನೆ. ತರುವಾಯದ ಜನ್ಮದಲ್ಲಿ ಭೂಲೋಕದಲ್ಲಿ ಮಲ್ಲಿನಾಥನಾಗಿ ಹುಟ್ಟುತ್ತಾನೆ. ಪ್ರಾಪ್ತ ವಯಸ್ಕನಾದ ಮೇಲೆ ತಂದೆ ಕುಂಭರಾಜ ಮಲ್ಲಿನಾಥನ ಮದುವೆಯ ಸಿದ್ಧತೆ ನಡೆಸುತ್ತಾನೆ. ಅದನ್ನು ತಿರಸ್ಕರಿಸಿದ ಮಲ್ಲಿನಾಥ ಸಂನ್ಯಾಸಿಯಾಗುತ್ತಾನೆ. ಸಮ್ಮೇದ ಪರ್ವತದಲ್ಲಿ ಪ್ರತಿಮಾಯೋಗದಲ್ಲಿದ್ದು ನಿರ್ವಾಣ ಪಡೆಯುತ್ತಾನೆ.

ಈ ಕಥೆಯು ಉತ್ತರ ಪುರಾಣದಲ್ಲಿ ಕೇವಲ '೬೬' ಶ್ಲೋಕಗಳಲ್ಲಿ ಹೇಳಲ್ಪಟ್ಟಿದೆ. ಅದೇ ರೀತಿ ಚಾವುಂಡರಾಯನೂ ತನ್ನ 'ಚಾವುಂಡರಾಯ ಪುರಾಣ'ದಲ್ಲಿ ಇದನ್ನು ತೀರಾ ಚುಟುಕಾಗಿ ಹೇಳಿದ್ದಾನೆ. ಹೀಗಿದ್ದಾಗಲೂ ನಾಗಚಂದ್ರನು ಈ ಕಥೆಗೆ ಮಹಾಕಾವ್ಯದ ವ್ಯಾಪ್ತಿಯನ್ನು ಕೊಡಲು ಪ್ರಯತ್ನಿಸಿರುವುದು ಸಾಹಸದ ಕೆಲಸವೆಂದೇ ಹೇಳಬಹುದು. ಹೀಗೆ ನೋಡಿದಾಗ ಹಳೆಯ ಕೃತಿಗಳು

ನಾಗಚಂದ್ರನಿಗೆ ನೀಡಿದ ಪ್ರೇರಣೆ ಅತ್ಯಲ್ಪವಾದುದೆಂಬುದು ನಾಗಚಂದ್ರನ ವಿಸ್ತರಣಾ ಕೌಶಲ್ಯವು ಅಗಾಧವಾದುದೆಂಬುದು ಓದುಗರಿಗೆ ಮನವರಿಕೆಯಾಗುತ್ತದೆ.

## ನಾಗಚಂದ್ರನ ಮಲ್ಲಿನಾಥಪುರಾಣದ ಕಥಾಸಾರ

ಮಲ್ಲಿನಾಥಪುರಾಣವು ಚಂಪೂ ಕೃತಿಯಾಗಿದ್ದು ೧೪ ಆಶ್ವಾಸಗಳಲ್ಲಿ ವ್ಯಾಪಿಸಿಕೊಂಡಿದೆ. ಇದು ೧೯ನೆಯ ತೀರ್ಥಂಕರನಾದ ಮಲ್ಲಿನಾಥನ ಜೀವನ ಚರಿತ್ರೆಯಾಗಿದೆ. ಮಲ್ಲಿನಾಥಪುರಾಣದ ಕಥೆ ತುಂಬ ಚಿಕ್ಕದು. ನಾಗಚಂದ್ರ ಅದನ್ನು ವಿಸ್ತರಿಸಿ ೧೪ ಆಶ್ವಾಸಗಳಲ್ಲಿ ಹೆಣೆದಿದ್ದಾನೆ. ಇಲ್ಲಿ ಕಥೆಯ ಮುಖ್ಯಾಂಶಗಳನ್ನು ಮಾತ್ರ ಸಂಗ್ರಹಿಸಿಕೊಡಲಾಗಿದೆ.

೧ನೇ ಆಶ್ವಾಸವು ತೀರ್ಥಂಕರ ಸ್ತುತಿ, ಮುನಿ ಸ್ತುತಿ ಮತ್ತು ಕಾವ್ಯ ಲಕ್ಷಣಗಳನ್ನು ಕುರಿತಾದುದಾಗಿದೆ. ಇತರ ಕವಿಗಳಂತೆ ನಾಗಚಂದ್ರನೂ ಕೂಡ ಲೋಕಾಕಾರ ಮತ್ತು ಕಾಲದ ಕಲ್ಪನೆಯೊಂದಿಗೆ ಮಲ್ಲಿನಾಥಪುರಾಣವನ್ನು ಆರಂಭಿಸಿದ್ದಾನೆ.

೨ನೇ ಆಶ್ವಾಸವು ಕಥಾ ನಾಯಕನ ಜನ್ಮಸ್ಥಳದ ವರ್ಣನೆಗೆ ಮೀಸಲಾಗಿದೆ. ಜಂಬೂದ್ವೀಪ ಅದರ ನಟ್ಟನಡುವೆ ಮಂದರ ಪರ್ವತ. ವಿದೇಹ ದೇಶ. ಅದರಲ್ಲಿ ೩೨ ನಾಡುಗಳು. ಅವುಗಳಲ್ಲಿ ಒಂದು ಕಚ್ಛಕಾವತಿ. ಅದರ ರಾಜಧಾನಿ ವೀತಶೋಕಪುರ. ವೈಶ್ರವಣನೆಂಬುವನು ಆ ದೇಶದ ದೊರೆ. ಧನಶ್ರೀ ಅವನ ಹೆಂಡತಿ. ಅವರು ಧರ್ಮ ಪಾರಾಯಣರಾಗಿದ್ದರು.

೩ನೇ ಆಶ್ವಾಸವು ಒಂದು ದಿನ ಧನಶ್ರೀಯು ಉಪ್ಪರಿಗೆಯ ಮೇಲೆ ಸಖಿಯರೊಂದಿಗೆ ಸುಖಾಲಾಪದಲ್ಲಿದ್ದಾಗ, ತಾವರೆಗೊಳದಲ್ಲಿದ್ದ ಹೆಣ್ಣು ಮರಾಳಪಕ್ಷಿ ಮತ್ತು ಅದರ ಮರಿಯ ಪ್ರೀತಿಯನ್ನು ಕಂಡು ಪುತ್ರಮೋಹಳಕ್ಕೆ ಒಳಗಾಗುತ್ತಾಳೆ. ತನಗೆ ಮಕ್ಕಳಿಲ್ಲವೆಂಬ ಚಿಂತೆಯಲ್ಲಿ ಮುಳುಗುತ್ತಾಳೆ.

೪ನೇ ಆಶ್ವಾಸವು ಕೆಳದಿಯೊಬ್ಬಳಿಂದ ರಾಜನಿಗೆ ವಿಷಯ ತಿಳಿಯುತ್ತದೆ. ಇಷ್ಟರಲ್ಲಿ ತಮಗೆ ಪುತ್ರ ಪ್ರಾಪ್ತಿಯಾಗುವುದರ ಬಗ್ಗೆ ನೈಮಿತ್ತಿಕರಿಂದ ತಿಳಿದು ಬಂದಿರುವುದಾಗಿ ಹೇಳಿ ರಾಜನು ರಾಣಿಯನ್ನು ಸಂತೈಸುತ್ತಾನೆ. ಕೆಲ ದಿನಗಳಲ್ಲಿ ರಾಣಿಗೆ ಶುಭ ಸ್ವಪ್ನಗಳು ಕಾಣಿಸಿಕೊಳ್ಳುತ್ತವೆ. ಅವಳು ಗರ್ಭವತಿಯಾಗುತ್ತಾಳೆ. ಅವಳಿಗೆ ತೇಜೋನಿಧಿಯಾಗಿದ್ದ ಗಂಡು ಮಗು ಹುಟ್ಟುತ್ತಾನೆ. ಮಗನಿಗೆ ಶ್ರೀಧರನೆಂದು ನಾಮಕರಣ ಮಾಡಲಾಯಿತು. ೪ನೇ ಆಶ್ವಾಸದ ಉಳಿದ ಭಾಗವೆಲ್ಲ ಶ್ರೀಧರನ ಬಾಲ ಲೀಲೆಯ ವರ್ಣನೆಗೆ ಮೀಸಲಾಗಿದೆ. ೫ನೇ ಆಶ್ವಾಸದಿಂದ ೯ನೇ ಆಶ್ವಾಸದವರೆಗೂ ಕೂಡ ಕಥಾ ವೃತ್ತಾಂತ ಸ್ಥಗಿತಗೊಂಡು ಕೇವಲ ವರ್ಣನೆಗಳು ತುಂಬಿ ಕೊಂಡಿವೆ. ಕಥೆಯು ಚಿಕ್ಕದಾಗಿದ್ದುದೇ ಇದಕ್ಕೆ ಕಾರಣ. ಇದನ್ನೆಲ್ಲ ನೋಡಿದಾಗ ಮಲ್ಲಿನಾಥಪುರಾಣವು ಹಿಗ್ಗಿಸಿ ನಿರ್ಮಿಸಲಾದ ಮಹಾಕಾವ್ಯ ಎಂಬ ಭಾವನೆ ಮೂಡುತ್ತದೆ.

೫ನೇ ಆಶ್ವಾಸದಲ್ಲಿ ವಸಂತಾರುಣನ, ಚಿತ್ರಾವಲೋಕನ ಮತ್ತು ವನವಿಹಾರದ ವರ್ಣನೆಗಳಿವೆ. ೬ನೇ ಆಶ್ವಾಸದಲ್ಲಿ ಜಲಕೇಳಿಯ ವರ್ಣನೆಯಿದೆ ೭ನೇ ಆಶ್ವಾಸದಲ್ಲಿ ಸಂಧ್ಯಾಕಾಲ, ಚಂದ್ರೋದಯ, ವೇಶ್ಯಾವಾಟಿಕೆ, ಸೂರ್ಯೋದಯ ಮೊದಲಾದ ವರ್ಣನೆಗಳಿವೆ. ೮ನೇ ಆಶ್ವಾಸವು ಜಿನಪೂಜೆ, ಸಂಗೀತ ನೃತ್ಯಾವಲೋಕನ, ವರ್ಷಾಕಾಲ, ಶರತ್ಕಾಲ, ಬಲಾವಲೋಕನ, ಆಶ್ವಾರೋಹಣ ಮುಂತಾದ ಪ್ರಸಂಗಗಳ ವರ್ಣನೆಗೆ ಮೀಸಲಾಗಿದೆ.

೮ನೇ ಆಶ್ವಾಸದಲ್ಲಿ ಬರುವ ವೈಶ್ರವಣ ದೊರೆಯ ಬಲಾವಲೋಕನ ಪ್ರಸಂಗವು ಮಲ್ಲಿನಾಥಪುರಾಣದ ಒಂದು ಮಹತ್ವದ ಪ್ರಸಂಗವಾಗಿದೆಯಲ್ಲದೆ ಕಥೆಯ ಸೊಗಸನ್ನು ಹೆಚ್ಚಿಸಿದೆ. ಶರತ್ಕಾಲದ ಒಂದು ದಿನ ವೈಶ್ರವಣ ದೊರೆ ಶರದ್ ವೈಭವದ ನಡುವೆ ತನ್ನ ಚತುರಂಗ ಬಲದ ಸಂಭ್ರಮವನ್ನು ಕಾಣಲು ಇಷ್ಟ ಪಡುತ್ತಾನೆ. ರಾಜನ ಇಚ್ಛೆಯಂತೆ ದುಂದುಭಿ ಮೊಳಗುತ್ತದೆ. ನೆಲವೆ ಬೆಸಲೆಯಾದಂತೆ ರಾಜನ ಅಸಂಖ್ಯಾತ ಚತುರಂಗ ಬಲವು ನೆರೆಯಿತು. ಅದರೊಂದಿಗೆ ಅರಸನೂ ದಿವ್ಯಾಶ್ವವನ್ನು ಏರಿ ಹೊರಟನು. ವಿಸ್ತಾರವಾದ ತನ್ನ ಚದುರಂಗ ಬಲವನ್ನು ವೀಕ್ಷಿಸಿ ರಾಜನು ಸಂತೃಪ್ತನಾದನು.

ಮುಂದಿನ ವಿಷಯ ೯ನೇ ಆಶ್ವಾಸದ ವ್ಯಾಪ್ತಿಗೆ ಸೇರುತ್ತದೆ. ಬಲಾವಲೋಕನವನ್ನು ಮುಗಿಸಿ ಉಪವನ ಮಾರ್ಗವಾಗಿ ರಾಜನು ನಗರಕ್ಕೆ ಹಿಂದಿರುಗುವ ಹೊತ್ತಿಗೆ ಭಯಂಕರವಾದ ಬಿರುಗಾಳಿ ಮತ್ತು ಮಳೆ ಆರಂಭವಾಗುತ್ತದೆ. ಗುಡುಗು-ಸಿಡಿಲಿನ ಆರ್ಭಟ ಅತಿಯಾಗುತ್ತದೆ. ಅದರ ಹೊಡೆತದಿಂದ ವಿಶಾಲವಾಗಿ ಹರಡಿದ್ದ ಒಂದು ಆಲದ ಮರವು ಬೇರು ಸಮೇತವಾಗಿ ಬುಡಮೇಲಾಗಿ ಬೀಳುತ್ತದೆ. ಅದನ್ನು ನೋಡಿ ರಾಜನು ಚಕಿತನಾಗುತ್ತಾನೆ. ಬಲಾವಲೋಕನಕ್ಕೆ ಹೋಗುವಾಗ ಯಾವ ಆಲದ ಮರವನ್ನು ನೋಡಿ ರಾಜನು ಅದರೊಂದಿಗೆ ತನ್ನನ್ನು ಹೋಲಿಸಿಕೊಂಡಿದ್ದನೋ ಆ ಆಲದ ಮರಕ್ಕೆ ಈಗ ಈ ಸ್ಥಿತಿಯುಂಟಾಗಿದೆ. ಆ ವೈಪರೀತ್ಯವನ್ನು ಗಮನಿಸಿದ ರಾಜ ಈ ಜೀವನದ ಕ್ಷಣಿಕತೆಯ ಬಗ್ಗೆ ಜಿಜ್ಞಾಸೆಗೆ ತೊಡಗುತ್ತಾನೆ. "ಆಕಾಶದ ವರೆಗೆ ಶಾಖೆಗಳನ್ನು ಹರಡಿದ ಈ ವೃಕ್ಷವು ಕಾಲವಶದಿಂದ ಇಂತಹ ಬನ್ನಕ್ಕೆ ಒಳಗಾಗಿದೆ ಎಂದ ಮೇಲೆ ಅನಿತ್ಯವಾದ ಈ ದೇಹದ ಪಾಡೇನು ? ಸ್ಥಿರ ಮೂಲವಾದ ಹೆಮ್ಮರದ ಗತಿಯೇ ಹೀಗಿರುವಾಗ ಹುಲ್ಲುಕಡ್ಡಿಯಂತಿರುವ ಈ ನರ ಕಳೇಬರ ಯಾವ ಲೆಕ್ಕ? ಕಾಲವೆಂಬ ಸರ್ಪವು ಹಗಲೂ-ಇರುಳು ಉಸಿರನ್ನು ಕುಡಿಯುತ್ತಲೇ ಇರುತ್ತದೆ. ಆದರೆ ಮಾನವ ಮಾತ್ರ ಜೀವಿಸಬೇಕೆಂಬ ಅತಿಯಾಸೆಯಿಂದ ಕಾರ್ಯ ತತ್ಪರನಾಗುತ್ತ ಹೋಗುತ್ತಾನೆ. ದೇಹಮೋಹವೆಂಬ ಪಿಶಾಚಿಯು ಅವನಿಗೆ ಬಡಿದುಕೊಂಡಿರುತ್ತದೆ" ಎಂಬ ವಾಸ್ತವದ ಅರಿವು ರಾಜನಿಗೆ ಉಂಟಾಗುತ್ತಾ ಹೋಗುತ್ತದೆ. ರಾಜನ ಚಿಂತನೆ ಮುಂದುವರೆಯುತ್ತದೆ. ಈ ದೇಹವು ಶುಚಿಯಾದ ಸಮಸ್ತ ಭೋಗೋಪಭೋಗ ವಸ್ತುಗಳನ್ನು ನಿಮಿಷಾರ್ಧದಲ್ಲಿ ಅಶುಚಿಗೊಳಿಸುತ್ತದೆ. ಇದು ಕುತ್ತ, ಪಾಪ, ಪರಾಭಗಳ ಆಗರವಾಗಿದೆ. ಹೀಗೆ ಚಿಂತಿಸುತ್ತ ಕವಿಯು ಲೋಕ ಜೀವನದ ಅನೇಕ ಕಟು ಸತ್ಯಗಳನ್ನು ವೈಶ್ರವಣ ಮುಖದಿಂದ ಹೇಳಿಸುತ್ತಾನೆ. ಈ ದೇಹವು ಕೃತಾಂತನಿಗೆ ಮಾಡಿದ ಬೋನವಂತೆ, ಮೂತ್ರ ನಿವಾಸವು ಇದರ ಜನ್ಮ ಕ್ಷೇತ್ರ. ಶುಕ್ಲ ಶೋಣಿತವು ಇದರ ಬೀಜ. ಇದು ಆತ್ಮನೊಂದಿಗೆ ಎಂದಿಗೂ ಮೈತ್ರಿ ಭಾವವನ್ನು ಹೊಂದಲಾರದು. ಕಾರಣ ಇದು ನಂಬಿಕೆಗೆ ಅಯೋಗ್ಯವಾದುದು. ಇವೆಲ್ಲವೂ ಗೊತ್ತಿದ್ದೂ ಮೋಹಾಂಧರು ಈ ದೇಹವನ್ನು ನಂಬಿ ಕೆಡುತ್ತಾರೆ. ಪರಮಾಣುವನ್ನು ಅಣುಮಾಡುವ ಈ ಕಾಲ ಪರಿಮಾಣವನ್ನು ಸಾವು ಎಂದು ಕರೆಯುತ್ತಾರೆ. ಈ ಶರೀರವೆಂಬುದು ತೊಗಲಿನ ಬೊಂಬೆ. ನಾವು ಸುಖವೆಂದು ಭಾವಿಸುವ ವಸ್ತುವೆ ಕೊನೆಗೊಮ್ಮೆ ದುಃಖ ಹೇತುವಾಗುತ್ತದೆ. ದುಃಖದ ಉಪಶಮನವೇ ಜೀವಕ್ಕೆ ಸುಖದ ಭ್ರಾಂತಿಯನ್ನುಂಟು ಮಾಡುತ್ತದೆ. ತಿಳಿದು ನೋಡಿದಲ್ಲಿ ಈ ಸಂಸಾರವು ಅಸಾರವಾದುದು" ಹೀಗೆಲ್ಲ ಚಿಂತಿಸಿ, ಯಮನು ಬಂದು ತಾಗುವ ಮೊದಲೇ ರತ್ನತ್ರಯಗಳನ್ನು ಸಾಧಿಸುವೆನು ಎಂದು ಸಂಸಾರ ಶರೀರ ಭೋಗಗಳಲ್ಲಿ ತಾತ್ಸಾರ ಹೊಂದಿ ಅರಮನೆಗೆ ತೆರಳುತ್ತಾನೆ.

ಮಂತ್ರಶಾಲೆಗೆ ಬಂದು ಮಗನಾದ ಶ್ರೀಧರನನ್ನು ಕರೆದು ರಾಜ್ಯಭಾರವನ್ನು ಒಪ್ಪಿಸಿಕೊಳ್ಳು-ವಂತೆ ತಿಳಿಸುತ್ತಾನೆ. ವೈಭವದಿಂದ ಶ್ರೀಧರನ ಪಟ್ಟಾಭಿಷೇಕವು ಜರುಗುತ್ತದೆ. ವೈಶ್ರವಣನು ಎಲ್ಲವನ್ನು ತ್ಯಜಿಸಿ ತಪಸ್ಸಿಗೆ ತೆರಳಿದನು. ನಾಗದತ್ತ ಭಟ್ಟಾರಕರಿದ್ದ ಶ್ರೀ ಪರ್ವತಕ್ಕೆ ಪ್ರಯಾಣ ಬೆಳೆಸಿದನು. ಮುನಿಗಳ ದರ್ಶನ ಪಡೆದು ತನ್ನ ವೃತ್ತಾಂತವನ್ನು ತಿಳಿಸುತ್ತಾನೆ. "ಮುಂದೆ ಜಿನನಾಗುವ ಜೀವಕ್ಕೆ ಇದಾವ ವಿಸ್ಮಯ?" ಎಂದು ಮುನಿಗಳು ಮನದಲ್ಲಿ ಬಗೆದರು. ಆ ಮುನಿಗಳಲ್ಲಿ ದೊರೆಯು ಧರ್ಮದೀಕ್ಷೆ ಪಡೆಯುತ್ತಾನೆ. ಈ ಎಲ್ಲ ವಿವರಗಳು ೧೦ನೇ ಆಶ್ವಾಸದಲ್ಲಿ ಸಮಾವೇಶಗೊಂಡಿವೆ.

೧೧ನೇ ಆಶ್ವಾಸದಲ್ಲಿ ವೈಶ್ರವಣ ಮುನಿಯ ದಿನಚರಿಯನ್ನು ತಿಳಿಸುವ ನೆಪದಲ್ಲಿ ನಾಗಚಂದ್ರನು ಮುನಿ ಧರ್ಮಕ್ಕೆ ಸಂಬಂಧಿಸಿದ ಎಲ್ಲ ವಿವರಗಳನ್ನು ಸಂಗ್ರಹಿಸಿಕೊಟ್ಟಿದ್ದಾನೆ. ಮುನಿಗಳ ಕೇಶೋತ್ಪಾಟನ, ಪಂಚ ಸಮಿತಿ, ತ್ರಿಗುಪ್ತಿ, ಪಂಚಮಹಾವ್ರತ, ದಶಧರ್ಮಗಳು, ದ್ವಾದಶ ವಿಧದ ತಪಸ್ಸು, ಷೋಡಶಭಾವನೆ, ದ್ವಾದಶಾನುಪ್ರೇಕ್ಷೆ, ಮೊದಲಾದ ಸೂಕ್ಷ್ಮಾತಿಸೂಕ್ಷ್ಮ ಆಚರಣೆಗಳ ಬಗ್ಗೆ ವಿವರಗಳನ್ನು ನೀಡಲಾಗಿದೆ. ಈ ದೃಷ್ಟಿಯಿಂದ ಜೈನ ಸಿದ್ಧಾಂತವನ್ನು ತಿಳಿಯ ಬಯಸುವ ಆಸಕ್ತರಿಗೆ ಮಲ್ಲಿನಾಥಪುರಾಣವು ಒಂದು ಸರಳ-ಸುಂದರ ಕೈಪಿಡಿಯಂತೆ ಕಂಡು ಬರುತ್ತದೆ. ವಾಸ್ತವವಾಗಿ ಕವಿಯ ಉದ್ದೇಶವೂ ಆಗಿದೆ. ಮಲ್ಲಿನಾಥನ ಕಥೆ ಇಲ್ಲಿ ನಿಮಿತ್ತ ಮಾತ್ರ. ಜೈನ ಸಿದ್ಧಾಂತ ಪ್ರತಿಪಾದನೆ ಈ ಕಾವ್ಯದ ಮುಖ್ಯ ಆಶಯ.

ಉಗ್ರತಪಸ್ಸಿನ ಪರಿಣಾಮವಾಗಿ ವೈಶ್ರವಣನು ಅಪರಾಜಿತ ವಿಮಾನದಲ್ಲಿ ಅಹಮಿಂದ್ರನಾಗಿ ಹುಟ್ಟುತ್ತಾನೆ. ಆ ಅವಧಿಯಲ್ಲಿ ಸುಖದಿಂದ ಪರಮಾಯುಷ್ಯವನ್ನು ಕಳೆಯುತ್ತಾನೆ. ಇತ್ತ ಸೌಧರ್ಮೇಂದ್ರನು ಇಪ್ಪರಲ್ಲಿ ವೈಶ್ರವಣನು ಚರಮದೇಹದೊಂದಿಗೆ ಭೂಲೋಕದಲ್ಲಿ ಹುಟ್ಟಿರುವನೆಂಬುದನ್ನು ತಿಳಿದು ಅದರ ಪೂರ್ವಸಿದ್ಧತೆಗೆ ತೊಡಗುತ್ತಾನೆ. ಕೆಲದಿನಗಳಲ್ಲಿ ಮಿಥಿಲಾಪುರದ ರಾಜನಾದ ಕುಂಭರಾಜ ಮತ್ತು ಆತನ ರಾಣಿ ಪ್ರಭಾವತಿಯರ ಗರ್ಭದಲ್ಲಿ ಜಿನಶಿಶುವಾಗಿ ಜನ್ಮ ತಾಳುತ್ತಾನೆ. ಜನ್ಮೋತ್ಸವಕ್ಕೆ ಸೌಧರ್ಮೇಂದ್ರನು ದೇವತಾ ಪರಿವಾರದೊಂದಿಗೆ ಭೂಲೋಕಕ್ಕೆ ಆಗಮಿಸುತ್ತಾನೆ. ಸಾಂಪ್ರದಾಯಿಕವಾದ ರೀತಿಯಲ್ಲಿ ಜಿನಜನ್ಮೋತ್ಸವವು ಜರುಗುತ್ತದೆ. ಬಾಲಕನಿಗೆ ಮಲ್ಲಿನಾಥನೆಂದು ನಾಮಕರಣ ಮಾಡಲಾಯಿತು. ೧೩ನೆಯ ಆಶ್ವಾಸದುದ್ದಕ್ಕೂ ಮಲ್ಲಿನಾಥನ ಕೌಮಾರ್ಯದ ವರ್ಣನೆ ತುಂಬಿಕೊಂಡಿದೆ.

ಮಲ್ಲಿನಾಥನು ಪ್ರೌಢನಾಗುತ್ತಾನೆ. ಪಾಲಕರು ಅವನ ವಿವಾಹ ಮಾಡಲು ಮುಂದಾಗುತ್ತಾರೆ. ಕುಂಭರಾಜನಿಗೆ ತನ್ನ ಮಗನ ಧಾರ್ಮಿಕ ಪ್ರವೃತ್ತಿಯ ಬಗ್ಗೆ ತಿಳಿದಿದ್ದಿತಾದ ಕಾರಣ ತನ್ನ ಮಗನು ಮದುವೆ ಮಾಡಿಕೊಳ್ಳುತ್ತಾನೋ ಇಲ್ಲವೋ ಎಂಬ ಅಳುಕು ಅವನನ್ನು ಕಾಡುತ್ತಿತ್ತು. ಆದರೂ ಒಬ್ಬ ತಂದೆಯಾಗಿ ತನ್ನ ಕರ್ತವ್ಯ ನಿರ್ವಹಿಸಲು ನಿರ್ಧರಿಸುತ್ತಾನೆ.

ಮಲ್ಲಿನಾಥನ ವಿವಾಹ ಮಂಟಪ ಸಿದ್ಧವಾಯಿತು. ಮಲ್ಲಿನಾಥನಿಗಾದರೋ ಆ ವಿವಾಹ ಮಂಟಪವು ತನ್ನ ಪೂರ್ವಜನ್ಮದ ಅಪರಾಜಿತ ವಿಮಾನದ ಹಾಗೆ ಕಂಡು ಬಂದಿತು. ಪೂರ್ವಭವ ಸ್ಮರಣೆಯ ಪರಿಣಾಮದಿಂದ ಅವನಲ್ಲಿ ವೈರಾಗ್ಯಭಾವ ಮೂಡತೊಡಗಿತು. ಮೋಕ್ಷಲಕ್ಷ್ಮಿಯನ್ನು ಪಡೆಯಬಯಸುತ್ತಿರುವ ನಾನು ಈ ಲೌಕಿಕ ಹೆಣ್ಣುಗಳನ್ನು ಕಟ್ಟಿಕೊಂಡು ಏನು ಸಾಧಿಸಲಿ? ಎಂದು ಪ್ರಶ್ನಿಸಿಕೊಂಡ. ಈ ಸಂದರ್ಭವನ್ನು ಬಳಸಿಕೊಂಡು ನಾಗಚಂದ್ರನು ವೈರಾಗ್ಯಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಹೆಣೆದಿದ್ದಾನೆ (೮-೧೩).

ಮದುವೆ ವಿಚಾರವನ್ನು ಧಿಕ್ಕರಿಸಿದ ಮಲ್ಲಿನಾಥನು ಪರಿನಿಷ್ಕ್ರಮಣದಲ್ಲಿ ಪ್ರವೃತ್ತನಾಗುತ್ತಾನೆ. ತನ್ನ ಮಾಲಾಭರಣಗಳನ್ನೆಲ್ಲ ಕಿತ್ತು ಬಿಸಾಕಿ, ಸಂನ್ಯಸನವನ್ನು ಕೈಕೊಳ್ಳುತ್ತಾನೆ. ಜಿನನ ಪರಿನಿಷ್ಕ್ರಮಣ ಕಲ್ಯಾಣ ಪ್ರಸಂಗವನ್ನು ಪೂರೈಸಿದ ಇಂದ್ರನು ತನ್ನ ನಿವಾಸಕ್ಕೆ ತೆರಳುತ್ತಾನೆ.

೧೪ನೆಯ ಆಶ್ವಾಸದಲ್ಲಿ ಕಾಮನು ಮಲ್ಲಿನಾಥನ ತಪೋಭಂಗ ಮಾಡಲು ಪ್ರಯತ್ನಿಸಿದ ಪ್ರಸಂಗವಿದೆ. ಮಲ್ಲಿನಾಥನ ತಪಸ್ಸಿನ ಪ್ರಭಾವದಿಂದ ಕಾಮನು ಸುಟ್ಟು ಬೂದಿಯಾಗುತ್ತಾನೆ. ಮಲ್ಲಿನಾಥನಿಗೆ ತ್ರಿಕಾಲಜ್ಞಾನ ಪ್ರಾಪ್ತವಾಗುತ್ತದೆ. ಮುಂದೆ ಅವನ ಧರ್ಮೋಪದೇಶದ ಪ್ರಸಂಗ ಬರುತ್ತದೆ. ಸಂಸಾರ ದುಃಖ ಭಂಜನನಾದ ಮಲ್ಲಿನಾಥನು ಮೋಕ್ಷವನ್ನು ಸೇರುತ್ತಾನೆ. ಇದಿಷ್ಟು ಮಲ್ಲಿನಾಥಪುರಾಣದ ಮುಖ್ಯ ಕಥೆ. ಉಳಿದ ಪುರಾಣಗಳಂತೆ ಇಲ್ಲಿ ಭವಾವಳಿಗಳ ಗೊಂದಲವಿಲ್ಲ; ಕಥೆ ಉಪಕಥೆಗಳ ಗೋಜಲು ಇಲ್ಲ. ಹೀಗಾಗಿ ಮಲ್ಲಿನಾಥಪುರಾಣವು ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಕೆಲವೆಡೆ ವರ್ಣನೆಗಳು ಅತಿಯಾದವೆನ್ನಿಸಿದರೂ ಅಲ್ಲಲ್ಲ ಕವಿಯ ಪ್ರತಿಭೆಯ ಲಾಸ್ಯವಿರುವುದನ್ನು ಕಾಣಬಹುದಾಗಿದೆ.

## ವಿವಿಧ ರಾಮಾಯಣ ಪರಂಪರೆಗಳು

ನಾಗಚಂದ್ರ ಕವಿಯ ಇನ್ನೊಂದು ಕೃತಿಯಾಗಿರುವ ರಾಮಚಂದ್ರಚರಿತ ಪುರಾಣವು ರಾಮಾಯಣದ ಕಥೆಯನ್ನೊಳಗೊಂಡಿದೆ. ಅಭಿನವ ಪಂಪ ಬರೆದನೆಂಬ ಕಾರಣವಾಗಿ ಈ ಕೃತಿಯನ್ನು ಜನರೂಢಿಯಲ್ಲಿ "ಪಂಪರಾಮಾಯಣ"ವೆಂದು ಕರೆಯಲಾಗುತ್ತದೆ. ಈ ಕೃತಿಯ ವಸ್ತು, ಭಾಷೆ, ಶೈಲಿ ಇತ್ಯಾದಿಗಳನ್ನು ನೋಡುವುದಕ್ಕೆ ಮೊದಲು ಕವಿಗೆ ಆಕರವಾಗಿ ನಿಂತ ಜೈನ ರಾಮಾಯಣ ಪರಂಪರೆ ಹಾಗೂ ವೈದಿಕ ರಾಮಾಯಣ ಪರಂಪರೆಗಳ ಬಗ್ಗೆ ಸ್ಥೂಲವಾಗಿಯಾದರೂ ತಿಳಿದುಕೊಳ್ಳುವುದು ಅಗತ್ಯವಾಗಿದೆ.

"ತಿಣುಕಿದನು ಫಣಿರಾಯ ರಾಮಾಯಣದ ಕಪಿಗಳ ಭಾರದಲಿ" ಎಂದಿರುವ ಕುಮಾರವ್ಯಾಸನ ಅಭಿಪ್ರಾಯವು ಭಾರತದ ಸಂದರ್ಭದಲ್ಲಿ ರಾಮಾಯಣದ ಕಥೆ ಹೊಂದಿರುವ ಜನಪ್ರಿಯತೆ ಮತ್ತು ನೂರಾರು ಜನ ಕವಿಗಳು ಬೇರೆ ಬೇರೆ ಭಾಷೆಗಳಲ್ಲಿ ಅದನ್ನು ಕಟ್ಟಿಕೊಡಲಿಕ್ಕೆ ಮಾಡಿರುವ ಪ್ರಯತ್ನಗಳು - ಇವೆಲ್ಲವನ್ನೂ ಧ್ವನಿಸುತ್ತದೆ. ಭಾರತೀಯ ಕಾವ್ಯ ಪ್ರಪಂಚದಲ್ಲಿಯೇ ರಾಮಾಯಣದ ಕಥೆಯು ಅತ್ಯಂತ ಪ್ರಾಚೀನ ಮತ್ತು ಜನಪ್ರಿಯವೆಂದು ಭಾವಿಸಲಾಗಿದೆ. ಒಂದರ್ಥದಲ್ಲಿ ಅದು ಭಾರತದ ಸಾಂಸ್ಕೃತಿಕ ಮಹಾಕಾವ್ಯವಾಗಿದೆ. ಈಚಿನ ಪರಿಭಾಷೆಯಲ್ಲಿ ಅದನ್ನು ರಾಷ್ಟ್ರೀಯ ಮಹಾಕಾವ್ಯವೆಂದರೂ ನಡೆದೀತು. ಈ ಕೃತಿಯಲ್ಲಿ ಧಾರ್ಮಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಮೌಲ್ಯಗಳೆಲ್ಲ ಇಡಿಕಿರಿದು ತುಂಬಿವೆ. ಜಾಗತಿಕ ಸಾಹಿತ್ಯದ ಸಂದರ್ಭದಲ್ಲಿ ರಾಮಾಯಣ-ಮಹಾಭಾರತಗಳು ಭಾರತವನ್ನು ಪ್ರತಿನಿಧಿಸಬಲ್ಲ ಅಗ್ರಕಾವ್ಯಗಳಾಗಿವೆ. ಭಾರತೀಯರು ರಾಮಾಯಣವನ್ನು ವೇದಸಮ ಎಂಬ ಗೌರವಿಸುತ್ತ ಬಂದಿದ್ದಾರೆ. ರಾಮಾಯಣದ ಕರ್ತೃ ವಾಲ್ಮೀಕಿ ಎಂಬುದು ಈಗ ಮಾನ್ಯವಾಗಿರುವ ಮಾತಾಗಿದ್ದರೂ, ಜನಪದರೇ ವಾಲ್ಮೀಕಿಗಿಂತ ಮೊದಲಿನ ರಾಮಾಯಣ ಕಥೆಯ ಮೂಲ ವಕ್ತಾರರಾಗಿರುವುದು ಹೆಚ್ಚು ಸಂಭವನೀಯವಾಗಿದೆ. ಜನಪದ ಮೌಖಿಕ ಸಂಪ್ರದಾಯದ ಕಥೆಯ ಎಳೆಗಳನ್ನು ಅನಂತರ ವಾಲ್ಮೀಕಿ ಹಾಗೂ ಇತರೆ ವೈದಿಕ, ಬೌದ್ಧ, ಜೈನಕವಿಗಳು ಪರಿಷ್ಕರಿಸಿಕೊಂಡು ಲಿಪಿಬದ್ಧಗೊಳಿಸಿರಬೇಕು. ಹೀಗೆ ರಾಮಾಯಣ ಕಥಾ ಪರಂಪರೆಯು ಜನಪದರಲ್ಲಿ ಮೊಳಕೆಯೊಡೆದು ಶಿಷ್ಟರಲ್ಲಿ ಹೆಮ್ಮರವಾಗಿ ಬೆಳೆದಿದೆ ಎನ್ನಬಹುದು.

ಮನುಷ್ಯಸಂಸ್ಕೃತಿಯ ವಿಕಸನದ ವರ್ಣಮಯ ಕಥೆಯನ್ನು ಒಳಗೊಂಡಿರುವ ರಾಮಾಯಣವು ಸಹಜವಾಗಿ ಎಲ್ಲ ಕಾಲದ, ಎಲ್ಲ ದೇಶದ, ಎಲ್ಲ ಭಾಷೆಯ ಜನರ ಮನಸ್ಸುಗಳನ್ನು ಗೆದ್ದುಕೊಂಡಿದೆ. ಹೀಗಾಗಿ ಭಿನ್ನ ಧರ್ಮಗಳ, ಭಿನ್ನ ಭಾಷೆಗಳ ಪಂಡಿತರು ತಮ್ಮ ಧರ್ಮ ಮತ್ತು ಭಾಷೆಗಳಿಗೆ ರಾಮಾಯಣದ ಕಥೆಯನ್ನು ಒಗ್ಗಿಸಿಕೊಳ್ಳುತ್ತಾ ಬಂದರು. ಅದರಿಂದಾಗಿ ವೈದಿಕ, ಜೈನ ಮತ್ತು ಬೌದ್ಧ ಎಂಬ ಮೂರು ರಾಮಾಯಣ ಪರಂಪರೆಗಳೇ ಭಾರತದಲ್ಲಿ ತಲೆ ಎತ್ತಿನಿಂತವು. ಇವನ್ನೇ ವೈದಿಕ, ಅವೈದಿಕ ಪರಂಪರೆ ಎಂದೂ ಗುರುತಿಸಬಹುದು. ವೈದಿಕರಿಂದ ಸಿಡಿದುನಿಂತ ಜೈನ, ಬೌದ್ಧ ಪಂಥಗಳು ತಮ್ಮ ಮತ ಸಮರ್ಥನೆ ಮತ್ತು ಪ್ರಸಾರಕ್ಕಾಗಿ ಸಾಹಿತ್ಯವನ್ನು ಅವಲಂಬಿಸಬೇಕಾಗಿಯಿತು. ಆ ಸಂದರ್ಭದಲ್ಲಿ ಅತ್ಯಾಕರ್ಷಕವಾಗಿದ್ದ ಮತ್ತು ಆಗಲೇ ಪ್ರಸಿದ್ಧಿ ಪಡೆದಿದ್ದ ರಾಮಾಯಣದ ಕಥೆ ಅವರನ್ನು ಸಹಜವಾಗಿ ಆಕರ್ಷಿಸಿತ್ತು. ಇರುವ ಮೂಲ ಕಥೆಯನ್ನೇ ಅಲ್ಲಲ್ಲಿ ಮಾರ್ಪಡಿಸಿಕೊಳ್ಳುವ ಮೂಲಕ ಜೈನರು ಮತ್ತು ಬೌದ್ಧರು ತಮ್ಮ ತಮ್ಮ ರಾಮಾಯಣದ ಪರಂಪರೆಗಳನ್ನು ರೂಪಿಸಿಕೊಂಡರು. ರಾಮಚಂದ್ರಚರಿತ ಪುರಾಣಕ್ಕೆ ವಿಶಾಲ ಹಿನ್ನೆಲೆಯನ್ನು ಒದಗಿಸಿಕೊಟ್ಟಿರುವ ವೈದಿಕ, ಜೈನ ಮತ್ತು ಬೌದ್ಧ ಪರಂಪರೆಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸಿಕೊಡಲಾಗಿದೆ.

### ೧. ವೈದಿಕ ಪರಂಪರೆ

ವೈದಿಕ ರಾಮಾಯಣದ ರಚನಾಕಾಲದ ಬಗ್ಗೆ ವಿದ್ವಾಂಸರಲ್ಲಿ ಇನ್ನೂ ಸ್ಪಷ್ಟತೆಯಿಲ್ಲ. ಕ್ರಿ.ಶ ಪೂರ್ವ ಆರನೆಯ ಶತಮಾನದಲ್ಲಿ ಅದು ರಚನೆಗೊಂಡಿರಬೇಕೆಂಬ ಅಭಿಪ್ರಾಯವನ್ನು ಬಹುತೇಕ ವಿದ್ವಾಂಸರು ಒಪ್ಪುತ್ತ ಬಂದಿದ್ದಾರೆ. ಆದರೆ ಐತಿಹಾಸಿಕರೆಂದು ಮಾನ್ಯತೆ ಹೊಂದಿರುವ ಜೈನ ತೀರ್ಥಂಕರರ ಕಾಲ ಗಣನೆಯ ಆಧಾರದಿಂದ ವೈದಿಕ ರಾಮಾಯಣ ಪರಂಪರೆಯ ಕಾಲವನ್ನು ಇನ್ನೂ ಸಾಕಷ್ಟು ಹಿಂದಕ್ಕೆ ಒಯ್ಯಬಹುದಾಗಿದೆ. ತೀರ್ಥಂಕರ ಪರಂಪರೆಯಲ್ಲಿ ಕೊನೆಯವನೆನಿಸಿದ ಮಹಾವೀರನ ಕಾಲವು ಕ್ರಿ.ಶ.ಪೂ. ಆರನೆಯ ಶತಮಾನ. ಅವನಿಗಿಂತ ಮೊದಲಿನ ಅಂದರೆ ೨೩ನೆಯ ತೀರ್ಥಂಕರನೆನಿಸಿದ ಪಾರ್ಶ್ವನಾಥನು ಮಹಾವೀರನಿಗಿಂತ ೨೫೦ ವರ್ಷಗಳಷ್ಟು ಹಳಬ. ಅವನು ಕ್ರಿ.ಶ.ಪೂ ೯ನೆಯ ಶತಮಾನದವನು. ಅವನಿಗಿಂತ ಮೊದಲನೆಯವನು ಅಂದರೆ ೨೨ನೆಯ ತೀರ್ಥಂಕರನೆನಿಸಿದ ನೇಮಿನಾಥನು ಪಾರ್ಶ್ವನಾಥನಿಗಿಂತ ಕನಿಷ್ಠ ನೂರಿನ್ನೂರು ವರ್ಷಗಳಷ್ಟಾದರೂ ಹಳಬನಾಗಿದ್ದಿರಬೇಕು. ನೇಮಿನಾಥನು ಮಹಾಭಾರತದ ಪ್ರಮುಖ ಪಾತ್ರಗಳಲ್ಲಿ ಒಂದಾಗಿದ್ದ ಕೃಷ್ಣನ ಸೋದರಸಂಬಂಧಿ ಎಂಬ ಅಂಶವನ್ನು ಜೈನ ಮತ್ತು ವೈದಿಕ ಪಂಥಗಳೆರಡೂ ಒಪ್ಪುತ್ತವೆ. ಇದನ್ನು ನೋಡಿದಾಗ ನೇಮಿನಾಥನ ಕಾಲ ಕ್ರಿ.ಶ.ಪೂ. ೧೧೦೦ರಷ್ಟು ಹಿಂದಕ್ಕೆ ಹೋಗುತ್ತದೆ. ನೇಮಿನಾಥನ ಕಾಲದ ಬಗ್ಗೆ ಅಥವಾ ಮಹಾಭಾರತದ ರಚನಾಕಾಲದ ಬಗ್ಗೆ ಖಚಿತ ದಾಖಲೆಗಳಿಲ್ಲವೆಂಬುದು ನಿಜ. ಆದರೆ ಪಾರ್ಶ್ವನಾಥನಂತೂ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದನೆಂಬುದರಲ್ಲಿ ಯಾವುದೇ ಸಂಶಯವುಳಿದಿಲ್ಲ. ಕಾಲಕ್ರಮದಲ್ಲಿ, ನೇಮಿನಾಥನು ಪಾರ್ಶ್ವನಾಥನಿಗಿಂತ ಪ್ರಾಚೀನನಾಗಿದ್ದು ಅವನ ಕಾಲವನ್ನು ಈ ಆಧಾರದ ಮೇಲೆ ಕ್ರಿ.ಶ.ಪೂ.ನು ೧೧೦೦ ಎಂದು ಭಾವಿಸುವಲ್ಲಿ ಯಾವುದೇ ತಪ್ಪು ಕಾಣಿಸಲಾರದು. ನೇಮಿನಾಥನ ಕಾಲವೇ ಮಹಾಭಾರತದ ಕಾಲವಾಗಿರುವುದು ಹಾಗೂ ಮಹಾಭಾರತಕ್ಕಿಂತ ರಾಮಾಯಣ ಮೊದಲು ರಚನೆಗೊಂಡಿರುವುದು ಈಗ ಸ್ಪಷ್ಟವಾಗಿದೆ. ಈ ಕಾರಣವಾಗಿ ಮಹಾಭಾರತದ ರಚನಾಕಾಲವನ್ನು

ಕ್ರಿ.ಶ.ಪೂ.ಸು. ೧೧೦೦ ಎಂದು ಪರಿಗಣಿಸಿ, ರಾಮಾಯಣದ ರಚನಾಕಾಲವನ್ನು ತತ್ಪೂರ್ವದ್ದು ಎಂದು ಭಾವಿಸುವಲ್ಲಿ ಯಾವ ತೊಡಕೂ ಇಲ್ಲ. ಈ ಲೆಕ್ಕಾಚಾರದ ಪ್ರಕಾರ ವೈದಿಕ ರಾಮಾಯಣದ ರಚನಾಕಾಲವನ್ನು ಕ್ರಿ.ಶ.ಪೂ. ೧೧೦೦ರ ಮೊದಲಿನದೆಂದು ಗುರುತಿಸಬಹುದಾಗಿದೆ.

ರಾಮಾಯಣದ ಹಲವಾರು ಕಥೆಗಳು, ಆಖ್ಯಾನಗಳು, ಪಾತ್ರಗಳು ತರುವಾಯದ ದಿನಗಳಲ್ಲಿ ಇಡೀ ವೈದಿಕ ಸಾಹಿತ್ಯವನ್ನೇ ವ್ಯಾಪಿಸಿಕೊಂಡು ನಿಂತವು. ಅಂತೆಯೇ ಲೌಕಿಕ ಸಂಸ್ಕೃತ ಸಾಹಿತ್ಯದ ಒಂದು ಪಾರ್ಶ್ವವೇ ರಾಮಾಯಣಕ್ಕೆ ಋಣಿಯಾಗಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ನಾರದ, ನರಸಿಂಹ, ಸ್ಕಂದ, ಕಲ್ಕಿ ಮೊದಲಾದ ಪ್ರಮುಖ ಪಾತ್ರಗಳು ತರುವಾಯದ ಪುರಾಣಗಳ ಮತ್ತು ಕಾವ್ಯಗಳ ಕಥಾನಾಯಕರಾಗಿ ಕಂಡುಬರುತ್ತವೆ. ಹೀಗೆ ವಿವಿಧ ಕಾವ್ಯಪದ್ಧತಿಗಳಲ್ಲಿ ಪಸರಿಸಿದ ವೈದಿಕ ರಾಮಾಯಣದ ಪರಂಪರೆ ಭಾರತದ ಅನ್ಯಮತ ಮತ್ತು ಅನ್ಯಭಾಷೆಗಳ ಮೇಲೆ ಸಹಜವಾಗಿಯೇ ದಟ್ಟವಾದ ಪ್ರಭಾವವನ್ನು ಬೀರಿದೆ.

**೨. ಬೌದ್ಧ ಪರಂಪರೆ**

ಬೌದ್ಧ ಸಾಹಿತ್ಯದಲ್ಲಿಯೂ ರಾಮಸಂಬಂಧಿಯಾದ ಮತ್ತು ರಾಮಾಯಣದ ಉಪಕಥೆಗಳನ್ನು ಹೋಲುವ ಅನೇಕ ಕೃತಿಗಳು ಬಂದಿವೆ. 'ದಶರಥ ಜಾತಕ', 'ಅನಾಮಿಕ ಜಾತಕ' ಮತ್ತು 'ದಶರಥ ಕಥಾನಹಂ' ಎಂಬ ಜಾತಕಗಳಲ್ಲಿ ರಾಮ ಕಥೆಯು ಒಡಮೂಡಿದೆ. 'ಸಾಮಜಾತಕ,' 'ವೃಸಂತರ ಜಾತಕ', 'ಸಂಬುಲ ಜಾತಕ' ಮೊದಲಾದವು ರಾಮಾಯಣದ ಇತರ ಕಥೆಗಳನ್ನು ಒಳಗೊಂಡಿವೆ. ಬೌದ್ಧರಾಮಾಯಣ ಪರಂಪರೆಯೇ ವಾಲ್ಮೀಕಿ ರಾಮಾಯಣಕ್ಕಿಂತ ಪ್ರಾಚೀನವಾದುದೆಂಬ ವಾದವನ್ನೂ ಕೆಲವರು ಮಂಡಿಸಿದ್ದಾರೆ. ಹಾಗಿದ್ದರೂ ಅಲ್ಲಿಯೂ ಜಾನಪದವೇ ರಾಮಾಯಣದ ಮೂಲಭಿತ್ತಿಯಾಗಿರುವುದು ಸಾಧ್ಯವಿದೆ. ಈ ಜಾತಕಗಳು ಮೊದಮೊದಲು ಶ್ರುತಿ ರೂಪದಲ್ಲಿದ್ದು, ತರುವಾಯ ಅಂದರೆ ಕ್ರಿ.ಶ.ಪೂ. ೩ನೆಯ ಶತಮಾನದ ಹೊತ್ತಿಗೆ ಲಿಪಿಬದ್ಧವಾದಂಥವು. ಪಾಲಿ ಭಾಷೆಯಲ್ಲಿರುವ 'ಜಾತಕ ಕಥಾವಣ್ಣನ' ಕೃತಿಯೂ ರಾಮಕಥೆಯನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುತ್ತದೆ. ಅದೇ ರೀತಿ 'ಅನಾಮಿಕ ಜಾತಕಂ' ಎಂಬ ಕೃತಿಯೂ ರಾಮಾಯಣದ ವಿವಿಧ ಕಥೆಗಳನ್ನು ಒಳಗೊಂಡಿದೆ. ತ್ರಿಪಿಟಕದಲ್ಲಿಯೂ ದಶರಥನ ಕಥೆ ಇದೆಯೆನ್ನಲಾಗಿದೆ. ಇದರಿಂದ ಬೌದ್ಧ ಪರಂಪರೆಯಲ್ಲಿಯೂ ರಾಮಾಯಣದ ಕಥೆಯು ಹೆಚ್ಚು ಜನಪ್ರಿಯವಾಗಿದ್ದುದು ಕಂಡು ಬರುತ್ತದೆ.

**೩. ಜೈನ ಪರಂಪರೆ**

ಜೈನರಲ್ಲಿ ಬಂದಿರುವ ರಾಮಾಯಣದ ಕಥೆಯು ಮಹಾಪುರಾಣದ ಒಂದು ಭಾಗವಾಗಿ ಬಂದದ್ದು. ರಾಮ, ಲಕ್ಷ್ಮಣ ಮತ್ತು ರಾವಣರ ಚರಿತ್ರೆಗಳು ಜೈನಕವಿಗಳ ಮನಸ್ಸುಗಳನ್ನು ಹೆಚ್ಚಾಗಿ ಗೆದ್ದಿದ್ದು, ಇದರ ಪ್ರಭಾವದಿಂದಾಗಿ ಜೈನರಲ್ಲಿ ಮೂರು ಬೇರೆ ಬೇರೆ ರಾಮಾಯಣ ಪರಂಪರೆಗಳು ಹುಟ್ಟಿಕೊಂಡವು. ಅವು ಹೀಗಿವೆ :

೧. ವಿಮಲಸೂರಿಯ ಸಂಪ್ರದಾಯ,

೨. ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯ,

೩. ಗುಣಭದ್ರನ ಸಂಪ್ರದಾಯ.

೧. **ವಿಮಲಸೂರಿಯ ಸಂಪ್ರದಾಯ :** ಗ್ರಂಥಸ್ಥವಾದ ಮತ್ತು ಉಪಲಬ್ಧವಾದ ಜೈನ ರಾಮಾಯಣಗಳಲ್ಲಿ ಅತ್ಯಂತ ಪ್ರಾಚೀನವಾದುದು ಕ್ರಿ.ಶ. ೩ನೆಯ ಶತಮಾನದ ವಿಮಲಸೂರಿಯ ಪ್ರಾಕೃತದ 'ಪಉಮ ಚರಿಯ" ಎಂಬುದು. ಈ ಪರಂಪರೆಯು ತನಗಿಂತ ಮೊದಲಿನಿಂದ ಅಂದರೆ ಮಹಾವೀರ, ಇಂದ್ರಭೂತಿ, ಗೌತಮ, ಸಾಧುಗಳು, ರಾಹು, ವಿಜಯ - ಈ ಮೊದಲಾದವರ ಮೂಲಕ ಸಾಗಿಬಂದಿದೆಯೆಂಬುದನ್ನು ಸ್ವತಃ ವಿಮಲಸೂರಿ ಹೇಳಿರುವುದನ್ನು ನೋಡಿದರೆ ಜೈನ ರಾಮಾಯಣ ಪರಂಪರೆಯ ಕಾಲ ವಿಮಲಸೂರಿಗಿಂತ ಸಾಕಷ್ಟು ಹಿಂದೆ ಹೋಗುತ್ತದೆ. ಇದಕ್ಕಿಂತ ಮೊದಲು ಜೈನರದೇ ಆದ ರಾಮಾಯಣದ ಶ್ರುತಿ ಪರಂಪರೆಯೊಂದು ಇದ್ದಿರುವುದು ಸಾಧ್ಯವಿದೆ. ಈ ಪರಂಪರೆಯಲ್ಲಿ ರವಿಷೇಣನ (ಕ್ರಿ.ಶ. ೬೭೮, ಸಂಸ್ಕೃತ) ಪದ್ಮ ಪುರಾಣ, ಸ್ವಯಂಭುವಿನ (ಕ್ರಿ.ಶ. ೯ನೆಯ ಶತಮಾನ, ಅಪಭ್ರಂಶ) ಪಉಚರಿಯ, ಶೀಲಾಚಾರ್ಯನ (ಕ್ರಿ.ಶ. ೮೬೮, ಪ್ರಾಕೃತ) ಚಉಪ್ಪನ್ನ ಮಹಾಪುರಿಸ ಚರಿಯಂ - ಇವು ಪ್ರಮುಖ ರಾಮಾಯಣ ಕೃತಿಗಳಾಗಿವೆ. ಇವಲ್ಲದೆ ರಾಮಕಥೆಯನ್ನು ಸಾಂದರ್ಭಿಕವಾಗಿ ತಿಳಿಸುವ ಕೆಲವು ಗ್ರಂಥಗಳೂ ರಚನೆಗೊಂಡಿವೆ.

೨. **ಸಂಘದಾಸ ಮತ್ತು ಹರಿಷೇಣರ ಸಂಪ್ರದಾಯ :** ಇವರ ಕೃತಿಗಳು ಬಹುತೇಕ ವೈದಿಕ ರಾಮಾಯಣದ ಪ್ರಭಾವದಲ್ಲಿ ರಚನೆಗೊಂಡಿವೆ. ಮಂಥರೆಯ ಪಾತ್ರ, ದಶರಥನ ದುಃಖ ಮತ್ತು ಸಾವು, ಪಾದುಕಾ ಪ್ರಸಂಗ, ಶೂರ್ಪನಖಿಯ ಪ್ರಸಂಗ, ಸ್ವರ್ಣಮೃಗದ ಪ್ರಸಂಗ - ಇವೇ ಮೊದಲಾದವುಗಳನ್ನು ಇವರು ವೈದಿಕ ಛಾಯೆಯಲ್ಲಿಯೇ ಬಿತ್ತರಿಸಿದ್ದಾರೆ.

೩. **ಗುಣಭದ್ರನ ಸಂಪ್ರದಾಯ :** ಈ ಮೊದಲಿನ ವಿಮಲಸೂರಿ ಮತ್ತು ಸಂಘದಾಸರ ಸಂಪ್ರದಾಯಗಳು ಶ್ವೇತಾಂಬರ ಧೋರಣೆಯವಾಗಿದ್ದು, ಗುಣಭದ್ರನ ಸಂಪ್ರದಾಯ ಮಾತ್ರ ಅಪ್ಪಟ ದಿಗಂಬರ ಧೋರಣೆಯದಾಗಿದೆ. ಇದನ್ನೇ ನಾವು ಉತ್ತರ ಭಾರತದ ರಾಮಾಯಣ ಸಂಪ್ರದಾಯ ಮತ್ತು ದಕ್ಷಿಣಭಾರತದ ರಾಮಾಯಣ ಸಂಪ್ರದಾಯ ಎಂದು ಗುರುತಿಸಬಹುದು. ಗುಣಭದ್ರನ (ಕ್ರಿ.ಶ. ೮೯೮) ಉತ್ತರ ಪುರಾಣದ ೬೭ ಮತ್ತು ೬೮ನೆಯ ಪರ್ವಗಳಲ್ಲಿ ಮುನಿಸುವ್ರತ ತೀರ್ಥಂಕರರ ಕತೆ ಬರುತ್ತದೆ. ಅವನ ಕಥೆಯ ಜೊತೆಗೆ ಅವನ ಕಾಲದವರಾದ ಎಂಟನೆಯ ಬಲದೇವ, ವಾಸುದೇವ ಮತ್ತು ಪ್ರತಿವಾಸುದೇವರ ಕತೆಯೂ ಇದರಲ್ಲಿ ಸೇರಿಕೊಂಡಿದೆ. ದಿಗಂಬರ ಸಂಪ್ರದಾಯದ ರಾಮಾಯಣ ಕಥೆಯ ಪರಿಕಾರ ಗುಣಭದ್ರನೇ ಆಗಿದ್ದಾನೆ. ಉಳಿದೆರಡು ಪರಂಪರೆಗಳಿಗಿಂತ ಗುಣಭದ್ರನ ಪರಂಪರೆ ಸಾಕಷ್ಟು ಭಿನ್ನವಾಗಿದೆ. ಉತ್ತರಪುರಾಣದಲ್ಲಿ ಗುಣಭದ್ರನು ರಾಮಕಥೆಯನ್ನು ೧೨೯ ಶ್ಲೋಕಗಳಲ್ಲಿ ಚಿತ್ರಿಸಿದ್ದಾನೆ. ಇವರ ಪರಂಪರೆಯಲ್ಲಿ ಸಂಸ್ಕೃತ, ಅಪಭ್ರಂಶ ಮತ್ತು ಕನ್ನಡ ಭಾಷೆಗಳಲ್ಲಿ ಹಲವಾರು ಕೃತಿಗಳು ರಚನೆಗೊಂಡಿವೆ. ಸಂಸ್ಕೃತದಲ್ಲಿ ಕ್ರಿ.ಶ. ೧೩೩೧ಕ್ಕಿಂತ ಮೊದಲಿನ

ರಾಮಚಂದ್ರ ಮುಮುಕ್ಷು 'ಪುಣ್ಯಾಸ್ರವ' ಎಂಬ ಕೃತಿಯನ್ನು, ಕ್ರಿ.ಶ. ೧೬ನೆಯ ಶತಮಾನದ ಕೃಷ್ಣದಾಸ ಎಂಬುವನು 'ಪುಣ್ಯಚಂದ್ರೋದಯ ಪುರಾಣ' ಎಂಬ ಕೃತಿಯನ್ನು ರಚಿಸಿದ್ದಾರೆ. ಅಪಭ್ರಂಶ ಭಾಷೆಯಲ್ಲಿ ಕ್ರಿ.ಶ. ೯೬೫ರ ಪುಷ್ಪದಂತನು 'ಮಹಾಪುರಾಣ' ಎಂಬ ಕೃತಿಯನ್ನು ರಚಿಸಿದ್ದಾನೆ. ಕನ್ನಡದಲ್ಲಿ ಕ್ರಿ.ಶ. ೧೦ನೆಯ ಶತಮಾನದ ಚಾವುಂಡರಾಯ ತನ್ನ 'ಚಾವುಂಡರಾಯಪುರಾಣ'ದಲ್ಲಿ ರಾಮಾಯಣದ ಕಥೆಯನ್ನು ಅಳವಡಿಸಿದ್ದಾನೆ. ಕ್ರಿ.ಶ. ೧೨೦೦ರ ಬಂಧುವರ್ಮನು 'ಜೀವ ಸಂಬೋಧನೆ', ಕ್ರಿ.ಶ. ೧೪ನೆಯ ಶತಮಾನದ ನಾಗರಾಜನೆಂಬ ಕವಿಯು 'ಪುಣ್ಯಾಸ್ರವ' ಹಾಗೂ ಕ್ರಿ.ಶ. ೧೫೪೦ರ ದೇವಪ್ಪ ಕವಿಯು "ರಾಮವಿಜಯಕಾವ್ಯ" ಎಂಬ ಕೃತಿಗಳನ್ನು ರಚಿಸಿದ್ದಾರೆ. ಒಟ್ಟಾರೆ ಗುಣಭದ್ರನ ಪರಂಪರೆ ಕ್ರಿ.ಶ.ಸು. ೧೬ನೆಯ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ತನ್ನ ಪ್ರಭಾವವನ್ನು ಉಳಿಸಿಕೊಂಡು ಬಂದಿದೆ.

## ಕನ್ನಡ ಜೈನ ರಾಮಾಯಣ ಪರಂಪರೆ

### ೧. ಭುವನೈಕ ರಾಮಾಭ್ಯುದಯ

ಕನ್ನಡದಲ್ಲಿಯೂ ರಾಮಕಥೆಯನ್ನು ಒಳಗೊಂಡಿರುವ ಹಲವಾರು ಕೃತಿಗಳು ಬಂದಿವೆ. ಅವೆಲ್ಲ ಮೊರನೋಟಕ್ಕೆ ಸಂಸ್ಕೃತದ ವಾಲ್ಮೀಕಿ ರಾಮಾಯಣದ ಛಾಯೆಗಳ ಹಾಗೆ ಕಂಡರೂ, ಅವು ಆಧರಿಸಿರುವುದು ಜೈನಪರಂಪರೆಯ ಪ್ರಾಕೃತ ಮತ್ತು ಅಪಭ್ರಂಶ ಭಾಷೆಯ ರಾಮಾಯಣಗಳನ್ನು ಎಂಬುದು ತಿಳಿದುಬರುತ್ತದೆ.

ಕವಿರಾಜಮಾರ್ಗದಲ್ಲಿ ರಾಮಾಯಣದ ಉಲ್ಲೇಖಗಳಿದ್ದು ಅವುಗಳಿಗೆ ಒನ್ನೆಲೆಯಾದ ಪರಂಪರೆ ಯಾವುದೆಂಬುದು ತಿಳಿಯುವುದಿಲ್ಲ

'ವಿಕ್ರಮಾರ್ಜುನ ವಿಜಯ'ವನ್ನು ರಚಿಸಿದ ಪಂಪ ತನ್ನ ಕೃತಿಯಲ್ಲಿ ಕೆಲವೆಡೆ ರಾಮಾಯಣದ ವಿಷಯಗಳ ಬಗ್ಗೆ ಮಾತನಾಡಿದ್ದು, ಬಹುಶಃ ಅವನು ಯಾವುದೋ ಪ್ರಾಕೃತ ರಾಮಾಯಣದ ಕೃತಿಯನ್ನು ನೋಡಿಕೊಂಡಿರಬಹುದು. ಪೊನ್ನನ "ಭುವನೈಕ ರಾಮಾಭ್ಯುದಯ" ಕನ್ನಡದ ಮೊದಲ ರಾಮಾಯಣವೆಂದು ಪರಿಗಣಿತವಾಗಿದೆ. ಆದರೆ ಅದು ಲಭ್ಯವಿಲ್ಲ.

ತನ್ನ ಎರಡು ಕೃತಿಗಳಲ್ಲಿ ಶಾಂತಿಪುರಾಣವು ಲೋಕೋತ್ತರ ಪರಿಣತಿಯ ಕಾವ್ಯವೆಂದೂ, ಭುವನೈಕ ರಾಮಾಭ್ಯುದಯವು ಲೌಕಿಕ ಪರಿಣತಿಯ ಕಾವ್ಯವೆಂದೂ ಪೊನ್ನ ಶಾಂತಿಪುರಾಣದಲ್ಲಿ ಹೇಳಿಕೊಂಡಿದ್ದಾನೆ. ಇದರಿಂದ ಪೊನ್ನನ ಕೃತಿ ಒಂದು ಸ್ವತಂತ್ರ ರಾಮಕಥೆ ಎಂಬುದೂ, ಲೌಕಿಕ ಕಾವ್ಯವೆಂಬುದೂ ಸ್ಪಷ್ಟವಾಗುತ್ತದೆ. ಆದರೂ ಅದು ವೈದಿಕ ಸರಣಿಯ ಲೌಕಿಕ ಕೃತಿಯೇ ಅಥವಾ ಜೈನಸರಣಿಯ ಲೌಕಿಕ ಕೃತಿಯೇ ಎಂಬ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳುಂಟು. ತನ್ನ ಕೃತಿಯು ೧೪ ಆಶ್ವಾಸಗಳು ೧೪ ಭುವನಗಳಿಗೆ ಸಮಾನವೆಂಬುದಾಗಿಯೂ ಪೊನ್ನ ಅಭಿಮಾನದಿಂದ ಹೇಳಿಕೊಂಡಿದ್ದಾನೆ. ಕಾವ್ಯಾವಲೋಕನ ಮತ್ತು ಶಬ್ದಮಣಿದರ್ಪಣಗಳಲ್ಲಿ ಭುವನೈಕ ರಾಮಾಭ್ಯುದಯದ್ದೆಂದು ಹೇಳಲಾಗುವ ಕೆಲವು ಭಾಗಗಳು ಉಳಿದುಕೊಂಡಿವೆ. ಭುವನೈಕ ರಾಮಾಭ್ಯುದಯದಲ್ಲಿ ಪೊನ್ನನು ತನ್ನ ಆಶ್ರಯದಾತನಾದ ಮುಮ್ಮಡಿ ಕೃಷ್ಣನನ್ನು ರಾಮನೊಂದಿಗೆ

ಹೋಲಿಸಿದ್ದಾನೆ. ಈ ಕೃಷ್ಣನಿಗೆ ‘ಭುವನೈಕ್ಯ ರಾಮು’ ಎಂಬ ಬಿರುದು ಇತ್ತೆಂಬುದು ಕ್ರಿ.ಶ. ೯೫೭ರ ಅಪಭ್ರಂಶ ಕವಿಯಾದ ಪುಷ್ಪದಂತನ ‘ತಿಸಟ್ಠಿ ಮಹಾಪುರಿಸ ಗುಣಾಲಂಕಾರ’ ಎಂಬ ಕೃತಿಯಿಂದ ತಿಳಿದುಬರುತ್ತದೆ. ತನಗೆ ಕವಿ ಚಕ್ರವರ್ತಿ ಎಂಬ ಬಿರುದು ಲಭಿಸಿದ್ದು ಮುಮ್ಮಡಿ ಕೃಷ್ಣನಿಂದ ಎಂದು ಪೊನ್ನ ತಿಳಿಸಿದ್ದು ಕೃಷ್ಣನೇ ಕಥಾನಾಯಕನಾಗಿರುವುದನ್ನು ಎತ್ತಿ ತೋರಿಸುತ್ತದೆ.

### ೨. ಚಾವುಂಡರಾಯ ಪುರಾಣ

ಚಾವುಂಡರಾಯ ಪುರಾಣವು ಒಂದರ್ಥದಲ್ಲಿ ಕನ್ನಡ ಜೈನಕಾವ್ಯಗಳ ತಲಕಾವೇರಿ ಎನ್ನಬಹುದು. ಜೈನಧರ್ಮವು ಮಾನ್ಯಮಾಡಿರುವ ೬೩ ಜನ ಗಣ್ಯರ ಚರಿತ್ರೆಯನ್ನು ಒಂದು ಕಡೆ ಸಂಗ್ರಹಿಸಿಕೊಡಲು ಚಾವುಂಡರಾಯ ಮಾಡಿದ ಪ್ರಯತ್ನ ಕನ್ನಡದ ಸಂದರ್ಭದಲ್ಲಿ ಒಂದು ಅದ್ಭುತವೇ ಸರಿ. ಅದನ್ನೂ ಆತ ಗದ್ಯದಲ್ಲಿ ಹೇಳಿರುವುದು ಇನ್ನೂ ಒಂದು ಸಾಧನೆ ಎನ್ನಬಹುದು. ಪ್ರಖ್ಯಾತಿ ಪಡೆದಿದ್ದ ಸಂಸ್ಕೃತದ ಜಿನಸೇನ - ಗುಣಭದ್ರರ ಮಹಾಪುರಾಣವೆಂಬ ಮಹಾನ್ ಕೃತಿಗೆ ಸಂವಾದಿಯಾದ ಕನ್ನಡದ ಮೇರು ಕೃತಿ ಇದಾಗಿದೆ.

ಈ ೬೩ ಜನರಲ್ಲಿ ಎಂಟನೆಯ ಬಲದೇವ, ವಾಸುದೇವ, ಪ್ರತಿವಾಸುದೇವರ ಕಥೆಯಾಗಿ ಬಂದಿರುವ ಭಾಗವೇ ರಾಮಾಯಣವೆನ್ನಿಸಿದೆ. ಗುಣಭದ್ರರ ಉತ್ತರಪುರಾಣದ ರಾಮಕಥೆಯ ಸಂಕ್ಷಿಪ್ತ ಕನ್ನಡರೂಪ ಇದಾಗಿದೆ. ಗುಣಭದ್ರರು ಇಪ್ಪತ್ತನೆಯ ತೀರ್ಥಂಕರ ಮುನಿಸುವ್ರತರ ಕಥೆಯೊಂದಿಗೆ ಆ ಕಾಲದ ಚಕ್ರವರ್ತಿ ಹರಿಷೇಣ ಬಲದೇವ ರಾಮ, ವಾಸುದೇವ ಲಕ್ಷ್ಮಣ ಮತ್ತು ಪ್ರತಿವಾಸುದೇವ ರಾವಣರ ಚರಿತೆಯನ್ನು ಅಡಕಗೊಳಿಸಿದ್ದಾರೆ. ಮುನಿಸುವ್ರತ ಮತ್ತು ಹರಿಷೇಣರ ಕಥೆ ಸಂಕ್ಷಿಪ್ತವಾಗಿದ್ದು, ರಾಮಲಕ್ಷ್ಮಣರ ಚರಿತೆ ವಿಸ್ತಾರವಾಗಿದೆ. ಗುಣಭದ್ರರಂತೆ ಚಾವುಂಡರಾಯನೂ ಕೂಡಾ ಮುನಿಸುವ್ರತ ಚರಿತೆಯನ್ನು ಸಂಕ್ಷಿಪ್ತವಾಗಿ ಹೇಳಿ, ರಾಮ - ಲಕ್ಷ್ಮಣರ ಕಥೆಯನ್ನು ವಿವರವಾಗಿ ಹೇಳಿದ್ದಾನೆ. ಇದು ಜೈನರಲ್ಲಿಯೂ ಕೂಡ ರಾಮಕಥೆಯು ಜನಪ್ರಿಯತೆ ಪಡೆದುದನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಚಾವುಂಡರಾಯಪುರಾಣ ಮತ್ತು ಭುವನೈಕ ರಾಮಾಭ್ಯುದಯಗಳು ನಾಗಚಂದ್ರನಿಗಿಂತ ಮೊದಲಿನ ಕನ್ನಡ ಜೈನ ರಾಮಾಯಣಗಳಾಗಿದ್ದು ಅವುಗಳಿಗಿಂತ ಪರಿಪೂರ್ಣವಾದ ಕೃತಿಯನ್ನು ನಾಗಚಂದ್ರ ಕಟ್ಟಿಕೊಟ್ಟಿದ್ದಾನೆ. ನಾಗಚಂದ್ರನ ನಂತರ ಕನ್ನಡದಲ್ಲಿ ಮತ್ತೆ ಕೆಲವು ರಾಮಾಯಣ ಕೃತಿಗಳು ರಚನೆಗೊಂಡಿದ್ದು ಅವುಗಳಲ್ಲಿ ಬಂಧುವರ್ಮನ (ಕ್ರಿ.ಶ. ೧೧೬೫) ‘ಜೀವ ಸಂಬೋಧನೆ’, ಕುಮುದೇಂದುವಿನ (ಕ್ರಿ.ಶ. ೧೨೩೫) ‘ಕುಮುದೇಂದು ರಾಮಾಯಣ’, ನಾಗರಾಜನ (ಕ್ರಿ.ಶ. ೧೪೦೦) ‘ಪುಣ್ಯಾಸ್ರವ’. ದೇವಪ್ಪ ಕವಿಯ (ಕ್ರಿ.ಶ. ೧೫೪೦) ‘ರಾಮವಿಜಯ ಕಾವ್ಯ’, ಚಂದ್ರಸಾಗರ ವರ್ಣಿಯ (ಕ್ರಿ.ಶ. ೧೭೫೭) ‘ಶ್ರೀರಾಮಾಯಣ’ ಹಾಗೂ ದೇವಚಂದ್ರನ (ಕ್ರಿ.ಶ. ೧೮೦೦) ‘ರಾಮಕಥಾವತಾರ’ ಎಂಬಿವು ಪ್ರಮುಖ ಕೃತಿಗಳಾಗಿವೆ. ಈ ಕೃತಿಗಳಲ್ಲಿ ರಾಮಚಂದ್ರಚರಿತ ಪುರಾಣ, ಕುಮುದೇಂದು ರಾಮಾಯಣ, ಶ್ರೀರಾಮಾಯಣ ಮತ್ತು ರಾಮಕಥಾವತಾರ ಕೃತಿಗಳು ವಿಮಲಸೂರಿಯ ಪರಂಪರೆಗೆ ಸೇರಿದವುಗಳಾದರೆ, ಚಾವುಂಡರಾಯಪುರಾಣ, ಜೀವಸಂಬೋಧನೆ, ಪುಣ್ಯಾಸ್ರವ ಮತ್ತು ರಾಮವಿಜಯಕಾವ್ಯಗಳು ಗುಣಭದ್ರರ ಪರಂಪರೆಗೆ ಸೇರಿದವುಗಳಾಗಿವೆ.

# ರಾಮಚಂದ್ರಚರಿತ ಪುರಾಣದ ಕಥಾಸಾರ

ನಾಗಚಂದ್ರ ಕವಿಯ ರಾಮಚಂದ್ರ ಚರಿತ ಪುರಾಣವು ಚಂಪೂಕೃತಿಯಾಗಿದ್ದು ೧೬ ಸಂಧಿ-ಗಳಲ್ಲಿ ಹರಡಿಕೊಂಡಿದೆ. ಇದು ಜೈನ ಸರಣಿಯ ರಾಮಾಯಣ ಕಥೆಯಾಗಿದ್ದು ಇಲ್ಲಿ ಓದುಗರ ಅನುಕೂಲದ ದೃಷ್ಟಿಯಿಂದ ಆಶ್ವಾಸನುಸಾರಿಯಾದ ಕಥೆಯ ಮುಖ್ಯ ವಿಷಯಗಳನ್ನು ಸಂಗ್ರಹಿಸಿ ಕೊಡಲಾಗಿದೆ.

**ಪ್ರಥಮಾಶ್ವಾಸಂ : ಪೀಠಿಕಾ ಪ್ರಕರಣಂ**

ಈ ಭಾಗದಲ್ಲಿ ಕವಿ ಸಾಂಪ್ರದಾಯಿಕವಾದ ರೀತಿಯಲ್ಲಿ ತೀರ್ಥಂಕರ ಸ್ತುತಿ, ಮನುಸ್ತುತಿ ಮುನಿಸ್ತುತಿ. ಕವಿಸ್ತುತಿ, ಇವುಗಳನ್ನು ಹೊಂದಿಸಿಕೊಂಡಿದ್ದಾನೆ. ಜೊತೆಗೆ ಕಾವ್ಯಲಕ್ಷಣ, ಪುರಾಣ ಲಕ್ಷಣಗಳ ಬಗೆಗೂ ಕೆಲವು ಮಾತುಗಳನ್ನು ತಿಳಿಸಿದ್ದಾನೆ. ಮುನಿಸುವ್ರತ ತೀರ್ಥಂಕರರ ಕಾಲದ ಬಲದೇವ, ವಾಸುದೇವ, ಪ್ರತಿವಾಸುದೇವರಾದ ರಾಮ-ಲಕ್ಷ್ಮಣ ಮತ್ತು ರಾವಣರ ಚರಿತ್ರೆಯನ್ನು ಕವಿ ಇಲ್ಲಿ ಈ ರೀತಿ ಕೊಟ್ಟಿದ್ದಾನೆ. ಹೀಗೆ ನೋಡಿದಾಗ ರಾಮಚಂದ್ರಚರಿತ ಪುರಾಣವು ಜೈನ ಪುರಾಣವೂ ಹೌದು,ಇತಿಹಾಸವೂ ಹೌದು. ಇತರ ರಾಮಾಯಣಗಳಂತೆ ಇಲ್ಲಿಯೂ ರಾಮನೇ ಕಥಾನಾಯಕ. ಜೈನ ನಂಬಿಕೆಯ ಪ್ರಕಾರ ಅವನು ಒನೆಯ ಬಲದೇವ. ಚರಮ ದೇಹಧಾರಿ. ಅಹಿಂಸಾವ್ರತಿ ಹಾಗೂ ಕಾರಣಪುರುಷ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಾಗಚಂದ್ರನು ರಾಮಕಥೆಯನ್ನು ಹೇಳಲು ಮುಂದಾಗಿದ್ದಾನೆ.

ಇತರ ಜೈನ ಪುರಾಣಗಳಂತೆ ಮೊದಲನೆಯ ಸಂಧಿಯಲ್ಲಿ ಸಾಂಪ್ರದಾಯಿಕವಾದ ಅಂಶಗಳನ್ನು ಹೊಂದಿಸಿಕೊಂಡಿರುವ ನಾಗಚಂದ್ರನು ಅದೇ ಧಾಟಿಯಲ್ಲಿ ತನ್ನ ಕಥೆಯ ಮೂಲ ಯಾವುದೆಂಬುದನ್ನು ತಿಳಿಸಿದ್ದಾನೆ. ವಿಪುಲಾಚಲದಲ್ಲಿ ಮಹಾವೀರ ಜಿನನ ಪಕ್ಕದಲ್ಲಿ ಗೌತಮ ಗಣಧರರು ಮಗಧದ ರಾಜಶ್ರೇಣಿಕನಿಗೆ ಹೇಳಿದ ರಾಮ ಕಥೆಯನ್ನು ತಾನು ಅಪೂರ್ವವಾಗಿ ವರ್ಣಿಸುತ್ತಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಪುರಾಣ ಶೈಲಿಯಲ್ಲಿ ಜನ,ಯುಗ, ಮನುಗಳ ವಿವರ ಕಾಲಸ್ವರೂಪ,ಜಿನರು ಚಕ್ರವರ್ತಿಗಳು, ಬಲರಾಮ, ಕೃಷ್ಣ ಮುಂತಾದವರ ಬಗ್ಗೆ ರಾಮಚರಿತ್ರೆಯಲ್ಲಿ ನಿರೂಪಿಸುವುದಾಗಿ ತಿಳಿಸಿದ್ದಾನೆ. ಮತ್ತು ಆ ರೀತಿ ಮೊದಲನೆಯ ಸಂಧಿಯಲ್ಲಿ ವಿಷಯಗಳನ್ನು ಹೊಂದಿಸಿಕೊಂಡಿದ್ದಾನೆ.

ರಾಮ ಕಥೆಯನ್ನು ನಾಗಚಂದ್ರನು ಮೊದಲನೆಯ ತೀರ್ಥಂಕರನಾದ ಆದಿನಾಥನ ಚರಿತ್ರೆಯ ಹಿನ್ನೆಲೆಯೊಂದಿಗೆ ಆರಂಭಿಸಿದ್ದಾನೆ. ೧೪ ಜನ ಮನುಗಳಲ್ಲಿ ಕೊನೆಯವನು ನಾಭಿರಾಜ. ಅವನ ಮಗನು ಆದಿಬ್ರಹ್ಮನೆನಿಸಿದ ಆದಿನಾಥನು. ಅವನ ಮಗ ಭರತ. ಅವನ ಮಗ ಅರ್ಕಕೀರ್ತಿ. ಹೀಗೆ ಮುಂದುವರಿದ ಇಕ್ಷ್ವಾಕು ವಂಶವು ಮುನಿಸು ವ್ರತ ತೀರ್ಥಂಕರರ ವರೆಗೆ ಅನೂಚಾನವಾಗಿ ಸಾಗಿ ಬಂದಿತು ಎಂದು ತಿಳಿಸಿ ಮುನಿಸುವ್ರತನ ಕಾಲದ ಶ್ರೇಷ್ಠದೊರೆ ವಿಜಯರಥನ ವಿವರ -ದೊಂದಿಗೆ ರಾಮಕಥೆಯನ್ನು ಆರಂಭಿಸುತ್ತಾನೆ. ವಿಜಯ ರಥನ ಹೆಂಡತಿ ಹೇಮಮಾಲಿನಿ. ಅವರ ಮಗ ಸುರೇಂದ್ರಮನ್ಯು. ಸುರೇಂದ್ರಮನ್ಯುವಿಗೆ ಇಬ್ಬರು ಮಕ್ಕಳು, ಪುರಂದರ ಮತ್ತು ವಜ್ರಬಾಹು ಎಂಬುವರು.

**ದ್ವಿತೀಯಾಶ್ವಾಸಂ : ವಂಶವರ್ಣನಂ**

ಒಂದು ದಿನ ವಿಜಯರಥನ ಓಲಗಕ್ಕೆ ನಾಗಪುರದ ರಾಜಕುಮಾರ ಉದಯಸುಂದರನು ತನ್ನ ತಂದೆ ಇಭವಾಹನನಿಂದ ತಂದ ಸಂದೇಶ ಒಂದನ್ನು ತಲುಪಿಸುತ್ತಾನೆ. ತನ್ನ ಮಗಳಾದ

ಗುಣೋದಯೆಯನ್ನು ವಜ್ರಬಾಹು ಕುಮಾರನಿಗೆ ಲಗ್ನ ಮಾಡಿಕೊಡುವ ಅಪೇಕ್ಷೆಯನ್ನು ಇಭವಾಹನನು ವ್ಯಕ್ತಪಡಿಸಿರುತ್ತಾನೆ. ವಿಜಯರಥ ದೊರೆಯು ಅದನ್ನು ಸಮ್ಮತಿಸುತ್ತಾನೆ. ಹೀಗಿರಲು ಒಂದು ದಿನ ವಜ್ರಬಾಹು ಕುಮಾರ ಮತ್ತು ವಿಜಯಸುಂದರರು ಆನೆಯ ಮೇಲೆ ವಿಹಾರಕ್ಕೆ ಹೋಗುತ್ತಾರೆ. ಅಲ್ಲಿ ಅವರಿಗೆ ಒಬ್ಬ ಮುನಿಯ ದರ್ಶನವಾಗುತ್ತದೆ. ಮುನಿಯೊಂದಿಗೆ ಚರ್ಚೆ ಮಾಡುತ್ತಿದ್ದಾಗ ವಜ್ರಬಾಹು ಮತ್ತು ಉದಯಸುಂದರರ ನಡುವೆ ಮಾತಿಗೆ ಮಾತು ಬೆಳೆದು ವಜ್ರಬಾಹು ಅಲ್ಲಿಯೇ ಸಂನ್ಯಾಸದೀಕ್ಷೆ ಪಡೆಯುತ್ತಾನೆ. ಮಾಡಿಕೊಂಡ ಕರಾರಿನ ಪ್ರಕಾರ ಉದಯಸುಂದರನೂ ಗುಣಸಾಗರ ಭಟ್ಟಾರಕರಲ್ಲಿ ದೀಕ್ಷೆ ಪಡೆದು ಸಂನ್ಯಾಸಿಯಾಗುತ್ತಾನೆ. ವಿಷಯವನ್ನು ತಿಳಿದ ವಿಜಯರಥನು ತನ್ನ ಮೊಮ್ಮಗನೇ ಸಂನ್ಯಾಸಿಯಾಗಿರುವಾಗ ನಾನೇಕೆ ಆಗಬಾರದು ಎಂದು ಮೊಮ್ಮಗನಾದ ಪುರಂದರನಿಗೆ ರಾಜ್ಯವನ್ನು ಬಿಟ್ಟುಕೊಟ್ಟು (ನಿರ್ವಾಣ ಘೋಷ) ಮುನಿಗಳ ಬಳಿ ದೀಕ್ಷೆ ಪಡೆದು ಕೊಳ್ಳುತ್ತಾನೆ. ಕೆಲದಿನಗಳ ಮೇಲೆ ಪುರಂದರನು ತನ್ನ ಮಗನಾದ ಕೀರ್ತಿಧರನಿಗೆ ರಾಜ್ಯವನ್ನು ಒಪ್ಪಿಸಿದನು. ಕೀರ್ತಿಧರನ ಮಗ ಸುಕೌಶಲ. ಅವನು ಸುಕೌಶಲ ದೇಶವನ್ನು ಆಳುತ್ತಿದ್ದಾಗ ಅಲ್ಲಿಗೆ ಒಬ್ಬ ಜೈನ ಯತಿ ಬರುತ್ತಾನೆ. ಮುನಿಯನ್ನು ಕಂಡ ಕೂಡಲೇ ತನ್ನ ಮಗನು ತ್ಯಾಗಿಯಾಗುತ್ತಾನೆ ಎಂಬುದನ್ನು ತಿಳಿದಿದ್ದ ಸಹದೇವಿ ಆ ಮುನಿಯನ್ನು ಹೊರಹಾಕಿಸಿದಳು. ಆ ಮುನಿಯು ಈ ಹಿಂದೆ ತನ್ನ ಪತಿಯಾಗಿದ್ದನೆಂಬುದನ್ನು ಅವಳು ವಿಚಾರಿಸಲಿಲ್ಲ. ಇದರಿಂದ ಸುಕೌಶಲನ ದಾದಿ ವಸಂತಮಾಲೆಗೆ ತುಂಬ ದುಃಖವಾಗುತ್ತದೆ. ದಾದಿಯ ಮೂಲಕ ವಿಷಯ ತಿಳಿದುಕೊಂಡ ಸುಕೌಶಲನು ಸಂನ್ಯಾಸಿಯಾಗಿ ಬಿಡುತ್ತಾನೆ. ನಂತರ ತಂದೆಯಾದ ಕೀರ್ತಿಧರ ಮುನಿಯಲ್ಲಿಗೆ ಬಂದು ಅವರೊಂದಿಗೇ ಇರುತ್ತಾನೆ. ಆತ ಮಾಡಿದ ಪಾಪಕ್ಕಾಗಿ ಹೆಣ್ಣು ಹುಲಿಯಾಗಿ ಹುಟ್ಟಿದ್ದ ಸಹದೇವಿಯೂ ಕೀರ್ತಿಧರನನ್ನು ತಿನ್ನುತ್ತಾಳೆ. ಸುಕೌಶಲ ಮುನಿಯು ಕೈವಲ್ಯವನ್ನು ಪಡೆಯುತ್ತಾನೆ.

ಅತ್ತ ಅದೇ ವಂಶದಲ್ಲಿ ಹಿರಣ್ಯಗರ್ಭ ಮತ್ತು ಅವನ ಮಗ ನಹುಷ ಇವರು ಕ್ರಮವಾಗಿ ರಾಜ್ಯವನ್ನಾಳಿದರು. ನಹುಷನ ಮಗ ಸಂವಾಸ. ಅವನ ಮಗ ಸಿಂಹರಥ. ಅವನ ಮಗ ಬ್ರಹ್ಮರಥ, ಬ್ರಹ್ಮರಥನ ಮಗ ಚತುರ್ಮುಖ, ಅವನ ಮಗ ಹೇಮರಥ, ಅವನ ಮಗ ಸಕಲೇಂದು ರಥ, ಸಕಲೇಂದುವಿನ ಮಗ ಭಾನುರಥ, ಹೀಗೆ ಆ ವಂಶದಲ್ಲಿ 'ಮಯ', ಮಂಧಾತ, ವೀರಸೇನ, ಕಮಲಬಂಧು, ವಸಂತ ತಿಲಕ, ಕುಬೇರದತ್ತ, ಮೃಗಾರಿ, ಮದನದ್ವೀಪ, ಹಿರಣ್ಯಕಶಪು, ಕರ್ಕರಥ, ದಿಲೀಪ, ರಘುವೀರ, ಮುಂತಾದ ದೊರೆಗಳು ಕ್ರಮದಿಂದ ರಾಜ್ಯಪಾಲನೆ ಮಾಡಿ ಮೋಕ್ಷಕ್ಕೆ ಸಂದಿರುವರೆಂದು ಕವಿ ತಿಳಿಸಿದ್ದಾನೆ.

ಇಲ್ಲಿಂದ ಮುಂದೆ ರಾಮಾಯಣದ ಗಟ್ಟಿ ಕಥೆ ಆರಂಭವಾಗುತ್ತದೆ. ಆ ವಂಶದ ಮತ್ತೊಬ್ಬ ದೊರೆ ಅನರಣ್ಯ, ಅವನ ಸತಿ ಪೃಥ್ವಿವಧು, ರಾವಣನಿಂದ ಮಹೇಶಮತಿ ಪಟ್ಟಣದ ದೊರೆ ಸಹಸ್ರಕಿರಣನು ಸೋಲಿಗೀಡಾದ ಸಂಗತಿಯನ್ನು ಕೇಳಿ ಅರಣ್ಯನು ಜಿನದೀಕ್ಷೆ ಕೈಕೊಳ್ಳುತ್ತಾನೆ. ಅವನ ಮಗ ಅನಂತರಥನು ರಾಜ್ಯದ ಭಾರವನ್ನು ವಹಿಸಿಕೊಳ್ಳಲು ನಿರಾಕರಿಸುತ್ತಾನೆ. ಆಗ ವಿಧಿ ಇಲ್ಲದೆ ಅನರಣ್ಯನು ತನ್ನ ಕಿರಿಯ ಮಗನಾದ ದಶರಥನಿಗೆ ಅವನು ಒಂದು ತಿಂಗಳಿನವನಿರುವಾಗಲೇ ಪಟ್ಟಕಟ್ಟಿ ಕಾಡಿಗೆ ತೆರಳುತ್ತಾನೆ. ತಪಸ್ಸುಮಾಡಿ ಮುಕ್ತಿ ಪಡೆಯುತ್ತಾನೆ. ಅನಂತರಥನು ಕೇವಲಿಯಾಗುತ್ತಾನೆ.

**ತೃತೀಯಾಶ್ವಾಸಂ : ಕುಮಾರೋದಯ ವರ್ಣನಂ :**

ದಶರಥನು ರಾಜ್ಯ ನಿರ್ವಹಣೆ ಮಾಡುತ್ತಿದ್ದಾಗ ಒಂದು ದಿನ ನಾರದನು ಅವನ ಆಸ್ಥಾನಕ್ಕೆ

ಬರುತ್ತಾನೆ. ತಾನು ಪೂರ್ವವಿದೇಹ ದೇಶದ ಪುಂಡರೀಕಿಣಿ ಪುರದ ಸೀಮಂಧರಸ್ವಾಮಿಗಳ ಪರಿನಿಷ್ಕ್ರಮಣ ಕಲ್ಯಾಣ ವೈಭವವನ್ನು ನೋಡಿ ಬಂದುದಾಗಿಯೂ ಲಂಕೆಗೆ ಹೋಗಿ ವಜ್ರಾಂಕುಶ ಜಿನನ ದರ್ಶನ ಪಡೆದು ಬಂದುದಾಗಿಯೂ ನಾರದ ತಿಳಿಸುತ್ತಾನೆ. ಅಲ್ಲದೆ ರಾವಣನ ವಿಚಾರವಾಗಿ ತನಗೆ ತಿಳಿದು ಬಂದ ಸಂಗತಿಗಳನ್ನು ದಶರಥನಿಗೆ ತಿಳಿಸಲು ಬಂದುದಾಗಿಯೂ ನಾರದನು ಹೇಳುತ್ತಾನೆ. ರಾವಣನು ಸೀತೆಯ ಕಾರಣವಾಗಿ ದಶರಥ ಪುತ್ರನಾದ ರಾಮನಿಂದ ಹತನಾಗುತ್ತಾನೆ ಎಂಬ ಸಂಗತಿಯು ಒಬ್ಬ ಜ್ಯೋತಿಷಿಯ ಮೂಲಕ ವಿಭೀಷಣನಿಗೆ ತಿಳಿದು ಬಂದಿದೆ. ಈಗ ವಿಭೀಷಣನು ತನ್ನ ಅಣ್ಣನ ನಾಶಕ್ಕೆ ಕಾರಣವಾಗಲಿರುವ ರಾಮ ಸೀತೆಯರ ಪಿತೃಗಳನ್ನು ಕೊಲ್ಲಲು ಮುಂದಾಗಿದ್ದಾನೆ ಎಂದು ನಾರದರು ತಿಳಿಸುತ್ತಾರೆ. ಇಷ್ಟು ಹೇಳಿ ನಾರದನು ಆ ಸಂಗತಿಯನ್ನು ಜನಕರಾಜನಿಗೆ ತಿಳಿಸುವುದಕ್ಕಾಗಿ ಮಿಥಿಲೆಗೆ ಹೊರಡುತ್ತಾನೆ. ವಿಷಯದ ಗಂಭೀರತೆಯನ್ನು ಅರ್ಥಮಾಡಿಕೊಂಡ ದಶರಥ ಮತ್ತು ಜನಕರ ಮಂತ್ರಿಮುಖ್ಯರು ಅವರಿಬ್ಬರ ತೆಪ್ಪದ ಪ್ರತಿಮೆಗಳನ್ನು ಅವರವರ ಆಸ್ಥಾನಗಳಲ್ಲಿ ನಿರ್ಮಿಸಿದರು. ಅತ್ತ ದಶರಥ ಜನಕರಿಬ್ಬರೂ ಸೇರಿ ಮಾರುವೇಷದಲ್ಲಿ ದೇಶಾಂತರಕ್ಕೆ ಹೋಗುತ್ತಾರೆ.

ತನ್ನ ಯೋಜನೆಯಂತೆ ವಿಭೀಷಣ ಕೃತಕ ಗೊಂಬೆಗಳನ್ನು ಕೊಂದು ನಿಜವಾದ ದಶರಥ ಮತ್ತು ಜನಕರನ್ನು ಕೊಂದ ಸಂಭ್ರಮದಲ್ಲಿ ಈಡಾಡುತ್ತಾನೆ. ಲಂಕಾ ನಗರಕ್ಕೆ ತೆರಳಿ ತನ್ನ ಸಾಧನೆಯ ಬಗ್ಗೆ ಹೇಳಿಕೊಳ್ಳುತ್ತಾನೆ. ಇನ್ನು ಮುಂದೆ ತನ್ನ ಅಣ್ಣನಾದ ರಾವಣನು ನಿಶ್ಚಿಂತನಾಗಿ ಬದುಕಬಹುದೆಂಬ ಸಂತೋಷ ಅವನದಾಗಿದ್ದಿತು. ಇನ್ನೊಂದೆಡೆ ನಾನು ತಪ್ಪು ಮಾಡಿದೆ ಎಂಬ ಅಳುಕು ಅವನನ್ನು ಕಾಡುತ್ತದೆ. ಅದಕ್ಕೆ ಪ್ರಾಯಶ್ಚಿತ್ತವಾಗಿ ಜಿನಾಲಯವೊಂದನ್ನು ಆತ ನಿರ್ಮಿಸುತ್ತಾನೆ.

ದೇಶಾಂತರದಲ್ಲಿದ್ದ ದಶರಥ ಮತ್ತು ಜನಕರು ಕೌತುಕಮಂಗಳಪುರವನ್ನು ಪ್ರವೇಶಿಸುತ್ತಾರೆ. ಅಲ್ಲಿ ಜರುಗುತ್ತಿದ್ದ ಕೈಕೇಯಿಯ ಸ್ವಯಂವರ ಮಂಟಪವನ್ನು ಪ್ರವೇಶಿಸುತ್ತಾರೆ. ದಶರಥನ ರೂಪ-ಲಾವಣ್ಯಕ್ಕೆ ಮನಸೋತ ಕೈಕೇಯಿ ಅವನಿಗೆ ಮಾಲೆ ತೊಡಿಸುತ್ತಾಳೆ. ಇನ್ನೊಂದೆಡೆ ಕೈಕೇಯ ಕೈಹಿಡಿಯುವ ಅಪೇಕ್ಷೆಯಿಂದ ಬಂದಿದ್ದ ಅನೇಕ ಜನ ರಾಜಕುಮಾರರಿಗೆ ಇದರಿಂದ ಅಪಮಾನ ಉಂಟಾಯಿತು. ಅವರೆಲ್ಲ ಹಠಾತ್ತನೆ ದಶರಥನ ಮೇಲೆ ಎರಗುತ್ತಾರೆ. ಆಗ ಕೈಕೇಯಿಯು ದಶರಥನ ಬೆಂಗಾವಲಿಗೆ ನಿಂತು ಆ ರಾಜಕುಮಾರರನ್ನು ಎದುರಿಸಿ ಗೆಲ್ಲುತ್ತಾಳೆ. ಕೈಕೇಯಿಯೊಂದಿಗೆ ದಶರಥನು ಅಯೋಧ್ಯೆಗೆ ತೆರಳುತ್ತಾನೆ. ಜನಕನು ಮಿಥಿಲೆಗೆ ತೆರಳುತ್ತಾನೆ. ಒಂದು ದಿನ ದಶರಥನು ಕೈಕೆಯಿಯನ್ನು ಕರೆದು ಅಂದು ಯುದ್ಧದಲ್ಲಿ ಸಹಕರಿಸಿದುದಕ್ಕಾಗಿ ನಿನಗೆ ಏನು ವರ ಬೇಕು ಕೇಳಿಕೊ ಎನ್ನುತ್ತಾನೆ. ಆಗ ಕೈಕೇಯಿ ನನಗೆ ಬೇಕೆನಿಸಿದಾಗ ಬೇಕಾದುದನ್ನು ಕೇಳಿ ಪಡೆದುಕೊಳ್ಳುತ್ತೇನೆ ಎನ್ನುತ್ತಾಳೆ. ಕೆಲ ದಿವಸಗಳಲ್ಲಿ ದಶರಥನು ಅಪರಾಜಿತೆಯನ್ನು (ಕೌಸಲ್ಯೆ) ತನ್ನ ಮತ್ತೊಬ್ಬ ರಾಣಿಯನ್ನಾಗಿ ಸ್ವೀಕರಿಸುತ್ತಾನೆ. ರಾಣಿ ಅಪರಾಜಿತೆ ಗರ್ಭಿಣಿಯಾಗುತ್ತಾಳೆ ಹಾಗೂ ರಾಮಚಂದ್ರನೆಂಬ ಮಗನನ್ನು ಪಡೆಯುತ್ತಾಳೆ. ಕಾಲಾನುಕ್ರಮದಲ್ಲಿ ದಶರಥನಿಗೆ ಸುಮಿತ್ರೆಯಲ್ಲಿ ಲಕ್ಷ್ಮಣ, ಕೈಕೆಯಲ್ಲಿ ಭರತ, ಸುಪ್ರಭೆಯಲ್ಲಿ ಶತ್ರುಘ್ನರು ಮಕ್ಕಳಾಗಿ ಜನಿಸುತ್ತಾರೆ. ಈ ವಿವರಗಳು ೩ನೆಯ ಸಂಧಿಯಲ್ಲಿ ನಿರೂಪಿತವಾಗಿವೆ.

**ಚತುರ್ಥಾಶ್ವಾಸಂ :**

ಜನಕರಾಜನಿಗೆ ಮತ್ತು ವಿದೇಹಿಗೆ ಸೀತೆ ಮಗಳಾಗಿ ಮತ್ತು ಪ್ರಭಾಮಂಡಲನು ಮಗನಾಗಿ

ಹುಟ್ಟಿದ ಪ್ರಸಂಗದೊಂದಿಗೆ ನಾಲ್ಕನೆಯ ಸಂಧಿ ಆರಂಭವಾಗುತ್ತದೆ.ಇಲ್ಲಿ ನಾಗಚಂದ್ರನು ಮೂಲ ರಾಮಾಯಣದಲ್ಲಿ ಇಲ್ಲದ ಒಂದು ಹೊಸ ಪ್ರಸಂಗವನ್ನು ಸೇರಿಸಿದ್ದಾನೆ. ಇದು ಬಹುಶಃ ಆತ ಬೇರೆ ಜೈನ ರಾಮಾಯಣದಿಂದ ಅಥವಾ ಜಾನಪದ ಮೂಲದಿಂದ ಪಡೆದ ಪ್ರಸಂಗವಾಗಿರ-ಬಹುದು. ಅದು ಹೀಗಿದೆ. ಹಿಂದಿನ ಜನ್ಮದ ವೈರದಿಂದ ಒಬ್ಬ ರಾಕ್ಷಸನು ವಿದೇಹಿಯ ಗರ್ಭವನ್ನು ಕಾವಲು ಮಾಡುತ್ತಿರುತ್ತಾನೆ. ಅದರ ಕಾರಣವೇನೆಂದರೆ ಚಂದ್ರಪುರವೆಂಬ ರಾಜ್ಯ, ಅದರ ದೊರೆ ಚಂದ್ರಧ್ವಜ. ಅವನ ಅರಸಿ ಮನಸ್ವಿ, ಅವರ ಮಗಳು ಚಿತ್ರೋತ್ಸವೆ. ಅದೇ ಊರಿನ ರಾಜಪುರೋಹಿತನ ಮಗ ಕಪಿಲ. ಕಪಿಲ ಮತ್ತು ಚಿತ್ರೋತ್ಸವೆ ಬಾಲ್ಯ ಸ್ನೇಹಿತರು. ಇಬ್ಬರಲ್ಲೂ ಪ್ರೀತಿ ಅಂಕುರವಾಗುತ್ತದೆ. ಹಿರಿಯರ ಭಯದಿಂದ ಅವರು ವಿದಗ್ಧಪುರದಲ್ಲಿ ವಾಸವಾಗುತ್ತಾರೆ.

ಹೀಗಿದ್ದಾಗ ಒಂದು ದಿನ ಆ ಊರಿನ ದೊರೆ ರಾಜಕುಮಾರ ಕುಂಡಲಮಂಡಿತನು ಚಿತ್ರೋತ್ಸವೆಯನ್ನು ನೋಡಿ ಮನಸೋಲುತ್ತಾನೆ. ಅವಳನ್ನು ತನ್ನ ರಾಣಿಯನ್ನಾಗಿ ಮಾಡಿಕೊಳ್ಳುತ್ತಾನೆ. ಇದರಿಂದ ನೊಂದ ಕಪಿಲನು ತಪಸ್ವಿಯಾಗುತ್ತಾನೆ. ತಪಸ್ವಿನಲ್ಲಿ ಆತ ನಿಧನನಾದ. ಅವಧಿಜ್ಞಾನದಿಂದ ತನ್ನ ಮುಂಚಿನ ವೈರಿಯಾಗಿದ್ದ ಕುಂಡಲನನ್ನು ನೆನೆದು ಕೋಪ ತಾಳಿದನು. ಆ ಕುಂಡಲನು ಬೇರೊಂದು ಹೆಣ್ಣು ಕೂಸಿನೊಡನೆ ವಿದೇಹಿಯ ಗರ್ಭದಲ್ಲಿ ಜನಿಸುವುದನ್ನು ಕಾಯುತ್ತಿದ್ದ. ಜನ್ಮವಾದ ಕೂಡಲೇ ಆ ಗಂಡು ಕೂಸನ್ನು ಅಪಹರಣ ಮಾಡಿಕೊಂಡು ಹೋದ. ದಾರಿಯಲ್ಲಿ ಕೂಸಿನ ಮುಖವನ್ನು ನೋಡಿದಾಗ ಅವನ ಮನಃ ಪರಿವರ್ತನೆಯಾಗುತ್ತದೆ. ತಕ್ಷಣ ತನ್ನ ಕರ್ಣ ಕುಂಡಲಗಳನ್ನು ಆ ಕೂಸಿಗೆ ತೊಡಿಸಿ ಪರ್ಣಲವ ವಿದ್ಯೆಯಿಂದ ಕೂಸನ್ನು ಚೆಲ್ಲಿ ಹೊರಟುಹೋದನು. ಆ ಕೂಸು ಒಬ್ಬ ಖೇಚರೇಂದ್ರ ಇಂದುಗತಿ ಹಾಸಿಗೆಯಲ್ಲಿ ಬಂದುಬಿದ್ದಿತು. ಇಂದುಗತಿಯ ರಥನೂಪುರ ಚಕ್ರವಾಳ ಪುರದವ) ಬಾಲಕನಿಗೆ ಖೇಚರನು (ಪ್ರಭಾಮಂಡಲ ಎಂಬ ಹೆಸರನ್ನಿಟ್ಟನಲ್ಲದೆ ಪ್ರೀತಿಯಿಂದ ಪೋಷಿಸ ತೊಡಗಿದನು).

ಇತ್ತ ತನ್ನ ಗಂಡುಕೂಸು ಅಪಹರಣಕ್ಕೊಳಗಾದ ಪ್ರಸಂಗದಿಂದ ಜನಕರಾಜ ಮತ್ತು ವಿದೇಹಿಯರು ದುಃಖಿತರಾದರು. ಆಗ ಅಪಹೃತ ಬಾಲಕನಿಗೆ ಅಪಾಯವಿಲ್ಲವೆಂದೂ ಅವನೊಂದಿಗೆ ಹುಟ್ಟಿದ ಬಾಲಿಕೆ ಗಣನೆಗೆ ಮೀರಿದ ಪುಣ್ಯವತಿಯಾಗುವಳೆಂದೂ ಜ್ಯೋತಿಷಿಗಳು ಹೇಳಿದ ಕಾರಣ ನಿಶ್ಯಂಕೆಯಿಂದ ಪೋಷಣೆಗೆ ತೊಡಗುತ್ತಾರೆ. ಸೀತೆ ತಾರುಣ್ಯಕ್ಕೆ ಬರುತ್ತಾಳೆ, ತಂದೆ ತಾಯಂದಿರು ಅವಳ ಲಗ್ನದ ಯೋಜನೆಗೆ ತೊಡಗುತ್ತಾರೆ.

ಹೀಗಿರಲು ಒಂದು ದಿನ ಒಬ್ಬ ಸೇವಕನು ಜನಕನ ಸಭೆಗೆ ಬಂದು ಅಸಂಖ್ಯಾತ ಬೇಡಪಡೆಯು ಮಿಥಿಲೆಯ ಮೇಲೆ ದಾಳಿ ಮಾಡಿರುವುದಾಗಿ ತಿಳಿಸುತ್ತಾನೆ. ಅದನ್ನು ಕೇಳಿ ಜನಕನು ಕುಪಿತನಾದನು, ಮಂತ್ರಿಗಳು ಈ ಸಂದರ್ಭದಲ್ಲಿ ದಶರಥನ ನೆರವು ಪಡೆಯುವುದು ಯೋಗ್ಯವೆಂದು ಸೂಚಿಸುತ್ತಾನೆ. ಅದರ ಪ್ರಕಾರ ಜನಕನು ದಶರಥನ ನೆರವು ಕೋರುತ್ತಾನೆ. ದಶರಥನು ರಾಮಲಕ್ಷ್ಮಣರನ್ನು ಜನಕನ ನೆರವಿಗೆ ಕಳಿಸುತ್ತಾನೆ. ರಾಮಲಕ್ಷ್ಮಣರು ಬೇಡ ಪಡೆಯನ್ನು ಸೋಲಿಸಿ ಜನಕನನ್ನು ರಕ್ಷಿಸುತ್ತಾರೆ. ಶರಣಾಗತನಾದ ಶಬರನಾಯಕ ತರಂಗತಪನನ್ನು ರಾಮ ಕ್ಷಮಿಸುತ್ತಾನೆ.

ರಾಮನ ಪರಾಕ್ರಮಕ್ಕೆ ಮನಸೋತ ಜನಕರಾಜನು ತನ್ನ ಮಗಳಾದ ಸೀತೆಯನ್ನು ರಾಮನಿಗೆ ಲಗ್ನಮಾಡಿಕೊಡುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾನೆ. ನಾರದನು ಸೀತೆಯನ್ನು ನೋಡುವ ಕುತೂಹಲವುಳ್ಳವನಾಗಿ ಮಿಥಿಲೆಗೆ ಬರುತ್ತಾನೆ. ಯತಿಯಾಗಿದ್ದು ಸೀತೆಯನ್ನು ನೋಡಿ ಕಾಮ

ವಿಕಾರಗೊಳ್ಳುತ್ತಾನೆ. ನಾರದನ ವಿಕಾರಭಾವದಿಂದ ಸೀತೆ ಗಾಬರಿಯಾಗುತ್ತಾಳೆ. ಸಖಿಯರೆಲ್ಲ ಸೇರಿ ನಾರದನನ್ನು ಅಪಮಾನಗೊಳಿಸುತ್ತಾರೆ. ಮಿಥಿಲೆಯ ಸೈನಿಕರು ನಾರದನ ಮೇಲೆ ಆಕ್ರಮಣ ಮಾಡುತ್ತಾರೆ. ಪ್ರಾಣಭೀತಿಯಿಂದ ನಾರದನು ಆಕಾಶಮಾರ್ಗವಾಗಿ ಕೈಲಾಸಕ್ಕೆ ಹಾರಿ ಹೋಗು-ತ್ತಾನೆ. ಸೀತೆಯಿಂದ ತನಗೆ ಇಷ್ಟೆಲ್ಲ ಅಪಮಾನವಾಯಿತೆಂದು ಬಗೆದು ಅವಳಿಗೆ ಕೇಡನ್ನುಂಟು ಮಾಡುವ ಉದ್ದೇಶದಿಂದ ಒಂದು ಬಟ್ಟೆಯ ಪಟದ ಮೇಲೆ ಸೀತೆಯ ಭಾವಚಿತ್ರವನ್ನು ಬರೆದು ರಥನೂಪುರಚಕ್ರವಾಳ ಪುರದ ವಿನೋದವನದಲ್ಲಿಯ ಮಣಿಭವನದಲ್ಲಿ ತೂಗು ಹಾಕಿ ಹೋಗುತ್ತಾನೆ.

ಖೇಚರ ಕುಮಾರನಾದ ಪ್ರಭಾಮಂಡಲನು ಆ ಕ್ರೀಡಾವನದತ್ತ ಬರುತ್ತಾನೆ. ಅಲ್ಲಿರುವ ಸೀತೆಯ ಚಿತ್ರಪಟವನ್ನು ನೋಡಿ ಅವಳ ರೂಪಕ್ಕೆ ಮನಸೋಲುತ್ತಾನೆ. ವಿರಹವೇದನೆಯಿಂದ ಮೂರ್ಛೆಹೋಗುತ್ತಾನೆ. ಇದನ್ನು ಕೇಳಿ ಅವನ ತಂದೆ ಇಂದುಗತಿಯು ಧಾವಿಸಿ ಬಂದು ಮಗನನ್ನು ಉಪಚರಿಸಿದನು. ನಾರದನು ಅಲ್ಲಿಗೆ ಬಂದು ತಾನೇ ಸೀತೆಯ ಭಾವಚಿತ್ರವನ್ನು ಉದ್ಯಾನದಲ್ಲಿ ಇರಿಸಿದ್ದಾಗಿಯೂ ಪ್ರಭಾಮಂಡಲನೇ ಸೀತೆಗೆ ಅನುರೂಪನಾದ ವರನೆಂದು ತಿಳಿಸಿಹೋಗುತ್ತಾನೆ. ನಾವು ಖೇಚರರಾಗಿದ್ದು ಭೂಚರರ ಕನ್ಯೆಯನ್ನು ಹೇಗೆ ತಂದುಕೊಳ್ಳುವುದು ಎಂದು ಇಂದುಗತಿ ಚಿಂತಿಸುತ್ತಾನೆ. ಮಗನ ಮೇಲಿನ ಮೋಹದಿಂದ ಕೊನೆಗೆ ಒಪ್ಪಿಗೆ ನೀಡುತ್ತಾನೆ. ಉಪಾಯದಿಂದ ಸೀತೆಯನ್ನು ಪಡೆದುಕೊಂಡು ಬರಲು ಚಪಲವೇಗನೆಂಬ ವಿದ್ಯಾಧರನನ್ನು ಕಳಿಸುತ್ತಾನೆ. ರೂಪ ಪರಿವರ್ತನ ವಿದ್ಯೆಯಿಂದ ತಾನೊಂದು ಕುದುರೆಯಾದನು. ಜನಕರಾಜನಿಗೆ ಕುದುರೆಸವಾರಿ ಮಾಡುವ ಹುಚ್ಚಿದೆ, ಅವನು ಬಂದು ತನ್ನ ಬೆನ್ನ ಮೇಲೆ ಏರುವುದೊಂದೇ ತಡ, ಅವನನ್ನು ಖೇಚರ ಲೋಕಕ್ಕೆ ಹೊತ್ತೊಯ್ಯಲು ಆತ ಈ ಉಪಾಯ ಮಾಡಿದ್ದ. ಆ ಕುದುರೆಯು ಊರಿನಲ್ಲೆಲ್ಲ ಉಪಟಳವನ್ನುಂಟು ಮಾಡಿತು. ರಾಜನಿಗೆ ಕುದುರೆ ಹಾವಳಿಯ ಸುದ್ದಿ ತಿಳಿಯಿತು. ಕುದುರೆಯನ್ನು ನೋಡಿದ ತಕ್ಷಣ ಅದನ್ನು ಸವಾರಿ ಮಾಡಲು ಮುಂದಾಗಿ ಅದನ್ನು ಲಾಯದೊಳಕ್ಕೆ ಹಾಕಿಸಿದನು.

ಅಷ್ಟೊತ್ತಿಗೆ ಅಲ್ಲಿಗೆ ಒಬ್ಬ ಬೇಡನು ಬಂದು 'ದೇವಾ ನಮ್ಮ ವನದೊಳಗೆ ಒಂದು ಭದ್ರವಾದ ಆನೆಯಿದೆ' ಎಂದು ತಿಳಿಸಿದನು. ಆನೆಯನ್ನು ನೋಡಲು ಜನಕನು ಕಾಡಿಗೆ ತೆರಳಿದನು. ಅದಕ್ಕಾಗಿ ಆತ ಕೃತಕ ಕುದುರೆಯ ಬೆನ್ನೇರಿ ನಡೆದ ಕುದುರೆ ಆಕಾಶಕ್ಕೆ ನೆಗೆದು ರಥನೂಪುರ ಚಕ್ರವಾಳಪುರವನ್ನು ತಲುಪಿತು. ಇಲ್ಲಿಗೆ ನಾಲ್ಕನೆಯ ಸಂಧಿ ಮುಗಿಯುತ್ತದೆ.

**ಪಂಚಮಾಶ್ವಾಸಂ :**

ಐದನೆಯ ಸಂಧಿ ಸೀತಾಸ್ವಯಂವರಕ್ಕೆ ಮೀಸಲಾಗಿದೆ. ಕೃತಕ ಕುದುರೆಯಾಗಿದ್ದ ಖೇಚರ ವಿದ್ಯಾಧರನು ನಿಜರೂಪ ತಾಳಿದನಲ್ಲದೆ ಜನಕರಾಜನನ್ನು ಕರೆತಂದಿರುವುದಾಗಿ ತಿಳಿಸುತ್ತಾನೆ. ಇಂದುಗತಿಯು ಜನಕನನ್ನು ಸ್ವಾಗತಿಸಿ ನಿನ್ನ ಮಗಳನ್ನು ನನ್ನ ಮಗನಿಗೆ ಲಗ್ನಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತಾನೆ. ಆದರೆ ಈಗಾಗಲೇ ನಾನು ಸೀತೆಯನ್ನು ರಾಮನಿಗೆ ಕೊಡುವುದಾಗಿ ಮಾತು ಕೊಟ್ಟಿದ್ದೇನೆ ಎನ್ನುತ್ತಾನೆ ಜನಕರಾಜ. ಖೇಚರರಿಗೆ ಮಗಳನ್ನು ಕೊಡುವುದು ಬಿಟ್ಟು ನರನಾದ ರಾಮನಿಗೆ ಕೊಡುವುದು ಉಚಿತವೆ? ಎಂದು ಇಂದುಗತಿ ಪ್ರಶ್ನಿಸುತ್ತಾನೆ. ಆ ರಾಮನಿಗೆ ಯಾವ ಕಾರಣಕ್ಕಾಗಿ ಸೀತೆಯನ್ನು ಕೊಟ್ಟೆ? ಎಂದು ಕೇಳುತ್ತಾನೆ. ಆಗ ಬೇಡಪಡೆಯಿಂದ ರಾಮನು ತನ್ನನ್ನು ರಕ್ಷಿಸಿದ ಕಾರಣವಾಗಿ ಅವನ ಪರಾಕ್ರಮಕ್ಕೆ ಮನಸೋತು ಹೀಗೆ ಮಾಡಿದ್ದೇನೆ ಎಂದು ಜನಕ

ತಿಳಿಸುತ್ತಾನೆ. ಆಗ ರಾಮಲಕ್ಷ್ಮಣರಿಗಿಂತ ಖೇಚರರಾದ ನಾವು ಶ್ರೇಷ್ಠರು ಎಂದು ಇಂದುಗತಿ ಕಡೆಯವರು ವಾದಿಸುತ್ತಾರೆ. ಜನಕನಿಗೆ ಸಿಟ್ಟು ಬರುತ್ತದೆ. ಮತ್ತೆ ರಾಮನ ಪರಾಕ್ರಮವನ್ನು ಸಮರ್ಥಿಸಿಕೊಳ್ಳುತ್ತಾನೆ. ಆಗ ಇಂದುಗತಿಯು, ರಾಮನು ನಿಜವಾಗಿ ಪರಾಕ್ರಮಿಯಾಗಿದ್ದರೆ ವಜ್ರಾವರ್ತವೆಂಬ ಈ ದೇವಲೋಕದ ಬಿಲ್ಲಿಗೆ ಹೆದೆಯೇರಿಸಲಿ ಎಂದು ಸವಾಲು ಹಾಕುತ್ತಾನೆ, ಹಾಗೆ ಮಾಡಿದರೆ ಮಾತ್ರ ರಾಮನಿಗೆ ಸೀತೆಯನ್ನು ಕೊಡುವುದು, ಇಲ್ಲದಿದ್ದರೆ ಪ್ರಭಾಮಂಡಲನಿಗೆ ಕೊಡುವುದು ಎಂಬ ಕರಾರು ಹಾಕಿಕೊಳ್ಳುತ್ತಾರೆ.

ನಡೆದ ಸಂಗತಿಯನ್ನು ಜನಕನು ವಿದೇಹಿಗೆ ತಿಳಿಸುತ್ತಾನೆ. ಇದ್ದ ಗಂಡುಮಗನನ್ನು ದೇವತೆಗಳು ಅಪಹರಿಸಿಕೊಂಡು ಹೋದರು. ಈಗ ಸೀತೆಯನ್ನು ಖೇಚರರಿಗೆ ಕೊಡುವುದು ಉಚಿತವೆ? ಎಂದು ಅವಳು ಪ್ರಶ್ನಿಸುತ್ತಾಳೆ. ರಾಮನು ಖಂಡಿತವಾಗಿ ಬಿಲ್ಲಿಗೆ ಹೆದಯೇರಿಸುತ್ತಾನೆ. ಅವನಿಗೇ ನಮ್ಮ ಮಗಳನ್ನು ಕೊಡೋಣ ಎಂದು ಜನಕನು ಸೀತೆಯನ್ನು ಸಮಾಧಾನಪಡಿಸುತ್ತಾನೆ.

ಊರ ಹೊರಗಿನ ಉದ್ಯಾನದಲ್ಲಿ ಸೀತೆಯ ಸ್ವಯಂವರ ಮಂಟಪ ನಿರ್ಮಾಣವಾಗುತ್ತದೆ. ನಾನಾ ದೇಶದ ರಾಜಕುಮಾರರೂ ಅದರಲ್ಲಿ ಭಾಗವಹಿಸಲು ಬಂದಿಳಿದರು. ಅನೇಕರು ಬಿಲ್ಲಿಗೆ ಹೆದೆ ಏರಿಸಲಾರದೆ ಅಪಮಾನಿತರಾದರು. ರಾಮ ಅದನ್ನು ಸುಲಭವಾಗಿ ಸಾಧಿಸಿ ತೋರಿಸಿದ. ಸೀತೆ ರಾಮನಿಗೆ ಸತಿಯಾದಳು. ಜೊತೆಗೆ ಸಾಗರಾವರ್ತವೆಂಬ ಬಿಲ್ಲಿಗೆ ಲಕ್ಷ್ಮಣ ಹೆದೆ ಏರಿಸಿದ. ಆಗ ಚಂದ್ರಧ್ವಜನು ತನ್ನ ೧೮ ಜನ ಕುಮಾರಿಯರನ್ನು ಲಕ್ಷ್ಮಣನಿಗೆ ಕೊಟ್ಟು ವಿವಾಹಮಾಡಿದನು.

**ಷಷ್ಠಾಶ್ವಾಸಂ :**

ಆರನೇ ಸಂಧಿ ವನ ಪ್ರವೇಶ ಪ್ರಸಂಗದೊಂದಿಗೆ ಆರಂಭವಾಗುತ್ತದೆ. ರಾಮಲಕ್ಷ್ಮಣರ ಹೆಚ್ಚಳವನ್ನು ಕಂಡು ಭರತನಿಗೆ ಅಸಮಾಧಾನ ಉಂಟಾಯಿತು. ಬೇಸರದಿಂದ ಅವನು ಕಾಡಿಗೆ ಹೊರಡಲನುವಾದ ವಿಷಯ ತಿಳಿದ ಕೈಕೆಯು ಮಗನನ್ನು ಸಮಾಧಾನಪಡಿಸುತ್ತಾಳೆ. ಪತಿ ದಶರಥನ ಬಳಿಗೆ ಹೋಗಿ ಭರತನ ದುಗುಡದ ಬಗ್ಗೆ ತಿಳಿಸುತ್ತಾಳೆ. ಅದರ ಪ್ರಕಾರ ಕನಕ ಮತ್ತು ಸುಪ್ರಭೆಯರ ಮಗಳಾದ ಕನಕಪ್ರಭೆಯನ್ನು ತಂದು ಭರತನಿಗೆ ಲಗ್ನಮಾಡಲಾಗುತ್ತದೆ.

ರಾಮಲಕ್ಷ್ಮಣರ ಹೆಚ್ಚಳದಿಂದ ಪ್ರಭಾಮಂಡಲನಿಗೆ ಅಪಮಾನವಾಯಿತು. ಅವನು ಸೀತೆಯ ಧ್ಯಾನದಲ್ಲೇ ನಿರತನಾದ. ಪ್ರಭಾಮಂಡಲನು ತನ್ನ ಅಪೇಕ್ಷೆಯನ್ನು ತನ್ನ ಸಹಚರನಾದ ವಸಂತಧ್ವಜನಿಗೆ ತಿಳಿಸಿದನು. ಸೀತೆಯ ಸುದ್ದಿಯನ್ನು ಮರೆತು ಬಿಡುವಂತೆ ವಸಂತಧ್ವಜ ತಿಳಿಸುತ್ತಾನೆ. ಆದರೆ ಹಟಕ್ಕೆ ಬಿದ್ದ ಪ್ರಭಾಮಂಡಲನು ರಾಮ-ಲಕ್ಷ್ಮಣರ ಮೇಲೆ ಆಕ್ರಮಣಮಾಡಲು ಸಿದ್ಧನಾಗುತ್ತಾನೆ. ವಿಷಯ ತಿಳಿದು ತಂದೆಯಾದ ಇಂದುಗತಿಯು ಸೀತೆಗಿಂತ ನೂರುಪಟ್ಟು ಚೆಲ್ವಿಕೆಯಿಂದ ಕೂಡಿರುವ ಕನ್ನೆಯನ್ನು ತಂದು ವಿವಾಹಮಾಡುವುದಾಗಿ ಪ್ರಭಾಮಂಡಲನಿಗೆ ತಿಳಿಸುತ್ತಾನೆ. ಅಷ್ಟೊತ್ತಿಗೆ ಪ್ರಭಾಮಂಡಲನಿಗೆ ಪೂರ್ವಭವದ ಸ್ಮರಣೆಯಾಗಿ ಸೀತೆಯನ್ನು ಒಡಹುಟ್ಟಿದವಳೆಂಬುದು ತಿಳಿದು ಬರುತ್ತದೆ. ತಂಗಿಯ ಮೇಲೆ ಮನಸ್ಸು ಮಾಡಿರುವ ತನ್ನ ತಪ್ಪಿಗೆ ಆತ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ. ಹಿಂದಿನ ಜನ್ಮದಲ್ಲಿ ನಡೆದ ಪ್ರಸಂಗವನ್ನು ಸೀತೆ ಮತ್ತು ತಾನು ಅಣ್ಣ ತಂಗಿಯರಾಗಿ ಹುಟ್ಟಿದ ಪ್ರಸಂಗವನ್ನು ಇಂದುಗತಿಗೆ ತಿಳಿಸುತ್ತಾನೆ. ಸೀತೆ-ಪ್ರಭಾಮಂಡಲರ ವಿವಾಹ ಮುರಿದು ಬಿದ್ದುದಕ್ಕೆ ಎಲ್ಲರೂ ಸಂತೋಷ ಪಡುತ್ತಾರೆ.

ಇಂದುಗತಿ ಪ್ರಭಾಮಂಡಲನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ತೆರಳುತ್ತಾನೆ. ಪ್ರಭಾಮಂಡಲನು ಸೀತೆಯನ್ನು ಕಾಣಲು ಹೋಗುತ್ತಾನೆ. ಎಲ್ಲರಿಗೂ ಆನಂದವುಂಟಾಗುತ್ತದೆ.

ದಶರಥನು ರಾಮನಿಗೆ ರಾಜ್ಯಭಾರವನ್ನು ಒಪ್ಪಿಸಿ ತಪಸ್ಸಿಗೆ ಹೊರಡುವ ನಿರ್ಧಾರವನ್ನು ಪ್ರಕಟಿಸುತ್ತಾನೆ. ಭರತನು ತಂದೆಯೊಂದಿಗೆ ಹೊರಟು ನಿಲ್ಲುತ್ತಾನೆ. ಒಬ್ಬ ದೂತನು ಕೈಕೆಯಿಗೆ ಈ ಸಂಗತಿಯನ್ನು ತಿಳಿಸುತ್ತಾನೆ. ದಶರಥನಲ್ಲಿಗೆ ಧಾವಿಸಿ ಬಂದ ಕೈಕೇಯಿ ರಾಮನಿಗೆ ಆತನು ಅಧಿಕಾರ ಒಪ್ಪಿಸಲಿರುವ ನಿರ್ಣಯವನ್ನು ಪ್ರಶ್ನಿಸುತ್ತಾಳೆ. ಭರತನು ಅರಸನೊಂದಿಗೆ ಕಾಡಿಗೆ ತೆರಳಿದರೆ ತನ್ನನ್ನು ನೋಡಿಕೊಳ್ಳುವವರು ಯಾರು ? ಎಂದು ಚಿಂತಿತಳಾಗುತ್ತಾಳೆ, ಇದ್ದಕ್ಕಿದ್ದಂತೆ ಅವಳಿಗೆ ದಶರಥನು ತನಗೆ ಕೊಡಬೇಕಾಗಿದ್ದ ವರಗಳ ನೆನಪು ಉಂಟಾಯಿತು, ರಾಜಸಭೆಗೆ ಬಂದು ದಶರಥನಲ್ಲಿ ತನ್ನ ಮನದಿಂಗಿತವನ್ನು ಪ್ರಕಟಿಸುತ್ತಾಳೆ. ಭರತನಿಗೆ ೧೪ ವರ್ಷ ರಾಜ್ಯವನ್ನು ಕೊಡಬೇಕು. ಆ ಅವಧಿಯಲ್ಲಿ ರಾಮನು ವನವಾಸಕ್ಕೆ ಹೋಗಬೇಕು. ಇವೇ ನೀನು ನೀಡಬೇಕಾಗಿರುವ ಎರಡು ವರಗಳು ಎಂದು ಕೈಕೇಯಿ ಕೇಳಿಕೊಳ್ಳುತ್ತಾಳೆ. ದಶರಥ ಧರ್ಮಸಂಕಟಕ್ಕೆ ಸಿಲುಕಿದ. ಅತ್ತ ತನಗಾಗಿ ತಾಯಿ ತಪ್ಪು ಮಾಡುತ್ತಿರುವಳಲ್ಲ ಎಂಬ ಚಿಂತೆ ಭರತನನ್ನು ಕಾಡತೊಡಗಿತು. ಸಭಾಸದರು ಕೈಕೇಯಿಯನ್ನು ನಿಂದಿಸಿದರು. ಇದನ್ನು ತಿಳಿದು ರಾಮನು ತಾನು ವನವಾಸಕ್ಕೆ ಹೊರಡುವುದಾಗಿ ತಿಳಿಸುತ್ತಾನೆ. ತಾನು ಹಾಗೆ ಮಾಡುವುದರಿಂದ ತಂದೆಯ ಸತ್ಯ ಉಳಿಯುತ್ತದೆ. ತಾಯಿಯಾದ ಕೈಕೇಯಿಯ ಇಷ್ಟ ಸಿದ್ಧಿಸುತ್ತದೆ. ತಮ್ಮ ರಾಜನಾಗುತ್ತಾನೆ ಎಂದು ರಾಮ ಹೇಳುತ್ತಾನೆ. ಭರತ ಇದಕ್ಕೆ ಒಪ್ಪುವುದಿಲ್ಲ. ಕೊನೆಗೆ ರಾಮ ಅವನನ್ನು ಒಪ್ಪಿಸುತ್ತಾನೆ. ಲಕ್ಷ್ಮಣನಿಗೆ ಈ ನಿರ್ಧಾರ ಸರಿ ಎನಿಸುವುದಿಲ್ಲ. ಆದರೂ ರಾಮ ಕಣ್ಸನ್ನೆ ಮಾತ್ರದಿಂದ ಅವನನ್ನು ಸುಮ್ಮನಾಗಿಸುತ್ತಾನೆ. ಪರಿಸ್ಥಿತಿಯ ಒತ್ತಡದಿಂದ ದಶರಥ ಮೂರ್ಛಿತನಾಗುತ್ತಾನೆ.

ರಾಮ-ಸೀತೆ-ಲಕ್ಷ್ಮಣರು ವನವಾಸಕ್ಕೆ ಹೊರಡಲು ಸಿದ್ಧರಾಗುತ್ತಾರೆ. ಇಲ್ಲಿಗೆ ಆರನೆಯ ಆಶ್ವಾಸ ಸಮಾಪ್ತಿಯಾಗುತ್ತದೆ.

**ಸಪ್ತಮಾಶ್ವಾಸಂ :**

ಏಳನೆಯ ಆಶ್ವಾಸವು ವರ್ಣನೆಗೆ ಮೀಸಲಾಗಿದೆ. ಕೈಕೇಯಿಯ ವರ್ತನೆಯಿಂದ ತನಗೊದಗಿದ ಸ್ಥಿತಿಯಿಂದ ಬೇಸತ್ತು ದಶರಥನು ದೀಕ್ಷೆ ಪಡೆಯುತ್ತಾನೆ. ಭರತ ರಾಜನಾಗುತ್ತಾನೆ. ಅತ್ತ ಕೈಕೇಯಿಗೂ ತನ್ನ ತಪ್ಪಿನ ಅರಿವಾಗುತ್ತದೆ. ಮಗನಾದ ಭರತನಲ್ಲಿ ಕ್ಷಮೆ ಯಾಚಿಸಿದ್ದಲ್ಲದೆ ರಾಮ-ಸೀತೆಯನ್ನು ತಡೆದು ನಿಲ್ಲಿಸುವಂತೆ ತಿಳಿಸಿದಳು. ತಾಯಿಯ ಮಾತಿನಂತೆ ಭರತ ರಾಮನನ್ನು ಹುಡುಕಿಕೊಂಡು ಹೊರಟ. ಕೈಕೇಯಿಯೂ ಅವನನ್ನು ಹಿಂಬಾಲಿಸಿದಳು. ಭರತ ರಾಮನಲ್ಲಿ ಕ್ಷಮೆ ಯಾಚಿಸಿ ರಾಜ್ಯಕ್ಕೆ ಮರಳಿ ಬರುವಂತೆ ವಿನಂತಿಸಿಕೊಳ್ಳುತ್ತಾನೆ. ತಿರುಗಿ ಬರುವಂತೆ ಕೈಕೇಯಿ ರಾಮನನ್ನು ಕೇಳಿಕೊಳ್ಳುತ್ತಾಳೆ. ರಾಮ ಅದಕ್ಕೆ ಒಪ್ಪುವುದಿಲ್ಲ. ಭರತನಿಗೆ ಬುದ್ಧಿವಾದ ಹೇಳಿ ತಿರುಗಿ ಕಳಿಸುತ್ತಾನೆ. ಭರತ ಅಯೋಧ್ಯೆಯ ದೊರೆಯಾಗುತ್ತಾನೆ. ರಾಮ-ಸೀತೆಯರ ವನವಾಸ ಪ್ರಯಾಣ ಮುಂದುವರೆಯುತ್ತದೆ.

**ಅಷ್ಟಮಾಶ್ವಾಸಂ :**

ಎಂಟನೆಯ ಆಶ್ವಾಸದಲ್ಲಿ ರಾಮ ಜಿನಮಂದಿರಗಳ ದರ್ಶನ ಪಡೆಯುತ್ತ ತನಗೆ ಅಡ್ಡ ಬಂದ ದೊರೆಗಳನ್ನು ಸೋಲಿಸುತ್ತ ವನವಾಸವನ್ನು ಮುಂದುವರೆಸಿದುದರ ಸೂಚನೆಯಿದೆ.

**ನವಮಾಶ್ವಾಸಂ :**

ಒಂಬತ್ತನೆಯ ಆಶ್ವಾಸ ಸೀತಾಪಹರಣದ ಮುಖ್ಯ ಸಂಗತಿಯನ್ನೊಳಗೊಂಡಿದೆ. ರಾಮ-ಸೀತೆಯರು ದಂಡಕಾರಣ್ಯವನ್ನು ಪ್ರವೇಶಿಸುತ್ತಾರೆ. ಅಲ್ಲಿದ್ದ ಕ್ರೌಂಚನದಿಯ ದಡದಲ್ಲಿ ವಿಶ್ರಾಂತಿ ಪಡೆಯುತ್ತಾರೆ.

ಪಕ್ಕದಲ್ಲಿ ಪಾತಳಲಂಕೆಯೆಂಬ ಪಟ್ಟಣ. ಖರನೆಂಬುವನು ಅದರ ಒಡೆಯ. ಅವನ ಹೆಂಡತಿ ರಾವಣನ ತಂಗಿಯಾದ ಚಂದ್ರನಖಿ. ಅವರಿಗೆ ಶಂಭುಕ ಮತ್ತು ಸೌಂದರ ಎಂಬ ಇಬ್ಬರು ಮಕ್ಕಳು. ಶಂಭುಕನು ಸೂರ್ಯ ಹಾಸಾಸಿ ಎಂಬ ಖಡ್ಗ ಪ್ರಾಪ್ತಿಗಾಗಿ ೧೨ ವರ್ಷಗಳಿಂದ ಉಗ್ರತಪಸ್ಸಿನಲ್ಲಿ ತೊಡಗಿರುತ್ತಾನೆ. ಯಕ್ಷರು ಆ ಖಡ್ಗವನ್ನು ತಂದು ಶಂಭುಕನು ತಪಸ್ಸಿಗೆ ಕುಳಿತಿದ್ದ ಬಿದಿರ ಮೆಳೆಯ ಪಕ್ಕದಲ್ಲಿಟ್ಟು ಹೋಗುತ್ತಾರೆ. ವಿಹಾರಕ್ಕಾಗಿ ಬಂದ ಲಕ್ಷ್ಮಣ ಆ ಖಡ್ಗವನ್ನು ನೋಡುತ್ತಾನೆ. ಖಡ್ಗದ ಹರಿತವನ್ನು ನೋಡಲು ಲಕ್ಷ್ಮಣನು ಪಕ್ಕದಲ್ಲಿದ್ದ ಬಿದಿರ ಮೆಳೆಯನ್ನು ಕತ್ತರಿಸುತ್ತಾನೆ. ಇದರಿಂದ ಲಕ್ಷ್ಮಣನಿಗೆ ತಿಳಿಯಲಾರದೆ ಒಳಗಿದ್ದ ಶಂಭುಕನ ಶಿರ ಹರಿದು ಬೀಳುತ್ತದೆ. ನಿರಪರಾಧಿಯನ್ನು ಕೊಂದೆನೆಂದು ಮನದಲ್ಲಿ ಮರುಗಿದ ಲಕ್ಷ್ಮಣನು ನಡೆದ ಪ್ರಸಂಗವನ್ನು ಅಣ್ಣನಿಗೆ ತಿಳಿಸುತ್ತಾನೆ.

ಅತ್ತ ತನ್ನ ಮಗನನ್ನು ಯಾರೋ ಕೊಂದಿದ್ದಾರೆಂಬ ಸಂಗತಿ ಚಂದ್ರನಖಿಗೆ ತಿಳಿಯುತ್ತದೆ. ಲಕ್ಷ್ಮಣನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡುತ್ತಾಳೆ. ಆದರೆ ರಾಮ-ಲಕ್ಷ್ಮಣರನ್ನು ನೋಡಿದ ಕೂಡಲೇ ತಾನು ಮಾಡಿದ ಪ್ರತಿಜ್ಞೆಯನ್ನು ಮರೆತು, ಅವರ ರೂಪಕ್ಕೆ ಮನಸೋಲುತ್ತಾಳೆ. ಇಬ್ಬರಲ್ಲಿ ಒಬ್ಬರು ತನ್ನನ್ನು ಗಂಧರ್ವವಿವಾಹ ಮಾಡಿಕೊಳ್ಳುವಂತೆ ಕೇಳಿಕೊಳ್ಳುತ್ತಾಳೆ. ಅವರು ಅದಕ್ಕೆ ಒಪ್ಪುವುದಿಲ್ಲ. ಚಂದ್ರನಖಿ ರೊಚ್ಚಿಗೇಳುತ್ತಾಳೆ. ಅರಮನೆಗೆ ತೆರಳಿ ತನ್ನ ಪತಿ ಖರನಿಗೆ ಇದೆಲ್ಲವನ್ನು ತಿಳಿಸುತ್ತಾಳೆ. ರಾಮ-ಲಕ್ಷ್ಮಣರು ತನಗೆ ಅವಮಾನಮಾಡಿದರೆಂದು ದೂರು ಸಲ್ಲಿಸಿದಳು. ಖರನು ರಾಮಲಕ್ಷ್ಮಣರ ಮೇಲೆ ಎರಗುತ್ತಾನೆ. ಭಯಂಕರ ಯುದ್ಧ ನಡೆಯುತ್ತದೆ. ಲಕ್ಷ್ಮಣ ಅವನನ್ನು ಅಟ್ಟಿಕೊಂಡು ಹೋಗುತ್ತಾನೆ. ಹೋಗುವ ಮುನ್ನ "ಸೀತೆಯನ್ನು ಬಿಟ್ಟು ಅಗಲದಂತೆಯೂ ಹಾಗೇನಾದರು ಯುದ್ಧದಲ್ಲಿ ನನಗೆ ತೊಂದರೆಯೆನ್ನಿಸಿದರೆ ನಾನು ಸಿಂಹನಾದವನ್ನು ಮಾಡುತ್ತೇನೆ. ಆಗ ನೀವು ಬರಬೇಕು"ಎಂದು ಎಂದು ತಿಳಿಸಿ ಲಕ್ಷ್ಮಣನು ರಾಮನಿಗ ತಿಳಿಸಿ ಯುದ್ಧಕ್ಕೆ ಹೋಗುತ್ತಾನೆ.

ಖರ-ದೂಷಣರು ಯುದ್ಧಕ್ಕಾಗಿ ರಾವಣನ ನೆರವು ಕೋರುತ್ತಾರೆ. ಶಂಭುಕನ ಸಾವಿಗಾಗಿ ದುಃಖಿಸಿದ ರಾವಣನು ರಾಮ-ಲಕ್ಷ್ಮಣರೊಂದಿಗೆ ಯುದ್ಧ ಮಾಡಲು ತೆರಳುತ್ತಾನೆ. ಪುಷ್ಪಕ ವಿಮಾನದಲ್ಲಿ ಹೊರಟಿದ್ದ ರಾವಣನು ರಾಮನೊಂದಿಗೆ ಇದ್ದ ಸೀತೆಯನ್ನು ನೋಡುತ್ತಾನೆ. ನೋಡುತ್ತಿದ್ದಂತೆಯೇ ಅವಳ ಸೌಂದರ್ಯಕ್ಕೆ ಮಾರುಹೋಗುತ್ತಾನೆ. ಅವನ ಚಿತ್ತವು ಪದ್ಮ ಪತ್ರದ ಜಲಬಿಂದುವಿನಂತೆ ಚಲಿತವಾಗುತ್ತದೆ. ಅವಲೋಕಿನೀ ವಿದ್ಯೆಯನ್ನು ಆಮಂತ್ರಿಸಿ ರಾಮ-ಸೀತೆಯರ ವಿವರಗಳನ್ನು ತಿಳಿದುಕೊಳ್ಳುತ್ತಾನೆ. ಅಲ್ಲದೆ ರಾಮನಿಂದ ಸೀತೆಯನ್ನು ಅಗಲಿಸಿ, ತಾನು ಪಡೆದುಕೊಳ್ಳುವ ಉಪಾಯವೇನೆಂದು ಅವಲೋಕಿನೀ ವಿದ್ಯೆಯನ್ನು ಕೇಳುತ್ತಾನೆ. ಆ ದೇವತೆಯು ರಾವಣನಿಗ ಬುದ್ಧಿವಾದ ಹೇಳುತ್ತಾನೆ. ಆದರೆ ರಾವಣ ಅದನ್ನು ಕಿವಿಗ ಹಾಕಿಕೊಳ್ಳುವುದಿಲ್ಲ. ಸಿಂಹನಾದವನ್ನು ಹೊರಡಿಸಿದರೆ ರಾಮನು ಲಕ್ಷ್ಮಣನ ನೆರವಿಗಾಗಿ ಹೋಗುತ್ತಾನೆ. ಆಗ ಸೀತೆ

ಏಕಾಂಗಿಯಾಗುತ್ತಾಳೆ. ನೀನು ಅವಳನ್ನು ಅಪಹರಿಸಬಹುದೆಂದು ಅವಲೋಕಿನಿ ವಿದ್ಯೆ ತಿಳಿಸುತ್ತದೆ. ಅದರ ಪ್ರಕಾರ ರಾವಣನು ಸಿಂಹನಾದವನ್ನು ಹೊರಡಿಸುತ್ತಾನೆ. ತಮ್ಮನಿಗೆ ಏನು ತೊಂದರೆಯಾಗಿದೆಯೋ ಎಂಬ ದುಗುಡದಿಂದ ರಾಮನು ಲಕ್ಷ್ಮಣನ ನೆರವಿಗೆ ಧಾವಿಸುತ್ತಾನೆ. ಇತ್ತ ರಾವಣ ಸೀತೆಯ ಬಳಿಗೆ ಬಂದು ಅವಳನ್ನು ಅಪಹರಿಸಿಕೊಂಡು ಲಂಕೆಗೆ ಹೋಗುತ್ತಾನೆ. ಆಗ ರಾಮನ ಆಜ್ಞೆಯಂತೆ ಸೀತೆಯ ರಕ್ಷಣೆಗಾಗಿ ನೇಮಿಸಲಾಗಿದ್ದ ಜಟಾಯು ರಾವಣನಿಗೆ ಅಡ್ಡಬರುತ್ತದೆ. ರಾವಣ ಜಟಾಯುವಿನ ರೆಕ್ಕೆಗಳನ್ನು ಕತ್ತರಿಸಿ ಹಾಕಿದ. ಸೀತೆ ಶೋಕಿಸುತ್ತಾಳೆ. ರಕ್ಷಣೆಗಾಗಿ ಹಂಬಲಿಸುತ್ತಾಳೆ.

ರಾಮನನ್ನು ಕಂಡ ಲಕ್ಷ್ಮಣ 'ಅಣ್ಣಾ ಸೀತಾದೇವಿಯನ್ನು ಬಿಟ್ಟು ಏಕೆ ಬಂದಿರಿ ?' ಎಂದು ಕೇಳುತ್ತಾನೆ. ಆಗ ನಿನ್ನ ಸಿಂಹನಾದವನ್ನು ಕೇಳಿ ಬಂದಿದ್ದೇನೆ ಎನ್ನುತ್ತಾನೆ ರಾಮ. ಇದರಲ್ಲಿ ಏನೋ ಮೋಸವಿದೆ ತಕ್ಷಣ ಸೀತಾಮಾತೆಯ ರಕ್ಷಣೆಗೆ ಧಾವಿಸಿ ಎಂದು ಲಕ್ಷ್ಮಣನು ತಿಳಿಸುತ್ತಾನೆ. ರಾಮಚಂದ್ರನು ಮರಳಿ ಬರುವಷ್ಟರಲ್ಲಿ ಅನಾಹುತ ಜರುಗಿ ಹೋಗಿದೆ. ಜಟಾಯುವಿನಿಂದ ವಿವರಗಳು ತಿಳಿದವು. ಸೀತೆಯನ್ನು ಹುಡುಕುತ್ತ ರಾಮ ಕಾಡಿನಲ್ಲಿ ಹೊರಟ. ಅತ್ತ ಖರನನ್ನು ಕೊಂದ ಲಕ್ಷ್ಮಣನು ತಾನು ಸೀತಾಮಾತೆಯ ರಕ್ಷಣೆಗೆ ಧಾವಿಸುತ್ತಾನೆ. ವಿರಾಧಿತನು ತನ್ನ ಸೈನ್ಯದೊಂದಿಗೆ ರಾಮಲಕ್ಷ್ಮಣರ ಬೆಂಗಾವಲಿಗೆ ನಿಂತನು. ದಂಡಕಾರಣ್ಯದಲ್ಲಿ ಸೀತೆಯ ಸುಳಿವಿಲ್ಲ. ಅವರು ಹುಡುಕುತ್ತ ಹೊರಟರು. ಸೀತೆಯ ಆರ್ತನಾದವನ್ನು ಕೇಳಿದ ರತ್ನಜಟಿ ರಾವಣನನ್ನು ತಡೆಯಲು ಹೋದ. ಅವನನ್ನು ಸೋಲಿಸಿದ ರಾವಣ ಲಂಕೆಯತ್ತ ಸಾಗಿದ. ಸೀತೆಯನ್ನು ತನ್ನ ಗೀರ್ವಾಣರಮಣ ಎಂಬ ಉದ್ಯಾನದಲ್ಲಿ ತಂದಿರಿಸಿದ.

ಗಂಡನಾದ ಖರ ಮತ್ತು ಮೈದುನನಾದ ದೂಷಣರ ಮರಣದ ಸಂಗತಿಯಿಂದ ಚಂದ್ರನಖಿ ದುಃಖಿತೆಯಾದಳು. ಅವಳು ಅಣ್ಣ ರಾವಣನಲ್ಲಿಗೆ ಬಂದಳು. ರಾವಣ ಅವಳನ್ನು ಸಂತೈಸಿದ. ಖರ-ದೂಷಣರನ್ನು ಕೊಂದವರನ್ನು ತಾನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದ. ಸೀತೆಯನ್ನು ಒಲಿಸುವ ಪ್ರಯತ್ನದಲ್ಲಿ ತೊಡಗಿದ. ಪತಿಯ ದುಗುಡವನ್ನು ಅರ್ಥಮಾಡಿಕೊಂಡ ಮಂಡೋದರಿ ತಾನೇ ಮುಂದಾಗಿ ಸೀತೆಯನ್ನು ಒಪ್ಪಿಸಲು ಹೊರಡುತ್ತಾಳೆ. ಸೀತೆ ಅದನ್ನು ಒಪ್ಪುವುದಿಲ್ಲ. ತಿರುಗಿ ಮಂಡೋದರಿಯನ್ನೆ ಅಪಮಾನಿಸಿ ಕಳಿಸುತ್ತಾಳೆ. ಸೀತೆಯಾವ ನಯಕ್ಕೂ ಜಗ್ಗುವುದಿಲ್ಲ. ಕೊನೆಗೆ ಭಯವನ್ನು ಉಂಟುಮಾಡಿಯಾದರೂ ರಾವಣನು ಅವಳನ್ನು ಪಡೆಯಲು ಪ್ರಯತ್ನಿಸಿದ.

ಸುಗ್ರೀವನು ರಾಮ-ಲಕ್ಷ್ಮಣರ ನೆರವಿಗೆ ಬರುತ್ತಾನೆ. ರತ್ನಜಟಿಯ ಮೂಲಕ ಎಲ್ಲ ವಿವರಗಳು ರಾಮ-ಲಕ್ಷ್ಮಣ ಸುಗ್ರೀವರಿಗೆ ತಿಳಿಯುತ್ತವೆ. ಜಾಂಬವಂತನಿಂದ ರಾಮನು ರಾವಣನ ವಂಶ ವೃತ್ತಾಂತವನ್ನು ಕೇಳಿ ತಿಳಿದುಕೊಳ್ಳುತ್ತಾನೆ.

**ದಶಮ – ಏಕಾದಶಾಶ್ವಾಸಂ :**

೧೧ನೆಯ ಆಶ್ವಾಸವು ಲಂಕಾಪುರದಹನ ಪ್ರಸಂಗವನ್ನು ಒಳಗೊಂಡಿದೆ. ರಾಮ-ಲಕ್ಷ್ಮಣ ಜಾಂಬವಂತ ಮೊದಲಾದವರು ಸೇರಿ ರಾವಣನನ್ನು ಎದುರಿಸುವ ರೀತಿಯ ಬಗ್ಗೆ ಚರ್ಚಿಸುತ್ತಾರೆ. ರಾಮನು ರಾವಣನನ್ನು ಸದೆಬಡಿವುದಾಗಿ ಘೋಷಿಸುತ್ತಾನೆ. ರಾವಣನ ಅಜೇಯತ್ವದ ಬಗ್ಗೆ ತಿಳಿದುಕೊಂಡಿದ್ದ ಜಾಂಬವಂತನು ಆ ವೃತ್ತಾಂತವನ್ನು ರಾಮನಿಗೆ ತಿಳಿಸುತ್ತಾನೆ. ಒಂದೊಮ್ಮೆ ತನಗೆ ಬೇರೆಯವರಿಂದ ಮರಣವುಂಟೇ? ಎಂಬುದಾಗಿ ರಾವಣನು ಅನಂತವೀರ್ಯ ಕೇವಲಿಗಳಲ್ಲಿ

ಪ್ರಶ್ನಿಸಿದಾಗ ನಿನಗೆ ಸಿದ್ದಶೈಲವನ್ನು ಎತ್ತಿದವನಿಂದ ಮರಣವಿದೆ ಎಂದು ತಿಳಿಸಿದುದು ತನಗೆ ನೆನಪಿದೆಯೆಂದು ಜಾಂಬವಂತ ತಿಳಿಸುತ್ತಾನೆ. ಸಿದ್ಧಶೈಲವನ್ನು ಎತ್ತುವ ಪರಾಕ್ರಮಿ ಯಾರೂ ಇಲ್ಲದ ಕಾರಣ ತನಗೆ ಮರಣವೇ ಇಲ್ಲವೆಂದು ಭಾವಿಸಿದ ರಾವಣ ಈಗ ನಿಶ್ಚಿಂತೆಯಿಂದ ಬದುಕುತ್ತಿದ್ದಾನೆಂದು ಜಾಂಬವಂತ ತಿಳಿಸಿದ. ಆಗ ಲಕ್ಷ್ಮಣನು ಸಿದ್ಧಶೈಲಿಯನ್ನು ಎತ್ತುತ್ತುರುವುದಾಗಿ ಹಾಗೂ ತರುವಾಯ ರಾವಣನನ್ನು ಕೊಲ್ಲುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಅದರ ಪ್ರಕಾರ ಲಕ್ಷ್ಮಣ ಸಿದ್ದಪರ್ವತವನ್ನು ಎತ್ತಿ ತೋರಿಸುತ್ತಾನೆ. ಯುದ್ಧಕ್ಕೆ ತೊಡಗುವ ಮೊದಲು ಸೀತೆಯನ್ನು ಬಿಟ್ಟುಕೊಂಡುವಂತೆ ರಾವಣನಿಗೆ ವಿಭೀಷಣನಿಂದ ಬುದ್ಧಿ ಹೇಳಿಸುವ ಪ್ರಯತ್ನ ಮಾಡುವುದು ಉಚಿತವೆಂದು ಜಾಂಬವಂತ ತಿಳಿಸುತ್ತಾನೆ. ಆಚಾರವಂತನಾದ ವಿಭೀಷಣ ನಮಗೆ ಅನುಕೂಲಮಾಡಿ ಕೊಡಬಲ್ಲನೆಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾನೆ. ತಮ್ಮನಾದ ವಿಭೀಷಣನ ಮಾತಿಗೆ ರಾವಣನು ಬೆಲೆ ಕೊಡುತ್ತಾನೆಂಬ ನಂಬಿಕೆ ಜಾಂಬವಂತನದು. ಕಾರಣ ಈ ಉದ್ದೇಶಕ್ಕಾಗಿ ದೂತನನ್ನಾಗಿ ಆಂಜನೇಯನನ್ನು ಕಳಿಸಲು ನಿರ್ಧರಿಸಲಾಯಿತು. ಹನುಮಂತನೊಂದಿಗೆ ರಾಮನು ತನ್ನ ಕುರುಹಾದ ರವಿಮಂಡಲವೆಂಬ ಆಭರಣವನ್ನು ಕಳಿಸಿದನಲ್ಲದೆ ಪ್ರತಿಯಾಗಿ ಸೀತೆಯ ಚೂಡಾಮಣಿಯನ್ನು ತಂದು ಒಪ್ಪಿಸುವಂತೆ ತಿಳಿಸಿದನು.

ಹನುಮಂತನು ಆಕಾಶಮಾರ್ಗವಾಗಿ ಲಂಕಾಪುರವನ್ನು ತಲುಪಿದನು. ಊರ ಹೊರವಲಯದಲ್ಲಿ ಬೀಡುಬಿಟ್ಟ ಹನುಮಂತನು ವಿಭೀಷಣನಿಂದ ನಿರ್ಮಿತವಾದ ಲಂಕೆಯ ಕೋಟೆಯನ್ನು ಧ್ವಂಸಗೊಳಿಸಿದನು. ತರುವಾಯ ವಿಭೀಷಣನನ್ನು ಕಂಡು ರಾವಣನಿಗೆ ನೀನಾದರೂ ಬುದ್ಧಿ ಹೇಳಬಾರದೆ ಎಂದು ವಿಚಾರಿಸಿದನು. ತನ್ನ ಉಪದೇಶದ ಮಾತುಗಳನ್ನು ಕೇಳಲಾರದೆ ರಾವಣನು ಈ ತಪ್ಪು ಮಾಡುತ್ತಿದ್ದಾನೆ ಎಂದು ವಿಭೀಷಣನು ತಿಳಿಸುತ್ತಾನೆ. ಅದನ್ನು ತಿಳಿದ ಹನುಮಂತನು ಅದೃಶ್ಯನಾಗಿ ಸೀತಾದೇವಿ ಇದ್ದ ವನವನ್ನು ಪ್ರವೇಶಿದನು. ಮಂಡೋದರಿ ಸಹಿತ ಹಲವು ಜನ ರಾಕ್ಷಸ ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟಿದ್ದ ಸೀತೆಯನ್ನು ಕಂಡನು. ಜಾನಕಿಯ ಹೊರತಾಗಿ ಬೇರೆಯಾರಿಗೂ ಕಾಣದಂತೆ ಹನುಮಂತನು ಸೀತೆಯನ್ನು ಕಂಡು ರಾಮನು ಕಳಿಸಿದ ಮುದ್ರೆಯುಂಗುರವನ್ನು ಒಪ್ಪಿಸಿದನು. ಚಕಿತಳಾದ ಸೀತೆ ಹನುಮಂತನ ವೃತ್ತಾಂತವನ್ನು ಕೇಳಿ ತಿಳಿದುಕೊಳ್ಳುತ್ತಾಳೆ. ಶುಭವಾರ್ತೆಯನ್ನು ತಂದ ಅವನನ್ನು ತನ್ನ ಸಹೋದರನೆಂದು ಭಾವಿಸುತ್ತಾಳೆ. ಹನುಮಂತನು ತನ್ನ ನಿಜರೂಪ ಧಾರಣೆ ಮಾಡುತ್ತಾನೆ. ತಾನು ಹೊತ್ತು ತಂದ ಸಂದೇಶವನ್ನು ಸೀತೆಗೆ ಅರುಹುತ್ತಾನೆ. ಸುಗ್ರೀವನಿಗೂ ತನಗೂ ವೈರಿಯಾಗಿದ್ದ ಮಾಯಾಸುಗ್ರೀವನನ್ನು ರಾಮನು ಕೊಂದುಹಾಕಿ ನಮಗೆ ಉಪಕಾರ ಮಾಡಿದ. ಅದರ ಋಣವನ್ನು ತೀರಿಸುವುದಕ್ಕಾಗಿ ನಾನೀಗ ರಾಮದೂತನಾಗಿ ನಿಮ್ಮ ಬಳಿಗೆ ಬಂದಿದ್ದೇನೆ ಎಂದು ಹನುಮಂತ ತಿಳಿಸಿದ. ತನ್ನೊಂದಿಗೆ ರಾಮನಲ್ಲಿಗೆ ಬರಬೇಕೆಂದು ಹನುಮಂತನು ಸೀತೆಯನ್ನು ವಿನಂತಿಸಿಕೊಳ್ಳುತ್ತಾನೆ. ಆಗ ರಾಮನ ಆಜ್ಞೆ ಇಲ್ಲದೆ ತಾನು ಬರಲಾಗದು ಎಂದು ಸೀತೆ ಹೇಳುತ್ತಾಳೆ. ಸೀತೆಯಿಂದ ಚೂಡಾಮಣಿಯನ್ನು ಪಡೆದುಕೊಂಡ ಹನುಮಂತ ಸೀತೆಯನ್ನು ಬಿಟ್ಟುಹೋಗಿ ರಾಮನಿಗೆ ಮುಖ ತೋರಿಸುವುದು ಹೇಗೆ? ಎಂದು ಚಿಂತಿಸಿದ. ಕನಿಷ್ಠ ಪಕ್ಷ ನಾನು ಬಂದ ಸುದ್ದಿ ರಾವಣನಿಗಾದರೂ ಗೊತ್ತಾಗಲಿ ಎಂದು ಭಾವಿಸಿ ಲಂಕೆಯನ್ನು ನಾಶಗೊಳಿಸಲು ಸಿದ್ಧನಾದ. ಅತ್ತ ಮಂಡೋದರಿಯ ಮೂಲಕ ವಿಷಯ ತಿಳಿದ ರಾವಣನು ಹನುಮಂತನನ್ನು ಕೊಲ್ಲುವಂತೆ ತಿಳಿಸಿ ತನ್ನ ಸೈನಿಕರನ್ನು ಕಳುಹಿಸಿದನು.

ಹನುಮಂತ ಅವರೆಲ್ಲರನ್ನೂ ತರಿದು ಹಾಕಿದ. ಉಪಾಯದಿಂದ ಲಂಕಾದಹನ ಮಾಡಿದ. ಅಲ್ಲಿಂದ ಕಿಷ್ಕಿಂದ ಪುರಕ್ಕೆ ಬಂದು, ರಾಮನ ಸಭೆಗೆ ಬಂದನು. ತನ್ನನ್ನು ಬಿಡಿಸಿಕೊಂಡು ಹೋಗಲು ರಾಮನ ಬರವಿಗಾಗಿ ಸೀತೆ ಕಾಯುತ್ತಿರುವುದನ್ನು ಹನುಮಂತ ರಾಮನಿಗೆ ತಿಳಿಸುತ್ತಾನೆ. ರಾಮಚಂದ್ರನು ದಿಗ್ವಿಜಯದ ಸಿದ್ಧತೆಗೆ ತೊಡಗಿದನು.

**ದ್ವಾದಶಾಶ್ವಾಸಂ** : ಈ ಭಾಗವು ಲಂಕೆಯ ಮೇಲೆ ರಾಮನು ಕೈಕೊಂಡ ದಿಗ್ವಿಜಯದ ವರ್ಣನೆಯಿಂದ ಕೂಡಿದೆ. ಪುರೋಹಿತನು ದಿಗ್ವಿಜಯ ಮುಹೂರ್ತವು ಸನ್ನಿಹಿತವಾದುದನ್ನು ರಾಮನ ಓಲಗದಲ್ಲಿ ಪ್ರಕಟಿಸುತ್ತಾನೆ. ವಿಜಯಯಾತ್ರೆಯ ಭೇರಿನಾದವು ಮೊಳಗುತ್ತದೆ. ರಾಮನು ರಥವನ್ನೇರಿದನು. ರಾಮನ ಸೈನ್ಯ ಲಂಕೆಯನ್ನು ತಲುಪಿತು. ಈ ವಿಷಯ ಲಂಕಾಧಿಪತಿಗೆ ತಿಳಿಯಿತು.

**ತ್ರಯೋದಶಾಶ್ವಾಸಂ** : ಇದು ರಾಮ ಲಕ್ಷ್ಮಣರ ಪುಣ್ಯ ಪ್ರಭಾವದ ವರ್ಣನೆಗೆ ಮೀಸಲಾಗಿದೆ. ರಾವಣನು ವಿಜಯಭೇರಿಯನ್ನು ಮೊಳಗಿಸಿದನು. ರಾವಣನ ಬೆಂಬಲಕ್ಕೆ ಹಲವಾರು ಜನ ವಿದ್ಯಾಧರ ಚಕ್ರವರ್ತಿಗಳು ಬಂದು ನಿಂತರು. ಒಂದೆಡೆ ೩೪,೦೦೦ (ಮೂವತ್ನಾಲ್ಕು ಸಾವಿರ) ಅಕ್ಷೋಹಿಣಿ ಸೈನ್ಯದೊಂದಿಗೆ ರಾವಣ, ಇನ್ನೊಂದೆಡೆ ಒಂದು ಸಾವಿರ ಅಕ್ಷೋಹಿಣಿ ಸೈನ್ಯದೊಡನೆ ಪ್ರಭಾಮಂಡಲ ಮತ್ತು ಸುಗ್ರೀವರೊಂದಿಗೆ ಇರುವ ರಾಮ, ಹೀಗೆ ಎರಡೂ ಪಡೆಗಳು ಕಾಳಗಕ್ಕೆ ಸಿದ್ಧವಾದವು. ರಾವಣನ ಕಡೆ ವಿದ್ಯಾಧರ ಬಲ, ರಾಮನ ಕಡೆ ವಾನರರ ಬಲ, ಎರಡೂ ಪಡೆಗಳು ವ್ಯೂಹ ಪ್ರತಿವ್ಯೂಹಗಳನ್ನು ರಚಿಸಿಕೊಂಡು ಯುದ್ಧ ಮಾಡಿದವು.

**ಚತುರ್ದಶಾಶ್ವಾಸಂ** : ಈ ಭಾಗವು ರಘುವೀರನ ವಿಜಯದ ವರ್ಣನೆಯಾಗಿದೆ. ರಾಮ-ರಾವಣರು ಒಬ್ಬರನ್ನೊಬ್ಬರು ನೇರವಾಗಿ ಎದುರಿಸುತ್ತಾರೆ. ತನ್ನನ್ನು ಬಿಟ್ಟು ರಾಮಣ ಬೆಂಬಲಕ್ಕೆ ನಿಂತ ಸಹೋದರ ವಿಭೀಷಣನ ಮೇಲೆ ರಾವಣನು ಕಿಡಿಕಾರುತ್ತಾನೆ. ಅಣ್ಣ-ತಮ್ಮಂದಿರಲ್ಲಿ ಕದನ ನಡೆಯುತ್ತದೆ. ಲಕ್ಷ್ಮಣನು ಮಧ್ಯಪ್ರವೇಶಿಸಿ ರಾವಣನನ್ನು ಎದುರಿಸುತ್ತಾನೆ. ಯುದ್ಧದಲ್ಲಿ ಲಕ್ಷ್ಮಣ ಮೂರ್ಛಿತನಾಗುತ್ತಾನೆ. ಆಗ ತಮ್ಮನ ಸ್ಥಿತಿಯನ್ನು ಕಂಡ ರಾಮ ಕೋಪಾವಿಷ್ಟನಾಗಿ ರಾವಣನೊಂದಿಗೆ ಕಾದಾಟಕ್ಕೆ ಇಳಿಯುತ್ತಾನೆ. ಗಂಧೋದಕ ಪ್ರಭಾವದಿಂದ ಲಕ್ಷ್ಮಣನು ಮೂರ್ಛೆ ತಿಳಿದೇಳುತ್ತಾನೆ. ಈ ಗಂಧೋದಕವ ಕುರಿತಾದ ಕೆಲವು ಉಪಕಥೆಗಳನ್ನು ನಾಗಚಂದ್ರ ಈ ಭಾಗದಲ್ಲಿ ಜೋಡಿಸಿಕೊಂಡಿದ್ದಾನೆ. ಆ ಕಥೆಗಳು ಆಕರ್ಷಕವಾಗಿವೆಯಾದರೂ ರಾಮಾಯಣದ ಮುಖ್ಯ ಕಥೆಯ ಗತಿಗೆ ಅಡ್ಡಬಂದಂತೆ ಭಾಸವಾಗುತ್ತದೆ. ಆದರೆ ಜೈನನಂಬಿಕೆಯ ಪ್ರಕಾರ 'ಗಂಧೋದಕದ' ಪ್ರಭಾವ ಮತ್ತು ಮಹತ್ವವನ್ನು ತಿಳಿಸುವುದು ಅಗತ್ಯವೆನಿಸಿದ ಕಾರಣ ನಾಗಚಂದ್ರನು ಈ ಕಥೆಗಳನ್ನು ಜೋಡಿಸಿಕೊಂಡಿದ್ದಾನೆ.

'ವಿಶಲ್ಯಸೌಂದರಿ' ಎಂಬ ಅಂಗನೆಯ ಸ್ನಾನದ ಗಂಧೋದಕದಿಂದ ಲಕ್ಷ್ಮಣ ಪುನಃ ಎಚ್ಚೆತ್ತು -ಕೊಳ್ಳುತ್ತಾನೆ. 'ವಿಶಲ್ಯಸೌಂದರಿ'ಯೊಂದಿಗೆ ಲಕ್ಷ್ಮಣ ಮದುವೆ ನಡೆಯುತ್ತದೆ. ಮೂರ್ಛಿತನಾಗಿದ್ದ ಲಕ್ಷ್ಮಣನು ಹಿಂದಿನ ರಾತ್ರಿ ಸಾಯಬಹುದೆಂಬ ನಿರೀಕ್ಷೆಯಲ್ಲಿದ್ದ ರಾವಣನಿಗೆ ಈ ಬೆಳವಣಿಗೆಯಿಂದ ನಿರಾಶೆಯುಂಟಾಗುತ್ತದೆ. ರಾವಣನ ಬೆಂಬಲಿಗರು ರಾಮನೊಂದಿಗೆ ಸಂಧಿಮಾಡಿಕೊಳ್ಳಲು ಒತ್ತಾಯಿಸುತ್ತಾರೆ. ರಾವಣ ಅದಕ್ಕೊಪ್ಪುವುದಿಲ್ಲ. ಕೊನೆಗೆ 'ಮಯ'ನು ರಾವಣನಿಗೆ ಒಂದು ಹಿತವಚನವನ್ನು ಬೋಧಿಸುತ್ತಾನೆ. ರಾಮನಲ್ಲಿ ಸೆರೆಸಿಕ್ಕಿರುವ ನಮ್ಮ ಜನರಿಗೆ ಅಪಾಯವಾಗದಂತೆ ರಾಮನೊಂದಿಗೆ ಕಾದಾಡಬೇಕೆಂಬುದು ಮಯನ ಸಲಹೆಯಾಗಿದ್ದಿತು. ಕಾರಣ ಬಹುರೂಪಿಣಿ

ವಿದ್ಯೆಯೊಂದಿಗೆ ರಾಮನನ್ನು ಎದುರಿಸಲು ರಾವಣನು ನಿರ್ಧರಿಸುತ್ತಾನೆ. ಲಂಕಾನಗರದಲ್ಲಿ ಯಾವುದೇ ಹಿಂಸೆ ಜರುಗದಂತೆ ಆದೇಶ ಹೊರಡಿಸುತ್ತಾನೆ. ಮಧ್ಯದಲ್ಲಿ ಫಾಲ್ಗುಣ ನಂದೀಶ್ವರ ಮುಹೂರ್ತ ಬಂದ ಕಾರಣ ಕೆಲವು ಕಾಲ ಯುದ್ಧವಿರಾಮವನ್ನು ಘೋಷಿಸಲಾಗುತ್ತದೆ. ಆಗ ವಿಭೀಷಣನು ರಾಮನ ಬಳಿಗೆ ಬಂದು ರಾವಣನ ಬಹುರೂಪಿಣಿ ವಿದ್ಯೆಯ ಶಕ್ತಿಸಾಮರ್ಥ್ಯಗಳ ಬಗ್ಗೆ ತಿಳಿಸುತ್ತಾನೆ. ರಾವಣನು ಅಪ್ರತಿಮನು ರಾಕ್ಷಸ ಸೇನೆಗೆ ಅಂತ್ಯವೆಂಬುದಿಲ್ಲ, ಅವನ 'ಚಂದ್ರಹಾಸ'ವನ್ನು ಎದುರಿಸುವ ಶಕ್ತಿ ಯಾರಲ್ಲಿಯೂ ಇಲ್ಲ. ರಾವಣನು ದುರ್ಜಯನು, ಮೇಲಾಗಿ ಆತ ಬಹುರೂಪಿಣಿ ವಿದ್ಯೆಯನ್ನು ಸಾಧಿಸುತ್ತಿದ್ದಾನೆ. ಒಬ್ಬ ರಾವಣನನ್ನೇ ಗೆಲ್ಲುವುದು ದುಸಾಧ್ಯವಾಗಿರುವಾಗ ಬಹುರೂಪಿಣಿ ವಿದ್ಯೆಯ ಬಲದಿಂದ ಹುಟ್ಟುವ ಕೋಟಿಗಟ್ಟಲೆ ರಾವಣ -ರನ್ನು ಗೆಲ್ಲುವುದು ಹೇಗೆ? ಎಂಬ ಬಗ್ಗೆ ನಾವು ಆಲೋಚಿಸಬೇಕೆಂದು ವಿಭೀಷಣನು ತಿಳಿಸುತ್ತಾನೆ. ಅಲ್ಲದೆ ಅವನಿಗೆ ಬಹುರೂಪಿಣಿ ವಶವಾಗುವ ಮೊದಲೇ ಅವನನ್ನು ನಾವು ಸೋಲಿಸುವುದು ಉಚಿತವೆಂದು ತಿಳಿಸುತ್ತಾನೆ. ಆ ರೀತಿ ಮೋಸ ಮಾಡಲು ರಾಮ ಒಪ್ಪುವುದಿಲ್ಲ. ಆಗ ವಿಭೀಷಣ, ಅಂಗದ ಮೊದಲಾದವರು ರಾಮನಿಗೆ ತಿಳಿಯದಂತೆ ತಾವೇ ಮುಂದಾಗಿ ರಾವಣನಿಗೆ ವಿಘ್ನಗಳನ್ನು ಒಡ್ಡುತ್ತಾರೆ. ಅಂಗದನು ರಾವಣನ ಕಣ್ಣೆದುರಿಗೆ ಮಂಡೋದರಿಗೆ ಅಪಮಾನ ಮಾಡುತ್ತಾನೆ. ಸಖಿಯರೆಲ್ಲ ತಪ್ಪಸ್ಸನ್ನು ಬಿಟ್ಟು ಯುದ್ಧ ಮಾಡುವಂತೆ ರಾವಣನ ಮೇಲೆ ಹರಿಹಾಯುತ್ತಾರೆ.

ಜಾನಕಿಯನ್ನು ನೋಡಲು ರಾವಣನು ಪ್ರಮದ ವನಕ್ಕೆ ಬರುತ್ತಾನೆ. ರಾಮನ ಬಯಕೆಯನ್ನು ಬಿಟ್ಟು ತನ್ನನ್ನು ವರಿಸುವಂತೆ ರಾವಣ ಸೀತೆಯನ್ನು ಒತ್ತಾಯಿಸುತ್ತಾನೆ. ಸೀತೆ ಮೂರ್ಛಿತಳಾಗುತ್ತಾಳೆ. ಕದಡಿದ ನೀರು ತನಗೆ ತಾನೆ ತಿಳಿಯಾಗುವಂತೆ ರಾವಣನ ಮನಸ್ಸು ತಿಳಿಯಾಗುತ್ತದೆ. ರಾವಣನಿಗೆ ಸೀತೆಯಲ್ಲಿ ವೈರಾಗ್ಯ ಉಂಟಾಗುತ್ತದೆ. ಒಳಗೊಳಗೇ ಅವಳ ಪಾತಿವ್ರತ್ಯವನ್ನು ಮತ್ತು ಪತಿಪ್ರೇಮವನ್ನು ರಾವಣ ಗೌರವಿಸುತ್ತಾನೆ. ಜೊತೆಗೆ ತನ್ನ ವರ್ತನೆಗೆ ತಾನೇ ಪ್ರಾಯಶ್ಚಿತ್ತ ಪಟ್ಟುಕೊಳ್ಳುತ್ತಾನೆ. ಆದರೂ ಸೀತೆಯನ್ನು ಬಿಟ್ಟುಕೊಟ್ಟರೆ ಸೋಲನ್ನು ಒಪ್ಪಿಕೊಂಡ ಹಾಗಾಗುತ್ತದೆ ಎಂಬ ದುಗುಡ ರಾವಣನನ್ನು ಕಾಡುತ್ತದೆ. ಕಾರಣ ರಾಮ-ಲಕ್ಷ್ಮಣರನ್ನು ಯುದ್ಧದಲ್ಲಿ ಸೋಲಿಸಿ ಆಮೇಲೆ ಮಾತ್ರ ಸೀತೆಯನ್ನು ಬಿಟ್ಟುಕೊಡುವುದಾಗಿ ರಾವಣ ನಿಶ್ಚಯಿಸುತ್ತಾನೆ.

ಯುದ್ಧಕ್ಕೆ ಹೊರಟ ರಾವಣನನ್ನು ಮಂಡೋದರಿ ತಡೆಯುತ್ತಾಳೆ. ಸೀತೆಯನ್ನು ರಾಮನಿಗೆ ಒಪ್ಪಿಸಿ ರಾಮನ ವಶದಲ್ಲಿದ್ದ ತಮ್ಮ ಸೆರೆಯಾಳುಗಳನ್ನು ಬಿಡಿಸಿಕೊಂಡು ಬರುವುದಾಗಿ ಮಂಡೋದರಿ ತಿಳಿಸುತ್ತಾಳೆ. ರಾವಣ ಅವಳ ಮಾತನ್ನು ಧಿಕ್ಕರಿಸಿ ಯುದ್ಧಕ್ಕೆ ಹೊರಡುತ್ತಾನೆ. ಬಹುರೂಪಿಣಿ ವಿದ್ಯೆ ನಿರ್ಮಿಸಿದ ರಥದಲ್ಲಿ ಆತ ಮಂಡಿಸಿರುತ್ತಾನೆ. ಅದನ್ನು ಕಂಡ ಲಕ್ಷ್ಮಣನು ಕುಪಿತನಾಗಿ ರಾವಣನನ್ನು ಎದುರಿಸುತ್ತಾನೆ. ಎರಡು ತಂಡಗಳ ನಡುವೆ ಘೋರ ಕಾಳಗ ನಡೆಯುತ್ತದೆ. ರಾವಣನು ರಾಮನ ಎದುರಿಗೆ ಬರುತ್ತಾನೆ. ಆಗ ಲಕ್ಷ್ಮಣನು ತನ್ನನ್ನು ಎದುರಿಸುವಂತೆ ರಾವಣನನ್ನು ಕೆಣಕುತ್ತಾನೆ. ಕೊನೆಗೆ ಲಕ್ಷ್ಮಣನಿಗೆ ಜಯವುಂಟಾಯಿತು. ಅವನು ರಾವಣನನ್ನು ಸಂಹಾರ ಮಾಡುತ್ತಾನೆ. ವಿಭೀಷಣನನ್ನೊಳಗೊಂಡಂತೆ ರಾವಣನ ಪರಿವಾರದವರೆಲ್ಲ ದುಃಖಿತರಾಗುತ್ತಾರೆ. ಅದನ್ನು ಕಂಡು ರಾಮಸ್ವಾಮಿಗೆ ಕರುಣೆ ಉಂಟಾಗುತ್ತದೆ. ಅವರನ್ನು ಸಂತೈಸಿ ರಾವಣನ ಶವಸಂಸ್ಕಾರಮಾಡಿ ಸೆರೆಯಾಳುಗಳನ್ನು ಬಿಡುಗಡೆಗೊಳಿಸಿ ವಿಭೀಷಣನ ಮಾರ್ಗದರ್ಶನದಲ್ಲಿ ನೆಮ್ಮದಿಯಿಂದ ಇರುವಂತೆ ತಿಳಿಸಿ ಕಳಿಸುತ್ತಾನೆ.

**ಪಂಚಮದಶಾಶ್ವಾಸಂ :** ಈ ಭಾಗವು ಸೀತಾಪರಿತ್ಯಾಗದ ಪ್ರಸಂಗವನ್ನು ವರ್ಣಿಸುತ್ತದೆ. ರಾವಣನ ವಧೆಯನಂತರ, ಮಂಡೋದರಿ-ಇಂದ್ರಜಿತು-ಕುಂಭಕರ್ಣ, ಮೇಘವಾಹನ, ಮಯ, ಮರೀಚಾದಿಗಳು ತಮ್ಮ ಭವಾಂತರಗಳ ಬಗ್ಗೆ ತಿಳಿದು ದೀಕ್ಷೆ ಹೊಂದುತ್ತಾರೆ. ಮಂಡೋದರಿಯೂ ಧ್ಯಾನದಲ್ಲಿ ತೊಡಗುತ್ತಾಳೆ. ಅಷ್ಟೊತ್ತಿಗೆ ಸೀತೆಯನ್ನು ಕರೆದುಕೊಂಡು ಹೋಗಲು ರಾಮ-ಲಕ್ಷ್ಮಣರು ಲಂಕಾನಗರಿಯನ್ನು ಪ್ರವೇಶಿಸುತ್ತಾರೆ. ವಿಭೀಷಣನು ಅವರನ್ನು ತನ್ನ ಅರಮನೆಗೆ ಕರೆದೊಯ್ದು ಆತಿಥ್ಯನೀಡಿ ತನ್ನ ವಿನಯವನ್ನು ಪ್ರಕಟಿಸುತ್ತಾನೆ. ರಾಮ ಲಕ್ಷ್ಮಣರು ಸುಖದಿಂದ ರಾಜ್ಯಭಾರ ನಡೆಸುತ್ತಾರೆ.

ಅತ್ತ ಇಂದ್ರಜಿತ, ಮೇಘವಾಹನರು ಕುಂಭಕರ್ಣ ನರ್ಮದಾ ನದಿಯದಡದಲ್ಲಿ ಮುಕ್ತಿ ಪಡೆಯುತ್ತಾರೆ. ಮಂಡೋದರಿ ಧರ್ಮಧ್ಯಾನದಲ್ಲಿ ಸತ್ತು, ಈಶಾನ ಕಲ್ಪವನ್ನು ಸೇರುತ್ತಾರೆ.

ಓಗಿರಲು ಅಪರಾಜಿತ ರಾಮನ ನೆನಪಿನಲ್ಲಿ ಕೊರಗುತ್ತಿರುವ ಸಂಗತಿಯನ್ನು ಹೊತ್ತು ತಂದ ನಾರದನು ಅದನ್ನು ರಾಮ-ಲಕ್ಷ್ಮಣರಿಗೆ ತಿಳಿಸುತ್ತಾನೆ. ಅದನ್ನು ತಿಳಿದ ಸಹೋದರರು ತಕ್ಷಣ ತಾಯಂದಿರನ್ನು ನೋಡಲು ಅಯೋಧ್ಯೆಗೆ ತೆರಳಲಿರುವ ತಮ್ಮ ನಿರ್ಧಾರವನ್ನು ವಿಭೀಷಣನಿಗೆ ತಿಳಿಸುತ್ತಾರೆ. ವಿಮಾನ ಮಾರ್ಗವಾಗಿ ರಾಮ-ಲಕ್ಷ್ಮಣ-ಸೀತೆಯರು ಅಯೋಧ್ಯಾಪುರಕ್ಕೆ ಆಗಮಿಸುತ್ತಾರೆ. ಭರತ-ಶತ್ರುಘ್ನರು ಅವರನ್ನು ಸಂಭ್ರಮದಿಂದ ಬರಮಾಡಿಕೊಳ್ಳುತ್ತಾರೆ. ಪುರ-ಪ್ರವೇಶ ಮಾಡಿದ ನಂತರ ಅಂತಃಪುರದಲ್ಲಿದ್ದ ಅಪರಾಜಿತೆ, ಸುಮಿತ್ರೆ ಸುಪ್ರಭೆ ಹಾಗೂ ಕೈಕೆಯರನ್ನು ಕಂಡು ನಮಸ್ಕರಿಸಿ ಆಶೀರ್ವಾದ ಪಡೆಯುತ್ತಾರೆ. ಒಂದು ಶುಭ ಮುಹೂರ್ತದಲ್ಲಿ ರಾಮನು ಲಂಕೆಯನ್ನು ವಿಭೀಷಣನಿಗೆ ದೇವೋಪನೀತ ಪುರವನ್ನು, 'ರತ್ನಜಟಿಗೆ' ಕಿಷ್ಕಂದ ನಗರವನ್ನು, ಸುಗ್ರೀವನಿಗೆ, ಶ್ರೀಪರ್ವತನಗರವನ್ನು ಹನುಮಂತನಿಗೆ, ಪಾತಾಳಲಂಕೆಯನ್ನು ವಿರಾಧಿತನಿಗೆ, ರಥನೂಪುರಚಕ್ರವಾಳಪುರವನ್ನು ಪ್ರಭಾಮಂಡಲನಿಗೆ ರಾಜ್ಯಾಭಿಷೇಕ ಮಾಡಿಕೊಡುತ್ತಾನೆ. ಲಕ್ಷ್ಮಣನನ್ನು ತ್ರಿಖಂಡ ಮಂಡಳಕ್ಕೆ ಅಧಿರಾಜನನ್ನಾಗಿ ನೇಮಿಸುತ್ತಾನೆ. ಅಯೋಧ್ಯೆಯನ್ನು ನೋಡಿಕೊಳ್ಳುವಂತೆ ಭರತನಿಗೆ ಆದೇಶಿಸುತ್ತಾನೆ.

ಒಮ್ಮೆ ದೇಶಭೂಷಣ ಮುನಿಗಳು ಭರತನ ಭವಾಂತರದ ವಿವರಗಳನ್ನು ತಿಳಿಸಿಕೊಡುತ್ತಾರೆ. ಅದನ್ನು ಕೇಳಿ ಭರತನು ದೀಕ್ಷಾಬದ್ಧನಾಗುತ್ತಾನೆ. ಕೈಕೇಯಿಯು ತಪಸ್ಸಿಗೆ ತೊಡಗುತ್ತಾಳೆ. ಉಗ್ರತಪಸ್ಸಿನ ನಂತರ ಭರತ ಕೈಕೇಯಿ ಇಬ್ಬರೂ ಮೋಕ್ಷ ಪಡೆಯುತ್ತಾರೆ.

ರಾಮ-ಲಕ್ಷ್ಮಣರು ಅಮರೇಶ್ವರರೆನಿಸಿ ಸುಖದಿಂದ ರಾಜ್ಯವನ್ನು ಪರಿಪಾಲಿಸುತ್ತಿದ್ದರು. ಒಂದು ದಿನ ತನಗೆ ಎರಡು ಕನಸು ಬಿದ್ದಿರುವುದಾಗಿ ಸೀತೆ ತಿಳಿಸುತ್ತಾಳೆ. ಅವುಗಳಲ್ಲಿ ಒಂದು ಶುಭ ಸ್ವಪ್ನ. ಇನ್ನೊಂದು ಅಶುಭ ಸ್ವಪ್ನ. ರಾಮನು ಸೀತೆಗೆ ಕನಸಿನ ಫಲವನ್ನು ತಿಳಿಸುತ್ತಾನೆ. ಅದರಿಂದ ವಿಷಾದ ಆವರಿಸಿಕೊಳ್ಳುತ್ತದೆ. ಕೆಲ ದಿವಸಗಳಲ್ಲಿ ಸ್ವಪ್ನಗಳು ಫಲ ನೀಡುತ್ತವೆ. ಮೊದಲನೆಯ ಕನಸಿನ ಫಲವಾಗಿ ಸೀತೆಗೆ ಗರ್ಭಚಿಹ್ನೆಗಳು ಮೂಡಿದವು. ಎರಡನೆಯ ಕನಸು ತನ್ನ ಕೆಲಸವನ್ನು ಮಾಡಿಯೇ ಬಿಟ್ಟಿತು. ಒಂದು ದಿನ ಜನಪದರ ಒಂದು ತಂಡವು ರಾಮನಲ್ಲಿಗೆ ಬಂದು, ರಾವಣನಿಂದ ಬಿಡಿಸಿಕೊಂಡು ಬಂದಿರುವ ಸೀತೆಯನ್ನು ಪುನಃ ಒಪ್ಪಿಕೊಂಡ ರಾಮನ ನಿರ್ಣಯವನ್ನು ಜನರು ಬೇರೆ ರೀತಿಯಾಗಿ ಭಾವಿಸಿಕೊಳ್ಳುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. "ಲೋಕವಾರ್ತೆಯನ್ನು ಅರಸನೇ ಧಿಕ್ಕರಿಸಿದರೆ, ಧರ್ಮವನ್ನು

ಪ್ರತಿಪಾಲಿಸುವವರು ಯಾರು?" ಎಂಬುದು ಪ್ರಜೆಗಳ ಅಭಿಪ್ರಾಯವಾಗಿದೆ ಎಂಬುದನ್ನು ವಿಜಯನೆಂಬ ಪ್ರಮುಖನು ರಾಮನಿಗೆ ತಿಳಿಸುತ್ತಾನೆ. ಅದನ್ನು ಕೇಳಿದ ರಾಮನು ಒಳಗೊಳಗೆ ಕುಸಿಯುತ್ತಾನೆ. ಜನರು ಆಡಿಕೊಳ್ಳುವರೀತಿಯಲ್ಲಿ ಅವಿಚಾರಿಯಾಗಿ ವರ್ತಿಸಿದೆ ಎಂಬ ಚಿಂತೆಗೀಡಾಗುತ್ತಾನೆ. ಯಶಸ್ಸು ಮತ್ತು ಧರ್ಮ ಉಳಿಯಬೇಕಾದರೆ ತಾನು ಸೀತೆಯನ್ನು ತ್ಯಜಿಸುವುದು ಅನಿವಾರ್ಯವೆಂದು ನಿರ್ಧರಿಸುತ್ತಾನೆ.

ತಡಮಾಡದೆ ಲಕ್ಷಣನನ್ನು ಕರೆಯಿಸಿ ಆ ವಿಷಯವನ್ನು ತಿಳಿಸುತ್ತಾನೆ. ಲಕ್ಷ್ಮಣನು ರಾಮನ ನಿರ್ಧಾರವನ್ನು ಖಂಡಿಸುತ್ತಾನೆ. "ಸತಿ ಸೀತಾದೇವಿ ಪತಿವ್ರತಾದಿ ಗುಣಗಳಿಂದ ಅಲಂಕೃತಳು ಆ ಸತಿಯಲ್ಲಿ ನಿಮ್ಮಂತಹ ತಿಳಿದವರು ಅವಗುಣವನ್ನು ಹೇಳುವುದು ಅನುಚಿತವಲ್ಲವೆ"? ಎಂದು ಲಕ್ಷ್ಮಣ ಪ್ರತಿಭಟಿಸುತ್ತಾನೆ. ಇಬ್ಬರ ನಡುವೆ ಗಂಭೀರ ಚರ್ಚೆ ನಡೆಯುತ್ತದೆ. "ಈ ಹೀನ ಮಾತನ್ನು ಹರಡಿದ ಒಕ್ಕಲಿಗನ ನಾಲಿಗೆಯನ್ನು ಕಿತ್ತು ಒಗೆಯುವೆನೆಂದು" ಲಕ್ಷ್ಮಣ ಅಬ್ಬರ ಗೈಯ್ಯುತ್ತಾನೆ. ಆದರೆ ತನ್ನ ನಿರ್ಣಯಕ್ಕೆ ಬದ್ಧನಾದ ರಾಮನು "ಇದೊಂದನ್ನು ವಿರೋಧಿಸದಿರೆಂದು" ತನ್ನ ಮೇಲೆ ಆಣೆಯನ್ನಿಟ್ಟೊಂಡು ಲಕ್ಷ್ಮಣನ ಬಾಯಿ ಮುಚ್ಚಿಸುತ್ತಾನೆ. ರಾಮನು ಕೃತಾಂತವಕ್ತ್ರನನ್ನು ಕರೆದು ಸೀತೆಯನ್ನು ಕೂಡಲೇ ಒಯ್ದು ಕಾಡಿನಲ್ಲಿ ಬಿಟ್ಟುಬಾ ಎಂದು ಆದೇಶಿಸುತ್ತಾನೆ. ಲಕ್ಷ್ಮಣ ಮತ್ತೆ ಮತ್ತೆ ಅಡ್ಡ ಬರುತ್ತಾನೆ. ಆದರೆ ರಾಮ "ನನ್ನಲ್ಲಿ ಪ್ರೀತಿ ಇದ್ದುದಾದರೆ ಇನ್ನು ಮಾತಾಡಬೇಡ" ಎಂದು ಲಕ್ಷ್ಮಣನನ್ನು ಸುಮ್ಮನಿರಿಸುತ್ತಾನೆ. ನೊಂದುಕೊಂಡ ಲಕ್ಷ್ಮಣ ಸಭೆಯಿಂದ ಎದ್ದುಹೋಗುತ್ತಾನೆ. ರಾಮನು ಕೃತಾಂತವಕ್ತ್ರನನ್ನು ಕರೆದು "ಅಯೋಧ್ಯಾನಗರದ ಸಮ್ಮೇದಪರ್ವತದ ಹತ್ತಿರದ ಜಿನಾಲಯಗಳನ್ನು ತೋರಿಸಿ ನಿಮ್ಮ ಬಯಕೆಯನ್ನು ತೀರಿಸಿಬರುವ ಬನ್ನಿ ಎಂದು ಸೀತೆಯನ್ನು ಒಡಗೊಂಡು ಹೋಗಿ 'ಭೀಮಾಟವಿ'ಯಲ್ಲಿ ನಿರ್ಜನವಾದ ಸ್ಥಳದಲ್ಲಿ ಬಿಟ್ಟುಬರಬೇಕು" ಎಂದು ತಿಳಿಸುತ್ತಾನೆ. ಒಲ್ಲದ ಮನಸ್ಸಿನಿಂದ ಕೃತಾಂತವಕ್ತ್ರನು ಸೀತೆಯನ್ನು ರಥದಲ್ಲಿ ಕರೆದುಕೊಂಡು ಹೋಗಿ ಕಾಡಿನ ಮಧ್ಯದಲ್ಲಿ ಇಳಿಸಿ ಗದ್ಗದಿತನಾಗಿ "ತಾಯಿ ನಿಮ್ಮ ಮೇಲೆ ಲೋಕವು ಅಪವಾದವನ್ನು ಇಟ್ಟಿದ್ದುದಕ್ಕಾಗಿ ಅರಸನು ನಿಮ್ಮನು ಅಡವಿಯಲ್ಲಿ ಬಿಟ್ಟು ಬಾ ಎಂದು ಹೇಳಿದುದರಿಂದ ಇಲ್ಲಿಗೆ ಕರೆತಂದೆನು" ಎಂದು ಸತ್ಯಸಂಗತಿಯನ್ನು ತಿಳಿಸುತ್ತಾನೆ. ಅದನ್ನು ಕೇಳಿದ ತಕ್ಷಣ ಸೀತೆ ಮೂರ್ಛೆಹೋಗುತ್ತಾಳೆ. ಚೇತರಿಸಿಕೊಂಡು ಕೃತಾಂತವಕ್ತ್ರನಿಗೆ ಹೀಗೆ ಹೇಳುತ್ತಾಳೆ. "ರಾಮ ದೇವರು ನನಗೆ ದಯೆಗೈಯುವುದಾದರೆ ಸಕಲ ಭೂಮಂಡಲವನ್ನು ನ್ಯಾಯದಿಂದ ಪ್ರತಿಪಾದಿಸುವುದು, ದೇವ-ಗುರು ಪೂಜೆಯನ್ನು ಮರೆಯದಿರುವುದು, ಜನಾಪವಾದಭಯದಿಂದ ನನ್ನನ್ನು ಬಿಟ್ಟಂತೆ ಮಿಥ್ಯಾದೃಷ್ಟಿಗಳ ಮಾತುಕೇಳಿ ಅರಹತ್ ಪರಮೇಶ್ವರ ಶ್ರೀಧರ್ಮವನ್ನು ಬಿಡದಿರುವುದೆಂದು ನಾನೆಂದುನೆಂಬುದನ್ನು ಮರೆಯದೇ ಹೇಳು" ಎಂದು ದುಃಖಿತಳಾಗಿ ಹೇಳುತ್ತಾಳೆ. ಕೃತಾಂತವಕ್ತ್ರನು ತನ್ನ ಸೇವಕ ವೃತ್ತಿಯನ್ನು ತಾನೇ ಶಪಿಸಿಕೊಳ್ಳುತ್ತ ಸೀತೆಯಲ್ಲಿ ಕ್ಷಮೆಕೇಳಿ ಅಯೋಧ್ಯೆಯತ್ತ ಹೊರಡುತ್ತಾನೆ. ದಿಕ್ಕುಗೆಟ್ಟ ಸೀತೆ ರಾಮ-ಲಕ್ಷ್ಮಣರ ನೆನಪಿನಲ್ಲಿ ಕೊರಗುತ್ತಾಳೆ. ಜಿನಾಗಮ ಕುಶಲೆಯಾಗಿದುದರಿಂದ ತನ್ನನ್ನು ತಾನು ಸಂತೈಸಿಕೊಂಡು ಕಾಡಿನಲ್ಲಿ ಸಂನ್ಯಾಸಿನಿಯಾಗಿ ಬದುಕುತ್ತಾಳೆ. ಒಂದು ದಿನ ಆನೆಯ ಬೇಟೆಗಾಗಿ ಪುಂಡರೀಕಿಣಿ ಪುರದ ಅರಸು 'ವಜ್ರಜಂಘ'ನೆಂಬುವನು ಆ ಕಾಡಿಗೆ ಬರುತ್ತಾನೆ. ಸೀತೆಯನ್ನು ಕಂಡು ಅವಳ ವೃತ್ತಾಂತವನ್ನು ತಿಳಿದುಕೊಳ್ಳುತ್ತಾನೆ. ಜಿನ ಧರ್ಮದ ನೆಲೆಯಿಂದ ಅವಳನ್ನು ತನ್ನ ಸಹೋದರಿಯೆಂದು ಭಾವಿಸಿ ತನ್ನ ಊರಿಗೆ ಕರೆದುಕೊಂಡು ಹೋಗಿ ಶೀಲವತಿ ಎಂಬ ತನ್ನ ಅಕ್ಕನ ಮನೆಯಲ್ಲಿ ಇರಿಸುತ್ತಾನೆ.

ಅತ್ತ ಕಾಡಿನಿಂದ ತೆರಳಿದ ಕೃತಾಂತವಕ್ತ್ರನು ಸೀತೆಯ ಸಂದೇಶವನ್ನು ರಾಮನಿಗೆ ಅರುಹುತ್ತಾನೆ. ಧರ್ಮ ಮಾರ್ಗದಿಂದ ರಾಮನು ರಾಜ್ಯಭಾರವನ್ನು ನಡೆಸುತ್ತಾ ಹೋಗುತ್ತಾನೆ.

ಇತ್ತ ಸೀತೆ ಲವ-ಕುಶರೆಂಬ ಅವಳಿ ಮಕ್ಕಳಿಗೆ ಜನ್ಮವೀಯುತ್ತಾಳೆ. ಅವರು ಯೌವನಿಗರಾದ ಮೇಲೆ ವಜ್ರಜಂಘನು ಶಶಿಮಾಲೆ ಎಂಬ ತನ್ನ ಮಗಳನ್ನು ಲವನಿಗೆ ಕೊಟ್ಟು ಲಗ್ನಮಾಡುತ್ತಾನೆ. ಕುಶನಿಗೆ ತನ್ನ ಮಗಳನ್ನು ಕೊಡುವಂತೆ ಪಕ್ಕದ ಪೃಥವೀಪುರದ ಪೃಥ್ವಿರಾಜನಿಗೆ ಸಂದೇಶವನ್ನು ಕಳಿಸುತ್ತಾನೆ. ತಿಳಿಯದ ಕುಲಗೋತ್ರದವನಿಗೆ ತನ್ನ ಮಗಳನ್ನು ಕೊಡಲು ಪೃಥ್ವಿರಾಜ ಒಪ್ಪುವುದಿಲ್ಲ. ವಿಷಯಬೆಳೆದು ವಜ್ರಜಂಘ ಮತ್ತು ಪೃಥ್ವಿರಾಜರ ನಡುವೆ ಯುದ್ಧ ನಡೆಯುತ್ತದೆ. ವಜ್ರಜಂಘನ ಜೊತೆಗೆ ಲವಕುಶರು ಕೈಜೋಡಿಸುತ್ತಾರೆ. ಪೃಥ್ವೀ ಕಡೆಯವರು ಲವಕುಶರಿಗೆ ಹೆದರಿ ಓಡಿಹೋಗುತ್ತಾರೆ. ಕೊನೆಗೆ ತಮ್ಮ ಶರಣಾಗತಿಯನ್ನು ಸೂಚಿಸುತ್ತಾರೆ.

ಪುಂಡರೀಕಿಣಿ ಪುರದಲ್ಲಿ ಸೀತೆ ಇರುವ ವಿಷಯವನ್ನು ತಿಳಿದ ನಾರದರು ಸೀತೆಯನ್ನು ಕಾಣಲು ಬರುತ್ತಾರೆ. ನಾರದರನ್ನು ಲವಕುಶರು ಸ್ವಾಗತಿಸುತ್ತಾರೆ. ಆಗ ನಾರದರು ರಾಮ-ಲಕ್ಷ್ಮಣರಂತೆ ನೀವೂ ಮಹಾನುಭಾವರಾಗಿರಿ ಎಂದು ನಾರದರು ಹರಸುತ್ತಾರೆ. ಅದನ್ನು ಕೇಳಿ ಆ ರಾಮ - ಲಕ್ಷ್ಮಣರು ಯಾರು ಎಂಬುದಾಗಿಯೂ ಅವರ ವೃತ್ತಾಂತವನ್ನು ತಿಳಿಸಬೇಕಾಗಿಯೂ ನಾರದರಲ್ಲಿ ವಿನಂತಿಸಿಕೊಳ್ಳುತ್ತಾರೆ. ಬಾಲಕರನ್ನು ಅಷ್ಟೇ ಬೇಕಾಗಿದ್ದಿತು. ಆ ಬಾಲಕರಿಗೆ ರಾಮ - ಲಕ್ಷ್ಮಣರ ವೃತ್ತಾಂತವನ್ನು ತಿಳಿಸಿದ್ದಲ್ಲದೆ ಅವರು ನಿಮ್ಮ ತಂದೆ ಮತ್ತು ಚಿಕ್ಕಪ್ಪದಿರೆಂದು ಹೇಳುತ್ತಾರೆ. ತಮ್ಮ ತಾಯಿಗೆ ಅನ್ಯಾಯ ಮಾಡಿದವರು ಅದೆಂಥ ಮಹಾನುಭಾವರೆಂದು ಲವ-ಕುಶರು ರಾಮ ಲಕ್ಷ್ಮಣರ ಮೇಲೆ ಯುದ್ಧ ಸಾರುತ್ತಾರೆ.

ನಾರದರು ಪ್ರಭಾಮಂಡಲನ ಹತ್ತಿರ ಹೋಗಿ ಲವಕುಶರ ನಿರ್ಣಯವನ್ನು ತಿಳಿಸುತ್ತಾರೆ. ಆಗ ಪ್ರಭಾಮಂಡಲ, ಜನಕ, ವಿದೇಹಿಗಳೆಲ್ಲ ಸೇರಿ ಪುಂಡರೀಕಿಣಿಪುರಕ್ಕೆ ಬರುತ್ತಾರೆ. ತಂದೆ ತಾಯಿ ಅಣ್ಣಂದಿರ ಆಗಮನದಿಂದ ಸೀತೆಗೆ ಸಂತೋಷವಾಗುತ್ತದೆ. ರಾಮ-ಲಕ್ಷ್ಮಣರಿಂದ ಲವ-ಕುಶರಿಗೆ ತೊಂದರೆಯಾಗುವುದಕ್ಕೆ ಮೊದಲು ನಾವೆಲ್ಲ ಅಯೋಧ್ಯೆಗೆ ತೆರಳಬೇಕೆಂದು ಪ್ರಭಾಮಂಡಲನು ತಿಳಿಸುತ್ತಾನೆ.

ಅತ್ತ ರಾಮ-ಲಕ್ಷ್ಮಣ ಮತ್ತು ಲವಕುಶರ ನಡುವೆ ಘೋರಯುದ್ಧನಡೆಯುತ್ತದೆ. ನಾರದರು ಮಧ್ಯ ಪ್ರವೇಶಿಸಿ ಲವಾಂಕುಶರ ವಿವರಗಳನ್ನು ರಾಮ-ಲಕ್ಷ್ಮಣರಿಗೆ ತಿಳಿಸುತ್ತಾರೆ. ಬಾಲಕರಿಗೂ ತಮ್ಮ ದುಡುಕಿನ ಅರಿವಾಗುತ್ತದೆ. ಕೊನೆಗೆ ಎಲ್ಲರ ಪ್ರೀತಿಯ ಸಮಾಗಮವಾಗುತ್ತದೆ. ಎಲ್ಲರೂ ಸಾಕೇತಪುರಕ್ಕೆ ತೆರಳುತ್ತಾರೆ. ಒಂದು ದಿನ ಸುಗ್ರೀವ-ಸುಷೇಣ, ಜಾಂಬವ, ಮೊದಲಾದ ಪ್ರಮುಖರು ರಾಮನಲ್ಲಿಗೆ ಬಂದು ಪರರಾಜ್ಯದಲ್ಲಿರುವ ಸೀತೆಯನ್ನು ಕರೆಯಿಸಿಕೊಳ್ಳಬೇಕೆಂದು ಆಗ್ರಹ ಪಡಿಸುತ್ತಾರೆ. ಎಲ್ಲರೂ ಅರಿಯುವ ಹಾಗೆ ದಿವ್ಯ ಪರೀಕ್ಷೆಯಿಂದ ಸೀತೆಯು ತನ್ನ ಮೇಲಿನ ಅಪವಾದವನ್ನು ಪರಿಹರಿಸಿಕೊಳ್ಳಬೇಕು ಎಂಬ ಕರಾರಿನೊಂದಿಗೆ ರಾಮನು ಸೀತೆಯನ್ನು ಹಿಂದಕ್ಕೆ ಕರೆಯಿಸಿಕೊಳ್ಳಲು ಒಪ್ಪುತ್ತಾನೆ. ಪ್ರಮುಖರು ಪುಂಡರೀಕಿಣಿ ಪುರಕ್ಕೆ ಬಂದು ಆ ವಿಷಯವನ್ನು ಸೀತೆಗೆ ತಿಳಿಸುತ್ತಾರೆ. ಆಗ ಸೀತೆ ದಿವ್ಯದಲ್ಲಿ ಶುದ್ಧಳಾಗಿ ತಪಸ್ಸು ಮಾಡುವ ತನ್ನ ನಿರ್ಧಾರವನ್ನು ಪ್ರಕಟಿಸಿ ಅಯೋಧ್ಯೆಯನ್ನು ತಲುಪುತ್ತಾಳೆ. ಮಾರನೆಯ ದಿನ ರಾಮ-ಸೀತೆಯರ ಭೆಟ್ಟಿಯಾಗುತ್ತದೆ. ಇಬ್ಬರೂ ತಮ್ಮ ಇಂಗಿತಗಳನ್ನು ಹೊರ ಹಾಕುತ್ತಾರೆ. ರಾಮನ ಅಪೇಕ್ಷೆಯ ಪ್ರಕಾರ ಸೀತೆ ಅಗ್ನಿ

ಕುಂಡವನ್ನು ಪ್ರವೇಶಿಸಲು ಮುಂದಾಗುತ್ತಾಳೆ. ಆಗ ದೇವೇಂದ್ರನ ಆದೇಶದಂತೆ 'ಮೇಘಕೇತನ'ನೆಂಬ ದೇವನು ಉರಿಯಿಂದ ಸೀತೆಗೆ ತೊಂದರೆಯಾಗದಂತೆ ನೋಡಿಕೊಳ್ಳಲು ಆಗಮಿಸುತ್ತಾನೆ. ಆಗ ಸೀತೆ "ರಾಮನನ್ನಲ್ಲದೆ ರಾವಣನೇ ಮೊದಲಾದ ಮಿಕ್ಕವರನ್ನು ನಾನು ಮನದಲ್ಲಿ ಬಯಸಿದ್ದನಾದರೆ ಈ ಬೆಂಕಿ ನನ್ನನ್ನು ಸುಟ್ಟುಹಾಕಲಿ" ಎಂದು ಘೋಷಿಸಿ ಅಗ್ನಿ ಪ್ರವೇಶಮಾಡುತ್ತಾಳೆ, ಪರಿಶುದ್ಧೆಯಾದ ಸೀತೆ ದಿವ್ಯದಲ್ಲಿ ತೇರ್ಗಡೆಯಾಗುತ್ತಾಳೆ. ರಾಮ ಅವಳಲ್ಲಿ ಕ್ಷಮೆ ಕೇಳುತ್ತಾನೆ. ಮುನ್ನಿನಂತೆ ಸಾಮ್ರಾಜ್ಞಿಯಾಗಿ ಮುಂದುವರೆಯಲು ರಾಮನು ಕೇಳಿಕೊಳ್ಳುತ್ತಾನೆ. ಆದರೆ ಸೀತೆ ತಪಸ್ಸಿಗೆ ತೆರಳುವ ತನ್ನ ನಿರ್ಧಾರವನ್ನು ಪ್ರಕಟಿಸುತ್ತಾಳಲ್ಲದೆ ಪ್ರಥುಮತಿ ಕಂತಿಯರ ಸನ್ನಿಧಿಯಲ್ಲಿ ತಪವನ್ನು ಕೈಗೊಳ್ಳುತ್ತಾಳೆ. ರಾಮನು ಅಲ್ಲಿಗೂ ತೆರಳಿ ನಿರ್ಧಾರವನ್ನು ಬದಲಿಸುವಂತೆ ಸೀತೆಯನ್ನು ಕೇಳಿಕೊಳ್ಳುತ್ತಾನೆ. ಅಲ್ಲಿ ನಡೆಯುತ್ತಿದ್ದ ದೇವಸಭೆಯಲ್ಲಿ ವಿಭೀಷಣನು ಸಕಲಭೂಷಣ ಭಟ್ಟಾರಕರಿಂದ ರಾಮನ ಪೂರ್ವಜನ್ಮಗಳ ಬಗ್ಗೆ ತಿಳಿದುಕೊಳ್ಳಬಯಸುತ್ತಾನೆ. ಜೊತೆಗೆ ಯಾವ ಪಾಪದ ಕಾರಣವಾಗಿ ರಾವಣನು ಸೀತೆಗೆ ಮನಸೋತನು? ಯಾವ ಪುಣ್ಯದಿಂದ ಲಕ್ಷ್ಮಣನು ರಾವಣನನ್ನು ಕೊಂದು ಭರತಖಂಡಕ್ಕೆ ಒಡೆಯನಾದನು? ಇದೆಲ್ಲವನ್ನು ತಿಳಿಸಿರಿ ಎಂದು ವಿಭೀಷಣನು ಭಟ್ಟಾರಕರಲ್ಲಿ ವಿನಂತಿಸಿಕೊಳ್ಳುತ್ತಾನೆ.

ಇಲ್ಲಿಂದ ಮುಂದೆ ಜೈನ ಸರಣಿಯ ಪ್ರಕಾರ ಎಲ್ಲ ಪ್ರಮುಖರ ಭವಾವಳಿಗಳ ವಿವರಗಳು ಬರುತ್ತವೆ. ಅವುಗಳ ಸಂಗ್ರಹರೂಪವನ್ನು ಮಾತ್ರ ಇಲ್ಲಿ ನೋಡಬಹುದು. ರಾಮನು ಮೊದಲ ಜನ್ಮದಲ್ಲಿ ಧನದತ್ತನಾಗಿ, ಎರಡನೆಯ ಜನ್ಮದಲ್ಲಿ ಪದ್ಮರುಚಿಯಾಗಿ, ಮೂರನೇ ಜನ್ಮದಲ್ಲಿ ನಯನಾನಂದನಾಗಿ ತರುವಾಯ ಶ್ರೀಚಂದನಾಗಿ, ಈಗ ರಾಮದೇವನಾಗಿದ್ದಾನೆ.

ಲಕ್ಷ್ಮಣನು ಮೊದಲು ವಸುದತ್ತನಾಗಿ, ನಂತರ ಶ್ರೀಭೂತಿಯಾಗಿ, ಮರುಜನ್ಮದಲ್ಲಿ ಪುನರ್ವಸು ಎಂಬ ವಿದ್ಯಾಧರನಾಗಿ, ಈ ಜನ್ಮದಲ್ಲಿ ಲಕ್ಷ್ಮಣನಾಗಿದ್ದಾನೆ. ರಾವಣನು ಶಂಭುವಾಗಿ, ಭಾಸಕುಂಡಲನಾಗಿ ಈಗ ರಾವಣನಾಗಿದ್ದಾನೆ. ಸೀತೆಯೂ ಮೊದಲ ಜನ್ಮದಲ್ಲಿ ಗುಣವತಿಯಾಗಿ, ಹೆಣ್ಣಾನೆಯಾಗಿ, ಮರುಜನ್ಮದಲ್ಲಿ ವೇದವತಿಯಾಗಿ ಬ್ರಹ್ಮಕಲ್ಪದಲ್ಲಿ ಹುಟ್ಟಿ ತದನಂತರ ಚಿತ್ತೋತ್ಸವೆ ಎಂಬವಳಾಗಿ ಹುಟ್ಟಿ ಕ್ರಮದಿಂದ ಈಗ ಸೀತೆಯಾಗಿದ್ದಾಳೆ ಎಂದು ಸಕಲಭೂಷಣ ಭಟ್ಟಾರಕರು ತಿಳಿಯಪಡಿಸಿದರು. ಮೊದಲಿಗೆ ಗುಣವರ್ಮನೆಂಬ ವ್ಯಾಪಾರಿಯಾಗಿ,ಕುಂಡಲಮಂಡಿತನೆಂಬ ಅರಸನಾಗಿ ಈಗ ಪ್ರಭಾಮಂಡಲನಾಗಿರುವುದಾಗಿ ಭಟ್ಟಾರಕರು ತಿಳಿಸುತ್ತಾರೆ. ಹಾಗೆಯೇ ಹಿಂದಿನ ಜನ್ಮದಲ್ಲಿ ಲಕ್ಷ್ಮಣನು ವಸುದತ್ತನಾಗಿದ್ದಾಗ ಅವನ ಸ್ನೇಹಿತನಾಗಿದ್ದ ಯಜ್ಞವಲ್ಕಿಯು ಈಗ ವಿಭೀಷಣನಾಗಿ ಹುಟ್ಟಿ ಹಿಂದಿನ ಜನ್ಮದ ಗೆಳೆಯತನದ ಕಾರಣವಾಗಿ ಈಗ ಲಕ್ಷ್ಮಣನೊಂದಿಗೆ ಕೂಡಿಕೊಂಡಿದ್ದಾನೆ. ಹಾಗಯೇ ಹಿಂದೆ ರಾಮನು ಪದ್ಮರುಚಿಯ ಭವದಲ್ಲಿದ್ದಾಗ ಅವನಿಂದ ಪಂಚನಮಸ್ಕಾರಮಂತ್ರವನ್ನು ಕೇಳಿದ್ದ ಆಗಿನ ವೃಷಭನೇ ರಾಜಪುತ್ರನಾಗಿ ಹುಟ್ಟಿ ತಪಸ್ಸನ್ನು ಆಚರಿಸಿ ಸ್ವರ್ಗದಲ್ಲಿ ಹುಟ್ಟಿ ಈಗ ಸುಗ್ರೀವನಾಗಿದ್ದಾನೆ. ಇಂದಿನ ಉಪಕಾರದ ಕಾರಣವಾಗಿ ಈಗ ರಾಮನ ಅನುಚರನಾಗಿ ಸೇವೆಸಲ್ಲಿಸುತ್ತಿದ್ದಾನೆ ಎಂದು ಮುನಿಗಳು ಎಲ್ಲರ ಜನ್ಮದ ವಿವರಗಳನ್ನು ತಿಳಿಸುತ್ತಾರೆ. ಅಲ್ಲದೆ ಲಕ್ಷ್ಮಣನು ಈಗ ರಾವಣನನ್ನು ಏಕೆ ಕೊಲ್ಲುತ್ತಾನೆ ಎಂಬುದರ ಕಾರಣವನ್ನು ತಿಳಿಸುತ್ತಾನೆ. ಹಿಂದೆ ಲಕ್ಷ್ಮಣನು ಶ್ರೀ ಭೂತಿಯೆಂಬ ಪುರೋಹಿತನಾಗಿದ್ದಾಗ ಈಗ ರಾವಣನಾಗಿರುವ ಆಗಿನ

ಶಂಘುವಿನ ಕೈಯಲ್ಲಿ ಸತ್ತಿದ್ದ. ಆ ಸಿಟ್ಟಿನ ಕಾರಣದಿಂದ ಲಕ್ಷ್ಮಣನು ರಾವಣನನ್ನು ಈಗ ಕೊಂದಿದ್ದಾನೆ ಎಂಬ ಕುತೂಹಲಕಾರಿಯಾದ ವಿವರಗಳನ್ನು ನೀಡುತ್ತಾರೆ. ಅದೇ ರೀತಿ ಹಿಂದೆ ಸೀತೆ ವೇದವತಿಯಾಗಿದ್ದಾಗ ಮಂಡಲಾಗ್ರಪುರದಲ್ಲಿ ಸುದರ್ಶನ ಋಷಿಗಳನ್ನು ಅವರ ತಂಗಿಯಾಗಿದ್ದ ಸುದರ್ಶನೆ ಎಂಬ ಕಂತಿಯರನ್ನು ಹೀನವಾಗಿ ನೋಡಿದ ಕಾರಣವಾಗಿ ವೇದವತಿಯ ಮುಖದ ಮೇಲೆ ಒಂದು ಗುಳ್ಳೆ ಹುಟ್ಟಿಕೊಳ್ಳುತ್ತದೆ. ಹೀನರಲ್ಲದವರನ್ನು ಹೀನರೆಂದು ತೆಗಳಿದ ಕಾರಣವಾಗಿ ತನಗೆ ಈ ವಿಕಾರದ ರೂಪ ಒದಗಿದೆ ಎಂದು ವೇದವತಿ ಪ್ರಾಯಶ್ಚಿತ್ತ ಮಾಡಿಕೊಂಡು ದೇವಲೋಕಕ್ಕೆ ಹೋದಳು. ಆದರೂ ಅವಳ ಪಾಪ ಸಂಪೂರ್ಣ ಕರಗಲಿಲ್ಲ. ಅದಕ್ಕಾಗಿಯೇ ಈಗ ಅವಳ ಈ ಜನಾಪವಾದಕ್ಕೆ ಗುರಿಯಾಗಿದ್ದಾಳೆ ಎಂದು ಸೀತೆಯ ವೃತ್ತಾಂತವನ್ನು ತಿಳಿಸುತ್ತಾಳೆ. ಜೈನಧರ್ಮಕ್ಕಾಗಲೀ ಜೈನ ಮುನಿಗಳಿಗಾಗಲಿ ಅಪಮಾನ ಮಾಡಕೂಡದೆಂಬ ಜೈನ ತಿಳುವಳಿಕೆಯನ್ನು ಕವಿ ಇಲ್ಲಿ ಪ್ರತಿಪಾದಿಸಿದ್ದಾನೆ. ಇದನ್ನೆಲ್ಲ ನೋಡಿ ಕೃತಾಂತವಕ್ತ್ರನು ವೈರಾಗ್ಯವನ್ನು ತಾಳುತ್ತಾನೆ. ಬಳಿಕ ಎಲ್ಲರೂ ಅಯೋಧ್ಯಪುರದಲ್ಲಿ ಕೆಲಕಾಲ ಸುಖದಿಂದ ಇದ್ದರು.

ಅತ್ತ ಸೀತೆ ಉಗ್ರ ತಪದಿಂದ ಅಚ್ಯುತಕಲ್ಪದಲ್ಲಿ ಸ್ವಯಂಪ್ರಭನೆಂಬ ವೃತ್ತೀಂದ್ರನಾಗಿ ಹುಟ್ಟಿದಳು. ಲವಾಂಕುಶರಿಗೆ ಲಗ್ನವಾಯಿತು. ಲಕ್ಷ್ಮಣನ ಎಂಟುಜನ ಮಕ್ಕಳು ಮಹಾಬಲಭಟ್ಟಾರಕರಲ್ಲಿ ದೀಕ್ಷೆಪಡೆದುಕೊಂಡರು. ಪ್ರಭಾಮಂಡಲನು ವಿದ್ಯಾಧರ ರಾಜ್ಯಸುಖವನ್ನು ಕೆಲಕಾಲ ಅನುಭವಿಸಿ ಒಂದು ದಿನ ಸಿಡಿಲು ಬಡಿದು ಸತ್ತನು. ಹನುಮಂತನು ಕರ್ಣಕುಂಡಲ ಪುರದಲ್ಲಿ ರಾಜ್ಯವಾಳುತ್ತಿದ್ದಾಗ ಒಂದು ದಿನ ಉಲ್ಕಾಪಾತವನ್ನು ಕಂಡು ನಿರ್ವೇಗ ಪರನಾಗಿ ಶುಶ್ರುತನೆಂಬ ಮಗನಿಗೆ ಪಟ್ಟಗಟ್ಟಿ ತಾನು ಧರ್ಮಾಭರಣರೆಂಬ ಮುನಿಗಳಲ್ಲಿ ದೀಕ್ಷೆ ಪಡೆದನು. ಹೀಗಿರಲಾಗಿ ಒಂದು ದಿನ ಸೌಧರ್ಮೇಂದ್ರನ ಧರ್ಮಸಭೆ ನಡೆಯುತ್ತಿದ್ದಿತು. ಆ ಸಭೆಯಲ್ಲಿ ಪ್ರಶ್ನೋತ್ತರಗಳು ಜರುಗುತ್ತವೆ. ಆಗ ಒಬ್ಬ ದೇವನು ರಾಮನು ಇದುವರೆಗೆ ಏಕೆ ದೀಕ್ಷೆ ಕೈಕೊಂಡಿಲ್ಲವೆಂದು ಸೌಧರ್ಮೇಂದ್ರನನ್ನು ಪ್ರಶ್ನಿಸುತ್ತಾನೆ. ಆಗ ವಿಭಾವಸು ಎಂಬ ಮತ್ತೊಬ್ಬ ದೇವನು ಲಕ್ಷ್ಮಣನಲ್ಲಿದ್ದ ಸ್ನೇಹದ ಕಾರಣವಾಗಿ ರಾಮನು ತಪವನ್ನು ಅಲಕ್ಷಿಸಿರುವನೆಂದು ತಿಳಿಸುತ್ತಾನೆ. ಅಲ್ಲದೆ ಲಕ್ಷ್ಮಣನ ವಿಯೋಗವಾದರೆ ಮಾತ್ರ ರಾಮನು ಸಂತಾಪಕ್ಕೆ ಗುರಿಯಾಗಿ ವೈರಾಗ್ಯಪರನಾಗುವುದು ಸಾಧ್ಯವಿದೆ ಎಂದು ತಿಳಿಸುತ್ತಾನೆ. ಅದೇ ರೀತಿ ಲಕ್ಷ್ಮಣನೂ ರಾಮನನ್ನು ಅತಿಯಾಗಿ ಹಚ್ಚಿಕೊಂಡಿದ್ದಾನೆ. ಅವರಿಬ್ಬರ ವಿಯೋಗದಿಂದ ಮಾತ್ರ ಇಬ್ಬರ ವೈರಾಗ್ಯ ಸಾಧ್ಯವಾದೀತು ಎಂದು ತಿಳಿಸುತ್ತಾನೆ. ರತ್ನಚೂಲ ಮತ್ತು ಅಮೃತಚೂಲ ಎಂಬ ಇಬ್ಬರು ದೇವತೆಗಳು ತಮ್ಮ ವೈಕುರ್ವಣ ವಿದ್ಯಾಬಲದಿಂದ ಪ್ರಾಣರಹಿತವಾದ ರಾಮನ ಶರೀರವನ್ನು ನಿರ್ಮಿಸಿದರು. ರಾಮ ಸತ್ತನೆಂದು ಆಘಾತಕ್ಕೆ ಒಳಗಾದ ಲಕ್ಷ್ಮಣ ಗತಜೀವನಾಗುತ್ತಾನೆ. ಕೆಲ ಹೊತ್ತಿನ ಮೇಲೆ ಮೂರ್ಛೆ ತಿಳಿದೆದ್ದ ರಾಮನು ಪಕ್ಕದಲ್ಲಿ ಲಕ್ಷ್ಮಣನ ಶವವಿರುವುದನ್ನು ಕಂಡು ಘಾಸಿಗೊಳ್ಳುತ್ತಾನೆ. ಅವನಿಗೆ ಪೂರ್ವಭವದ ಸ್ನೇಹ ಅತಿಯಾದ ದುಃಖವನ್ನುಂಟುಮಾಡುತ್ತದೆ. ಇದನ್ನು ಕಂಡ ಲವಾಂಕುಶರು ತಪಸ್ಸಿಗೆ ತೆರಳುತ್ತಾರೆ. ದುಃಖಿತನಾಗಿದ್ದ ರಾಮನನ್ನು ಸಂತೈಸಲು ವಿಭೀಷಣನು ಮಾಡಿದ ಪ್ರಯತ್ನ ವ್ಯರ್ಥವಾಗುತ್ತದೆ. ಸುಗ್ರೀವಾದಿಗಳು ಬಂದು ಲಕ್ಷ್ಮಣನ ಶವ ಸಂಸ್ಕಾರದ ಸಿದ್ಧತೆಯಲ್ಲಿ ತೊಡಗುತ್ತಾರೆ. ಆದರೆ ಲಕ್ಷ್ಮಣನಲ್ಲಿ ಅತಿಮೋಹಿತನಾಗಿದ್ದ ರಾಮನು

ಲಕ್ಷ್ಮಣನ ಶವವನ್ನು ಹೆಗಲ ಮೇಲೆ ಹೊತ್ತುಕೊಂಡು ಹೊರಟು ಹೋಗುತ್ತಾನೆ. ಹಾಗೆಯೇ ಆರು ತಿಂಗಳು ಹೆಣವನ್ನು ಹೊತ್ತು ತಿರುಗುತ್ತಾನೆ. ಬಲದೇವನ ಹೆಗಲಮೇಲೆ ಹೆಣ ತಪ್ಪದು ಎಂಬ ನಾಣ್ನುಡಿ ಲೋಕದಲ್ಲಿ ರೂಢಿಗೆ ಬರುತ್ತದೆ.

ಕೃತಾಂತವಕ್ತ್ರ ಮತ್ತು ಜಟಾಯು ಇಬ್ಬರೂ ರಾಮನಿಗೆ ಉಪದೇಶಮಾಡುತ್ತಾರೆ. ಆದರೆ ರಾಮ ಬದಲಾಗುವುದಿಲ್ಲ. ಉಪಾಯದಿಂದ ರಾಮನ ಮನಃ ಪರಿವರ್ತನೆ ಮಾಡಲು ಅವರು ಪ್ರಯತ್ನಿಸುತ್ತಾರೆ. ಜಟಾಯುದೇವನು ಒಂದು ಹೆಣವನ್ನು ಹೊತ್ತುಕೊಂಡು ರಾಮನ ಎದುರಿಗೆ ಬರುತ್ತಾನೆ. ಆಗ ರಾಮನು ಹೆಣವನ್ನು ಹೊತ್ತುಕೊಂಡು ತಿರುಗುತ್ತಿರುವ ಜಟಾಯುವಿನ ವರ್ತನೆಯನ್ನು ಗೇಲಿಮಾಡುತ್ತಾನೆ. ಇದೇ ಸಮಯಕ್ಕಾಗಿ ಕಾಯುತ್ತಿದ್ದ ಜಟಾಯು "ಹಾಗಿದ್ದರೆ ನೀನೇಕೆ ಲಕ್ಷ್ಮಣನ ಶವವನ್ನು ಹೊತ್ತುತಿರುಗುತ್ತಿದ್ದೀಯ?" ಎಂದು ಜಟಾಯು ಮರು ಪ್ರಶ್ನೆ ಹಾಕುತ್ತಾನೆ. ಕೊನೆಗೆ ರಾಮನು ಚಿತ್ತಭ್ರಾಂತಿಯಿಂದ ಹೊರ ಬರುತ್ತಾನೆ. ಮೋಹವನ್ನು ತೊರೆದ ರಾಮನಿಗೆ ಆ ದೇವತೆಗಳು ದಿವ್ಯ ಸ್ವರೂಪವನ್ನು ತೋರಿ ಅವನಿಗೆ ಇನ್ನಷ್ಟು ಉಪದೇಶ ಮಾಡುತ್ತಾರೆ. ರಾಮನ ಮನಸ್ಸು ಪರಿವರ್ತನೆಯಾಗುತ್ತದೆ. "ಛೀ ನನ್ನನ್ನು ನಾನರಿಯದೆ ದುಃಖಕ್ಕೆ ಈಡಾದೆನು" ಎಂದು ರಾಮನು ಸ್ವವಿಮರ್ಶೆ ಮಾಡಿಕೊಳ್ಳುತ್ತಾನೆ. ಎಲ್ಲ ಪ್ರಧಾನರ ಸಮ್ಮುಖದಲ್ಲಿ ಸರಯೂ ನದಿಯ ದಡದಲ್ಲಿ ಲಕ್ಷ್ಮಣನ ಶವದ ಸಂಸ್ಕಾರ ನಡೆಯುತ್ತದೆ. ಆಗ ರಾಮನು ಲವನ ಹಿರಿಯ ಮಗನಿಗೆ ಪಟ್ಟಕಟ್ಟಿ ಸುರತ ಮುನಿಗಳ ಬಳಿಯಲ್ಲಿ ದೀಕ್ಷೆಪಡೆಯುತ್ತಾನೆ. ವಿಭೀಷಣನು ತನ್ನ ಮಗನಾದ ಸುಭೂಷಣನಿಗೆ, ಸುಗ್ರೀವನು ಅಂಗದನಿಗೆ ರಾಜ್ಯವನ್ನು ಒಪ್ಪಿಸಿ ದೀಕ್ಷೆ ಪಡೆದುಕೊಳ್ಳುತ್ತಾರೆ. ಇವರೊಂದಿಗೆ ಶತ್ರುಘ್ನ, ನಳನೀಳ, ವಿರಾಧಿತ, ಚಂದ್ರರಶ್ಮಿ ಮೊದಲಾದವರು ರಾಮನೊಡನೆ ದೀಕ್ಷೆ ಪಡೆದುಕೊಳ್ಳುತ್ತಾರೆ. ರಾಮ ಉಗ್ರ ತಪಸ್ಸಿನಲ್ಲಿ ತೊಡಗುತ್ತಾನೆ. ರಾಮನ ತಪಸ್ಸನ್ನು ಕೆಡಿಸಲು ಸೀತೇಂದ್ರನು ಪ್ರಯತ್ನಿಸುತ್ತಾನೆ. ತಾನು ಕೃತಕ ಸೀತೆಯಾಗಿ ತನ್ನ ಸುತ್ತ ವಿದ್ಯಾಧರ ಕನ್ಯೆಯರನ್ನು ಸೇರಿಸಿಕೊಂಡು ರಾಮನ ಸಮೀಪಕ್ಕೆ ಬರುತ್ತಾನೆ. ಅಷ್ಟೇ ಅಲ್ಲದೆ ತಪಸ್ಸನ್ನು ಕೈ ಬಿಡುವಂತೆಯೂ ತಮ್ಮನ್ನು ಲಗ್ನಮಾಡಿಕೊಳ್ಳುವಂತೆಯೂ ರಾಮನನ್ನು ಒತ್ತಾಯಿಸುತ್ತಾನೆ. ಜೊತೆಗೆ ಹಲವಾರು ತಪೋವಿಘ್ನಗಳನ್ನುಂಟುಮಾಡುತ್ತಾನೆ. ದೃಢಚಿತ್ತನಾದ ರಾಮ ವಿಚಲಿತನಾಗಲಿಲ್ಲ. ತಪಸ್ಸಿನ ಬಲದಿಂದ ಅವನಿಗೆ ಕೈವಲ್ಯ ಜ್ಞಾನ ಪ್ರಾಪ್ತಿಯಾಯಿತು.

ದೇವತೆಗಳು ಕೈವಲ್ಯ ಮಂಗಲೋತ್ಸವವನ್ನು ಸಂಭ್ರಮದಿಂದ ಆಚರಿಸಿದರು. ಆಗ ಸೀತೇಂದ್ರನು ಬಂದು ರಾಮನಿಗೆ ವಂದನೆ ಸಲ್ಲಿಸಿ ಅತ್ತ ಲಕ್ಷ್ಮಣನಿಗೆ ಪ್ರತಿಬೋಧಿಸುವುದಕ್ಕಾಗಿ ಶರ್ಕರಾ ಪ್ರಭೆ ಎಂಬ ನರಕಕ್ಕೆ ಹೋಗುತ್ತಾನೆ. ಅಲ್ಲಿ ನೋಡಿದರೆ ರಾವಣ-ಲಕ್ಷ್ಮಣ, ಶಂಭೂಕರರು, ಪರಸ್ಪರ ಪೀಡೆ ನೀಡುತ್ತಿದ್ದಾರೆ. ಸೀತೇಂದ್ರನು ಅವರಿಗೂ ಧರ್ಮ ಶ್ರವಣ ಮಾಡಿಸುತ್ತಾನೆ. ದಶರಥ ಅಪರಾಜಿತೆ, ಕೈಕೇಯಿ, ಸುಮಿತ್ರೆ, ಸುಪ್ರಭೆ, ಜನಕ, ಇವರಿಗೆಲ್ಲ ಸದ್ಗತಿ ಪ್ರಾಪ್ತವಾಗುತ್ತದೆ. ಲವ-ಕುಶರು ಭವಬಂಧನದಿಂದ ಮುಕ್ತರಾಗುತ್ತಾರೆ ಎಂಬ ಸಂಗತಿಯೂ ಸೀತೇಂದ್ರನಿಗೆ ರಾಮಭಟ್ಟಾರಕರಿಂದ ತಿಳಿದುಬರುತ್ತದೆ.

ಸೀತೇಂದ್ರನ ಅಪೇಕ್ಷೆಯ ಮೇರೆಗೆ ರಾಮ ಮುನಿಪತಿಯು ತನ್ನ ಮತ್ತು ಲಕ್ಷ್ಮಣನ ಮುಂದಿನ ಭವಗಳ ಬಗೆಗೂ ವಿವರಗಳನ್ನು ನೀಡುತ್ತಾನೆ. ರಾಮ - ಲಕ್ಷ್ಮಣರೂ ಮುಂದೆ ಒಬ್ಬ ಒಕ್ಕಲಿಗ ಮತ್ತು ಅವನ ಹೆಂಡತಿ ರೋಹಿಣಿಗೆ ಅರ್ಹದ್ದಾಸ ಮತ್ತು ರಕ್ಷಿದಾಸ ಎಂಬ ಮಕ್ಕಳಾಗಿ

ಹುಟ್ಟುತ್ತಾರೆ. ಮುಂದೆ ವಿಜಯಪುರವಲ್ಲಿ ಬೇರೊಂದು ಜನ್ಮದಲ್ಲಿ ಹುಟ್ಟಿ ಋಷಿಗಳಿಗೆ ಆಹಾರ ದಾನವನ್ನಿತ್ತು ಮಡಿಯುತ್ತಾರೆ. ಅದರ ತರುವಾಯ ಹರಿವರ್ಷದಲ್ಲಿ ಹುಟ್ಟಿ ದೇವಲೋಕಕ್ಕೆ ಹೋಗಿಬಂದು ಹಿಂದೆ ಹೇಳಿದ ವಿಜಯಪುರವನ್ನಾಳುವ ಕುಮಾರ ಕೀರ್ತಿಗೂ ಅವನ ಅರಸಿ ಲಕ್ಷ್ಮೀ ಮತಿಗೂ ಜಯಕಾಂತ ಮತ್ತು ಜಯಪ್ರಭ ಎಂಬ ಮಕ್ಕಳಾಗಿ ಹುಟ್ಟುತ್ತಾರೆ. ಬಳಿಕ ತಪಸ್ಸು ಮಾಡಿ ಕಡೆಯಲ್ಲಿ ಅತಿಶಯವಾದ ಸುಖದಲ್ಲಿರುತ್ತಾರೆ ಎಂದು ತಮ್ಮ ವೃತ್ತಾಂತದ ಬಗ್ಗೆ ತಿಳಿಸಿದನಲ್ಲದೆ ಸೀತೇಂದ್ರನ ಮುಂದಿನ ಭವಗಳ ಬಗ್ಗೆಯೂ ವಿವರಗಳನ್ನು ನೀಡುತ್ತಾನೆ. "ನೀನು ಅಚ್ಯುತಕಲ್ಪದಿಂದ ಬಂದು ಭರತ ಕ್ಷೇತ್ರದಲ್ಲಿ ಚಕ್ರವರ್ತಿಯಾಗಿರಲು ಲಾಂತವಕಲ್ಪದಿಂದ ಅವರು ಬಂದು ನಿನಗೆ ಇಂದ್ರರಥ ಮತ್ತು ಮೇಘರಥ ಎಂಬ ಮಕ್ಕಳಾಗುವರು. ಅವರಲ್ಲಿ ಅಗ್ರಸುತನಾಗಿ ಹುಟ್ಟಿದ ದಶಗ್ರೀವನು ವಿರಕ್ತನಾಗಿ ಹುಟ್ಟಿ ವೈಜಂತಿ ವಿಮಾನದಲ್ಲಿ ಮರುಹುಟ್ಟುಪಡೆದು, ಭರತಕ್ಷೇತ್ರದ ರತ್ನಪುರದಲ್ಲಿ ತೀರ್ಥಂಕರ ಕುಮಾರನಾಗಿ ಹುಟ್ಟಿ ಚಕ್ರವರ್ತಿಯಾಗುತ್ತಾನೆ. ತದನಂತರ ತೀರ್ಥಂಕರನಾಗಿ ಹುಟ್ಟುತ್ತಾನೆ. ಆ ಭಾವಿ ತೀರ್ಥಂಕರನಿಗೆ ನೀನು ಗಣಧರನಾಗುವೆ, ಬಳಿಕ ಮುಕ್ತಿ ಪಡೆಯುವೆ ಎಂದು ಭಟ್ಟಾರಕರು ಸೀತೇಂದ್ರನಿಗೆ ತಿಳಿಸುತ್ತಾರೆ. ಅಲ್ಲದೆ, ಲಕ್ಷ್ಮಣನು ಮೋಕ್ಷಕ್ಕೆ ಹೋಗುವವರೆಗಿನ ಭವಗಳ ಕುರಿತಾಗಿಯೂ ವಿವರಿಸುತ್ತಾರೆ. ಮೇಘರಥನು ತಪಸ್ಸು ಮಾಡಿ ದೇವಗತಿಯನ್ನು ಪಡೆಯುತ್ತಾನೆ. ತರುವಾಯ ಪೃಥ್ವೀಪುರದಲ್ಲಿ ಸೂರತಕೀರ್ತಿ ಎಂಬ ಅರಸನಾಗಿ ಮತ್ತೆ ತಪಸ್ಸನ್ನಾಚರಿಸಿ ಸ್ವರ್ಗಲೋಕದಲ್ಲಿ ಹುಟ್ಟುತ್ತಾನೆ. ತರುವಾಯ ಪದ್ಮ ಪುರದಲ್ಲಿ ತೀರ್ಥಂಕರ ಕುಮಾರನೂ ಚಕ್ರವರ್ತಿಯೂ ಆಗಿ ಹುಟ್ಟಿ ರಾಜ್ಯಸುಖವನ್ನು ತೊರೆದು ತಪಸ್ಸು ಮಾಡಿ ತೀರ್ಥಂಕರನಾಗಿ ಜನಿಸಿ ಮೋಕ್ಷಕ್ಕೆ ಹೋಗುವನು."

ರಾಮಭಟ್ಟಾರಕರು ಲೋಕ ಸಂಚಾರ ಮಾಡುತ್ತ ಕೈಲಾಸಪರ್ವತವನ್ನು ತಲುಪಿ ಅಲ್ಲಿಯ ಸ್ಫಟಿಕಮಯ ಶಿಲೆಯ ಮೇಲೆ ಪ್ರತಿಮಾಯೋಗದಲ್ಲಿ ತಪಸ್ಸಿಗೆ ತೊಡಗುತ್ತಾರೆ. ಕೊನೆಗೆ ರಾಮಭಟ್ಟಾರಕರಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆ. ದೇವದುಂದುಭಿ ಮೊಳಗುತ್ತದೆ. ಇಲ್ಲಿಗೆ ರಾಮಚಂದ್ರ ಚರಿತ ಪುರಾಣದ ಕಥೆ ಮುಗಿಯುತ್ತದೆ.

## ರಾಮಚಂದ್ರ ಚರಿತ ಪುರಾಣಂ : ಜೈನ ಅಂಶಗಳು

ಮಲ್ಲಿನಾಥಪುರಾಣ ಮತ್ತು ರಾಮಚಂದ್ರಚರಿತ ಪುರಾಣ ಎಂಬ ಎರಡೂ ಕೃತಿಗಳು ಆಗಮಿಕಗಳಾಗಿರುವುದು ನಾಗಚಂದ್ರನ ಜೈನಪರ ದೃಷ್ಟಿಕೋನವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಒಳಹೊಕ್ಕು ನೋಡಿದಾಗ, ಆಗಮಿಕ ಕೃತಿ ರಚನೆಯೊಂದಿಗೆ ನಾಗಚಂದ್ರ ಇನ್ನೊಂದು ಹೊಸದಾರಿ ತುಳಿದಿದ್ದಾನೆ. ಅದುವರೆಗಿನ ಜೈನಕವಿಗಳಿಗೆ ಅಡುಂಬೊಲವೆನಿಸಿದ್ದ ದಿಗಂಬರ ಸಂಪ್ರದಾಯದ ಮಹಾಪುರಾಣದ ವಸ್ತುವನ್ನು ಬದಿಗಿರಿಸಿ, ಶ್ವೇತಾಂಬರ ಸಂಪ್ರದಾಯವನ್ನೊಳಗೊಂಡ ವಿಮಲಸೂರಿಯ 'ಪಉಮಚರಿಯ' ದಿಂದ ವಸ್ತುವನ್ನು ಹುಡುಕಿಕೊಂಡಿರುವುದು ನಾಗಚಂದ್ರನ ವೈಶಿಷ್ಟ್ಯವಾಗಿದೆ. ಇದರಿಂದ ಆತ ಎರಡು ಗುರಿಗಳನ್ನು ಈಡೇರಿಸಿಕೊಂಡ ಹಾಗಾಯಿತು. ಒಂದು ಮಹಾಪುರಾಣೇತರ ಜೈನ ವಸ್ತುವಿನ ಬಳಕೆಯಾದರೆ, ಇನ್ನೊಂದು ಕನ್ನಡ ಜೈನ ರಾಮಾಯಣ ಪರಂಪರೆಯ ಉದ್ಘಾಟನೆ. ಹೀಗಾಗಿ ನಾಗಚಂದ್ರನ ಈ ಕೃತಿಗೆ ಧಾರ್ಮಿಕ, ಐತಿಹಾಸಿಕ, ಭಾಷಿಕ ಮೊದಲಾದ ಬಹುಮುಖಿ ಮಹತ್ವ ಸಂದಿದೆ. ತರುವಾಯ ಬಂದಿರುವ ಕುಮುದೇಂದು, ನಾಗರಾಜ, ಚಂದ್ರಸಾಗರವರ್ಣಿ ಮೊದಲಾದ ಕವಿಗಳು ನಾಗಚಂದ್ರನ ಪ್ರಭಾವಕ್ಕೆ

ಒಳಗಾಗಿರುವುದು ಈ ಮಾತಿಗೆ ಸಾಕ್ಷಿಯಾಗಿದೆ. ಅಷ್ಟೇ ಅಲ್ಲದೆ ಜೈನೇತರ ವಲಯದಲ್ಲಿಯೂ ಕೂಡ ನಾಗಚಂದ್ರನ ಈ ಕೃತಿ ತನ್ನ ಜನಪ್ರಿಯತೆಯನ್ನು ಸಾಧಿಸಿಕೊಂಡಿರುವುದನ್ನು ನಾವಿಲ್ಲಿ ನೋಡಬಹುದು.

ಇಷ್ಟು ಹಿನ್ನೆಲೆಯೊಂದಿಗೆ ರಾಮಚಂದ್ರಚರಿತ ಪುರಾಣದ ಕಥೆಯೊಂದಿಗೆ ನಾಗಚಂದ್ರನು ಸಮೀಕರಿಸಿಕೊಂಡಿರುವ ಜೈನವಿಚಾರಗಳನ್ನಿಲ್ಲಿ ವಿಶ್ಲೇಷಿಸಲಾಗಿದೆ. ರಾಜಾಶ್ರಯದ ನೆರವು ತಪ್ಪಿ, ಇನ್ನೊಂದು ಕಡೆ ವೈದಿಕ ಮತ್ತು ಶೈವಪಂಥಗಳ ಪ್ರಭಾವದಿಂದಾಗಿ ಜೈನಸಮಾಜದ ಮನೋಸ್ಥೈರ್ಯ ಕುಸಿಯುತ್ತಿರುವ ಸಂದರ್ಭದಲ್ಲಿ, ಅದರ ಪುನರ್ ಪ್ರತಿಷ್ಠಾಪನೆಗಾಗಿ ನಾಗಚಂದ್ರ ತನ್ನ ಕೃತಿ ರಚನೆಯ ಮೂಲಕ ಪ್ರಯತ್ನಿಸಬೇಕಾಯಿತು. ಜಿನಮತದ ಸಮರ್ಥನೆ ಮತ್ತು ಪ್ರಸಾರದ ಎರಡು ಆಶಯಗಳನ್ನು ಹೊತ್ತು ಇವನ ಕೃತಿಗಳು ಮೈದಳೆದಿವೆ.

ಪಂಪ-ಪೊನ್ನ-ರನ್ನರಂತೆ-ನಾಗಚಂದ್ರನೂ ಆಗಮಿಕ ಕವಿಯೇ ಹೌದು. ಆದರೆ ಕಥಾನಾಯಕರನ್ನು ನಿರ್ಣಯಿಸಿಕೊಳ್ಳುವ ವಿಷಯದಲ್ಲಿ ನಾಗಚಂದ್ರ ಪ್ರಾಚೀನರಿಗಿಂತ ಭಿನ್ನವಾಗಿ ವರ್ತಿಸಿರುವುದನ್ನು ನಾವು ತಪ್ಪದೆ ಗುರುತಿಸಬೇಕು. ಮೊದಲಿನ ಕವಿಗಳು ಹೆಚ್ಚಾಗಿ ತೀರ್ಥಂಕರ ಕಥೆಗಳಿಗೆ ಒತ್ತುಕೊಡುತ್ತಾ ಬಂದಿದ್ದರು. ನಾಗಚಂದ್ರ ಮಾತ್ರ ಎಂಟನೆಯ ಬಲದೇವ, ವಾಸುದೇವ ಮತ್ತು ಪ್ರತಿವಾಸುದೇವರಾದ - ರಾಮ, ಲಕ್ಷ್ಮಣ, ರಾವಣರ ಚರಿತೆಯನ್ನು ಪರಿಚಯಿಸಿಕೊಡುವ ಮೂಲಕ ತನ್ನ ಹೆಚ್ಚುಗಾರಿಕೆಯನ್ನು ಪ್ರಕಟಿಸಿದ್ದಾನೆ.

ಜೈನ ಪರಂಪರೆಯಲ್ಲಿ ರಾಮ ವಿಷ್ಣುವಿನ ಅವತಾರವಲ್ಲ. ೧೦ನೆಯ ತೀರ್ಥಂಕರನಾದ ಮುನಿಸುವ್ರತನ ಕಾಲದ ಬಲದೇವ ಮಾತ್ರ. ಹಾಗೆಂದು ಜೈನರಲ್ಲಿ ರಾಮನ ಮಹತ್ವ ಕಡಿಮೆ ಎಂದು ಭಾವಿಸಬೇಕಾಗಿಲ್ಲ. ಅವನೂ ಮೋಕ್ಷಗಾಮಿಯೇ ಆಗಿದ್ದಾನೆ. ಹಳೆಯ ಪದ್ಧತಿಯಂತೆ ಅವತಾರೀ ಪುರುಷನೆಂದು ಗುರುತಿಸಿ ರಾಮನನ್ನು ಜನತೆಯಿಂದ ದೂರ ಇಡುವ ಬದಲು, ಎಲ್ಲರ ಹಾಗೆ ಮನುಷ್ಯನಾಗಿದ್ದುಕೊಂಡೇ ವಿಶಿಷ್ಟ ಸಾಧನೆಗೈದಾತನೆಂದು ನಿರೂಪಿಸಿ ರಾಮನನ್ನು ಜನತೆಗೆ ಆತ್ಮೀಯನನ್ನಾಗಿ ಮತ್ತು ಆದರ್ಶ ಪುರುಷನನ್ನಾಗಿ ಚಿತ್ರಿಸಲಾಗಿದೆ. ಜೈನರು ತೀರ್ಥಂಕರರನ್ನು ಕೂಡ ಅವತಾರೀ ಪುರುಷರೆಂದಾಗಲಿ, ದೇವರೆಂದಾಗಲಿ ಮಾನ್ಯ ಮಾಡುವುದಿಲ್ಲ. ಹೆಚ್ಚಾದರೆ ಸಾಮಾನ್ಯರಿಗೆ ಅವರೊಂದು ಮಾದರಿಯಾಗಿ, ಸ್ಫೂರ್ತಿಯ ಸೆಲೆಯಾಗಿ ನಿಲ್ಲಬಲ್ಲರು. ಜೈನ ದರ್ಶನದ ಈ ಬಗೆಯ ಮನುಷ್ಯತ್ವ ಮತ್ತು ಮಾನವಜನ್ಮದ ಪ್ರಾಧಾನ್ಯವನ್ನು ಎಲ್ಲ ಜೈನ ಪುರಾಣಗಳು ಸಾರುತ್ತ ಬಂದಿವೆ. ಆ ಮಾಲಿಕೆಯಲ್ಲಿ ನಾಗಚಂದ್ರನು ಕೂಡಾ ರಾಮ,ಲಕ್ಷ್ಮಣ, ರಾವಣರನ್ನು ಮನುಷ್ಯ ನೆಲೆಯಲ್ಲಿಯೇ ನಿಲ್ಲಿಸಿ ಚಿತ್ರಿಸಿದ್ದಾನೆ. ಹೀಗಾಗಿ ಕಥೆ ಒಳಗೆ ಅಗಮಿಕ ಅಂಶಗಳನ್ನು ಒಳಗೊಂಡಿದ್ದರೂ ಹೊರಗೆ ಎಲ್ಲರನ್ನೂ ಸೆಳೆಯಬಲ್ಲ ಸಹಜ ಲೌಕಿಕ ಆಕರ್ಷಣೆಯನ್ನು ಹೊಂದಿದೆ.

ಲಕ್ಷ್ಮಣನು ಇಲ್ಲಿ ವಾಸುದೇವ, ವೀರನಾಯಕ, ಬಲದೇವನ ಹಿತಚಿಂತಕನಾಗಿ, ಮೋಕ್ಷ ಸಾಧನೆಯ ವಿಷಯದಲ್ಲಿ ಸ್ಫೂರ್ತಿದಾಯಕನೂ, ಸಹಾಯಕನೂ ಆಗಿ ಇರುವಂಥವನು. ಹೀಗಾಗಿ ಜೈನಕಥೆಗಳಲ್ಲಿ ಬಲದೇವರ ಕೈಯಿಂದ ಜರುಗಬಹುದಾದ ಹಿಂಸೆ ಮತ್ತು ಪ್ರಮಾದಗಳನ್ನು ವಾಸುದೇವರು ಸಕಾಲಕ್ಕೆ ತಪ್ಪಿಸಿ ತಾವು ಅದರ ಹೊಣೆಯನ್ನು ಹೊತ್ತುಕೊಳ್ಳುತ್ತಾರೆ. ಈ ಪ್ರಕ್ರಿಯೆಯಿಂದಾಗಿ ಪಾಪಬದ್ಧರಾಗುವ ವಾಸುದೇವರು, ಅವನ್ನು ಪರಿಹರಿಸಿಕೊಳ್ಳಲು ಅನೇಕ

ಜನ್ಮಗಳನ್ನು ತಾಳಬೇಕಾಗುತ್ತದೆ. ಇಲ್ಲಿ ಪ್ರತಿವಾಸುದೇವನಾದ ರಾವಣನನ್ನು ಕೊಲ್ಲುವವನು ಲಕ್ಷ್ಮಣ. ಅದರ ಫಲಾಫಲಗಳನ್ನು ಅನುಭವಿಸುವವನೂ ಅವನೇ.

ರಾವಣ ಇಲ್ಲಿ ಪ್ರತಿವಾಸುದೇವ. ಸದ್ಗುಣಿಯೂ, ಸದಾಚಾರಿಯೂ ಆಗಿರುವ ಪ್ರತಿವಾಸುದೇವರು ಮನುಷ್ಯಸಹಜವಾದ ಯಾವುದೋ ಒಂದು ಪ್ರಮಾದದಿಂದ ಪರಿತಪಿಸಬೇಕಾಗುತ್ತದೆ. ಇದರ ಪರಿಣಾಮ ಬಲದೇವ,ವಾಸುದೇವರಿಗೂ ಬಿಸಿ ತಟ್ಟಿಸುತ್ತದೆ. ಅವರಿಬ್ಬರೂ ಮುಂದಾಗಿ ಇವನನ್ನು ತಿದ್ದುತ್ತಾರೆ. ತಾನು ಎಸಗಿದ ಪ್ರಮಾದಕ್ಕಾಗಿ ಫಲ ಪಡೆಯುತ್ತಾನೆ. ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ. ಪ್ರತಿವಾಸುದೇವರ ಸ್ವಭಾವದ ಸಂಕೀರ್ಣತೆಯನ್ನು, ಅದರ ಸಹಜತೆಯನ್ನು ಗುರುತಿಸುವಲ್ಲಿ ಜೈನಕವಿಗಳು ತಳೆದ ಅನುಕಂಪಪೂರಿತ ಧೋರಣೆ ಅವರ ಹೃದಯ ಶ್ರೀಮಂತಿಕೆಯನ್ನು ತೋರಿಸಿಕೊಡುತ್ತದೆ. ಮನುಷ್ಯ ತಪ್ಪುಮಾಡುವುದು ಸಹಜ. ತಾನು ಮಾಡುವ ತಪ್ಪನ್ನು ತಿಳಿದುಕೊಂಡು ತಿದ್ದಿಕೊಳ್ಳುವುದರಲ್ಲಿಯೇ ಅವನು ತನ್ನ ಮನುಷ್ಯತ್ವದ ಎತ್ತರವನ್ನು ಏರಬಲ್ಲ. ಕ್ಷಮೆ ಮತ್ತು ಪ್ರಾಯಶ್ಚಿತ್ತಗಳಿಗೆ ಜೈನದರ್ಶನವು ಕೊಟ್ಟಿರುವ ಪ್ರಾಶಸ್ತ್ಯವನ್ನು, ಜೈನಕಾವ್ಯಗಳ ಪ್ರತಿವಾಸುದೇವರ ಪಾತ್ರಗಳು ನಮಗೆ ಮನವರಿಕೆ ಮಾಡಿ ಕೊಡುತ್ತವೆ. ಶಿಕ್ಷೆಗಿಂತ ಕ್ಷಮೆ ದೊಡ್ಡದು, ಕ್ಷಮೆಗಿಂತ ತಪ್ಪಿತಸ್ಥನು ಅನುಭವಿಸುವ ಪ್ರಾಯಶ್ಚಿತ್ತ ದೊಡ್ಡದು ಎಂಬ ಮನೋವೈಜ್ಞಾನಿಕ ಸೂಕ್ಷ್ಮವನ್ನು ಜೈನದರ್ಶನ ಅಳವಡಿಸಿಕೊಂಡಿದೆ. ಇದರಿಂದಾಗಿ ಸಹಜವಾಗಿ ಜೈನಕಾವ್ಯಗಳು ಪ್ರತಿವಾಸುದೇವರ ಬಗ್ಗೆ ವಿಶಿಷ್ಟ ಸಹಾನುಭೂತಿಯನ್ನು ಪ್ರಕಟಿಸುತ್ತವೆ. ನಾಗಚಂದ್ರನ ರಾವಣನ ಪಾತ್ರವನ್ನು ನೋಡುವ ಮೂಲಕ ನಾವಿದನ್ನು ಅರ್ಥಮಾಡಿಕೊಳ್ಳಬಹುದು. ಹೀಗೆ ವಾಸುದೇವ ಮತ್ತು ಬಲದೇವರ ವ್ಯಕ್ತಿತ್ವವನ್ನು ಪರೀಕ್ಷಿಸಿ ಎತ್ತರಿಸುವಲ್ಲಿ, ಪ್ರತಿವಾಸುದೇವರು ಮಹತ್ವದ ವ್ಯಕ್ತಿಗಳಾಗಿದ್ದು ಸಹಜವಾಗಿಯೇ ಜೈನರ ತ್ರಿಷಷ್ಟಿ ಶಲಾಕಾ ಪುರುಷರಲ್ಲಿ ಸೂಕ್ತ ಸ್ಥಾನಮಾನ ಪಡೆದಿದ್ದಾರೆ.

ರಾಮಚಂದ್ರಚರಿತ ಪುರಾಣದಲ್ಲಿ ಯಜ್ಞಯಾಗಾದಿಗಳ ಹಾವಳಿಯಿಲ್ಲ. ಪರಶುರಾಮ, ಮಂಥರೆಯರ ಪಾತ್ರಗಳಿಲ್ಲ. ಶಿವಧನುಸ್ಸಿನ ಭಂಗವಿಲ್ಲ. ರಾವಣ ರಾಕ್ಷಸನಲ್ಲ. ವಾಲಿ ಸುಗ್ರೀವಾದಿ -ಗಳು ಕಪಿಗಳಲ್ಲ. ವಾಲಿ ರಾಮನಿಂದ ಹತನಾಗುವುದಿಲ್ಲ. ಅದರ ಬದಲು ತಪೋನಿರತನಾಗು-ತ್ತಾನೆ. ಅದರಂತೆಯೇ ಅಗ್ನಿಪರೀಕ್ಷೆಯ ನಂತರ ಸೀತೆ ಸಂನ್ಯಾಸಿನಿಯಾಗಿ ಇಂದ್ರಪದವಿ ಪಡೆಯುತ್ತಾಳೆ. ಇವಿಷ್ಟು ನಾಗಚಂದ್ರ ತನ್ನ ಕೃತಿಯಲ್ಲಿ ಅಳವಡಿಸಿದ ಪ್ರಮುಖ ಜೈನ ಅಂಶಗಳು.

ಕಥೆಯ ಹಂದರದಗುಂಟ ಹೋದಾಗ ಕೃತಿಯಲ್ಲಿ ಹುದುಗಿರುವ ಇನ್ನಷ್ಟು ಜೈನ ಸೂಕ್ಷ್ಮಗಳು ಮತ್ತು ಆ ಸೂಕ್ಷ್ಮಗಳಿಂದ ಕಥೆಗೆ ಉಂಟಾದ ಸೊಗಸುಗಳನ್ನು ಗುರುತಿಸಬಹುದು. ಇಲ್ಲಿಯ ನಾರದ ಸೀಮಂಧರಸ್ವಾಮಿಗಳ ಪರಿನಿಷ್ಕ್ರಮಣ ಕ್ಷೇತ್ರದಿಂದ ದಶರಥನಲ್ಲಿಗೆ ಬರುತ್ತಾನೆ. ಪೂರ್ವ ವಿದೇಹವು ಜೈನರ ದೃಷ್ಟಿಯಲ್ಲಿ, ಅತ್ಯಂತ ಪವಿತ್ರ ಕ್ಷೇತ್ರವಾಗಿದ್ದು ತೀರ್ಥಂಕರರ ಮೋಕ್ಷಸ್ಥಾನವೆನಿಸಿದೆ. ಜೈನರಲ್ಲಿ ಹುಟ್ಟು ಸಾವುಗಳು ಪುಣ್ಯ-ಪಾಪಗಳನ್ನು ಅವಲಂಬಿಸಿರುತ್ತವೆ. ಇದನ್ನೇ ಅವರು ಪಾಪನಿಬಂಧನ ಮತ್ತು ಪುಣ್ಯಾರ್ಜನೆ ಎಂದು ಕರೆಯುತ್ತಾರೆ. ಇಲ್ಲಿಯ ಪ್ರತಿಯೊಂದೂ ಪಾತ್ರವೂ ಪಾಪವನ್ನು ಪರಿಹರಿಸಿಕೊಂಡು ಪುಣ್ಯವನ್ನು ಸಂಪಾದಿಸುವಲ್ಲಿ ಪ್ರಯತ್ನಪರವಾಗಿರುತ್ತದೆ. ದಶರಥನಿಗೆ ವಿಭೀಷಣನಿಂದ ಒದಗಬಹುದಾದ ವಿಪತ್ತನ್ನು ನಾರದರು ಬಂದು ಸೂಚಿಸುವ ಪ್ರಸಂಗ ಮೂಲದ್ದೇ ಆದರೂ ಕೂಡ, ನಾರದರು ಬಂದದ್ದು ಪವಿತ್ರ

ಜೈನಕ್ಷೇತ್ರದಿಂದ. ರಾಮ, ಲಕ್ಷ್ಮಣ, ರಾವಣರ ಜನನ ಮತ್ತು ಜೀವನದ ಕುರಿತಾಗಿ ಒಬ್ಬ ಜೈನಮುನಿಯಿಂದ ಮಾಹಿತಿ ಪಡೆದು ಬಂದಿರುವುದಾಗಿ ತಿಳಿಸುವ ನಾಗಚಂದ್ರನ ಜೈನದೃಷ್ಟಿಕೋನ ಕಥೆಯ ಗತಿಗೆ ಭಂಗ ಬಾರದಂತೆ ಹೆಚ್ಚಿನ ಸ್ವಾರಸ್ಯವನ್ನುಂಟು ಮಾಡಿದೆ. ದಶರಥನು ತನ್ನ ಮಗ ರಾಮನ ಜನ್ಮೋತ್ಸವವನ್ನು ಆಚರಿಸಿದ್ದು ತೀರ್ಥಂಕರರ ಜನ್ಮೋತ್ಸವದ ಹಾಗೆ ಕಂಡುಬರುತ್ತದೆ. ರಾಮನಿಂದ ಶಿವಧನುಸ್ಸಿನ ಭಂಗವಾಗುವುದಿಲ್ಲ, ಅದರ ಬದಲು 'ವಜ್ರಾವರ್ತ''ವೆಂಬ ಪ್ರಸಿದ್ಧವಾದ ಬಿಲ್ಲಿಗೆ ರಾಮನು ಹೆದೆಯೇರಿಸುತ್ತಾನೆ.

ರಾಮಚಂದ್ರಚರಿತ ಪುರಾಣದಲ್ಲಿ ಮಂಥರೆಯ ಪಾತ್ರವನ್ನು ಕೈಬಿಡಲಾಗಿದ್ದು ಆ ಕ್ರಮದ ಹಿಂದೆ ಪ್ರಬಲವಾದ ಜೈನ ವಿಚಾರ ಯಾವುದೂ ಕಂಡುಬರುವುದಿಲ್ಲ. ದಶರಥನು ರಾಮನಿಗೆ ಪಟ್ಟ ಕಟ್ಟಲಿರುವ ಮತ್ತು ಭರತನು ದಶರಥನೊಡನೆ ತಪಸ್ಸಿಗೆ ತೆರಳಲಿರುವ ಸಂಗತಿಗಳನ್ನು ಮಂಥರೆ ಬಂದು ಕೈಕೆಯ ಕಿವಿಯಲ್ಲಿ ಊದಿದಳೆಂಬುನ್ನೂ, ದುರುದ್ದೇಶಪೂರಿತವಾದ ಮಂಥರೆಯ ಮಾತಿಗೆ ಕೈಕೆಯು ಮನಸೋತಳೆಂಬುದನ್ನೂ ಹೇಳುವ ಬದಲು, ರಾಮನ ವನವಾಸದ ನಿರ್ಣಯವನ್ನು ಸ್ವತಃ ಕೈಕೇಯಿಯೇ ಕೈಕೊಂಡಳೆಂಬುದನ್ನು ನಾಗಚಂದ್ರ ಒತ್ತುಕೊಟ್ಟು ತಿಳಿಸಿರುವಂತಿದೆ. ಅಲ್ಲದೆ ಇದೊಂದು ಪ್ರಸಂಗವನ್ನು ಬಿಟ್ಟರೆ ಅವನಿಗೆ ಮಂಥರೆಯ ಪಾತ್ರದ ಅಗತ್ಯವೂ ಅಷ್ಟಾಗಿ ತೋರಿದಂತಿಲ್ಲ.

ವನವಾಸಕ್ಕೆ ಹೊರಡುವ ಮುನ್ನ ರಾಮ ಜಿನಮಂದಿರಕ್ಕೆ ಬಂದು ಪೂಜೆ ಸಲ್ಲಿಸುತ್ತಾನೆ. ಆ ಸಂದರ್ಭದಲ್ಲಿ ಅವನು ಮಾಡುವ ಪ್ರಾರ್ಥನೆ ಸಂಪೂರ್ಣ ಜೈನದರ್ಶನದ ಕೆನೆಯಂತಿದೆ. ಜೈನ ವಿಚಾರಗಳನ್ನು ತಿಳಿಸುವುದರ ಜೊತೆಗೆ ನಾಗಚಂದ್ರ ಕಥಾನಾಯಕನ ಮುಖಾಂತರ ತನ್ನ ಕಾವ್ಯಧೋರಣೆಯನ್ನು ಅಲ್ಲಿ ಪ್ರಕಟಿಸಿದ್ದಾನೆ. ಇಲ್ಲಿ ಶ್ರೀರಾಮ ಇತರ ಸಾಮಾನ್ಯ ವ್ಯಕ್ತಿಗಳ ಹಾಗೆ ಕೇವಲ ಲೌಕಿಕನಲ್ಲ, ಧರ್ಮಪರನಾದ ಭವ್ಯಾತ್ಮ. ಈ ನೆಪದಲ್ಲಿ ನಾಗಚಂದ್ರ ರಾಮನ ಜಿನಾರ್ಚನೆಯ ಮೂಲಕ ತತ್ವಜ್ಞಾನವನ್ನು ಹೇಳಿಸಿದ್ದಾನೆ.

ಮೂಲಕ ಪಾದುಕಾ ಪ್ರಸಂಗವನ್ನು ನಾಗಚಂದ್ರ ಕೈಬಿಟ್ಟಿರುವುದೂ ಉತ್ತಮ ಜೈನಪರ ಬದಲಾವಣೆಗಳಲ್ಲಿ ಒಂದಾಗಿದೆ. ಪಾದುಕೆಗಳನ್ನು ತಂದು ರಾಜಪೀಠದ ಮೇಲಿಟ್ಟು ಭರತನು ಆಳಿದನೆಂದು ಹೇಳುವುದಕ್ಕಿಂತ, ರಾಮನಿಂದ ರಾಜ್ಯಭಾರಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ತಿಳಿದು, ಆ ಮಾರ್ಗದಲ್ಲಿ ತಾನು ನಡೆದ ಎಂದು ನಾಗಚಂದ್ರ ಹೇಳಿರುವುದು ಕಥೆಗೆ ಹೆಚ್ಚಿನ ಸಹಜತೆಯನ್ನು ತಂದುಕೊಟ್ಟಿದೆ. ವ್ಯಕ್ತಿಪೂಜೆಗಿಂತ ಗುಣಾದರ್ಶಗಳಲ್ಲಿ ಶ್ರದ್ಧೆ ಮತ್ತು ಅವುಗಳ ಅನುಷ್ಠಾನದಲ್ಲಿ ನಿಷ್ಠೆ ಬಹುಮುಖ್ಯವೆಂಬ ಜೈನ ಸೂಕ್ಷ್ಮವನ್ನು ಕವಿ ಈ ಮಾರ್ಪಾಡಿನಲ್ಲಿ ಅಳವಡಿಸಿದ್ದಾನೆ.

ಶಂಭೂಕವಧೆ ಇಲ್ಲಿ ಲಕ್ಷ್ಮಣನಿಂದ ಜರುಗುತ್ತದೆ. ಅದೂ ಆಕಸ್ಮಿಕವಾಗಿ ತನ್ನಿಂದ ಜರುಗಿದ ಪ್ರಮಾದಕ್ಕಾಗಿ ಲಕ್ಷ್ಮಣ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾನೆ. ರಾವಣ ಸೀತೆಗೆ ಆಶಿಸುವುದು ಮನುಷ್ಯ ಸಹಜವಾದ ರೀತಿಯಲ್ಲಿ. ರಾವಣನಾದರೋ ಸಾಮಾನ್ಯ ವ್ಯಕ್ತಿಯಲ್ಲ, ಅಖಂಡ ಪುರುಷವ್ರತಧಾರಿ. ಪರಾಂಗನಾವಿರತಿವ್ರತಿ. ಪರವಧುವಿಗೆ ಆಸೆಗೈಯ್ಯುವುದು ಮಹಾಪಾತಕವೆಂಬುದು ಅವನಿಗೆ ಗೊತ್ತಿದೆ. ಆದರೆ ದುರ್ಬಲ ಕ್ಷಣದಲ್ಲಿ ಆತ ಸೀತೆಗೆ ಸೋತುಬಿಡುತ್ತಾನೆ. ಸೀತೆ-ರಾವಣರ ಪ್ರಸಂಗದುದ್ದಕ್ಕೂ ನಾಗಚಂದ್ರ ಜೈನ ಬ್ರಹ್ಮಚರ್ಯ ವ್ರತದ

ಮೇಲೆ ಮತ್ತು ವ್ಯಕ್ತಿಯ ಶೀಲ-ಸದಾಚಾರಗಳ ಮೇಲೆ ಒತ್ತುಕೊಡುತ್ತಾ ಹೋಗುತ್ತಾನೆ. ವ್ಯಕ್ತಿಯ ಒಂದು ಸಣ್ಣ ಪ್ರಮಾದ ಅಥವಾ ಕಾಲುಜಾರುವಿಕೆ ಹೇಗೆ ಅವನ ದುರಂತಕ್ಕೆ ಕಾರಣವಾಗಬಹುದು ಎಂಬುದನ್ನು ನಾಗಚಂದ್ರ ಮನೋಜ್ಞವಾಗಿ ನಿರೂಪಿಸುತ್ತಾನೆ.

ಪತಿಯ ಚಿಂತೆಯ ಕಾರಣವನ್ನು ತಿಳಿದ ಮಂಡೋದರಿ,ತಾನೇ ಮುಂದಾಗಿ ರಾವಣನನ್ನು ಒಪ್ಪಿಕೊಳ್ಳುವಂತೆ ಸೀತೆಯ ಮೇಲೆ ಒತ್ತಡ ತಂದಳೆಂದು ನಾಗಚಂದ್ರ ಮಾಡಿಕೊಂಡಿರುವ ವ್ಯತ್ಯಾಸ ತುಂಬಾ ವಿಚಿತ್ರವಾಗಿ ಕಾಣುತ್ತದೆ. ಈ ಬದಲಾವಣೆಯ ಹಿಂದಿನ ಕವಿಯ ಉದ್ದೇಶವೇನಿದ್ದಿತೋ ಹೇಳುವುದು ಕಷ್ಟ. ಬ್ರಹ್ಮಚರ್ಯವನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪೋಷಿಸಿಕೊಂಡು ಬರುತ್ತಿದ್ದ ಪತಿ ರಾವಣನಿಗೆ ತಕ್ಕ ಹೆಂಡತಿಯಾಗಿದ್ದವಳು ಮಹಾಪತಿವ್ರತೆಯೆನಿಸಿದ್ದ ಮಂಡೋದರಿ. ಅಂಥವಳು ಸೀತೆಯನ್ನು ತನ್ನ ಪತಿಯತ್ತ ವಾಲಿಸಲು ಪ್ರಯತ್ನ ಮಾಡಿದಳೆಂದು ನಾಗಚಂದ್ರ ತಿಳಿಸಿರುವುದು ಯಾವ ದೃಷ್ಟಿಯಿಂದಲೂ ಔಚಿತ್ಯಪೂರ್ಣವೂ ಸಮರ್ಥನೀಯವೂ ಎನಿಸುವುದಿಲ್ಲ.

ರಾವಣನಿಂದ ಮರಳಿ ಪಡೆದು ತಂದ ಸೀತೆಯನ್ನು ಒಪ್ಪಿಕೊಂಡ ರಾಮನ ಕ್ರಮದ ಬಗ್ಗೆ ಅಗಸನೊಬ್ಬ ಬಿರುನುಡಿಯನ್ನಾಡಿದನೆಂದು ಹೇಳುವ ಬದಲು ಊರ ಜನರು ಪಿಸುಮಾತುಗಳನ್ನಾಡಿದರು ಎಂದು ನಾಗಚಂದ್ರ ಹೇಳುತ್ತಾನೆ. ರಾಜನಾದವನು ಪ್ರಜೆಗಳ ಅಭಿಮತವನ್ನು ಮನ್ನಿಸಬೇಕೆಂಬ ಕಾರಣವಾಗಿ ರಾಮನು ಸೀತೆಯನ್ನು ಕಾಡಿಗಟ್ಟಿದಂತೆ ನಾಗಚಂದ್ರ ತಿಳಿಸಿದ್ದಾನೆ. ಏನಿದ್ದರೂ ಈ ಬದಲಾವಣೆ ಹೇಳಿಕೊಳ್ಳುವಂಥ ಯಾವುದೇ ಪರಿಣಾಮವನ್ನು ನೀಡುವುದಿಲ್ಲ. ಸೀತೆಯನ್ನು ಕಾಡಿಗೆ ಬಿಟ್ಟುಬರಲು ಲಕ್ಷ್ಮಣನು ನಿರಾಕರಿಸುತ್ತಾನೆ. ಆ ಮೇಲೆ ರಾಮನ ಆದೇಶದ ಪ್ರಕಾರ ಕೃತಾಂತವಕ್ತ್ರನೆಂಬ ಸೇನಾಪತಿ ಅವಳನ್ನು ಕಾಡಿನಲ್ಲಿ ಬಿಟ್ಟುಬರುತ್ತಾನೆ. ವಿಷಯವನ್ನು ತಿಳಿದ ಸೀತೆ ಕೃತಾಂಕವಕ್ತ್ರನ ಮೂಲಕ ರಾಮನಿಗೆ ಕಳಿಸಿದ ಸಂದೇಶ ಒಂದರ್ಥದಲ್ಲಿ ನಾಗಚಂದ್ರ ಆ ಕಾಲದ ಜೈನ ಜನತೆಗೆ ನೀಡಿದ ಸಂದೇಶದ ಹಾಗೆ ಭಾಸವಾಗುತ್ತದೆ. ಮಿಥ್ಯಾದೃಷ್ಟಿಗಳು ಹೇಳಿದರೆಂಬ ಕಾರಣವಾಗಿ ರಾಮನು ತನ್ನನ್ನು ತ್ಯಜಿಸಿದಂತೆ, ಜೈನಧರ್ಮವನ್ನು ತ್ಯಜಿಸದಿರಲಿ ಎಂಬ ಸೀತೆಯ ಮಾತು ರಾಮಾಯಣದ ಕಥೆಗೂ ಅನ್ವಯಿಸುತ್ತದೆ, ನಾಗಚಂದ್ರನ ಕಾಲದ ಸಮಾಜಕ್ಕೂ ಅನ್ವಯಿಸುತ್ತದೆ.

ಕಾಡಿನಲ್ಲಿ ಅಲೆಯುತ್ತಿದ್ದ ಸೀತೆಯನ್ನು ಪುಂಡರೀಕಿಣೀಪುರದ ದೊರೆ ವಜ್ರಜಂಘನು ಪೋಷಿಸಿದನೆಂದು ನಾಗಚಂದ್ರ ಕವಿ ಜೋಡಿಸಿಕೊಂಡಿರುವ ಪ್ರಸಂಗ ಹೆಚ್ಚು ವಿನೂತನವೂ, ಪರಿಣಾಮಕಾರಿಯೂ ಆಗಿದೆ. ಜಿನಧರ್ಮದ ಅನುಯಾಯಿಗಳಾಗಿರುವ ನಾವಿಬ್ಬರೂ ಅಣ್ಣ-ತಂಗಿಯರಿದ್ದ ಹಾಗೆ ಎಂದು ಹೇಳುವ ವಜ್ರಜಂಘನ ಮಾತಂತೂ ಆ ಇಡೀ ಪ್ರಸಂಗವನ್ನು ಜೈನ ಪರಿಸರವನ್ನಾಗಿ ಮಾರ್ಪಡಿಸಿದೆ.

ಲವಾಂಕುಶರೊಂದಿಗಿನ ಯುದ್ಧದ ನಂತರ ರಾಮನು ಸುಗ್ರೀವಾದಿಗಳ ಬೋಧೆಯ ಪ್ರಕಾರ ಸೀತೆಯನ್ನು ತನ್ನಲ್ಲಿ ಕರೆಯಿಸಿಕೊಳ್ಳುತ್ತಾನೆ. ಸೀತೆಯ ಪಾತಿವ್ರತ್ಯ ಗುಣವು ಜಗತ್ತಿಗೆ ಪರಿಚಯವಾಗುವ ರೀತಿಯಲ್ಲಿ ಅವಳು "ಅಗ್ನಿದಿವ್ಯ"ವನ್ನು ಕೈಕೊಳ್ಳುವಂತೆ ತಿಳಿಸುತ್ತಾನೆ. ಸೀತೆ ಜೈನವಿಧಿಗನುಸಾರವಾಗಿ ಪಂಚಪರಮೇಷ್ಠಿಗಳನ್ನು ನೆನೆದು ಅಗ್ನಿಕುಂಡವನ್ನು ಪ್ರವೇಶಿಸಿ ತನ್ನ ಪರಿಶುದ್ಧತೆಯನ್ನು ಪ್ರಕಟಿಸುತ್ತಾಳೆ. ಅಗ್ನಿಕುಂಡವನ್ನು ಪ್ರವೇಶಿಸುವ ಇಡೀ ಪ್ರಸಂಗ ತೀರ್ಥಂಕರರ

ಪಂಚಕಲ್ಯಾಣ ಪ್ರಸಂಗಗಳ ಹಾಗೆ ಜೈನ ಪರವಾಗಿ ಕಂಡುಬರುತ್ತದೆ. ರಾಮ ಬಂದು ಸೀತೆಯಲ್ಲಿ ಕ್ಷಮೆಯಾಚಿಸುವುದು, ತನ್ನ ಪಾಪಕರ್ಮದ ದೆಸೆಯಿಂದ ತನಗೆ ಹೀಗಾಯಿತು ಎಂದು ಸೀತೆ ಹೇಳುವುದು - ಇವೆಲ್ಲ ಜೈನ ವಿಚಾರಗಳೆ ಆಗಿವೆ. ಕೊನೆಗೆ ಸೀತೆ ಮೋಕ್ಷ ಸುಖಕ್ಕೆ ಕಾರಣವಾದ ತಪಸ್ಸಿಗೆ ತೊಡಗಿದಳೆಂದು ಕವಿ ಮಾಡಿಕೊಂಡಿರುವ ಮಾರ್ಪಾಟಂತೂ ಜೈನ ಧೋರಣೆಗೆ ಕಳಶವನ್ನಿಟ್ಟಂತೆ ಮೂಡಿಬಂದಿದೆ.

ಸೀತೆ ಸಂನ್ಯಾಸಿನಿಯಾದ ಮೇಲೂ ರಾಮನಿಗೆ ವಿರಕ್ತಿಮೂಡದಿರುವುದು ದೇವತೆಗಳಿಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ರಾಮನು ಲಕ್ಷ್ಮಣನಲ್ಲಿಟ್ಟಿರುವ ಅತಿಯಾದ ಮೋಹವೇ ರಾಮನನ್ನು ಲೌಕಿಕದಲ್ಲಿ ಕಟ್ಟಿಹಾಕಿದೆ ಎಂಬ ರಹಸ್ಯವನ್ನು ತಿಳಿದ ದೇವತೆಗಳು ಕೃತಕ ಲಕ್ಷ್ಮಣ ಮರಣ ಪ್ರಸಂಗವನ್ನು ಏರ್ಪಡಿಸುತ್ತಾರೆ. ಅವರ ನಿರೀಕ್ಷೆಯಂತೆ "ಆಸನ್ನಭವ್ಯ" ಜೀವಿಯಾಗಿದ್ದ ರಾಮನು ತನ್ನ ಅಗಲಿಕೆಯ ನೋವಿನಿಂದ ವೈರಾಗ್ಯದತ್ತ ಮುಖ ಮಾಡುತ್ತಾನೆ. ಈ ಇಡೀ ಪ್ರಸಂಗ ರಾಮಾಯಣವನ್ನು ಜೈನರಾಮಾಯಣವನ್ನಾಗಿ ಪಡಿಮೂಡಿಸಿದೆ.

ಹೀಗೆ ರಾಮಾಯಣದ ಕಥೆಯ ಶರೀರದೊಳಗೆ ನಾಗಚಂದ್ರ ಕವಿ ಜೈನದರ್ಶನದ ಜೀವನವನ್ನು ತುಂಬಿದ್ದಾನೆ. ಕೆಲವು ವೈದಿಕ ವಿಚಾರಗಳನ್ನು ಕೈಬಿಟ್ಟು ಜೈನ ವಿಚಾರಗಳನ್ನು ಪ್ರತಿಪಾದಿಸುವಲ್ಲಿ ನಾಗಚಂದ್ರ ತನ್ನ ಸ್ವಚ್ಛಂದತೆಯನ್ನು ಮೆರೆದಿದ್ದಾನೆ. ಜೈನವಿಚಾರಗಳನ್ನು ಅಳವಡಿಸಿರುವುದರಿಂದ ಕಥೆಯಲ್ಲಿ ಯಾವುದೇ ಏರು-ಪೇರು ಉಂಟಾಗಿಲ್ಲ. ಅವರ ಬದಲು ಕಥೆಗೆ ಇನ್ನಷ್ಟು ಸತ್ವ, ಸೊಗಡುಗಳು ಒದಗಿಬಂದಿವೆ ಎಂಬುದು ಮಹತ್ವದ ಅಂಶವಾಗಿದೆ. ರಾಮಚಂದ್ರಚರಿತ ಪುರಾಣದಲ್ಲಿ ಕಣ್ಣೆಟ್ಟಲ್ಲೆಲ್ಲ ಜೈನ ತೀರ್ಥಕ್ಷೇತ್ರಗಳು, ತೀರ್ಥಂಕರರ ಮಂದಿರಗಳು, ಋಷಿಮುನಿಗಳು, ದೇವತೆಗಳು, ವಿದ್ಯಾಧರರು, ನೈಮಿತ್ತಿಕರು, ಮಹತ್ತರರು ಕಂಡುಬರುತ್ತಾರೆ. ಪ್ರತಿಯೊಂದೂ ಪ್ರಸಂಗದ ಹಿಂದೆ "ರತ್ನತ್ರಯ"ದ ಸಾಧನೆಯ ಒತ್ತಾಸೆ ಇರುವುದು ಕಂಡುಬರುತ್ತದೆ. ಹೆಜ್ಜೆ ಹೆಜ್ಜೆಗೆ ಭವಾವಳಿ,ಜಿನಪೂಜೆ, ಜೈನವ್ರತಪಾಲನೆ, ಮುನಿಗಳಿಂದ ಜಿನತತ್ವ ಬೋಧನೆ ಮೊದಲಾದ ಪ್ರಸಂಗಗಳು ಕಂಡುಬರುತ್ತಿದ್ದು, ಅವೆಲ್ಲ ಕಥೆಗೆ ಅತಿಶಯತೆಯನ್ನು ತಂದುಕೊಟ್ಟಿವೆ. ಪ್ರಸ್ತುತ ಆಯ್ದ ಪಠ್ಯಭಾಗದಲ್ಲಿ ಬಂದಿರುವ ಜೈನಸೂಕ್ಷ್ಮಗಳಲ್ಲಿ ಕೆಲವನ್ನು ಮಾತ್ರ ಸಾಂಕೇತಿಕವಾಗಿ ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

## ಪ್ರಮುಖ ಕಾವ್ಯ ಪ್ರಸಂಗಗಳು

ರಾಮಚಂದ್ರಚರಿತ ಪುರಾಣವು ಹಲವಾರು ಪ್ರಮುಖ ಪ್ರಸಂಗಗಳ ಮತ್ತು ಉಪಕಥೆಗಳ ಆಗರವಾಗಿದೆ. ಅಂಥ ಪ್ರಸಂಗಗಳು ಮುಖ್ಯಕಥೆಗೆ ಪೂರಕವಾಗಿರುವುದರ ಜೊತೆಗೆ ಅದರ ಸೊಗಸನ್ನು ಹೆಚ್ಚಿಸಿವೆ. ನಾಗಚಂದ್ರ ಒಬ್ಬ ಉತ್ತಮ ಕಥೆಗಾರನೆಂಬುದನ್ನು ವಿವರವಾದ ಕಥೆಯನ್ನು ಸುಂದರವಾಗಿ ಸಂಕ್ಷೇಪಿಸಿ ಕೊಡಬಲ್ಲನೆಂಬುದನ್ನು ಇಂಥ ಪ್ರಸಂಗಗಳೂ ಸಾಬೀತುಪಡಿಸುತ್ತವೆ. ಪಠ್ಯಭಾಗದಲ್ಲಿ ಬಂದಿರುವ ಅಂಥ ಕೆಲವು ಪ್ರಸಂಗಗಳನ್ನು ಇಲ್ಲಿ ಪರಿಚಯಿಸಿಕೊಡಲಾಗಿದೆ.

### ೧. ವಿಭೀಷಣನಿಂದ ದಶರಥ-ಜನಕರ ವಧೆ

ಒಂದು ದಿನ ವಿಭೀಷಣನು ಸಾಗರಬುದ್ಧಿ ಎಂಬ ನೈಮಿತ್ತಿಕರಲ್ಲಿ ರಾವಣನ ವೃತ್ತಾಂತದ ಬಗ್ಗೆ ಕೇಳಿ ತಿಳಿದುಕೊಳ್ಳುತ್ತಾನೆ. ರಾವಣನು ಸೀತೆಯೆಂಬ ಹೆಣ್ಣಿನ ದೆಸೆಯಿಂದಾಗಿ

ರಾಮಲಕ್ಷ್ಮಣರಿಂದ ಸಾವನ್ನಪ್ಪುತ್ತಾನೆ. ಈ ಸೀತೆ ಜನಕನ ಮಗಳಾಗಿ ಮತ್ತು ರಾಮಲಕ್ಷ್ಮಣರು ದಶರಥನ ಮಕ್ಕಳಾಗಿ ಹುಟ್ಟಲಿದ್ದಾರೆ ಎಂಬ ವಿಷಯವು ನೈಮಿತ್ತಿಕನಿಂದ ವಿಭೀಷಣನಿಗೆ ತಿಳಿದುಬರುತ್ತದೆ. ರಾವಣನ ಹಿಂತಚಿಂತಕನಾದ ಅವನು ಮುಂದಾಲೋಚನೆಯಿಂದ ಸೀತೆ, ರಾಮ, ಲಕ್ಷ್ಮಣರಿಗೆ ತಂದೆಯರಾಗುವ ಜನಕ, ದಶರಥರನ್ನೇ ಮುಗಿಸುವ ಹೊಂಚು ಹಾಕುತ್ತಾನೆ. ಇದರ ಸೂಚನೆ ದೊರೆತ ನಾರದರು ತಕ್ಷಣ ವಿಷಯವನ್ನು ದಶರಥ - ಜನಕರಿಗೆ ತಿಳಿಸುತ್ತಾರೆ. ಅಪಾಯದಿಂದ ಪಾರಾಗುವುದಕ್ಕಾಗಿ ಮಂತ್ರಿಸಭೆಯೊಂದಿಗೆ ಚರ್ಚಿಸಿ, ಅವರು ಬುದ್ಧಿವಂತಿಕೆಯ ಉಪಾಯವೊಂದನ್ನು ಹುಡುಕುತ್ತಾರೆ. ಆಕಾರದಲ್ಲಿ ತಮ್ಮನ್ನು ಹೋಲುವ ಲೆಪ್ಪದ ಗೊಂಬೆಗಳನ್ನು ತಯಾರಿಸಿ, ಅವುಗಳನ್ನು ಸಿಂಹಾಸನಗಳ ಮೇಲಿರಿಸಿ ಮಾರುವೇಷದಲ್ಲಿ ತಾವು ಲೋಕಸಂಚಾರ ಹೊರಡುತ್ತಾರೆ. ವಿಭೀಷಣ ಬಂದು ಲೆಪ್ಪದ ಗೊಂಬೆಗಳೇ ನಿಜವಾದ ದೊರೆಗಳೆಂದು ಭಾವಿಸಿ, ಅವರ ಶಿರಗಳನ್ನು ಕತ್ತರಿಸಿ ಸಮುದ್ರದಲ್ಲಿ ಬೀಸಾಡುತ್ತಾನೆ. ಲಂಕೆ ಇನ್ನು ಮುಂದೆ ನಿಷ್ಕಂಟಕವಾಯಿತೆಂದು ಸಂತೋಷಪಡುತ್ತಾನೆ.

**೨. ಕೈಕೆಗೆ ವರಪ್ರಾಪ್ತಿ**

ಮಾರುವೇಷದಲ್ಲಿ ಲೋಕಸಂಚಾರಕ್ಕೆ ಹೋಗಿದ್ದ ದಶರಥ - ಜನಕರು ಕೌತುಕಮಂಗಳಪುರಕ್ಕೆ ಬರುತ್ತಾರೆ. ಊರ ಹೊರಗಿನ ಉದ್ಯಾನದಲ್ಲಿ ನಡೆದಿದ್ದ ಕೈಕೆಯ ಸ್ವಯಂವರದಲ್ಲಿ ಭಾಗವಹಿಸುತ್ತಾರೆ. ದಶರಥನಿಗೆ ಮನಸೋತು ಕೈಕೆ ಅವನಿಗೆ ಮಾಲೆ ತೊಡಿಸುತ್ತಾಳೆ. ತಮ್ಮನ್ನು ಕಡೆಗಣಿಸಿ ದೇಸಿಗನೊಬ್ಬನಿಗೆ ಕೈಕೆ ಒಲಿದುದಕ್ಕೆ ಅಸಮಾಧಾನಗೊಂಡ ರಾಜಕುಮಾರರು ಇದ್ದಕ್ಕಿದ್ದ ಹಾಗೆ ದಶರಥನ ಮೇಲೆ ಎರಗುತ್ತಾರೆ. ಆಪತ್ತಿನಲ್ಲಿದ್ದ ದಶರಥನಿಗೆ ಕೈಕೆ ಸಾರಥಿಯಾಗಿ ನಿಂತು ಯುದ್ಧವನ್ನು ಗೆದ್ದುಕೊಡುತ್ತಾಳೆ. ಅವಳ ಶೌರ್ಯ ಮತ್ತು ಸಹಾಯವನ್ನು ಮೆಚ್ಚಿ ಸಂತೋಷಗೊಂಡ ದಶರಥ ಅವಳಿಗೆ ಎರಡು ವರಗಳನ್ನು ಕೊಡಲು ಮುಂದಾಗುತ್ತಾನೆ. ತನಗೆ ಬೇಕಾದಾಗ ಪಡೆಯುವುದಾಗಿ ಹೇಳಿ ಕೈಕೆ ವರಗಳನ್ನು ಕಾದಿರಿಸುತ್ತಾಳೆ.

**೩. ಸೀತೆ ಸ್ವಯಂವರ**

ಸೀತಾ ಸ್ವಯಂವರ ಪ್ರಸಂಗವು ರಾಮಚಂದ್ರಚರಿತ ಪುರಾಣದ ಮಹತ್ವದ ಪ್ರಸಂಗವಾಗಿದ್ದು ನಾಗಚಂದ್ರ ಅದನ್ನು ತುಂಬಾ ಕುಶಲತೆಯಿಂದ ಕಟ್ಟಿಕೊಟ್ಟಿದ್ದಾನೆ.

ಒಂದು ದಿನ ಬೇಡರ ಪಡೆಯೊಂದು ಜನಕನ ರಾಜ್ಯದ ಮೇಲೆ ಆಕ್ರಮಣ ಮಾಡುತ್ತದೆ. ನೆರವನ್ನು ಕೋರಿ ಜನಕನು ದಶರಥನಲ್ಲಿಗೆ ದೂತರನ್ನಟ್ಟುತ್ತಾನೆ. ವಿಷಯ ತಿಳಿದ ರಾಮ ಲಕ್ಷ್ಮಣರು ಜನಕನ ನೆರವಿಗೆ ತಾವೇ ಅಣಿಯಾಗುತ್ತಾರೆ ಹಾಗೂ ಬೇಡಪಡೆಯನ್ನು ಸೋಲಿಸುತ್ತಾರೆ. ಮುದಗೊಂಡ ರಾಮನಿಗೆ ಸೀತೆಯನ್ನು ಕೊಟ್ಟು ಲಗ್ನಮಾಡುವುದಾಗಿ ಮಾತುಕೊಡುತ್ತಾನೆ.

ತನ್ನ ಮಗನಿಗೆ ಸೀತೆಯನ್ನು ಪಡೆಯಬೇಕೆಂಬ ಹವಣಿಕೆಯಲ್ಲಿದ್ದ ಇಂದುಗತಿಯೆಂಬ ವಿದ್ಯಾಧರನಿಗೆ ಇದರಿಂದ ನೋವುಂಟಾಗುತ್ತದೆ. ವಜ್ರಾವರ್ತವೆಂಬ ಶಕ್ತಿಶಾಲಿಯಾದ ಬಿಲ್ಲಿಗೆ ಯಶಸ್ವಿಯಾಗಿ ಹೆದೆಯೇರಿಸಿದಲ್ಲಿ ನಿನ್ನ ಮಗಳನ್ನು ರಾಮನಿಗೆ ಕೊಡಬಹುದು. ಆ ಪರೀಕ್ಷೆಯಲ್ಲಿ ಅವನು ವಿಫಲನಾದಲ್ಲಿ ನನ್ನ ಮಗನಿಗೆ ಕೊಡುವುದು ಎಂದು ಇಂದುಗತಿ ಕರಾರು ಹಾಕುತ್ತಾನೆ. ರಾಮನ ಪರಾಕ್ರಮದ ಪರಿಚಯವಿದ್ದ ಜನಕ ಅದಕ್ಕೆ ಸಮ್ಮತಿಸುತ್ತಾನೆ. ಅದರ ಪ್ರಕಾರ ರಾಮ

ನಿರಾಯಾಸವಾಗಿ ಹೆದೆಯನ್ನೇರಿಸಿ ಸೀತೆಯನ್ನು ಪಡೆದುಕೊಳ್ಳುತ್ತಾನೆ. ಸಂಭ್ರಮದಿಂದ ಮದುವೆಯಾಗುತ್ತದೆ. ಮೂಲದ ಶಿವಧನುಸ್ಸಿನ ಭಂಗದ ಪ್ರಸಂಗವನ್ನು ನಾಗಚಂದ್ರ ಕವಿ ಈ ರೀತಿ ಸೊಗಸಾಗಿ ಪರಿಷ್ಕರಿಸಿದ್ದಾನೆ.

**೪. ರಾಮನ ವನವಾಸ**

ವೃದ್ಧ ದಶರಥನು ರಾಮನಿಗೆ ಪಟ್ಟಕಟ್ಟಿ ತಾನು ತಪಸ್ಸಿಗೆ ಹೊರಡುವುದಾಗಿ ಘೋಷಿಸು -ತ್ತಾನೆ. ರಾಜ್ಯಭಾರ ತನ್ನ ಮಗನ ಕೈ ತಪ್ಪುವುದನ್ನು, ತನ್ನ ಮಗ ತಪಸ್ಸಿಗೆ ತೆರಳಿರುವುದನ್ನು ತಿಳಿದು, ಕೈಕೆ ಹಿಂದೆ ದಶರಥನಲ್ಲಿ ಕಾದಿರಿಸಿದ್ದ ವರಗಳನ್ನು ಪಡೆಯಲು ಮುಂದಾಗುತ್ತಾಳೆ ಹಾಗೂ ಭರತನಿಗೆ ೧೪ ವರ್ಷ ಪಟ್ಟಕಟ್ಟಬೇಕೆಂದೂ, ಆ ೧೪ ವರ್ಷಗಳ ಅವಧಿಗಾಗಿ ರಾಮನು ವನವಾಸಕ್ಕೆ ತೆರಳಬೇಕೆಂದೂ ಎರಡೂ ವರಗಳನ್ನು ಕೇಳಿಕೊಳ್ಳುತ್ತಾಳೆ. ಕೊಟ್ಟ ಮಾತಿನ ಪ್ರಕಾರ ಅಸಹಾಯಕ ದಶರಥ ಅಸ್ತು ಎನ್ನಬೇಕಾಗುತ್ತದೆ. ಪರಿಸ್ಥಿತಿಯ ಕ್ಲಿಷ್ಟತೆಯನ್ನು ಅರ್ಥಮಾಡಿಕೊಂಡ ರಾಮ, ತಮ್ಮನಾದ ಭರತನನ್ನು ರಾಜ್ಯಭಾರ ನಿರ್ವಹಿಸಲು ಒಪ್ಪಿಸಿ ತಾನು ವನವಾಸಕ್ಕೆ ತೆರಳುತ್ತಾನೆ.

**೫. ಕೈಕೆಯ ಪ್ರಾಯಶ್ಚಿತ್ತ**

ರಾಮನ ಅಗಲಿಕೆಯಿಂದ ವಿಹ್ವಲನಾದ ದಶರಥ ದೀಕ್ಷಾಬದ್ಧನಾಗುತ್ತಾನೆ. ಇತ್ತ ಮಗನಾದ ಭರತನೂ ನೆಮ್ಮದಿಯಿಂದಿಲ್ಲ. ಇದರಿಂದಾಗಿ ಕೈಕೇಯಿಯ ಒಳಗಣ್ಣು ತೆರೆಯುತ್ತದೆ. ತಾನೇ ದುಡುಕಿದೆನೆಂಬ ಸದ್ವಿವೇಕ ಅವಳಲ್ಲಿ ಮೂಡುತ್ತದೆ. ತನ್ನ ಸ್ವಾರ್ಥದಿಂದಾಗಿ ಜರುಗಬಹುದಾದ ಕಷ್ಟ ಪರಂಪರೆಯನ್ನು ಊಹಿಸಿಕೊಂಡ ಅವಳು ರಾಮನಲ್ಲಿ ಕ್ಷಮೆ ಯಾಚಿಸಲು ಮುಂದಾಗುತ್ತಾಳೆ. ಈಗಷ್ಟೆ ಕಾಡನ್ನು ಪ್ರವೇಶಿಸಿರುವ ರಾಮನನ್ನು ತಡೆದು ನಿಲ್ಲಿಸುವಂತೆ ಭರತನನ್ನು ಮುಂದೆ ಕಳಿಸಿ ಹಿಂದಿನಿಂದ ಪರಿವಾರ ಸಮೇತಳಾಗಿ ತಾನೂ ರಾಮನಲ್ಲಿಗೆ ಧಾವಿಸುತ್ತಾಳೆ. ರಾಜ್ಯಭಾರವನ್ನು ಮರಳಿ ವಹಿಸಿಕೊಳ್ಳುವಂತೆ ಭರತ ರಾಮನಲ್ಲಿ ವಿನಂತಿಸಿಕೊಳ್ಳುತ್ತಾನೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಕೈಕೆ ತನ್ನ ದುರ್ವರ್ತನೆಯ ಬಗ್ಗೆ ರಾಮನಲ್ಲಿ ಕ್ಷಮೆ ಯಾಚಿಸುತ್ತಾಳೆ. ಅದಕ್ಕೆ ಒಪ್ಪದ ರಾಮ, ಕೈಕೆ ಮತ್ತು ಭರತನನ್ನು ಸಮಾಧಾನಪಡಿಸಿ ಮರಳಿ ಕಳುಹಿಸುತ್ತಾನೆ. ಮೂಲದ ಪಾದುಕಾ ಪ್ರಸಂಗವನ್ನು ಪರಿವರ್ತಿಸಿರುವುದರ ಜೊತೆಗೆ ಕೈಕೇಯಿಯ ಮನಃಪರಿವರ್ತನೆಯ ಅಂಶದ ಮೇಲೆ ನಾಗಚಂದ್ರ ಕವಿ ಹೆಚ್ಚು ಒತ್ತುಕೊಟ್ಟಿದ್ದಾನೆ. ತನ್ನ ಪಾದುಕೆಗಳನ್ನು ಲಕ್ಷ್ಮಣನೊಂದಿಗೆ ಕಳಿಸುವ ಬದಲು, ಇಲ್ಲಿಯ ರಾಮ ರಾಜ್ಯಭಾರ ನಿರ್ವಹಿಸುವ ಮುತ್ಸದ್ದಿತನವನ್ನು ತಮ್ಮನಿಗೆ ಹೇಳಿ ಕಳುಹಿಸಿರುವುದು ಹೆಚ್ಚು ವ್ಯಾವಹಾರಿಕವಾಗಿ ಕಂಡುಬರುತ್ತದೆ.

**೬. ರಾವಣನಿಂದ ಸೀತಾಪಹರಣ**

ಲಕ್ಷ್ಮಣನಿಂದ ತಪಸ್ಸಿಗೆ ಕುಳಿತಿದ್ದ ಶಂಭುಕನ ವಧೆಯಾಗುತ್ತದೆ. ಅವನ ತಾಯಿ ಚಂದ್ರನಖಿ ಲಕ್ಷ್ಮಣನ ಮೇಲೆ ಸೇಡು ತೀರಿಸಿಕೊಳ್ಳಲು ಹೋಗುತ್ತಾಳೆ. ಅವನ ರೂಪಕ್ಕೆ ಮನಸೋತು ಅವನನ್ನೇ ವರಿಸಬಯಸುತ್ತಾಳೆ. ಅದಕ್ಕೆ ಒಪ್ಪದ ರಾಮಲಕ್ಷ್ಮಣರು ಅಪಮಾನಿಸಿ ಕಳುಹಿಸುತ್ತಾರೆ. ಪತಿಯಾದ ಖರನಲ್ಲಿಗೆ ಬಂದು ನಡೆದ ವಿಷಯವನ್ನು ತಿಳಿಸುತ್ತಾಳೆ. ಮಗನ ಸಾವು ಮತ್ತು ಮಡದಿಗೆ ಉಂಟಾದ ಅವಮಾನದಿಂದ ಕುಪಿತನಾದ ಖರನು, ರಾಮಲಕ್ಷ್ಮಣರ ಮೇಲೆ ಯುದ್ಧಕ್ಕೆ ಹೊರಡುತ್ತಾನೆ. ಯಾವುದಕ್ಕೂ ರಾವಣನ ನೆರವು ಪಡೆಯುವುದು ಉಚಿತವೆಂಬ ಮಂತ್ರಿಗಳ ಸಲಹೆಯ ಪ್ರಕಾರ

ರಾವಣನನ್ನು ಕರೆಯಿಸಿಕೊಳ್ಳುತ್ತಾನೆ. ಖರನ ಬೆಂಬಲಾರ್ಥವಾಗಿ ರಾಮಲಕ್ಷ್ಮಣರ ಮೇಲೆ ರಾವಣ ಯುದ್ಧಕ್ಕೆ ಹೊರಡುತ್ತಾನೆ. ಸೌಂದರ್ಯವತಿ ಸೀತೆಯನ್ನು ಕಂಡು ಮಾರುಹೋಗುತ್ತಾನೆ. ಹಾಗೂ ಅವಲೋಕಿನಿ ವಿದ್ಯೆಯ ಸಹಾಯದಿಂದ ಅವಳನ್ನು ಅಪಹರಿಸುತ್ತಾನೆ.

ರಾವಣ ಅಂದುಕೊಂಡದ್ದೇ ಬೇರೆ, ಆದರೆ ನಡೆದದ್ದೇ ಬೇರೆ. ಮನುಷ್ಯಸಹಜವಾದ ವಿಷಯವಾಸನೆ ರಾವಣನಂಥ ಗಟ್ಟಿಗನನ್ನು ಅಲ್ಲಾಡಿಸಿಬಿಟ್ಟಿತು ಎಂಬುದನ್ನು, ಅದಕ್ಕೆಲ್ಲ ಅವನ ಪೂರ್ವಜನ್ಮದ ಕರ್ಮವೇ ಕಾರಣವೆಂಬುದನ್ನು ಕವಿ ತುಂಬಾ ಸೊಗಸಾಗಿ ಚಿತ್ರಿಸಿದ್ದಾನೆ. ಅಳಿಯನ ಸಾವು ಮತ್ತು ತಂಗಿಯ ಪರಿಚ್ಛೇದದ ಸೇಡು ತೀರಿಸಿಕೊಳ್ಳಲು ಹೋಗಿದ್ದ ರಾವಣ ಕಾಮ ಸೇಡಿಗೆ ಬಲಿಯಾದದ್ದು ಒಂದು ವಿಪರ್ಯಾಸವೆನ್ನಿಸಿದರೂ ಮಾನವ ಜೀವನದಲ್ಲಿ ಕಾಮದ ಪಾತ್ರವೇನೆಂಬುದನ್ನು ರಾವಣನ ಪಾತ್ರದ ಮೂಲಕ ಕವಿ ಮನಂಬುಗುವಂತೆ ನಿರೂಪಿಸಿದ್ದಾನೆ. ಬ್ರಹ್ಮಚರ್ಯ ವ್ರತಕ್ಕೆ ಜೈನದರ್ಶನದಲ್ಲಿರುವ ಪ್ರಾಶಸ್ತ್ಯ, ಅದಕ್ಕೆ ತಪ್ಪಿ ನಡೆದರೆ ಒದಗುವ ಶಿಕ್ಷೆ - ಇವುಗಳನ್ನು ನಾಗಚಂದ್ರ ರಾವಣನ ಪಾತ್ರದ ಮೂಲಕ ಧ್ವನಿಸಿದ್ದಾನೆ.

**೭. ಲಂಕಾದಹನ**

ಅಪಹರಿಸಿಕೊಂಡು ತಂದ ಸೀತೆಯನ್ನು ರಾವಣ ಗೀರ್ವಾಣರಮಣೋದ್ಯಾನ-ದಲ್ಲಿಡುತ್ತಾನೆ. ಅವಳನ್ನು ಕೂಡಲು ಪರಿಪರಿಯಾಗಿ ಪ್ರಯತ್ನಿಸುತ್ತಾನೆ. ಶತಪ್ರಯತ್ನ ಮಾಡಿದರೂ ಸೀತೆ ಒಪ್ಪುವುದಿಲ್ಲ. ತನ್ನ ಪಾತಿವ್ರತ್ಯ ಮತ್ತು ಪರದಾರಸೋದರ ಭಾವವನ್ನು ಅಚಲವಾಗಿ ಉಳಿಸಿಕೊಳ್ಳುತ್ತಾಳೆ. ಕುಟೀರದಲ್ಲಿ ಸೀತೆಯನ್ನು ಕಾಣದ ರಾಮಲಕ್ಷ್ಮಣರು ಚಿಂತಿತರಾಗುತ್ತಾರೆ. ರಾವಣನು ಸೀತೆಯನ್ನು ಅಪಹರಿಸಿಕೊಂಡು ಲಂಕೆಗೆ ಹೋಗಿ ಸೀತೆಯ ಸಮಾಚಾರ ತರಲು ಹನುಮಂತನೇ ಯೋಗ್ಯನೆಂದು ನಿರ್ಣಯಿಸಿ, ಮುದ್ರಿಕೆಯ ಉಂಗುರದೊಂದಿಗೆ ಅವನನ್ನು ಲಂಕೆಗೆ ಕಳುಹಿಸುತ್ತಾರೆ. ಲಂಕೆಗೆ ತೆರಳಿದ ಹನುಮಂತ ಸೀತೆಯನ್ನು ಕಂಡು ರಾಮನ ಉಂಗುರವನ್ನು ಅವಳಿಗೆ ಒಪ್ಪಿಸಿ, ಅವಳ ಚೂಡಾಮಣಿಯನ್ನು ಪಡೆದು ಲಂಕೆಯನ್ನು ಧ್ವಂಸಮಾಡಿ ಅಯೋಧ್ಯೆಗೆ ಹಿಂದಿರುಗುತ್ತಾನೆ.

**೮. ಸೀತಾಪರಿತ್ಯಾಗ**

ಯುದ್ಧದಲ್ಲಿ ರಾವಣನನ್ನು ಸಂಹರಿಸಿ ರಾಮಲಕ್ಷ್ಮಣರು ಸೀತೆಯನ್ನು ಮರಳಿ ಕರೆತರು-ತ್ತಾರೆ. ಭರತ ಅಣ್ಣನಿಗೆ ಅಧಿಕಾರ ಒಪ್ಪಿಸುತ್ತಾನೆ. ರಾಮ ಲಕ್ಷ್ಮಣ ಸೀತೆಯರು ಸುಖದಿಂದಿರು-ತ್ತಾರೆ. ಇದುವರೆಗೆ ರಾವಣನೊಂದಿಗಿದ್ದ ಸೀತೆಯನ್ನು ಮರಳಿ ತಂದಿರುವ ರಾಮನ ಕ್ರಮದ ಬಗ್ಗೆ ಪುರಜನರು ಪಿಸುಮಾತುಗಳನ್ನಾಡಿಕೊಳ್ಳುವುದು ರಾಮನಿಗೆ ಗೊತ್ತಾಗುತ್ತದೆ. ಲೋಕಾಪ- ವಾದಕ್ಕೆ ಹೆದರಿದ ರಾಮ, ಲೋಕದೆದುರಿಗೆ ಸೀತೆ ತನ್ನ ಪರಿಶುದ್ಧತೆಯನ್ನು ಪ್ರಕಟಿಸಿ ತಾನು ನಿಷ್ಕಳಂಕಿತೆ ಎಂಬುದನ್ನು ಸಾಬೀತು ಪಡಿಸಲಿ ಎಂಬ ಉದ್ದೇಶದಿಂದ ಸೀತೆಯನ್ನು ತ್ಯಜಿಸಿದ.

ಬೇಟೆಗೆ ಬಂದ ವಜ್ರಜಂಘ ಏಕಾಂಗಿ ಸೀತೆಯನ್ನು ಕಂಡು ಅವಳ ವೃತ್ತಾಂತವನ್ನು ತಿಳಿದು, ಅವಳನ್ನು ಅರಮನೆಗೊಯ್ದು ಪೋಷಿಸುತ್ತಾನೆ. ಅಲ್ಲಿ ಲವಾಂಕುಶರ ಜನನವಾಗುತ್ತದೆ. ಮೂಲದ ವಾಲ್ಮೀಕಿ ಮಹರ್ಷಿಗಳ ಬದಲು ವಜ್ರಜಂಘ ಜೈನಧರ್ಮದ ಬಾಂಧವ್ಯದ ದೆಸೆಯಿಂದ ಸೀತೆಯ ನೆರವಿಗೆ ಬಂದನೆಂದು ನಾಗಚಂದ್ರ ಕವಿ

ಮಾಡಿಕೊಂಡಿರುವ ಮಾರ್ಪಾಟು ಹೆಚ್ಚು ಪರಿಣಾಮಕಾರಿಯಾಗಿ ಕಂಡುಬರುತ್ತದೆ. ಲವಾಂಕುಶರೊಂದಿಗಿನ ಯುದ್ಧದ ನಂತರ ಅವರ ವೃತ್ತಾಂತವನ್ನು ತಿಳಿದ ರಾಮಲಕ್ಷ್ಮಣರು ಅವರನ್ನು ಒಪ್ಪಿಕೊಂಡು ಸೀತೆಯನ್ನು ಹಿಂದಕ್ಕೆ ಕರೆಯಿಸಿಕೊಳ್ಳುತ್ತಾರೆ. ಅವಳು ಅಗ್ನಿಯನ್ನು ಪ್ರವೇಶಿಸುವ ಮೂಲಕ ತನ್ನ ಪರಿಶುದ್ಧತೆಯನ್ನು ಪ್ರಕಟಿಸುತ್ತಾಳೆ ಹಾಗೂ ಭವ್ಯಜೀವಿಯಾಗಿದ್ದ ಕಾರಣ ದೀಕ್ಷಾಬದ್ಧಳಾಗುತ್ತಾಳೆ. ಸಂದರ್ಭೋಚಿತವಾಗಿ ಪ್ರಮುಖ ಪಾತ್ರಗಳೆಲ್ಲವೂ ಧರ್ಮದೀಕ್ಷೆ ಪಡೆಯುತ್ತವೆ ಎಂಬುದನ್ನು ಸೂಚಿಸುವ ನಾಗಚಂದ್ರನ ಕ್ರಮವು ಸಹಜವಾಗಿ ಅವನ ಜೈನಪರತೆಯನ್ನು ಪ್ರಕಟಿಸುತ್ತದೆ.

**೯. ರಾಮ ಭಟ್ಟಾರಕ ಮೋಕ್ಷ ಪ್ರಸಂಗ**

ಇದೂ ಕೂಡಾ ಮೂಲದಲ್ಲಿರಲಾರದ ನಾಗಚಂದ್ರನ ನವೀನ ಕಲ್ಪನೆಯಾಗಿದೆ. ಸೀತೆಯ ವೈರಾಗ್ಯದ ನಂತರವೂ ರಾಮ ವಿರಕ್ತನಾಗದಿರುವುದನ್ನು ತಿಳಿದ ದೇವತೆಗಳು ಉಪಾಯದ ಮೂಲಕ ರಾಮ ವಿರಕ್ತನಾಗುವಂತೆ ನೋಡಿಕೊಳ್ಳುತ್ತಾರೆ. ಸಂಸಾರದ ಅನಿತ್ಯತೆಯನ್ನು ಮನಗಂಡ ರಾಮ ವೈರಾಗ್ಯ ಪಾರಾಯಣನಾದ. ಉಗ್ರತಪಗೈದು ಮುಕ್ತಿಯನ್ನು ಸಂಪಾದಿಸಿದ. ಲಕ್ಷ್ಮಣನ ಕೃತಕ ಸಾವಿನ ಪ್ರಸಂಗ, ತನ್ಮೂಲಕ ರಾಮನಿಗೆ ವೈರಾಗ್ಯ ಹುಟ್ಟುವ ಪ್ರಸಂಗ - ಇವೆಲ್ಲ ಜೈನ ಛಾಯೆಗನುಸಾರವಾಗಿ ಮೂಡಿಬಂದಿವೆ. ಮುನಿಗಳಲ್ಲಿ ದೀಕ್ಷೆ ಹೊಂದಿ ರಾಮನು ಮುಕ್ತಿ ಪಡೆದನೆಂಬ ಪ್ರಸಂಗ, ಕೈಕೆ ಮೊದಲಾದ ಸಮಸ್ತರೂ ದೀಕ್ಷಾಬದ್ಧರಾಗಿ ತಪಕ್ಕೆ ತೆರಳಿದರೆಂಬ ಅಂಶ - ಇವು ಕಾವ್ಯಕ್ಕೆ ಜೈನ ಪರಿಸರದ ಮುದ್ರೆಯನ್ನೊತ್ತಿವೆ.

ಹೀಗೆ ವರ್ಣನಾ ಕುಶಲನಾದ ನಾಗಚಂದ್ರ ಮೂಲದ ಕಥೆಯನ್ನು ವಿವಿಧ ಪ್ರಸಂಗಗಳಲ್ಲಿ ಹೊಂದಿಸಿಕೊಂಡು ಸೂಕ್ತವೆನಿಸಿದೆಡೆಯಲ್ಲಿ ಪಾತ್ರ ಮತ್ತು ಪ್ರಸಂಗಗಳಿಗೆ ಜೈನದೀಕ್ಷೆ ಕೊಡುತ್ತಾ ಸಾಗಿದ್ದಾನೆ.

## ಪ್ರಮುಖ ಪಾತ್ರಗಳು

ಉತ್ತಮ ಕವಿಯ ನೈಪುಣ್ಯವನ್ನು ಆತ ಸೃಷ್ಟಿಸುವ ಪಾತ್ರಗಳಲ್ಲಿ ಗುರುತಿಸಬಹುದು. ಆ ದೃಷ್ಟಿಯಿಂದ ರಾಮಚಂದ್ರಚರಿತ ಪುರಾಣದ ಎಲ್ಲ ಪಾತ್ರಗಳೂ ಜೀವಂತವೂ, ಆಕರ್ಷಕವೂ ಆಗಿ ಮೂಡಿಬಂದಿವೆ. ಚತುರನಾದ ಕವಿ ತನ್ನ ಸ್ವಾತಂತ್ರ್ಯವನ್ನು ಬಳಸಿ ತನಗೆ ಗೌಣವೆನ್ನಿಸಿದ ಪಾತ್ರಗಳನ್ನು ಕೈಬಿಟ್ಟಿದ್ದಾನೆ. ಪ್ರಮುಖ ಪಾತ್ರಗಳ ಸೃಷ್ಟಿಗೆ ತನ್ನ ಗಮನವನ್ನು ಕೇಂದ್ರೀಕರಿಸಿದ್ದಾನೆ. ರಾಮಾಯಣದ ಕಥೆಯನ್ನು ಹೊತ್ತು ನೀಗಿಸುವುದಷ್ಟೆ ನಾಗಚಂದ್ರನ ಪಾತ್ರಗಳ ಕೆಲಸವಲ್ಲ. ಜೈನ ನಂಬಿಕೆ ಮತ್ತು ಅವುಗಳನ್ನು ಹೊತ್ತು ಸಾಗುವ ಹೊಣೆಗಾರಿಕೆಯೂ ಅವುಗಳ ಮೇಲಿದೆ. ಹೀಗಾಗಿ ನಾಗಚಂದ್ರನ ಪಾತ್ರಗಳಿಗೆ ಇಮ್ಮಡಿ ಆಕರ್ಷಣೆ ಸಾಧ್ಯವಾಗಿದೆ. ಮನುಷ್ಯ ಜೀವನದ ಕ್ಲಿಷ್ಟತೆ, ಸಂಕೀರ್ಣತೆಗಳನ್ನು ಜೈನದರ್ಶನದ ಅನುಷ್ಠಾನದ ಮೂಲಕ ಪರಿಹರಿಸಿಕೊಳ್ಳಲು ಇಲ್ಲಿಯ ಪಾತ್ರಗಳು ಪ್ರಯತ್ನಿಸುತ್ತವೆ. ಹಾಗೆ ನೋಡಿದರೆ ಇಡೀ ಕಥೆಯೇ ಜೈನ ವಿಚಾರಗಳಿಂದ ಇಡಿಕಿರಿದು ತುಂಬಿದೆ. ಲೌಕಿಕ ರಾಮಾಯಣವನ್ನು ಓದುವ ಅನುಭೂತಿಗಿಂತ ವಿಶಿಷ್ಟವಾದ ಅನುಭೂತಿಯನ್ನು ನೀಡಬಲ್ಲ ಶಕ್ತಿ ಈ ಕಾವ್ಯಕ್ಕೆ ಒದಗಿರುದು ಈ ಬಗೆಯ ಜೈನದೀಕ್ಷೆಯಿಂದಲೇ. ಇಷ್ಟು ಹಿನ್ನೆಲೆಯೊಂದಿಗೆ ನಾಗಚಂದ್ರ ಸೃಷ್ಟಿಸಿದ ಪ್ರಮುಖ ಪಾತ್ರಗಳ ಬಗ್ಗೆ ಇಲ್ಲಿ ಅವಲೋಕಿಸಲಾಗಿದೆ.

"ಜಾನಕಿಯ ಮೂಸರಿಂ", "ದಾಶರಥಿಯ ಕಯ್ಯೊಳ್", "ರಾವಣಂ ಮಡಿಗುಂ" ಎಂಬುದು ಕಾವ್ಯದ ಸೂತ್ರವಾಗಿದ್ದು ಸಹಜವಾಗಿಯೇ ಸೀತೆ, ರಾಮ, ರಾವಣರು ಪ್ರಮುಖ ಪಾತ್ರಗಳಾಗಿ ಕಂಡುಬರುತ್ತಾರೆ. ಜೈನ ಪರಿಭಾಷೆಯಲ್ಲಿ ತೀರ್ಥಂಕರ, ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವರ ಚರಿತ್ರೆಗಳನ್ನು ಪುರಾಣಗಳಲ್ಲಿ ಕಟ್ಟಿಕೊಡಲಾಗುತ್ತದೆ. ವಿಶೇಷವೆಂದರೆ ನಾಗಚಂದ್ರ ಕವಿ ಇಲ್ಲಿ ಮುನಿಸುವ್ರತ ತೀರ್ಥಂಕರರನ್ನು ನೆಪಮಾತ್ರಕ್ಕೆ ಪ್ರಸ್ತಾಪಿಸಿ, ಅವರ ಕಾಲದ ಬಲದೇವ, ವಾಸುದೇವ, ಪ್ರತಿವಾಸುದೇವರಾದ - ರಾಮ, ಲಕ್ಷ್ಮಣ, ರಾವಣರ ಚರಿತ್ರೆಯ ಮೇಲೆ ಕ್ಷಕಿರಣವನ್ನು ಬೀರುತ್ತಾನೆ.

೧. ರಾಮ

ಇತರ ರಾಮಾಯಣಗಳಂತೆ ಇಲ್ಲಿಯೂ ರಾಮನೇ ಕಥಾನಾಯಕ. ಅವನು ಎಂಟನೆಯ ಬಲದೇವ, ಚರಮದೇಹಧಾರಿ, ಅಹಿಂಸಾವ್ರತಿ ಹಾಗೂ ಕಾರಣ ಪುರುಷ. ರಾಮನ ಜೀವನದುದ್ದಕ್ಕೂ ಈ ವಿಶಿಷ್ಟಗುಣಗಳು ಪ್ರಕಟವಾಗುತ್ತ ಬರುವ ಹಾಗೆ ನಾಗಚಂದ್ರ ಎಚ್ಚರವಹಿಸಿದ್ದಾನೆ. 'ನಾಯಕನನ್ಯನಾಗೆ ಕೃತಿ ವಿಶ್ರುತಮಾಗದುದಾತ್ತ ರಾಘವಂ ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು' ಎಂಬ ಮಾತಿನ ಮೂಲಕ ಕವಿ ತನ್ನ ಕಥಾನಾಯಕನ ಘನತೆ, ಗಾಂಭೀರ್ಯಗಳನ್ನು ಆರಂಭದಲ್ಲಿಯೇ ಚಿತ್ರಿಸಿದ್ದಾನೆ. ಇಲ್ಲಿಯ ರಾಮ ಧೀರೋದಾತ್ತ, ವಿವೇಕಶೀಲ, ವಿಚಾರವಂತ, ಸಾಹಸಿ, ಉದಾರಿ, ದೈವೀಗುಣ ಸಂಪನ್ನ, ಹೀಗಾಗಿ ನಾಗಚಂದ್ರನಿಗೆ ರಾಮನೆಂದರೆ ಎಲ್ಲಿಲ್ಲದ ಭಕ್ತಿ, ಗೌರವ. ತನ್ನ ನಾಯಕನು ಇತರ ಲೌಕಿಕ ದೊರೆಗಳಂತೆ ಸಾಮಾನ್ಯನಲ್ಲವೆಂಬುದನ್ನು 'ಅನ್ಯ'ಶಬ್ದದ ಮೂಲಕ ಕವಿ ಸೂಚಿಸಿದ್ದಾನೆ. ಜೊತೆಗೆ ರಾಮಕಥೆಯಾಗಿರುವ ಕಾರಣ 'ವಿಶ್ರುತ'ವಾಗುತ್ತದೆಂಬ ಭರವಸೆಯನ್ನು ಹೊಂದಿದ್ದಾನೆ.

ರಾಮನ ಜನನದ ಪ್ರಸಂಗ ಜೈನ ತೀರ್ಥಂಕರರ ಜನನದ ಹಾಗೆ ಪ್ರಶಾಂತ ಗಂಭೀರ ಪರಿಣಾಮವನ್ನುಂಟು ಮಾಡುತ್ತದೆ. ನಾಗಚಂದ್ರನ ರಾಮ ಕ್ಷಾತ್ರವೀರನಾಗಿ ಕಾಣುವುದಕ್ಕಿಂತ ಹೆಚ್ಚಾಗಿ ಧರ್ಮವೀರನಾಗಿ ಕಂಡುಬರುತ್ತಾನೆ. ಅಪಾರ ಸಂಯಮಿಯಾಗಿದ್ದ ಅವನದು ಅನೇಕಾಂತವಾದ ದೃಷ್ಟಿ, ಗಂಭೀರ ನಡೆ. ತಂದೆ ದಶರಥ ರಾಜ್ಯವನ್ನು ತನಗೆ ಒಪ್ಪಿಸಲು ಬಂದಾಗ ರಾಮ ಅದನ್ನು ನಯವಾಗಿ ತಿರಸ್ಕರಿಸುವ ಪ್ರಸಂಗವು ರಾಮನ ಸುಕೋಮಲತೆಗೆ ಸಾಕ್ಷಿಯಾಗಿದೆ. ಕೈಕೆ ತನಗೆ ಕೇಡನ್ನುಂಟುಮಾಡುವ ನಿರ್ಣಯವನ್ನು ಕೈಕೊಂಡಾಗಲೂ ಸಹಿತ ರಾಮನದು ಅದೇ ಪ್ರಶಾಂತ ಗಂಭೀರ ನಿಲುವು. ಆತ ಕಿಂಚಿತ್ತೂ ಗಾಬರಿಗೊಳ್ಳುವುದಿಲ್ಲ, ವಿಚಲಿತನಾಗುವುದಿಲ್ಲ. ಅಷ್ಟೇ ಅಲ್ಲ ಕ್ಷಣಮಾತ್ರದಲ್ಲಿ ಎಲ್ಲವನ್ನೂ ತನ್ನ ಮನದಾಳದಲ್ಲಿ ಮುಚ್ಚಿಕೊಂಡು ಸಂದರ್ಭದ ಅಗತ್ಯತೆಯನ್ನರಿತು ತಾನೇ ವನವಾಸಕ್ಕೆ ಹೊರಡಲು ಸಿದ್ಧನಾದ. ತ್ಯಾಗ ವಿರಕ್ತಿಗಳ ಪೂರ್ವವಾಸನೆ ರಾಮನಲ್ಲಿ ಮೊದಲೇ ಮನೆಮಾಡಿತ್ತು ಎನ್ನುವ ಸೂಚನೆ ಇಲ್ಲಿ ದೊರೆಯುತ್ತದೆ. ಅವನಿಗೆ ಈ ಲೌಕಿಕದ ಬಗ್ಗೆ ಆಸೆ ಆಕಾಂಕ್ಷೆಗಳಿಲ್ಲ. ಅವನು ಊರ್ಧ್ವಮುಖಿ. ಕೊನೆಗೆ ತಪಸ್ಸುಗೈದು ಮುಕ್ತಿ ಸಾಧಿಸುತ್ತಾನೆ ಎಂದು ಹೇಳುವಲ್ಲಿ ಕವಿ ನಾಗಚಂದ್ರ ತನ್ನ ಕೃತಿಯನ್ನು ಶ್ರೀರಾಮ ಭಟ್ಟಾರಕ ಚರಿತೆಯನ್ನಾಗಿ ಮೂಡಿಸಿದ್ದಾನೆ. ಹೀಗಾಗಿಯೇ ಆತ ರಾಜ್ಯಪದವಿಯನ್ನಾಗಲೀ, ಸತಿಯನ್ನಾಗಲೀ ಯಾವುದೇ ಕ್ಷಣದಲ್ಲಿ ತೊರೆಯಲು ಸಿದ್ಧನಾಗಿಬಿಡುತ್ತಾನೆ. ಇದೆಲ್ಲ ಅನಾಸಕ್ತಿಯೆಂಬುದು ಅವನ ಬಲವಾದ ನಂಬಿಕೆ. ರಾಮನ ವ್ಯಕ್ತಿತ್ವವನ್ನು ವನವಾಸ ಪೂರ್ವಘಟ್ಟ ಮತ್ತು ವನವಾಸೋತ್ತರ

ಘಟ್ಟ ಎಂದು ಗುರುತಿಸಬಹುದು. ಎರಡೂ ಪ್ರಸಂಗಗಳಲ್ಲಿ ಅವನ ಸತ್ವಪರೀಕ್ಷೆ ನಡೆಯುತ್ತದೆ. ಮೊದಲು ರಾಜ್ಯವನ್ನು ಬಿಟ್ಟುಕೊಡಬೇಕು. ವನವಾಸದ ನಂತರ ಹೆಂಡತಿಯನ್ನು ಬಿಟ್ಟು ಕೊಡಬೇಕು. ನಾಗಚಂದ್ರನ ರಾಮ ಯಾವಾಗಲೂ ಅಂತರ್ಮುಖಿ. ಗುಣವನ್ನು ಮೆಚ್ಚುವ, ಕೆಲವೊಮ್ಮೆ ದುರ್ಗುಣವನ್ನು ಮನ್ನಿಸುವ ಔದಾರ್ಯ ಅವನದು. ಸುಗ್ರೀವ, ವಿಭೀಷಣರನ್ನು ಆತ ಮನಸಾರೆ ಮೆಚ್ಚಿಕೊಳ್ಳುತ್ತಾನೆ. ರಾವಣನನ್ನು ಎದುರಿಸುವಾಗಲೂ ಸಹಿತ ಅವನದು ಒಂದು ರೀತಿಯ ಮೃದುತ್ವ ಧೋರಣೆ.

ರಾಮನ ಪಾತ್ರವನ್ನು ಜೈನಧಾಟಿಯಲ್ಲಿ ಕಟ್ಟಿಕೊಡಲು ಹೊರಟ ನಾಗಚಂದ್ರ ಅದನ್ನು ನಿರ್ವಹಿಸುವಲ್ಲಿ ಕೆಲವೆಡೆ ಗೊಂದಲಕ್ಕೀಡಾಗಿದ್ದಾನೆಂದು ಹೇಳಬಹುದು. ಸೀತಾಪಹರಣದ ಸಂದರ್ಭದಲ್ಲಿ, ಸೀತಾದೇವಿಯ ವಿರಹದಿಂದ ಪರಿತಪಿಸುವ ನಾಗಚಂದ್ರನ ರಾಮ ಜೈನರಾಮನಾಗಿ ಕಾಣುವುದಿಲ್ಲ. ಅಲ್ಲದೆ ಸೀತಾಪಹರಣದ ನಂತರ ಸುಗ್ರೀವನ ಹನ್ನೆರಡು ಜನ ಪುತ್ರಿಯರನ್ನು ಲಗ್ನವಾದನೆಂದು ಹೇಳುವುದೂ ಜೈನ ಬ್ರಹ್ಮಚರ್ಯ ವ್ರತಕ್ಕೆ (ಏಕಪತ್ನಿತಸ್ಥ) ವ್ಯತಿರಿಕ್ತವೆನ್ನಿಸುತ್ತದೆ. ಮುಂದೆ ಸೀತಾಪರಿತ್ಯಾಗದ ಸಂದರ್ಭದಲ್ಲಿ ಸಾಮಾನ್ಯರ ಹಾಗೆ ಜನಾಪವಾದಕ್ಕೆ ಹೆದರಿ ಸೀತೆಯನ್ನು ತ್ಯಜಿಸಿದಂತೆ ಹೇಳಿರುವುದು ರಾಮನ ವ್ಯಕ್ತಿತ್ವಕ್ಕೆ ಅಷ್ಟಾಗಿ ಹೊಂದಿಕೆಯಾವುದಿಲ್ಲ. ಲಕ್ಷ್ಮಣನ ಮೇಲಿನ ವಿಶೇಷವಾದ ಪ್ರೀತಿ, ಮಮತೆಗಳು ರಾಮನ ಗುಣೋನ್ನತಿಗೆ ಒಗ್ಗುವುದಿಲ್ಲ. ಆದರೆ ಕಷಾಯಗಳನ್ನು, ಮೋಹ ಮಮಕಾರಗಳನ್ನು ಗೆದ್ದು ನಿಲ್ಲಬಲ್ಲ "ಕಾಲಲಬ್ಧಿ" ಯಾಗುವವರೆಗೂ ಎಲ್ಲರೂ ಒಂದು ಹಂತದಲ್ಲಿ ಭವವಾಸನೆಯಲ್ಲಿ ಮುಳುಗಬೇಕಾಗುತ್ತದೆ. ಆ ರೀತಿ ರಾಮನೂ ಕೂಡಾ ಎಂಬುದನ್ನು ಕವಿ ಇಲ್ಲಿ ಪ್ರತಿಪಾದಿಸಿದಂತಿದೆ. ಅಂತೆಯೇ ತಮ್ಮನು ಅಗಲಿದಾಗ ದುಃಖಿಸುವ ರಾಮನಂಥ ವಿವೇಕಿಗೂ ಕೂಡಾ ಸುಗ್ರೀವಾದಿಗಳು ಸಂಸಾರದ ಅನಿತ್ಯತೆಯ ಬಗ್ಗೆ ಉಪದೇಶ ಮಾಡಬೇಕಾಗಿ ಬರುತ್ತದೆ.

ಹೀಗೆ ರಾಮನ ಪಾತ್ರವನ್ನು ಸೃಷ್ಟಿಸುವಲ್ಲಿ ನಾಗಚಂದ್ರನು ಒಂದಷ್ಟು ಕಸರತ್ತು ಮಾಡಿರುವ ಹಾಗೆ ಕಂಡುಬರುತ್ತದೆ. ಅಲ್ಲಲ್ಲಿ ಕೆಲವು ಏರುಪೇರುಗಳು ಕಂಡುಬಂದರೂ, ಮೂಲ ರಾಮಾಯಣದ ರಾಮನಿಗಿಂತ ಸಾಕಷ್ಟು ಭಿನ್ನನಾದ, ಆಕರ್ಷಕನಾದ ರಾಮನನ್ನು ನಮ್ಮೆದುರು ನಿಲ್ಲಿಸುವಲ್ಲಿ ನಾಗಚಂದ್ರ ಯಶಸ್ವಿಯಾಗಿದ್ದಾನೆಂದು ಹೇಳಬಹುದು.

**೨. ಸೀತೆ**

ರಾಮಾಯಣದ ಪ್ರಮುಖ ಪಾತ್ರಗಳಲ್ಲಿ ಒಬ್ಬಳು. ಮಹಾಭಾರತಕ್ಕೆ ದ್ರೌಪದಿ ನಿಮಿತ್ತಳಾಗಿರುವಂತೆ, ರಾಮಾಯಣಕ್ಕೆ ಸೀತೆ ನಿಮಿತ್ತಳಾಗಿದ್ದಾಳೆ. ಬಲದೇವನ ಪತ್ನಿಯಾಗಿ, ಪ್ರತಿವಾಸುದೇವನ ಸಾವಿಗೆ ಕಾರಣವಾಗುವ ಈಕೆ ಸಹಜವಾಗಿಯೇ ಕಾವ್ಯದ ಪ್ರಮುಖ ಪಾತ್ರವಾಗಿ ಕಂಗೊಳಿಸುತ್ತಾಳೆ. ಕವಿಗೆ ಸೀತೆಯ ಬಗೆಗೂ ವಿಶೇಷ ಗೌರವಾದರಗಳಿವೆ. ಆಕೆ ಕಥಾ ನಾಯಕನ ಪುಣ್ಯಸತಿ ಎಂಬುದು ಒಂದು ಕಾರಣವಾದರೆ, ಗುಣದ ಗಣಿಯಾಗಿರುವುದು ಇನ್ನೊಂದು ಕಾರಣ. ಸೀತೆಯ ಅಂತರಂಗ-ಬಹಿರಂಗಗಳೆರಡೂ ಸೌಂದರ್ಯಾತಿಶಯ ಮತ್ತು ಗುಣಾತಿಶಯಗಳಿಂದ ಕೂಡಿವೆ. ಆಕೆಯ ಭಾವನೆ ನಿರ್ಮಲ. ಆಕೆಯ ವರ್ತನೆ ಸರಳ, ಪಾತಿವ್ರತ್ಯ ಅವಳ ಜೀವನದ ಪ್ರಮುಖ ಗುರಿ. ಅವಳು ಯಾವಾಗಲೂ ಜಿನಪೂಜೋತ್ಸವ ನಿರತೆ.

ಸೀತೆಯ ವ್ಯಕ್ತಿತ್ವವನ್ನು ಕೂಡಾ ವನವಾಸಪೂರ್ವ, ವನವಾಸ ಹಾಗೂ ವನವಾಸೋತ್ತರ ಎಂಬ ಪ್ರಮುಖ ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಇಲ್ಲಿಯ ಸೀತೆ ವಾಲ್ಮೀಕಿ ರಾಮಾಯಣದ ಸೀತೆಗಿಂತ ವಸ್ತುನಿಷ್ಠವಾಗಿ, ವ್ಯಾವಹಾರಿಕವಾಗಿ ಮೂಡಿ ಬಂದಿದ್ದಾಳೆ. ಮೂಲ ರಾಮಾಯಣದ ಹಾಗೆ ಸೀತೆ ಭೂಮಿಯಲ್ಲಿ ದೊರೆತವಳಲ್ಲ, ಭೂಮಿಯ ತೂಕದ ಗುಣವನ್ನು ಹೊಂದಿದವಳು. ಸೀತೆಯ ಜನನ, ಬಾಲ್ಯಗಳನ್ನು ಕವಿ ಹುಮ್ಮಸ್ಸಿನಿಂದ ಚಿತ್ರಿಸಿದ್ದಾನೆ. ಅವಳು ಅಪ್ರತಿಮ ಸುಂದರಿಯೆಂಬುದನ್ನು ಕವಿ ಪದೇ ಪದೇ ಹೇಳುತ್ತಾನೆ. ಜೊತೆಗೆ ಅಗಣ್ಯ ಪುಣ್ಯವತಿಯೂ ಹೌದೆಂಬುದನ್ನು ಮೌಹೂರ್ತಿಕರ ಮುಖದಿಂದ ಹೇಳಿಸುತ್ತಾನೆ. ಇವಳೂ ಕೂಡಾ ಧರ್ಮಪರಾಯಣೆಯಾದುದರಿಂದ ರಾಮನ ಹಾಗೆ ಊರ್ಧ್ವಮುಖಿಯಾಗಿದ್ದವಳೆ. ಅಂತೆಯೇ ರಾಮನಿಗೆ ತಪ್ಪಿಹೋದ ರಾಜ್ಯವಾಗಲೀ, ಒದಗಿದ ವನವಾಸವಾಗಲೀ ಅವಳನ್ನು ವಿಚಲಿತಗೊಳಿಸಲಿಲ್ಲ. ವನವಾಸಕ್ಕೆ ಹೊರಟ ರಾಮನೊಂದಿಗೆ ಸೀತೆ ತಾನಾಗಿಯೇ ಹೊರಟಳು ಎಂದು ಇತರ ರಾಮಾಯಣಗಳು ಹೇಳುತ್ತವೆ. ನಾಗಚಂದ್ರನಾದರೋ ಅಪರಾಜಿತೆಯ ಅಪೇಕ್ಷೆಯ ಮೇರೆಗೆ ಸೀತೆ ರಾಮನೊಂದಿಗೆ ವನವಾಸಕ್ಕೆ ಹೊರಟಂತೆ, ತಾಯಿಯ ಆದೇಶದ ಪ್ರಕಾರ ರಾಮ ಅವಳನ್ನು ಕರೆದುಕೊಂಡು ಹೋದಂತೆ ತಿಳಿಸಿರುವುದು ಅಷ್ಟು ಯುಕ್ತವಾಗಿ ಕಾಣುವುದಿಲ್ಲ. ಸ್ವಯಂ ನಿರ್ಧಾರದಿಂದ ಸೀತೆ ರಾಮನೊಂದಿಗೆ ವನವಾಸಕ್ಕೆ ಹೊರಟಳು ಎಂದು ಹೇಳುವುದರ ಸಹಜತೆ ಮತ್ತು ಪರಿಣಾಮ ಗಂಭೀರತೆಗಳೇ ಬೇರೆಯಾಗಿರುತ್ತವೆ.

ಲೌಕಿಕ ವಲಯದಲ್ಲಿ ಸೀತೆ ಅನುಭವಿಸಿದ ಕಷ್ಟನಷ್ಟಗಳಿಗೇನೂ ಕೊರತೆಯಿಲ್ಲ. ಹಾಗೆ ನೋಡಿದರೆ ಅವಳು ಅನುಭವಿಸಿದ್ದು ಒಂದು ವನವಾಸ, ಇನ್ನೊಂದು ಪರಿತ್ಯಾಗ. ಆದರೂ ಸೀತೆಗೆ ಅತ್ತ ಗಮನವಿಲ್ಲ. ಅವಳಿಗೆ ಬ್ರಹ್ಮಚರ್ಯ, ಜಿನಧರ್ಮಪಾಲನೆ, ಮೋಕ್ಷಸಾಧನೆಗಳೇ ಮುಖ್ಯ. ಅಂತೆಯೇ ರಾವಣನ ಶತಪ್ರಯತ್ನಗಳನ್ನು ದಾರ್ಷ್ಟ್ಯದಿಂದ ವಿಫಲಗೊಳಿಸುತ್ತಾಳೆ. ತನ್ನ ಏಕಪತಿವ್ರತವನ್ನು ಬಲ್ವಿಡಿವಿಡಿಯುತ್ತಾಳೆ. ತನ್ನನ್ನು ತ್ಯಜಿಸಿದ ರಾಮನ ಬಗ್ಗೆ ಅವಳಿಗೆ ಸಿಟ್ಟಿಲ್ಲ. ನೋವಿಲ್ಲ, ಬೇಸರವಿಲ್ಲ, ಅದರ ಬದಲು ಅನುಕಂಪವಿದೆ. ಅಂತೆಯೇ ತನ್ನನ್ನು ಬಿಟ್ಟ ಹಾಗೆ ಧರ್ಮವನ್ನು ಬಿಡದಿರಲು ರಾಮನಿಗೆ ತಿಳಿಸುವಂತೆ ಕೃತಾಂತವಕ್ತ್ರನ ಮೂಲಕ ಹೇಳಿಕಳಿಸುತ್ತಾಳೆ. ವೈಯಕ್ತಿಕ ಕಷ್ಟನಷ್ಟಕ್ಕಿಂತ ಧರ್ಮಪಾಲನೆ ಹೆಚ್ಚು ಶ್ರೇಯಸ್ಕರವಾದುದೆಂಬ ನಿಲುವು ಅವಳದು. ಬಾಲ್ಯದಲ್ಲಿ ಜನಕನ ಪುತ್ರಿಯಾಗಿ, ಯೌವನದಲ್ಲಿ ರಾಮನ ಪತ್ನಿಯಾಗಿ ಮಾತ್ರ ಕಂಡುಬರುವ ಸೀತೆ ಅಂತರಿಕವಾಗಿ ಬದುಕಿನ ಲೌಕಿಕ ಸಂಬಂಧಗಳ ಮಿತಿಯನ್ನು ದಾಟಿ ನಿಂತವಳಾಗಿದ್ದಾಳೆ.

ವನವಾಸದಲ್ಲಿ ಅನುಭವಿಸುವ ಸಂಕಷ್ಟ, ರಾವಣನ ಪೀಡೆ, ಪರಿತ್ಯಾಗದ ನೋವು ಇವುಗಳನ್ನು ತಾಳ್ಮೆಯಿಂದ ಅನುಭವಿಸಿದ ಸೀತೆ ಸಂಯಮ ಮತ್ತು ಕ್ಷಮಾಗುಣಗಳೇ ಸಾಕಾರವೆತ್ತಿರುವಂತೆ ಕಂಡುಬರುತ್ತಾಳೆ. ಹಾಗೆ ನೋಡಿದರೆ ಸೀತೆಯೇ ಇಡೀ ಕಾವ್ಯದ ಜೀವಾಳ. ರಾವಣನ ದಂಡನೆಗೆ ಮತ್ತು ರಾಮನ ಮೋಕ್ಷಕ್ಕೆ ಅವಳೇ ಕಾರಣಕರ್ತೆ. ತನ್ನನ್ನು ರಾವಣನೊಂದಿಗೆ ಸೇರಿಸಬಂದ ಮಂಡೋದರಿಗೆ ಸೀತೆ ಹೇಳಿದ ಮಾತುಗಳು ಆಕೆಯ ವ್ಯಕ್ತಿತ್ವದ ಔನ್ನತ್ಯವನ್ನು ಪ್ರತಿಪಾದಿಸುತ್ತವೆ. ಸತೀ ಧರ್ಮದ ಸೂಕ್ಷ್ಮಗಳನ್ನು ತಿಳಿಸಿಕೊಟ್ಟ ಸೀತೆ ಒಬ್ಬ ಮಹಾಸತಿಯಾಗಿ ಕಂಡುಬರುತ್ತಾಳೆ. ಕೊನೆಗೆ ರಾವಣನನ್ನು ಪರಿವರ್ತನೆಗೊಳಿಸಿದುದಲ್ಲದೆ, ರಾಮನಿಗಿಂತ ತಾನೇ ಮೊದಲು ದೀಕ್ಷಾಬದ್ಧಳಾಗುವಲ್ಲಿ ಸೀತೆ ತನ್ನ ಹೆಚ್ಚುಗಾರಿಕೆಯನ್ನು ವ್ಯಕ್ತಪಡಿಸುತ್ತಾಳೆ. ಅಪಹರಣ,

ಪರಿತ್ಯಾಗ, ಅಗ್ನಿಪ್ರವೇಶ ಮತ್ತು ದೀಕ್ಷಾ ಸ್ವೀಕಾರ ಈ ನಾಲ್ಕು ಸೀತೆಯ ಬದುಕಿನ ಪ್ರಮುಖ ಹಂತಗಳಾಗಿವೆ. ಮೊದಲಿನ ಮೂರರಲ್ಲಿ ದೊರೆಯಲಾರದ ಸುಖವನ್ನು ಅವಳು ಕೊನೆಯದಾದ ತಪೋರಾಜ್ಯದಲ್ಲಿ ಪಡೆದುಕೊಳ್ಳುತ್ತಾಳೆ. ಕಾಯಿ ಮಾಗಿ ಹಣ್ಣಾಗುವ ಪ್ರಕ್ರಿಯೆ ಇಲ್ಲಿಯ ಸೀತೆಯ ಬೆಳವಣಿಗೆಯಲ್ಲಿ ಕಂಡುಬರುತ್ತದೆ. ರಾಮು ಕ್ಷಮೆ ಕೇಳಿದಾಗ ಇದು ನಿನ್ನ ತಪ್ಪಲ್ಲ "ಮುನ್ನುಪಾರ್ಜಿಸಿದ ಕರ್ಮಮೆನಗೆ ಪಿರಿದಪ್ಪ ದುಃಖಮಂ ಮಾಡಿದೊಡಾ ಕರ್ಮಕ್ಕೆ ಮುಳಿವೆನಲ್ಲದುಟಿದವರ್ಗದೇಕೆ ಮುಳಿವೆಂ ಕೇಡುಳ್ಳ ಸಂಸಾರದೊಳಪ್ಪುದೇಂ ಕೇಡಿಲ್ಲದ ಮೋಕ್ಷಸುಖಕ್ಕೆ ಕಾರಣಮಪ್ಪ ತಪಮಂ ಕೈಕೊಳ್ವೆನ್" ಎಂದು ಸೀತೆ ಹೇಳುವಲ್ಲಿ ಅವಳ ವ್ಯಕ್ತಿತ್ವ ಸಂಪೂರ್ಣ ವಿಕಸನಗೊಂಡುದು ಕಂಡುಬರುತ್ತದೆ. ತನ್ನ ಬದುಕಿನ ಪೂರ್ವಾರ್ಧದಲ್ಲಿ ಸೌಂದರ್ಯ, ಸೌಕುಮಾರ್ಯಗಳನ್ನು ಹೊಂದಿದ್ದ ಸೀತೆ,ಉತ್ತರಾರ್ಧದಲ್ಲಿ ಕಾಠಿಣ್ಯ ಮತ್ತು ಧೃಢತೆಗಳನ್ನು ಹೊಂದಿ ಬೆಳೆಯುತ್ತಾಳೆ. ಸಾಂಪ್ರದಾಯಿಕ ಸ್ತ್ರೀಯಂತೆ ಚಿತ್ರಣಗೊಂಡಿರುವ ಸೀತೆಯ ಪಾತ್ರದಲ್ಲಿ ಜೈನಕಂತಿಯೊಬ್ಬಳ ಜೀವನಚರಿತ್ರೆಯನ್ನೇ ಕವಿ ಸಮೀಕರಿಸಿರುವಂತಿದೆ.

೩. ರಾವಣ

ರಾಮಚಂದ್ರಚರಿತ ಪುರಾಣದ ಮಹತ್ವದ ಪಾತ್ರಗಳಲ್ಲಿ ರಾವಣನ ಪಾತ್ರವೂ ಒಂದು. ಅವನು ರಾಕ್ಷಸನಲ್ಲ. ಅದರ ಬದಲು ಸಂಕೀರ್ಣ ಮನಸ್ಥಿತಿಯನ್ನು ಹೊಂದಿದ ಒಬ್ಬ ಶಕ್ತಿಶಾಲೀ ಮನುಷ್ಯ. ನಾಗಚಂದ್ರನ ರಾವಣನನ್ನು ದುರಂತ ರಾವಣ ಎಂದು ಗುರುತಿಸಲಾಗಿದೆ. ಜೊತೆಗೆ ಅವನು ದುರಂತ ರಾವಣ ಹೌದೆ? ಎಂಬ ಬಗ್ಗೆ ಕೂಡಾ ಚರ್ಚೆಗಳು ನಡೆದಿವೆ. ಒಂದಂತೂ ನಿಜ, ವಾಲ್ಮೀಕಿ ರಾಮಾಯಣದ ರಾವಣನಂತೆ ಇಲ್ಲಿಯ ರಾವಣ ದುಷ್ಟನಂತೂ ಅಲ್ಲ. ಯಾವುದೋ ಒಂದು ದುರ್ಬಲ ಗಳಿಗೆಯಲ್ಲಿ ಮನುಷ್ಯ ಪ್ರವೃತ್ತಿಯ ಪರಿಳಿತಕ್ಕೆ ಪಕ್ಕಾದವನು ಅವನು. ಇದರಿಂದಾಗಿಯೇ ನಾಗಚಂದ್ರನ ರಾವಣ ಹೊರನೋಟಕ್ಕೆ ಅಪರಾಧಿಯಂತೆ ಕಂಡರೂ ಓದುಗರಿಗೆ ಆತ್ಮೀಯನಾಗಿಯೇ ಕಂಡುಬರುತ್ತಾನೆ. ಅವನ ಬ್ರಹ್ಮಚರ್ಯದ ಸೋಲು ಕರ್ಮವಶದಿಂದಾಗಿ ನಡೆಯಿತು ಎಂಬುದನ್ನು ನಾಗಚಂದ್ರ ಸೂಚ್ಯವಾಗಿ ತಿಳಿಸಿದ್ದಾನೆ.

ರಾವಣನನ್ನು ಚಿತ್ರಿಸುವಲ್ಲಿ ನಾಗಚಂದ್ರನು ಬಹುಮಟ್ಟಿಗೆ ವಿಮಲಸೂರಿಗೆ ಋಣಿಯಾಗಿದ್ದಾನೆ. ಒಂದು ಹಂತದಲ್ಲಿ ಉದಾತ್ತನಾಯಕನಾಗಿ ಕಂಡುಬರುವ ರಾವಣ, ಇನ್ನೊಂದು ಹಂತದಲ್ಲಿ ದುರಂತನಾಯಕನಾಗಿ ಪರಿವರ್ತನೆಗೊಂಡಿರುವುದರ ಹಿಂದಿನ ಸಂಕೀರ್ಣ ಮನಸ್ಥಿತಿಯನ್ನು ಗುರುತಿಸಲು ನಾಗಚಂದ್ರ ಕವಿ ಒಬ್ಬ ಮನೋವಿಜ್ಞಾನಿಯ ಹಾಗೆ ಶೋಧ ನಡೆಸಿದ್ದಾನೆ. ಇಲ್ಲಿಯ ರಾವಣ ತಾನು ಕೊನೆಗೆ ಹೊಂದುವ ಪ್ರಾಯಶ್ಚಿತ್ತದಿಂದ ಪುನೀತನಾಗುವುದರ ಜೊತೆಗೆ ಓದುಗರ ಅನುಕಂಪಕ್ಕೆ ಪಾತ್ರನಾಗುತ್ತಾನೆ.

ರಾವಣನ ಬದುಕಿನಲ್ಲಿ ಮೂರು ಹಂತಗಳನ್ನು ಗುರುತಿಸಬಹುದು. ಮೊದಲನೆಯ ಹಂತ ಸದ್ಗುಣಿ ಮತ್ತು ಪರಮಸಾಹಸಿಯಾಗಿದ್ದ ರಾವಣ. ಆ ಹಂತದ ಅವನ ಔದಾರ್ಯ, ಔನ್ನತ್ಯಗಳು ಅಸಾಧಾರಣವಾದುವು. ಆಗ ಅವನಲ್ಲಿ ಹಿಂಸೆ ಮತ್ತು ಕಾಮಗಳ ಗೊಂದಲವಿರಲಿಲ್ಲ, ಅದರ ಬದಲು ಕ್ಷತ್ರಿಯ ಸಹಜವಾದ ಸಾಹಸ ಮತ್ತು ರಾಜ್ಯವಿಸ್ತಾರದ ಅಭಿಲಾಷೆಗಳು ಇದ್ದವು. ಅವನ ಬಂಧುಪ್ರೇಮವು ಅನನ್ಯವಾಗಿದ್ದಿತು. ಹನುಮಂತ, ಸುಗ್ರೀವ, ಖರ,ದೂಷಣ, ವಿಭೀಷಣ ಇವರೆಲ್ಲರಲ್ಲಿ ಅವನಿಗೆ ಅಪಾರ ಪ್ರೀತಿ-ವಿಶ್ವಾಸಗಳಿದ್ದವು. ವಿಷಯ ವಾಸನೆಯಂತೂ ಅವನಿಂದ

ಮೈಲಿಗಟ್ಟಿಲೆ ಮೂರವಿದ್ದಿತು. ಹೀಗೆ ಒಟ್ಟಾರೆ ಮೊದಲ ಹಂತದ ಅವನ ಬದುಕು ನಿರ್ಮಲವಾದು -ದಾಗಿತ್ತು.

ಸೀತೆಯನ್ನು ಕಾಣುವುದರೊಂದಿಗೆ ರಾವಣ ಕಾಲುಜಾರಿದ. ತನ್ನ ಮನಸ್ಸಿನ ಜಾರುವಿಕೆಯನ್ನು ಪ್ರಜ್ಞಾಪೂರ್ವಕವಾಗಿ ಸಾಧಿಸಿಕೊಳ್ಳಲು ಹವಣಿಸಿದ ರಾವಣ ತನ್ನ ಔನ್ನತ್ಯದಿಂದಲೂ ಕೆಳಗೆ ಜಾರುತ್ತಾನೆ. ಹೀಗಾಗಿ ವಿವೇಕಿಯೂ, ಸಾಹಸಿಯೂ ಆಗಿದ್ದ ರಾವಣ ಈಗ ಅವಿವೇಕಿ ಸಾಹಸಿಗನಾಗಿ ಕಾಣುತ್ತಾನೆ. ಹಿಂದೆ ವಿದ್ಯಾಧರ ಸ್ತ್ರೀಯರನ್ನು ಕಣ್ಣೆತ್ತಿ ನೋಡದಿದ್ದ ರಾವಣ ಈಗ ರಾಮನ ಸತಿಯಾದ ಜಾನಕಿಗೆ ಮನಸೋಲುವಷ್ಟು ಕೀಳು ಚಾರಿತ್ರ್ಯಕ್ಕಿಳಿಯುತ್ತಾನೆ. ಇದೆಲ್ಲ ಕಾಲವಶದಿಂದ ಉಂಟಾಯಿತೆಂದು ಹೇಳಿದ ನಾಗಚಂದ್ರ, ದೋಷಿ ದಿವ್ಯದ ಕಾಸಿದ ಕುಳವನ್ನು ಹಿಡಿದಂತಾಯಿತು. ಅವನ ಧವಲ ವ್ಯಕ್ತಿತ್ವ ಮಸಿಯಾಯಿತು ಎಂಬುದನ್ನು ತಪ್ಪದೆ ತಿಳಿಸಿದ್ದಾನೆ. ಸೀತೆಗೆ ಮನಸೋತ ರಾವಣ ಬಾಹ್ಯ ಪ್ರಪಂಚದ ಪರಿವೆಯನ್ನು ಕಳೆದುಕೊಂಡ "ಮರವಾನಸ"ನಾದ. ಒಟ್ಟಾರೆ ರಾವಣನ ನಿರ್ಮಲ ವ್ಯಕ್ತಿತ್ವಕ್ಕೆ ಅವನತಿ ಉಂಟಾದುದು ಇದೇ ಹಂತದಲ್ಲಿ.

ಮೂರನೆಯ ಮತ್ತು ಕೊನೆಯ ಹಂತದಲ್ಲಿ ತನ್ನ ಮನಃಪರಿವರ್ತನೆ ಮತ್ತು ಪ್ರಾಯಶ್ಚಿತ್ತದಿಂದಾಗಿ ಓದುಗರಿಗೆ ಮತ್ತೆ ಒಂದಿಷ್ಟು ಆತ್ಮೀಯನಾಗುತ್ತಾನೆ. ಹಿಂದೆ ಕದಡಿದ ರಾವಣನ ಮನಸ್ಸು ಈಗ ಪ್ರಶಾಂತವಾಗಿದೆ. ಇದನ್ನೇ ಕವಿ "ಕದಡಿದ ಸಲಿಲಂ ತಿಳಿವಂದದೆ" ಎಂಬ ಹೋಲಿಕೆಯ ಮೂಲಕ ತಿಳಿಸಿದ್ದಾನೆ. ರಾಮಲಕ್ಷ್ಮಣರೊಡನೆ ಕದನಕ್ಕಿಳಿಯುವ ಹಠಮಾರಿ ರಾವಣನನ್ನು ನೋಡಿದರೆ ಆತನಲ್ಲಿ ಉಂಟಾದ ಪರಿವರ್ತನೆ ಎಷ್ಟು ಪ್ರಮಾಣದ್ದು ಎಂಬ ಹಂತದಲ್ಲಿಯೂ ಕೂಡಾ ರಾವಣನಲ್ಲಿ ಒಳಗೊಳಗೇ ಕೆಲವು ಆತಂಕಗಳು ಕಾಡಿವೆ. ಹೀಗಾಗಿ ಆತನ ಮನಃಪರಿವರ್ತನೆಯ ಪರಿಯನ್ನು ಒಂದಿಷ್ಟು ಸಂಶಯದಿಂದ ಪರೀಕ್ಷಿಸಬೇಕಾಗುತ್ತದೆ. ಇದೆಲ್ಲದರ ಹಿಂದೆ ತನ್ನ ತಪ್ಪು ನಿರ್ಧಾರ, ಅದರಿಂದ ಉಂಟಾದ ಅಪಮಾನ, ನಿರಾಸೆ ಇವೆಲ್ಲ ಅಡಗಿರುವುದನ್ನು ನಾವು ಗುರುತಿಸಬೇಕು. ಈ ನ್ಯೂನತೆಯನ್ನು ಬಿಟ್ಟರೆಉಳಿದ ಹಾಗೆ ಮೂರನೆಯ ಹಂತದ ರಾವಣ ಮಾಗಿದ ರಾವಣನಾಗಿಯೇ ಕಾಣುತ್ತಾನೆ. ವೈದಿಕ ಅರ್ಥದ "ಪಶ್ಚಾತ್ತಾಪ" ಎಂಬ ಕಲ್ಪನೆಯನ್ನು ನಾಗಚಂದ್ರನ ರಾವಣನಿಗೆ ಅಂಟಿಸಲಾಗದು. ಮಾನವ ಸಹಜವಾದ ಈ ಲೋಕದೊಂದಿಗಿನ ಪ್ರಜ್ಞಾಪೂರ್ವಕವಾದ ಪ್ರಕ್ರಿಯೆಯ ಫಲಸ್ವರೂಪವನ್ನು ಆತ (ರಾವಣ) ಭೋಗಿಸಬೇಕಾಯಿತೆಂಬ ಜೈನ ವಿಚಾರಸರಣಿ ನಾಗಚಂದ್ರನ ಮನಸ್ಸಿನಲ್ಲಿದ್ದಿರುವುದು ಸ್ಪಷ್ಟ. ಜೈನ ರಾವಣ ಹೆಚ್ಚು ಲೌಕಿಕನೂ, ವ್ಯಾವಹಾರಿಕನೂ ಆಗಿ ಕಂಡಿರುವುದೂ ಈ ಧೋರಣೆಯಿಂದಲೇ. ಸಾತ್ವಿಕತೆ ಮನುಷ್ಯ ಸ್ವಭಾವದ ಸಹಜ ಗುಣವಾಗಿರುವಂತೆ, ತಾಮಸಿಕ ಗುಣವೂ ಮನುಷ್ಯ ಸ್ವಭಾವದ ಸಹಜಗುಣವಾಗಿದೆ. ವ್ಯಕ್ತಿತ್ವದ ಈ ಸಹಜತೆಯನ್ನು, ಮಾನವ ಜೀವನದ ಏಳು-ಬೀಳುಗಳನ್ನು ನಾಗಚಂದ್ರ ರಾವಣನ ಪಾತ್ರದ ಮೂಲಕ ನೈಜತೆಯೊಂದಿಗೆ ನಿರೂಪಿಸಿದ್ದಾನೆ.

ಒಟ್ಟಾರೆ ಇಡೀ ಜೈನ ಪರಂಪರೆಯಲ್ಲಿ ರಾವಣನ ಪಾತ್ರವು ಉದಾತ್ತ ಪಾತ್ರವಾಗಿ ಮೂಡಿಬಂದಿದೆ. ಉದಾತ್ತತೆಯೆಂದರೆ ಸಂಪೂರ್ಣ ದೌರ್ಬಲ್ಯರಹಿತತೆ ಎಂದಲ್ಲ, ತನ್ನ ದೌರ್ಬಲ್ಯವನ್ನು ತಿಳಿದು ಅದನ್ನು ಗೆಲ್ಲುವುದು. ತನ್ನ ದೌರ್ಬಲ್ಯದಿಂದ ಲೌಕಿಕವಾಗಿ ಪತನ

ಪೊಂದಿಪವಸಂತೆ ಕಂಡರೂ, ಜೈನ ರಾವಣ ಆತ್ಮಿಕವಾಗಿ ಮೇಲೇರಿದವನಾಗಿ ಕಾಣುತ್ತಾನೆ. ದೌರ್ಬಲ್ಯವನ್ನು ಗೆಲ್ಲುವುದರಲ್ಲಿಯೇ ಅವನ ಅತಿಶಯತೆ ಒಡೆದು ಕಾಣುತ್ತದೆ. ಗಾಂಭೀರ್ಯ, ಪೌರುಷ, ದಯೆ, ಕ್ಷಮೆ, ಸೌಜನ್ಯ, ಪಾಪಭೀರುತ್ವ ಮೊದಲಾದ ಎಲ್ಲ ಸದ್ಗುಣಗಳ ಗಣಿಯಾಗಿ ಇಲ್ಲಿಯ ರಾವಣ ಕಂಡುಬರುತ್ತಾನೆ. ಪರಸ್ತ್ರೀಗೆ ಮನಸೋತ ಒಂದು ಅವಗುಣದಿಂದಾಗಿ ಅವನ ವ್ಯಕ್ತಿತ್ವ ತೂತುಬಿದ್ದ ದೋಣಿಯಂತಾಗುತ್ತದೆ. ಆದರೆ ಒಳಗಿನ ವಿಷಯವಾಸನೆಯ ಅದಮ್ಯ ಹಂಬಲವನ್ನು ಅದುಮಿಟ್ಟುಕೊಂಡು ಸಂಯಮಪೂರ್ಣವಾಗಿ ನಡೆದುಕೊಳ್ಳುವ ರಾವಣ ಆಶ್ಚರ್ಯವನ್ನುಂಟುಮಾಡುತ್ತಾನೆ. ಇದೂ ಅವನ ವ್ಯಕ್ತಿತ್ವದ ಘನತೆಯನ್ನು ಹೆಚ್ಚಿಸುತ್ತದೆ. ಅಪರಾಧಿ ಸ್ಥಾನದಲ್ಲಿರುವ ರಾವಣನನ್ನು ಅನುಕಂಪೆಯೊಂದಿಗೆ ಪರಿಭಾವಿಸಲು ಹಚ್ಚುತ್ತದೆ. ಹೀಗೆ ರಾವಣನ ಪಾತ್ರವನ್ನು ಚಿತ್ರಿಸುವಲ್ಲಿ ನಾಗಚಂದ್ರ ತುಂಬಾ ಔದಾರ್ಯವನ್ನು ಮೆರೆದಿದ್ದಾನೆ. ಒಂದೆಡೆ ಮಾನವ ಸ್ವಭಾವದ ಸಹಜತೆಯನ್ನೂ, ಇನ್ನೊಂದೆಡೆ ಆ ಸ್ವಭಾವದ ಕುರಿತಾದ ಜೈನ ಧೋರಣೆಯನ್ನೂ ಕವಿ ಅಲ್ಲಿ ಎರಕ ಹೊಯ್ದಿದ್ದಾನೆ. ಹೀಗಾಗಿಯೇ ರಾವಣನ ಪಾತ್ರ ಮಿಶ್ರಪ್ರತಿಕ್ರಿಯೆಯಾಗಿ ಮತ್ತು ವಿಶಿಷ್ಟವಾಗಿ ಕಂಡುಬರುತ್ತದೆ.

**೪. ಲಕ್ಷ್ಮಣ**

ನಾಯಕನಲ್ಲದಿದ್ದರೂ ರಾಮಚಂದ್ರಚರಿತ ಪುರಾಣದಲ್ಲಿ ಲಕ್ಷ್ಮಣನದು ಒಡೆದು ಕಾಣುವ ಪಾತ್ರವಾಗಿದೆ. ಹೀಗಾಗಿ ಇವನ್ನು ಅಘೋಷಿತ ನಾಯಕನೆಂದು ಕರೆದರೂ ತಪ್ಪಾಗಲಿಕ್ಕಿಲ್ಲ. ಜೈನ ವಿಚಾರಧಾರೆಯ ಪ್ರಕಾರ ಬಲದೇವನ ಬಲಗೈಯಾಗಿ ಇರುವವ ವಾಸುದೇವ. ಇಲ್ಲಿ ರಾಮನ ಬಲಗೈಬಂಟನಾಗಿ ಲಕ್ಷ್ಮಣನಿದ್ದಾನೆ. ಬಲದೇವನ (ನಾಯಕನ) ವ್ಯಕ್ತಿತ್ವದ ಉತ್ಕರ್ಷಕ್ಕೆ ಬೇಕಾಗುವ ಎಲ್ಲ ಕಾರ್ಯಗಳೂ ಸಿದ್ಧಿಸುವುದು ವಾಸುದೇವನಿಂದ. ಹೀಗಾಗಿ ಎಲ್ಲ ಜೈನಪುರಾಣಗಳಲ್ಲಿ ಬಲದೇವರಿಗಿಂತ ವಾಸುದೇವರ ಪಾತ್ರಗಳು ಹೆಚ್ಚು ಜೀವಂತವೂ, ಆಕರ್ಷಕವೂ ಆಗಿ ಕಂಡು ಬರುತ್ತವೆ. ನಾಗಚಂದ್ರನ ಲಕ್ಷ್ಮಣನೂ ಈ ಮಾತಿಗೆ ಉತ್ತಮ ಉದಾಹರಣೆಯಾಗಿದ್ದಾನೆ. ರಾಮ -ನಷ್ಟು ವಿವೇಕ ಮತ್ತು ಸಂಯಮ ಗುಣಗಳು ಇವನಲ್ಲಿಲ್ಲ. ಆದರೂ ಇವನಿಗಿರುವ ಸೊಗಸು ರಾಮ -ನಿಗೆ ಸಾಧ್ಯವಾಗುವುದಿಲ್ಲ. ಬಲದೇವನಷ್ಟು ನಿರ್ಲಿಪ್ತನೂ, ನಿರ್ಮೋಹಿಯೂ ಆಗಿರುವ ಸ್ವಭಾವ ಇವನದಲ್ಲ. ಲೌಕಿಕದಲ್ಲಿ ಆಸಕ್ತನಾಗಿರುವ ಇವನು ಪರಿಸ್ಥಿತಿಗೆ ತಕ್ಕ ಹಾಗೆ ಪ್ರತಿಕ್ರಿಯಿಸಬಲ್ಲವನು.

ಪ್ರತಿವಾಸುದೇವನಾದ ರಾವಣನನ್ನು ವಧಿಸುವವನೂ ಲಕ್ಷ್ಮಣನೇ, ಬಲದೇವನು ಈ ಸಂಸಾರದ ಪಂದುಗದಲ್ಲಿ ಸಿಲುಕದಿರುವ ಹಾಗೆ ಕಣ್ಣಲ್ಲಿ ಕಣ್ಣಿಟ್ಟು ಕಾಯುವ ಕಟ್ಟೆಚ್ಚರದ ಕೆಲಸ ವಾಸುದೇವನಾದ ಲಕ್ಷ್ಮಣನದು. ಹೀಗಾಗಿ ಕಾವ್ಯದುದ್ದಕ್ಕೂ ಕಂಡುಬರುವ ಎಲ್ಲ ಲೌಕಿಕ ಪ್ರಸಂಗಗಳಲ್ಲಿ ಲಕ್ಷ್ಮಣನದೇ ಮೇಲುಗೈ. ಕೈಕೇಯಿಯ ಅಪೇಕ್ಷೆಯಿಂದಾಗಿ ರಾಮನು ರಾಜ್ಯವನ್ನು ತೊರೆಯಬೇಕಾಗಿ ಬಂದಾಗ, ಕ್ರಮ ತಪ್ಪಿ ಭರತನು ಅಧಿಕಾರ ಸೂತ್ರ ಹಿಡಿಯಲು ಹೊರಟಾಗ, ಲಕ್ಷ್ಮಣ ಕಿಡಿಕಿಡಿಯಾಗುತ್ತಾನೆ. ತನ್ನ ಕುಟುಂಬ ಮತ್ತು ಸಮಾಜದ ಪರಿಸರದಲ್ಲಿ ಕಂಡುಬರುವ ಅಕ್ರಮಗಳ ವಿರುದ್ಧ ಲಕ್ಷ್ಮಣ ಧ್ವನಿಯೆತ್ತುತ್ತಾನೆ. ಅನ್ಯಾಯದ ವಿರುದ್ಧ ಸಿಡಿದೇಳುತ್ತಾನೆ. ಕಾವ್ಯದ ತುಂಬೆಲ್ಲ ಲಕ್ಷ್ಮಣ ತನ್ನ ಸಾಹಸಪ್ರಧಾನ ಚಟುವಟಿಕೆಗಳಿಂದಾಗಿ ಓದುಗರ ಗಮನ ಸೆಳೆಯುತ್ತಾನೆ. ಲೌಕಿಕ ಪಾತ್ರವಾದ ಕಾರಣ ಸಹಜವಾಗಿ ಅವನ ವ್ಯಕ್ತಿತ್ವಕ್ಕೆ ಹೆಚ್ಚಿನ ಹಾಸು-ಬೀಸುಗಳು ದೊರೆಯುತ್ತವೆ.

ಲಕ್ಷ್ಮಣನ ಸೋದರ ವಾತ್ಸಲ್ಯ ಅಸಾಧಾರಣವಾದುದು. ರಾಮನ 'ಹೊರಪ್ರಾಣ' ಎಂದು ಕವಿ ಅವನ್ನು ಗುರುತಿಸಿದ್ದಾರೆ. ವನವಾಸದ ಸಂದರ್ಭದಲ್ಲಿ ಅನೇಕ ಕಷ್ಟಕಾರ್ಪಣ್ಯಗಳನ್ನು ಎದುರಿಸಿ, ಅಣ್ಣ ಅತ್ತಿಗೆಯನ್ನು ರಕ್ಷಿಸುತ್ತಾನೆ. ಸೀತಾಪರಿತ್ಯಾಗ ಸಂದರ್ಭದಲ್ಲಿ ಅಣ್ಣನನ್ನು ಪ್ರಶ್ನಿಸುವ ಲಕ್ಷ್ಮಣ ಪಾತ್ರಕ್ಕೆ ಇನ್ನಷ್ಟು ಕಳೆಯೇರುತ್ತದೆ. ಇದೆಲ್ಲವಕ್ಕೆ ಕಾರಣನಾದ ರಾವಣನನ್ನು ಲಕ್ಷ್ಮಣ ತರಿದು ಹಾಕುತ್ತಾನೆ.

ಲಕ್ಷ್ಮಣನ ಜೀವನದ ಕೊನೆಯ ಪ್ರಸಂಗವಂತೂ ಅವನ ಅಪಾರ ಸೋದರ ವಾತ್ಸಲ್ಯದ ಗರಿಷ್ಠ ಸ್ಥಿತಿಯಾಗಿದೆ. ಪ್ರಾಣರಹಿತವಾದ ರಾಮನ ಆಕೃತಿಯನ್ನು ಕಂಡು ಕ್ಷಣಾರ್ಧದಲ್ಲಿ ನಿಸ್ಸೀಮಶೋಕನಾದ ಲಕ್ಷ್ಮಣನು ನಿರ್ಜೀವವಾಗಿ ಧರೆಗುರುಳುತ್ತಾನೆ. ಬಂಧುಜನ ಪ್ರೇಮಿಯೂ, ಕ್ಷಾತ್ರಧರ್ಮ ಪರಿಪಾಲಕನೂ ಆದ ಜೈನ ಲಕ್ಷ್ಮಣನು, ವೈದಿಕ ಲಕ್ಷ್ಮಣನ ಪಾತ್ರಕ್ಕಿಂತ ಹೆಚ್ಚು ಕ್ರಿಯಾಶೀಲನಾಗಿ ಕಂಡುಬರುತ್ತಾನೆ. ಜೈನ ಧೋರಣೆಯ ಸಮೀಕರಣ ಲಕ್ಷ್ಮಣನ ಔನ್ನತ್ಯವನ್ನು ಇಮ್ಮಡಿಸುತ್ತದೆ. ಕಾವ್ಯದುದ್ದಕ್ಕೂ ಕಾರ್ಯೋತ್ಸಾಹಿಯಾಗಿರುವ ಏಕೈಕ ಪಾತ್ರವಾಗಿ ಲಕ್ಷ್ಮಣ ಕಂಡುಬರುತ್ತಾನೆ. ಅಂತೆಯೇ "ರಾಮನು ಪ್ರೇರಕಶಕ್ತಿಯಾದರೆ, ಲಕ್ಷ್ಮಣನು ಕಾರಕ ಚೈತನ್ಯ" ಎಂದು ವಿಮರ್ಶಕರು ಲಕ್ಷ್ಮಣನನ್ನು ಹೊಗಳಿದ್ದಾರೆ. ಕಥಾನಾಯಕನಾದ ರಾಮನಿಗಿಂತ ನಾಲ್ಕು ಬೆರಳು ಎತ್ತರದವನಾಗಿ ನಿರೂಪಿತನಾಗಿರುವಲ್ಲಿ ಲಕ್ಷ್ಮಣನ ಪಾತ್ರದ ರಹಸ್ಯ ಅಡಗಿದೆ.

**೫. ವಿಭೀಷಣ**

ರಾವಣನಲ್ಲಿ ಅತಿಯಾದ ಪ್ರೀತಿ ಮತ್ತು ಅಧಿಕಾರಗಳನ್ನು ಹೊಂದಿದ ವಿಶಿಷ್ಟ ವ್ಯಕ್ತಿ ವಿಭೀಷಣ. ಸಾತ್ವಿಕ ಗುಣದವನಾದ ಇವನು ತನ್ನ ಸೋದರ ರಾವಣನಿಗೂ ಒಳಿತನ್ನು ಬಯಸಿದ. ತಾತ್ವಿಕ ಭಿನ್ನಾಭಿಪ್ರಾಯದಿಂದಾಗಿ ಕೊನೆಗೆ ರಾಮಪಕ್ಷಪಾತಿಯಾದ. ರಾಮ-ಸೀತೆಯರಿಂದ ರಾವಣನ ವಧೆಯಾಗಲಿರುವುದನ್ನು ತಿಳಿದು, ಜನಕ - ದಶರಥರನ್ನೇ ಕೊಲ್ಲಲು ಮುಂದಾದ ವಿಭೀಷಣ ಸೋದರವಾತ್ಸಲ್ಯ ಅನುಪಮವಾದುದು. ರಾವಣ ಎಡವಿದಾಗಲೆಲ್ಲ ವಿಭೀಷಣ ಅವನನ್ನು ತಿದ್ದುವ ಪ್ರಾಮಾಣಿಕ ಪ್ರಯತ್ನ ಮಾಡುತ್ತಾನೆ. ರಾವಣನ ಹಠಮಾರಿತನದಿಂದಾಗಿ ವಿಭೀಷಣನ ಮಾತುಗಳಿಗೆ ಬೆಲೆ ಬರಲಿಲ್ಲವೆಂಬುದು ಬೇರೆ ಮಾತು. ಪಾಪಕ್ಕೆ ಹೆದರುವ ವಿಭೀಷಣ ಮಹಾಸಾತ್ವಿಕ ವ್ಯಕ್ತಿಯಾಗಿ ಕಾಣುತ್ತಾನೆ. ಎಲ್ಲರಿಗೂ ಹಿತನುಡಿಗಳನ್ನು ಹೇಳುವ ಹಿರಿಯ ಚೇತನವಾಗಿ ಕಂಗೊಳಿಸುತ್ತಾನೆ. ಅವನಿಗೆ ಮನುಷ್ಯ ದೌರ್ಬಲ್ಯಗಳೆಲ್ಲ ಚೆನ್ನಾಗಿ ಗೊತ್ತಿವೆ. ಅಂತೆಯೇ ತಪ್ಪು ಮಾಡಿದವರನ್ನು ತಿದ್ದಲು ಆತ ಹಂಬಲಿಸುತ್ತಾನೆ. ಅವರ ಬಗ್ಗೆ ಅನುಕಂಪ ತೋರಿಸುತ್ತಾನೆ. ಸೀತಾಪಹರಣದ ನಂತರ ರಾವಣನಿಗೆ ಒದಗುವ ಅಪಮೃತ್ಯವಿನ ಬಗ್ಗೆ ತಿಳಿದುಕೊಂಡ ವಿಭೀಷಣ ಅವನನ್ನು ಸಕಾಲದಲ್ಲಿ ಎಚ್ಚರಿಸುತ್ತಾನೆ. ರಾವಣ ತನ್ನ ಮಾತುಗಳನ್ನು ಕೇಳದಿದ್ದಾಗ ಹನುಮಂತನೊಂದಿಗೆ ತನ್ನ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾನೆ. ಮೊದಮೊದಲು ವಿಭೀಷಣನ ಬಗ್ಗೆ ಅಪಾರ ಪ್ರೀತಿ ವಿಶ್ವಾಸಗಳನ್ನಿಟ್ಟುಕೊಂಡಿದ್ದ ರಾವಣ ತನ್ನ ಮನೋವಿಕಾರತೆಯಿಂದ, ಬರಬರುತ್ತಾ ವಿಭೀಷಣನನ್ನು ತಿರಸ್ಕರಿಸುವ ಹಂತವನ್ನು ತಲುಪುತ್ತಾನೆ. ವಿಭೀಷಣನ ಬಗ್ಗೆ ರಾವಣ ಚುಚ್ಚುಮಾತುಗಳನ್ನಾಡುತ್ತಾನೆ. ಇದನ್ನರಿತ ವಿಭೀಷಣ ಬೆಂಕಿಬೀಳಲಿರುವ ಕಾಡಿನಿಂದ ದೂರ ಹೋಗುವ ಒರಿಯಾನೆಯ ಹಾಗೆ ಲಂಕೆಯನ್ನು ತೊರೆಯುತ್ತಾನೆ. ಇವನೊಂದಿಗೆ ಲಂಕೆಯ

ಪುಣ್ಯವೇ ಹೊರಸಡೆವ ಹಾಗಾಗುತ್ತದೆ. ಮುಂದೆ ರಾಮನ ಮೇಲಿನ ಭಕ್ತಿ ಮತ್ತು ಸ್ನೇಹದಿಂದಾಗಿ ವಿಭೀಷಣ ರಾಮಪಕ್ಷವನ್ನು ಸೇರುತ್ತಾನೆಯಾದರೂ, ರಾವಣನ ಸಾವಿಗಾಗಿ ದುಃಖಿಸುವಲ್ಲಿ ಮತ್ತೆ ತನ್ನ ವ್ಯಕ್ತಿತ್ವದ ವಿಶಿಷ್ಟತೆಯನ್ನು ಪ್ರಕಟಿಸುತ್ತಾನೆ. ಒಟ್ಟಾರೆ ನೈತಿಕತೆ, ನ್ಯಾಯ ನಿಷ್ಠುರತೆ, ಬಂಧುತ್ವ, ಸಾತ್ವಿಕ ಗುಣಗಳಿಂದ ವಿಭೀಷಣನ ಪಾತ್ರ ವಿಶಿಷ್ಟವಾಗಿ ಕಂಡುಬರುತ್ತದೆ. ಅಂತೆಯೇ ನಾಗಚಂದ್ರನು ವಿಭೀಷಣನ ಪಾತ್ರವನ್ನು ಅಷ್ಟೇ ಪ್ರೀತಿ ಮತ್ತು ಗೌರವಗಳಿಂದ ನಿರೂಪಿಸಿದ್ದಾನೆ.

**೬. ಹನುಮಂತ**

ನಾಗಚಂದ್ರನ ಹನುಮಂತ ಕಪಿಯಲ್ಲ, ಕಪಿಧ್ವಜ ಕುಲದವ. ಹನುಮದ್ವೀಪದ ಒಡೆಯನಾದ ಪವನಂಜಯ ಮತ್ತು ಅಂಜನಾದೇವಿಯರ ಮಗ. ರಾವಣನ ಮೆಚ್ಚಿನ ಬಂಧು, ರಾಮನ ನೆಚ್ಚಿನ ಬಂಟ. ಹನುಮಂತನದು ಸಾತ್ವಿಕ ಸಾಹಸ ಪ್ರವೃತ್ತಿ. ವರುಣನನ್ನು ಎದುರಿಸುವಲ್ಲಿ ತನ್ನ ನೆರವಿಗೆ ಬಂದ ಹನುಮಂತನ ಶೌರ್ಯವನ್ನು ಮೆಚ್ಚಿ, ರಾವಣ ತನ್ನ ತಂಗಿಯ ಮಗಳಾದ ಅನಂಗಪುಷ್ಪೆಯನ್ನು ಹನುಮಂತನಿಗಿತ್ತು ಲಗ್ನ ಮಾಡುತ್ತಾನೆ. ರಾಮಪಕ್ಷಕ್ಕೆ ಸೇರುವ ಮೊದಲು ಹನುಮಂತ ರಾವಣನಿಗೆ ಅತ್ಯಂತ ಆತ್ಮೀಯ ವ್ಯಕ್ತಿಯಾಗಿದ್ದ. ಗುಣಪಕ್ಷಪಾತಿಯಾಗಿದ್ದ ಅವನು ರಾವಣನಲ್ಲಿದ್ದ ದೋಷಗಳನ್ನು ಕಂಡು ಅವನಿಂದ ದೂರ ಸರಿದ. ಹನುಮಂತನದು ಧೀರ ಪ್ರಕೃತಿ, ಸೌಮ್ಯಾಕಾರ, ನಯವಿನಯ, ಮೃದು ವಚನಗಳು ಅವನ ವ್ಯಕ್ತಿತ್ವದ ವಿಶಿಷ್ಟ ಗುಣಗಳು. ಸ್ವಾಮಿನಿಷ್ಠೆಗೆ ಹೆಸರಾಗಿದ್ದವನು ಹನುಮಂತ. ರಾಮನ ಆಜ್ಞೆ ಅವನಿಗೆ ಕೊನೆಯ ಮಾತು. ಹನುಮಂತ ಬಹುವಿದ್ಯಾಪಾರಂಗತನಾದ ವಿದ್ಯಾಧರ. ಸೀತಾಪಹರಣದ ನಂತರ ಹನುಮಂತ ರಾಮಲಕ್ಷ್ಮಣರ ಬಲಗೈ ಬಂಟನಾಗಿ ನಿಂತ. ರಾವಣನೊಂದಿಗೆ ಹೋರಾಡಿ ಲಂಕೆಯನ್ನು ದಹಿಸಿ, ಸೀತೆಯನ್ನು ಬಿಡಿಸಿಕೊಂಡು ಬಂದ. ಹೀಗೆ ನಾಗಚಂದ್ರ ಹನುಮಂತನ ಪಾತ್ರವನ್ನು ಮಾನವಪಾತಳಿಯ ವಿಶಿಷ್ಟ ಪಾತ್ರವನ್ನಾಗಿ ನಿರೂಪಿಸಿದ್ದು, ಇಡೀ ರಾಮಾಯಣದಲ್ಲಿ ಸಹಜವಾಗಿ ಹನುಮಂತನ ಪಾತ್ರಕ್ಕೆ ಹೆಚ್ಚಿನ ಮಹತ್ವ ಬಂದಿದೆ.

**೭. ಕೈಕೇಯಿ**

ರಾಮಾಯಣದ ರಂಗಸಜ್ಜಿಕೆಯ ಮೇಲೆ ಕಂಡುಬರುವ ಪ್ರಮುಖ ಮಹಿಳಾ ಪಾತ್ರಗಳೆಂದರೆ ಸೀತೆ, ಮಂಡೋದರಿ ಮತ್ತು ಕೈಕೆ. ಮಾನವ ಸಹಜವಾದ ಅಸೂಯೆ ಮತ್ತು ಸ್ವಾರ್ಥಗಳ ಪ್ರತಿನಿಧಿಯಾಗಿ ಇಲ್ಲಿಯ ಕೈಕೆ ಕಂಡುಬರುತ್ತಾಳೆ. ದಶರಥನ ವಿಶೇಷ ಮೆಚ್ಚಿಕೆಗೆ ಪಾತ್ರಳಾದವಳವಳು. ಅದನ್ನು ಕವಿ "ಅನಂಗಪಾಶಮೆನೆ ಕೈಕೆ ಮನೋಜನ ಬೈತ ಬಯ್ಕೆ"ಯಂತ ಇದ್ದಳೆಂದು ಧ್ವನಿಪೂರ್ಣವಾಗಿ ತಿಳಿಸಿದ್ದಾನೆ. ಯುದ್ಧದಲ್ಲಿ ದಶರಥನಿಗೆ ನೀಡಿದ ನೆರವು ಕೈಕೆಗೆ ವರಗಳನ್ನು ದಯಪಾಲಿಸಿತು. ಆ ವರವೇ ಮುಂದೆ ರಾಮನ ಬದುಕಿನಲ್ಲಿ ಕೋಲಾಹಲವನ್ನುಂಟು ಮಾಡಿತು. ತನ್ನ ವರ್ತನೆಯಿಂದ ಕೈಕೆ ರಾಮಾಯಣದ ಪಾತ್ರಗಳಲ್ಲಿಯೇ ವಿಶಿಷ್ಟ ವ್ಯಕ್ತಿಯಾಗಿ ಕಂಡು ಬರುತ್ತಾಳೆ. ಅಂತಃಪುರದ ಒಳಹೊರಗೆಲ್ಲ ಇವಳದೇ ಮಾತು. ಮಗ ಭರತನ ಬದುಕನ್ನು ಕೈಕೆ ಸಂಪೂರ್ಣವಾಗಿ ನಿಯಂತ್ರಿಸಿದ್ದಳು. ದಶರಥನ ಮೇಲಂತೂ ಇವಳಿಗೆ ವಿಶೇಷ ಹತೋಟಿಯಿತ್ತು. ಮಗ ಭರತನಿಗೆ ತನ್ನ ಅಭಿಪ್ರಾಯ ಸಮ್ಮತವಾಗಿಲ್ಲ ಎಂಬುದರ ಅರಿವೂ ಅವಳಿಗಿತ್ತು. ಜೊತೆಗೆ ದಶರಥನೊಡನೆ ಭರತನೂ ತಪಕ್ಕೆ ತೆರಳುವ ಸಂಗತಿ ಅವಳನ್ನು

ಆಹ್ಲಾದಿಸುತ್ತದೆ. ಭರತನ ನಿರ್ವೇಗ ಮನಸ್ಥಿತಿ ತನಗೂ ಇತರರಿಗೂ ಹಿತವನ್ನುಂಟು ಮಾಡುವುದಿಲ್ಲ ಎಂಬುದನ್ನು ಅವಳು ತಿಳಿದುಕೊಳ್ಳುತ್ತಾಳೆ. ತಕ್ಷಣ ತನ್ನ ನಿರ್ಧಾರವನ್ನು ಬದಲಿಸಲು ಮುಂದಾಗುತ್ತಾಳೆ. ಈ ಹಂತದಲ್ಲಿ ತನ್ನ ದುಷ್ಟತೆಯನ್ನು ಕಳೆದುಕೊಳ್ಳುವ ಕೈಕೆ ಸಹಜವಾಗಿ ಓದುಗರ ಮೆಚ್ಚುಗೆಯನ್ನು ಪಡೆದುಕೊಳ್ಳುತ್ತಾಳೆ. ಹೀಗೆ ಮೂಲದ ಕೈಕೆಗಿಂತ ಒಂದಿಷ್ಟು ಮಾನವೀಯ ನೆಲೆಯಲ್ಲಿ ನಾಗಚಂದ್ರನ ಕೈಕೆ ಮೂಡಿಬಂದಿದ್ದಾಳೆ. ಕೊನೆಗೆ ತನ್ನ ಅವಿವೇಕವನ್ನು ತಿದ್ದಿಕೊಂಡು 'ಕಂತಿ' ಯಾಗುವುದರೊಂದಿಗೆ ಕೈಕೆಯ ಪಾತ್ರ ಗರಿಷ್ಠ ಎತ್ತರವನ್ನು ತಲುಪುತ್ತದೆ. ಒಟ್ಟಾರೆ ರಾಮಾಯಣಕ್ಕೆ ತಿರುವು ನೀಡಬಲ್ಲ ಚಾಲಕಶಕ್ತಿಯಾಗಿ ಕೈಕೆಯ ಪಾತ್ರ ಪರಿಣಾಮಕಾರಿಯಾಗಿ ಒಡಮೂಡಿದೆ.

**೮. ಮಂಡೋದರಿ**

ಮಯನ ಮಗಳೂ, ರಾವಣನ ಪತ್ನಿಯೂ, ಇಂದಗಿಯ ತಾಯಿಯೂ ಆದ ಮಂಡೋದರಿ ಮಹಾಪತಿವ್ರತೆ, ವೈದಿಕ ಸಾಹಿತ್ಯದಲ್ಲಿಯೂ ಇವಳ ಬಗ್ಗೆ ವಿಶಿಷ್ಟ ಗೌರವಾದರಗಳು ವ್ಯಕ್ತವಾಗಿವೆ. ಎಲ್ಲ ಸಂದರ್ಭಗಳಲ್ಲಿ ರಾವಣನ ನೆರವಿಗೆ ಬರುವವಳು ಮಂಡೋದರಿ. ರಾವಣನು ವಾಲಿ ನಿಂತಿದ್ದ ಪರ್ವತವನ್ನು ಎತ್ತಿ ಅಪಾಯಕ್ಕೆ ಸಿಲುಕಿಕೊಂಡಾಗ ಅವನನ್ನು ರಕ್ಷಿಸಿದವಳು ಮಂಡೋದರಿ. ತನಗೆ ದಕ್ಕದ ಸೀತೆಯ ಬಗ್ಗೆ ರಾವಣ ತಿಳಿಸಿದಾಗ, ಸೀತೆಯ ಮನವೊಲಿಕೆಗೆ ಪ್ರಯತ್ನಿಸಿದವಳೂ ಮಂಡೋದರಿಯೆ. ಪತಿಗೆ ಸಹಾಯಕಳಾಗಿ ಸೀತೆಯನ್ನು ರಾವಣನತ್ತವಾಲಿಸುವ ಮಂಡೋದರಿಯ ಪ್ರಯತ್ನ ಓದುಗರಲ್ಲಿ ಅವಳ ವ್ಯಕ್ತಿತ್ವದ ಕುರಿತಾಗಿ ಒಂದಿಷ್ಟು ಸಂಶಯಗಳನ್ನು ಮೂಡಿಸುತ್ತದೆ. ಒಟ್ಟಾರೆ ಅವಳಿಗೆ ರಾವಣನ ಸಂತೋಷ ಮುಖ್ಯ. ತನ್ನ ಸಂಕೀರ್ಣ ಸ್ವಭಾವದಿಂದಾಗಿ ನಾಗಚಂದ್ರನ ಮಂಡೋದರಿ ಒಂದು ವಿಶಿಷ್ಟ ಪಾತ್ರವಾಗಿ ಮೂಡಿ ಬಂದಿದ್ದಾಳೆ. ಶೀಲ, ಸದಾಚಾರ ಪಾತಿವ್ರತಕ್ಕೆ ಹೆಸರಾದ ಅವಳು, ಸೀತೆಯನ್ನು ರಾವಣನತ್ತ ಒಲಿಸಲು ಹೋಗಿ ಸೀತೆಯ ಭರ್ತ್ಸನೆಗೆ ಗುರಿಯಾಗುತ್ತಾಳೆ. ಹೀಗೆ ಹಲವು ಗುಣಗಳಿಂದ ಪ್ರೀತಿಗೆ ಪಾತ್ರಳಾಗುವ ಮಂಡೋದರಿ, ಈ ಒಂದು ಕ್ರಿಯೆಯಿಂದ ತಿರಸ್ಕಾರಕ್ಕೂ ಪಾತ್ರಳಾಗುತ್ತಾಳೆ. ಏನಿದ್ದರೂ ರಾಮಚಂದ್ರಚರಿತ ಪುರಾಣದಲ್ಲಿ ಮಂಡೋದರಿ ಪ್ರಮುಖ ಪೋಷಕ ಪಾತ್ರವಾಗಿ ಕಂಡುಬರುವುದಂತೂ ಸತ್ಯ.



# ಪರಿವಿಡಿ

# ಮಲ್ಲಿನಾಥಪುರಾಣಂ

## ಪ್ರಥಮಾಶ್ವಾಸಂ

ಶ್ರೀಪಾದಂ ಬಾಲಚಂದ್ರೋಜ್ಜ್ವ ಲತರಸುಮನೋವರ್ಷದಿಂ ಪಾದಪೀಠಂ
ಭೂಪಾಲೋತ್ತಂಸತಾರಾತರಳಮಣಿಗಳಿಂದುತ್ತಮಾಂಗಂ ಶರಜ್ಜ್ಯೋ
ತ್ಸ್ನಾಪಾಂಡುಚ್ಛತ್ರರತ್ನಂಗಳಿನಱಿಪೆ ನಿಜೈಶ್ವರ್ಯಮಂ ದಿವ್ಯಭಾಷಾ
ವ್ಯಾಪಾರೋದಾರನಾದಂ ಕುಡುಗೆಮಗೆ ಸುಖಾವಾಪ್ತಿಯಂ ಮಲ್ಲಿನಾಥಂ ೧

ಅವಲೋಹಂ ಪಿಂಗೆ ಹೇಮಂ ಸಹಜಗುಣದಿನಿರ್ಪಂತೆ ಕರ್ಮಂಗಳೆಂಟುಂ
ತವೆ ನಿಂದಾತ್ಮಸ್ವರೂಪಂ ತಮಗೆ ತನುವೆನಲ್ತಮ್ಮೊಳೆಂಟುಂ ಗುಣಂ ತೋ
ಱುವಿನಂ ಲೋಕಾಗ್ರದೊಳ್ನಿಶ್ಚಲಮಿರೆ ಕೃತಕೃತ್ಯಾತ್ಮರಾದರ್ ತ್ರಿಲೋಕ
ಸ್ತವನೀಯರ್ ಸಿದ್ಧರಾತ್ಯಂತಿಕ ಸುಖಪದವೀಸಿದ್ಧಿಯಂ ಮಾೞ್ಕೆ ನಮ್ಮೊಳ್ ೨

ಆಚಾರಂ ಗುಣಮಾಲೆ ತಮ್ಮೊಳಮೃತಾಂಭೋರಾಶಿ ರತ್ನಂಗಳಿಂ
ವೀಚೀಮಾಲೆಯನಪ್ಪುಕೆಯ್ವ ತೆಱದಿಂ ಚೆಲ್ವಪ್ಪಿನಂ ಶಿಷ್ಯಶಿ
ಕ್ಷಾಚಾತುರ್ಯಮನಪ್ಪುಕೆಯ್ದು ತಪದಿಂ ಸ್ವಾಧ್ಯಾಯದಿಂ ವರ್ಯರ
ಪ್ಪಾಚಾರ್ಯರ್ ನಮಗೀವರಕ್ಕೆ ದಯೆಯಿಮದಾಚಾರ್ಯ ಸಂಪತ್ತಿಯಂ ೩

ಉದ್ಯೋತಂ ಶ್ವೇತಕೃಷ್ಣಂಗಳನಱಿಪುವವೊಲ್ಪುಣ್ಯ ಪಾಪಂಗಳಂ ಸ್ಯಾ
ದ್ವಿದ್ಯಾವಾದಂಗಳಿಂದ ಭವ್ಯರ ಬಗೆವುಗುವನ್ನಂ ದಯಾಮೂಲಮಂ ಸಾ
ವದ್ಯವ್ಯಾಪಾರಮಂ ಬೇರ್ಪಡೆ ತಿಳಿಪುವುಪಾಧ್ಯಾಯರಾದೇಯರೆಮ್ಮೊಳ್
ಹೃದ್ಯರ್ಮ್ಮಾಖ್ಯಾಪ್ತವಕ್ತ್ರೋದಿತಮೆನಿಸುವುಪಾದೇಯಹೇಯಂಗಳೊಂದಂ ೪

ಕರಣಂಗಳ್ವಿಷಯಂಗಳತ್ತಱಿಗದೀರಾಱುಂ ತಪೋಮಾರ್ಗದಿಂ
ಬಿರದಿಂಬಿತ್ತುದು ಶೀಲಮಾಲೆ ಪದುಳಂ ನಿಂದತ್ತು ಮೆಯ್ವೆರ್ಚೆ ಶಾಂ
ತರಸಂ ಕಾಬ್ಬುರಮಾಯ್ತು ನಲ್ದಯೆಯ ನೇತ್ರೋನ್ಮೀಲನಂ ಗೆಯ್ದು ಸ
ಚ್ಚರಿತರ್ ಸಾಧುಗಳೆಮ್ಮನುದ್ಧರಿಸುಗೀ ಸಂಸಾರವಾರಾಶಿಯಿಂ ೫

ಶ್ರೀವತಂಸಂಮೋಕ್ಷಲಕ್ಷ್ಮೀಯುವತಿಯನೊಲಿಸಲ್ ಸಾಲ್ದುವೇ ದಿವ್ಯಭಾಷಾ
ರ್ಣವಗರ್ಭಾವಾಸದೊಳ್ಪುಟ್ಟಿದುವೆ ಭವವಿಷಾವೇಶವಿಧ್ವಂಸನಂಗೆ
ಯ್ದುವೆ ಮೋಹಧ್ವಾಂತಮಂ ತೂಳ್ದಿದುವೆಬಗೆವೊಡೇಬಾರ್ತೆಪಾಷಾಣರೂಪಂ
ನವರತ್ನ ಮನ್ಮನೋಮುದ್ರಿಕೆಯೊಳವಿಚಲಂ ನಿಲ್ಕೆ ರತ್ನತ್ರಯಂಗಳ್ ೬

ಪದವಿನ್ಯಾಸ ವಿಲಾಸಮಂಗವಿಭವಂ ಚೆಲ್ವಾದ ದೃಷ್ಟಿಪ್ರಸಾ
ದದೊಳೊಂದಾದ ನಯಂ ಮೃದೂಕ್ತಿ ವನಿತಾಸಾಮಾನ್ಯವಲ್ತೆಂಬ ಕುಂ
ದದ ವರ್ಣಂ ನಿಜವೆಂಬ ರೂಪೆಸೆಯ ನಾನಾ ಭಂಗಿಯಂ ಬೇಱೆ ತಾ
ಳ್ದಿದ ವಾಗ್ದೇವತೆ ಮಾಳ್ಕೆ ಮತ್ಕೃತಿಗೆ ಲೋಕಾಶ್ಚರ್ಯಚಾತುರ್ಯಮಂ ೭

ವಾರಣವಾಹನಂ ಪೃಥುತರಾಷ್ಟಭುಜಂ ವಿಜಯಾಂಗನಾಗೃಹ
ದ್ವಾರದನೇಕ ಶಾಖೆಯೆನೆ ವಕ್ತ್ರಚತುಷ್ಟಯಮೊಂದೆ ನಾಳದೊಳ್
ನೀರಜಮುಳ್ಕಲರ್ದವೆನೆ ರಂಜಿಸುವಂ ಸುರಚಾಪ ರುಙ್ಮನೋ
ಹಾರಿ ಕುಬೇರಯಕ್ಷನೊಸದೀ ಕೃತಿಗೀಗೆ ಗುಣ ಪ್ರತಿಷ್ಠೆಯಂ ೮

ವರದ ಫಲಾಸಿ ಖೇಟಕಚತುರ್ಭುಜೆ ತನ್ನ ಶರೀರ ಕಾಂತಿಯಿಂ
ಮರಕತರತ್ನದಿಂ ಸಮದವೊಲ್ಮರಿಭಂ ನಿಜವಾಹನಂ ಮನೋ
ಹರಮೆನೆ ಧರ್ಮಚಕ್ರಪರಚಕ್ರಮನಾಕ್ರಮಿಸಲ್ಕೆ ಸಾಲ್ದ ಭಾ
ಸುರತರತೀವ್ರತೇಜದಪರಾಜಿತೆ ಮಾಳ್ಕೆ ಮತಿಪ್ರಕಾಶಮಂ ೯

ಅನಘರನುಬದ್ಧಕೇವಲಿ
ಯೆನಿಸಿದ ಗೌತಮಸುಧರ್ಮ ಜಂಬೂಗಣಭೃ
ದ್ವಿನುತರೆಮಗೀಗೆ ಶಾಶ್ವತ
ಧನಮೆನಿಸಿದ ವಿಶ್ರುತಶ್ರುತಾರಾಧನಮಂ ೧೦

ಶ್ರುತಕೇವಲಿ ವಿಷ್ಣುವ್ರತಿ
ಪತಿ ಚಲನಂ ನಂದಪರಮಮುನಿಪದಮಪರಾ
ಜಿತಪಾದಂ ಗೋವರ್ಧನ
ಯತಿ ಕ್ರಮಂ ಭದ್ರಬಾಹುಚರಣಂ ಶರಣಂ ೧೧

ದಶಪೂರ್ವಧರರುಮೇಕಾ
ದಶಾಂಗಧಾರಿಗಳುಮೆನಿಪ ಮುನಿಪದನಖದೀ
ಪ್ತಿಶರಚ್ಚಂದ್ರಿಕೆ ದರ್ಶನ
ವಿಶುದ್ಧಿಯಂ ಮಾಡುಗಘತಮೋವಿಘಟನಮಂ ೧೨

ಭೂತಬಲಿ ಪುಷ್ಪದಂತ
ಖ್ಯಾತರ ಜಿನಸೇಣ ವೀರಸೇನಮುನೀಂದ್ರ
ಖ್ಯಾತರ ಸಮಂತಭದ್ರ
ಖ್ಯಾತರ ಪದಪಾಂಸು ಕಿಡಿಸುಗಘಪಾಂಸುಗಳಂ ೧೩

ಕವಿಪರಮೇಷ್ಠಿಗಳ ಗುಣ
ಸ್ತವನಂಗಳ್ ಪೂಜ್ಯಪಾದಯತಿಪತಿಯ ಗುಣ
ಸ್ತವನಂಗಳೊರ್ಮೆ ನಾಲಗೆ
ಗೆವಂದ ಮಾನವನ ವಾಙ್ಮಲಂ ನಿಂದಪುದೇ ೧೪

ಚತುರಂಗುಲ ಚಾರಣ ಋ
ದ್ಧಿ ತಮಗೆ ಸಮನಿಸಿದುದೆನಿಪ ತಪದುನ್ನತಿಯಿಂ
ಶ್ರುತದಿಂ ಭೂಮಂಡಲವಿ
ಶ್ರುತರೆನಿಸಿದರಲ್ತೆ ಕೊಂಡಕುಂದಾಚಾರ್ಯರ್ ೧೫

ಅಕಳಂಕ ಚಂದ್ರವಾಕ್ಚಂ
ದ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯ
ಪ್ರಕರಚಕೋರಂ ನಲಿದುದು
ಮುಕುಳಿತವಾಯ್ತನ್ಯವಾದಿವದನಾಂಭೋಜಂ ೧೬

ಚಾರುಚರಿತ್ರತೀರ್ಥ ಜಲದಿಂದಘಕರ್ದಮಮಂ ಕಚಲ್ಚಿ ಸಂ
ಸಾರಸಮುದ್ರಮಂ ತೃಣಪಯಃಕಣದಿಂದಿಚಕೆಯ್ದು ದಿವ್ಯ ಭಾ
ಷಾರಸಪೂರ್ಣಮಂ ಶ್ರುತಪಯೋಧಿಯೆನಿಸಿದ ವರ್ಧಮಾನ ಭ
ಟ್ಟಾರಕರಂ ವಚಸ್ಸುರಭಿಚಂದನಚರ್ಚೆಗಳಿಂದಮರ್ಚಿಪಂ ೧೭

ವಿಮಲಶ್ರೋತಂ ಕೈವ
ಲ್ಯಮೆಂಬ ಸಂಕಲ್ಪವನಿತನೇರ್ಗಿರಿಯಿಂ ವಿ
ಶ್ವಮನಜಿವ ಮಹಿಮೆಯಿಂ ವ
ರ್ಧಮಾನಜಿನಪತಿಗೆ ವರ್ಧಮಾನಮುನೀಂದ್ರಂ ೧೮

ಪುರಿದಂತಾದುವು ಪೂವಿನಂಬು ನನೆವಿಲ್‌ನಿಸ್ಸಾರಮಾದತ್ತು ಸೀ
ಕರಿವೋದತ್ತು ಮೃಣಾಳತಂತುರಚಿತಜ್ಯಾಲೇಖೆ ಮೀನಾಧ್ವಜಂ
ಕೊರಗಿತ್ತಗ್ಗದ ಕಂತು ಸೀದ ಗಜಿಯಂತಾದಂ ತಪೋರಾಜ್ಯತ
ತ್ಪರಯೋಗೀಶ್ವರಬಾಲಚಂದ್ರಮುನಿನಾಥಜ್ಞಾನನೇತ್ರಾಗ್ನಿಯಿಂ ೧೯

ಪ್ರಚುರಕಲಾನ್ವಿತರಕುಟಿಲ
ರಚಂಚಲರ್ ಶುದ್ಧಪಕ್ಷವೃತ್ತರ್ ದೋಷಾ
ಪಚಯ ಪ್ರಕಾಶರೆನೆ ಬಾ
ಲಚಂದ್ರದೇವ ಪ್ರಭಾವಮೇನಚ್ಚರಿಯೋ ೨೦

ಮೂವತ್ತಾಱುಂ ಗುಣದಿಂ
ಭಾವಜನಂ ಕಟ್ಟಿ ಪೆಟ್ಟವೆಳದರ್ ವೃಷದಿಂ
ಭಾವಿಪೊಡೆ ಮೇಘಚಂದ್ರ
ತ್ರೈವಿದ್ಯರದೆಂತು ಶಾಂತರಸಮಂ ತಾಳ್ದರ್ ೨೧

ಜಿನಪತಿಮುನಿಪತಿಗುಣವ
ರ್ಣನಸಮಯಾನಂತರಂ ಕವೀಶ್ವರಗುಣವ
ರ್ಣನಮುಚಿತಮದಱನೀಕೃತಿ
ವನಿತೆಗೆ ಸೌಭಾಗ್ಯಮೇಕಭೋಗ್ಯಮೆನಿಕ್ಕುಂ ೨೨

ವಿವಿಧಾಲಂಕಾರದಿಂ ರಂಜಿಸೆ ತಮಗೆ ವಶಂ ಮಾಡಿ ಶಬ್ದಂಗಳಂತ
ಮ್ಮ ವಚಸ್ಸಂಪತ್ತಿ ಕರ್ಣಾಮೃತಮೆನೆ ರಸಭಾವಂಗಳಂ ತೋಱೆ ಜಾಡ್ಯ
ವ್ಯವಹಾರಂ ಪಿಂಗೆ ತಮ್ಮಿಂ ನೆಗೞೆ ಸುಖಮಯಂ ಸೃಷ್ಟಿ ಸತ್ಕೀರ್ತಿಯಂ ಭೂ
ಭುವನಂ ನಿಲ್ವನ್ನೆಗಂ ತಾಳ್ದಿದ ಸುಕವಿಗಳಿಂದಕ್ಕೆ ವಿದ್ಯಾಪ್ರಸಾದಂ ೨೩

ಅವಿರಳಮಾಗೆ ಕಾಂತಮಣಿದರ್ಪಣಮಂ ಬೆಳಪಂದದಿಂ ಮಹಾ
ಕವಿಗಳೊಱಲ್ದು ತಿರ್ದುಗೆ ವಚೋವನಿತಾಕಚಬಂಧಮಂ ಜಿನ
ಸ್ತವನಕಥಾನುಬಂಧಮನಶೇಷಬುಧಪ್ರಣಯಪ್ರಬಂಧಮಂ
ನವರಸಸೇತುಬಂಧಮನಘಪ್ರತಿಬಂಧಮನೀಪ್ರಬಂಧಮಂ ೨೪

ಮನ್ನಿಸುಗೆ ಕೃತಿಗೆ ಸೌಭಾ
ಗ್ಯೋನ್ನತಿಯಂ ಸುಕವಿಪಂಪನಾದಿಪುರಾಣಂ
ಪೊನ್ನನ ಶಾಂತಿಪುರಾಣಂ
ರನ್ನನ ಕೃತಿರತ್ನಮೆನಿಸಿದಜಿತಪುರಾಣಂ ೨೫

ರಸವತ್ಕಾವ್ಯಮನಟ್ಟಿವಟ್ಟು ಸುಜನಂ ಕೇಳ್ಪಪ್ಪುಕೆಯ್ವಂತೆಸಂ
ತಸಮಂ ದುರ್ಜನನೇಕೆ ಕೇಳ್ದು ನಲಿವಂ ದುರ್ಬೋಧೆಯಂ ಬೇಱೆ ಪು
ಟ್ಟಿಸುಗುಂ ನಿಷ್ಠುರವಜ್ರತುಂಡಹತಿಯಿಂ ಕೀಟಂ ಭರಂಗೆಯ್ದುಱಿಂ
ಡಿಸುಗುಂ ತುಂಬಿವೊಲೀಂಟಿ ರಾಗಿಸುಗುಮೇ ಹೇಮಾಂಬುಜಾಮೋದಮಂ ೨೬

ವಚನಪ್ರೌಢಿಯನರ್ಥ
ಪ್ರಚುರತೆಯಂ ದೋಷದೃಷ್ಟಿಪರನಲ್ಲದವಂ
ಶುಚಿಮತಿ ಪೊಗಟ್ಟುಂ ಮಾತ್ಸ
ರ್ಯಚಿತ್ತನುನ್ಮತ್ತನಱಿದೋಡೇಂ ಪೊಗಟ್ದಪನೇ ೧೭

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮರಸಮನಳಿಮಾಳೆ ಸುಧಾ
ರಸಮಂ ಸುರರಕ್ಷಯಸುಖ
ರಸಮಂ ಪರಮಾತ್ಮನಱಿವನುಱಿಪವರಱಿಯರ್ ೧೮

ಚತುರಕವಿ ಪೇೞ್ವ ರಸವ
ತ್ಕೃತಿಯಂ ರಸಮಗ್ನನಾಗಿ ದುರ್ಜನನುಮದಂ
ಸ್ತುತಿಯಿಸವೇೞ್ಪುದು ತಣ್ಪಂ
ಹುತಾಶನಂ ಮಂತ್ರಶಕ್ತಿಯಿಂತಾಳ್ದುವವೊಲ್ ೧೯

ಆರಯ್ಯದೆ ರಸಭಾವಮ
ನಾರಯ್ಯದೆ ಪದಪದಾರ್ಥಮಂ ದೆಸೆಬಿರ್ದಂ
ಸೀರುಡುವಿನಡವಿಯಂತಿರೆ
ನೀರಸಮೆನೆ ಕೇಳ್ದರಲಸೆ ಪೇೞ್ವಂ ಕವಿಯೇ ೨೦

ಬಗೆ ಕಿಱಿದು ಮಾತು ಪಿರಿದೆನೆ
ಬಗೆಯಂ ನುಡಿ ಮುಟ್ಟಿ ನುಡಿಯದೆನೆ ಬಗೆ ಪೆಱರಂ
ಬಗೆಗೊಳಿಸಲಾಱದೆನೆ ಪೇ
ೞ್ದಗಾವಿಲರ್ಕವಿತೆಗೇಕೆ ಮುಯ್ಯಂ ಮಾೞ್ಪರ್ ೨೧

ಪೆಱರ ನುಡಿ ಪೆಱರ ಮಾರ್ಗಂ
ಪೆಱರರ್ಥಂ ಪೆಱರೆ ದೇಸಿ ಪೆಱರೋಜೆಯೆನಲ್
ಪೆಱರ ಬಟೆಸಂದು ತನ್ನಂ
ಮೆಱವಂ ಕವಿಯಲ್ಲಮಾಟಕಾಱರ ಚೋಹಂ ೨೨

ಪೆಱರಂ ನುಡಿವುದೆ ತನಗೊಂ
ದಱಿತಮೆನಲ್ ತನ್ನ ಮೊಗದೊಳೊಂದಕ್ಕರಮಂ
ಪೊಱಮಡಿಸಲಱಿತಮ
ನಱಿಯದರೊಳ್ ಮೆಱೆವಸಾಸಿಗಂಗಿದಿರುಂಟೇ ೨೩

ಪರಿಣತಕವೀಂದ್ರವದನಾ
ಜಿರದೊಳ್ ಮೃದುಪದವಿಲಾಸ ವಿನ್ಯಾಸಾಲಂ
ಕರಣಂ ರಂಜಿಸೆ ನರ್ತಿಪ
ಸರಸ್ವತೀಲಾಸ್ಯ ಛೇದಮಂ ಜಡನಜೆಯಂ ೩೪

ಅತಿಚತುರಕವೀಶ್ವರವಿರ
ಚಿತಕೃತಿ ಕಲ್ಲೆರ್ದೆಯೆನಿಪ್ಪ ಮೂರ್ಖಂಗೆ ಚಮ
ತ್ಕೃತಿಯಂ ಮಾಡುಗುಮೆ ಶಿಲಾ
ಪ್ರತಿಮೆಯನುರ್ಚುಗುಮೆ ಮದನಮೋಹನ ಬಾಣಂ ೩೫

ಭಾವರಸಬಂಧುರಂ ಕವಿ
ತಾವಿಷಯಂ ಕಠಿಣ ಹೃದಯನಪ್ಪ ಜಡಾತ್ಮಂ
ಗೀವುದೊ ರತಿಯಿನಿದಂ ಕಿವಿ
ಗೀವುದೆ ಬಧಿರಂಗೆ ಸುಂದರೀಸೀತ್ಕಾರಂ ೩೬

ಪದಮರ್ಥಪ್ರತಿಪಾದನ ಪ್ರವಣಮರ್ಥಂ ಶಬ್ದಸಂಪತ್ತಿ ಸಂ
ಪದವಕ್ಲಿಷ್ಟಪದಾರ್ಥಸಂಗತಿ ರಸಪ್ರಸ್ಯಂದಿ ಮಾಟ್ಕುಂ ಮನೋ
ಮುದಮಂ ಕಾವ್ಯವಸೇವ್ಯವದ್ಯತನವೆಂಬೀಗಾಂಪುವೇಡೇಗಳುಂ
ಹೃದಯಗ್ರಾಹಿಗಳಾಗಿ ಶುಕ್ತಿಕೆಗಳಿಂ ಮುಕ್ತಾಫಲಂ ಪುಟ್ಟವೇ ೩೭

ವಿಮಲಯಶೋವಿಶುದ್ಧಮಣಿಯಂ ಪಡೆಯಲ್ಕೆ ಪಯೋಧಿವೇಲೆಯಂ
ಕ್ರಮದೊಳೆ ದಾಂಟೆ ನಿರ್ಮಲದಯಾರಸಮುದ್ರಮನೀ ಕಥಾಸಮು
ದ್ರಮನೊಳಪೊಕ್ಕು ನಿರ್ವಹಿಸುವೆನ್ನ ಕವಿತ್ವ ಬಹಿತ್ರಯಾತ್ರೆಗೇ
ನಮರ್ದುಮೊ ಕರ್ಣಧಾರವಿಭವೊನ್ನತಿ ಭವ್ಯಜನಕ್ಕಿದೆಂತೆನಲ್ ೩೮

ಧರೆ ಪೊಗಟೆ ವೀತರಾಗನ
ಚರಿತದೊಳಳವಡಿಸಿ ಸಕಲರಸಮಂ ಕವಿತಾ
ಪರಿಣತೆಯಂ ಮೆಜಿದೀಕಾ
ವ್ಯರಸಾರ್ಣವಪೂರ್ಣಚಂದ್ರನಭಿನವಪಂಪಂ ೩೯

ಜಿನಪತಿಗಂ ಜಿನಮುನಿಗಂ
ಜಿನಾಗಮಕ್ಕಂ ಜಿನಾಧಿಪತಿಭವನಕ್ಕಂ
ಜಿನಗುಣಸಂಪತ್ತಿಗಮೆಜಿ
ಪನೆಜಿಗನುಟಿದವರ್ಗೆ ನಾಗಚಂದ್ರಕವೀಂದ್ರಂ ೪೦

ಜಿನಪತಿಸಭೆಯೊಳ್ ಪೂಜ್ಯಂ
ಮುನಿಪತಿಸಭೆಯೊಳ್ ಪದಾರ್ಥನಿಪುಣಂ ವಿದ್ವ
ಜ್ಜನ ಸಭೆಯೊಳ್ ಮಾನ್ಯಂ ಸ
ಜ್ಜನ ಸಭೆಯೊಳ್ ಚಾರುಚರಿತನಭಿನವಪಂಪಂ ೪೧

ಪದರಚನೆ ಸಜ್ಜನಶ್ರವ
ಣದೊಳಂಚೆಯ ತುಪ್ಪುಳಿಂಚೆಯಿಂ ತಿರಿಪಿದವೊಲ್
ಮೃದುವೆನೆ ಪೊಸಬಗೆ ರಸಭಾ
ವದೊಳೋಕುಳಿಯಾಡೆ ಪೇೞ್ದನಭಿನವಪಂಪಂ ೪೨

ಬಗೆ ಚೇತೋಬಂಧಂ ಬಂಧಂ ಶ್ರವಣಸಹಚರಂ ಕಾಂತಿ ಕಾಂತಾಕಟಾಕ್ಷಾ
ನುಗವರ್ಣವ್ಯಕ್ತಿ ವಾಣೀಮಣಿಮಯಮುಕುರಂ ಶ್ಲಿಷ್ಟಮಕ್ಲಿಷ್ಟಮರ್ಥಂ
ಸುಗಮಂ ಭಾವಂ ಪ್ರಸನ್ನಂ ರಸಮನವಧಿ ಮಾಧುರ್ಯಮಾಶ್ಚರ್ಯಮೆಂದೀ
ಜಗಮೆಲ್ಲಂ ಮೆಚ್ಚೆ ಪೇೞ್ದಂ ಚತುರಕವಿಜನಾಸ್ಥಾನರತ್ನಪ್ರದೀಪಂ ೪೩

ಫುಲ್ಲಸರಳ್ ಬಸಂತದ ಪುಗಿಲ್ ನೆಱೆದಿಂಗಳ ತಣ್ಪೆಸಿಲ್ಕುಗು
ಳ್ಮಲ್ಲಿಗೆ ಬಂದ ಮಾವಲೆಪ ತೆಂಕಣಗಾಳಿ ವಿಪಂಚಿಯಿಂಚರಂ
ನಲ್ಲಳ ಲಲ್ಲೆ ಕೋಗಿಲೆಯ ಬಗ್ಗಣೆ ತುಂಬಿಯ ಗೇಯತಮೆಂಬಿನಂ
ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ ೪೪

ಎಂದನುರಾಗದಿಂ ಪೊಗೞ್ದು ಭವ್ಯಜನಂ ಕಿಱಿದೀಕಥಾಪರಿ
ಸ್ಪಂದಮಿದಂ ನಿಮಿರ್ಚಿ ಕವಿತಾರಸಮಂ ನೆಱಿಪೇೞ್ದರಿಲ್ಲ ಮು
ನ್ನೆಂದು ಮಹಾಕವಿಶ್ವರರೊಳೊರ್ವರುಮೆಂದೊಡೆ ಪೇೞಲಾಂ ಮನಂ
ದಂದೆನವಲ್ಲದೆನ್ನಳವೆ ಮಲ್ಲಿಜಿನೇಂದ್ರಮಹಾಪುರಾಣಮಂ ೪೫

ಕೃತಿ ಸಾಧಾರಣಮಾದೊಡಂ ಶ್ರವಣಸೇವ್ಯಂ ವಂಶವೀರ್ಯಂಶ್ರುತೋ
ನ್ನತಿಯಿಂ ಕಾವ್ಯಕಳಾವಿದಂಗೆ ಕವಿತಾಖ್ಯಾತಂಗೆ ಕಲ್ಪಾಂತರ
ಸ್ಥಿತಿಯಪ್ಪಂತಿರೆ ಮಾೞ್ದದಾಕೃತಿಗಳಂ ತ್ರೈಲೋಕ್ಯನಾಥಸ್ತವಾ
ಕೃತಿಯೆಂದಂದದನೊಲ್ದು ಪೇೞ್ದಕೃತತ್ಯಂತಾಂಬರಂ ಧನ್ಯರಾರ್ ೪೬

ಅನವಧಿಬೋಧಸಾಧನಮನಿಪ್ಪ ಜಿನೇಂದ್ರಮಹಾನುಭಾವವ
ರ್ಣನದೊಳೆ ಬಲ್ಮೆಯಂ ಮೆಱೆದು ಶಾಶ್ವತ ಲಕ್ಷ್ಮಿಗೆ ಮಾಱದನ್ಯವ
ರ್ಣನರತಿಯಿಂ ವಿವೇಕವಿಲರ್ಕಿಡುವರ್ಥದೊಳಾದಮಾದ ಮೋ
ಹನದಿನದೇಕೆ ಮಾಱುವರೊ ಪುಣ್ಯನಿಬಂಧನಮಂ ಕವೀಶ್ವರರ್ ೪೭

ವಿಕಥಾವರ್ಣನಮಲ್ಪಸಂಸ್ತವನಮೆಂಬೀದೋಷಮಲ್ತೆಂಬಿನಂ
ಸಕಲತ್ಯಾಗಿ ಸಮಸ್ತವೇದಿ ಭುವನಾರಾಧ್ಯಂ ಜಿನಂ ಸತ್ಯವಾ
ದಿ ಕಥಾನಾಯಕನಾಗೆ ತಚ್ಚರಿತಮಂ ಪೇೞ್ದಿಂಗೆ ಕೈಸಾರ್ಗುಮೈ
ಹಿಕಮಾಮುಷ್ಮಿಕಮಾನುಷಂಗಿಕಮೆನಲ್ ನಿಶ್ರೇಯಸಶ್ರೀಪದಂ ೪೮

ಶಾಂತಮೆ ಪಣ್ಯಹೇತುವಘಹೇತುಗಳನ್ಯರಸಂಗಳಾಗಿಯುಂ
ಶಾಂತಮೆನಿಪ್ಪ ತಜ್ಜಿನಕಥಾರಸದೊಳ್ಪುದುವೊಕ್ಕು ಮಾಡುಗುಂ
ಶಾಂತಿಯನಾರಸಂಗಳಿದು ಚಿತ್ರಿತಸಿದ್ಧರಸೋಪವಿದ್ಧಮ
ತ್ಯಂತವಿಶುದ್ಧಹೇಮರಸವಾಗವೆ ಲೋಹರಸಂಗಳಾದೊಡಂ ೪೯

ಕಥೆ ಜಿನಚರಿತಮೆ ಕವಿ ಜಿನ
ಕಥೆಯಂ ಪೇೞ್ದವನೆ ರಾಜವಿಟಚೋರಕಥಾ
ಕಥೆ ಕಥೆಯೆ ಕವಿ ಕವಿಯೆ ತ
ತ್ಕಥೆಯಂ ಪೇೞ್ದಿಪ್ರಶಸ್ತಮಂ ಪುಟ್ಟಿಸುಗುಂ ೫೦

ನೂತನರುಂ ಪುರಾತನರುಮಪ್ಪ ಮಹಾಕವಿಗಳ್ಕವಿತ್ವವಿ
ಖ್ಯಾತಿಗೆ ಶಾಸನಂ ಬರೆದ ಸತ್ಕೃತಿ ಬಂಧಮದರ್ಕೆ ಸಜ್ಜನ
ಪ್ರೀತಿನಿಬಂಧವಲ್ಲದೊಡದೇಂ ದುರಿತಕ್ಷಯಂ ಕಾರಣಂ ಜಿನ
ಖ್ಯಾತಿತಿನಿಬಂಧಮೆಂಬ ಬಗೆ ಕೈಮಿಗೆ ಪೇೞ್ದಿಪೆನೀಪ್ರಬಂಧಮಂ ೫೧

ಬಂಧುರಮಾಗೆ ನೀೞ್ದಿವನುಯೋಗಚತುಷ್ಟಯಶಾಖೆಯೊಳ್ ಶ್ರುತ
ಸ್ಕಂಧದೊಳಾಚತುರ್ವಿಪುಲಶಾಖೆಯೊಳಂ ಪ್ರಥಮಾನುಯೋಗಸಂ
ಬಂಧಿತಪುಷ್ಪಮಂಜರಿದಲೀಕಥೆ ಭವ್ಯಮಧುವ್ರತಾವಳೀ
ಬಂಧು ಸಮಸ್ತ ಸೌಖ್ಯಫಳಜನ್ಯ ನಿವಾಸಮೆನಿಪ್ಪುದೊಪ್ಪದೇ ೫೨

ಭರತಮಹೀಶ್ವರಂಗೆ ಮಗಧೇಶ್ವರಮಂಡಲಿಕಂಗೆ ತಾರಭೂ
ಧರವಿಪುಲಾದ್ರಿಯೊಳ್ ವೃಷಭಸೇನಗಣಾಗ್ರಣಿ ಗೌತಮೋತ್ತಮಂ
ಪುರಜಿನವರ್ಧಮಾನಗುರುಸನ್ನಿಧಿಯೊಳ್ತಿಳಿವಂತು ಪೇೞ್ದುದಂ
ವಿರಚಿಸುವೆಂ ಮನಂಬಯಸೆ ಮಲ್ಲಿಜಿನೇಂದ್ರಮಹಾಪ್ರಬಂಧಮಂ ೫೩

ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ ಪುರಂ ರಾಜವೃ
ತ್ತಕಮರ್ತ್ಯದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾ
ಣ ಕಥಾಂಗಂಗಳಿವೆಂಟೆನಿಕ್ಕುಮವಱೊಳ್ ಮುನ್ನಂ ಕಲಾಚಾರ್ಯರ
ಪ್ಪ ಕವೀಂದ್ರೋತ್ತಮರಿಂ ಪ್ರತಿಷ್ಠೆವಡೆಗುಂ ಲೋಕಂ ಕಥಾಪೀಠದೊಳ್ ೫೪

ವ॥ ಅದೆಂತೆನೆ :-

ಕಡೆವರಮೇಟು ರಜ್ಜು ಪದಿನಾಲ್ಕು ತಳಂ ಚತುರಸ್ರವೇಟಿರ
ಜ್ಜುಡುಗದು ದಕ್ಷಿಣೋತ್ತರಮುಖಂ ಕ್ರಮಹಾನಿಗೆ ಸಂದು ಮಧ್ಯದೊಳ್
ಕಡುಗಿಡೆದಾಯ್ತು ರಜ್ಜುವರಮೈದುವರಂ ಕ್ರಮವೃದ್ಧಿಗೆಯ್ದು ಮೊ
ಲ್ದಿಡಿಮುದದ್ದೊಂದು ರಜ್ಜುವರೆಗಂ ಭುವನಂ ಪವನತ್ರಯಾವೃತಂ ೫೫

ಪವಮಾನತ್ರಿತಯಕ್ಕೆ ಪೆಂಪುವಡೆದಾಕಾಶಕ್ಕೆ ನಿರ್ಬೋಧ ಬೋ
ಧವಿಲೋಕಕ್ಕೊಳಗಾದುದಲ್ಲದೆ ಲಯೋತ್ಪತ್ತಿಪ್ರಪಂಚಕ್ಕೆ ಕ
ರ್ತೃವಿಡಂಬಕ್ಕೊಳಗಾದುದಲ್ತು ನಿಜದಿಂ ತಾಳ್ದಿತ್ತಧಸ್ತಿರ್ಯಗೂ
ರ್ಧ್ವವಿಭೇದತ್ರಯಮಂ ಸಮಸ್ತಭುವನಂ ಷಡ್ದ್ರವ್ಯಗರ್ಭೋದರಂ ೫೬

ಸಮಚತುರಸ್ರಂ ತ್ರಸನಾ
ಳಮೇಕರಜ್ಜುಪ್ರಮಾಣನಿಯತಂ ಮೂಲಾ
ಗ್ರಮನೆಯ್ದಿ ಸಕಲಲೋಕ
ದ್ರುಮದಂತಸ್ಸಾರದಂತೆ ಮಧ್ಯದೊಳಿರ್ಕುಂ ೫೭

ಅವಿವೆನ್ನದೆ ಪಿರಿದುಂ ಸಂ
ಭವಿಕುಂ ತ್ರಸನಾಳದಂತರಾಳದೊಳುಟಿದೀ
ಭುವನಪ್ರದೇಶದೊಳ್ ಪು
ಟ್ಟುವ ವಿಶದಸ್ಥಾವರಂಗಳಲ್ಲದ ಜೀವಂ ೫೮

ವ॥ ಆ ತ್ರಿಭುವನ ತ್ರಿಭೌಮಹರ್ಮ್ಯದ್ವಿತೀಯ ಭೂಮಿಯೆನಿಸಿ

ಕ್ರಮದಿನಸಂಖ್ಯಾತ ದ್ವೀ
ಪಮುಮಬ್ಧಿಯುಮೊಂದನೊಂದು ಸುತ್ತಿಡಿದಿರೆ ಮ
ಧ್ಯಮಲೋಕಮಾಸ್ವಯಂಭೂ
ರಮಣಾಂಭೋರಾಶಿತೀರಮಂ ಮುಟ್ಟಿರ್ಕುಂ ೫೯

ಏಂ ಬಗೆಗೆವಂದುದೋ ರವಿ
ಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್
ಜಂಬೂದ್ವೀಪಮನೊಳಕೊಂ
ಡಂಬುಧಿ ರತ್ನಾಂಶುಲೋಲಲಹರೀಜಾಲಂ ೬೦

ಆ ರತ್ನಾಕರಮೊಳ್ನಿಸರ್ಗವಿವರಂಗಳ್ ಗುಣ್ಪುವೊಲ್ಮಧ್ಯವಿ
ಸ್ತಾರಂ ಯೋಜನವೊಂದೆ ಲಕ್ಕ ತಳವಿಸ್ತಾರೋಪಮಂ ವಕ್ತ್ರವಿ

ಸ್ತಾರಂ ಪತ್ತುಸಹಸ್ರಯೋಜನಮೆನಲ್ ನಾಲ್ಕಿರ್ದುಪತ್ಯಂತ ಗಂ
ಭೀರಂಗಳ್ ಬಡವಾಮುಖಾಸುಕೃತಿಗಳ್ನಾಲ್ಕುಂ ದಿಶಾಭಾಗದೊಳ್ ೬೧

ವಿವರಾಂತರ್ವರ್ತಿಯಾಗಿರ್ದನಿಲನೊಗೆಯೆ ಮೇಗಣ್ಗೆ ಪಕ್ಷಂಬರಂ ಪೆ
ರ್ಚುವುದಾತೋಯಾನಿಲಂ ಮತ್ತೊಳಪುಗೆ ಸಲಿಲಂ ತೀವೆಗರ್ತಂಗಳಂ ಕುಂ
ದುವುದಂಭೋರಾಶಿ ತದ್ಭೀಷಣಪವನಘನಾಘಾತದಿಂ ನಿಚ್ಚಲುಂ ಪೆ
ರ್ಚುವ ಪೋತಃಪುದ್ಗಲಂಗಳ್ ವಿರಳಮೆನಿಸೆ ಮರ್ಯಾದೆಯಂ ದಾಂಟದಿರ್ಕುಂ ೬೨

ವ॥ ಆ ಮುನ್ನೀರೆ ಮೇರೆಯಾಗಿ

ಹಿಮಶೈಲಪ್ರಮುಖಂಗಳಾಱು ಕುಲಶೈಲಂಗಳ್ಸಿಯದ್ವಾಹಿನೀ
ಪ್ರಮುಖಂಗಳ್ ಪದಿನಾಲ್ಕು ಗೋತ್ರನದಿಗಳ್ ಶೋಭಾರತಂ ಭಾರತ
ಪ್ರಮುಖಂಗಳ್ ವಿಷಯಂಗಳೇೞುಂ ನಿಜನಾನಾವರ್ಣದಿಂ ಮುತ್ತೆ ಚಿ
ತ್ರಮನೇಂ ಚಿತ್ತಜಚಿತ್ರಶಾಲೆಯೆನೆ ಜಂಬೂದ್ವೀಪಮಿಂಬಾದುದೋ ೬೩

ವ॥ ಆ ಜಂಬೂದ್ವೀಪದ ನಟ್ಟನಡುವೆ

ದಿವಮಂ ಮುಟ್ಟಿದ ಪೆಂಪು ಭೂವಲಯಮಂ ತಾಳ್ದಿರ್ದಧೈರ್ಯೋದಯಂ
ರವಿಬಿಂಬಂ ಬಲಗೊಳ್ವ ಪೆರ್ಮೆನಿಜಸಾನೂದ್ಯಾನಸಂತಾನದಿಂ
ದಿವಿಜಾಧೀಶನ ಮೆಚ್ಚುತಿರ್ದ ವಿಭವಂ ಜನ್ಮಾಭಿಷೇಕಕ್ಕೆ ತಾ
ನೆವಲಂ ಮಜ್ಜನಪೀಠಮಾದತಿಶಯಂ ಹೇಮಾದ್ರಿಗುನ್ಮುದ್ರಿತಂ ೬೪

ದೊರೆವೆತ್ತುನ್ನತಿಯಿಂದ ಸಮಸ್ತವಿಬುಧಪ್ರಸ್ತುತ್ಯ ವಿಖ್ಯಾತಿಯಿಂ
ಸ್ಥಿತಸಂಪತಿಯಿನೀವಸುಂಧರೆಗೆ ತಾಂ ಮಧ್ಯಸ್ಥಮಾದೊಳ್ಪಿನಿಂ
ಧರಣೀಭೃತ್ಪತಿ ಪೂಜ್ಯಮಾದಮಹಿಮಾವಷ್ಟಂಭದಿಂ ನಾಡೆ ಸುಂ
ದರಮಾಗಿರ್ದುದು ಪೋಲ್ತು ಮಂದರನಗಂ ಸಾಹಿತ್ಯಸರ್ವಜ್ಞನಂ ೬೫

ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರಬಾಲಚಂದ್ರ
ಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪೀಠಿಕಾಪ್ರಕರಣಂ ಪ್ರಥಮಾಶ್ವಾಸಂ



# ದ್ವಿತೀಯಾಶ್ವಾಸಂ

ಶ್ರೀ ಜಿನಭವನ ಚತುಷ್ಟಯ
ರಾಜಿತಮೊಂದೊಂದೆನಿಪ್ಪ ಮೇಖಳೆನಾಲ್ಕುಂ
ರಾಜಿಸೆ ಮಂದರಮಂ ತಾಂ
ರಾಜಿಸಿದುದೊ ಲಕ್ಷಯೋಜನೋನ್ನತಿಯಿಂದಂ ೧

ವ॥ ಆ ಮಂದರಪೂರ್ವಾಪರದಿಗ್ವಿಭಾಗದೊಳ್

ಪುರಮೆಲ್ಲಂ ಮಾಡದಿಂದಲ್ಲಿಯ ಪುರವನಮೆಲ್ಲಂ ಲತಾಲೀಢದಿಂ ಗೋ
ಪುರಮೆಲ್ಲಂ ಚೈತ್ಯಗೇಹಂಗಳಿನುಪಪುರಮೆಲ್ಲಂ ಪುರಸ್ತ್ರೀರಣನ್ನೂ
ಪುರ ಝುಂಕಾರಂಗಳಿಂ ರಂಜಿಸೆ ಜನಪದಲಕ್ಷ್ಮೀಪದಾಲಂಕೃತಂ ನೂ
ಪುರಮಿರ್ಪಂತಿರ್ಪುದಂಗೋದ್ಭವಜಯವನಿತಾಜನ್ಮಗೇಹಂ ವಿದೇಹಂ ೨

ಸ್ಥಿರಮಲ್ಲದು ಕಡೆಪಟ್ಟೀ
ಭರತೈರಾವತದ ಲಕ್ಷ್ಮಿ ಪದಿನಾಱಿಮ್ಮೊಳ್
ಸರಿಯಲ್ಲವು ದಿವಮೆಂಬಂ
ತಿರೆ ಮೂವತ್ತೆರಡು ನಾಡುಗಳ್ ಸೊಗಯಿಸುಗುಂ ೩

ಯುಗಪರಿವರ್ತನಕ್ಕೆ ಪ್ರೊಜಗೆಂಬ ಸುಖಕ್ಕೆ ನಿವಾಸಮೆಂಬ ಶೋ
ಭೆಗ ಮೊದಲೆಂಬ ಪೆರ್ಮೆ ಪೊಗೞಲ್ಬಗೆದಪ್ಪ ನರಂಗೆ ದುರ್ಗಮಂ
ಸುಗಮಮಿದೊಂದೆ ಪಂಚಶತಚಾಪಮಿತಂ ತನು ಪುಬ್ಬಕೋಟಿ ನೆ
ಟ್ಟಗೆ ಪರಮಾಯು ಪುಟ್ಟಿದವರ್ಗೆಂಬ ಕಥಾಕಥನಂ ವಿದೇಹದೊಳ್ ೪

ಜಿನರುಂ ಪಟ್ಖಂಡ ಭೂಮಂಡಲವಿಜಯಿಗಳುಂ ಕುಂದದುರ್ವೀಶರಿಂದ
ಪ್ಪನಯಂ ನಾಟ್ಗಿಲ್ಲ ಹೀನಾಧಿಕಮೆನಿಪುವು ಕಾಲತ್ರಯಂಗಳ್ ಸುಖೋತ್ಪಾ
ದನಮಕ್ಕುಂ ಮಾನವರ್ಗೇತಜದೆಸೆಯೊಳಮಿಲ್ಲಾಕುಳಂ ದ್ರವ್ಯಮಿಥ್ಯಾ
ತ್ವನಯಂಗಳ್ಪುಟ್ಟವೆಂಬೀಮಹಿಮೆಗೆ ಪೆಱತೇಂ ದೇಹಮಾಯ್ತಾ ವಿದೇಹಂ ೫

ವ॥ ಆ ವಿದೇಹವಿಷಯಕ್ಕೆ ಪೂರ್ವಾಪರಭೇದದಿಂ ಪೂರ್ವಾಪರವಿದೇಹಮೆಂಬ ಸಂಕಲ್ಪಮಾದುವಲ್ಲಿ

ಇಂದುವ ಪದಿನಾಱುಂ ಕಳೆ
ಯಿಂದಂ ಕಣ್ಗೊಳಿಸುವಂತೆ ಪದಿನಾಱುಂ ನಾ
ಡಿಂದಂ ಪೂರ್ವವಿದೇಹಂ
ಸೌಂದರ್ಯಮನತ್ಯಪೂರ್ವಮಂ ತಳೆದಿರ್ಕುಂ ೬

ವ॥ ಆ ಮಹೀವಿಲಾಸಿನೀವಳಿರೇಖಾ ವಿಲಾಸಮಂ ತಳೆದು ನೀಲಾಚಲಶಿಖಂಡ ಪ್ರಸೂತಮುಂ, ಉಭಯತಟವಜ್ರವೇದಿಕಾಸ್ಫಾಲನಬಹುಳಕಲ್ಲೋಲಮಾಲಾಪರೀತಮುಂ, ತೀರಘನಸಾರಸರಳಚಂದನದ್ರುಮನಿರ್ಯಾಸ ಪ್ರತಿದಿನೋದೀರ್ಣ ಪಂಚಶತಯೋಜನವಿಸ್ತೀರ್ಣಮುಮೆನಿಸಿ,

ಗಗನಸ್ತಂಬೇರಮಕ್ಕಿಕ್ಕಿದ ಮೊಗವಡಮಂ ಪೋಲ್ತು ಫೇನಪ್ರತಾನಂ
ಮುಗಿಲಂ ತಳ್ಪೊಯ್ಯೆ ದಿಕ್ಕಾಂತೆಯರ್ಗೆ ಕುಡುವ ಮುಕ್ತಾವತಂಸಂಗಳೆಂಬ
ನ್ನೆಗಮಂಭಶ್ಶೀಕರಂಗಳ್ಪಸರಿಸೆ ವಿಚಲದ್ವೀಚಿಹಸ್ತಂಗಳಿಂ ಮೆ
ಲ್ಲಗೆ ತಟ್ಟೈಸಿತ್ತು ಪೂರ್ವಾಬ್ಧಿಯನಖಿಳನದೀಖ್ಯಾತಸೀತಾಪ್ರವಾಹಂ ೭

ತಂಡದಿನಾಪ್ರಸಿದ್ಧಕುಲವಾಹಿನಿ ಸೀತೆಯ ವಜ್ರವೇದಿಕಾ
ಮಂಡಿತದಕ್ಷಿಣೋತ್ತರತಟಂಗಳೊಳೊಂದಱೊಳೆಣ್ಬುಗೆಯ್ದು ಷ
ಟ್ಖಂಡಮಿಳಾಶೀಖಂಡಮಣಿಮಂಡನಮಿರ್ಪವೊಲಿರ್ಪುದಲ್ಲಿ ಕ
ಣ್ಗೊಂಡುದು ಕಚ್ಛಕಾವತಿಮಹಾವಿಷಯಂ ವಿಷಯೈಕ ಭೂಷಣಂ ೮

ಮೇರು ಪಡುವಣ್ಗೆ ಸೀತಾ
ತೀರಂ ತೆಙ್ಕಣ್ಗೆ ನೀಲಗಿರಿ ಬಡಗಣ್ಗಾ
ವಾರಂ ದ್ರಾವಣರಣವ
ಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ ೯

ವ॥ ಅಲ್ಲಿ

ವಿದಲಿತನಲಿನೀಸುಖದಂ
ನದನಿಕಟಂ ವಿವಿಧವರ್ಣಮಣಿಗಣಶೋಭಾ
ಸದನಂ ಪರ್ವತನಿಕಟಂ
ಮದಗಜಮದಸಲಿಲಸದನಮಟವೀನಿಕಟಂ ೧೦

ನೆಲೆಚೆಲ್ವಿಂಗೆನೆ ಬೆಟ್ಟು ರನ್ನಗಣಿಯಿಂ ಕಾಡಾನೆಯಿಂ ಕಾಡುಪ
ಣ್ಬಳದಿಂ ಪೂ ಗಿಡು ತುಬಿಯಿಂ ತಿಳಿಗೊಳಂ ಪೆಣ್ಣಂಚೆಯಿಂ ಬೆಂಚೆ ನೆ

ಯ್ದಿಲ ಪೂವಿಂ ಪೊಲಸೊತ್ತುವೆತ್ತ ಬೆಳಸಿಂದೂರೂರ ಕಾಲ್ವಳ್ಳಿಗಳ್
ನೆಲೆಮಾಡಂಗಳಿನೊಪ್ಪೆ ಬೇಱೆ ನೆಲೆವೀಡಾಯ್ತುಂಗಜಂಗಾನೆಲಂ ೧೧

ಸಕಲದಿಶಾಳಿಯಂ ಪುದಿದ ಶಾಳೀವನಂ ಶಶಿಕಾಂತನಿರ್ಗತೋ
ದಕ ನವನಾಳಿಕೇರಜಪೂರ ಸಿತೇಕ್ಷುರಸಪ್ರವಾಹಮಾ
ತ್ರಕಮೆನೆ ಸಂತತಂ ಬೆಳೆಯ ಪೆರ್ಚಳಸಿಂ ಪುಸಿಯಾಯ್ತು ದೇವಮಾ
ತ್ರಕವೆಸರೆನ್ನದಾ ನೆಲದ ಕೆಯ್ವೊಲನಂ ಪೆಱತೇನನೆಂಬುದೋ! ೧೨

ಮೇಲ್ಗಟ್ಟಿನ ಪಸುರ್ವಟ್ಟೆಯ
ವೊಲ್ಗಿಳಿಗಳ್ಸುೞಿಯೆ ಗಗನದೊಳ್ ಪಜ್ಜೆಯ ನು
ಣ್ಗಲ್ಗಟ್ಟಿನ ಜಗಲಿವೊಲಿರೆ
ಕಾಲ್ಗಟ್ಟೆಯ ಮಡಿಗಳೆಸೆದುವೋರೊಂದೆಡೆಯೊಳ್ ೧೩

ಬೆಳದೆಱಗಿರ್ದ ಶಾಳಿಗೆಱಗಿರ್ದ ಶುಕಾಳಿ ನಭಕ್ಕೆ ಪಾಱೆ ಮಂ
ಡಳಿಸೆ ತದೀಯಚಂಚುಪುಟಕೋಟಿಗಳಿಂದಮೆಟಿಲ್ದ ಕಾಂಚನೋ
ಜ್ವಳಕಣಿಶಂಗಳೊಪ್ಪಿದುವು ಶಾದ್ವಲರತ್ನವಿತಾನದೊಳ್ಮನಂ
ಗೊಳಿಸುವ ಪದ್ಮರಾಗಮಣಿಕೀಲಿತಲಂಬಣಜಾಲಮೆಂಬಿನಂ ೧೪

ವ।। ಮತ್ತಮಾವಿಚಿತ್ರಶೋಭೆಯಂ ತಳೆದ ಕಲಮಕ್ಷೇತ್ರಂಗಳೊಳ್

ಇದು ದಲ್ ಪಕ್ಕಿಗಳೆಲ್ಲಮಂ ನೆರಪುವಂದಂ ಪಕ್ಕಿಸೋವಂದಮ
ಲ್ಲಿದೆನಲ್ ಸೋಗೆನವಿಲ್ಬಬಿಲ್ಮುಡಿಗೆ ಭೃಂಗಂ ಕುಂತಲಕ್ಕಂಚೆಗಳ್
ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂ
ಮದದಿಂ ಪಾಮರಿಯರ್ ಜಿತಾಮರಿಯರಿರ್ಪರ್ ಕಾದು ಕೇದಾರಮಂ ೧೫

ವ।। ಅಂತು ಸೊಗಯಿಸುವ ಕೆಯ್ವೊಲಂಗಳ ಕೆಲದೊಳ್

ಮಾವಿನ ಜೊಂಪಮಂ ಲತೆಯ ಬಳ್ಳಿ ಸರೋವರಮಂ ಪೊದಟ್ದಿ ಪೊಂ
ದಾವರೆವಳ್ಳಿ ಪೂಗವನಮಂ ಪೊದಱೆಂದೆಲೆವಳ್ಳಿ ಪುಷ್ಪವ
ಲ್ಲೀವನಮಂ ಲತಾಂಗಿಯರಪಾಂಗದ ಮಿಂಚಿನಬಳ್ಳಿ ಸುತ್ತೆ ಶೋ
ಭಾವಹಮಾರ್ಗಮಾವಿಷಯಮೀವುದು ರಾಗದ ಬಳ್ಳಿವಳ್ಳಿಯಂ ೧೬

ವ।। ಅಂತು ನಿರತಿಶಯವಿಲಾಸಮಂ ತಳೆದ ವಿಷಯವಿಲಾಸಿಸಿಯ ಮೇಲ್ಕೊಂಡ ವಿಚಿತ್ರವಸ್ತ್ರಮೆನಿಸುವುಪವನಂಗಳೊಳ್

ಮೃದುಹೃದಯದ ನಲ್ಲರನೆಂ
ದುದನೆನಿಸಲೆನಾಡ ಸುಭಗೆಯರ್ ಸುರತದೊಳು

ಣ್ಮಿದ ತಮ್ಮಿಂಚರದಿಂದೆಂ
ದುದನೆನಿಪರ್ ಕೃತಕಶೈಲಮಂ ಕಲ್ಲೆರ್ದೆಯಂ ೧೭

ಸಮರತಸಂಜನಿತ ಪರಿ
ಶ್ರಮಮಂ ದಂಪತಿಗೆ ಕಳೆದು ಮಗುಳ್ದುಂ ರತಿರಾ
ಗಮನೋಲಗಿಸುವುದು ನವೋ
ದ್ಗಮಪರಿಮಳವಿಷಯಮೆನಿಸಿ ವಿಷಯಸಮೀರಂ ೧೮

ತೀವಿದ ತಿಳಿಗೊಳದಿಂ ಪೊಂ
ದಾವರೆಗೊಳದಿಂದರಲ್ದ ನೆಯ್ದಿಲ್ಗೊಳದಿಂ
ದಾವಲ್ಗೊಳದಿಂ ಚೆಲ್ವಿಂ
ಗಾವಾಸಮೆನಿಪ್ಪವೊಪ್ಪುವಾ ನಾಡೂರ್ಗಳ್ ೧೯

ಕಳಕಂಠಕ್ಕತನುಗೆ ಚಾ
ಪಳತಾರೋಹಣವಿಕಾರವಳಿಗಾಮ್ರಕುಜಾ
ವಳಿಗೆ ಮಧುವಿಕೃತಿ ಮಾನವ
ಕುಳಕ್ಕೆ ಕನಸಿನೊಳಮಿಂತಿವಿಲ್ಲಾ ನಾಡೊಳ್ ೨೦

ಜಾನಪದಾಂಗನಾಜನದ ಗಾಡಿಗೆ ಸೋಲ್ತಳಿನೀನಿನಾದಮಂ
ಜಾನಿಸಿ ಕೇಳ್ದುಸಾರ ಪರಿಕಾಲ್ಗಳನೊಯ್ಯನೆ ದಾಂಟಿಸುತ್ತಿದು
ದ್ಯಾನದೊಳಾಡಿ ತೀರಮೆಯುಮಂ ಪಥಿಕರ್ ಮಱೆದಿಲ್ಲೆನಲ್ ಪರಿ
ಮ್ಲಾನತೆ ಸೈತು ಬಟ್ಟೆ ನಡೆಯಲ್ಪಡೆಯರ್ ವಿಷಯಾಂತರಾಳದೊಳ್ ೨೧

ಬಗೆಯೊಳ್ಬೇಟದ ಬೀಜಮಂ ತಳಿದು ನೀರ್ವೊಯ್ವಂದದಿಂ ತೋಳನಂ
ಗ್ಪೊರ್ಗರ್ಗಳ್ತೋರ್ಪಿನಮೆತ್ತಿ ತಣ್ಗಳಸಮಂ ನೀರ್ವೊಯ್ವುದುಂ ಪಾಂಥರೀ
ಕೆಗಳೊಳ್ತೊಟ್ಟೊಲವಿಂಗಿದಲ್ತೆ ಬಜೆನೀರೆಂಬಂದದಿಂದೀಂಟಿ ದಿಟ್ಟಿ
ಗಳಿಂದೀಂಟುವರಾಪ್ರಪಾಪ್ರಣಯಿನೀಲಾವಣ್ಯ ನೀರಂಗಳಂ ೨೨

ವ॥ ಅಂತು ನಯನಾನಂದವಿಷಯಮಾದ ವಿಷಯವಿಲಾಸಿನೀಮಧ್ಯನಾಭಿಯುಂ ಸೌಂದರ್ಯಸನಾಭಿಯುಮೆನಿಸಿ

ವಿಷಯಸುಖಾಸ್ಪದಂ ವಿವಿಧರತ್ನಗೃಹೋದ್ಗತಕಾಂತಿಸಂತತಾ
ಭಿಷವಣಸುಂದರಂ ಸಕಲಮಂಗಲವೇದಿಕೆ ಕಚ್ಛಕಾವತೀ
ವಿಷಯವಿಳಾಸಿನೀತಳಕಮಿರ್ಪವೊಲಿರ್ಪುದು ಬಣ್ಣಿಸಲ್ಕೆ ವಾ
ಗ್ವಿಷಯಮೆ ವೀತಶೋಕಪುರಮಂ ಸ್ಮರರಾಜನ ರಾಜಧಾನಿಯಂ ೨೩

ಅದು ಕೊಯ್ದುವಳಕೆಯಳಕಮ
ನದು ಮಿಕ್ಕುದು ಭೋಗವತಿಯ ಭೋಗಮನದು ಮೆ
ಚ್ಚದು ಚೈತ್ರರಥದ ಚಿತ್ರಾ
ಸ್ಪರಮನೆನಲ್ವೀತಶೋಕಪುರಮೆಸೆಗುಂ ೨೪

ವ॥ ಆ ಪೊಟಿಲ ಪೊಱವೊಟಿಲೊಳ್ ಕಱಂಗಿದ ಪೊಂಗೇದಗೆಯ ಬಾಱ್ವೇಲಿಯಿಂದೊಳಗೆ ಮನಸಿಜಂಗೆ ಪಿಡಿದ ಪೀಲಿದಟಿಯಂತೆ ಬಳಸಿ ಕಿಕ್ಕಿಱಿದ ನಾಳಿಕೇರತರುಗಳೊಳಂ ಮನೋಜರಾಜನೋಲಗಸಾಲೆಯಂತೆ ಸೊಗಯಿಸಿರ್ದ ಘನಸಾರಸರಳಚಂದನದ್ರುಮ ಷಂಡಂಗಳೊಳಂ ಮದನರಾಗದುರುಳಿಯಂತೆ ಕಣ್ಗೊಳಿಪತನಿವಣ್ಗಳಿಂ ತುಱುಗಿದ ನಾರಂಗಭೂರುಹಂಗಳೊಳಂ ಜಳವಿಹಗಪಕ್ಷವಿಕ್ಷೇಪದಿಂ ಪರಿದು ಕಾಮಸಾಮ್ರಾಜ್ಯ-ದೊಸಗೆಯೊಳ್ ಪಸರಿಸಿದ ಪಿಷ್ಟಾತಕಚೂರ್ಣದಂತೆ ಮಂದಮಾದ ಪೊಂದಾವರೆಯ ರಜದೊಳಂ ಬಿಡದೆ ಸುರಿವ ಸೊನೆಯ ಸೋನೆಯಂ ತಳೆದ ಸಹಕಾರಮುಂ ತಳೆದು ರತಿಪತಿಯ ಧಾರಾಗೃಹದಂತಿರ್ದ ಮಾಧವೀಲತೆಯ ಜೊಂಪಂಗಳೊಳಂ ಮನ್ಮಥ-ನಿಸರ್ಗದುರ್ಗದಂತಿರ್ದ ಕೃತಕಗಿರಿಗಳೊಳಂ ಪುಷ್ಪಶರಪುನ್ನಾಗ ಘಟೆಯ ಕಟದಿನುತ್ಕಟ-ಮಾದ ಮದವೃಷ್ಟಿಯಿಂ ತೆಱಂಬೊಳೆವ ಮಱಿದುಂಬಿಯ ಬಂಬಲಿಂ ಮನಂಗೊಳಿಪ ಪುನ್ನಾಗಮಹೀರುಹಂಗಳೊಳಂ ಪರಿಪಕ್ವಫಲರಸಾಸ್ವಾದನೋತ್ಸುಕಶುಕಚಂಚುಸಂಚಾರ-ದಿನಲ್ಲೊಕ್ಕು ಕುಂಕುಮಂಬೊರೆದ ಕರ್ಪೂರವಳಿಕಂ ಕೆದಱಿದಂತಿರ್ದ ದಾಡಿಮಬೀಜರಾಜಿ-ಯೊಳಮೋರೊಂದೆಡೆಯೊಳ್ ಸೊನೆಯಕನರಂ ಸವಿವ ಗಂಡುಗೋಗಿಲೆಯ ತುಂಡ ಖಂಡದಿನುದಿರ್ದು ಸೆಲೆವಣ್ಗೆ ತಲೆದುಡುಗೆಯ ಮಾಣಿಕದ ಕಿಱುವರಲ್ಗಳಂತಿರ್ದ ಸಹಕಾರಕೋರಕಂಗಳೊಳಮೋರೊಂದೆಡೆಯೊಳ್ ಬಿರಯಿಯೆಂಬ ಬೆಳ್ಮಿಗಂಗಳ -ನಳುರ್ವ ಕಾಳ್ಕಿಚ್ಚಿನಂತೆ ಕೆಂಕಮಾದ ಕಂಕೆಲ್ಲಿ ಕುಜಂಗಳೊಳಂ ಓರೊಂದೆಡೆಯೊಳ್ ವನವಿಲಾಸಿನೀ ವಿಲಾಸಭವನದಂತಿರ್ದ ಪೊಂಬಾಳೆಯ ಕುರುಂಬುಗಳೊಳತಿರಮಣೀ-ಯಮಾಗಿ

ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮಂ
ಗೊಳದಿಂ ಪೂಗದ್ರುಮಂ ಬಲ್ಸಱಿವಿಡಿಯೆ ಮರಾಳಂಗಳಂ ಪದ್ಮಷಂಡಂ
ನಳಿನೀಕಾಂಡಂಗಳಿಂ ಕೊರ್ಬಿಸೆ ಕನರ್ಗೊನರಿಂ ಬಾಳಚೂತದ್ರುಮಂ ಜಾ
ಪಳಮಂ ಪುಂಸ್ಕೋಕಿಲಕ್ಕೋಲಗಿಸೆ ಸೊಗಯಿಕುಂ ತತ್ಪುರೋದ್ಯಾನಷಂಡಂ ೨೫

ಕುಸುಮರಸಂಗಳೊಟ್ಟಿತನಿವಣ್ಣ ರಸಂಗಳ ಸೋನೆ ಸಾರಕೊ
ಟ್ಟೆಸಟಿಳನೀರ ಬೆಂಚೆ ಸೊನೆಯೊಳ್ಗೆ ಸಱಿಂಬಿವಱಿಂದಮೆಲ್ಲಿಯುಂ
ಬಸನದ ಬಾಟ್ತಿಗಪ್ಪಡೆಗಳಿಲ್ಲದೆನಲ್ಲರನಂಗರಾಗವೋ
ಡಿಸೆ ಮನದೊಳ್ತೊಟಿಲ್ದಱಸುವರ್ಬನದೊಳ್ಕೃತಕಾಚಲಂಗಳಂ ೨೬

ಪರಿಕಾಲಿರ್ತಡಿಯೊಳ್ ಮಡಲ್ತುಮುಗುಳಂ ಪೂಗೊಂಚಲಂ ಪುಷ್ಪನ
ಲ್ಲರಿಗಳ್ಪೇಱಿದ ಬಂಡನುಣ್ಬಳಿಪಿನಿಂ ಪೆಣ್ದುಂಬಿಗಳ್ಪಾಯ್ದು ಪುಷ್ಪರಸಾ
ಸಾರದ ತುಂತುರಿಂದೆಱಿಕೆನಾಂ ದಾಂದೋಳಿತಾಶೋಕಮಂ
ಜರಿಯಂ ಸಾರ್ವುವು ಪಲ್ಲವೋಲ್ಲಸಿತಮಂ ಬಾಲಾತಪಭ್ರಾಂತಿಯಿಂ ೨೭

ಮದನಂ ತೋಂಟಿಗನಾದ ಚೂತವತನುಜ್ಯಾರಾವದೊಳ್ಕೂಡಿ ಪಾ
ಡಿದ ಪೆಣ್ದುಂಬಿ ವಸಂತದೊಳ್ಮದನಕೇಳೀಸೂತ್ರಮಂ ಪಾರದೋ
ದಿದ ಕೀರಂ ರತಿಯೊಳ್ಪದನ್ಯಸನಮಂ ಕಲ್ತುಂಚೆ ಶೀತಾಂಶು ತೀ
ವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ರೋತ್ಸವಾಲಂಬನಂ ೨೮

ಪಾಡುತ್ತುಂ ಮಱಿದುಂಬಿಯೊಳ್ಗಡಣದಿಂ ಪಾರಾವತಕ್ರೀಡೆಯಂ
ನೋಡುತ್ತಂ ಪದಪಿಂವಿಚಿತ್ರರತಿ ಕೇಳೀವಾರ್ಧಿಯೊಳ್ಮೂಡಿ ಮು
ಳ್ಕಾಡುತ್ತುಂ ಶತಪತ್ರಪತ್ರಶತದಿಂದಂ ಪತ್ರಭಂಗಂಗಳಂ
ಮಾಡುತ್ತುಂ ಪ್ರಿಯರಿಂತು ಪೊಱ್ತುಗಳೆವರ್ನಿಚ್ಚಂ ಪುರೋದ್ಯಾನದೊಳ್ ೨೯

ನಡೆಗಲಿಸುತ್ತುಮಂಚೆಗಳನೋದಿಸುತ್ತುಂ ಗಿಳಿಯಂ ಪಿಕಕ್ಕೆ ಮಾ
ಮಿಡಿಗಳನಿಕ್ಕುತುಂ ನವಿಲನಾಡಿಸುತ್ತುಂ ಪೊಣರ್ವಕ್ಕಿಯಂ ಪುಣಿ
ಲ್ಗಿಡಿದು ಬಟಲ್ವಿನಂ ತಗುಳುತುಂ ಬನದೊಳ್ಬಿನದಂ ವಿಲಾಸಮಂ
ಪಡೆಯೆ ನಿರಂತರಂ ತೊಲಗದಿರ್ಪುದು ಪೌರವಿಲಾಸಿನೀಜನಂ ೩೦

ಗಣಿಕಾರತ್ಯಂತಸುಪ್ತಿಸ್ಖಲನಚತುರನಂಭೋಜಕಿಂಜಲ್ಕ ಸಂಚಾ
ರಣಶೀಲಂ ಪುಷ್ಪವಲ್ಲೀನಟನಪಟುನಟಂ ಸಂಚರಚ್ಚಂಚರೀಕ
ಕ್ಷಣನಜ್ಯಾಸಂಗಚಿತ್ತೋದ್ಭವಭುವನಜಯೋತ್ಪಾದನಪ್ರೌಢಸೇನಾ
ಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದುಪವನಸ್ವೈರಚಾರಂ ಸಮೀರಂ ೩೧

ಬನದಿಂ ಬನಕ್ಕೆ ನನೆಯಿಂ
ನನೆಗಲರಿಂದಲರ್ಗೆ ಮೊರೆದು ಬಿರಯಿಗಳೆರ್ದೆ ಪೌ
ವನೆ ಪಾಱಿ ಪಾಱುಗುಂ ಕಾ
ಮನಿಕಾಮಶಿಲೀಮುಖಂ ಶಿಲೀಮುಖನಿವಹಂ ೩೨

ವ॥ ಅಂತು ಸೊಗಯಿಸುವುಪವನೋಪಕಂಠದೊಳ್

ಕದಳೀಗರ್ಭದೆ ವಿರಚಿಸಿ
ಮದನಂ ಕುಪ್ಪಿಗೆಯಲ್ಲಿ ಕುಳಿರ್ವಮರ್ದಂ ತೀ
ವಿದ ನಡುಕಿಲಿಟ್ಟನವನೆನಿ
ಸಿದುವೆಸೆವಸಿತೇಕ್ಷುದಂಡಮಂಡಲಿ ಬನದೊಳ್ ೩೩

ಪೊಗಟಿಲ್ ದೇಸೆಗೆ ದೇವರಿಂದುಕಳೆಯಿಂ ನಿಸ್ಸಾರಮಂ ತಮ್ಮ ಪ
ತ್ತುಗೆಯಿಂದಂ ಪದಿನಾಜಿನಲ್ಲಿ ಸವಿವರ್ತಮ್ಮಲ್ಲಿ ಪುಲ್ಗರ್ಬಿನಾ
ವಗಮೊಂದಂ ಸವಿವಂತೆ ತಾಮೆ ಜಗಕೆಲ್ಲಂ ದೇವರೆಂಬಂತೆ ತೀ
ವುಗುಮುತ್ತಾನಿತಮಿಕ್ಷುಯಂತ್ರನಿನದಂ ದಿಕ್ಕಾಮಿನೀಕರ್ಣಮಂ ೩೪

ಜಾಗದ ಬಲ್ಲರಾದ ಪೊನಲಿಂ ಬಳೆದೊಪ್ಪುವ ನಾಳಿಕೇರದಿಂ
ಪೂಗವನಂಗಳಿಂದೆಲೆಯ ಬಳ್ಳಿಗಳಿಂ ತೆಜಪಿಲ್ಲೆನಲ್ಪೆಡಂ
ಗಾಗೆ ಬಹಿಸ್ತಟಂ ಪುದಿದ ತಾವರೆವಳ್ಳಿಯ ತಳ್ಪಿನಿಂ ಪಸು
ರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೆಜಿಗಳ್ನಿರಂತರಂ ೩೫

ನನೆಯಂಬಿನ ತಾಯ್ವನೆಯೆನೆ
ನನೆವಿಲ್ಲಾಗರಮಿದೆನೆ ಮನೋಜನ ಸಮ್ಮೋ
ಹನವಿದ್ಯಾದೇವತೆಯರ
ಮನೆಯೆನೆ ಪೊದೋಂಟಮೊಪ್ಪುಗುಂ ಪೊಜಿವೊಟಿಲೊಳ್ ೩೬

ಮುದ್ರಿಸಿ ದೆಸೆಯಂ ಚೆಲ್ವು
ನ್ಮುದ್ರಿತಮೆನೆ ತಮಗೆ ಜೀರಕಾದ್ರವನವಹಾ
ರಿದ್ರಕವಾಟೋತ್ಕರಮು
ನ್ನಿದ್ರಿತಕಮಲಾಕರಂಗಳಿಂ ಸೊಗಯಿಸುಗುಂ ೩೭

ಅನಿತಿನಿತೆಂದು ಲೆಕ್ಕಮಿಡಲಾನಜೆಯೆಂ ಬನಮಂ ಲತಾನಿಕೇ
ತನಕೃತಕಾದ್ರಿಯಂ ಪುಳಿನಮಂ ಕೊಳನಂ ನೆಜಿ ಬಲ್ಲೆನೊಂದನಾ
ನನಿತಜಿಗೊಳಂ ವಿಯೋಗಿಗೆ ಕಟಾಕ್ಷಿಸುವಂದಯೆಗೆಯ್ವನುನ್ನತ
ಸ್ತನಪರಿರಂಭಣಪ್ರಣಯಿಗಂಗಭವಂ ನಿಜಕಾಂತ ದೃಷ್ಟಿಯಿಂ ೩೮

ವ॥ ಅಂತು ಸೊಗಯಿಸುವ ಪೊಜಿವೊಟಿಲ ವಿಲಾಸಮಂ ನೋಟ್ಪಿ ವನವಿಲಾಸಿನಿಯರ
ಸಿರಿಯನನೆಗಣ್ಗಳೆನಿಪ ಕಮಲಕುವಲಯವನಂಗಳಿಂ ಮನಂಗೊಳಿಸಿ

ಜಳವಿಹಗಬಹಳಕೋಳಾ
ಹಳದಿಂದೆಣ್ದೆಸೆಯೊಳಿರ್ದ ದೆಸೆಯಾನೆಗಳಂ
ಜಳಕೇಳೀಗೆ ಕರೆವಂತಿರೆ
ಜಳಖಾತಿಕೆ ಬಳಸಿ ಚೆಲ್ವನೊಳಕೊಂಡಿರ್ಕುಂ ೩೯

ಪರಿಖಾವಳಯಮಲಂಘ್ಯಂ
ಪರಿವೇಷ್ಟಿಸೆ ಕಡೆಯಲೆಂದು ಪಾಲ್ಗಡಲೊಳ್ ತಂ

ದಿರಿಸಿದ ಮಂದರಗಿರಿಗೇಂ
ದೊರೆಯಾದುದೊ ಪೊನ್ನಕೋಂಟೆ ವಿಕಟಾಟ್ಟಾಳಂ ೪೦

ಮುಗಿಲಟ್ಟಳೆಗಳ ಹರಿನೀ
ಲಗಭಸ್ತಿಧ್ವಾಂತಪಟಲದೊಳ್ ಮುನ್ನೆಂದುಂ
ಮುಗಿದಜೆಯದವಾಪುರದೊಳ್
ಮುಗಿದುವು ದಿನಕರನ ಕೆಯ್ಯ ಕೆಂದಾವರೆಗಳ್ ೪೧

ಎನಿತೊಳವು ನೆಗಟ್ತೆಯ ಪುರ
ಮನಿತುಮನವಯವದಿನಾಪುರಂ ಗೆಲ್ದೊಡೆ ಪೂ
ವಿನ ಮಟಿ ಕೊಂಡಪುವೆನೆ ಮು
ತ್ತಿನೋಳಿ ತೆನೆಗೊಂಡು ಪಜೆವ ಮುಗಿಲಿಂ ಸುರಿಗುಂ ೪೨

ವ॥ ಅಂತಲಂಘ್ಯಮಾಗಿ ಲವಣಾರ್ಣವದ ವಜ್ರವೇದಿಕೆಯಂತೆ ನೀರ್ಗಾದಿಗೆಯಿಂದೆಸೆವ ಕೋಂಟೆಯುಂ ಕುಳಾಚಳದಂತೆ ನಭಮನಳ್ಳಿಜೆವುತ್ತುಂಗಚೈತ್ಯಕುಲದಿಂ ಪದ್ಮಾದಿಸರೋವರಂಗಳಂತೆ ಮಣಿಮಯಸೋಪಾನಂಗಳಿಂ ಮನಂಗೊಳಿಸುವ ಗೃಹಸರೋವರಂಗಳಿಂ ಜನಪದಂಗಳಂತೆ ಪಿರಿಯವಾದ ಪುರವರ್ಗಂಗಳಿಂ ಮಹಾನದಿಗಳಂ ತನವರತಜನಪ್ರವಾಹದಿಂ ಸೊಗಯಿಸುವ ಬೀದಿಗಳಿಂ ಕನಕಗಿರಿಗಳಂತೆ ಕೂಟಕೋಟಿಗಳಿಂ ಪೊಳೆವ ಪೊನ್ನಮಾಡಂಗಳಿಂ ತಾರಾಚಲಂಗಳಂತೆ ದೆಸೆಯಂ ಧವಲ್ಲಿಸುವ ಧವಳಾರಂಗಳಿಂ ಅಕೃತ್ರಿಮ ವನಂಗಳಂತೆ ಸಾರ್ವರ್ತುಕಮೆನಿಪ ಗೃಹವನಂಗಳಿಂ ನಿರತಿಶಯಮಿದೆರಡನೆಯ ಜಂಬೂದ್ವೀಪಮೆಂಬ ಮಹಿಮೆಯಂ ತಳೆದು ಶೋಭೆಗೆ ಕುಲಭವನಮುಂ ಮಣಿಗೆ ಕಣಿಯುಂ ವಿಲಾಸಿನೀಜನಕ್ಕೆ ಜನ್ಮಾವಾಸಮುಂ ವಿಷಯಸುಖಸುಧಾರಸಕ್ಕೆ ಸೇತುವುಂ ಪ್ರಸಿದ್ಧವಿದ್ಯಾದೇವತೆಗೆ ಆದಿಪೀಠಮುಂ ಸತ್ಪುರುಷರ್ಗುತ್ಪತ್ತಿ ಭೂಮಿಯುಂ ಧಾರ್ಮಿಕಜನಕ್ಕೆ ಅಭ್ಯುದಯಪದಮುಂ ಯತಿಪತಿ ಸಮೂಹಕ್ಕೆ ಸಮಾಧಿ ಸ್ಥಾನಮುಂ ಜಾತ್ಯಶ್ವಕ್ಕೆ ಕಮಲಭವಬಾಷ್ಪಜಲಮುಂ ಮದಗಜಕ್ಕೆ ಜನ್ಮಾಟವಿಯುಮೆನಿಪ ಪುರವರದ ಸೂಳೆಗೇಜೆಯೊಳ್

ಗಂಡನನೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ
ಪೆಂಡಿರ ರೂಪುಮಂ ಸೊಬಗುಮಂ ಭವಮಂ ಪೆಸರ್ಗೊಳ್ವುದೇ ಮನಂ
ಗೊಂಡಳನಂಗನಂ ರತಿಯೆನಲ್ ಚದುರೆತ್ತಣದಾಕೆಗೆಂದು ಕ
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀಜನಂ ೪೩

ಆವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊತ್ತಾಳ್ದರಾವಂ
ಕಾವಂ ದೇವವ್ರತಖ್ಯಾತಿಯನವನವನಲ್ಮಾಟ್ಟುದೆಂದಾ ಪುರಸ್ತ್ರೀ

ಘ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತನಾಟಂ
ದಾ ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಿಂ ಸ್ಮರಂ ನಂದೆಪೋಯ್ತುಂ ೪೪

ಪವನವಿಕಾರಮಂ ಮಱವ ಪಾರಿವಮಿಲ್ಲದ ರಾಜಕೀರಮಿ
ಲ್ಲದ ನೆಲೆಮಾಡಮಿಲ್ಲದ ನೆಗೞ್ತೆಗನೇಱವ ಪೊನ್ನಘಂಟೆಯಿ
ಲ್ಲದ ತಳಿರುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಿಗಾಣಿರಿ
ಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ ೪೫

ವ॥ ಆ ವಿಲಾಸಿನೀನಿವಾಸಕ್ಕೆ ಅಸನ್ನಮೆನಿಪ ವಿಪಣಿಮಾರ್ಗದೊಳ್

ತರಳಕಟಾಕ್ಷಮಾಲೆಯೊ ನವೋತ್ಪಲಮಾಲೆಯೊ ಕಯ್ಯ ಮಾಲೆಯೋ
ಸಿರಿಸದ ಮಾಲೆಯೊಳ್ತೊಡರ್ದ ಮಾಲೆಯೊ ವಿಸ್ಮಯಮೆಂದು ನೋಟ್ಟಿ ನೀ
ಱರ ಸೊಬಗಂ ಮೊದಲ್ಗಿಡಿಸಿ ತೋಳಮೊದಲ್ನೆವೊವನೆತ್ತುವಂ
ತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ ೪೬

ಪರಿಮಳಲೋಭದಿಂ ಮುಸುಱ ಮುತ್ತುವ ತುಂಬಿಗಳೊಳ್ಗುರುಳ್ಗಳೊಳ್
ಬೆರಸುವಿನಂ ಮಗುಟ್ಚುವ ದಳಂಗಳೊಳಂ ನಱುಸುಯ್ಯ ಕಂಪುಗಳ್
ಬೆರಸುವಿನಂ ಕದಕ್ಕದಿಸೆ ಪೆರ್ಮೊಲೆಗಳ್ ಬಳಮರ್ದನಂಗಜಂ
ಗರೆವವೊಲೀಟಿ ಸಾಂದರವರಿಂಬಳೆವಟ್ಟಿರೆ ಘಟ್ಟಿವಳ್ತಿಯರ್ ೪೭

ಧನದ ಪವಣಱಯರೆನಿಸಿದ
ಧನಪತಿಗಳ ಪುರದ ಪರಪರವರಂ ನೋಡಲ್
ಧನಪತಿ ನಿರ್ಧನನದಱಂ
ಧನಪತಿಗಾಕ್ಷೇಪವಾಚಕಂ ತನ್ನಾಮಂ ೪೮

ಕದಳಿಯ ತಮಾಳದಸುಕೆಯ
ಪೊದಱನಿಸುವನೇಕರತ್ನಮಯಭೂಮಿಗಳಿಂ
ದಿದು ಗೃಹವಿದು ಗೃಹವನಮೆಂ
ಬುದನಾರ್ಗಂ ನಿಟ್ಟಿಸಲ್ಕೆ ಬಾರದು ಪುರದೊಳ್ ೪೯

ವ॥ ಆ ಪುರಸ್ತ್ರೀಯ ರತ್ನಕಂಠಿಕಾಮಯೂಖಲೀಲಾವಿಲಾಸಮಂ ತಳೆದು

ಪರಿಖೆಯ ತೆರೆವೊಯ್ಲಿಂದಂ
ತೆರಳ್ದು ತಡಿವಿಡಿದು ತೆಕ್ಕಗಟ್ಟಿದ ಪೊಂದಾ
ವರೆಯ ರಜದಂತೆ ನೃಪಮಂ
ದಿರಮಂ ಬಳಸಿರ್ದ ಪೊಮ್ಮುಗಿಲ್ಪೊಗಯಿಸುಗುಂ ೫೦

ಶರದಭ್ರಂಗಳ್ತಳ್ತಾ
ವರಿಸಿರ್ದುವು ನೀಳನಗಮನೆನೆ ಮದಜಲನಿ
ರ್ಝರವಾರಣದಿಂ ಸೊದೆವಳಿ
ದರಮನೆಯಂ ಬಳಸಿದಾನೆ ಸಾಲೆಗಳೆಸೆಗುಂ ೫೧

ಪೂಜಾಸಿಂಧುರಮದಧಾ
ರಾಜಲದಿಂ ತೀವಿದಗಳ ತಡಿವಿಡಿದಲರ್ದಂ
ಭೋಜಕ್ಕೆ ಮೊಗಸಿದಳಿ ನೀ
ರಾಜನಕುಸುಮವನೆ ಮುಸುಜೆ ಮೊಜೆಯುತ್ತಿರ್ಕುಂ ೫೨

ವ॥ ಆ ಮಗಿಲ ಗವನಿಯಿಂದೊಳಗೆ

ಎಳಸಿದುವು ತುಹಿನಕರಮಂ
ದಳಮಂ ತೀವ್ರಾತಪಕ್ಕೆ ಸುಗಿದಿನನ ಹಯಾ
ವಳಿ ಸಂದೆಯಮೇನೆನಿಪುವು
ಪಳುಕಿನ ಮಂದಿರದೊಳಿರ್ದ ಜಾತ್ಯಶ್ವಂಗಳ್ ೫೩

ಅರಸಿಯರ ಬಳ್ಳಿಮಾಡದ
ಕರುಮಾಡದ ಮಾಡಮಿರ್ಕೆ ಬಾಗಿಲ್ವಾಡಂ
ಬರೆಯಲ್ಕೆ ಚೀರಘಟ್ಟಿಗ
ಮರಿದೆನಿಪುದು ಘಟಿತರತ್ನಘಂಟಾಜಾಲಂ ೫೪

ಅಡರೆ ಕಟಾಕ್ಷಚಂದ್ರಿಕೆ ಪಳಂಚೆ ಗವಾಕ್ಷದ ಚಂದ್ರಕಾಂತದಿಂ
ದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನಘರ್ಮವಾರಿಯೊಳ್
ತಡತಡಮಾಗೆ ಮಾಧವಿ ಮುಗುಳ್ತಪೊಲಿರ್ದೆಳವೆಂಡಿರಿಂದ ಮೇಂ
ಪಡೆಮುವೊ ಲೀಲೆಯಂ ಮಣಿಮರೀಚಿ ವಿಚಿತ್ರಿತನಾಟ್ಯಶಾಲೆಗಳ್ ೫೫

ಕುಂದದ ರುಚಿ ತಮಗಳವಡೆ
ಕುಂದದ ನವನಿಧಿಗೃಹಾಳಿ ಸಿರಿಯಂ ನೋಡಲ್
ಬಂದಮರ್ದಿನ ತಾಯ್ಗಡಲೆಂ
ಬಂದಮನುಕ್ಕಂದಮಾಗಿ ತಳೆದೆಸೆದಿರ್ಕುಂ ೫೬

ಮಣಿಕುಟ್ಟಿಮದಿಂ ಮಣಿತೋ
ರಣದಿಂ ಮಣಿಕಳಶದಿಂ ತಮಸ್ತೋಮನಿವಾ
ರಣದೆಡೆಗಳಿಂ ಗೃಹಗ್ರಾ
ಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್ ೫೭

ಗಿಳಿ ಗಿಳಿವೆಣ್ಗೆಪೂಗಫಳಮಂ ಕಳಹಂಸಿಗೆ ಹಂಸನಬ್ಜಕಂ
ದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ
ತಳೆದು ವಿಳಾಸಮಂ ತಳೆದ ರಾಣಿಯವಾಸದ ಬಳ್ಕೀಮಾಡದು
ಜ್ಜ್ವಳಮಣಿಭಿತ್ತಿ ಚೆಲ್ವನೊಳಕೊಂಡುದಪೂರ್ವಭಿತ್ತಿಯಂ ೫೮

ವ॥ ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನತಿಂಗಣಿಗೆಯನಳಲ ತುಱುಗಲಿಂ ವಿರಾಜಿಸುವ ಪೂಜಾಗೃಹದಿಂದಖಿಲಪೂಜಾರ್ಥಿಗಳನಿತ್ತಬನ್ನಿಮೆಂದು ಕೈಸನ್ನೆಗೆಯ್ವಂತೆ ಮಿಳಿರ್ವನೇತ್ರವಚ್ಚೆಯ ಜಾಗದ ಪಳಯಿಗೆಯ ತುಱುಗಲಿಂ ತಳಿರ್ತ ಕಲ್ಪಲತೆಯ ಕಾವಣದಂತಿದೇ ವಿತರಣಮಣಿಮಂಡಪದಿಂ ಸೂತ್ರಿಸಿದ ಧಾರೆಯಂ ಸೂಸುವ ಧಾರಾಗೃಹದಿಂ ಮನಸಿಜನ ವಿಲೋಕನಾಕರ್ಷಣಸ್ಥಾನದಂತೆ ಪಂಚಾಂಡಕಪರಿಣತಿಯಂ ದೃಷ್ಟಶ್ರುತಾತ್ಮವಿದ್ಧದೊಳ್ಮೆಱೆವ ರಸಚಿತ್ರದೊಳಂ ಷಡ್ಜಾತೀಯಪಂಚವಿಧಪತ್ರಗತಿಯೊಳಮತಿಶಯಮಾದ ಚಿತ್ರಶಾಲೆಯಿಂ ಮನಂಗೊಳಿಸಿ ವಿಶಾಲಹರಿನೀಲಶೀಲಾಮರೀಚಿಜಾಲಜಟಿಲಿತಜಗತೀಮನೋಹರಮುಂ ಕನಕಮಯಸೋಪಾನರುಚಿವಿತಾನತಟ್ಟವ್ವಲ್ಲರೀವಲಯಿತಮುಂ ಮರಕತರತ್ನತೋರಣ ಮರೀಚಿಮೇಚಕಿತನಭೋವಿಭಾಗಮುಂ ಚಂದ್ರಕಾಂತೋಪಲಭಿತ್ತಿಭಾಗಭಾಸುರ ಪ್ರಭಾಚಂದ್ರಕಬಳಚರ್ಚಿತ ದಿಗ್ವಧೂವದನಮುಂ ಪದ್ಮರಾಗರಚಿತದ್ವಾರಶಾಖಾಮಯೂಖಪಲ್ಲವೋಲ್ಲಸಿತಮುಮವಕ್ರಶಕ್ರಚಾಪವಿಲಾಸೋಪಹಾಸಿತರತ್ನಸ್ತಂಭ ರಮಣೀಯಮುಂ ವಿಚಿತ್ರಪುತ್ರಿಕಾಕಲಿತಮುತ್ತಾಲಂಬಸಂಭೃತಮುಂ ಪಂಚರತ್ನಕಲಶ ಸಂಚಯಾಂಶುಪಟಲಪತಾಕಾಚ್ಛನ್ನಮುಮೆನಿಸಿ.

ನಯನಮನೋಹರಂ ಮನುಜನಿರ್ಮಿತಮಲ್ತಿದು ಮೇರುಸಪ್ತಭೂ
ಮಿಯನೊಳಕೊಂಡು ಸನ್ನಿಹಿತಮಾದುದು ಸನ್ನಿದಮಾದ ಭೋಗಭೂ
ಮಿಯ ಭವನಾಂಗಭೂಜದ ವಿಗುರ್ವಣೆ ಸಂಶಯಮೇವುದೆಂಬನಿ
ಶ್ಚಯಮನೊಡರ್ಚಿ ವಿಸ್ಮಯರ ಸಾಕರಮಾಕರುಮಾಡಮೊಪ್ಪುಗಂ ೫೯

ಕರು ಕರುವಿಂಗೆ ಕಣ್ದೆಱವಿ ಕಲ್ವೆಸದೋಜೆಗೆ ನಚ್ಚಿ ನಚ್ಚು ಕಂ
ಡರಣೆಗೆ ಮಂಡನಂ ಮರವೆಸಕ್ಕೆಱೆವಟ್ಟೆಱಕಕ್ಕೆ ಜೌವನಂ
ಪರಿಣತಿ ಚಿತ್ರವಿದ್ಯೆಗೆನಲಲ್ಲದೆ ಚಿತ್ರಿಸಿಕೊಂಡು ಬೇಱೆ ಬಿ
ತ್ತರಿಪುದು ಮೊಗ್ಗೆ ಸಪ್ತತಳರಮ್ಯಮನಾಧರಣೇಶಹರ್ಮ್ಯಮಂ ೬೦

ಬಾಳತೃಣಂಗಳೆಮದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀ
ಬಾಳಕನಲ್ಲಿ ಕೆಂಬರಲ ಕೆಂದಳಿರಂ ಬಿಸಿಲೆಂದು ನಟ್ಟಿರುಳ್

ಮೇಳಿಸುಗುಂ ರಥಾಂಗಮೆಳಲಿಕ್ಕಿದ ಮುತ್ತಿನ ಸೂಸಂಕಂಗಳಂ
ಬಾಳಮೃಣಾಳಮೆಂದೆ ಕರ್ದುಕಲ್ಪಗೆಗುಂ ಕಳಹಂಸಪೋತಕಂ ೬೧

ನೆಲೆಮಾಡದ ಪೊಸದೇಸೆಯ
ನೆಲೆಮಾಡದ ಸುರವಿಮಾನಮೆಯ್ದಲಣಂ ಕಿ
ಱ್ಱಿಲೆಯಾದುವಿವಱ ತೆಱದಿಂ
ನೆಲೆಯಾದುವೆ ಸಕಲಜನದ ಕಣ್ಗಂ ಮನಕಂ ೬೨

ಬೆರಲಂ ಮಿಡಿಯಿಪ ಪುಳಕಾಂ
ಕುರಮಂ ಪುಟ್ಟಿಸುವ ನೋಡೆ ತಲೆದೂಗಿಪ ಸುಂ
ದರಮೆನಿಪ ಕುಸುರಿವೆಸದಿಂ
ದರಮನೆ ಮಾಳ್ಪುದು ಮಯಂಗಮತಿವಿಸ್ಮಯಮಂ ೬೩

ಆರಾಜಾಲಯವಲ್ಲಭಂ ವಿತರಣಕ್ಕರ್ಥಾರ್ಥಿಗಳ್ ಸತ್ಕ್ರಿಯಾ
ಪ್ರಾರಂಭಕ್ಕೆ ಸಮಸ್ತಮಂಗಳಮುಹೂರ್ತಂಗಳ್ ಜಸಕ್ಕಾಸೆಗಳ್
ಚಾರಿತ್ರಕ್ಕೆ ಜಿನೋಪದಿಷ್ಟ ವಿಧಿವಾಕ್ಯಂಗಳ್ ಗುಣಖ್ಯಾಪನ
ಕ್ಕೀರೇೞುಂ ಭುವನಂಗಳೆಯ್ದವೆನಿಪಂ ಸಾಹಿತ್ಯವಿದ್ಯಾಧರಂ ೬೪

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ವೀತಶೋಕಪುರವರ್ಣನಂ ದ್ವಿತೀಯಾಶ್ವಾಸಂ



# ತೃತೀಯಾಶ್ವಾಸಂ

ಶ್ರೀಯಂ ಧರೆ ಪೊಗೞ್ವಿನೆಗಂ
ನ್ಯಾಯಾರ್ಜಿತಮೆನಿಸಿ ಪಡೆದು ತಕ್ಕಡಗಱೆದೊ
ಲ್ದೀಯುತ್ತುಮಮಲಕೀರ್ತಿ
ಶ್ರೀಯನುಪಾರ್ಜಿಸಿದುದಾತ್ತನಭಿನವಪಂಪಂ ೧

ಈ ವಲ್ಲಭನಂ ಪಡೆದ ಮಂ
ಹೀವಲ್ಲಭೆ ನೋಂತಳೆನಿಸಿದರಿನೃಪಮದವಿ
ದ್ರಾವಣವಿಜಯಭುಜಂ ವಸು
ಧಾವಿಶ್ರುತನೃಪಗುಣಾಶ್ರಯಂ ವೈಶ್ರವಣಂ ೨

ಆಶ್ರಯಮಿದೊಂದೆ ಸಾಮ್ರಾ
ಜ್ಯಶ್ರೀಗೆಂದಧಿಕಧರ್ಮಪರನಾದಂ ವ
ರ್ಣಾಶ್ರಮಶಿಕ್ಷಾಪ್ರವಣಂ
ವೈಶ್ರವಣಂ ಧರ್ಮಶಾಸ್ತ್ರದತ್ತಶ್ರವಣಂ ೩

ಪಡೆವಡೆಯೊಳ್ಪಡೆದುಂ ಕುಡು
ವೆಡೆಯೊಳ್ಕೊಟ್ಟುಂ ಜನಾನುರಾಗಮನರಸಂ
ಪಡೆದುಮಣಂ ತಣಿಯದೆ ಕ
ಣ್ಬಡೆದಂ ನೀತಿಗೆ ಜಸಕ್ಕೆ ಜೀವಂ ಬಡೆದಂ ೪

ಅವಿರುದ್ಧಮಿದೆಂಬಿನಮನು
ಭವಿಸುವನಿಂದ್ರಿಯಸುಖಂಗಳಂ ಮಱೆದುಂ ಮೀ
ಱವು ತನ್ನನವೆಂಬನ್ನೆಗ
ಮವನೀಶ್ವರನಪ್ಪುಕೆಯ್ದನಿಂದ್ರಿಯಜಯಮಂ ೫

ಅತಿನಿಶಿತಮತಿ ಹಿತಾಹಿತ
ವಿತರ್ಕನಿಪುಣಂ ಸಮಸ್ತಸಾಹಿತ್ಯಕಲಾ

ಸತಿರಮಣಂ ವೈಶ್ರವಣಂ
ಶ್ರುತನಾದಂ ಭೂಪರಿನ್ನರಾರೆಂಬಿನೆಗಂ ೬

ರಾಜಸ ಸಾತ್ವಿಕಮೆಂಬೀ
ರಾಜಗುಣಂ ವಿಷವಿಷಾಪಹಾರಂಗಳವೊಲ್
ರಾಜಿಸ ವಿಷಮೋರಗನಂ
ತೀ ಜನತೀತಳಮನಾಂತನವನೀಕಾಂತಂ ೭

ಗೆಲಲಾಱವೆ ಕಾಮಕ್ರೋ
ಧಲೋಭಮದಮಾನಹರ್ಷಮರಿಷಡ್ವರ್ಗಂ
ಗೆಲಲೋರ್ವನೆ ನೆಱೆವನೆ ರಿಪು
ಲಲನಾವೈಧವ್ಯದಿವ್ಯದೀಕ್ಷಾಗುರುವಂ ೮

ತನ್ನ ಸಿರಿ ತನ್ನ ವಿಭವಂ
ತನ್ನುನ್ನತಿ ತನ್ನ ಪರಿಜನದೊಳ್
ಸನ್ನಿಹಿತಮಾಯ್ತು ತಕ್ಕುದೆ
ಪೊನ್ನಾಗವೆ ಪೊರ್ದಿ ಪರುಷಮಂ ಲೋಹಂಗಳ್ ೯

ನೃಪರತ್ನಂ ದಾನದಿಂ ಲುಬ್ಧರನುಸಯದಿಂ ಕ್ರುದ್ಧರಂ ಯುದ್ಧದೊಳ್ಮಾ
ನ್ನಪಮಾನಂ ಬೆತ್ತರಂ ಮನ್ನಣೆಯಿನಭಯವಾಗ್ವೃತ್ತಿಯಂ ಭೀತರಂ ಭೃ
ತ್ಯಪದಪ್ರಸ್ಥಾನದೊಳ್ ಯೋಜಿಸಿ ತನಗೆ ವಶಂಮಾಡಿ ತಾಂ ತಾಳ್ದಿದಂ ತ
ನ್ನ ಪೆಸರ್ತನ್ನಾಣೆ ತನ್ನುನ್ನತಿ ಪಸರಿಸೆ ತನ್ನನ್ನರಾರೆಂಬ ಪೆಂಪಂ ೧೦

॥ ಅಕ್ಕರವೃತ್ತ ॥
ಅನುಪಲಬ್ಧದೊಳಜಿತಮಂ ಮೆಱೆದುಪಲಬ್ಧದೊಳ್ನಿಶ್ಚಯಗ್ರಾಹಿಯಾಗಿ
ತನಗೆ ನಿಶ್ಚಿಂತದೊಳ್ ಬಳಾಬಳಚಿಂತೆ ಬಗೆವುಗದರ್ಥಂದ್ವೈಧಮಾಗ
ಮನದ ಸಂಶಯಮಂ ಪರಿಚ್ಛೇದಿಸಿ ಕಾರ್ಯಾಂಶ ವಿಶೇಷಾರ್ಥಮಂ
ನೆನೆದು ತಿಳಿದಾಧರಾಧೀಶ್ವರಂ ಮಂತ್ರಶಕ್ತಿಗೆ ಜನ್ಮಭೂಮಿಯಾದಂ ೧೧

॥ ಪೃಥ್ವೀವೃತ್ತ ॥
ಧರಾವಿವರವರ್ತಿ ಶೇಷನಿಳೆಯಂ ಗಡಂ ತಾಳ್ದಿದಂ
ವಿರುದ್ಧಮೆನೆ ರಾಷ್ಟ್ರಕಂಟಕರನೆಯ್ದೆ ಕಿಟ್ಟಿಂ ನೃಪಂ
ಹಿರಣ್ಯಧನಧಾನ್ಯ ಕೃಷ್ಯ ಫಲವೃಷ್ಟಿಸಂಪೂರ್ಣಮಂ
ಧರಾವಳಯಮಂ ಪ್ರಚಂಡಭುಜದಂಡದೊಳ್ತಾಳ್ದಿದಂ ೧೨

ಕೂರಸಿಯಂ ಪೊರ್ದಿದ ಜಳ
ಧಾರೆಯುಮತಿ ತೀಕ್ಷ್ಣಮಪ್ಪವೊಲ್ಗಂಡಗುಣಂ
ವೀರಶ್ರೀಗಾದುದು ನೃಪ
ವೀರಭುಜೋತ್ಖಾತ ಖಡ್ಗ ಧಾರಾಶ್ರಯದಿಂ ೧೩

ಬಿರುದಿನ ಬೀರದ ಪೆಸಱ
ಕ್ಕರಮಂ ಪರನೃಪರ ಮೆಯ್ಯ ಪುಣ್ಗಲೆಗಳ ಪೋ
ಲ್ತಿರೆ ತೋಳ್ವಲಕ್ಕೆ ಪಡೆದಂ
ನರಶಾಸನಮಂ ನರೇಂದ್ರ ಚೂಡಾರತ್ನಂ ೧೪

ಧರಣೀರಕ್ಷಣಮಂತ್ರಾ
ಕ್ಷರಮಂ ವಿದ್ವಿಷ್ಟಸೈನ್ಯಮಾರಣಮಂತ್ರಾ
ಕ್ಷರಮಂ ಪೊನ್ನೊರೆಯಿಂದಂ
ಬರೆದಂತಾನೃಪನ ತೋಳ ಬಾಳ್ವೊಗರೆಸೆಗುಂ ೧೫

ದ್ಯುಮಣಿದ್ಯುತಿ ಕುಮುದಕ್ಕಂ
ಕಮಲಕ್ಕಂ ಮಾಡುವಂತೆ ಸಂಕೋಚವಿಕಾ
ಸಮನೇಕಸಮಯದೊಳ್ ಶ
ತ್ರುಮಿತ್ರಮಂಡಲಕೆ ಮಾಱ್ಪುದಾತನ ತೇಜಂ ೧೬

ಸಮದವಿರೋಧಿವಾಹಿನಿಯ ಜೀವನಮಂ ತವೆ ಪೀರ್ದಿಳಾವಧೂ
ರಮಣನ ತೇಜಮಂಜ್ವಲಿಸಿವತ್ತು ಸಮುದ್ರಮೊಳಿಕ್ಕಿ ಮೆಟ್ಟಿವಿ
ದ್ರುಮಲತೆಯಂ ದಿಶಾವಳಯದೊಳ್ ದಿಗಧೀಶಕಿರೀಟರತ್ನ ಪೀ
ಠಮನಪರ್ದೇಱೆ ದಾರುಣವರಿಕ್ಷ ಯಸಾಧ್ಯನವಾಂಬುಧಾರಣಂ ೧೭

ಜಾತುರ್ದಂತಬಲಕ್ಕೆ ಲೆಕ್ಕಮಸಿಸಂಘಾತಕ್ಕೆ ವಿದ್ವಿಷ್ಟಸಂ
ಘಾತಂ ಕೀರ್ತಿಗೆ ದುಷ್ಟವೇಶವಿಷಯಂ ಮಿತ್ರಾವನೀಮಂಡಳ
ಕ್ಕಾತಂಕಂ ಶರಣಾಗತಂಗೆ ಭಯಮಿಲ್ಲೆಂಬೀ ನಿಜಖ್ಯಾತಿಯಿಂ
ಮಾತೇಂ ಷೋಡಶರಾಜರೊಳ್ದೊರೆಗೆ ವಂದಂ ರಾಜವಿದ್ಯಾಧರಂ ೧೮

ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ ನಿ
ಶ್ಚಳಧೈರ್ಯಾಲಂಬಮಾಗಿರ್ದವನಿಪತಿಯ ಹೃತ್ಸಂಗದಿಂದಂ ತಟಿಚ್ಚಂ
ಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಱಿದತಿಸ್ಥೈರ್ಯಮಂ ತಾಳ್ದಿದಳ್ ಕೇ
ವಳಮೇ ಸತ್ಸಂಗಮುತ್ಸಾರಿತಸಕಲಜನಸ್ವಾಂತದೋಷಾನುಷಂಗಂ ೧೯

ಅವಿಚಲಮಪ್ಪ ಲಕ್ಷ್ಮಿ ವಿವಿಧೋತ್ಕರಹೃದಯಮೆನಿಪ್ಪ ವಿದ್ಯೆ ನೋ
ಟ್ಟವರನುರಾಗಮಂ ಪಡೆವ ರೂಪುಮನೋಹರಮಪ್ಪ ಯೌವನಂ
ಭುವನತಳಪ್ರಸಿದ್ಧಮೆನಿಪನ್ವಯಮಾನೃಪನಲ್ಲಿ ತೋಱಲಾ
ಱವು ಮದಮಂ ವಿವೇಕಪರಿಪೂರ್ಣನನೇನಿವು ಮೀಱಲಾರ್ಪುವೇ ೨೦

ವ॥ ಅಂತೆನಿಸಿದ ರಾಜಸರ್ವಜ್ಞಂ ತನ್ನ ವಿತರಣಗುಣಮಣಿಸ್ತಂಭದೊಳ್ ಕೀರ್ತಿಪತಾಕೆ ನರ್ತಿಸೆಯುಂ ತನ್ನ ಚಾರುಚರಿತ್ರಸುಧಾವರ್ಷದೊಳಗಣ್ಯಪುಣ್ಯ ಪ್ರವಾಹಮುದಿತೋದಿತಮಾಗೆಯುಂ ತನ್ನಮೋಘವಾಕ್ಯಮಾಣಿಕ್ಯಮರೀಚಿಯೊಳ್ಜನಾನುರಾಗಮಪರಿಮಿತಮಾಗೆಯುಂ

ನಿಲೆ ನಿಜ ವಕ್ಷಸ್ಥಲ ವ
ಜ್ರಲೇಪವಿಪುಲೋಪಲಪ್ರದೇಶದೊಳೆಂದುಂ
ತೊಲಗದೆ ಸಾಮ್ರಾಜ್ಯಶ್ರೀ
ಲಲನೆ ನರೇಂದ್ರಂ ಸುರೇಂದ್ರನಂ ಗೆಲೆವಂದಂ ೨೧

ವ॥ ಅಂತವಿಶ್ರಾಂತ ಶ್ರೀಯನಪ್ಪುಕೆಯ್ದು ರವಿಮಂಡಲಮಂಡನೆಯುಂ ಚನ್ದ್ರಬಿಂಬಸುಭಗೆಯುಂ ನಕ್ಷತ್ರಮಾಲಾಮನೋಹರೆಯುಮೆನಿಸಿ ಮದೋದ್ಧತಮಕುಟಬದ್ಧಚೂಡಾಮಣಿಕಿರಣಚರಣಾಲಕ್ತಕರಾಗಮುಂ ಸೀತಾತರಂಗಿಣೀ ತರಂಗೋತ್ತರೆಯುಂ ನೀಲಾಚಲವಿಚಿತ್ರರತ್ನಕಟಕಮುಂ ವಕ್ಷಾರ ಶಿಖರಿಶೇಖರಮುಂ ತನಗೆ ಸಹಜಾಭರಣಮಾಗೆ ವೈರಿತರುಪರಶುಧಾರೆಯುಮನ್ಯ ರಾಜನ್ಯ ಕೋಪಾನಲಜಲಧಾರೆಯುಮಾದ ನಿಜಾಜ್ಞಾಲಕ್ಷ್ಮಿಯ ಮೇಲೆ ವಸುಂಧರಾ ಭಾರಮಂ ನಿಲಿಸಿ ಸುಖದಿನಿರೆ

ಪೊತ್ತು ಧರೆಯುಂ ಗುರುತ್ವಂ
ಬೆತ್ತಾಜ್ಞಾಲಕ್ಷ್ಮಿ ನೆಲಸೆ ನೆತ್ತಿಯೊಳತ್ಯು
ದ್ವೃತ್ತನೃಪರೆಜಗಿದರ್ ಭೂ
ಪೋತ್ತಮನಡಿಗಧಿಕಭಾರಮೆಜಗಿಸದಾರಂ ೨೨

ಧರಿಯಿಸೆ ತನ್ನಾಜ್ಞೆ ವಸುಂ
ಧರೆಯಂ ಧರೆ ತಾಳ್ದೆ ತನ್ನ ವಿಶದ ಯಶೋ ವ
ಲ್ಲರಿಯಂ ವಿದ್ವದ್ಗೋಷ್ಠೀ
ನಿರತಂ ಸುಖಸಂಕಥಾವಿನೋದದೊಳಿರ್ದಂ ೨೩

ವ॥ ಅಂತು ನಿಖಿಲವಿದ್ಯಾನಿಧಾನನಾರ್ಯಜನಸಪರ್ಯೆಯೊಳಂ ಸರಸಕಾವ್ಯಾಮೃತಾಸ್ವಾದನದೊಳಮನವದ್ಯರಾಜವಿದ್ಯಾವಿನೋದದೊಳಂ ನಿರ್ಮಲಧರ್ಮಶಾಸ್ತ್ರತತ್ತ್ವಶ್ರವಣದೊಳಮಸಾಧಾರಣಶಸ್ತ್ರಶಾಸ್ತ್ರಪ್ರಕಟನದೊಳಂ ಸುಜನಸುಭಾಷಿತಾ ಕರ್ಣನದೊಳಮ

ಪರಿಮಿತವಿತರಣವಿಲಾಸದೊಳಂ ಸುಭಟಕಟಕವೀರಾಳಾಪಗೋಷ್ಠಿಯೊಳಂ ಅಪ್ರತಿಮಲ್ಲಮಲ್ಲಯುದ್ಧಾಲೋಕನದೊಳಂ ಕರಿಕಳಭಕೇಳೀವಿಲೋಕನದೊಳಂ ವಿಷಮವಾಹನವಲ್ಗನಶಿಕ್ಷಾವಸರದೊಳಂ ಸರಸಗಾಯನೀಗೀತರಸಪ್ರವಾಹಾವ-ಗಾಹದೊಳಂ ವಿದಗ್ಧವಾದಕವಾದ್ಯವಿದ್ಯಾಪರೀಕ್ಷೆಯೊಳಂ ರಸಾಭಿನಯಸುಭಗನರ್ತ-ಕೀನರ್ತನನಿರೀಕ್ಷಣದೊಳಂ ದಿವಸಕ್ಷಣಂಗಳನೇಕಮಾಗಿಯುಮೇಕಕ್ಷಣವಂತೆ ತನಗೆ ನಿರಂತರೋತ್ಸವಮನೊದವಿಸುತ್ತುಮಿರ

ಕುಮುದಿನಿಗೆ ಶಿಲೀಮುಖಮೆಱ
ಪ ಮಾೞ್ಕೆಯಿಂ ಚಂದ್ರನುದಯದೊಳ್ತರುಣಿಯರಂ
ಸುಮನಶ್ಶಿಲೀಮುಖಂ ಮುಸು
ಱಿ ಮುತ್ತಿದುವು ನೃಪನ ಪೊೞ್ತುಪೊಸಜವ್ವನದೊಳ್ ೨೪

ತರುಣಿಯರಾವಿಲಾಸಕುಸುಮಾಸ್ತ್ರನಿರೀಕ್ಷಿಸೆ ಕಾಮತಾಪದಿಂ
ತರುಣಮೃಣಾಳಮಂ ತೆಗೆದು ಪೂಗೊಳದಿಂ ಪೊಱಗಿಕ್ಕಿದಂದದಿಂ
ಕೊರಗಿ ಮೃಣಾಳನಾಳಿಕೆಗ ಚಂದನದಗ್ಗಿಗೆ ತಣ್ಪುಳಿಲ್ಲ ತ
ಣ್ಣಿರಗದ ಸೂಸುನೀರ್ಗೆ ಕೊಳವೇಗೊಡದಲಂ ಗುಱಿಯಾಗೆ ಮಾಡುವರ್ ೨೫

ಪದವಿಲ್ಲಿಂದಪ್ಪುದೇನೆಂದುಡಿದು ಪಿಡಿದವೈದಂಬುಮಂ ಮಾಣದೀಡಾ
ಡಿದನೀರಾಜೇಂದ್ರಸೌಂದರ್ಯಮೆ ನೆರಮಬಳಾಚಿತ್ತಸಂಮೋಹನಕ್ಕಾ
ವುದಮಿಂ ಪೇೞೇವುದೆಂದುನ್ಮದಮಧುಕರ ಝೇಂಕಾರಮಂ ಕೌಮುದೀಸಂ
ಪದಮಂ ಪುಂಸ್ಕೋಕಿಲಾಲಾಪಮನಲೆವೆಲರಂ ಬಾರ್ತೆಗೆಯ್ಯಂ ಮನೋಜಂ ೨೬

ಲಲನಾಸ್ವರ್ಣಘನಸ್ತನೋಲ್ಲಸಿತಲಾವಣ್ಯಾಮೃತಸ್ನಾನಮಂ
ಗಲಮಂ ಮುಖ್ಯಮನಂದೊಡರ್ಚೆ ನೃಪಸೌಂದರ್ಯಕ್ಕೆ ಮುಂದಿಟ್ಟು ತ
ನ್ನಲರ್ವಿಲ್ಲಂ ನಿಜರಾಜ್ಯ ಚಿಹ್ನಸಹಿತಂ ಸಾಮ್ರಾಜ್ಯಮಂ ಮೂಱು ಸೂ
ೞ್ತಿಲವಂದರ್ಘ್ಯ ಮನೆತ್ತಿ ಮನ್ಮಥನೃಪಂ ಕೊಟ್ಟಂ ಮಹೋತ್ಸಾಹದಿಂ ೨೭

ವನಿತಾವಶ್ಯಾಂಜನಕ್ಕೇೞೆದಿ ಕೆಯನಬಲೋನ್ಮಾದಚೂರ್ಣಕ್ಕ ಸತ್ಕೀ
ರ್ತನಮಂ ಕಾಂತಾಮದೋಚ್ಚಾಟನಮನಸಿಜಮಂತ್ರಕ್ಕೆ ಕುಂದಂ ವಧೂಟೀ
ಜನನೇತ್ರಾಕರ್ಷಣಾಲೇಪನಕಪಜಯಮಂ ಮಾನಿನೀಚಿತ್ತ ಸಂಮೋ
ಹನರೂಪ ಕ್ಕೆಗ್ಗನುತ್ಪಾದಿಸುವುದು ನೃಪರೂಪಂ ಜನಾಶ್ಚರ್ಯರೂಪಂ ೨೮

ವ|| ಅಂತೆನಿಸಿದ ಮನುಜೇಂದ್ರಚಂದ್ರನ ಗಂಡಗಾಡಿಯುಂ ನೋಡಿ ಕಣ್ಪೇಟದ ತೋಟಿಯೊಳ್ತೊಡರ್ದು ದುಸ್ಸಹವಿರಹಪರಿತಾಪಕ್ಕಳಿವನದುರ್ಗಮಂ ಪುಗುವಂತೆ ಲತಾಗೃಹವನಂಗಳಂ ಪೊಕ್ಕು

ತನುವಲ್ಲದ ತನುತಾಪಂ
ತನುವಂ ಸುಡೆ ನಿನಿಸಲೆಂತುಮಾಱದೆ ತನುವಂ
ತನುಮಧ್ಯೆಯರ ಲರ್ವಾಸಿನ
ನನೆವಾಸಿನ ಮೇಲೆ ಪಾಸಿದರ್ ತನುತನುವಂ ೨೯

ವ॥ ಅಲ್ಲಿ ಕೆಲರ್ ನಿಜಚರಣಮಣಿನೂಪುರಕ್ವಣಿತಮಂ ಪೆಣ್ಣಂಚೆಯಿಂ ಚರಮೆಗೆತ್ತಳಸುವ ರಾಜಹಂಸನಂ ಕಂಡು ಕನಲ್ದು

ಒದವಿದಲಂಪಿನಿಂ ನಡಪಿದೆನ್ನನುಪೇಕ್ಷಿಸಿ ರಾಜಹಂಸನಾ
ಮದ ದೊರೆವೆತ್ತ ಪೆಂಪುಭಯಪಕ್ಷವಿಶುದ್ಧತೆ ಪುಂಡರೀಕಷಂ
ಡದ ಸಿರಿ ನಿನ್ನೊಳಂ ನೃಪನೊಳಂ ಸಮಮೆಂದು ಮರಾಳ ಪಕ್ಷಮ
ಪ್ಪುದೆ ಪೞೆ ಪೊರ್ದದಂತು ಪರಿಭಾವಿಪುದಾತ್ಮಕೃತೋಪಕಾರಮಂ ೩೦

ವ॥ ಮತ್ತಮಲ್ಲಿ ಕೆಲರುತ್ಫಲ್ಲಮಲ್ಲಿಕಾವಲ್ಲರಿಯಂ ನೋಡಿ

ನಿನ್ನನೆ ನಚ್ಚಿ ನಿನ್ನರಲ ಬಾಣಮನರ್ಚಿಪ ಪುಷ್ಪಬಾಣನಂ
ತನ್ನ ವಿಲಾಸದಿಂ ಪರಿಭವಕ್ಕೆಡೆಮಾಡಿದನೆನ್ನ ನಲ್ಲನಾ
ಬನ್ನಮನಾತನೊಳ್ನೆಱಪಲಾಱದನಾಥೆಯೆನೆಂದಱಲ್ದು ನೀ
ನೆನ್ನ ಮನಕ್ಕೆ ಮಾಡುವುದೆ ಮಲ್ಲಿಗೆ ಕೆಮ್ಮನೆ ತೀವ್ರ ತಾಪಮಂ ೩೧

ವ॥ ಮತ್ತಮಲ್ಲಿ ಕೆಲರೆಳಮಾವಿನ ಸೆಳೆಗೊಂಬನೇಱೆ ಬಗ್ಗಿಸುವ ಗಂಡುಗೋಗಿಲೆಗೆ ಕೆಯ್ಗಳಂ ಮುಗಿದು

ಬಸಮೞಿವಿನೆಗಂ ಮನಸಿಜ
ನಿಸೆ ನಿನ್ನ ಕೆಲಕ್ಕೆ ವಂದೊಡೆನ್ನಂ ಬಿಡೆ ಬ
ಗ್ಗಿಸೆ ಮಧುವಿಕಾರಿ ಕೋಗಿಲೆ
ಕಿಸುಗಣ್ಣುವೆ ನೀಂ ವಿಜಾತಿಯೊಳ್ಗುಣಮುಂಟೇ ೩೨

ವ॥ ಮತ್ತಮಲ್ಲಿ ಕೆಲರುನ್ಮದಮಧುಕರ ನಿಕರ ನಿನಾದಕ್ಕಾದಮಱಲ್ದು

ಪೊಸಮಲ್ಲಿಗೆಗಳ ತಿಳಕ
ಪ್ರಸರದ ಕಂಪಿಂಗೆ ಬಸನಿಗಂ ನೀನೆಂ ದಾ
ದೆಸೆಯನಣಂ ನೋಡಲ್ಲಂ
ಕಿಸುವೆನಗೆ ಮದಾಳಿ ಅಕ್ಕಟಂ ಪಲ್ಮೊರೆವಾ ೩೩

ವ॥ ಎಂದು ಪಲತೆರದಿಂ ಪಲುಂಬುವ ನಿತಂಬಿನಿಯರ ವಿರಹವಿಧುರನಾದವಮೆ ಸೌಭಾಗ್ಯಯಶಃಪಟಹನಾದಮಾಗೆಯುಮವರ ದೂದವಿಯರ ಲಲ್ಲೆವೆರಸಿದ ಮೆಲ್ನುಡಿಯೆ

ಕರ್ಣಪೂರಮಾಗೆಯುಮೋರೊರ್ಮೆತಾರಾಂತಃಪುರಪರೀತನಾಪ ಚಂದ್ರನಂತೆ ಮನುಜೇಂದ್ರ ಚಂದ್ರನಂತ ಪುರಪುರಂಧ್ರೀಪರಿವೃತಂ ಪರಿಹಾರಕುಶಲನರ್ಮಸಚಿವ ವಚನ ಪ್ರಾಗಲ್ಭ್ಯದರಸ್ಮಿತಮುಖಾರವಿಂದನೋಲಗದೊಳಿರ್ದು

ನೆವದಿಂ ಪಱುವ ಮುತ್ತಿನೆಕ್ಕಸರಮಂ ಜೋಲ್ದಿರ್ದುವೆಂಬಂತೆ ಸಾ
ಱುವ ಕರ್ಣೋತ್ಪಲಮಂ ತೊಡಱುವುಗುರಂ ನೋಟ್ಪಂದದಿಂ ಪಾಣಿಪ
ಲ್ಲವಮಂ ಕೆಂದಳದಿಂದಮಱುವಳಿಪಂ ವ್ಯಾಜೋಕ್ತಿಯಿಂದಂ ನಿಮಿ
ಱುವತಿಪ್ರೌಢೆಯ ಪೊರ್ದುವಾಸೆಗೆ ನೃಪಂ ರೋಮಾಂಚಮಂ ತಾಳ್ದಿದಂ ೩೪

ವ॥ ಮತ್ತಮೋರೊರ್ಮೆ

ಎಂದುದನೆಂದು ಕಾಲ್ವಿಡಿದಗಲ್ಕೆಗೆ ಬೆಱೆ ಲತಾಂಗಿ ತಾಂಗ ಮ
ತ್ತೊಂದಿರುಳುಂ ನೃಪಂ ಪೆಱರ ಸೂೞ ದಿನಂ ಮಱೆದಿರ್ದು ಸೂೞ್ತಿಡಂ
ಬಂದಳಸೂೞ್ಗೆವಂದು ಬಿಡೆ ಪೊಯ್ವುಡೆವಂ ಬಿಡುತರ್ಪ ಕಣ್ಣನೀ
ರ್ದಂದಲ ಬಳ್ಕೀ ಮಿಂಚಿನೆ ಪಳಂಚುವ ಲೋಲಕಟಾಕ್ಷಮಾಲೆಯಿಂ ೩೫

ವ॥ ಮತ್ತಮೋರೊರ್ಮೆಗೃಹವನಲತಾಗೃಹಂಗಳೊಳ್

ಪುರುಡಿಸಿ ಮುಗ್ಧೆ ತಾಂ ಮುಳಿದು ಭೂಪತಿಗಾಂ ಪೞಿ ಕೆಯ್ವೆನೆಂಬ ವಿ
ಸ್ಮರಣೆ ಮನಕ್ಕೆ ಪುಟ್ಟೆ ಚರಣಾಂಬುರುಹಕ್ಕೆಱಗಿರ್ದೊಡಾತನೂ
ದರಿಯೊಲವಿಂಗೊಱಲ್ದು ತೆಗೆದಪ್ಪಿ ವಿಶಾಲನಿತಂಬಶೈಲ ನಿ
ರ್ಝರಮೊಸರ್ವಂದಲಂಪುಮಿಗೆ ಚುಂಬಿಸುವಂ ವದನಾಂಬುಜಾತಮಂ ೩೬

ವ॥ ಅದಲ್ಲದೆಯುಮೋರೊರ್ಮೆ ನಿಜಮನೋಜಕೇಳೀನಿಲಯದೊಳ್

ಕೆದಱಿದ ಕುಂತಲಂಬಿಡಿದು ಮುತ್ತುಗಳಂ ಮಱೆದುಂಬಿ ಕಾಱುವಂ
ದದಿನುಗೆ ಘರ್ಮಬಿಂದು ಮಗುಳ್ದುಂ ಲಲಿತಾಂಗಿಯರಾಸೆವಟ್ಟೆ ನೋ
ಟದ ಪೊಳಪೆಂಬ ಬಿಜ್ಜಣಿಗೆಯಿಂ ನೃಪನಾಱಿಸುವಂ ಮುಖಾರವಿಂ
ದದ ಮಕರಂದಸುಂದರಪರಿಶ್ರಮಕೀಕರಮಂ ರತಾಂತ್ಯದೊಳ್ ೩೭

ವ॥ ಅಂತು ನಿರತಿಶಯ ವಿಷಯ ಸುಖಸುಧಾರಸಾಸ್ವಾದನಮೆ ತನಗೆ ವಿನೋದಮಾತ್ರಮಾಗೆ

ಎರಡುಂ ಪಕ್ಕದ ವಜ್ರವೇದಿಕೆಗಳಂ ಮೆಯ್ವೆರ್ಚಿಯುಂ ಕ್ಷೀರಸಾ
ಗರಮುಲ್ಲಂಘಿಸದಂತೆ ಪೆರ್ಚುವಡೆದುಂ ಧರ್ಮಾರ್ಥಮಂ ಕಾಮರಾ
ಗರಸಂ ಮೀಱದೆ ಚಿತ್ತವೃತ್ತಿಗದು ಲೀಲಾಮಾತ್ರಮಾದೆಂತೆನಲ್
ಧರಣೀನಾಥನ ವಕ್ರವಿಕ್ರಮಘನಂ ಭೂಚಕ್ರಮಂ ತಾಳ್ದಿದಂ ೩೮

ವ॥ ಅಂತನಿಸಿದ ಮನುಜೇಂದ್ರಚಂದ್ರಂಗೆ ಚಂದ್ರಿಕಾಲಕ್ಷ್ಮಿಯುಂ ವಿವೇಕವಿದ್ಯಾಧರಂಗೆ ವಿದ್ಯಾಲಕ್ಷ್ಮಿಯುಂ ವಿನಯಾರ್ಣವಂಗೆ ವೇಳಾವನಲಕ್ಷ್ಮಿಯುಂ ವಿಕ್ರಾಂತಕಂಠೀರವಂಗೆ ವೀರಲಕ್ಷ್ಮಿಯುಮೆನಿಸಿ ತನ್ಮಹೀಪಾಲನ ವಿಶಾಲ ವಕ್ಷಸ್ಥಳಕ್ಕರಡನೆಯ ಲಕ್ಷ್ಮಿಯಾದ ಮಹಿಮೆಯಿಂ ಲಕ್ಷ್ಮೀಮಹಾದೇವಿಯೆಂಬ ಸಕಲಕಲ್ಯಾಣಾಭಿರಾಮನಾಮಮುಮಂ ಧನಶ್ರೀಯೆಂಬ ಜನ್ಮನಾಮಮುಮಂ ತಳೆದು

ನಿರತಿಶಯಮೆನಿಪ ರೂಪಿಂ
ನಿರುಪಮಲಾವಣ್ಯಲಕ್ಷ್ಮಿಯಿಂ ನಿಖಿಲಕಲಾ
ಪರಿಣತೆಯಿಂದೆಣ್ಬಾಸಿರ
ಮರಸಿಯರೊಳ್ಪಡೆದಳಗ್ರಮಹೀಷೀಪದಮಂ ೩೯

ವ॥ ಆ ಸಕಲಗುಣರತ್ನಜನ್ಮಭೂಮಿಯೆನಿಪ ಲಕ್ಷ್ಮೀಮಹಾದೇವಿ ಕಮಳಿನೀ ಲಕ್ಷ್ಮಿಯಂ ಜಡಾಶಯ ನಿವಾಸಿಯೆನಿಸಿಯುಂ ವಸಂತಲಕ್ಷ್ಮಿಯಂ ಮದಾಳಿಮಲಿನೆಯೆನಿಸಿಯುಂ ಘನಾಘನಲಕ್ಷ್ಮಿಯಂ ತಟಿಲ್ಲತಾಸಾಂಚಲೆಯೆನಿಸಿಯುಂ ಇಂದು ಲೇಖಾಲಕ್ಷ್ಮಿಯಂ ವಕ್ರಸ್ವಭಾವೆಯೆನಿಸಿಯುಂ ನಕ್ಷತ್ರಲಕ್ಷ್ಮಿಯಂ ದೋಷಾನುಷಂಗೆಯೆನಿಸಿಯುಂ ಸುರತ-ರಂಗಿಣೀ ಪ್ರವಾಹಲಕ್ಷ್ಮಿಯುಂ ಸ್ವಭಾವ ಮುಖರೆಯೆನಿಸಿಯುಂ ಅಮರಚಾಪಲಕ್ಷ್ಮಿಯಂ ಗುಣರಹಿತೆಯೆನಿಸಿಯುಮಾಕೆ ತನ್ನಮದಾಳಿನೀಳ ಕುಂತಳದೊಳ್‌ಕುಟಿಲಸ್ವಭಾವಮಂ ವಿಭ್ರಮಭ್ರೂಲತೆಯೊಳ್ ವಕ್ರಗುಣಮಂ ಪೊಸಮುತ್ತಿನ ಪೊಳೆಪನೆಜೆಪ ದಂತಕಾಂತಿ-ಯೊಳ್ ಚಂಚಲತ್ವಮಂ ಪಲ್ಲವಾಧರದೊಳಧಿಕರಾಗಮಂ ಘನಸ್ತನದೊಳತಿಕರ್ಕಶತ್ವಮ-ನಸಿಯ ನಡುವಿನೊಳಲ್ಲಾಟಮನುತ್ತುಂಗನಿತಂಬದೊಳುದ್ವೃತ್ತತೆಯಂ ಪೂಗಣೆಯ ದೊಣೆಗೆ ಮೆಯ್ದೊಣೆಯೆನಿಪ ಕಿಜುದೊಡೆಯೊಳ್ ನೀಚತೆಯಂ ತಳೆದು

ಮನಸಿಜನಿವಳಂ ಕುಳಿರ್ವ ಮ
ರ್ದಿನ ರಸದೊಳಮರಲ ಸರಲ ಕೂರ್ಪಿನೊಳಂ ಪೋ
ಜನಿಯಿಸಿದಂ ಸಂದಯಮೇ
ನೆನಿಸಿದಳಾರಮಣಿ ಗುಣದೊಳಂ ರೂಪಿನೊಳಂ ೪೦

ರತಿ ಕಂದರ್ಪನ ಚಿತ್ತಮಂ ಪಡೆದಳೆಂಬೀಗರ್ವದಿಂ ಸುಂದರಾ
ಕೃತಿಯೊಳ್ ಬಿಜ್ಜಿನೆ ಬೀಜಿ ರೂಪಮದಮಂ ಪೋಪಿಂಗಿಸಲ್ಪದ್ಮಜಂ
ಪ್ರತಿರೂಪಂ ಪಡೆದಿಟ್ಟ ನಾಕೆಗುಟಿವಂದಿಂ ತಕ್ಕುಮೆ ರೂಪಮ
ಪ್ರತಿಮಂ ಕಾಂತೆಯರ್ಗಂಬೊಡೇವೊಗಜ್ವಿನಾಂ ಲಕ್ಷ್ಮೀಮಹಾದೇವಿಯಂ ೪೧

ಆಕಾಂತೆಯ ಮೃದುಪದತಳ
ಕೋಕನದಂ ತನ್ನರುಚಿಯಿನೊದವಿಸೆ ರಾಗೋ

ದ್ರೇಕಮದೆಂತು ರಕ್ತಾ
ಶೋಕದ ತಳಿರೊಳ್ವಿರಾಗಮಂ ಪುಟ್ಟಿಸುಗುಂ ೪೨

ಲಲಿತಲತಾಂಗಿಯ ಚರಣಾಂ
ಗುಲಿಯೊಳ್ ಕಣ್ಗೊಳಿಸುವುಗುರ್ಗಳರುಣಾಂಬುಜದು
ಳ್ಳಲರೆಸಳ್ಗಳಂಚೆಯೊಳ್ಸಂ
ಚಲಿಸದೆ ಜಲಬಿಂದು ನಿಂದುವೆನೆ ಸೊಗಯಿಸುಗುಂ ೪೩

ಜಡನೆನಿಸನೆ ನನೆಯಂಬಿಂ
ಗೆಡೆಗೊಟ್ಟಂಗಜನ ದೊಣೆಗೆ ತೊಣೆಯೆಂಬನವ
ರ್ಗಡೆಗುಡದ ಲತಾಂಗಿಯ ಕಿಱು
ಮೊಡೆಯಂ ನೋಟಕರ ಕಣ್ಗೆ ಗುಜೆಯೆನಿಸಿದುವಂ ೪೪

ತೊಡೆಯುಂ ಪೊಡೆಯುಂ ದೊರ್ಪಿಂ
ತೊಡೆವಲದಿಂ ಮದನನೆನಿಸಿ ನನೆಯಂಬುಗಳಂ
ತೊಡೆಸಕ್ಕಿ ಮಾಡಿ ಕಾಂತೆಯ
ತೊಡೆ ತೊಡೆದುವು ಕನಕಕದಳಿಕಾವಿಲಸನಮಂ ೪೫

ಪುಳಿನಸ್ಥಳಮಂ ಮಱೆಯಿಸಿ
ತೊಳಗುವ ನಕ್ಷತ್ರಮಾಲೆಯಂತಿರೆ ಮಣಿಮೇ
ಖಳೆ ಮದನಕುಂಭಿ ಕುಂಭ
ಸ್ಥಳಮಂ ನೆನೆಯಿಸುವುದಸಿಯಳಲಘು ನಿತಂಬಂ ೪೬

ಅವಳಿಸಿಯ ಬಾಸೆಯೆಂಬೀ
ನವಯೌವನವನದಲತೆಯ ಲಾವಣ್ಯಜಳ
ಪ್ಲವಮನೊಳಕೊಳ್ವುದೆಂದಾ
ಳವಾಳಮೆನೆ ನಿಮ್ನನಾಭಿ ಮಂಡಲಲಮೆಸೆಗುಂ ೪೭

ಕಾಯ್ದಿಸುವ ಮನೋಜನ ಕ
ನೆಯ್ದಲ ಕೇಸರದ ಮಿಸುಪನಾರಾಚಮೆನಲ್
ಮೆಯ್ದೋರ್ಪಸಿಯಳ ಬಾಸೆಗೆ
ಮೆಯ್ದೊಣೆಯೆಂಬೆನೆ ಮನೋಭವಜ್ವಾಲತೆಯಂ ೪೮

ಅವಯವಮೆ ನಾದಜೂದೆನೆ
ದಿವಿಜೋರಗಖಚರವಧುಗಳಂ ಗೆಲ್ದೊಡವ

ರ್ಕಿವುಗೆಲ್ಲದ ರೇಖೆಗಳೆನೆ
ಕುವಲಯನೇತ್ರೆಯ ವಳಿತ್ರಯಂ ಸೊಗಯಿಸುಗುಂ ೨೯

ಸೆಳೆಗೊಂಬಲ್ಲಾಡುವವೊಲ್
ಫಳಭರದಿಂ ಘನಪಯೋಧರಂಗಳ ಭರದಿಂ
ಸೆಳೆದಲ್ಲಾಡಿಯುಮಾಕೆಯ
ಸೆಳೆನಡು ನೋಡಿದರ ಮನಮನಲ್ಲಾಡಿಸುಗುಂ ೩೦

ಎಸೆವುದು ವಳಿತ್ರಯಂಗಳಿ
ನೆಸೆವಸಿಯಳ ತೆಳ್ವಸಿರ್ಜನಾಲೋಕನಮೀ
ನಸಮುದ್ವರ್ತನದಿಂ ತೆರೆ
ಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ ೩೧

ಮೃಗಲಕ್ಷ್ಮನದೇನೆಂದೀ
ನಗೆಮೊಗದೊಳ್ತೊಡರ್ವನೆಂದು ಹಾರಾಂಶುಗಳಿಂ
ನಗುವಂತ ಬೀಗಿಮೇಗ
ಣ್ಗೊಗೆದಿರ್ಪುವ ತುಂಗಕುಚೆಯ ಕುಚಕಲಶಂಗಳ್ ೩೨

ಪೊಗರ್ವಟ್ಟನತನುಬಾಣದ
ಪೊಗರಂ ನುಣ್ಪುಗರೊಳಿಟಿಸಿ ನೋಡಿದಕಣ್ಣು
ಣ್ಬುಗುಮೆನಿಪನುಣ್ಪನಿಂದೇಂ
ಸೊಗಯಿಸುವುವೊ ಬಾಹುಮೂಲಮಾಕಾಮಿನಿಯಾ ೩೩

ಇರೆ ಕಂಡು ನಾರ್ಪ ಕಂದುವ
ಸಿರಿಸದ ಬಾಸಿಗಮನೆಂತು ಪೋಲಿಸುವೆಂ ಸುಂ
ದರಿಯ ಮನೋಜನ ಪಾಶದೊ
ಳೆರಡೆರಡೆವರಲ್ಕೆ ಸಾಲ್ದ ಭುಜವಲ್ಲರಿಯಂ ೩೪

ಜಲಜಾಕ್ಷನ ನಾಭೀಕಮ
ಳಲಕ್ಷ್ಮಿ ನೆಲಸಿರ್ಪ ದಿನಕರಂ ಪಿಡಿದಿರ್ಪಾ
ಜಲರುಹದೆಸಳಂ ಮೆಚ್ಚದ
ಲಲನೆಯ ಕರತಳಮನೆಳದಳಿರ್ಪೋಲ್ತಪುವೇ ೩೫

[illegible]ಡಿ ಮಿಕ್ಕವು
ಲೆಕ್ಕಮೆ ನಮಗೆಂದು ಮದನನೈದಂಬಿನೊಳಂ

ಬಿಕ್ಕುವ ಸೌಂದರ್ಯಂ ಕೈ
ಮಿಕ್ಕಿರೆ ಕಾಂತೆಯ ಬೆರಲ್ ಬೆರಲ್ಮಿಡಿಯಿಸುಗುಂ ೫೬

ಶೃಂಗಾರಲತಾಮುಕುಳಮ
ನಂಗಯಶಶ್ರೀಕಟಾಕ್ಷಮಾಲಿಕೆ ಪೊಸವೆ
ಳ್ದಿಂಗಳನೆ ಬಿಱೆನಾಡೆ ಮ
ನಂಗೊಳಿಪುವು ಪೂರ್ಣಚಂದ್ರಮುಖಿಯ ನಖಂಗಳ್ ೫೭

ಇದು ಮದನಕಮಲಕಂದಳ
ಮಿದಲ್ತು ಮುಖದರ್ಪಣಕ್ಕೆ ತಂದಿಕ್ಕಿದರ
ನ್ನದ ಪಿಡಿ ಸಂದಯಮೇನೆನೆ
ಸುದತಿಯ ಕಮನೀಯ ಕಂಬುಕಂಧರಮೆಸೆಗುಂ ೫೮

ಸುಲಿಪಲ್ಲ ಪೊಳಪು ದರಹಾ
ಸಲಕ್ಷ್ಮಿಯೊಳ್ಪೆಣೆದು ಪುದಿಯೆ ದುಗುಲದ ಮಱೆಯೊಳ್
ಜಲಜಲಿಪ ರತ್ನದೀಪ
ಕ್ಕಲಗಣೆಸೆನುತಿರ್ಪುದಧರಮರುಣಾಧರೆಯಾ ೫೯

ಕತ್ತರಿಸಿ ಚಂದ್ರಕಳೆಯಂ
ಪತ್ತಿಸಿದಂತೆಸೆವ ಸತಿಯ ಸುಲಿಪಲ್ಪೊಳಪಿಂ
ಮುತ್ತಿನ ವಿಲಾಸಮಂ ಪರಿ
ಮುತ್ತುಗಳೊಳ್ಸಲ್ವುದೆಂಬುದೊಂದಚ್ಚರಿಯೇ ೬೦

ಲಲನೆಯ ಕಪೋಲಮಂ ಪೋ
ಲಲೆಂದು ಕುಸಿದಿಂದ್ರಿಯಂಗಳಂ ಮರಮೊದಲೊಳ್
ನೆಲಸಿ ವನವಾಸದೊಳ್ ನಮೆ
ದೆಲೆವಳ್ಳಿಗಳೆಲೆಗಳೆಂತುಮೇಂ ಪೋಲ್ತಪುವೇ ೬೧

ಪಗೆ ತುಂಬಿಯೊಳ್ ಚಿರಂ ಸಂ
ಪಗೆಗೀಕೋಮಳೆಯ ನಾಸಿಕಾಮುಕುಳಂ ಸಂ
ಪಗೆಯ ಪಗೆ ನಾಸಿಕಾಸುರ
ಭಿಗೆ ಕೆಳೆಯಂ ತುಂಬಿ ಪಗೆಯ ಪಗೆ ಕೆಳೆಯಲ್ತೇ ೬೨

ಗೇಣ್ಗಗ್ಗಳಮೆನಿಪವಳಲ
ರ್ಗಣ್ಗಳಕೊನೆ ಸಾಲ್ವುದಿಲ್ಲ ಕರ್ಬಿನ ಬಿಲ್ಲೊಳ್

ಜಾಣ್ಗಡೆಯೆನೆ ಕಡೆಗಣ್ಣನೆ
ಕಣ್ಗಾದು ಮನೋಜನರಲ ಸರಲಂ ತೊಱೆದಂ ೬೩

ತಾವರೆಗೆ ಮಂಜು ನೀರ್ನಿಂ
ದಾವನಿಮೀಂಗುತ್ಪಳಕ್ಕೆ ಪಗಲೆನ್ನದೆ ಪೇ
ೞ್ದೌವಧುಪಿನಸಲರ್ಗಣ್ಣಸ
ದೇವಣ್ಣಿಸುವೆಂ ದ್ವಿತೀಯಮೋಹನ ಶರಮಂ ೬೪

ವಿಭ್ರಮದಿನಾರ ಬಗೆಗಂ
ವಿಭ್ರಮಮಂ ಮಾಳ್ಪಗುಣದೊಳಂ ಚಿತ್ತಜಚಾ
ಪಭ್ರಾಂತಿಯನಾಕೆಯ ಲಲಿ
ತಭ್ರೂಲತೆವಕ್ರರೂಪದೊಳಮಗ್ಗಳಿಕುಂ ೬೫

ಅವಲೋಕನದಿಂದಾರ್ಗಂ
ಕವಿವೇಟಮನುಂಟುಮಾಡುವಚ್ಚರಿಗೆಡೆಯಾ
ದವಳಸಿಯ ಕರ್ಣಯುಗಳ
ಕ್ಕವತಂಸೋತ್ಪಮೆನಿಪ್ಪುವೆಲ್ಲರ ಕಣ್ಗಳ್ ೬೬

ಎಱಗಿಸುವುದೊಂದೆ ದಿವಸದೊ
ಳೆಱಗಿಸದೀತೆಱದಿನೆಂದುಮೆನಿಪುನ್ನತಿಯಿಂ
ಪೆಱೆ ಯ ವಿಲಾಸಮದೀಗಳ್
ಪೆಱಗಾಯ್ತೆನೆ ರೂಪವತಿಯ ಪೆಱೆನೊಸಲೆಸೆಗುಂ ೬೭

ಮೊರೆಯದ ಮದಾಳಿ ಬೆಳಗಿಂ
ಪರೆಯದ ಕಟ್ತೆಲೆಯ ಬಿಳ್ತಿನಿಪ್ಪವಳ ಪೊದ
ಱ್ದುರುಳಿಗುರುಳ್ವಶ್ಯಾಂಜನ
ದುರುಳಿಯೆನಲ್ ನೃಪನ ಮನಮನುಱೆ ಸೆಱೆವಿಡಿಗುಂ ೬೮

ಜನದಮನಕ್ಕಂಗಜ ಮೋ
ಹನ ಶರಮಂ ಕಱೆವ ಕಾರ ನಿಱೆಮುಗಿಲೊಡ್ಡಂ
ನೆನೆಯಿಸುವುದವಳ ಬಟಲ್ಮುಡಿ
ನೆನೆಯಿಪುದಚ್ಚರಿಯೆ ಸೋಗೆನವಿಲ ಬೆಡಂಗಂ ೬೯

ಅನುಲೇಪಂ ದಳಮೇಱೆದತ್ತು ನಿಜದಿವ್ಯಾಮೋದದಿಂ ರತ್ನಮಂ
ಡನಮುದ್ಯೋತಿಸಿದತ್ತು ದೇಹರುಚಿಯಿಂ ಕರ್ಣೋತ್ಪಲಮ ಲೋಲಲೋ

ಚನಚಂದ್ರಾತಪದಿಂದರಲ್ದುದೆನೆ ಮಾತೇಂ ಮಂಡನಶ್ರೀಗಮಂ
ಡನಮೆಂದೇಂ ನೆಱೆ ಬಣ್ಣಿಸಲ್ನೆಱೆಯೆನಾಂ ಲಕ್ಷ್ಮೀಮಹಾದೇವಿಯಂ ೭೦

ಅತನುಶ್ರೀಕಾಂತೆಗೀಕಾಂತೆಯೆ ಮಿಗಿಲೆನೆ ಕಾರ್ಗಾಲದೊಳ್ ಹಂಸಲೀಲಾ
ಗತಿಯಿಂ ಹೇಮಂತದೊಳ್ಕೋಗಿಲೆ ಕಳರುತಿಯಿಂ ಗ್ರೀಷ್ಮದೊಳ್ಕರ್ಣಿಕಾರಂ
ಧೃತಿಯಿಂ ತನ್ನಂತೆ ಚೆಲ್ವಂ ತಳೆಯವೆನಿಸಿ ಲಕ್ಷ್ಮೀಮಹಾದೇವಿ ಧಾತ್ರೀ
ಪತಿಯಂ ಸರ್ವಾಂಗಸೌಂದರ್ಯದಿನೆಱಗಿಸಿ ಸೌಭಾಗ್ಯಸಂಪನ್ನೆಯಾದಳ್ ೭೧

ಆಕಾಂತೆಯೊಳಾಸಕಲಮ
ಹೀಕಾಂತಂ ವಜ್ರಲೇಪದನುಬಂಧಮನಿ
ತ್ತಾಕೃತಿಯಿಂ ಪತ್ತುಗೆವೆ
ತ್ತೋಕುಳಿಯಾಡುವನನಂಗರಾಗಾಮೃತದೊಳ್ ೭೨

ವ॥ ಆ ಮಹೀಪಾಲನ ಲೋಲಲೋಚನಂಗಳಾಕೆಯ ಲಾವಣ್ಯರಸಕೂಪದಂತೆ ನಿಮ್ನಮಾದ ಪೊರ್ಕುೞಿಂ ಪೊಕ್ಕುೞಿದುಮಸಿಯ ಬಾಸೆಯಂ ಬಾಸಣಿಸಿಯುಂ ಸೆಲೆಮಾಲೆಯಂ ನೆಲೆಮಾಡಿಯಂ ಬಾಯ್ದೆಱಗೆ ತೆಱದೆಂತುಂ ನಿಱಿದಲೆಯೊಳ್ಕೈನಿಱಿ ದಾಡಿ ಯುಮಾ- ಹರಿಣಲೋಚನೆಯ ಲೋಚನದೊಳಳಿಪಂ ಮನದೊಳುತ್ಸುಕತೆಯುಂ ತನುಲತೆಯೊಳ್ಪುಳಕಾಂಕುರಮನೊದವಿಸುತ್ತುಮಿರೆ

ಕೃತವಿದ್ಯಂ ಬಿದಿ ಸೃಷ್ಟಿಯೊಳ್ ಸಮಸಮಾಕಾರಂ ಬೆಡಂಗಾಗೆ ದಂ
ಪತಿಯಂ ಪುಟ್ಟಿಸೆ ಪೆಂಪುವೆತ್ತನೆನಿಪತ್ಯಾಶ್ಚರ್ಯ ಸೌಂದರ್ಯಮಂ
ಸತಿಯುಂ ಭೂಪನುಮಪ್ಪುಕೆಯ್ದು ದೊರೆವೆತ್ತನ್ಯೋನ್ಯಸಂಪ್ರೀತಿಯಂ
ರತಿಯುಂ ಕಾಮನುಮೆಂಬಿನಂ ಸಲಿಸಿದರ್ ನಾನಾವಿನೋದಂಗಳಂ ೭೩

ವದನಾಸ್ವಾದದೊಳಾದ ಲಂಪನಮೃತಂ ನೇತ್ರೋತ್ಪಳಾನಂದಸಂ
ಪದಮಂ ಚಂದ್ರಮನಿಂಪುವೆತ್ತನುಡಿಯಂ ಪಶ್ಯಾಕ್ಷರಂ ಸುಯ್ಯೊಳು
ಣ್ಮಿದ ಕಂಪಂ ಮೃಗನಾಭಿ ಸೋಂಕಿನೊದವಂ ಮಂದಾನಿಳಂ ಕೊಟ್ಟಪೊ
ಲ್ಪದೆದೋರೊರ್ವರೊಳೊರ್ವರಂದು ಪಡೆದರ್ ಪಂಚೇಂದ್ರಿಯಪ್ರೀತಿಯಂ ೭೪

ವ॥ ಅಂತಾದಂಪತಿಗಳ್ ಇಷ್ಟವಿಷಯಸುಖ ಸಂತುಷ್ಟ ಸ್ವಾಂತರಾಗಿರ್ಪಿನಂ

ಚಾಮರದಡಪದ ಡವಕೆಯ
ಕೋಮಳೆಯರ ಚರಣರಣಿತನೂಪುರದಿಂದು
ದ್ದಾಮರವಮತನು ಜಂಗಮ
ಹೇಮಲತಾಸಕ್ತಭೃಂಗರಮೆಂಬಿನೆಗಂ ೭೫

ಒಂದು ದಿವಸಂ ಧನಶ್ರೀ
ಸುಂದರಿ ನಿಜಭವನವನದ ಮಣಿಮಯಲೀಲಾ
ಮಂದಿರಮಣಿವೇದಿಕೆಗೆ
ಟ್ಟಿಂದಳ್ಮಣಿಮೇಖಳಾರವಂ ಪೊಣ್ಮುವಿನಂ ೭೬

ವ|| ಆಗಳ್

ಮೃಗನೇತ್ರೆಯ ತೊಳಗುವ ಕಾ
ಲುಗುರ್ಗಳ ನೂಪುರದ ಪೊಳೆವ ವಜ್ರಂಗಳ ಕಾಂ
ತಿಗಳಡರೆ ಪರ್ವಿ ಪಚ್ಚೆಯ
ಜಗಲಿಯೊಳೊಪ್ಪಿದುವು ರಂಗವಲಿಯಿಕ್ಕಿದವೊಲ್ ೭೭

ಶ್ರೀವಧುವಿರ್ಪಂತಿರೆ ಪೊಂ
ದಾವರೆಯೊಳ್ ಪೊಳೆವ ಕಾಂಚನಾಸನದೊಳ್ ಬಂ
ದಾವಧು ಕುಳ್ಳಿರ್ದಳ್ ಸತಿ
ಲಾವಣ್ಯರಸಪ್ರವಾಹದೊಳ್ ತೇಂಕುವಿನಂ ೭೮

ಪಳುಕಿನ ಪಾದಪೀಠಮರುಣೋಪಳದಿಂ ಸಮೆದಂತೆ ಕಾಂತಿಯಂ
ತಳೆದಿರೆ ತನ್ನ ಕೇಸಡಿಯ ಕೆಂಪಿನೊಳುಜ್ಜ್ವಲಚಿತ್ರಭಿತ್ತಿ ನಿ
ಸ್ತುಳನಿಜಮೌಕ್ತಿಕಾಭರಣದೀಧಿತಿಯಿಂ ತೆರೆಸುತ್ತಿದಂತೆ ಕ
ಣ್ಗೊಳಿಸೆ ಲತಾಂಗಿ ಪೋಲ್ತಳಸಾಮಾಯುಧಮೋಹನಮಂತ್ರಶಕ್ತಿಯಂ ೭೯

ವನಿತಾರತ್ನಮೆ ಸಾಲ್ಗುಂ
ಜನವಶ್ಯಕ್ಕೆಂದು ಕಾಮನೀಡಾಡಿದ ಮೋ
ಹನಶರಮೆನಲಾಕೆಯ ಲೋ
ಚನರುಚಿ ತಳತಳಿಸಿ ಪೊಳೆದುದಾ ವೇದಿಕೆಯೊಳ್ ೮೦

ಅಮೃತಾಂಶುಲೇಖೆ ನಕ್ಷ
ತ್ರಮಾಲೆಯಿಂ ಬಳಸಿದಂತೆ ಪರಿವಾರವಧೂ
ಸಮಿತಿ ಪರಿವೇಷ್ಟಿಸಿರೆ ತರು
ಣಿ ಮಾಡಿದಳ್ ನಯನಕುವಲಯಾನಂದನಮಂ ೮೧

ಚಮರರುಹಗ್ರಾಹಿಣಿಯರ್
ಸುಮನೋಮಂಜರಿಯ ಭಾರದಿಂ ಬಳ್ಕುವ ಜಂ
ಗಮಲತೆಗಳೆನೆ ಧನಶ್ರೀ
ರಮಣಿಯೆರಟ್ಟೆಲದೊಳಂ ಬೆಡಂಗಂ ಪಡೆದರ್ ೮೨

ವ॥ ಅಂತಾಕಾಂತೆ ಪರಿಮಿತಪರಿವಾರವನಿತಾಪರೀತೆ ಸೇವಾಚತುರಸಹಚರೀಸುಭಾಷಿತ-ಮನಾಲಿಸುತ್ತುಮಿರ್ಪಿನಂ ಮುಂದೆ ಮಂದೈಸಿದ ತಮಾಲವನದ ಕಾಳದೊಳಂ ಮುಗುಳ್ತ ಮಾಧವೀಲತೆಯ ಜೊನ್ನದೊಳಂ ತಳಿರ್ತಶೋಕಷಂಡದೆಳವಿಸಿಲೊಳಂ ಬಂಬಲ್ದೆರೆಯ ತಾರ್ಮುಟ್ಟಿಂ ಪುಟ್ಟಿದ ತಣ್ಣಾಳಿಯ ಸೋಂಕಿಂ ವಿರಳವಾಗಿ ಸೂಸುವ ತುಷಾರವರ್ಷ-ದೊಳಂ ಬಿಡದೆ ಬಿಡುತರ್ಪ ಸಹಕಾರದ ಸೊನೆಯ ಸೋನೆಯೊಳಂ ನಿಜನಿಕಟ-ಭೂಮಿಯುನಳಂಕರಿಸಿ ಜಲಜ ಕುಸುಮದೆಸಳ ಪಸೆಯೊಳ್ಳುಳ್ಳಿರ್ದು ಸರಸಸಾರಸೋತ್ತಾರವಂಶಸ್ವರದೊಳುಪಾಶ್ರಯಂಬಡೆದು ಪಾಡುವ ಪೆಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗಮಾಗೆ

ಪರಿಪೂರ್ಣಚಂದ್ರಬಿಂಬಮೆ
ಪರಿವೇಷಂಗೊಂಡುದೆನಿಸಿ ಬಹುರತ್ನಶಿಲಾ
ಪರಿಘಟಿತಂ ನಯನಮನೋ
ಹರಮಾದುದು ಶಿಶಿರಜವನಮಂಭೋಜವನಂ ೮೩

ನಳಿನೀಲಕ್ಷ್ಮಿಯ ಮಂದಹಾಸಮೊ ಧನಶ್ರೀದೇವಿಗೇನಟ್ಟಿದೆ
ಪ್ಪಳೊ ಲಕ್ಷ್ಮೀವಧು ತನ್ನ ಬೆಳ್ಗೊಡೆಯನೇಂ ಡಿಂಡೀರಪಿಂಡಂ ಹಿಮಾ
ನಿಳನಿಂ ಕೂಡೆ ತೆರಳ್ದು ಬಂದಪುದೊ ಪೇಟೆಂಬನ್ನೆಗಂ ಬಂದುದಾ
ಕೊಳದಿಂದೊಂದು ಮರಾಳಕಾಂತೆ ಮಱೆಯುಂ ತಾನುಂ ನಿಜಸ್ವೈರದಿಂ ೮೪

ಮುಂದೆ ಬರುತ್ತೆಡೆಯೆಡೆಯೊಳ್
ನಿಂದು ನಿಜಾರ್ಭಕನ ಬರವುವಾರ್ದಿನಿಸಿನಿಸಂ
ಸಂದು ಮಗುಟ್ದೀಕ್ಷಿಸುತ್ತುಂ
ಬಂದುದು ಕಳಹಂಸಿ ಸತಿಯ ಕಣ್ಬಯಸುವಿನಂ ೮೫

ವ॥ ಅಂತು ಬಂದು ತಿಳಿಗೊಳದ ತಡಿಯ ತಮಾಳದ ತಣ್ಣೆಟಲ ಪದ್ಮರಾಗದ ಪಾಸಱೆಯ ಮೇಲೆ ನಿಂದು ಮಂದ ಮಂದಪದವಿನ್ಯಾಸಮೆಸೆಯೆ ದೆಸೆದೆಸೆಗೆ ಪರಿವರ್ಭಕನ ಮೆಲ್ಲಡಿಗಳೊಡನೆ ದಿಟ್ಟಿಗಳ್ ಪರಿಯೆಯುಂ ತಣ್ಣಾಳಿಯಲಪಿಸೊಳುಲಿವ ತಳಿರೆಲೆಯ ದನಿಗೆ ಬೆರ್ಚುವ ಶಿಶುವನಾತ್ಮಪಕ್ಷ ಪುಟದೊಳ್ಪುದುಂಗೊಳಿಸಿಯುಂ ಕಂಠೋಪಕಂ ಠದೊಳ್ನಿಂದ ಮಱೆಯ ಕೊರಲ ಕಿಱುದುಪ್ಪಟಿಂ ಚಂಚುಮುಖದಿನಕ್ಕೆಗೆಯ್ದುಂ ಸರಸಬಿಸಬೀಜರಾಜಿಯಂ ಖಂಡಿಸಿ ಕುಟುಕನಿಕ್ಕಿಯುಂ ಮೃದುಮೃಣಾಳನಾಳರಸಮಂ ಚಂಚುಪುಟಶುಕ್ತಿಕೆಯಿಂದೆಟೆದುಂ ಬಾಳಕನ ಕೊರಲ ಮೇಲೆ ಕಂಠನಾಳಮಂ ಲಘುತ್ವದಿಂ ನೀಡಿಯುಂ ನಸುಜೋಲ್ದು ಕೋದ ಗಱೆಯೆ ನಿಚ್ಚಣಿಗೆಯಾಗಿ ಅಂಸವೇದಿಕೆಯನೇಱೆಸಿಯುಂ ಮೋಹರಸಪ್ರವಾಹದೊಳವಗಾಹಮಿರ್ದ ಕಳಹಂಸಿಯುಂ ಧನಶ್ರೀ ಮಹಾದೇವಿ

ನಿಶ್ಚಳಪಕ್ಷ್ಮಪಾಳಿಯುಮಕಂಪಿತನಯನಪುತ್ರಿಕೆಯುಮವತಾನ್ಯಮನಸ್ಕೆಯುಮಾಗಿ ನೀಡುಂ ಭಾವಿಸಿ ನೋಡುತ್ತುಮದಱ ಸಹಜಪ್ರೀತಿಯಂ ಸಖೀಜನಕ್ಕೆ ತೋಱಿ ತಾನುಂ ಪುತ್ರ-ದೋಹಳಕುತೂಹಳೆಯುಮಾಗೆ

ಅವಿವೇಕಂ ನಿಜಮಾದ ಹಂಸಿಮೊದಲಾಗೀಪೋತನಂ ಪ್ರೀತಿಸಂ
ಭವಸೌಖ್ಯಾಮೃತಸೇವೆಯಿಂದೆ ನಲಿಯುತ್ತಿರ್ದಪ್ಪುದೆಂದಂದು ಮಾ
ನವರೆಮ್ಮಂದಿಗರಾತ್ಮಜಸ್ಮವದನೇಂದುಜ್ಯೋತ್ಸ್ನೆಯಿಂ ಲೋಚನೋ
ತ್ಸವಮಂ ತಾಳ್ದದೆ ಬಾಳ್ವು ಬಾಳಿಪಡೆಗುಂ ನಿಸ್ಸೀಮನಿರ್ವೇಗಮಂ ೮೬

ಧರಣೀಶಂ ದಯೆಗೆಯ್ದುಮಗ್ರಮಹಿಷೀಸಂಪತ್ತಿಯಂ ಪ್ರೇಮನಿ
ರ್ಭರನಿರ್ಬಂಧದಿನಾಣೆಗೋಸಣೆಯನಿತ್ತುಂ ಬಾಳ್ತೆಯೇ ಪುತ್ರಮೋ
ಹರಸಾಸ್ವಾದನತೃಪ್ತಿಯಿಲ್ಲವೆನುತುಂ ತತ್ಕಾಂತೆ ಚಿಂತಾಪರಂ
ಪರೆಯಂ ತಾಳ್ದಿದಳಾರ್ಗೆ ಪುಟ್ಟದೊ ಸುತವ್ಯಾಮೋಹಕೌತೂಹಳಂ ೮೭

ಮುದಮುರ್ವೀಶಂಗೆ ಸಕಲಪರಿಜನಕ್ಕುತ್ಸವಂ ಬಂಧುಗಳ್ಗ
ಭ್ಯುದಯಂ ವಂಶಕ್ಕೆ ಚಿಂತಾಭರಮಖಿಳಸಪತ್ನೀಜನಕ್ಕುಮ್ಮಳಂದು
ರ್ಮದವೀರಾರಾತಿವರ್ಗಕ್ಕಭಿಲಷಿತಫಲಂ ವಿಶ್ವಧಾತ್ರೀತಳಕ್ಕಾ
ದುದೆನಲ್ ಸತ್ಪುತ್ರನಂ ಪೋಪಡೆಯದೊಡೆ ವೃಥಾಯಾಸಮೀ ಶ್ರೀವಿಲಾಸಂ ೮೮

ಋತುಸಮಯಮೆನಗಿದಸ್ಪೃ
ಶ್ಯತೆಯಂ ಸಮನಿಸಲೆ ಹೇತುವಾದತ್ತಾದಂ
ಸುತ ಹೇತುವಾದುದಿಲ್ಲೆಂ
ದು ತನೂದರಿ ನೆನೆದು ನೆನೆದು ವಿಹ್ವಳೆಯಾದಳ್ ೮೯

ಎಳವೆಱಿ ಬಳೆಯದ ಗಗನ
ಸ್ಥಳಿ ಸಸಿ ಬೆಳೆಯದ ಧರಿತ್ರಿ ಮೌಕ್ತಿಕರತ್ನಂ
ಬಳೆಯದ ಶುಕ್ತಿಕೆ ಗರ್ಭಂ
ಬಳೆಯದ ಬಾಳಕಿಯ ಬಸಿಱನರ್ಥಕಮಲ್ತೇ ೯೦

ಅವನೀವಲ್ಲಭನುತ್ಸಂ
ಗವೆ ಮಂಗಳಪೀಠಮಾಗೆ ಸವತಿಯರಿದಿರೊಳ್
ವಿವಿಧಾನಕ ಮೆಸೆದಿರೆ ಪುಂ
ಸವನೋತ್ಸವಮೆನಗದೆಂದು ಸಮನಿಸಿದಪ್ಪುದೋ ೯೧

ಸತ್ಸಭೆಗೂರ್ಗಳಂ ಮಣಿಮಯಾಭರಣಾಂ ಬರಜಾಳಮಂ ಸುಪ್ರ
ದ್ವತ್ಸಲರ್ಗರ್ಥಿಸಂತತಿಗೆ ಸಾಲ್ವನಿತರ್ಥಮನಿತ್ತು ಮಾಡಿ ಜ

ನ್ಮೋತ್ಸವಮಂ ನೃಪಂ ಸುತಮುಖಾಬ್ಜನಿರೀಕ್ಷಣ ಜಾತಹರ್ಷನ
ತ್ಯುತ್ಸುಕನಪ್ಪುದಂ ಕ್ಷಣಮನೀಕ್ಷಣಮಾರ್ವಿನಮೆಂದು ಕಾಣ್ಬನೋ ೯೨

ಅರಿಸಿನದಂಚೆಯಂ ಪೊದಿಸಿ ಪೊರ್ಕುಳಿನೆನ್ನಿಯ ಸೋಂಕಿನೊಳ್ಮರ
ಲ್ದಿರಿಸಿ ಲಲಾಟದೊಳ್ತಿಲಕಮಂ ಸೊದರ್ವಕ್ಕಿನೊಳಿಟ್ಟು ಮುದ್ದುಸೀ
ವರಮೆರಡುಣ್ಮೆ ಕಣ್ಬಣೆಯದರ್ಭಕನಂ ನಡೆನೋಡಿ ನೋಡಿ ಪಾ
ಲ್ಶೋರೆದು ಕುಚಂಗಳಿಂ ಬಿಡದೆ ಸೂಸುವ ಸೃಪೆನಗೆಂದು ಸಾರ್ಗುಮೋ ೯೩

ಸೊರ್ಕಂ ಪುಟ್ಟಿಸಿ ನಿಜದಿಂ
ಕರ್ಕಶದಿಂ ತಾಟಿ ಮೊಲೆಯ ದೊರೆಯಾದೊಡಮೇ
ತರ್ಕೆಗಡ ಬಾಟಿ ತನಯನ
ನಚ್ಚಿಟಿ ನೂಪದಳ ಬಜೆದೆ ಬೀಗಿದ ಮೊಲೆಗಳ್ ೯೪

ಕೈಗನ್ನಡಿಯವೊಲೆಲ್ಲರ
ಕೈಗೊಪ್ಪುವ ಮಗನನೆತ್ತಿ ಪುಳಕಾಂಕುರಮಂ
ಮೈಗಗ್ಗಳಿಸದ ಕಾಂತೆಯ
ಕೈಗಮದೇಂ ಭೇದಮುಂಟೆ ಸೀರೆಯ ಕೈಗಂ ೯೫

ಬಾಲಕನ ಪಿಶಂಗತಲಂ
ಬಾಲಕನ ಸ್ಖಲಿತಚಲನವಿನ್ಯಾಸದ ಲೀ
ಲಾಲಸಮಂ ಕಾಣದದು
ರ್ಲೀಲಮನಿಪ್ಪೊಂದು ಜೀವನಂ ಜೀವನಮೇ ೯೬

ಅಂಗಭವಕೋಮಲಾಂಗಾ
ಲಿಂಗನಸುಖದೊರೆಗೆ ವಾರದಲ್ತೆ ಕುಳಿರ್ಕೋ
ಟ್ಬೆಂಗಡಲೊಳ್ಮುಳುಗಿದೊಡಂ
ತಿಂಗಳ ತಣ್ಗದಿರ ಜೊಂಪದೊಳ್ನೆಲಸಿದೊಡಂ ೯೭

ಎಡೆಯಾಡಿದಪುದು ರನ್ನದ
ಸೊಡರೆನೆ ಹರಿನೀಳರತ್ನಕುಟ್ಟಿಮದೊಳ್ದ
ಟ್ಟಡಿಯಿಡುವ ತನೂಭವನಂ
ನಡೆನೋಡಲ್ಪಡೆದ ತಾಯ ಜನ್ಮಮೆ ಸಫಳಂ ೯೮

ಪರಿದಾಡುವ ಸುತನ ಪದಾಬ್ಜಂ
ಬುರುಹಂಗಳೊಳುಲಿವ ಪೊನ್ನಗೆಜ್ಜೆಯ ದನಿಯಂ

ತಿರೆ ನಚ್ಚಿನ ವೀಣಾವೇ
ಣಿರವಂಗಳ್ಕಱಿಯವಲ್ತೆ ಕರ್ಣಾಮೃತಮಂ ೯೯

ದರವಿಕಸಿತಮಂ ರಜದೊಳ್
ಪೊರೆದಾತ್ಮಜ ಮುಖಸರೋಜಮಂ ಮೋಪರಸಂ
ತೆರೆಮಸಗೆ ನೋೞ್ಪ ಜನನಿಯ
ಕರಿಯಾಲಿಗಳೆಂಬ ತುಂಬಿಗಳ್ ಧನ್ಯಂಗಳ್ ೧೦೦

ಕಣ್ಬಡೆದ ಫಲಂ ಸುತನಂ
ಕಾಣ್ಬುದೆ ಸುತವದನಕಮಲಮಂ ಕಾಣದ ಕಣ್
ಕಣ್ಬೇಲಿಯ ಕಣ್ಣೆನುತುಂ
ಕಣ್ಬನಿಯಿಂ ಕರ್ಚಿದಳ್ಕಪೋಲಸ್ಥಳಿಯಂ ೧೦೧

ವ॥ ಅಂತಾ ಕಾಂತೆ ಚಿಂತಿಸುತ್ತಿರ್ಪಿನಂ

ದಿವಸಶ್ರೀ ಮಂಜಿನೊಳ್ಪಾಡಳಿ ಯ ಕಳೆಯಲಾಬೇಸಱಿಂ ಬರ್ಪತಿಗ್ಮಾಂ
ಶುವೊ ಪೇೞಿಂಬನ್ನೆಗಂ ತೊಟ್ಟರುಣಮಣಿವಿಭೂಷಾಂಯು ಬಾಲಾತಪಂತೀ
ವುವಿನಂ ಕೇಳಿ ಗೃಹಾಂತಸ್ಥಳಿಯನವನಿಪಾಳಂ ಸುತಾವಾಪ್ತಿಚಿಂತಾ
ಪ್ಲವದೊಳ್ತೇಂಕುತ್ತುಮಿರ್ದಾಸತಿಯ ಪರಿಮಿತಾಸ್ಥಾನಮಂಮುಟ್ಟೆವಂದಂ ೧೦೨

ವ॥ ಅಂತು ಬಂದು

ಜಿನಪಾದಾಂಭೋಜಪೂಜಾವಿಚಕಿಲಸುಮನಶ್ಯೇಖರಂ ಚಾರು ಸಚ್ಚಂ
ದನಕಾಶ್ಮೀರಾಂಗರಾಗಂ ತನಗಳವಡೆ ವಕ್ಷಃಸ್ಥಳೀರಂಗದೊಳ್ನ
ರ್ತನಮಂ ಮುಕ್ತಾವಳೀನರ್ತಕಿ ವಿರಚಿಸೆ ತದ್ಗೇಹಮಂ ಬಂದು ಪೊಕ್ಕಂ
ಜನನೇತ್ರಾನಂದರೂಪಂ ಚತುರಕವಿಜನಾಸ್ಥಾನರತ್ನಪ್ರದೀಪಂ ೧೦೩

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪುತ್ರದೋಹಳನಿರೂಪಣಂ ತೃತೀಯಾಶ್ವಾಸಂ ಸಂಪೂರ್ಣಂ



# ಚತುರ್ಥಾಶ್ವಾಸಂ

ಶ್ರೀವನಿತೆಯೆನಿಪ್ಪ ಧನ
ಶ್ರೀವನಿತೆ ಮನಃ ಪ್ರಿಯಂ ಕೆಲಕ್ಕೀಟ್ಟರೆ ಧಾ
ತ್ರೀವಲ್ಲಭನವಿಳಕಳಾ
ಕೋವಿದನೆನಿಸಿದ ನರೇಂದ್ರಚೂಡಾರತ್ನಂ ೧

ಆ ಸಮಯದೊಳಾಸತಿ ಹೇ
ಮಾಸನದಿಂ ಬೇಗಮಿೞಿದು ಬಾಷ್ಪಾಂಬುಗಳಂ
ಸೂಸುತ್ತುಂ ಪರಿಚಾರಕಿ
ಪಾಸಿದ ಧವಳೋತ್ತರೀಯದೊಳ್ಪಳ್ದಿರ್ದಳ್ ೨

ವ॥ ಅಗಳಾಹೇಮಸಿಂಹಾಸನಾಸೀನನರಸನರಸಿಯ ಪರಿಮ್ಲಾನಮುಖಕಮಲ
ಮನತಿವಿಸ್ಮಯಸ್ಫಾರಿತವಿಲೋಚನನಾಗಿ ನೋಡಿ

ಕೆಳೆಯಂ ಬಿಟ್ಟುವು ಚಂಪಕಚ್ಛವಿಯೊಳಂಗಚ್ಛಾಯೆ ನೀಲೋತ್ಪಲಂ
ಗಳ ಚೆಲ್ವಂನಗಲೊಲ್ಲುವಿಲ್ಲ ನಗೆಗಣ್ಗಳ್ ಪಕ್ವಬಿಂಬಾಧರಂ
ಬೆಳರ್ಗಂಪಂ ಸ್ಮಿತಕಾಂತಿಯಿಂ ತಳೆದುವಿಲ್ಲಾಸ್ಯಾನಿಳಂ ಶೀತ ಶೀ
ತಳೀಕಾಸಖ್ಯಮನೊಲ್ಲುವಿಲ್ಲಬಗೆಗೀನೋವೇತಜಿಂದಾದುದೋ ೩

ವ॥ ಎಂದು ಮನದೊಳ್ ಬಗೆದಾಕೆ ಬಗೆಯಂ ಬಗೆವಂತೆ ತೀರ್ಜುವ ಪಾರಿಜಾತದ ಬಲ್ಮುಗಳ
ಕಾಂತಿಯಂತೆ ದಂತಕಾಂತಿಗಳ್ಪಸರಿಸೆ ಮಹೀಕಾಂತನಿಂತೆಂದಂ

ನಲ್ಲಳೆ ನಿನ್ನರುಣಾಧರ
ಪಲ್ಲವಮಾಜಿದುದು ಸುಯ್ದು ಸುಯ್ಯಿಂ ನಿನ್ನು
ತ್ಫುಲ್ಲವಿಲೋಚನವಿದ್ಯು
ದ್ವಲ್ಲರಿ ಪೇಜಿ ದುದು ಬಾಷ್ಪಜಲಕುಟ್ಮಲಮಂ ೪

ಬೇಸಗೆಯ ಬಿಸಿಲ ಸೋಂಕಿಂ
ವಾಸಂತೀವಲ್ಲಿ ಸರಡುವಿರ್ದಂತಿರೆ ನಿ

ನ್ನೀ ಸುಕುಮಾರಲತಾತಿ ವಿ
ಳಾಸಮಿದೇಕಾರಣಂ ನಯಂಗುಂದಿದುದೋ ೫

॥ ನಿರುಪಮವೃತ್ತ ॥
ಪಗಲ ತಿಂಗಳವೊಲೇಕೆ ಕಾಂತಿಯಂ
ನಗೆಮೊಗಂ ಕೆದಱಿದಾನೆ ಪೊಕ್ಕ ಬೇ
ಸಗೆಯ ಕಾಡಕೆಱೆಯಂತೆ ನಾಡೆಯುಂ
ಬಗೆ ಕಲಂಕಿದುದಿದೇಕೆ ಕೋಮಳೇ ೬

ರಸಗೇಯಂ ನೆಲೆವೆರ್ಚದೇಕೆ ವಿತತಾತೋದ್ಯಸ್ವನಂ ಸೂಸದೇ
ಕೆ ಸುಧಾಸಾರಮನೀಕ್ಷಣಾಮೃತಮಯಂ ಲಾಸ್ಯಪ್ರಸಂಗಂ ಪ್ರವ
ರ್ತಿಸದೇಕಿಂಚರಮಂ ವಿಪಂಚಿ ಮೆಱೆದತ್ತಿಲ್ಲೇಕೆ ತನ್ವಂಗಿ ನಿ
ನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲುತ್ತಾನವಂಶಸ್ವನಂ ೭

ಮಚ್ಚರಿಸುವ ಸವತಿಯರುಂ
ಮೆಚ್ಚಿಸದ ಸಖೀಕದಂಬಮುಂ ತಮ್ಮ ಮನಂ
ಪಚ್ಚ ಪರಿಜನಮುಮಿಲ್ಲುಂ
ಮಚ್ಚಮಿದೇಕಾಯ್ತೊ ನಿನಗೆ ಕಮಲದಳಾಕ್ಷೀ ೮

ಮಱೆಯಿಸದುಳ್ಳುದನುಳ್ಳಂ
ತಱೆಪೆನಗೆ ಶಿರೀಷದಾಮಕೋಮಳೆ ನಿನಗೇ
ತಱ ದೆಸೆಯಿಂ ತೀರದುದಂ
ನೆಱೆ ತೀರ್ಚುವೆನೀಗಳಂತೆ ಬಿಸುಡುಮ್ಮಳಮಂ ೯

ಎಂದರಸಂ ನುಡಿವುದುಮಾ
ಸುಂದರಿಗಂತಂತೆ ಮನ್ಯು ಮಿಕ್ಕು ಮನಸ್ತಾ
ಪಂ ದಳ್ಳಿಸೆ ಗಗ್ಗರಿಕೆಗ
ಳಂದೊಗೆದುವು ಕಂಠಕಂದಳಂ ಬೀಗುವಿನಂ ೧೦

ಕಾವಿಲ್ಲದ ಕರ್ನೆಯ್ದಿಲ
ಪೂವಿಂ ಬಿಡುಮುತ್ತು ಬಿಡವೆ ಬಿಡುತಂದಪುವೆಂ
ಬೀ ವಿಸ್ಮಯಮಂ ಮಾಡಿದು
ವಾವನಿತೆಯ ನೀಳ್ದ ಕಣ್ಗಳಂ ಕಣ್ಬನಿಯುಂ ೧೧

ಎಡವಱಿಯದೆ ಕಣ್ಬನಿ ಪನಿ
ತೆಡೆಗಳ್ ಪಸುರೇಱೆ ನಸುಕಿಲುಂಬೇಱಿದ ಕ

ನ್ನಡಿಯ ವಿಲಾಸಮನೇಂ ಕ
ನ್ನಡಿಸಿದುವೊ ಕಪೋಲಯುಗಳಮಾ ಕೋಮಳೆಯಾ ೧೨

ವ॥ ಅಗಳರಸನತಿ ಸಂಭ್ರಮರಸಕ್ಷುಭಿತಚಿತ್ತನಾಗಿ

ನನೆಯಂಬಂ ತಾವರೆವೂ
ವಿನ ಕೈಪೊಡೆಯಿಂ ಮನೋಭವಂ ತೊಡೆವವೊಲಾ
ವನಿತೆಯ ಸಬಾಷ್ಪಲೋಚನ
ಮನವನಿಪತಿ ಶೋಣಪಾಣಿತಳದಿಂ ತೊಡೆದಂ ೧೩

ವ॥ ಅಂತು ತೊಡೆದು

ಕಳವೀಣಾಕ್ವಣಿತಮನ
ಗ್ಗಳಿಸುವ ಕಳಕಂಠರವಮನೇೞಿಪ ನಿನ್ನೀ
ಕಳಭಾಷಿತಮೆಂಬ ಸುಧಾ
ಜಳದಿಂ ಶ್ರವಣಾಭಿಷಣಮಂ ಮಾಡದುದೇಂ ೧೪

ವ॥ ಎಂದೊಡಂ ಮಱುಮಾತುಗುಡದೆ

ಪದನಖಮಣಿದರ್ಪಣದೊ
ಳ್ವದನೇಂದುವನೀಕ್ಷಿಸುತ್ತುಮಿರೆ ಕೋಮಳೆ ಪಾ
ರ್ಶ್ವದೊಳಿರ್ದ ಕೆಳದಿಯಂ ನೋ
ಡಿದನೀಷದ್ವಳಿತಕಂಧರಂ ಧರಣೀಶಂ ೧೫

ವ॥ ಅಗಳಾಪರಿಚಾರಿಕಾಪ್ರಧಾನ ಧವಳಪರಿಧಾನಪಲ್ಲವಮನಧರ ಪಲ್ಲವಕ್ಕೆ ತಗೆದು

ನಿಜಕಾರುಣ್ಯದಿನಾವುದುಂ ಗಹನಮಿಲ್ಲೆತ್ತಂ ಸಪತ್ನೀಜನಂ
ನಿಜದಿಂ ಮೀಱುವರಿಲ್ಲ ಬೆರ್ಚವ ಸವೀಸಂದೋಹಮಿಲ್ಲಾಪ್ತಬಂ
ಧುಜನಂ ಕೂರದರಾರುಮಿಲ್ಲ ಪರಿವಾರಂ ದೇವ ದೇವೀಪದಾಂ
ಬುಜಸೇವಾತುರರಲ್ಲದಿಲ್ಲಱಿಯೆನಾಂ ನಿರ್ವೇಗಮಾದಂದಮಂ ೧೬

ವ॥ ಎಂದು ಮತ್ತಮಿಂತೆಂದಳ್ : ಈ ತಮಾಳದ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತುಮುಮನಂಚೆವಾಳತಿಯಾಮಱಿಯೊಳಾದೇಜಕಮುಮಂ ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟೆ ಪೋದ ಭವದೊಳಾದ ವಿಷಾದ ಕಾರಣಮನೇನಾನುಮಂ ನೆನೆದಂತೆ ಚಿಂತಾಕ್ರಾಂತೆಯಾಗಿರ್ದಳೆಂಬುದುಂ ವಿವೇಕ ವಿಧ್ಯಾಧರಂ ಸುತದೋಹಳಕುತೂಹಳೆಯಾದುದಂ ಜಲಕ್ಕನಱಿದು

ಎನಗೀ ಚಿಂತಾಂತರಂ ತಕ್ಕುದೆ ಬಯಸದರಾರ್ ಸಂತತಿಪ್ರಾಪ್ತಿಯಂ ಪ್ರಾ
ಕ್ತನ ಪುಣ್ಯಪ್ರಾಪ್ತಿಯಿಂದಾ ಬಯಕೆ ಸಮನಿಕುಂ ಚಿಂತೆವೇಡಂತದರ್ಕೇ
ನೆನೆ ಪುತ್ರೋತ್ಪತ್ತಿಹೇತುವ್ರತಸಮಿತಿಗಳಿಂ ಕೂಡೆ ನಾವಿರ್ಬರುಂ ಮು
ನ್ನಿನ ಜನ್ಮಂ ನೋಂತಮಾಸ್ಯೈಪೆನಗೆ ವಿದಿತಮಾಯ್ತೆಂದು ಪೂರ್ಣೇಂದುವಕ್ತ್ರೇ ೧೭

ಪೃಥ್ವಿವೃತ್ತ ॥

ಅದೆಂತೆನೆ ತನೂಭವಂ ತನಗೆ ಪುಟ್ಟಿ ಭೂಭಾರಮಂ
ತದೀಯಭುಜದಂಡದೊಳ್ತಳೆದು ನಮ್ಮದೊಂದನ್ವಯ
ಪ್ರದೀಪವೆನಿಸಲ್ಕೆಸಲ್ವನೆನುತುಂ ಮನಕ್ಕುಮ್ಮಳಂ
ಪೊದಝ್ದೆನಗಂ ಸರೋಜದಳನೇತ್ರೆ ನಿನ್ನಂದದಿಂ ೧೮

ಅಳವಿಗಳಿದೆನ್ನ ಮನದು
ಮ್ಮಳದಿಂ ಪರಿಣತನೆನಿಪ್ಪ ನೈಮಿತ್ತಿಕನಂ
ಲುಳಿತಾಳಕಿ ಬೆಸಗೊಳೆ ತನು
ಪುಳಕಿತಮಪ್ಪಂತು ಮನಮನಱೆದಿಂತೆಂದಂ ೧೯

ಭವದೀಯಾಭಿಮತಂ ಸುತಾಭ್ಯುದಯಲಾಭಂ ತತ್ಫಲಪ್ರಾಪ್ತಿ ನಿ
ಕ್ಕುವಮಕ್ಕುಂ ತಡವಿಲ್ಲದಾರ್ಯಜನತಾಶೀರ್ವಾದದಿಂ ಪಾತ್ರದಾ
ನವಿಶೇಷವ್ಯಸನಂಗಳಿಂ ಜಿನಪದಾಂಭೋಜಾರ್ಚನಾಸಂತತೋ
ತ್ಸವದಿಂದೆಂಬುದುಮಾನಸದಂ ನಿನಗೆ ಪೇಟಿಲ್ಲಂದೆನಬ್ಜಾನನೇ ೨೦

ವ॥ ಎನಲೊಡಂ

ಮೃಗಧರನಂಶುಮಾಲೆ ನಸುಮುಟ್ಟುವುದುಂ ಜಲಸೂಕ್ಷ್ಮಬಿಂದುಗ
ಳ್ನೆಗೆದಪುವಿಂದುಕಾಂತಮಣಿಪುತ್ರಿಕೆಯಿಂದೆನೆ ನಲ್ಲನುತ್ಸವೋ
ಕ್ತಿಗಳವತಂಸಮಾಗೆ ಪುಳಕಾಂಕುರಮೊರ್ಮೊದಲಾದುದಾ ಲತಾಂ
ಗಿಗೆ ಪದೆದಾಲಿಸಲ್ಪಡೆವರಾರೊ ತನೂಭವಲಾಭವಾರ್ತೆಯಂ ೨೧

ಆ ಸತಿಗೆ ಪುಟ್ಟೆ ಹರ್ಷವಿ
ಲಾಸಂ ಮಧುಬಿಂದುಮಾಳೆ ನೀಲೋತ್ಪಲದಿಂ
ಸೂಸುವೊಲ್ನಗೆಗಣ್ಣಿಂ
ಸೂಸಿದುವಾನಂದಬಾಷ್ಪಬಿಂದುವಿತಾನಂ ೨೨

ತರಳವೃತ್ತ॥

ಪರಿಯೆ ಪರ್ವಿದ ಮಂಜು ರಂಜಿಸುವಂತೆ ತಾವರೆ ನಾಡೆಯುಂ
ಕೊರಗಿದಾನನಮಾಗಳಾಗಳದೇನರಲ್ದುದೊ ಘೂಳಿಘೂ
ಸರಿತಮಾದ ಸುವರ್ಣಪುತ್ರಿಕೆ ಬಣ್ಣವಿಟ್ಟವೊಲೆಯ್ದೆ ನಿ
ಬ್ಬರಿಸಿದಂಗಮಪೂರ್ವಕಾಂತಿಗೆ ತೊಟ್ಟನೇನೆಡೆಗೊಟ್ಟುದೋ ೨೩

ವ॥ ಅಂತಾಕಾಂತೆ ಹರ್ಷರಸತರಂಗಿತಾಂತರಂಗೆಯಾಗಿರ್ಪಿನಮಾಪ್ರಸ್ತಾವದೊಳ್

ಎಳೆಯಡಕೆಯ ಫಲಮಂ ಮಾ
ತುಳುಂಗಮಂ ನಾರಿಕೇಳಫಳಮಂ ದ್ರಾಕ್ಷಾ
ಫಳಮಂ ಕಾಂಚನಕದಳೀ
ಫಳಮಂ ಗೃಹ ವನಮಹತ್ತರಂ ತಂದಿತ್ತಂ ೨೪

ವ॥ ಆಗಳರಸನವಸರೋಚಿತಪ್ರಾಪ್ತಿಗೆ ಸಂತಸಂಬಟ್ಟು ವನಮಹತ್ತರಂಗೆ ಮೆಚ್ಚುಗೊಟ್ಟು ಪಾರಿಜಾತಪ್ರಲಂಬಶಾಖಾನುಕಾರಿಯಪ್ಪ ದಕ್ಷಿಣಹಸ್ತದಿಂ ಪ್ರಶಸ್ತ ಮಾತುಳುಂಗುಫಲಮನರಸಿಗೀವುದುಂ ಕೆಲದೊಳಿರ್ದ ಸಂಘಾಷಿತಚತುರೆಯಪ್ಪಸಹಚರಿ

ದೇವಿಯರೊಂದಭಿಲಷಿತಫ
ಲಾವಾಪ್ತಿಗೆ ದೇವ ನಿಮ್ಮ ದಯೆಗೆಯ್ದಫಳಂ
ಕೇವಲಶುಭಸೂಚಕಮೆಂ
ದಾ ವಧು ಗುಡಿಗಟ್ಟೆ ಚೀನಚೇಲಾಂಚಲಮಂ ೨೫

ವ॥ ಅಗಳರಸನತಿಹರ್ಷಚಿತ್ತನರ್ಹತ್ಪರಮೇಶ್ವರಪೂಜಾವಿಧಿಗಳಂ ನಿಯೋಜಿಸಿ ಬಿಜಯಂಗೆಯ್ವುದುಮಾ ಮಹಾನುಭಾವೆ ಪಯಃಪ್ರವಣ ವಲ್ಲಭನಿಯಾಮದಿಂ ಶುಚಿಭೂರ್ತೆಯುಮತಿಸಮಾಹಿತಚಿತ್ತೆಯುಮಾಗಿ

ಸುತಲಾಭಾರ್ಥಿ ವಿಶೇಷತೀರ್ಥಜಲದಿಂ ಶ್ರೀಖಂಡದಿಂದಕ್ಷತಾ
ಕ್ಷತದಿಂ ಕಾಂತಲತಾಂತಮಾಲಿಕೆಗಳಿಂ ದಿವ್ಯಾನ್ನದಿಂ ರತ್ನರಂ
ಜಿತದೀಪಪ್ರಚಯಂಗಳಿಂದಗರುಧೂಪ ಸ್ತೋಮದಿಂ ಮಂಗಲೋ
ಚಿತ ನಾನಾಫಲದಿಂ ಲತಾಂಗಿ ಜಿನಪಾದಾಭ್ಯರ್ಚನಂ ಮಾಡಿದಳ್ ೨೬

ಮಾಣಿಕದ ಸೊಡರ್ಗಳಿಂ ನೇ
ರಾಣಿಯ ಪೊನ್ನಲರ್ಗಳಿಂ ಹರಿದ್ರತ್ನಚತು
ಷ್ಕೋಣಕಲಶಂಗಳಿಂ ಗೀ
ರ್ವಾಣಾರ್ಚಿತನಂ ನರೇಂದ್ರವಧುವರ್ಚಿಸಿದಳ್ ೨೭

ಭ್ರಮರಹಿತಂ ಹೃದ್ಯಂ ಸ್ಮೇ
ರಮುಖಂ ಲೋಕೈಕಹಿತಕರಂ ಸುಕುಮಾರಂ

ಸಮನಿಸುಗೆಂದರ್ಚಿಸಿದಳ್
ಸುಮನೋಮಂಜರಿಯಿನಾಕೆ ಸುಮನಸ್ಸು ತನಂ ೨೮

ತೊಳಗುವ ದೀಪಾವಳಿಯಿಂ
ವಿಳಾಸವತಿ ಪಾತ್ರದೊಳ್ಗುಣಸ್ನೇಹದಿನು
ಜ್ಜ್ವಳಿಸುವ ತೇಜೋನಿಲಯಂ
ಕುಳದೀಪತಕನಕ್ಕೆ ತನಯನೆಂದರ್ಚಿಸಿದಳ್ ೨೯

ಅಟ್ಟುವ ಸೀಯನಪ್ಪ ರಸಗೇಯಮದಂ ಗೆಡೆಗೊಂಡು ಚಿತ್ತಮಂ
ಮುಟ್ಟುವ ಹೃದ್ಯವಾದ್ಯಲಯದೋಜೆಯಿನೊಂದೆ ಲಯಕ್ಕೆ ಲಕ್ಕೆಯಂ
ಮೆಟ್ಟುವ ಪೆಕ್ಕಣಂ ತುಱುಗಿ ಕಟ್ಟುವ ವಂದನಮಾಲೆ ಲೀಲೆಯಂ
ಪುಟ್ಟಿಸೆ ನಿಚ್ಚಮರ್ಚಿಸುವಳಾ ಸತಿ ದಿವ್ಯಜಿನೇಂದ್ರಗೇಹಮಂ ೩೦

ಈವುದತಿವಿಶದವೃತ್ತಿಗು
ಣಾವಿಷ್ಕೃತನಪ್ಪ ಸುತನನೆಂದುಜ್ಜ್ವಲಮು
ಕ್ತಾವಳಿಯಿಂ ಜಿನಶಾಸನ
ದೇವಿಯರಂ ದೇವಿ ರಾಗದಿಂದರ್ಚಿಸಿದಳ್ ೩೧

ಪೊಸಗಾರ ತಂದಲೊಳ್ಪರ
ಮಸಮಾಧಿಯೊಳೊಂದಿ ಮರದ ಮೊದಲೊಳ್ನೀರ್ಮಾ
ನಿಸನಂತಿರೆ ಬಗೆಯದೆ ಸ
ರ್ವಸಾಧುಗಳನಾ ನರೇಂದ್ರವಧುವರ್ಚಿಸಿದಳ್ ೩೨

ಅಪ್ರಮಿತರಿಂದುಕಾಂತಶಿ
ಲಾಪ್ರತಿಮೆವೊಲಾಗೆ ಮಾಗಿಯೊಳ್ಮಂಜಿಂಗಂ
ಗಪ್ರತ್ಯಂಗಂ ಸತಿ ರಾ
ತ್ರಿ ಪ್ರತಿಮಾಯೋಗಮಿರ್ದರಂ ಬಲಗೊಂಡಳ್ ೩೩

ತಪದಿಂ ಶ್ರುತದಿಂ ನೆಱೆದಾ
ತಪಯೋಗಂ ತಮ್ಮ ಬಗೆಗೆ ಶರದದ ಚಂದ್ರಾ
ತಪಯೋಗಮೆನಿಪ ಮುನಿಯಂ
ತಪನೀಯಸರೋಜರಾಜಿಯಿಂ ಪೂಜಿಸಿದಳ್ ೩೪

ಮಾನಿನಿ ನಾಲ್ಕುಂ ನಿಯಮ ವಿ
ಧಾನದ ಬಟೆಸಂದು ನಿಚ್ಚೆಯಿಂ ಚರಿಯಿಸಿ ಸಂ

ತಾನಾರ್ಥಮೆನೆ ಚತುರ್ವಿಧ
ದಾನವ್ಯಸನದೊಳೆ ದಿವಸಮಂ ನಡೆಯಿಸುವಳ್ ೩೫

ಅನುಲೇಪಂ ತನುವಿಂಗೆ ಮಾಲೆಕಬರೀಭಾರಕ್ಕೆ ಹಾರಂ ಘನ
ಸ್ತನಭಾರಕ್ಕತಿಭಾರಮೆಂಬ ಸುಕುಮಾರಶ್ರೀಯ ನಾಳ್ವಾನಿತಂ
ಬಿನಿ ಭೂಶಯ್ಯೆಗೆ ಜಾಗರಕ್ಕನಶನಕ್ಕೇಕಾಂತರಕ್ಕೇಕಭು
ಕ್ತಿನಿಯಾಮಕ್ಕೊಡಲಂ ನಿಯೋಜಿಸಿದಳಾಶಾಶಕ್ತಿ ಸಾಮಾನ್ಯಮೇ ೩೬

ವ॥ ಅಂತಾಕಾಂತೆ ಚಿಂತಿತಫಲಪ್ರದಾನದಕ್ಷಮಪ್ಪ ದಾನಮಂ ಬಂಧೂ
ಸಂಭಾವಿತಪುತ್ರಜನ್ಮೋತ್ಸವಮಪ್ಪ ಪೂಜೆಯುಮಂ ಸುತದೋಹಳಾನುಕೂಲಮಪ್ಪ
ಶಿಲೀಮುಖಕಾಮ್ಯಫಲಜನ್ಮಾವಾಸಮುಮನುತ್ತರೋತ್ತರಮೆನೆ ನೆಗೞುತ್ತುಂ

ಪೊರೆಯದೆ ರಾಗದೊಳ್ ಪೊಡರನೀಯದೆ ತಾಳ್ದಿ ಕಳಂಕಮಂ ಪಸುಂ
ಭರೆ ತನಗೆಟ್ಟಿಜೆಂದೆಜಗೆ ಸತ್ಪಥವರ್ತನೆ ಮುಂದಮುತ್ತರೋ
ತ್ತರಮೆನೆ ನಿರ್ಮಲಾಂಬರವಿಚಿತ್ರಿತಕೋಮಳಗಾತ್ರೆ ನಾಡೆಯುಂ
ತರುಣಿ ಕೃಶತ್ವಮಂ ನಿಯಮದಿಂ ತಳೆದಳ್ ತುಹಿನಾಂಶುಲೇಖೆವೋಲ್ ೩೭

ಸಕಲಸುಖಹೇತುವಂ ಪು
ತ್ರಕಾಮ್ಯದಿಂ ವ್ರತಮನಟಿಗೆ ಮಾಜುವವೋಲ್ ಮಾ
ಣಿಕಮಂ ನೋಂತಳದೆಂತುಜಿ
ಸುಕುಮಾರಂಗಳ್ವಿಲಾಸವತಿಯರ ಮತಿಗಳ್ ೩೮

ವ॥ ಅಂತು ಅನೇಕನಿಯಮನಿಯಮಿತೆಯಾಗಿರ್ದೊಂದು ದಿವಸಂ ಲಕ್ಷ್ಮೀ ಮಹಾದೇವಿ

ಫಲವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್
ಕುಳವತಿದೇವಿ ಪುಷ್ಪವತಿಯಾಗಿ ವಿಲಾಸಮನಪ್ಪುಕೆಯ್ದು ಕ
ಣ್ಗೊಳಿಸಿದಳಿಂದುಕಾಂತಮಣಿಮಂಗಳರಂಗದೊಳಬ್ಜನಾಳಮಂ
ಸೆಳೆವಿಡಿದಂಗಜನ್ಮಜಯಲಕ್ಷ್ಮಿಯ ಲಾಸಿಕೆಯೀಕೆಯೆಂಬಿನಂ ೩೯

ವ॥ ಅಂತು ಪುಷ್ಪವತಿಯಾಗಿ ಚತುರ್ಥಸ್ನಪನಮಾಂಗಲ್ಯಪುರಸ್ಸರಮರ್ಹ
ತ್ಪೂಜಾಮಂಗಳಮನಾಚರಿಸಿ

ಕಡೆದನೊ ಚಂದ್ರಕಾಂತಮಣಿಯಿಂ ಮದನಂ ಬಿಸಕಾಂಡಗರ್ಭದಿಂ
ಪಡೆದನೊ ಪದ್ಮಗರ್ಭನೆನೆ ಭೂಷಣವಸ್ತ್ರವಿಲೇಪನಾಂಶುಗಳ್
ಪಡೆಯೆ ವಿಲಾಸಮಂ ದಶನದೀಧಿತಿಯಿಂ ದರಹಾಸಲಕ್ಷ್ಮಿ ನೂ
ರ್ಮಡಿಸೆ ಪಡಂಗುವೆತ್ತುದು ನರೇಂದ್ರವಧೂಧವಳಪ್ರಸಾಧನಂ ೪೦

ವ॥ ಅಂತು ಕೈಗೆಯ್ದು ಸೆಜ್ಜೆವನೆಗೆ ಬಿಜಯಂಗೆಯ್ದುಸಲ್ಪತಳ್ಪತಳದೊಳ್
ನಿಜಮನೋವಲ್ಲಭನೊಡನೆ ಪವಡಿಸಿ

ಹೇಮಸರೋಜದೊಳ್ತಳೆದು ಮಾಣಿಕಮಂ ಸರದಭ್ರಶುಭ್ರಮಂ
ತಾಮರಸಪ್ರಸೂನಮನದಕ್ಕೆ ನೆಱಲ್ಪಿಡಿದೊರ್ವಳುತ್ಪಲ
ಶ್ಯಾಮಳೆ ಮಂಗಳಾಭರಣಭೂಷಿತೆ ತಂದದನೀವುದಂ ಲತಾ
ಕೋಮಳೆ ಕಂಡಳಭ್ಯುದಯಕಾರಣಂ ಕನಸಂ ನಿಶಾಂತ್ಯದೊಳ್ ೪೧

ವ॥ ತದನಂತರಮಾ ಕಾಂತೆಗೆ

ಗೃಹದೀರ್ಘಿಕೆಯಿಂದೆಬ್ಬಿ
ರ್ತ ಹಂಸರುತಿ ಮಧುರಮಧುಕರೀಝುಂಕಾರಂ
ಬಹುವಿಧಗೀತರಸಾಮೃತ
ಲಹರಿಗಳಿತ್ತುವು ಸುಖಪ್ರಬೋಧಮನಾಗಳ್ ೪೨

ವ॥ ಅಂತೆಬ್ಬಿರ್ತು ನಿತ್ಯನಿಯಮಂಗಳಂ ತೀರ್ಚಿ ಲಕ್ಷ್ಮೀಮಹಾದೇವಿ ಕಮಳಿನೀಲಕ್ಷ್ಮಿಯಂತೆ
ವಿಕಾಸ ಲಕ್ಷ್ಮಿಯನಪ್ಪುಕೆಯ್ದು ಮಣಿಮಯಾಸನಮನಲಂಕರಿಸಿ ಮಂಗಳಾಭರಣಭೂಷಿತೆ
ಮಣಿದರ್ಪಣಮನಾಳೋಕಿಸುತ್ತುಂ ವಿದಗ್ಧವನಿತಾಪರೀತೆಯಾಗಿರ್ಪಿನಂ

ಅತಿಲಲಿತಾರ್ಯವೇಷಮಳವಟ್ಟಿರೆ ಸಜ್ಜನಸಂಸ್ತುತಂ ನಿಜಾ
ಕೃತಿಯೆನೆ ಬಂದು ಮಂತ್ರಯುತಮಾ ನೃಪಕಾಂತೆಗೆ ಕೊಟ್ಟನಕ್ಷತಾ
ಕ್ಷತಫಲಪುಷ್ಪ ಮಾಲೆಯನಶೇಷನಿಮಿತ್ತ ಕಳಾ ಸಮಾಹಿತಂ
ಹಿತನಧಿಕಪ್ರಮೋದಸಹಿತಂ ವಸುಧಾಮಹಿತಂ ಪುರೋಹಿತಂ ೪೩

ವ॥ ಅನಂತರಮಾ ಪುರೋಹಿತಂ ನಿಜನಿಯಮಪ್ರಮಿತಪ್ರದೇಶನಿವೇದಿತಾ
ಸನಾಸೀನನಪ್ಪುದುಮಾ ಸಮಯದೊಳವನಿಪತಿಯ ಪರಮ ಪ್ರೀತಿಯೇ ಮೂರ್ತಿ
ಮತಿಯಾಗಿ ಬರ್ಪಂತೆ ಮತಿಯೊಳತಿ ಶೀಘ್ರಗತಿಯೊಳುತ್ಸುಕೆ ಯಾಗಿಯುಂ ನಿಬಿಡ
ನಿತಂಬಭಾರದಿಂ ಗುಜ್ಜುಮೆಟ್ಟುತುಂ ಸೂಲ ತೂಂಗುಲುಲಿಯಿನರಸಿಯುಂ
ಪುತ್ರವತಿಯಾಗೆಂದು ಪರಸುವಂತೆ ಮುಗುಳ್ನಗೆಯನುಗುಳ್ವ ಕಡೆಗಣ್ಣ ಕಾಂತಿಯಿಂ
ಗುಡಿಗಟ್ಟುವಂತೆ ಮಣಿಕುಟ್ಟಿಮತಳಮನೆಯ್ದುವಂದು ಲಲಾಟತಟಘಟಿತ ಪಾಣಿಪಲ್ಲವೆ
ದೇವಿ ದೇಪಿಯರ್ಗರಸನಿರುಳ್ ಪರಿಹಾಸವಚನದಿಂ ಸೋಲ್ತ ಸೋಲದಿಂ
ಕೊಟ್ಟಟ್ಟಿದನೆಂದು ಬಿನ್ನವಿಸಿ ಬೆಳ್ಮುಗಿಲ ತೆಳ್ಪೊರೆಯಿನಿಂಪ್ರಜಾಪಲೇಖೆಯಂ ತೆಗೆವ
ಶರಲ್ಲಕ್ಷ್ಮಿಯಂ ಪೋಲ್ತು ನಿಜೋತ್ತರೀಯಪಲ್ಲವದ ಪೊರೆಯಿಂ ತೆಗೆದು

ನವದೂರ್ವಾಂಕುರಮಂ ಪ
ಲ್ಲವಮಂ ಪೂಗೊಂಚಲಂ ತರಂ ತರದಿಂ ನೀ

ಡುವವೊಲ್ಮಣಿಕಿರಣಂ ಪೊ
ಣ್ಮುವಿನಂ ಮಣಿಮೊಡವನೊರ್ವಳಂಗನೆಗಿತ್ತಳ್ ೪೪

ವ॥ ಆಗಳರಸಿಯುಮಿರುಳ ಶುಭಸ್ವಪ್ನಕ್ಕೆ ನೆರಮಾದುದೆಂಬನುರಾಗ ಮಱುಂಬಮಾಗೆ

ಪೊದಯಿಸುವಂತೆ ಚಿತ್ರಪಟದಿಂ ತನುವಂ ಬಯುರತ್ನಕಾಂತಿಗಳ್
ಪುದಿಯೆ ಲತಾಂಗಿ ತಾಂಗಿ ಲಲಿತಾಂಗುಳಿಯೊಳ್ ನಡೆನೋಡಿ ನಲ್ಲನ
ಟ್ಟಿದ ದಯೆ ರತ್ನಭೂಷಣದ ಚೆಲ್ವನುರಾಗದ ಬಳ್ವಳಿಯಂ
ಹೃದಯದೊಳಂದು ಪರ್ಚಿಸುವುದುಂ ತಳೆದಳ್ ಪುಳಕಾಂಕುರಂಗಳಂ ೪೫

ವ॥ ಅಂತು ಸಂತಸದಂತನೆಯ್ದಿ ವಿಚಿತ್ರಾಭರಣಂಗಳಂ ಪರಿಚಾರಿಕೆಗೆ ತರಿಸಿ ಕೊಟ್ಟಾಕೆಯನುಚಿತಸಂಭಾಷಣೆಗಳಿಂ ತಣಿಪಿ ನಿಜಪ್ರಮೋದಮನಱಿಪಲಟ್ಟುವಂತರಸನಲ್ಲಿಗೆ ವಿಸರ್ಜಿಸಿ ತಾಂಬೂಲಾದಾನಪುರಸ್ಸರಂ ಪುರೋಹಿತಂಗಿರುಳ್ ಕಂಡಕನಸನಱಿಪುವುದುಮದನವಧಾರಿಸಿ

ದೇವಿಯರಿನ್ನೆಗಂ ನೆಗೞ್ದ ನಿತ್ಯನಿಯಾಮದ ನಿಟ್ಟೆ ದೇವಪೂ
ಜಾವಿಧಿ ಪಾತ್ರದಾನದೆಸಕಂ ಫಳದಾಯಕಮಾದುದಲ್ಲದಂ
ದಾವಳೊಕಾಣ್ಬಳೀ ದೊರೆಯನುತ್ಸವ ಹೇತುವನಿಷ್ಟಸಿದ್ಧಸ
ದ್ಭಾವಮನನ್ವಯಾಭ್ಯುದಯಕಾರಣಮಂ ಕನಸಂ ತನೂದರೀ ೪೬

ಒಡೆಯಂ ಶ್ವೇತಾತಪತ್ರಕ್ಕಮಳಕಮಳದಿಂ ಹೇಮಸಾಮ್ರಾಜ್ಯಪೀಠ
ಕ್ಕೊಡೆಯಂ ಹೇಮಾಬ್ಜದಿಂ ರತ್ನದಿನಖಿಳದಿಶಾಕ್ರಾಂತತೇಜಂ ತನೂಜಂ
ತೊಡವೀಲೋಕಕ್ಕೆನಿಪ್ಪಂ ಸಮನಿಸುಗುಮದಂ ಕಾಮಿನೀ ರೂಪದಿಂ ಕ
ನ್ನಡಿಸಿತವ್ಯಾಕುಳಂ ಪುಣ್ಯವತಿ ಕನಸಿನೊಳ್ನಿನ್ನ ಪುಣ್ಯಾಧಿದೈವಂ ೪೭

ವ॥ ಅದಲ್ಲದೆಯುಂ

ಗುಣಮನೊಳಕೊಂಡು ಕಾಂತಿಯೊ
ಳೆಣೆ ತನಗಿಲ್ಲೆನೆ ಕಳಂಕಮಿಲ್ಲದ ಶುಭಲ
ಕ್ಷಣನಂದನಲಾಭಮನೀ
ಮಣಿಭೂಷಣಲಾಭಮಱಿಪದೇ ಪುಣ್ಯವತೀ ೪೮

ವ॥ ಎಂದಱಿಪಿದ ಪುರೋಹಿತನಂ ಮಣಿಕುಂಡಲದುಕೂಲವಸನಾದಿ ದಾನ ಸನ್ಮಾನದಿಂ ಸಂತಸಂಬಡಿಸಿ ತದಾಶೀರ್ವಾದಪಾರಿಜಾತಸ್ತಬಕಾವತಂಸೆ ವಿನಯದಿಂ ವಿಸರ್ಜಿಸೆ

ಕಿವಿಯೊಳ್ಪೊಯ್ದು ಪುರೋಹಿತಂ ಹಿತವಚಃಪೀಯೂಷಮಂ ಪೋಪುದುಂ
ಯುವತೀರತ್ನಮದೆಲ್ಲಮಂ ಮನದೆಗೊಂಡಾಗಳ್ಸುತೋತ್ಸಾಹಮಾ

ಪಪೊಲುತ್ಸಾಹಮನಾಳ್ದು ಚಂದ್ರಕಿರಣಂ ತಳ್ತೊಯ್ವುಮಾದ್ಯಚ್ಚಕೋ
ರವಧೂಲೀಲೆಯನೇಂ ಲಸತ್ಕುಮುದಿನೀಸೌಂದರ್ಯಮಂ ತಾಳ್ದಿವಳ್ ೪೯

ವ॥ ಅಂತತಿಪ್ರಮೋದರಸಪ್ರವಾಹದೊಳ್ ಮನಮನೋಲಾಡಿಸಿ ಕಿಱಿದುಂ ಪೊೞ್ತಿನಿರ್ದು ಮಣಿಮಯಯಾಸನದಿಂದೆರ್ದು ಮದನಮೋಹನವಿದ್ಯಾ ದೇವತೆಯ ಪರಿವಾರದೇವತೆಯರಂತೆ ಪರಿಚರ್ಯಾಚಾತುರ್ಯಮನಪ್ಪುಕೆಯ್ದ ಪರಿವಾರವಧೂಜನವಳಕ ಜಾಳದಿನಳಿಮಾಳೆಯಂ ನೆರಪುವಂತೆ ತರಳಲೋಚನ ಮರೀಚಿಯಿಂ ದಿಗ್ಭಿತ್ತಿಯಂ ತೆರೆಸುತ್ತುವಂತೆ ವಿಭ್ರಮಭ್ರೂಲತಿಕೆಯಿನತನುಚಾಪಮಂ ಪಸರಿಸುವಂತೆ ಬಿಂಬಾಧರಕಾಂತಿಯಿಂ ಕಂತುರಾಗರಸದ ಪೊನಲಂ ತಿರ್ದುವಂತೆ ಮಣಿಭೂಷಣಮಯೂಖ ಮಾಲೆಯಿನಂಬರಮಂ ಚಿತ್ರಿಸುವಂತೆ ಬಳಸಿ ಬರೆ

ಆವೆಡೆ ಹಂಸಿಗೀ ನಡೆಯ ಚೆಲ್ವೆನೆ ನೂಪುರದಿಂಚರಂ ಸ್ಮರಂ
ಜೇವೊಡೆದಂದಮಾಗೆ ಮೃದುಪಾದತಳಂಗಳ ಕೆಂಪುಕೂಡೆ ಕೆಂ
ದಾವರೆವೂಗಳಂ ಕೆದಱುವಂತಿರೆ ಕುಂತಳ ಸೌರಭಕ್ಕೆ ಭೃಂ
ಗಾವಳಿ ಮೇಲೆ ಪೀಲಿದಟ್ಟೆಯಂತಿರೆ ಬಂದಳದೊಂದು ಲೀಲೆಯಿಂ ೫೦

ವ॥ ಆಗಳವನೀಪತಿ ಘೋಂಕಸುಣ್ಮಿ ಪೊಣ್ಮಿದ ಮಣಿನೂಪುರಕಿಂಕಿಣಿ ಕ್ವಣಿತಂಗಳುಮಂ ಮಣಿಮೇಖಳಾವಳಯಘಟಿತಘಂಟಾರವಂಗಳುಮಂ ಮಣಿಶೃಂಖಳಾಕಳಾಪಝುಂಕಾರಂಗಳುಮಂ ಮಣಿಕಟಕಚಟುಳನಿನದಂಗಳುಮನಾಲಿಸಿ ನಿಜಮನೋವಲ್ಲಭೆಯ ಬರವನಱಿದೆಮೆಯಿಕ್ಕದಾ ದೆಸೆಯನವಳೋಕಿಸುತ್ತಿರ್ಪುದುಂ ಸಂತತ ಸೇವಾಗತಮಹಾಸಾಮಂತಸಂದೋಹಮವಸರಭೀತಿಯಿಂ ತೊಲಗಿ ಪೋಗೆಯುಂ ನಿಜನಿಯತಪ್ರದೇಶದಿಂ ಪ್ರತೀಹಾರರತಿದೂರಮಾಗೆಯುಂ ಲಕ್ಷ್ಮೀಮತಿಮಹಾದೇವಿ ತದಾಸ್ಥಾನಭವನಮಂ ಪುಗುವುದುಂ

ತನುವಿನ ರುಚಿಯುಂ ಮಣಿಮಂ
ಡನರುಚಿಯುಂ ನಯನಶಫರಮಂ ತೆಗೆವ ಮನೋ
ಜನ ಜಾಲಮೆಂಬಿನಂ ತೆ
ಕ್ಕನೆ ತೀವಿದುವಾಗಳಾ ಸಭಾಂಭೋಜಿನಿಯಂ ೫೧

ನೆರೆದು ನರೇಂದ್ರನೋಲಗದೊಳಿರ್ದ ವಧೂಜನಮೆರ್ದು ಸಂಭ್ರಮಂ
ಬೆರಸು ನೊಸಲ್ಗೆ ಕಯ್ಯನಿರದೊಯ್ಯೆ ಪಸುರ್ಮಣಿಕಂಕಣಂಗಳಿಂ
ಚರಮೊಡನುಣ್ಮೆ ಮಾಡಿದುದು ರಕ್ತಸರೋರುಹನಾಳಜಾಳಮಂ
ತರತರದಿಂದೆ ಸುತ್ತಿದಳಿನೀಕರಝುಂಕೃತಮೆಂಬ ಶಂಕೆಯಂ ೫೨

ವ॥ ಆ ಸಮಯದೊಳ್

ಪ್ರೇಮಾಲೋಕನಸುಮನೋ
ದಾಮದೆ ಬರೆ ತೆಗೆಯೆ ಭೂಭುಜಂ ನಿಜತನುದಿ
ವ್ಯಾಮೋದಂ ಬಳಸೆ ಲತಾ
ಕೋಮಳೆ ಕುಳ್ಳಿರ್ದಳೊಡನೆ ಹೇಮಾಸನದೊಳ್ ೫೩

ವ॥ ಅಂತಿರ್ಪುದುಂ

ಚಳಲೋಚನಚಂದ್ರಾತಪ
ವಿಳಾಸಮುಖಚಂದ್ರಬಿಂಬಮೀಗಳ್ತಾರಾ
ವಳಯಿತಮಾಯ್ತೆನಲಿಕ್ಕಿದ
ನಿಳಾಧಿಪತಿ ಸತಿಯ ಕೊರಲೊಳೆಕ್ಕಾವಳಿಯಂ ೫೪

ವ॥ ಆಗಳೊರ್ವಳಂತಃಪುರಕಾಂತೆ ವಯಃಪರಿಣತಿಯೊಡನೆ ಪರಿಣತಿವಡೆದ ವಚನಚಾತುರ್ಯಮಂ ಮೆಱೆಯಲರಸಿಗಿಂತೆಂದಳ್

ತಾಂ ಬಂದು ನಿಮ್ಮ ಬಯಸಿದು
ದಂ ಬೇಗಂ ತೀರ್ಚಿಪೋದುದಿನ್ನೆಗಮೀಗಳ್
ನೀಂ ಬಿಜಯಂಗೆಯ್ದರಸಂ
ಗಂಬುಜಮುಖಿ ಬಱೆದೆ ಸೊಬಗನಿಂತೇಱಿಸುವೈ ೫೫

ವ॥ ಎಂಬುದುಮರಸಂ ದರಹಸಿತದನಾರವಿಂದನಾಗಿ

ಆಂ ಬರ್ಪನ್ನೆಗಮಿರದೆ
ನ್ನಂ ಬರಮೇೞ್ದಿಟ್ಟದೆನ್ನ ಕಣ್ಬೊಣರೆಂಬೀ
ಮೀಂಬೊಣರಂ ಲಾವಣ್ಯಾ ರ
ಸಾಂಬುಧಿಯೊಳ್ದೇವಿ ಮೂಡಿ ಮುಳ್ಕಾಡಿಸುವೈ ೫೬

ವ॥ ಎನಲೊಡಂ

ಪವಳದ ಬಟ್ಟಂ ನಿಪ್ಪೊಸ
ತಿವನಿಪ ಮುತ್ತುಗಳ ಕಾಂತಿಗಳ್ ಮುತ್ತುವಪೊಲ್
ಧವಳೇಕ್ಷಣೆ ಬಾಯ್ದೆಱೆಯಂ
ಧವಳಿಸೆ ನಿಜದಂತಕಾಂತಿಸಂತಾನಂಗಳ್ ೫೭

ಪೂರ್ಣೇಂದುವದನೆ ಕಱಿದುದು
ಕರ್ಣಾಮೃತವರ್ಷಮೆನಿಸಿ ಕನಸಿನ ಫಲಮಂ

ನಿರ್ಣಯಮಾಗಿರೆ ತನಗಾ
ವರ್ಣೋತ್ತಮಮನಱೆಪಿದನಿತುಮಂ ನೆಱೆ ನುಡಿದಳ್ ೫೮

ಲಲನೆಯ ನುಡಿಯಿಂ ಹರ್ಷಂ
ನೆಲೆವೆರ್ಚೆ ಸುಧಾಂಶುಲೇಖೆಯೆಳವೆಳಗಿಂದಂ
ನೆಲೆವೆರ್ಚುವ ಪಾಲ್ಗಡಲಂ
ಗೆಲೆವಂದಂ ನೃಪಗುಣಾಶ್ರಯಂ ವೈಶ್ರವಣಂ ೫೯

ನೆರವೆನಗಕ್ಕುಮೀ ಸತಿಗೆ ಪುಟ್ಟಿದ ಬಾಳಕನೀ ಧರಿತ್ರಿಯಂ
ಧರಿಯಿಸಲೆಂಬ ಸಂತಸದಿನುಣ್ಮಿದವೊಲ್ಪುಳಕಂ ನಪಾಲದೋಃ
ಪರಿಘದೊಳಾಗಳುಣ್ಮಿದುವು ಮೋಹಲತಾಪರಿವೃದ್ಧಿಗೀಗಳೀ
ಸುರಿವುವೆ ಕಣ್ಣಪಾವೆಯೆನೆ ಪೊಣ್ಮಿದುವುತ್ಸವಬಾಷ್ಪವಾರಿಗಳ್ ೬೦

ಆವಧು ಬಂದಳಿರ್ದೆಡೆಗೆ ಸಾಲದೆ ಕಾಮತೆಯ ವಕ್ತ್ರದರ್ಶನಂ
ಕೇವಳಮೇ ವಿಲಾಸವತಿ ಸೋಂಕಿ ಸಮೀಪದೆ ಕುಳ್ಳಿರಿರ್ದಳಿ
ನ್ನೇವುದೊ ಪುತ್ರಲಾಭಶುಭಮಂ ಕನಸಂ ಸತಿ ಪೇೞ್ದಳೆಂದೊಡಿ
ನ್ನೇವೆಸಗೊರ್ಳ್ವೆ ಮಾಡವೆ ನೃಪಂಗಿವು ರಾಗದ ಬಳ್ಳಿವಳ್ಳಿಯಂ ೬೧

ವ|| ಅಂತರಸನತಿಹರ್ಷಚಿತ್ತನಾಗಿ

ವನಿತಾಸಾಮಾನ್ಯಮಲ್ತೀ ನಿಯಮಮೆನಿಸಿ ತಾತ್ಪರ್ಯದಿಂ ನೋಂತು ವಿಶ್ವಾ
ವನಿಯಂ ಕೈಕೊಂಡು ತಾಳ್ವಳ್ ನೆಱೆವ ತನಯನಂ ಗರ್ಭದೊಳ್ತಾಳ್ದಿದ್ದೈ
ಮಾನಿನಿ ನಿನ್ನಿಂದೆನ್ನ ರಾಜ್ಯಂ ಸಫಲಮೆನಿಸಿದತ್ತೆನ್ನರಾಜಾಲಯಂ ಪಾ
ವನಮಾದತ್ತೆನ್ನವಂಶಂ ಕುಲನದಿಯವೊಲಾಯ್ತವ್ಯವಚ್ಛಿನ್ನಮೀಗಳ್ ೬೨

ವ|| ಎಂದು ವಿಲಾಸವತಿಗೆ ಮನೋವಿಕಾಸಮನೆರಡಱೆಯದೊಳವಿನ ಮನ್ನಣೆಯ ಮಾತುಗಳಿಂ ಪಡೆದು ಶರೀರರಕ್ಷಣೆಗಂ ಪರಿಚರ್ಯೆಗಂ ಸಮಯೋಚಿತಕುಶಲರಪ್ಪ ಗುರುಜನಭಿಷಗ್ಜನಗಣಕಜನಗಣಿಕಾಜನಧಾತ್ರೀಜನಕುಲಮಹತ್ತರಿಕಾಜನಮನಂ ಸಮರ್ಪಿಸುವುದುಮನಂತರಂ

ಜನಪತಿಗಂ ಸತಿಗಂ ನಿ
ತ್ಯನಿಯಾಮ ಕ್ಷಣಮನಱೆಪುವಂತಿರೆ ಮಧ್ಯಂ
ದಿನಸಮಯಭೂರಿಭೇರಿ
ಧ್ವನಿ ಕರ್ಣಪಥಾವತೀರ್ಣಮಾದತ್ತಾಗಳ್ ೬೩

ವ|| ಅದಂ ಕೇಳ್ದು

ಸಂಗೀತಕದಿಂ ಕಾವ್ಯ ರ
ಸಂಗಳಿನತಿಚತುರವಿಬುಧಗೋಷ್ಠಿಗಳಿಂದು
ತ್ತುಂಗಕುಚೆ ತಡೆದುದೀ ನಿಜ
ಸಂಗತಿಯಂ ಪೊೞ್ತು ಪೋದುದರೆಗಳಿಗೆಯವೊಲ್ ೬೪

ವ|| ಎಂದು ವೇಳಾತಿಕ್ರಮಶಂಕೆಯಿಂ ಮನ್ನಿಸಿ ವಿಸರ್ಜಿಸುವುದುಮರ್ಧಾಸನದಿನೆೞ್ದು ಪೂಮಾಲೆಯುಮನವನೀಪತಿಯ ನಯನಕುವಲಯಮಾಲೆಯುಮನಾಂತು ಬೞಿಲ್ಮುಡಿಚೆಲುವಿಂಗೆ ಮುಡಿಗಪಿದಂತೆ ಸೊಗಯಿಸೆಯುಂ ಕೊರಲೊಳಿಕ್ಕಿದೆಕ್ಕಸರದ ಕೆಂಬಟ್ಟೆಯತೊಂಗಲನಂಗಜಂಗಮಲತೆಯ ತಳಿರ ತೊಂಗಲಂತೆ ಪೊಳೆಯಯುಂ ಮೇಲುದಱಸೆಟಂಗನುಱು ಸೆಱಗೆಯ್ಯು ಪೊಱಪೊಣ್ಮುವ ಪರಭಾಗ ಶರೀರಕಾಂತಿಲಾವಣ್ಯರಸದ ತಂದಲನಗುಂದಲೆ ಮಾಡೆಯುಂ ಘನನಿತಂಬಬಿಂಬಮಂ ಬಳಸಿದ ನೂಲ ತೊಂಗಲ ಮಧುರಧ್ವನಿ ಮನುಜಮಕರಧ್ವಜನ ಮನಮನೊಡನೊಡನೆ ಕರೆವಂತಡಿಗಡಿಗೆ ಪೊಣ್ಮೆಯುಂ ಮುಂದೆರಡಡಿಯಂ ನಡೆದು ಸುಖಾಸನಾರೂಢರ ತನ್ನಿನಿಯನ ಬಲ್ಮೆಯಲ್ಲದ ನಲ್ಮೆಯ ಪರಮಪದಮನೋರೊರ್ವರೊಳ್ ನುಡಿವ ಕೆಳದಿಯರ ನುಡಿಯನಾಲಿಸುತ್ತುಂ ನಿಜನಿವಾಸಕ್ಕೆ ಬಿಜಯಂಗೆಯ್ದು ಮಜ್ಜನ ಭೋಜನಾದಿ ದಿವಸ ವ್ಯಾಪಾರಮಂ ತೀರ್ಚಿ ಕೆಲವು ದಿವಸಮಿರ್ಪನ್ನೆಗಂ

ಧವಳಾಪಾಂಗಮರೀಚಿಗಳ್ಪುದಿದುವೆಂಬನ್ನಂ ಕಪೋಳಂ ಬೆಳ
ರ್ತುವು ಭೃಂಗಾವಳಿ ಸುಯ್ಗೆ ಸಾರ್ವತೆಱದಿಂ ಸುರ್ಕುಂಗುರುಳ್ಮಾಲೆಸೀ
ೞ್ದುವುತನ್ನೊಳ್ಳಿಲಿವರ್ಚಿ ರಾಗರಸವಾಗಳ್ತೀವಿ ತಳ್ಕೆಂಕಗು
ಟ್ಟುವ ಪದ್ಮಾಕರದಂತೆ ಕಾಂತೆತಳೆದಳ್ ಬೇಱೊಂದು ಲಾವಣ್ಯಮಂ ೬೫

ಅತಿವೃತ್ತೋನ್ನತಿಯಿಂ ವಿರಾಜಿಪುವು ಮುನ್ನಂ ಗರ್ಭದೊಳ್ ಕೊರ್ವಿ ಬಾ
ಮುತಟಕ್ಕೆಯ್ದುವಿೀಗಳೆಂದು ಪದಪಿಂ ತತ್ಕಾಮಿನೀಪುಣ್ಯದೇ
ವತೆ ಕಣ್ಣಂಜಲ ದೋಷಮಂ ಪರಿಪಲೆಂದಂದಿಟ್ಟ ರಕ್ಷಾಂಜನಾ
ಕೃತಿಯಿಂ ಪೀನಪಯೋಧರಾನನಮವೇಂ ಕರ್ಪಿಂಗಪರ್ಪಾಮವೋ ೬೬

ಉದರದೊಳಿರ್ದ ತನೂಜನ
ಹೃದಯನಿವಾಸಿನಿಯೆನಿಪ್ಪ ಲಕ್ಷ್ಮೀವಧು ತಾ
ಳ್ದಿದ ಲೀಲಾಂಭೋರುಹನಾ
ಳದ ನೆಟಿಲೆನೆ ರೋಮರಾಜಿ ತಳೆದುರ್ದು ಕರ್ಪಂ ೬೭

ವಳಿರೇಖೆ ಮಸುಳೆಗರ್ಭಂ
ಬಳೆವುದು ಮೊದಲಳಿದು ಸತಿಯ ಮಧ್ಯಂ ಬೆಳ್ಪಂ

ತಳೆದುದು ನಯನಾನಂದಮ
ನೆಳವೆಱೆ ಪೂರಿಪೂರ್ಣವಾದೊಡಂ ಪುಟ್ಟಿಪವೊಲ್ ೬೮

ಸುರಭೂರುಹದಗೆಯನಿಡಲ್
ಪರಿಜನದಭಿಜನದಗೇಹದೊಳ್ ಬಯಸಿದಳಾ
ಸರಸಿಜಮಣಿ ಗರ್ಭಸ್ಥನ
ಪರಮೌದಾರ್ಯಪ್ರಭಾವಮಂ ಪ್ರಕಟಿಪವೊಲ್ ೬೯

ಬಸಿಱ ಮಗಂಗಿಲ್ಲಿವರಂ
ವಸುಧಾತಳಮೇಕಭೋಗ್ಯಮೆಂದಱಿಪುವವೊಲ್
ವಸುಧೆಯ ನಾಲ್ಕುಂ ಕಡೆಯೆಡೆ
ಯ ಸುರಭಿಮೃತ್ತಿಕೆಯನಱ್ತಿಯಿಂ ಸೇವಿಸುವಳ್ ೭೦

ವ॥ ಆಗಳವನೀಶ್ವರನನೇಕಮಂಗಳಾನಕರವಂಗಳೊದವೆ

ರನ್ನದ ಬಾಯಿಸಕ್ಕೆ ಪಲವಂದದ ಚಂದದ ಸೀರೆಗೆನ್ನವ
ರ್ತನ್ನವರೆನ್ನದಿತ್ತೊಸಗೆಗೀ ನೆಲದೊಳ್ ಪೊಱಗಾಱುಮಿಲ್ಲೆನಲ್
ಮನ್ನಿಸಿ ಮೆಯ್ಮೆಯಂ ಮೆಱೆದು ಪುಂಸವನಂ ಮೊದಲಾಗೆ ತಕ್ಕುವಂ
ತನ್ನಿನಿಯಳ್ಗೆ ಮಾಡಿಸಿದನುತ್ಸವದಿಂ ನೃಪನುತ್ಸವಂಗಳಂ ೭೧

ವ॥ ಅಂತು ನೆಗಟ್ದಿ ಮಹೋತ್ಸವಂಗಳೊಡನೆ ಗರ್ಭಮುಂ ಬಂಧುಜನ ಹರ್ಷಗರ್ಭಮುಂ ಪರಿಪೂರ್ಣಮಾಗೆ

ಮರಕತರಂಗದೊಳ್ ರಮಣಿ ತೀವಿದಗರ್ಭದ ಬಿಣ್ಪಿನಿಂ ನಯಂ
ಬೆರಸೆಡೆಯಾಡುವಾಗಳತಿಯೂಡಿದ ಮೆಲ್ಲಡಿವಜ್ಜೆಗಳ್ಮನೋ
ಹರಮೆನಿಸಿರ್ದುವೀ ಸತಿಯ ಗರ್ಭದೊಳಿರ್ದ ತನೂಜನಾದವಂ
ವರನೆಸಗೆಂದಿಳಾವಧುಗೆ ಪಲ್ಲವಿಸಿತ್ತನುರಾಗಮೆಂಬಿನಂ ೭೨

ಹಾರಮನಿಕ್ಕಿ ಮಿಕ್ಕ ಕನಕಾಭರಣಂಗಳ ಬಿಣ್ಪನೇನುಮಂ
ಸೈರಿಸದಿರ್ಪುದಪ್ಪುದೆ ವಲಂ ಕನಕಾದ್ರಿಯ ಬಿಣ್ಪನಪ್ಪೊಡಂ
ಸೈರಿಸದರ್ಭಕಂ ಬಳೆಯೆ ಗರ್ಭಸರೋಜದೊಳಾವಿನೀಳನೀ
ರೇರುಹನೇತ್ರ ತತ್ಕನಕಮಾತ್ರದ ಬಿಣ್ಪನದೇಕೆ ಸೈರಿಪಳ್ ೭೩

ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತಮಂಗಳಪ್ರಸಾ
ಧನಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತೆಂ

ಗಿನ ತಿರುಳೋಲೆ ತಾವರೆಯನೂಲುಡೆನೂಲ್ಸಿರಿಕಂಡವಣ್ಕೆ ಮು
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ ೭೪

ಘನಕುಚೆ ಮೇಳದಂಗನೆಯ ಮೇಲೆ ಮಲಂಗಿ ಸರೋಜಪತ್ರವೀ
ಜನಪವನಂ ವಿಕಾಸಮನೊಡರ್ಚೆ ಮನಕ್ಕೆ ಸುಧಾಪ್ರವಾಹಮಂ
ಬಿನಮೆರಡುಂ ಕೆಲಂ ಬಿಡಿದು ಬಾಜಿಪ ವಂಶದಿನೋಜೆವೆತ್ತ ಗಾ
ಯಿನಿಯರಸೀಯನಪ್ಪ ರಸಗೇಯಮನಾಲಿಸುತಿರ್ಪಳೊರ್ಮೆಯುಂ ೭೫

ಸೋರ್ಮುಡಿ ಮಾಲೆಯಿಂ ಕದುಪುಗಳ್ ಮಲಯೋದ್ಭವಪತ್ರಭಂಗದಿಂ
ಪೆರ್ಮೊಲೆ ಹಾರದಿಂದೆಸೆಯೆ ಬಂಬಲವಾಡಿದ ರೂಪು ಗಾಡಿಯಂ
ಸೂರ್ಮಡಿ ಮಾಡೆ ಮೇಳದವಳಂ ಸತಿ ನಿರ್ಜರಗರ್ಭಭಾರದಿಂ
ನೆರ್ಮಿ ನಿಮಿರ್ದುವಳ್ ಪುರುಳಿಯೊಳ್ಪರಿಹಾಸವಚೋವಿಳಾಸಮಂ ೭೬

ವ॥ ಅಂತು ವಿವಿಧವಿಲಾಸಂಗಳಿಂ ದಿವಸಂಗಳಭಿಲಷಿತಫಳಪ್ರಸವಂಗಳಾಗೆ ಸುಖಪ್ರಸವಸಮಯದೊಳ್

ಶುಭವಾರಂ ಶುಭವಾಸರಂ ಶುಭಮುಹೂರ್ತಂ ಕೂಡೆ ತಾರಾಬಲಂ
ಶುಭಮಂ ಮಾಡೆ ಶುಭಗ್ರಹಂ ನಿಲೆನಿಜೋಚ್ಚಸ್ಥಾನದೊಳ್ದೀರ್ಘಭುಜ
ಪ್ರಭುಚಿಹ್ನಂ ಶುಭಲಕ್ಷಣಂ ತನುವಿನೊಳ್ಮೆಯ್ದೋಱೆ ಬಾಲಾರ್ಕಸ
ನ್ನಿಭತೇಜೋನಿಧಿ ನಂದನಂ ಸತಿಗೆ ವಂಶಾನಂದನಂ ಪುಟ್ಟಿದಂ ೭೭

ವ॥ ಆ ಸಮಯದೊಳ್

ಪಸರಿಸಿದತ್ತು ಪೂವಲಿ ವಸುಂಧರೆ ತಿಂಥಿಣಿಯಾಗೆ ಕೂಡೆ ಮೊ
ರ್ಮಿಸಿದುದು ಮಂಗಳಾನಕರವಂ ದೆಸೆ ತೆಕ್ಕನೆ ತೀವೆ ತಬ್ಬಿ ಮಿ
ಳ್ಳಿಸಿದುದು ಕೇತನಾವಳಿ ವಿಯತ್ತಳಮಿಟ್ಟೆಡೆಯಾಗೆ ಕಾಳ್ಪುರಂ
ಮಸಗಿದುದುತ್ಸವಾಮೃತತರಮಗಿಣೆ ಪೌರಜನಾಂತರಂಗದೊಳ್ ೭೮

ಮಂಗಳ ಗಾಯಿನಿಯರ ಗೀ
ತಂಗಳನುಪಹಾರ ಪುಷ್ಪ ಮಧುಪಾನ ವ್ಯಾ
ಸಂಗಳೊಳಿರ್ದ ಮಧುವ್ರಜ
ದಿಂಗೊರಲಿರ್ಮಡಿಸಿದತ್ತು ರಾಜಾಂಗಣದೊಳ್ ೭೯

ವ॥ ಅಲ್ಲದೆಯುಂ

ಪಾಡುವ ಗಾಣರಾಡುವೆಳವೆಂಡಿರುಪಾಯನಮಂ ಪರಸ್ಪರಂ
ನೀಡುವ ಸಜ್ಜನಂಗಳೆಡೆಯಾಡುವ ದಾದಿಯರಚ್ಚ ಮಾಲೆಯಂ

ಸೂಡುವ ಪುಣ್ಯಕಾಮಿನಿಯರುತ್ಸವವಾರ್ಧಿಯೊಳತ್ತಲಿತ್ತ ಲೋ
ಲಾಡುವ ಬಂಧುಗಳ್ ನೃಪನಿವಾಸನಿವಾಸಮನುಂಟುಮಾಡಿದರ್ ೮೦

ವ॥ ಮತ್ತಮಲ್ಲಿ ಶುಭಗ್ರಹಸ್ಥಾನಮಂ ತಮ್ಮೊಳೊರೊರ್ವರ್ ತಿಳಿಪುವ ಗಣಕರುಂ ಧವಳಕಳಮಾಕ್ಷತ ಪ್ರಸಸ್ತಹಸ್ತರಪ್ಪ ಹಿತಪುರೋಹಿತರುಂ ಮಂಗಳೋಪಕರಣ ದ್ರವ್ಯಂಗಳನನವರತಂ ಕುಡುವ ಗೃಹಮುಹತ್ತರ ಪರಿಚಾರಕರುಂ ಮಂಗಳವೃತ್ತಂಗಳನೋದುವ ಪುಣ್ಯಪಾಠಕರುಂ ಕೆದಱುವ ಪಿಷ್ಟಾತಕ ಚೂರ್ಣಮುಂ ಪಸರಿಸುವ ಪಟವಾಸಮುಮೆಸೆಯೆ ತತ್ಸಮಯದೊಳ್

ವದನಾಂಭೋಜವಿಕಾಸಮುತ್ಸುಕ ಪದನ್ಯಾಸಂನರೇಂದ್ರಂಗೆ ದೂ
ರದೊಳಂ ಸಂತಸವಾರ್ತೆಯುಂ ತಿಳಿಪೆ ಬೇಗಂ ಬಂದಲಂಪಿಂದ ಮಿ
ಕ್ಕಿದ ಕೇಯೂರಮನೀಟ್ಟುಕೊಂಡು ಸುತಜನ್ಮೋತ್ಸಾಹಮಂ ಪೇೞ್ದು ಮಾ
ಡಿದಳೊರ್ವಳ್ ಪರಿಚಾರಿಕಾ ಚತುರೆ ಚಿತ್ತಕ್ಕಂದತಿ ಪ್ರೀತಿಯಂ ೮೧

ವ॥ ಆಗಳವನಿಪತಿ ಸುತೋತ್ಸವಸಂಭ್ರಮುಸ್ವಾಂತ [ಚಿತ್ತ] ನಂತಃಪುರಪ್ರವೇಶ ಯೋಗ್ಯಪರಿಮಿತಪರಿಜನಂ [ಬೆರಸು] ಧನಶ್ರೀಮಹಾದೇವಿಯ ಗೃಹಕ್ಕೆ ಬಿಜಯಂಗೆಯ್ದು ಗಣಕಗಣನಿರೂಪಿತಶೂಭಮುಹೂರ್ತದೊಳ್ ಜಾತಕರ್ಮಕಲ್ಯಾಣಮಂ ಮೆಱೆದು ರಕ್ಷಾವಿಧಾನವಿಳಸಿತಪ್ರಸೂತಿಕಾಸದನಮಂ ಪೊಕ್ಕು ನಿಜಮನೋವಲ್ಲಭೆಯ ಲಜ್ಜಾರಸಮನುಗುಳ್ವ ಮುಖಚಂದ್ರನಂ ನೋಡಿ

ಇವಳೀಸಂಬಂಧದಿಂದಂ ಸಫಳಮೆನಿಸಿದತ್ತೆನ್ನ ಸಂಸಾರಮೆಂದು
ತ್ಸವದಿ ತತ್ಸೂತಿಕಾಗೇಹಮನನುಪಮದೇಹಾಂಶುವಿಂದಾವಗಂ ತೀ
ವುವ ಪುತ್ರಾಸ್ಯೇಂದುವಂ ಕಾಣಲೊಡಮತಿಶಯ ಪ್ರೇಮಮಂ ತಾಳ್ದಿದಂ ವೈ
ಶ್ರವಣಂ ಸಸ್ಮೇರವಕ್ತ್ರಂ ಸಮುದಿತಪುಳಕೋತ್ಕರ್ಷಹರ್ಷಾಶ್ರುವರ್ಷಂ ೮೨

ಪ್ರತ್ಯಗ್ರಸಮುತ್ಪನ್ನಾ
ಪತ್ಯಮುಖಾಳೋಕಸುಖಮನಱೆಯದ ದಿವಿಜ
ಸ್ತುತ್ಯಸುಖಂ ಸುಖಮಲ್ತೆಂ
ದತ್ಯಂತಸುಖಾನುಭವದೊಳರಸಂ ತಣಿದಂ ೮೩

ವ॥ ಅಂತು ಸುತಮುಖಾಲೋಕನಸುಖಸುಧಾರಸಮನನುಭವಿಸಿ

ಸುರಕುಜಮೀವ ದಿವ್ಯವಸನಂಗಳನರ್ಘ್ಯವಿಭೂಷಣಂಗಳೀ
ದೊರೆಯವೆ ಮಂದರಾಚಳದ ಕಾಂಚನಮೇನಿನಿತುಂಟೆ ಪನ್ನಗೇ
ಶ್ವರನ ಫಣಾಮಣಿಪ್ರಚಯಮಿನ್ನವೆ ಪೇೞೆನಿಪನ್ನವಂ ನಿರಂ
ತರಮಿರದರ್ಥಿ ಸಂತತಿಗೆ ಬಾಂಧವಕೋಟಿಗೆ ಕೊಟ್ಟನಾ ನೃಪಂ ೮೪

ಕನಕಮನಾರ್ಪನಿತಂ ಬೇ
ಟ್ಪನಿತಂ ದಿವ್ಯಾಂಬರಂಗಳಂ ರತ್ನಮನೊ
ಲ್ವನಿತಂ ಭೂಷಣಮಮಂ ಸಾ
ಲ್ವನಿತಂ ಧರೆಗೆಲ್ಲಮಿತ್ತನಾ ಧರಣೀಶಂ ೮೫

ವ॥ ಅಂತು ಮಹೋತ್ಸವಮಹಾಮಹಿಮೆಯಂ ಮಾಡಿ ದಶಮ ದಿನದೊಳ್

ಈ ಧರೆಗೆಲ್ಲಂ ಕನಕಮ
ಹೀಧರಮೇಂ ಮನೆಯೊಳುಂಟೆ ಪೇಟಿನೆ ಪಿರಿದಿ
ತ್ತಾ ಧರಣೀಶಂ ಸುತನಂ
ಶ್ರೀಧರಶುಭಕರಣನಾಮದೊಳ್ ಯೋಜಿಸಿದಂ ೮೬

ವ॥ ಅಂತಾ ನಾಮಕರಣಕಲ್ಯಾಣನಂತರಂ ಕತಿಪಯದಿನದೊಳ್

ಅನಿಮಿತ್ತದರಸ್ಮಿತದಿಂ
ದನಪೇಕ್ಷಿತ ಸಕಲದೃಷ್ಟಿದರ್ಶನದಿಂ ತ
ಜ್ಜನನೀ ಜನಕರ ಮನದೊಳ್
ತನೂಭವಂ ಮೋಹರಸಮನೇಂ ತೀವಿದನೋ ೮೭

ವ॥ ಅಂತು ನಿರಂತರೋಪಚಯಮನಪ್ಪುಕೆಯ್ದು (ಹರಿಣೀವೃತ್ತ)

ಸ್ಖಲಿತಗಮನಂ ಮುಗ್ಧಾಲಾಪಂ ಸ್ಮಿತೋಜ್ಜ್ವಲದಂತಕು
ಟ್ಮಳಿತವದನಂ ಸ್ನಿಗ್ಧಾಲೋಕಂ ಪ್ರಸಾರಿತಕಜ್ಜಲಂ
ತಿಳಕವಿಳಸದ್ಭಾಳಂ ಭೂಷಾಪರಂಪರಲೀಲೆಯಂ
ತಳೆಯೆ ತಳೆದಂ ಚೆಲ್ವಂ ಲಂಬಾಳಂ ನೃಪಬಾಲಕಂ ೮೮

ವ॥ ಅಂತದೃಷ್ಟಪೂರ್ವ ಶೈಶವಾತಿಶಯಮಂ ತಳೆದು ಸಕಲ ಜನಸುಕೃತ ಸುರಮಹೀರುಹಂ ಬೆಳೆವಂತೆ ಬಳೆದು

ಸಿರಿಗೆ ನೆಲೆಯಾದ ಪೊಂದಾ
ವರೆಯ ಮುಗುಳ್ಮೆಲ್ಲಮೆಲ್ಲನಲರ್ದಪುವೆಂಬಂ
ತಿರೆ ದಿವಸಕ್ರಮದಿನಧಃ
ಕರಿಸಿದನಾ ನೃಪತನೂಭವಂಶೈಶವಮಂ ೮೯

ಗುರುಸನ್ನಿಧಿಯೊಳ್ಮುನ್ನಂ
ಪರಿಣತಿವಡೆದಿರ್ದ ಸಕಳವಿದ್ಯೆಯನೀಗಳ್

ಪರಿವಿಡಿಗೆಯ್ವಂತೆ ಕಳಾ
ಧರನಾದಂ ಶ್ರೀಧರಂ ಧರಾಧರಧೈರ್ಯಂ ೬೦

ವ|| ಅಂತಖಿಳಶಸ್ತ್ರವಿದ್ಯಾವಿಶಾರದನಾಗಿ

ಚೂಳಾಕರಣದಿನತ್ತಲೆ
ಭಾಳಚ್ಛಾಯೆಯೊಳೆ ಭಂಗಮಂ ಪಡೆದರಿಭೂ
ಪಾಳರ್ಗೆ ದೀನವೃತ್ತಿಯ
ಚೂಳಾಕರ್ಮಮನೊಡರ್ಚಿದಂ ನೃಪತನಯಂ ೬೧

ಉಡೆವಣಿ ಪಱಿಯಲೊಡಂ ಪಡ
ಲಿಡ ಕೆಲವಣಿ ತೋಳೊಳಿರ್ಪ ಜಯಲಕ್ಷ್ಮಿಗೆ ಮಾ
ರ್ಪಡೆಯಾನೆಯ ಕೆಲವಣಿಯಿಂ
ದುಡೆವಣಿಗಟ್ಟಿಸಿದನಾ ನರೇಂದ್ರಕುಮಾರಂ ೬೨

ಉಪನಯನಾನಂತರಮೊಂ
ದುಪನಯನಂ ನಿಟಲತಟದೊಳುಂಟೆನೆ ವಿದ್ವಿ
ಷ್ಟಪುರಂಗಳನಂದುರಿಪಿದ
ನುಪಮಾತೀತಪ್ರತಾಪನಿಧಿ ನೃಪತನಯಂ ೬೩

ನಿಡುದೋಳ್ ನೀಳ್ದುವು ನೀಳ್ಕಲುದ್ಧತಸಿತಚ್ಛತ್ರಂಗಳಂ ಸಾಡೆಯುಂ
ತೊಡೆಗಳ್ಕೊರ್ವಿದುವುಗ್ರದಂತಿಯೆನದಿರ್ಪಲ್ ವಕ್ಷವಕ್ಷೋಣವಾ
ಯ್ತೆಡೆಯಾಗಲ್ ಪಿರಿದಪ್ಪ ಲಕ್ಷ್ಮಿಗೆನೆ ಲೋಕಾಶ್ಚರ್ಯ ಚಾತುರ್ಯಮಂ
ಪಡೆದಂ ಯೌವನದೇಟಿಗ್ನಿಯೋಳ್ಸುಜನಸಸ್ಯಾಂಭೋಧರಂ ಶ್ರೀದರಂ ೬೪

ವ|| ಅಂತು ನವಯೌವನಶ್ರೀಯನಪ್ಪುಕೆಯ್ಯಲೊಡಂ

ಮದನನ ಪೂವಿನಂಬುಗಳ ಪೆಣ್ಬರಿಜೆಂಬ ಬೆಡಂಗನುಂಟು ಮಾ
ಡಿದ ಕಳಹಂಸಿಯಂತುಭಯಪಕ್ಷವಿಶುದ್ಧಿಯನಪ್ಪುಕೆಯ್ದು ಪೆಂ
ಪೊದವಿದ ರಾಜಕನ್ನಿಕೆಯರಂ ಪಲರಂ ತನಯಂಗೆ ಮಾಡಿದಂ
ಮದುವೆಯನಾನೃಪಂ ಬಿಯದ ಚಾಗದ ದೊಡ್ಡವಗೆಡ್ಡಮೆಂಬಿನಂ ೬೫

ವ|| ತದನಂತರಂ

ಗಂಗಾಸಿಂಧುಜಳಂಗಳಿಂದಮಭಿಷೇಕಂಗೆಯ್ದು ಮಾಂಗಲ್ಯಗೀ
ತಂಗಳ್ ಕರ್ಣರಸಾಯನಂಗಳೊದವುತ್ತಿರ್ಪನ್ನಮುತ್ಸಾಹ ತೂ

ರ್ಯಂಗಳ್ ಘೂರ್ಣಿಸುವಸ್ವಮುತ್ಸವಮನತ್ಯಾನಂದದಿಂ ಮಾಡಿ ಪು
ತ್ರಂಗಿತ್ತಂ ಯುವರಾಜಸಂಪದಮನಾಗಳ್ ರಾಜವಿದ್ಯಾಧರಂ ೯೬

ಪ್ರಿಯಕಾಂತಾತನಯಂ ಗಡ ಪ್ರತಿಮವಿದ್ಯಾವಿಕ್ರಮಾಚಾರಶು
ದ್ಧಿಯೊಳಾರ್ಗಂ ಪಿರಿಯಂಗಡುತ್ತಮವಯಸ್ಸಂಪತ್ತಿಪೂರ್ಣಂ ಗಡ
ಸ್ವಯರಾಜ್ಯೋದ್ಧರಣಕ್ಷಮಂ ಗಡ ಮಗಂಗಿನ್ನಂಗೆ ಸಾಮ್ರಾಜ್ಯಲ
ಕ್ಷ್ಮಿಯನೊಲ್ದೀವುದುಗೆಟ್ಟು ತಂದೆ ಯುವರಾಜಶ್ರೀಯನೇನೀಯನೇ ೯೭

ವ॥ ಅಂತು ಯುವರಾಜಪದವೀಪ್ರತಿಷ್ಠಿತಂ ಮಾಡಿ

ಪಲವುಗಜಂಗಳಂ ಪಲವುವಾಜಿಗಳಂ ಮಣಿಭೂಷಣಂಗಳಂ
ಪಲವನನೇಕಯುದ್ಧರಸಲಾಲಸರಂ ತಳತಂತ್ರಮುಖ್ಯರಂ
ಪಲಬರಸೂರ್ಗಳಂ ಪಲವು ನಾಡುಗಳಂ ದಯೆಗೆಯ್ದು ಕೂರ್ಮೆ ಸ
ತ್ಫಲಮೆನೆ ತನ್ನುಮಂ ಮಗನುಮಂ ಸಿರಿಯೊಳ್ಳಮನಾಗಿ ಮಾಡಿದಂ ೯೮

ವ॥ ಅಂತು ಮಾಡಿ

ತಳೆದರ್ ಮಹಿಮೆಯನವನೀ
ತಳಪತಿಯುಂ ಸುತನುಮೊಂದೆ ಲಕ್ಷ್ಮಿಯನೆರಡುಂ
ಕಳಧೌತಸ್ತಂಭಂ ಮಂ
ಗಳತೋರಣರತ್ನಮಾಲೆಯಿಂ ರಂಜಿಪವೋಲ್ ೯೯

ಧರೆಯಂ ಕಾಯಲುಮರ್ಥಿಗಂ ಪರಿಜನಕ್ಕಂ ಬಂಧುವರ್ಗಕ್ಕಮಾ
ದರದಿಂದೀಯಲುಮುದ್ಧತಾರಿನೃಪರಂ ಸಂಗ್ರಾಮದೊಳ್ ಸೋವಲುಂ
ಧರಣೀಶಂಗರಡಾದುವಲ್ತೆ ಬಲಗೈಯೆಂಬನ್ನೆಗಂ ಶೌರ್ಯದಿಂ
ಪರಮೌದಾರ್ಯದಿನಂದು ತಂದೆಗೆ ತನೂಜಂ ತಂದನಾನಂದಮಂ ೧೦೦

ದ್ವಿಗುಣಿಸಿದತ್ತುದೋರ್ಬಳಚತುರ್ಬಳಮೀತನಿನೀ ನೃಪಂಗೆ ತಂ
ದೆಗೆ ಮಿಗಿಲಾದನೀ ತನಯನೆಂದು ಭಯಾಕುಲವೈರಿಸಂಕುಳಂ
ಪುಗಲೆಡೆಗಾಣದುಳ್ಕೊಡಮೆಯೆಲ್ಲಮನೊಪ್ಪಿಸಿ ನಿರ್ಣಯಂ ನಯಂ
ಬಗೆವುಗೆ ಮಾಡಿದರ್ಕಲುಷವೇಷಮನೊಲ್ಲದನುಪ್ರವೇಶಮಂ ೧೦೧

ಪರಿಪೂರ್ಣಂ ಕೋಶಗೃಹಂ
ಧರೆನಿರ್ದಾಯಾದವಾತ್ಮಜಂ ರಾಜ್ಯಸಮು
ದ್ಧರಣಕ್ಷಮನೆನೆ ತನಗಾ
ರ್ದೊರೆಯನೆ ವೈಶ್ರವಣನರಸುಗೆಯ್ಯುತ್ತಿರ್ದಂ ೧೦೨

ಎರಡೇ ಶೇಷಪ್ರಭಾಮಂಡಳಮೆರಡೆ ಸುಧಾವಾರ್ಧಿ ಚಂದ್ರತಪಂ ಮೇ
ಣೆರಡೇ ದೇವಾಪಗಾಂಭಃಪ್ಲವಮೆರಡೆ ಜಗಕ್ಕಾದುದಾಶ್ಚರ್ಯಮೆಂಬಂ
ತಿರೆ ಮೂಱುಂ ಲೋಕಮಂ ಮೂವಳಸೆ ನಿಜಯಶಂ ಸಜ್ಜನಾಧಾರನಾದಂ
ನಿರವದ್ಯಾಚಾರನಾದಂ ಚತುರಕವಿಜನಾಸ್ಥಾನರತ್ನಪ್ರದೀಪಂ ೧೦೩

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರ ಚರಣನಖ ಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಕುಮಾರೋದಯವರ್ಣನಂ ಚತುರ್ಥಾಶ್ವಾಸಂ ಸಂಪೂರ್ಣಂ.



# ಪಂಚಮಾಶ್ವಾಸಂ

ಶ್ರೀವನಿತೆ ವಕ್ಷದೊಳ್ಮು
ಕ್ತಾವಳಿಯಂತೆಸೆಯೆ ಕೀರ್ತಿ ಪೂಮಾಲೆವೊಲಾ
ಶಾವನಿತೆಗೆ ಶೇಖರಮನೆ
ಭೂವಿಶ್ರುತವಿಭವನಾದನಭಿನವಪಂಪಂ ೧

ವ॥ ಆ ಮಹೀವಲ್ಲಭನ ದಾನದಕ್ಷಿಣಸಮೀರಂ ಜನಾನುರಾಗಮನೊದವಿಸೆಯುಂ ಭುಜಪ್ರಯುತಾಪರ್ಯ್ಯಪನ್ನೋತ್ತರಾಯಣಮುತ್ತರೋತ್ತರಮಾಗೆಯುಂ ಭಾಸ್ವನ್ಮಂಡಲಾಗ್ರಮರೀಚಿ ಭೂಮಂಡಳಮಂ ಬೆಳಗೆಯುಂ ಧರ್ಮಾಮೃತರುಚಿ ವಿಶದಮಾಗೆಯುಂಯಶಸ್ತಿಳಕಮಖಿಳದಿಙ್ಮುಖಮನಳಂಕರಿಸೆಯುಂ ಬಾಂಧವಕುಳಮಭ್ಯುದಯ ಪರಂಪರೆಯನಪ್ಪುಕೆಯ್ಯೆಯುಂ ಅನುರಕ್ತಾಶೋಕವಲ್ಲರಿ ಪಲ್ಲವಿತಮಾಗೆಯುಮಿಂತಿಳಾಕಾಂತೆಗೆ ಸಂತತೋತ್ಸವಮನೀವ ಸಾಮ್ರಾಜ್ಯಂ ವಸಂತಸಮಯದೊಳ್ಮಚ್ಚರಿಸುವಂತೆ (ಇರೆ)

ಪದವಿಟ್ಟಳ್ಕೆಯ್ದಿಲಿಂ ತಾವರೆಗೆ ಸಿರಿಲತಾಕೋರಕಗ್ರಂಥಿ ನೀರೇ
ಱಿದುವೇೞುಂಜೌವನಂ ಚಂದ್ರಿಕೆಯನೆಳಸಿದತ್ತನ್ಯಪುಷ್ಪಸ್ತನಕ್ಕಾ
ದುದು ಬಾಳಕ್ರೀಡೆ ಪೆಣ್ದುಂಬಿಗೆ ಕುಸುಮಶರಜ್ಯಾರವಂ ತಾರಶಿಕ್ಷಾ
ಪ್ರದಮಾದತ್ತೀಗಳೀಗಳ್ ಶಿಶಿರದೆಸಕಮಂ ಮಿಕ್ಕುದಕ್ಕುಂ ಬಸಂತಂ ೨

ಮಧು ಬಂದುದೆಂದು ನಳಿನೀ
ವಧೂ ವಿರಚಿಸಿದರ್ಘ್ಯ ಪೂರ್ಣಹಸ್ತಾಕೃತಿಯಿಂ
ಮಧುಬಿಂದು ಪೂರ್ಣಮೆಸೆದುದು
ಮಧೂಕರನೀಲಾಂಗುಳೀಯಕಂ ಕೋಕನದಂ ೩

ದರದಳಿತಾಂಭೋರುಹದಳ
ಪರೀತಷಟ್ಪದನಿಬದ್ಧ ಝುಂಕಾರೈಕಾ
ಕ್ಷರದಿವ್ಯಮಂತ್ರದಿಂದಂ
ವಿರಚಿಸಿದನೊ ಮನಸಿಜಂಗೆ ಮಧು ಶಾಂತಿಕಮಂ ೪

ಹಿಮವಲೆದಿನ್ನೆಗಂ ಕಮಳಮಂ ಹಿಮಶೈಳಮನೊತ್ತುಗೊಂಡೊಡಾ
ಕಮಳದ ಬನ್ನಮಂ ಕಮಳಬಂಧೂ ಕಟಿಲ್ಚಲೊಡರ್ಚಿ ಬರ್ಪವೋಲ್
ಹಿಮಗಿರಿಗುತ್ತರಾಯಣಕೆ ಬಂದಸದಂತೆ ವಲಂ ಪ್ರಚಂಡವಿ
ಕ್ರಮಧನರಾತ್ತ ಬಾಂಧವಪರಾಭವಭಾರಮನೇಕೆ ಸೈರಿಪರ್ ೫

ನನೆದೋಜೆತ್ತು ವಸಂತಮೂತಿ ಸೊಬಗಂ ಕೊಂಡಾಡುವೀ ಡೊಂಬುವೇ
ಡೆನುತುಂ ಚಿತ್ತಜನಾಜ್ಞೆಮುತ್ತೆ ದೆಸೆಬಿದ್ದಂ ಬೆರ್ಚಿ ಲಜ್ಜಾರಸಂ
ಮನದಿಂ ಸೂಸಿದುದೆಂಬಿಸಂ ನಿಟಿಲದೊಳ್ಕಾಂತಾಕಪೋಳಂಗಳೊಳ್
ಸ್ತನದೊಳ್ತೋಳ ಮೊದಲ್ಗಳೊಳ್ನೆಗೆದುವಂದೋರೊಂದೆ ಘರ್ಮಾಂಬುಗಳ್ ೬

ರಾಗಂ ಪಿರಿದಾಯ್ತು ವಸಂ
ತಾಗಮದೊಳ್ ಮಿಕ್ಕ ರಾಗಮೇವುದೋ ಪೇಟಿಂ
ದೋಗಡಿಸುವಂತೆ ಕುಂಕುಮ
ರಾಗಮನುಟಿದೆಸಗಿದುದು ಜನಂ ಚಂದನಮಂ ೭

ಚಿತ್ತಭವಂ ಬಿಲ್ಲಂ ಗೊಲೆ
ಗೆತ್ತಿದನಿಸಲೆಂದು ಬಿರಯಿಯಂ ಬಿರಯಿಗೆ ಪ
ಲ್ಲೊತ್ತುವ ತೆಱದಿಂ ಬಲ್ನನೆ
ಯೊತ್ತುವ ಮಾಧವಿಯ ನನೆಯ ಮೊನೆಯಂಬುಗಳಿಂ ೮

ಕಯ್ವಂದುದು ಸಹಕಾರಂ
ಕಯ್ವಾರ್ಪುದು ಸಮಯಮಲ್ಲದೆಂದು ಮನೋಜಂ
ಮುಯ್ವಂ ನೋಡಿ ವಿಯೋಗಿಗೆ
ಕಯ್ವೀಸಿದನಾಯ್ತು ಡಾಮರಂ ಮಾಮರದಿಂ ೯

ಕೊನೆಯೊಳ್ಕೊನೆಗೊಂಬಿನ ಸಂ
ದಿನೊಳಿಲೆ ಪಣ್ತುದಿರ್ದು ಪೋದ ನೆಲೆಯೊಳ್ಕೊನರ್ಗಳ್
ಕೊನೆದೋಱೆ ಮದನನಲಗಿನ
ಮೊನೆದೋಜೆದನೊಡನೆ ಬಿರಯಿಗೆಳಮಾವುಗಳೊಳ್ ೧೦

ಎಳದಳಿರುಂ ಕೋರಕಮುಂ
ಬಳಸಿರೆ ಕೊನೆಗೊಂಬಿನೊಳ್ಕವಲ್ಗೊಂಬುಗಳೊಳ್
ಗಿಳಿಗಳ್ ಕೋರಕಮುಂ ಪಸು
ರ್ದಳಿರುಂ ಬಳಸಿದವೊಲಿಸೆದುವಿಮ್ಮಾವುಗಳೊಳ್ ೧೧

ಆವುದಱೊಳ್ ಪಿಕಪಂಚಮ
ರಾವಮತಿಪ್ರೌಢಮಾದುದಱಿಂದೆನಗಿ
ನ್ನಾವುಮೊ ತೀರಮುದೆಂದಿ
ಮ್ಮಾವಿನ ಪಣೆಗತನು ಪಟ್ಟಮಂ ಕಟ್ಟಿಸಿದಂ ೧೨

ಮಗುಟ್ದಿಂ ಮಗುಟ್ದಿಂ ಪೊಸಮ
ಲ್ಲಿಗೆಯ ಮುಗುಳ್ನೆಯ ದೇಸೆಯುಂ ಕಂದರ್ಪಂ
ಪೊಗಟ್ಟಿಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ - ೧೩

ಕುಸುಮಾಸವಕ್ಕೆ ಪಱವಂ
ಪೆಸರ್ಗೊಳ್ಳವು ತುಂಬಿ ಬಾಣರಱನೆಗೆ ಪಱಿವಂ
ಪೆಸರ್ಗೊಳ್ಳಂ ಮನಸಿಜನೆನೆ
ಪೊಸಸುಗ್ಗಿಯ ತೊಡವು ಪೆಱತೆ ಮಲ್ಲಿಗೆಯವೊಲಂ ೧೪

ಮನಸಿಜಕರೀಂದ್ರಕಟದೊಳ್
ಸೊನೆ ತೊಟ್ಟನೆ ಪುಟ್ಟುವಂತೆ ವಕುಳಕ್ಕೆ ಪಸು
ರ್ನನೆ ಪುಟ್ಟೆಬಿರಯಿಯೆರ್ದೆಗಳ್
ನನೆಗುದಿಗೊಂಡವು ಬಸಂತಮಾಸದ ಪುಗಿಲೊಳ್ ೧೫

ತಿಳಕಂ ಬನದೊಳ್ತಾರಾ
ತಿಳಕಂ ತುಹಿನಾಂಶುಬಿಂಬಮಂಬರದೊಳ್ ಕ
ಣ್ಗೊಳಿಸಿದುದಿರ್ದಿಲ್ಲಿಂ ಮುನ್ನಮ
ತಿಳಕಿಸದಿರ್ಕುಮೆ ಮನೋಜವಿಯಗಜೇಂದ್ರಂ ೧೬

ಕಣ್ಣಾರೆ ಬಿರಯಿಯಂ ಮೂ
ವಣ್ಣಂ ಬರಿಸಿದುವರಲ್ದ ಸುರಹೊನ್ನೆಯ ಪೊಂ
ಬಣ್ಣದ ಬೆಳರ್ವಣ್ಣದ ಕೆಂ
ಬಣ್ಣದ ಕೇಸರಮುಮೆಸಳ್ಗಳುಂ ಕರ್ಣಿಕೆಯುಂ ೧೭

ಪಗೆಗೊಂಡ ತುಂಬಿಯಂ ನಸು
ನಗುವವೊಲುಳ್ಳಲರ್ದು ಪೊಂಗಿ ಕಂಪಾದುದೆನಲ್
ಸೊಗಯಿಸಿ ಕಾಮನ ಪಗೆಯಂ
ಬಗೆಯಂ ತೀರ್ಚಿದುವು ಸುಗ್ಗಿಯೊಳ್ಸಂಪಗೆಗಳ್ ೧೮

ಸುಱಿದಳಿರಾಯ್ತು ಪೂಗಣೆಗೆ ಕೆಂಗಜೆ ಕೈಪೊಡೆಯಾಯ್ತು ಸುಣ್ಬಳಿ
ರ್ತಟಿದಳಿರ್ದೊಂಗಲಾಯ್ತು ನಿಜೆಗೊಂಡು ತಳಿರ್ಪದವಿಲ್ಲ ಕೊಪ್ಪಿನೊಳ್
ಪಟಿಯಿಗೆಯಾಯ್ತು ಕಂತುಗೆನಲೇವುದೊ ಮಿಕ್ಕತಳಿರ್ವಿಯೋಗಿಯಂ
ಕಟಿಕುಟಿಮಾಗೆ ಮಾಱ್ಪಿಡೆಗಶೋಕೆಯ ಕೆಂವಳಿರೊಂದೆ ಸಾಲದೇ ೧೯

ಪೂಜಿಸಿ ಮಂತ್ರದೇವತೆಯರಂ ಮಧುವಂ ವನಲಕ್ಷ್ಮಿ ಪೀರ್ವ ಪೊಂ
ಗಾಜಿನ ಬಟ್ಟಲಂತೆ ರತಿನರ್ತನಕಾಂಚನತಾಳದಂತೆ ರಾ
ರಾಜಿಪ ಕರ್ಣಿಕಾರಕುಸುಮಾಗ್ರದೊಳಿರ್ದಳಿಮಾಳೆ ಕಂತು ನೀ
ರಾಜನದೀಪಮಾಳಿಕೆಯ ಚೂಳಿಕೆಯಂತೆ ಕರಂ ಮನೋಹರಂ ೨೦

ಬಿರಯಿಗಳಂಜೆ ರಂಜಿಸಿತು ಮಾಧವಿ ಪೂಗುಡಿಯಿಂ ತಮಾಳಮು
ಬ್ಬರಿ ಪಲರ್ಗಂಪಿನಿಂ ವಿಚಕಿಳಂ ಸ್ಮಿತಮಂಜರಿಯಿಂ ನವಾಮ್ರವ
ಲ್ಲರಿ ಕೊನರಿಂದಶೋಕ ತಳಿರಿಂ ತಿಳಕಂ ಕಳಿಕಾಕದಂಬದಿಂ
ಕುರವಕವಂಕುರಪ್ರಕರದಿಂ ವಕುಳಂ ಮುಕುಳಪ್ರತಾನದಿಂ ೨೧

ಸಮಧಿಕಸೌಖ್ಯಮಾಗೆ ವನಲಕ್ಷ್ಮಿಗೆ ತಿರ್ದಿ ತಮಾಳನೀಳಕೇ
ಶಮನಿಸಿಸುಳ್ಳಿರಲ್ಪಿ ಕಮಳಾನನಮಂ ಸ್ತಬಕಸ್ತನಾಗ್ರದೊಳ್
ರಮಿಯಿಸಿ ಪಾಟಳಾದರಸುಧಾರಸಮಂ ಸವಿದಟ್ಟಿಱಿಂ ಲತಾಂ
ಗಮನಮದರ್ಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಳಂ ೨೨

ನನೆಯ ತೊಡಂಬೆ ಮಲ್ಲಿಗೆಯೊಳೊಂದೆರಡಾದುವು ಮಾಮರಂಗಳೊಳ್
ಕನರ್ಗೊನೆ ಮೂಱು ನಾಲ್ಕು ತಲೆದೋಱಿದುವುಂಡಿಗೆಸಾಧ್ಯಮಾದುದಿ
ನ್ನೆನಗೆ ಜಗತ್ತ್ರಯಂ ಮಲೆವರಾರೆನುತುಂ ಕುಸುಮಾಯುಧಂ ರತಿ
ಸ್ತನಪರಿರಂಭಣಪ್ರಣಯಿ ಪಾಡಿಸುವಂ ಬಿರುದಂ ಮದಾಳಿಯಿಂ ೨೩

ಚಳಿಕೆಗೆಯಾದುವಾದುದಱ ಬಲ್ಮುಗುಳಾವುದಱಗ್ರಪಲ್ಲವಾ
ವಳಿಮುಡಿಯಲ್ಕೊಡರ್ಚಿ ರತಿಗೊಪ್ಪಮನಿತ್ತುದು ಪುಷ್ಪವಲ್ಲಿಯುಂ
ಫಳತರುವುಂ ದಿಟಕ್ಕೆ ಪೆಱದಾವುದೊ ಮಲ್ಲಿಗೆ ಚೂತವೆಂದೆ ಕ
ಣ್ಗಳ ಪಸಿವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ ೨೪

ಕಳಿಕೆಯ ಮಾಪಿನೊಳ್ನಿಡಿಯ ಬಣ್ಣಸರಂ ಮಱಿದುಂಬಿವೆಣ್ಣ ಕಾ
ಕಳಿಯ ಸರಂ ಪಿಕಾವಳಿಯ ಕಯ್ವೆಸರಂ ಬಗೆಮುಟ್ಟೆ ಪಾಡುವಿಂ
ದೊಳದ ಸರಂ ಧನುರ್ಧರಮನಾಗಿಸಪೆಂದಸಮಾಸ್ತ್ರನೈಸರಂ
ಗಳಿಗಿಸದೀಗಳೀ ನೆಗಟ್ದಿನಾಲ್ಸರದಿಂದಿಸುವಂ ವಿಯೋಗಿಯಂ ೨೫

ಆಗೆ ಪಲವಾಗವೇ ಪಲವು ಬಿತ್ತುಗಳಿಂ ಕೊಸರಂಕುರಂ ತಳಿ
ರ್ಮುಗುಳಲರಿಂದೊಳಂ ಮಲೆಯೆಲರ್ನೆಱಿದಿಂಗಳರಲ್ದು ಪೂಗೊಳ
ಪುಗಿಲೆಸುತಿರ್ಪ ಕೋಗಿಲೆ ಮದಾಳಿಗಳೆಂಬಿವು ಬೇಱಿವೇಱಿ ಬಿ
ತ್ತುಗಳೆನೆ ಬೇಂಟಮೊಂದೆ ಬಳೆದಪ್ಪುದು ಚೈತ್ರಮಿದೇಂ ವಿಚಿತ್ರಮೊ ೨೬

ವ|| ಅದಲ್ಲದೆಯುಮಭಿನವಯೌವನಮದೋನ್ಮತ್ತೆಯರ ಮಾನಗರ್ಭದೊಡನೆ ಮನೋಭವಭ್ರೂಭಂಗಮೊಸರಿಸೆಯುಂ ಪಲ್ಲವದೊಡನೆ ಮನೋಜವಿಜಯವೈಜಯಂತಿ ಮಿಳಿರ್ದುಮಿಳ್ಳಿಸೆಯುಂ ಕುಸುಮಸ್ತಬಕದೊಡನೆ ಮದನಮುಖ ವಿಕಾಸಮೆಸೆಯೆಯುಂಪುಷ್ಪಪಾಂಸುಪಟಳದೊಡನೆ ಪುಷ್ಪಶರನಾಜ್ಞೆ ದೆಸೆದೆಸೆಗೆ ಪಸರಿಸೆಯುಂ ಹೇಮತಾಮರಸಪರಾಗದೊಡನೆ ಮದನರಾಗಮುಗ್ಗಳಿಸೆಯುಂ ಪೆಣ್ದುಂಬಿಯ ಗಂಡುಗೋಗಿಲೆಯ ರವದೊಡನೆ ಕುಸುಮಕೋದಂಡಧನುರ್ದಂಡ ನಿನಾದಮೆಸೆಯೆಯುಂ ಪೊಸವೇಂಟದೊಡನೆ ಕಂದರ್ಪನ ದರ್ಪಂ ದಳ್ಳಿಸೆಯುಂ ಬೆಳ್ದಿಂಗಳೊಡನೆ ಮನ್ಮಥನ ಜಸಂ ಬೆಳ್ಳಂಗೆಡೆಯೆಯುಂ ಅತಿ ರಮಣೀಯಮಾದ ಪೊಸ ಸುಗ್ಗಿಯ ಪುಗಿಲೊಳೊಂದು ದಿವಸಮವನಿಪತಿ ದಿವಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ ವಿದ್ವಜ್ಜನಪರಿವೃತಂ ಮಂಗಳಗಾಯಿನೀ ಮಧುರಗೀತಮನಾಲಿಸುತ್ತುಮಿರ್ಪಿನಂ

ದ್ವಿಗುಣಿಸೆ ಪತ್ತಿದಿಂಗುಲಿಕದಿಂ ನಖದೀಧಿತಿ ತನ್ನ ಪಿಂತೆ ಮೆ
ಲ್ಲಗೆ ಬರೆ ಕನ್ನೆ ಚಿತ್ರಪಟಧಾರಿಣಿ ಬಣ್ಣದ ಸೀರೆ ಮೇಘವಂ
ಣಿಗಯ ಝಳಂಬಮೆಂಬಿವಳವಟ್ಟಿರೆ ಭೂಭುಜನಿರ್ದ ಚಿತ್ರಶಾ
ಲೆಗೆ ನಡೆತಂದನಂದು ನವಯೌವನನೂರ್ವನಪೂರ್ವಚಿತ್ರಕಂ ೨೭

ವ|| ಅಂತು ದೌವಾರಿಕಪುರಸ್ಸರಂ ಬಂದು

ಅಣಮೆಮೆಯಿಕ್ಕದೆ ಪರಿಷ
ದ್ಗಣಮೀಕ್ಷಿಸೆ ನೃಪಶಿಖಂಡ ಮಂಡನನಿರ್ದಾ
ಮಣಿ ವೇದಿಕಾತಟೀಧಾ
ರಿಣಿಯೊಳ್ ಸರ್ವಾಂಗವಿನಯವಿನಮಿತನಾದಂ ೨೮

ವ|| ಆಗಿ ತದನಂತರಂ ಕೆಲದೊಳಿರ್ದ ಕನ್ನೆಯ ಕೆಯ್ಯ ಚಿತ್ರಪಟಮಂ ಕೊಂಡು ಬಾಸಣಿಸಿದ ದುಗುಲದ ಸೆಱಗನೋಸರಿಸಿ ಮನೋಜರಾಜವಿಜಯಪತಾಕಾ ಪಟಮಂ ಬಿರ್ದುವಂತೆ ಬಿರ್ಚಿ ಬಹುಕಳಾಕಮಳಗರ್ಭನಂ ಮೆಚ್ಚಿಸುವುದೆನಗೆ ವಿಷಯಮಲ್ತೆಂದು ಮನಮನಲ್ಲಾಡುತ್ತುಮರಸನ ಪದನಖಮಯೂಖಲೇಖೆಯಿಂ ನಿರ್ವಾಣ ರೇಖೆವಡೆದುದೆನಿಸಿ ಪದಪಯೋಜಪಾರ್ಶ್ವದೊಳ್ಪಸರಿಸುವುದುಂ

ವಿಳೋಕನಕುತೂಹಳನಿಳಾಧಿಪತಿ ನಿಜೋತ್ಸಂಗಸಂಗತಂಮಾಡಿ ಸಮುದಾಯಶೋಭೆ ಲೋಚನಾಕೃಷ್ಟಿಯುಂ ಪುಟ್ಟಿಸೆ ಬಳ್ಳಿಮಾವಿನ ಪಂಚಪಲ್ಲವದ ಪಲವುಂ ಬಣ್ಣದ ಪೆರಕೆಯುಮನಸುಕೆಯ ಪೊಸದಳಿರಿಂಗುಲಿಕದಣ್ಕೆಯುಮಂ ಕೊಸಗಿನೆಸಳ ಪೊಂಬಣ್ಣಮುಮಂ ವಸಂತ ದೂತಿಯ ಕಪೋತಕಾಂತಿಯುಮಂ ಸುರಪೊನ್ನೆಯ ತಿಳಕದರಲ ಬೆಳ್ಪುಮಂ ದವನದ ತಮಾಳವನದ ಕರ್ಪುಮಂ ಮರುಗದ ಮಯಿಂದವಾಳಿಯ ಪಸುರ್ಪುಮಂ ವಿವಿಧ ತರುಲತಾಗುಲ್ಮ ಜಾತಿಯ ಜಾತಿವ್ಯಕ್ತಿಯುಮಂ ಬೇಱೆವೇಱೆ ಭಾವಿಸಿನೋಡಿ

ತಿಱಿದುಕೊಳಲ್ಕೆ ಬಂದಪುವು ಕೆಂದಳಿರಂ ಗಿಳಿ ತಾಮ್ರತುಂಡದಿಂ
ದಿಱಿದಪುದಾಮ್ರಮೊಳ್ಮಿಡಿಗಳಂ ಬಿಸಕಾಂಡಮನಂಚೆ ಚಂಚುವಿಂ
ಕಿರಕಿರದಾಗಿ ಕರ್ಚಿಕುಡುಕಂ ಮಱೆಗಿತ್ತಪುದೆಂಬ ಬಲ್ಮೆ ಕ
ಣ್ಣಱಿದವೊಲಿರ್ದ ಚಿತ್ರಕನ ಚಿತ್ರದ ಚಿತ್ರವಿಧಕ್ಕೆ ಮೆಚ್ಚಿದಂ ೨೯

ತರೆಕರೆಗಣ್ಮದಪ್ಪುವಿವೆ ತಣ್ಣೆಲರಿಂ ತಡಿಯೊಳ್ ರಥಾಂಗವೀ
ನೆರವುವೆ ರಾಜಹಂಸ ಚರಣಾಹತಿಯಿಂ ಜಳಬುದ್ಬುದಂಗಳುಂ
ನೊರೆಗಳುಮೀ ತೆರಳ್ದಪುವೆ ಹೇಮಸರೋರುಹಕುಟ್ಮಳಂಗಳೀ
ಬಿರಿವುವೆ ಪೋಲೆ ಪೂಗೊಳನನಿಂತಜನುಂ ಬರೆಯಲ್ಕೆ ಬಲ್ಲನೇ ೩೦

ಅಲರ್ವಂತಿರ್ದುವು ಕುಟ್ಮಳಂಗಳವಱೊಳ್ಬಡುಂಡು ಪೆಣ್ದುಂಬಿಗಳ್
ನಲಿವಂತಿರ್ದುವು ಕೋರಕಂ ಪೊರೆ ಸಡಿಲ್ವಂತಿರ್ದುವೊಟ್ಟಿಂತೆ ಕೋ
ಗಿಲೆಪಿಂಡಿರ್ದುವು ದಿಟ್ಟಿ ನಟ್ಟುದೆನೆ ವರ್ಣವ್ಯಕ್ತಿಯಿಂ ವೃಕ್ಷಗು
ಲ್ಮಲತಾ ಜಾತಿಗಳಿರ್ದುವಿಂತು ಬರೆಯಲ್ ಪೇೞಾರ್ಗಮೇಂ ತೀರ್ಗುಮೇ ೩೧

ಬಟ್ಟಿದುವಾದ ಕಣ್ಣ ಕರಿಯಾಲಿಯ ಸುತ್ತಣ ಸಣ್ಣ ಬೆಳ್ಪು ನೇ
ರ್ಪಟ್ಟುದು ಕರ್ಬುರಚ್ಛವಿಯ ಚಂಚು ಮನಂಗೊಳಿಸಿತ್ತು ಮೆಯ್ಯ ಬೆ
ಳ್ಪಿಟ್ಟಳವಾಯ್ತು ಕಾಲ್ಗಳರಿದಾಳದ ಮೇಗಣ ಕೆಂಪಿನಣ್ಕೆಯಿಂ
ದಿಟ್ಟಿಗೆ ಬಂದುದಾರ್ಬರೆವರಿಂತಳವಟ್ಟಿರೆ ರಾಜಹಂಸನಂ ೩೨

ಇಂಗುಳಿಕದಣ್ಕೆಯಿಂ ನಯ
ನಂಗಳ್ ಕಾಡಿಗೆಯ ತೊಡಪದಿಂ ರಂಜಿಸೆ ಸ
ರ್ವಾಂಗಂ ಮುದ್ಗಶ್ಯಾಮತ
ರಂಗಿತತುಷ್ಟಂ ಸಪುಷ್ಪನೀ ಪರಪುಷ್ಟಂ ೩೩

ಕುಡಿದಳಿರನುಗುರ ಮೊನೆಯೊಳ್
ಪಿಡಿದುದು ನತಚಂಚು ನೀಡಿ ಗಳಕಂದಳಮಂ

ಮಡಗೆದಟೆ ನವಾಮ್ರದ ಪೂ
ಮಿಡಿಯಂ ಕರ್ಮುಕಿಮುದು ಪರಭೃತಂ ಪರಭೃತದಿಂ ೩೪

ಪೊಸತಲರ್ದ ವಕುಳರಸದೊಳ್
ಮುಸುಂಬು ಮುಱುಗು ವಿನಮೆಱಗಿ ಕೋಡೆಱಕೆಗಳಂ
ಪಸರಿಸಿ ಕಂಪನಲಂಪಿಂ
ಮಸಿರ್ಮಸಿರ್ದಿಂಟಿದುದು ಮಧುಪನೆರ್ದೆಮುಱುಗುವಿನಂ ೩೫

ವ॥ ಎಂದವಱ ಜಾತಿಕ್ರಿಯಾಜಾತಿರೂಪಪರಿಣತಿಯಂ ಪರಿಭಾವಿಸಿ

ಗಿಳಿ ಋಜ್ವಾಗತದಿಂದಮರ್ಧಋಜುವಿಂದಂ ಕೋಕಿಳಂ ಸಾಜೆಯಿಂ
ಕಳಹಂಸೀಕಳಭಂ ರಥಾಂಗಮಿಥುನಂ ವ್ಯರ್ಧಾಕ್ಷಿಯಿಂ ಬರ್ಹಿಮಂ
ಡಳಿ ಪಾರ್ಶ್ವಾಗತದಿಂದೆಂ ಪಡೆಮುವ್ರೋ ಪಂಚಾಂಡಕವ್ಯಕ್ತಿ ಕ
ಣ್ಗೊಳೆ ಕಂದರ್ಪನ ಬಾಣಪಂಚಕದವೊಲ್ ಚಿತ್ತಕ್ಕತಿಕ್ಷೋಭಮಂ ೩೬

ವ॥ ಎಂದವನತಿಪ್ರೀತಿಯಿಂದವಳೋಕಿಸುತ್ತುಮೀ ಕಳಿಕೆಯಿಂ ಮನಂ ಕಳಿಕೆಗರ್ಚಿದ ಕೋಗಿಲೆಯಂತ ನಲಿದುದೀ ಕಂಟಕದಿಂ ಕಂತುರಾಜ್ಯಂ ನಿಷ್ಕಂಟಕಮಾದುದೀತ್ರಿಭಂಗದಿಂ ಚೀರಭಟ್ಟಿಗೆ ಮಾನಭಂಗಮಂ ಪುಟ್ಟಿಸಿದುದೀ ಶಿಪುನಿರೀಕ್ಷಣದಿಂ ಬಂಜೆ ಶಿಶುನಿರೀಕ್ಷಣಂ ಬಡೆದಂತೆ ಮನಮನಲರ್ಚಿದುದೀ ಸಕಳದಿಂ ಸಕಳಸಾಮ್ರಾಜ್ಯಸುಖಂ ಪರಮಾಣುಪ್ರಾಯಮಾದುದೀ ಸ್ವಸ್ತಿಕದಿಂ ಕರ್ಪೂರಶಲಾಕೆಯಂ ನಯನಪುತ್ರಿಕಾಸ್ವಸ್ತಿಕಮೆನಿಸಿದುದೀವರ್ಧಮಾನಂ ನಯನಾನಂದವರ್ಧಮಾನಮಾದುದೀ ಸರ್ವತೋಭದ್ರಂ ಸರ್ವತೋಭದ್ರಮೆಂಬ ವಾಕ್ಯಾರ್ಥಮನನ್ವರ್ಥಂ ಮಾಡಿದುದೆನುತ್ತುಮೂಱುಂ ತೆಱದ ಮೊದಲಬಣ್ಣಮುಮನವನೋರೋಂದಱೊಳ್ಬೆರಸುವ ಪರಿಣತಿಯುಮನನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕ ಮುದ್ವರ್ತನಂ ಚಿತ್ರಪಪ್ರವರ್ತನಮೆಂಬಾಱು ತೆಱದಣ್ಣಯುಮಂ ಚಿತ್ರಚಿತ್ರಾರ್ಧಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ ರಸಚಿತ್ರಧೂಳೀಚಿತ್ರಮೋಜೆಯುಮಂ ಪ್ರತಿಬಿದ್ಧಮಾತ್ಮ-ಬಿದ್ಧಂ ಪರಬಿದ್ಧಮೆಂಬ ವಿದ್ಧಪದ್ಧತಿಯುಮಂ ಲಾಕ್ಷಾರಸ ರೇಖಾಶುದ್ಧಿಯುಮಂ ನೇತ್ರಕ್ಕಂ ಸೂತ್ರಕ್ಕಮಳವಡಿಸಿದ ದೇಶೀಯಮುಮಪ್ಪ ಭಂಗಿಯುಮಂ ಮೃದುರೇಖಾವಿಳಾಸ-ಮುಮಂ ಪರಿಭಾವಿಸಿ ನೋಡಿ ವಜ್ರಕುಂಡಳದಕಾಂತಿ ತಳತಳಿಸೆ ತಲೆಯಂ ತೂಗಿ

*(ತರಳವೃತ್ತ)*

ಅಕಟ! ರೇಖೆಯಿನಪ್ಪ ವರ್ಣದ ಮಿಶ್ರವರ್ಣದೊಳಾದ ಕೌ
ತುಕಮ ವೃಕ್ಷಲತಾದಿ ಜಾತಿಯೊಳೋಜೆಯಂ ಗಡೆಗೊಂಡ ಚಿ

ತ್ರಿಕನ ಭಾವಮೆ ಪತ್ರಭಂಗದ ಪೂರ್ಣ ಭಂಗಿಯೇ ಭಾಪು ! ಲೌ
ಕಿಕಮ ಮಾನುಷಮೆಂದು ಕಂಟಕಿ ತಾಂಗನಾಪನಿಳಾಧಿಪಂ ೩೭

ನಯನಾನಂದಮನುಂಟುಮಾಡಿ ಮಧುವಿಂ ಕೈವಂದುದಂ ಚೀರಘು
ಟ್ಟಿಯಂ ಮಾಂಡವ್ಯವ ವಿಶ್ವಕರ್ಮನಸಳವಲ್ತೆಂಬನ್ನಮುದ್ಯಾನಮಾ
ಲೆಯನಾವಂ ರಸಚಿತ್ರಮಾಗೆ ಬರೆವಂ ಪೇೞಿಂದು ಕಾರುಣ್ಯದೃಷ್ಟಿಯೊ
ಳಿತ್ತಂ ಧರಣೀಶ್ವರಂ ಕನಕಮಂ ಭ್ರೂಕೋಟಿಯಿಂ ಕೋಟಿಯಂ ೩೮

ವ॥ ಅಂತು ಮೆಚ್ಚುಗೊಟ್ಟು ಚಿತ್ರಪಟಮಂ ನೋಡಲುತ್ಕಂಠರಾದ ಸಭಾಜನಕ್ಕೆ ನೀಡುವುದುಂ ಮಹಾಪ್ರಸಾದಮೆಂದು ಕಳೆದುಕೊಂಡು ನಿರ್ಮಾಣಿಸಿದ ಚಿತ್ರಕನ ಚಿತ್ರವಿದ್ಯಾಪ್ರಾಗಲ್ಭ್ಯಮಂ ಪ್ರತ್ಯೇಕಮವಲೋಕಿಸಿ

ಎಮೆಯಿಕ್ಕಲ್ ಮಱೆದುದು ಪುಳ
ಕಮನಾನಂದಾಶ್ರುಪೂರಮಂ ತಳೆದುದು ಸಂ
ಭ್ರಮದಿಂ ಬೆರಲಂ ಮಿಡಿದು
ತ್ತಮಾಂಗಮಂ ತೂಗಿದುದು ಸಭಾಜನಮನಿತುಂ ೩೯

ವ॥ ಅಂತು ಹರ್ಷರಸಸುಧಾ ವರ್ಷದೊಳಿ ನಾಂದು

ಬಿಚ್ಚಳಿಸಲ್ಕೆ ನಾಲಗೆಗಳಿಯ್ದವೆನಲ್ ಬಸಮಂ ವಿಲೋಕನ
ಕ್ಕಚ್ಚರಿಯಪ್ಪಿನಂ ಬರೆದ ಚಿತ್ರಕನಾವನೋ ದೇವ ದೇವರಂ
ಮೆಚ್ಚಿಸುವನ್ನನೀ ದೊರೆಯನಾವನೊ ಭೂಭುಜನೊಂದು ಕೋಟಿಯಂ
ಮೆಚ್ಚಱೆದೀವೆನೆಂದು ಪರಿಷಜ್ಜನ ಮಂದುಲಿಯುತ್ತಮಿರ್ಪಿನಂ ೪೦

ವ॥ ಆ ಪ್ರಸ್ತಾವದೊಳ್ ಆ ಮಧುಪ್ರಸಂಗರಾಗರಸತರಂಗಿತೆಯಾದ ವನಲಕ್ಷ್ಮೀವಿಲಾಸಮಂ ವನಪಾಲಕನವನಿಪಾಲಕಂಗಱೆಪಲೆಂದು ಪೊಂಬಾಳೆಯ ಹಾಳೆಯೊಳಿಮ್ಮಾವಿನ ಕೊನೆಯುಮಂ ಮಲ್ಲಿಗೆಯ ಸನೆಯುಮಂ ಚೆನ್ನಯ್ದಿಲೆಯೊಳ ತಿಮುಕ್ತದಲರು ಮಂತಮಾಳದ ತಳಿರುಮಂ ತಾವರೆಯ ಕೋಡೆಲೆಯೊಳಸುಕೆಯ ಕುಡಿಯೆಲೆಯುಮಂ ಸುರಹೊನ್ನೆಯ ಪೂಗೊಂಚಲುಮನೆಳವಾೞೆಯ ಪಸುರೆಲೆಯೊಳ್ ಕೊಸಗಿನ ಕುಸುಮಮುಮಂ ಸಂಪಗೆಯ ಮುಗುಳುಮಂ ಪೊಂಗೇದಗೆಯೆಸಳ ದೋಣಿಯೊಳ್ ತಿಳಕದ ಕಳಿಕೆಯುಮಂ ವಕುಳದ ಮುಕುಳಮುಮಂ ಪ್ರತ್ಯಗ್ರಸಮುತ್ಪನ್ನಪಲಾಶಪತ್ರದೊಳ್ ದವನದ ನಿಡುಪೂವುಮಂ ಮರುಗದ ಕುಡಿಯುಮಂ ಬಿಸಲತೆಯೊಳಂ ನೆಯ್ದಿಲ ಸಣ್ಣನಾ ವಿನೊಳಂ ಬಿಸತಂತುವಿನೊಳಂ ಕರ್ಬಾಳದ ಬಳ್ಳಿಯೊಳಂ ತೆಂಗಿನ ತಿರುಳೆಲೆಯ ಸುಲಿಕೆಯೊಳಂ ಕೇದಗೆಯ ಬೆಳ್ಳುೞೆಯ ಸಿಪುಱೊಳಂ ಬೇಱೆವೇಱೆ ಸುತ್ತಿ ಸೊಪಡಿಂಗಱಗಿದ ಮಱೆದುಂಬಿಯ ಮುದ್ರೆಯಾಗ ತಂದು ಮುಂದಿಟ್ಟೆಪಿ

ವನಲಕ್ಷ್ಮಿ ನಿನಗೆ ನವಯೌ
ವನಲಕ್ಷ್ಮಿಯನೆಯ್ದೆ ಮೆಱೆಯಲೆನ್ನಂ ಪಿಕನಿ
ಸ್ವನದಿಂ ಪ್ರಾರ್ಥಿಸಿದಳ್ ದೇ
ವ ನೋಡಲೇಟ್ರಿರ್ಪುದಾ ಲತೆ ಕೋಮಳೆಯಂ ೪೧

ವ|| ಎಂದು ಬಿನ್ನವಿಸೆ ವನವಿಳಾಸದೊಳಾದ ವಿಸ್ಮಯರಸಾವೇಶದಿಂ ಪೊಡವಡಲ್ಮಱೆ ದೆನೆಂದು ಸರ್ವಾಂಗಪ್ರಣತನಾಗಿ ಮತ್ತಮಿಂತೆಂದಂ

ತಾವರೆಯ ನೂಲಡ ನುಸುಳ
ಲ್ತಾವೆಡೆಗುಡವೆನಿಪ ಘನಕುಚಂಗಳ ನಿನ್ನೀ
ಲಾವಣ್ಯವತಿಯರಿಂ ಪಡೆ
ದೇವ! ನವಾಂಕುರಕವಂಬಮಂ ಕುರವಕಮೊಳ್ ೪೨

ತೊಳವೆಳಮಿಂಚಂ ಪಾಲೊಳ್
ತೊಳೆದಂ ತವೊಲಪ್ಪ ಲೋಲಲೋಚನದಬಳಾ
ತಿಳಕಾಲೋಕನದಿಂ ಕು
ಟ್ಮಳಿತಂ ಮಾಡುವುದು ತಿಳಕಮಂ ನೃಪತಿಳಕಾ ೪೩

ಪದಪಲ್ಲವದೊಳ್ಮಚ್ಚರಿ
ಪುದು ಪಲ್ಲವದಿಂದಮೆಂಬ ಮೇಳದ ಮುನಿಸಿಂ
ದೊದೆಯಿಸಿ ನಿನ್ನಬಲೆಯರಿಂ
ಪೊದೆಯಿಸು ಪೊಸದಳಿರ್ಗಳಿಮದಶೋಕದ್ರುಮಮಂ ೪೪

ವ|| ಎಂದು ಬಿನ್ನವಿಸೆ ಮನದೆಗೊಂಡು

ಉಗುರ್ಗಳ ಕಂದಳಂಗಳ ಮರೀಚಿಗಳಿಂದಮವರ್ಕೆ ರಾಗಮಂ
ನಗೆಯುಮನೀವವೊಲ್ಕಳೆದು ಕೊಂಡು ನೃಪಂ ವನಪಾಲನಾಗಳೋ
ಲಗಿಸಿದಪೂರ್ವವಸ್ತುವನವೆಲ್ಲವನಾವರಿಸಿರ್ದ ಪಲ್ಲವಾ
ಳಿಗಳ ಬೆಡಂಗು ಕಣ್ಗೊಳಿಸೆ ಸುತ್ತಿದ ಸುತ್ತುಗಳಂ ಸಡಿಲ್ಚಿದಂ ೪೫

ವ|| ಅಂತು ಕಲ್ಪಪಾದಪಪ್ರವಾಳಾನುಕಾರಿಯಪ್ಪ ಕೋಮಲಕರಾಂಗುಲಿಗಳಿಂ ಬೇಱೆ ಸುತ್ತಿದ ಸುತ್ತುಗಳನೋಸರಿಸಿ

ಪೊಸಸುಗ್ಗಿಯ ಮೆಯ್ಸಿರಿಯಂ
ಪೊಸವಂ ಕಂಡವನಿಪಾಲದೃಷ್ಟಿಪ್ರಸರಂ

ಪಸವಟ್ಟಂತೆವೊಲಾದುವು
ಪೊಸತೆನಿಸಿದ ವಸ್ತು ಸೋಲಮಂ ಪುಟ್ಟಿಸದೆ ೪೬

ವ॥ ಅಂತವನತಿಪ್ರೀತಿವಿಸ್ತಾರಿತ ವಿಲೋಚನನಾಗಿ ನೋಡಿ

ಬನದೊಪಮೆಯೊಳಾದೊಲವುಂ
ವನಪಾಲನೊಳಾದ ಮೆಚ್ಚುಮಕ್ಕೆಕ್ಕೆಯಿನಂ
ದನುಪಿಸೆ ವಿದಗ್ಧಚತುರಾ
ನನನಾದಂ ಪ್ರೀತಿವಿಕಸಿತಾನನನಾದಂ ೪೭

ಚಿತ್ತದೊಳಚ್ಚರಿಯಂ ತನಗೆ ಮಾಡಿದ ಸುಗ್ಗಿಯ ಸೊಂಪೆನಿಪ್ಪ ಸಂ
ಪತ್ತಿಗೆ ನೋಂತ ಪ್ರೊಚ್ಚ ಪೊಸವಂ ಪದಪಿಂ ಪೆಸಗೊಂಡಿವರ್ಕೆಮ
ಚ್ಚಿತ್ತುಮಿವೆಂದು ಮೆಚ್ಚುವೆಜಗೊಪ್ಪದೆನಲ್ ವನಪಾಲಕಂಗೆ ಮೆ
ಚ್ಚಿತ್ತನನರ್ಘ್ಯ ರತ್ನಮಯಭೂಷಣಮಂ ಗುಣರತ್ನಭೂಷಣಂ ೪೮

ಅಲಘುಲಘುಗಣನೆಯಂ ಪಂ
ಬಲಿಸದು ಬಗೆ ಧನಮನರ್ಥಿಗೀವೆಡೆಯೊಳೆನಲ್
ಬೆಲೆಯಿಡಲರಿದೆನಿಪೊಡಮೆಯ
ನಲರ್ಗಂ ಪೊಸದಳಿರ್ಗಮಿತ್ತನವನೀಪಾಲಂ ೪೯

ವ॥ ಅಂತು ಮೆಚ್ಚುಗೊಟ್ಟು

ಅಳಿನೀಝಂಕಾರಮಂ ಕೋಕಿಳಕಳಧ್ವಾನಮಂ ಕೇಳಲುಂ ವೃ
ಕ್ಷಲತಾಸೌಂದರ್ಯಮಂ ನಂದನ ವಿಹರಣವಿಶ್ರಾಂತಶುದ್ಭ್ರಾಂತಕಾಂತಾ
ಜಳಕೇಳೀಲೀಲೆಯಂ ನೋಡಲುಮವರ್ಗನುಲೇಪಂಗಳಂ ವಸ್ತ್ರಭೂಷಾ
ವಳಿಯಂ ಮೆಚ್ಚೀಯಲುಂ ಚಂಪಕಮಧುಮಧುರಾಲೋಕನುತ್ಕಂಠನಾದಂ ೫೦

ವ॥ ಅನಂತರಂ ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಪಶೋಭಿತಮುಂ ನಕ್ಷತ್ರಚಕ್ರದಂತೆ ಹಸ್ತಪ್ರಶಸ್ತಮುಂ ಘನಸಮಯದಂತೆ ಪುಷ್ಕರವಿರಾಜಿತಮುಂ ವಸಂತಸಮಯಸಹಕಾರದಂತಗ್ರಪಲ್ಲವೋಲ್ಲಸಿತಮುಂ ಶಿಶಿರಸಮಯದಂತೆ ಜಾತಿಭಂಗಭಂಗುರಮುಂ ನಿದಾಘಮಯದಂತಪಘನಮನೋಹರಮುಂ ತನ್ನಂತುದಾತ್ತವಂಶಮುಂ ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ

ಲೀಲಾಮಣಿಭೂಷಣರು
ಗ್ಜಾಲಂ ಜಳಜಳಿಸೆ ಗಗನದೊಳ್ ನೃಪರತ್ನಂ

ವ್ಯಾಳಗಜೇಂದ್ರಾರೂಢಂ
ನೀಲಾಚಲರತ್ನಶಿಖರಮಂ ಗೆಲೆವಂದಂ ೫೧

ಕೊಂಕುವಡೆದದಱ ವಕ್ರತೆ
ಯಂ ಕಳೆವಚ್ಚರಿಯನಪ್ಪುಕೆಯ್ದೆತ್ತಿದ ಕೂ
ರಂಕುಸಮೆಸೆದುದು ಶೌರ್ಯಲ
ತಾಂಕುರಮೆನೆ ರಿಪುಮದೇಭವಜ್ರಾಂಕುಶನಾ ೫೨

ನೀಲಾಚಲೇಂದ್ರಮಣಿಮಯ
ಚೂಳಿಕೆಯೊಳ್ತೋರ್ಪ ಮೇಘಡಂಬರಮೆಂಬೀ
ಲೀಲೆಯನೇಂ ಮಱೆದುದೊ ಭೂ
ಪಾಲಂಗೆತ್ತಿರ್ದ ಮೇಘಡಂಬರಮಾಗಳ್ ೫೩

ಸಿರಿ ಬಂದು ವಕ್ಷದೊಳ್ನೆಲ
ಸಿರೆ ಬೆನ್ನನೆ ಬಂದ ಪುಂಡರೀಕಮಿದೆಂಬಂ
ತಿರೆ ಪಿಡಿದ ಪುಂಡರೀಕಂ
ಕರಮೆಸೆದುದು ರಾಜಪುಂಡರೀಕಂಗಾಗಳ್ ೫೪

ಎರಡುಂ ಕೆಲದೊಳ್ ಪಣ್ಣಿದ
ಕರಿಣಿಯ ಮೇಲಿರ್ದ ಚಾಮರಗ್ರಾಹಿಣಿಯರ್
ಕರಮೆಸೆದರ್ ಕಾರಮುಗಿ
ಲ್ಬೊರೆಯೊಳ್ಸಂಚಳಿಪ ಬಳ್ಳಿಮಿಂಚೆಂಬಿನೆಗಂ ೫೫

ವ॥ ಆ ಪ್ರಸ್ತಾವದೊಳ್

ಅವನೀಶ್ವರಂ ವಸಂತೋ
ತ್ಸವಮಂ ನೋಡಲ್ ಬನಕ್ಕೆ ಬಿಜಯಂಗೆಯ್ವೊಂ
ದವಸರಮಂ ಭೋಕೆನಲಱೆ
ಪುವವೋಲುಣ್ಮಿದುದನೇಕಶಂಖಧ್ವಾನಂ ೫೬

ವ॥ ತದನಂತರಂ

ಎಳವೆಱೆಯಂತೆ ಕೊಂಕುವಡೆದಂಕುಶಮಂ ಮನುಜೇಂದ್ರ ಚಂದ್ರಮಂ
ಪೊಳೆಯಿಸುತುಂ ಕಪೋಳದೊಳು ದಂತುಗಳಿಂದಗೆವೊಯ್ಯೆವಜ್ರಕುಂ
ಡಳಮುರದೊಳ್ ತಳತ್ತಳಿಸೆ ಹಾರಮರೀಚಿ ಕಿರೀಟ ಕಾಂತಿಪ
ಜ್ಜಳಿಸೆ ವಿಳಾಸದಿಂದಣೆದು ನೂಂಕಿದನಂಕದ ಪಟ್ಟದಾನೆಯಂ ೫೭

ವ॥ ಅಂತು ತಳರ್ದು

ಎಡೆಯಱಿದು ಬರ್ಪ ಮೇಳದ
ಕಡುಗಾಡಿಯ ಚದುರ ಚೆಲ್ವದಬಳಾಜನದೊಳ್
ನುಡಿಯುತ್ತುಂ ಪೊಸಸುಗ್ಗಿಯ
ಪಡಿಮಾತಂ ನೃಪತಿ ಬನಕೆ ಬಿಜಯಂಗೆಯ್ದಂ ೫೮

ಮುತ್ತಿನ ಕೊಡೆ ಕಣ್ಬೇಲಿಯ
ಸತ್ತಿಗೆ ತಟಿ ಮೇಘಡಂಬರಂ ಬೆಳ್ಗೊಡೆ ತ
ಟ್ಟಿತ್ತಮಿರೆ ಬನಮೆ ಬನಮಂ
ಮುತ್ತುವವೊಲ್ನಡೆದುದೊಡನೆ ರಾಣಿಯವಾಸಂ ೫೯

ನಡೆಮಾಡಂ ನಡೆಗೊಪ್ಪುವಶ್ವತತಿ ಚೆಂಬೊನ್ನಂದಣಂ ವಾಜಿ ಪ
ರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದರ್ಗಾಯಕರ್ವಾದಕರ್
ನುಡಿಕಾಱರ್ಬಗೆ ಕಾಱರೊಳ್ಕವಿಗಳೊಳ್ಪೆಂಡಿರ್ಕುಮಾರರ್ ಮನಂ
ಬಡೆದಂತಃಪುರಕಾಂತೆಯರ್ಬಱಮಕಳಾಂಸಪನ್ನೆಯರ್ಕನ್ನೆಯರ್ ೬೦

ವ॥ ಆಗಳುತ್ತುಂಗಮಾತಂಗಮಣಿ ಘಂಟಾನಿನಾದಮುಮುಚ್ಚಾರಣಚ್ಛವಣ ರಮಣೀಯ ರವಮುಮಂಕುಶದ ಮಸೆಯುಮಾಭರಣ ಕಿರಣಮುಮೊಡನೊಡನೆ ಪಸರಿಸೆ ಸೌಂದರ್ಯಪುರಂದರಂ ಪುರಮಂ ಪೊಱಮಟ್ಟು ಲೀಲೋದ್ಯಾನಕ್ಕಭಿಮುಖನಪ್ಪುದುಂ

ರತಿ ಲಾಸ್ಯಪ್ರೌಢಿಯಂ ಕಂತುಗೆ ನೆಱೆಯಲ್ಪೂರ್ವರಂಗ ಪ್ರಸಂಗೋ
ಚಿತಮಂ ಪುಷ್ಪಾಂಜಲಿಕ್ಷೇಪಮನೊಡರಿಸಲೆಂದಿರ್ಪುದುಂ ತತ್ಕ್ಷಣಪ್ರ
ಸ್ತುತಮಂ ವಿಸ್ತೀರ್ಣಮಂ ಪಚ್ಚೆಯ ಜವನಿಕೆಯಂ ಬಿರ್ಚಿದಂತಿರ್ದುದುಜ್ಜೃಂ
ಭಿತರಂಭಾಸಸ್ಯಪೂಗೀವನವೃತಿಪರಿತಾಕಾಶಮುದ್ಯಾನದೇಶಂ ೬೧

ವ॥ ಮತ್ತಮತನುರಾಜ ಮರಕತ ಕೃತಕಾಚಳದಂತೆಯುಂ ವಸಂತಕರಿಮಕರಕ್ಷುಭಿತ ಶೃಂಗಾರನೀರಾಕರದಂತೆಯುಂ ವಿರಹಿಜನಸಂತಮಸಸ್ತೋಮದಂತೆಯುಂ ಕಱಂಗಿ ಕಟ್ಟಿಲಿಸಿ ಲೋಚನ ಪಥಕ್ಕನತಿದೂರವಾಗಿ

ಕಳಿಕೆಯ ಪೊಸದಳಿರ್ಗಳ ಕು
ಟ್ಮಳಂಗಳಲರ್ಗಳ ವಿಚಿತ್ರವರ್ಣದಿನೇಂ ಕ
ಣ್ಗೊಳಿಸಿದುದೋ ಸುರಧನುರ್ಮಂ
ಡಳದಿಂ ಕೇರ್ಗಟ್ಟಿದಂತಿರುದ್ಯಾನವನಂ ೬೨

ವ॥ ತದನಂತರದೊಳ್

ಸುದಿತೀರಾಜಿಯ ಕಿವಿಗೆ
ಯ್ದಿಮುದಲಿವ ರಥಾಂಗಮಿಥುನದುಲಿಪುಂ ಕರ್ಣ
ರ್ಜಿದ ಕನ್ನಡವಕ್ಕಿಯ ದನಿ
ಮದಾಳಿನೀವಿರುತಿ ಸಾರಸೋತ್ತಾರರವಂ ೬೩

ಸೆಲಸುತ್ತುಂ ಕೊಳದೊಳ್ಸರೋಜಮುಕುಳಂ ಸಸ್ಮೇರಮಪ್ಪಂತು ಜ
ಕ್ಕುಲಿಸುತ್ತುಂ ಪೊಸತಂ ಲತಾಪ್ರಸವಮಂ ಮುಂಡಾಡಿ ತಣ್ಗಂಪನ
ಗ್ಗಲಿಸುತ್ತುಂ ಪರಪುಷ್ಪಕೀರರವಮಂ ತಂದೊಂದನೊಂದೊಂದಱೊ
ಳ್ಕಲಸುತ್ತುಂ ಬನದಿಂ ವಿನೋದಚತುರಂ ಬಂದತ್ತು ಮಂದಾನಿಲಂ ೬೪

ವನಕುಸುಮಾಸವಂಬೆರಸು ತನ್ನೊಡವಂದ ನರೇಂದ್ರಸುಂದರೀ
ಜನಮುಖಸೌರಭಕ್ಕೆ ಬಗೆ ಸೋಲಲೊಡಂ ಬಿಸುಟಂತದಂ ತದಂ
ಗನೆಯರ ವಕ್ತ್ರಸಪರಭಮನಾಗಳೆ ತಾಂ ಮೆಱೆದಂ ಚಳಂ ಪುರೀ
ವನಪವಮಾನನಾವೆಡೆಗಮಸ್ಥಿರರಪ್ಪರ ಕೂಟಮೇವುದೋ ೬೫

ವ॥ ಅಂತುಪವನಪವನಂ ನಿಜನಿತಂಬಿನೀವದನಾರವಿಂದಮಕರಂದಸುಂದರಸ್ವೇದಾಪನೋದಿಯಾದ ತದನಂತರದೊಳ್

ಸುರಗಿರಿಯಿಂ ಸುರರಾಜಂ
ಧರೆಯವನೋಪಾಂತ ಭೂಮಿಭಾಗಕ್ಕಿೞಿವಂ
ತಿರೆ ಸಿಂಧೂರದಿಂದಿೞಿದಂ
ಧರಣೀನಾಥಂ ವಿನೋದವನಪರಿಸರದೊಳ್ ೬೬

ಎಳಮಿಂಚು ಕಾರಮುಗಿಲಿಂ
ದಿೞಿವಂತಮೃತಾಂಶುಲಕ್ಷ್ಮಿ ಶಶಿಮಂಡಲದಿಂ
ದಿೞಿವಂತೆ ವಾಹನಂಗಳಿ
ನಿೞಿದೆಸೆದುದು ನೃಪನ ಪೆಂಡವಾಸದ ತಂಡಂ ೬೭

ವ॥ ಅಗಳೊರ್ವಳ್

*(ಪೃಥ್ವೀವೃತ್ತಂ)*

ನಿತಂಬಭರಮಂದಯಾನದೊಳೆ ಯಾನಮಂ ಕೂರ್ಚುವೆ
ತ್ತ ತುಂಗಕುಚದಿಂ ಪೊದೞ್ದೊಗೆದ ಕುಂಭಮಂ ಗೆಲ್ದು ಮಾ
ಮತಂಗಜಮನಿಕ್ಕಿ ಮೆಟ್ಟಿ ಮೆಱೆದಪ್ಪಳೆಂಬನ್ನೆಗಂ
ಲತಾಂಗಿ ಪೊಱಮಟ್ಟು ನಿಂದಳಭಿಸಾರಿಕಾದ್ವಾರದೊಳ್ ೬೮

ಅಮರವಿಮಾನಂಗಳಿನಿಱಿ
ವಮರಿಯರಂ ಪೋಲ್ತು ಪುಷ್ಪಕಂಗಳಿನಿೞಿದಾ
ರಮಣಿಯರೇನೆಸೆದಿರ್ದರೋ
ರಮಣೀಯತೆವೆತ್ತುಮಾ ನರೇಂದ್ರನ ಕೆಲದೊಳ್ ೬೯

ಲಾವಣ್ಯವತಿಯರುಂ ನಾ
ನಾವಾಹನದಿಂದಮಿೞಿದು ಮೋಹನವಿದ್ಯಾ
ದೇವತೆಯರಂತೆ ಕೆಲದೊಳಿ
ಳಾವಲ್ಲಭನತನುವಲ್ಲಭಂಗೆಣೆಯಾದಂ ೭೦

ವ॥ ಅಗಳಾ ಮಹೀವಲ್ಲಭಂ ಪ್ರತಿಹಾರಿಕಾಪ್ರಕೋಷ್ಠಪ್ರತಿಷ್ಠಿತಕರಪಲ್ಲವನುಂ ತಾಂಬೂಲವಾಹಿನೀಸಮನ್ವಿತನಾಗವಲ್ಲೀದಳಪ್ರಸಾರಿತಕರಾಗ್ರನುಂ ಮಂದಪದಸಂಚಾರಸಂಚಲಿತವಜ್ರಕುಂಡಳಪ್ರಭಾಚಕ್ರಚಾಮರೋಪರಾಜಿತನುಂ ಸ್ಥೂಲಮುಕ್ತಾಫಳಪ್ರಲಂಬಹಾರಚಂದ್ರಿಕಾಧವಳಿತವಿಶಾಲವಕ್ಷಸ್ಥಳನುಂ ಘನನಿತಂಬಾಭೋಗಭಾರಸ್ಖಲಿತಕಾಮಿನೀಪದವಿನ್ಯಾಸದರಹಾಸಸ್ಫುರಿತಕಪೋಲನುಂ ಗಮನಶ್ರಮಸ್ವೇದಸಲಿಲಸುಧಾಬಿಂದುಲಲಿಂತಾಂತಃಪುರಪುರಂಧ್ರೀ ಮುಗ್ಧಮುಖಚಂದ್ರಾವಲೋಕನವಿಕಸಿತವಿಲೋಚನೋತ್ಪಲನುಂ ವಂದಿವೃಂದ ಜನಜಯಾನಂದನಿನದ ಪೂರ್ಣಕರ್ಣನುಮಾಗಿ

ಸುತ್ತಿದ ಪೆಂಡವಾಸದೆಳವೆಂಡಿರ ಲೋಲಕಟಾಕ್ಷಮಾಲೆ ದಿ
ಗ್ಭಿತ್ತಿಗಕಾಂಡಕಾಂಡಪಟಮಂ ಕುಡೆ ತನ್ಮಣಿಮೇಖಳಾರವಂ
ಮುತ್ತೆ ಮದಾಳಿನೀಮಧುರಸಿಂಜಿತಮಂ ನಡೆತಂದನಂದು ತ
ಣ್ಬಿತ್ತಿದ ಮೇಘಡಂಬರದ ತಣ್ಣೆೞಲೊಳ್ ಮನುಜೇಂದ್ರಚಂದ್ರಮಂ ೭೧

ಮೃದುಪದಪಲ್ಲವಕ್ಕೆ ದೊರೆ ಪಲ್ಲವಮೆಂಬರ ಮಾತನೇೞಿಪಂ
ದದೆ ಮಣಿನೂಪುರಕ್ವಣಿತಮುಣ್ಮುವಿನಂ ಪುಳಿನಸ್ಥಳಂ ನಿತಂ
ಬದೊಳೆಣೆಯೆಂಬರಂ ನಗುವಪೋಲುಡೆನೂಲುಲಿ ಪೊಣ್ಮುವನ್ನಮು
ನ್ಮದಕಳಹಂಸಯಾನಮನದೇಂ ಮೆಱೆದತ್ತೊ ವಿಲಾಸಿನೀಜನಂ ೭೨

ಪಿಡಿಯಲಡಂಗುವ ಬಡನಡು
ನಡುಗೆ ಘನಸ್ತನದ ಬಿಣ್ಪಿಣಿಂ ನಗೆಗಣ್ಗಳ್
ನಡೆನೋೞ್ಪರ ಮೆಲ್ಲರ್ದೆಯಂ
ನಡೆ ನಡೆದುದು ನೃಪನ ಪೆಂಡವಾಸದ ತಂಡಂ ೭೩

ನಡೆಯ ವಿಲಾಸಮದೋರಡಿ
ನಡೆಯದು ಕಳಹಂಸೆಗೀಕೆಗಳ ಕೆಲದೊಳೆನಲ್
ಪಿಡಿಯಿಂದಿಟೆದ ತನುವ ಕೈ
ಪಿಡಿಯೆನೆ ನಡೆತಂದರಂತವುರದೆಳವೆಣ್ಗಿರ್ ೭೪

ವ॥ ಆಗಳೊರ್ವಳ್

ಅಡಿಗಡಿಗೆ ಮೇಲುದಂ ನಡೆ
ವೆಡೆಯೊಳ್ ಸಾವಗಿಸೆ ಪಾಣಿಪಲ್ಲವರುಚಿಯಿಂ
ಪಡೆದುವು ಕೆಂದಳಿರ್ಗಳಸದ
ಬೆಡಂಗನಡೆಗಿಜೆದ ಮೊಲೆಗಳಾ ಕೋಮಳೆಯಾ ೭೫

ಸ್ತನಕಮಳ ಮುಕುಳನಾಳಮ
ನನುಕರಿಸುವ ಹಾರಲತೆಯನೋಸರಿಸುವವೊಲ್
ವನಿತಕರಕಿಸಲಯಚ್ಛವಿ
ಯ ನೆವದಿನೆಳವಿಸಿಲನೊದವಿಸುತ್ತುಂ ಬಂದಳ್ ೭೬

ಸೋಗೆಯ ಸೊರ್ಕಂಜೆಯ ಮದ
ಮೋಗಡಿಸಿದುದಿವಳ ಮುಡಿಯ ನಡೆಯ ಬೆಡಂಗಿಂ
ಗೀಗಳೆನೆ ಬಂದಳತನುವ
ಪೂಗಣೆ ತಿರುಪಿಂ ಬರ್ದುಂಕೆ ಬರ್ಪವೊಲೊರ್ಬಳ್ ೭೭

ಪುದಿದಿರೆ ಪುಷ್ಪಪಾಂಸುಪಟಲಂ ಕಡುಮೆಲ್ಪಳವಟ್ಟು ಸುಣ್ಣಬಿ
ಲ್ಕಿದಜೀವ ಕೇತಕೀಕುಸುಮರೇಣುವಿನಂತಿರೆ ಪಾದಪಲ್ಲವ
ಕ್ಕೊದವಿಸೆ ಬಟ್ಟೆ ಮೆಟ್ಟಿದೆಡೆಯೊಳ್ಸುಖಸಂಪದಮಂ ನಿತಂಬಭಾ
ರದ ನೆವದಿಂ ನಿತಂಬಿನಿ ನೆಲಂ ತವದಂತಿರೆ ಗುಜ್ಜುಮೆಟ್ಟಿದಳ್ ೭೮

ವ॥ ಅಂತು ನಿಜವಿಲಾಸಿನೀಪದಕಮಳವಿನ್ಯಾಸದಿಂ ಸ್ಥಳಕಮಲವನಮನು
ಪವನಮಾರ್ಗದೊಳೊದವಿಸುತ್ತುಂ

ಮನದೊಳ್ತನ್ನ ವಿಲಾಸಮಂ ಬಯಸುವನ್ನಂ ಪನ್ನಗೇಂದ್ರಂ ಸುರೇಂ
ದ್ರನುಮಿಂದ್ರತ್ವದಿನೀ ನರೇಂದ್ರವಿಭವಂ ಮೇಲೆಂಬಿನಂ ರೂಪಯೌ
ವನಲಾವಣ್ಯವಿಲಾಸವಿಭ್ರಮನಿವಾಸಂ ಪೆಂಡವಾಸಂ ಪಿಲೋ
ಚನ ನೀಲೋತ್ಪಳಮಾಲೆಯಿಂ ಪುದಿಯೆ ಬಂದಂ ರಾಜವಿದ್ಯಾಧರಂ ೭೯

ಇವಪೂರ್ವಂ ಬೇಱೆವೇಱೆರತಿಯರಿನಿರೆಂತಾದರೆಂಬನ್ನೆಗಂ ಮೇ
ಳವ ಪೆಂಡಿರ್ ಸುತ್ತಲುಂ ಕಣ್ಗೊಳಿಸೆ ಪೊಸವನುದ್ಯಾನದೊಳ್ಕೈಗೆ ಮಾಡಲ್
ಪದವಿಲ್ಲಂ ಪೂವಿನಂಬಂ ತ್ರಿಭುವನವಿಜಯಾರಂಭ ಸಂರಂಭಚಿತ್ತಂ
ಮದನಂ ಬರ್ಪಂತೆ ಬಂದಂ ಚತುರಕವಿಜನಾಸ್ಥಾನರತ್ನಪ್ರದೀಪಂ ೮೦

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲ
ಚಂದ್ರಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ
ಭಾರತೀಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್ ವಸಂತಸಮಯವರ್ಣನಂ
ಪಂಚಮಾಶ್ವಾಸಂ ಸಂಪೂರ್ಣಂ



# ಷಷ್ಠಾಶ್ವಾಸಂ

ಶ್ರೀ ನಿಲಯಂ ಮನಸಿಜನೆಂ
ಬಾನೆಗೆ ತಾಯ್ನಾಡೆನಿಪ್ಪ ಚೆಲ್ವಂ ತಳೆದು
ದ್ಯಾನವನದೊಳಗೆ ಪೊಕ್ಕಂ
ಜೈನಾಗಮವನವಸಂತಭಿನವಪಂಪಂ ೧

ವ॥ ಆಗಳ್

ವನಲತೆಯ ಮೇಲೆ ಬಂದಾ
ಮನೋಜನೆಳಲತೆಗಳೆಂಬಿನಂ ಕೋಮಳೆಯರ್
ಮನುಜೇಂದ್ರನೊಡನೆ ಪೊಕ್ಕರ್
ಬನಮಂ ಜನನಯನಸಂಮದಾಳಂಬನಮಂ ೨

ಬನದೊಳಗಂ ಲತಾಲಲಿತೆಯರ್ಪುಗುವಲ್ಲಿ ವಿಲಾಸದಿಂದಮೀ
ವನಲತೆಯಂ ಪರಾಭವಿಸದಿರ್ಪುದು ಮನ್ನಿಪುದೆಮ್ಮನೆಂದು ಕಾ
ಮಿನಿಯರ ಕಾಲ್ಗಳಂ ಪಿಡಿದುವಬ್ಜರಜಂ ಪೊರೆದುನ್ಮದಾಳಿಯೆಂ
ಬಿನಮೆಸೆದಿರ್ದುವಾಕೆಗಳ ನೂಪುರಕಾಂಚನಕಿಂಕಿಣೀಗಣಂ ೩

ನೋಡಲ್ಪೊಸಸುಗ್ಗಿಯ ಕಡು
ಗಾಡಿಯನರಸಂ ಬನಕ್ಕೆ ಬರೆ ತೆಂಬೆಲರಿಂ
ದಾಡಿದುವು ಲತೆಗಳಿದಿರೊಳ್
ಪಾಡಿದುವು ಮದಾಳಿ ಮಂಗಳಂಪಾಡುವವೊಲ್ ೪

ಕೆಂಗುಡಿ ತಳಿರ್ತಶೋಕೆಯ
ದಾಂಗುಡಿ ಪಟವಾಸಚೂರ್ಣಮಂಭೋಜರಜಂ
ಮಂಗಳಗೇಯನಿನಾದಂ
ಭೃಂಗೀರವಮಾಗೆ ನೃಪತಿ ಬನಮಂ ಪೊಕ್ಕಂ ೫

ಈ ವನಿತಾಸಹಸ್ರದೊರೆಗಂ ದೊರೆಗಂ ರತಿ ಕಾಮದೇವನೀ
ಭೂವಲಯಾಧಿನಾಯಕನ ಪೋಲ್ವೆಗೆ ಪೋದೊರೆಯಲ್ಲೆನುತ್ತ ನಾ
ನಾವಿಧದಿಂದೆ ತಮ್ಮೊಳುಲಿವಂದದಿನಂದುಲಿಯುತ್ತುಮಿರ್ದುವಿ
ಮ್ಮಾವಿನ ಕೊಂಬಿನೊಳ್ ಗಿಳಿಗಳುಂ ಕೊನರ್ಗರ್ಚಿದ ಕೋಕಿಲಂಗಳುಂ ೬

ಪ್ರಿಯವಾದವು ಪಡಿಯಱಿವ
ಕ್ಕಿಯ ಜಡಿಪುಂ ಜಕ್ಕವಕ್ಕಿಯಲಿ ಸಾರಸವ
ಕ್ಕಿಯ ಕುಹಕಂ ಪಂಡಿತವ
ಕ್ಕಿಯ ಪಠನಂ ನೃಪನ ಕಿವಿಗೆ ಕೇಳೀವನದೊಳ್ ೭

ಅಲರ್ವಕ್ಕಿಯ ಗೆಡೆವಕ್ಕಿಯ
ಜಲವಕ್ಕಿಯ ಪವಳವಾಯ ಪಕ್ಕಿಯ ಕಿಸುಗ
ಣ್ಮಲರ್ವಕ್ಕಿಯ ಮೆಲ್ಲುಲಿ ನ
ಲ್ಲುಲಿ ಮದನನ ಗೀತವಾದ್ಯದುಲಿಯವೊಲೆಸೆಗುಂ ೮

ಕಳಕಂಠಂ ಪುಗಿಲೆಂಬೀ
ಕಳನಿನದಂ ವಕ್ರಮಾಗಿಯುಂ ನೃಪನ ಮನಂ
ಗೊಳಲಾರ್ತುದು ಪುರುಡಿಪ ನ
ಲ್ಲಳ ನಲ್ಮೆಯ ವಕ್ರವಚನದಂದದಿನಾಗಳ್ ೯

ಎನಿತೊಳವು ವನಲತಾತರು
ವನಿತುಮನೊರ್ಮೊದಲೆ ನೋಡುವನಿತಳಿಪು ಕರಂ
ಮನದೊಳ್ನೆಕೊನೆವೋಯ್ತೆನೆ
ವನಪಾಲಪುರಸ್ಸರಂ ನೃಪಾಲಂ ತಳರ್ದಂ ೧೦

ವ॥ ಅಂತು ವನನಿವಹರಣಪ್ರಣಯು ನಿಜಚರಣಸರಸಿರುಹ ಶೋಣಿಮದಿಂ ವನಸ್ಥಳಿಯನಳಂಕರಿಸುತ್ತುಂ ವನಲಾಸಿನೀವದನವಶ್ಯತಿಳಕಮೆನಿಪ ತಿಳಕಮಂ ನೋಡಿ

ಇನಿತು ಮುಕುಳಕ್ಕೆ ಚೆಲ್ವಲ
ರ್ಗಿನಿತು ಬೆಡಂಗಿನಿತು ಪಲ್ಲವಕ್ಕೆ ವಿಳಾಸಂ
ತನಗಿಲ್ಲದಂದು ಪಡೆಗುಮೆ
ವನತರುಗಳೊಳಿದುವೆ ತಿಳಕಮೆಂಬೀ ಪೆಸಱಿಂ ೧೧

ವ॥ ಎನ್ನುತ್ತುಂ ತತ್ಸಮೀಪದೊಳ್ ಮಧುಪ್ರಸಂಗದೊಳಂಗನಾಗಂಡೂಷದಿನುನ್ಮಿಷಿತ-ಮುಕುಳಮಾದ ವಕುಳಮಂ ನೋಡಿ

ಮದಮಂ ಷಟ್ಚರಣಕ್ಕೆ ಮಾಡಿ ಮದನೋನ್ಮಾದಕ್ಕದರ್ಪಾಗಿ ಸಂ
ಮದಮಂ ಚಿತ್ತಭವಂಗೆ ತಂದು ಮದಿರಾಗಂಧಕ್ಕೆ ಸಂವಾದಿಯಾ
ಮದಿದೊಂದಚ್ಚರಿಯಲ್ತು ಮುಗ್ಧಮದಿರಾಗಂಡೂಷದಿಂಮಳ್ಳಿಲ
ರ್ವುದು ಮುನ್ನಂ ನಿಜಮಂ ಬಿಸುಟ್ಟುದೆ ಲತಾಂತಾಗ್ರೇಸರಂ ಕೇಸರಂ ೧೨

ವ॥ ಎಂದವಜಿ ಕೆಲದೊಳ್ ತಂಬೆಲರ ತೀಟದಿನಲ್ಲಾಡುವಸುಕೆಯ ಪೂಸವಳಿರ್ಗಳಂ ನೋಡಿ

ಸ್ಮರಸಾರೂಢಶರಾಸನಂ ಮಧುಕರಜ್ಯಾರಾವಮಂ ಮಾಡಿ ತೊ
ಟ್ಟರಲಂಬಂ ನಜಿಿದಿರ್ಪನೋಪರನಗಲ್ದೇಕಾಂತದೊಳ್ಕಾಂತೆಯರ್
ಬರವೇಡಿಲ್ಲಿಗೆ ಪೋಗಿಮತ್ತಲೆನುತುಂ ಕೈಸನ್ನೆಯಿಂ ಪೇಟ್ವವೊಲ್
ತರುಣಾಶೋಕನಪ್ರವಾಳಮೆಸೆಗುಂ ಮಂದಾನಿಲಾಂದೋಳಿತಂ ೧೩

ವ॥ ಎಂದು ಮಾಣದೆ

ಯೋಗಿಗಳ ಚಿತ್ತಮಪಗತ
ರಾಗಮದಂ ನಡುಗಿಸಲ್ಕೆ ಸಾಲ್ದುದು ತಳಿರ್ಗಳ್
ರಾಗಿಗಳವರ್ಕೆ ನಡುಕಮ
ನಾಗಿಸದಿರ್ಕುಮೆ ವಸಂತಸಮಯಸಮೀರಂ ೧೪

ವ॥ ಎನುತ್ತುಮಲ್ಲಿಂ ತಳರ್ದು ಕಾಮಸಾಮ್ರಾಜ್ಯಮಂದಿರವಂದನಮಾಲೆಯೆನಿಸಿ ಪರ್ವಿ ಪಲ್ಲವಿಸಿ ದಾಂಗುಡಿಪಿಡುವ ನವಮಾಲಿಕಾಲತೆಗಳುಮಂ ಮಕರಕೇತನಮೆನಿಸಿ ಸೋನೆವನಿಯ ತಂದಲನಗುಂದಲೆಮಾಜ್ಪಚೂತಲತೆಗಳುಮಂ ಮನೋಭವನ ಸಂಭೋಗಭವನಮೆನಿಸಿ ನಿಜಿವಳಿರ ತುಱುಗಲಿಂ ಕಱಂಗಿಕಟ್ಟಿಲಿಪ ತಮಾಳಲತೆಗಳುಮಂ ಕುಸುಮಾಸ್ತ್ರನ ಶಸ್ತ್ರಶಾಲೆಯೆನಿಸಿ ಕುಸುಮಾಕೀರ್ಣಮಾದ ಕರ್ಣಿಕಾರಲತೆಗಳುಮಂ ಮನೋಜರಾಜದೇವಪೂಜಾನಿವಾಸಮೆನಿಸಿದ ದವನದ ಮಧ್ಯರಂಗದಿಂ ಮನಂಗೊಳಿಸಿ ಬಿರಿಮುಗುಳ ಕಂಪನುಗುಟ್ಟಿ ಮಾಧವೀಲತೆಗಳುಮಂ ಮನಸಿಜನ ಮಜ್ಜನಶಾಲೆಯೆನಿಸಿದ ಪೂಗೊಳನನೊಳಗು ಮಾಡಿ ತಳಿರತೊಂಗಲಿಂ ಪುದಿದ ಲವಂಗಲತೆಗಳುಮಂ ರತಿಪತಿಯ ವಿವಾಹ ಗೇಹಮೆನಿಸಿ ಪೊಸದಳಿರ ಪಸರದಿನೊಪ್ಪುವೇಲಾಲತೆಗಳು -ಮನರಸನವಲೋಕಿಸುತ್ತಿರ್ಪುದುಂ

ಆನಿರ್ದ ಬನದೊಳುಟಿದುವ
ನೇನಂ ನೃಪ ನೋೞ್ಪಿ ಬರ್ಪುದೆಂಬಂದದಿನಂ
ದೇನುಲಿದುದೊ ಪಿಕಮಧುರ
ಧ್ವಾನದಿನಾರಕ್ತಕೋರಕಂ ಸಹಕಾರಂ ೧೫

ವ॥ ಆಗಳದಱ ಸಹಜಸೌಂದರ್ಯಮಂ ಸೌಂದರ್ಯಪುರಂದರನೆ ಮೆಯ್ಯಿಕ್ಕದಲಂಪುಪೊಂ ಪುಳಿವೋಗೆ ನೋಡಿ

ಅಲರ್ಗೊಂಚಲ್ಗಳಸೇಱ ತುಂಬಿ ಮಧುಪಾನಕ್ರೀಡೆಯೊಳ್ಸೊರ್ಕಿ ಮಂ
ಜುಳಮಂದ್ರಧ್ವನಿಯಿಂದವೇಂ ಮೊರೆದುವೇ ವಾಚಂಯಮಂ ಸಂಯಮಂ
ತೊಲಗಿತ್ತೇ ಕರ್ಸರ್ಗರ್ಚಿ ಕೋಗಿಲೆಗೆ ಕಾಯಂಕರ್ಚಿಮೇಣ್ನಾಟಕಂ
ನಲಿದತ್ತೇ ಗಿಳಿ? ಚೂತವಲ್ಲದ ವೃಥಾಸ್ಫೂಳಾವನೀಜಾತದೊಳ್ ೧೬

ವ॥ ಎಂದು ಕೆಂದಳಿರಗೊಂದಣದೊಳುಲಿದು ಗಱಿಪುರವಗಿಳಿಯ ಕಳಕಳಮಂ ಕುಸುಮರಸಮಂ ಸಲಿದು ಮೊರೆವ ಚಂಚರೀಕದಿಂಚರಮುಮಂ ಕಳಿಕೆಗರ್ಚಿದ ಕಷಾಯ ಕಂಠಮಾದ ಕಳಕಂಠದ ಕುಂಠಕಂಠಮುಮಂ ಶ್ರುತಿಪಥಕ್ಕತಿಥಿಮಾಡಿ

ಅಸದಳಮಾಯ್ತು ರೂಪ ಮದನಗ್ಗಳಮಾದುದು ಯೌವನೋದಯಂ
ಪೊಸ ಸಿರಿವಂತನಾ ಸಿರಿಯುಮಂ ಜನಕಂ ಮಧು ಕೊಟ್ಟನಿಂ ವಿಚಾ
ರಿಸುಗುಮೆ ಚೂತನೊಲ್ದು ಪೊರೆಗುಂ ಗಿಳಿಯಂ ಮುಖರಾಗಿಯಂ ಮಧು
ವ್ಯಸನಿ ಮದಾಳಿಯಂ ಸಹಜವಕ್ರವಚಸ್ವಿಯನನ್ಯಪುಷ್ಟನಂ ೧೭

ವ॥ ಎಂದು ಮಾಕಂದಮಂ ವಕ್ರೋಕ್ತಿಯಿಂ ಪೊಗಟ್ದು ತಣಿಯದೆ ರಾಜಮಕರಧ್ವಜಂ ಸುಕರಕವಿತಾಮನೋಹರನ ಮೊಗಮಂ ನೋಟ್ಪುದುಂ

ಇದು ಚಿತ್ತಜಸಂಪತ್ತಿಗೆ
ಮೊದಲೀಮರಮೊದಲೊಳತನು ಸಾಧಿಸಿ ಪಡೆದಂ
ಮದನಾಸ್ತ್ರಮನೆನೆನ ಚೂತದ
ಮೊದಲೇಂ ಚೆಲ್ವಿಂಗೆ ಮೊತ್ತಮೊದಲೆನಿಸಿದುದೋ ೧೮

ನುಡಿಗಲಿಸಿ ಮಾಣ್ದುದೇ ಕ
ನ್ನಡವಕ್ಕಿಯನಿಸಲನಂಗನಂ ಕಲಿಸಿದುದೆಂ
ದೊಡೆ ಬಿರಯಿಗೆ ಮುನ್ನಿನ ಭವ
ದಿಡುವಗೆ ಚೂತಾಂಕುರಂ ವಿಷಾಂಕುರಮೆ ಪೊಲಂ ೧೯

ಕೋರಕಮೆರಡೆಸೆದೀ ಸಹ
ಕಾರದ ಸೆಳೆಗೊಂಬು ಮಾನಿನೀ ಮಾನಸ್ತಂ
ಭೇರಮುಮನಳಱಸಂಗಜ
ವೀರನ ಪಿಡಿದಾರೆಗೊಂಬೆನಲ್ ಸೊಗಯಿಸುಗುಂ ೨೦

ಕರಣಗ್ರಾಮಮನೀ ಮಾ
ಮರಕ್ಕೆ ಮಧು ಬಾೞ್ಕೆಗೊಟ್ಟು ಕಿಸುವಲಗೆಗಳಿಂ
ಬರೆದೆತ್ತಿದ ಶಾಸನಕೇಂ
ದೊರೆಯಾದುವೊ ಸೊಸೆಯ ಪನಿ ಪಗಿಲ್ತೆಳದಳಿರ್ಗಳ್ ೨೧

ನನೆ ಪೇೞೆ ಬಂದ ಮಾವಂ
ಮನೋಭವಂ ನಿಂದು ನೋೞ್ಪುದುಂ ವಿರಹಾಳಂ
ಬಿನಿಯರಭಿಮಾನಧನಮು
ಳ್ಳನಿತುಮನಾಲೀಢಮಿಟ್ಟು ಪಂಕಂಗೊಂಡಂ ೨೨

ಖಂಡಿಸಿ ಪರಪುಷ್ಟಂ ನಿಜ
ತುಂಡದಿನೊಳ್ಗೊನರನೀಂಟೆ ಕನರಂ ತೊಂಡುಂ
ಬಂಡುಂ ನೆಗೆಯೆ ವಿಜೃಂಭಿತ
ಗಂಡಸ್ಥಳಮಾದುದಾಮ್ರಮುಕುಳಸ್ತಬಕಂ ೨೩

ಪೂಮಿಡಿಯಿಂ ಕುಸುಮಸ್ತಬ
ಕಾಮೋದಕ್ಕೆಱಗಿದಳಿತ ಬಳಗದಿನಂದೇಂ
ಮಾಮರದೆಳಗೊಂಬೆಸೆದುದೊ
ಕಾಮನಯಃಪಿಂಡಶೃಂಖಳಾದಂಡದವೊಲ್ ೨೪

ಪಸರಿಸಿ ಶಾಖಾಭುಜದೊಳ್
ಮಿಸುಗುವ ನಖ ಪದಮನಧರಪಲ್ಲವಮಂ ಖಂ
ಡಿಸಿ ರಕ್ತತುಂಡನೇಂ ಪುಟ್ಟಿ
ಸಿದುದೊ ಸಹಕಾರ ತಿಲಕೆ ಗಂಗಜ ಶರಮಂ ೨೫

ವ॥ ಎಂದಾಸುಮತಿಯಾಗ ಪೇೞೆ ಕೇಳ್ದು ಕಾವ್ಯವಿನೋದಂ ಪಾರಿಜಾತಂ ಕೋರಕಿತಮಾದಂತೆ ಪುಳಕಿತಶರೀರನಾಗಿ

ಸುಕರಕವಿತಾಮನೋಹರ
ನ ಕವಿತೆಯಂ ಮೆಚ್ಚಿ ಮೆಚ್ಚುಗೊಟ್ಟಂ ಸಹಕಾ
ರ ಕುಮಾರನೆಂದು ಮಣಿಕನ
ಕಕೋಟಿಯಂ ನೆವದೊಳಿತ್ತನಾ ಧರಣೇಶಂ ೨೬

ಮರನಿತ್ತುದೆಂದು ಚಿಂತಿಸ
ದೆರೆಯದ ವಿಬುಧಾಳಿಗೀಯೆ ಚಿಂತಾಮಣಿಯುಂ

ಸುರಭೂರುಹಮುಂ ಕಲ್ಲುಂ
ಮರನಾದುವೆನಿಪ್ಪ ದಾನಿ ದಾನವಿನೋದಂ ೧೭

ವ॥ ಅಂತು ಮೆಚ್ಚುಗೊಟ್ಟು ಸಹಕಾರಮಹೀರುಕ್ಕೆ ಸಹಜಸೌಂದರ್ಯನೆಂದು ತನ್ನ ಪೆರಸನ್ನಿಟ್ಟದಱ
ಕೆಲದಲ್ಲಿರ್ದ ಬಳ್ಳಿಮಾವನಡರ್ದಬಳ್ಳಿಮಲ್ಲಿಗೆಯಂ ನೋಡಿ

ಎಳಮಾವಂ ಪಲ್ಲವಗ್ರಾಹಿಯನನುನಯದಿಂ ಸುತ್ತಿ ತೆಂಗಾಳಿಯಿಂ ಸಂ
ಚಳನಪ್ರಾಗಲ್ಭ್ಯದೊಳ್ ವಾಸನೆವಡೆದು ಪರಿಷ್ವಂಗದೊಳ್ತಾಂಗಿ ಭೃಂಗಾ
ವಳಿಯಂ ಪೋಱಿಂ ದರಸ್ಮೇರದಿನೆಱಗಿಸಿ ವಲ್ಲೀಲತಾತನ್ವಿವೇ ಶ್ಯಾ
ಕಳೆಯೊಳ್ ಸೌಭಾಗ್ಯಶೋಭಾವತಿ ಪರಿಣತಿಯಂ ಗರ್ಭದೊಳ್ಕಲ್ತಳಕ್ಕುಂ ೧೮

ವ॥ ಎಂದವಱ ಬಿರಿಮುಗುಳ ಪಸರಿಸುವ ಪೊಸಗಂಪಂ ಪಸವಟ್ಟಂ ತೀಂಟುವ
ಮದಾಳಿಪಟಲಮಂ ನೋಡಿ

ಸುರಭಿಸಮೀರಣಂ ಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ
ಪರಮಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟವೊಲ್ಕುಸುಱೆ ಪೀರ್ದುವು ಸೌರಭಮಂ ಮದಾಳಿಗಳ್ ೧೯

ವ॥ ಎಂದವಲೋಕನಂಗೆಯ್ದು

ಅನುರೂಪಮಾಗೆ ಪುಟ್ಟಿಸಿ
ವನಜಭವಂ ಚೂತರಾಜನಂ ಮಲ್ಲಿಗೆಯಂ
ವನಮಿಥುನಂಗಳೊಳೀಂ ಮು
ನ್ನಿನ ತನ್ನ ಜಡಸ್ವಭಾವಮಂ ಮೀಱಿದನೋ ೨೦

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿಕಾಮಾಗ್ನಿ ಹೋಮಾಗ್ನಿಪುಂಸ್ಕೋ
ಕಿಳನಾದಂ ವೇದಮಂತ್ರಂ ಕುಡಿಗುಡಿಮಧುಮಾಸಮೌಹೂರ್ತಿಕಂ ಪೂತವಲ್ಲೀ
ಕುಳಮೆಲ್ಲಂ ನಿಬ್ಬಣಂ ಬಂದಬಲೆಯರೆನೆ ಚೂತಂಗಮೀ ಮಲ್ಲಿಕಾಕೋ
ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯಪುಣ್ಯಾಂಬುವಿದಂ ೨೧

ವ॥ ಎಂದವನಿಪತಿ ಸಮಯೋಚಿತವಾಗ್ವಿಳಾಸಮಂ ಮೆಱೆವುದುಮನಂತರ ಮವಸರಂಬಡೆದು
ಮಂಗಳಪಾಠಕಂ ಮದಾಳಿಕುಂತಳೆಗೆ ಮಲ್ಲಿಕಾವಲ್ಲಭೆಗಭಿಮುಖನಾಗಿ

ರತಿಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ
ದ್ಯುತಿ ಲತೆಮಾವುಕೀರಕಳಭಂ ಕಳಕಂಠರವಂ ರಥಾಂಗವಂ

ಪತಿತಳಿರುಯ್ಯಲೋಪರ ಸುಸಿಲ್ನಸೆವಿಲ್ ನಸೆಯಂಬು ಮಂದಮಾ
ರುತನಳಿನೀನಿನಾದಮಿವಜೆಂ ಪೊಸಮಲ್ಲಿಗೆಗಕ್ಕೆ ಮಂಗಳಂ ೩೨

ಮುರಿದ ತೊಡಂಬೆಯೊಳ್ಮೊನಸಿ ತೋರ್ಪ ಪಸುರ್ನನೆ ಮೇಗೆ ಬೀಗ ಬೆ
ಳ್ಕರಿಸಿದ ಮೊಗ್ಗೆಕೂಡೆ ಬಿಳಿದಾದ ಮುಗುಳ್ಪೊಜೆವೋಪಕುಟ್ಮಲಂ
ಬಿರಿವಲರೆಂಬಿವಂ ತಿಱಿದು ಮಲ್ಲಿಗೆಯೊಳ್ ಶರಪಂಚಕಂಗಳಂ
ವಿರಚಿಸಿ ಪಂಚಬಾಣವೆಸಜಂ ತಳೆದಂ ಮದನಂ ಬಸಂತದೊಳ್ ೩೩

ಅಸದಳಮಾಗೆ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
ದೆಸಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಬ್ಬುರಂ
ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದುವಂ
ಪೊಸೆಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ ೩೪

ಸಕಳೋರ್ವೀತಳ ಸಾಮ್ರಾ
ಜ್ಯಕಂಠಿಕಾಬಂಧ ಬಂಧೂಬಂಧುರ ಮಲ್ಲೀ
ಮುಕುಳಮಣಿಕಳಶಗಂಧೋ
ದಕದಿಂದಾದುದು ಮನೋಭವಂಗಭಿಷೇಕಂ ೩೫

ತುಂಬಿಗೆ ಕೊರಲುದ್ದಂ ಬಂ
ಡೆಂಬನಿತಱಿಕೊಳಿರ್ದುದಲ್ತು ಬಿರಯಿಗುಗುಳ್ಕೀ
ರೆಂಬನಿತಾದುದು ದೆಸೆಯಂ
ತುಂಬಿದ ಮಗಮಗಿಪ ಮಲ್ಲಿಕಾಕುಸುಮರಸಂ ೩೬

ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು ಪುಷ್ಪಂಗಳು
ಳ್ಳನಿತುಂ ನೋಂತವೆ ತನ್ನ ಕೀಱಿಸಳ ಸೌಭಾಗ್ಯಕ್ಕೆನಿಪ್ಪಗ್ಗದೀ
ವನದೇವೀಸಖಿಗೀ ವಸಂತವಿಜಯಶ್ರೀದೇವಿಗೀ ಚೂತರಾ
ಜನ ಮಾದೇವಿಗೆ ಮಲ್ಲಿಕಾರಮಣಿಗಂ ಭದ್ರಂ ಶುಭಂ ಮಂಗಳಂ ೩೭

ವ॥ ಎಂದು ಮಂಗಳವೃತ್ತಂಗಳನೋದಿದ ಮಂಗಳಪಾಠಕಂಗೆ ತದುತ್ಸವ ಮಹಾದಾನಮಂ ಮಾಡಿ ಪಲ್ಲವಿತಲತಾದ್ರುಮಂಗಳಂ ನೋಡುವಲ್ಲಿ

ಮೃದುಪದಪಾತದಿಂದಸುಕೆಯಂ ತಳಿರ್ವೆಱಿಸಿ ಕೇಕರಾಂಶುಪಾ
ತದಿನಲರ್ಗೊಂಚಲಂ ತಿಳಕಮಂ ತಳೆವಂತಿರೆ ಮಾಡಿ ಪರ್ಬಿ ಕೊ
ರ್ಬಿದ ಕುಚದೊತ್ತಿನಿಂ ಕುರವಕಕ್ಕೆ ನವಾಂಕುರಮಂ ನಿಮಿರ್ಚಿ ಬೀ
ಱಿದುದಬಳಾಜನಂ ನೃಪವರಂಗೆ ಮನೋಜ ಮಹೇಂದ್ರಜಾಳಮಂ ೩೮

ವ|| ಆಗಳಪಂ ನೋಡಿ ವಿಸ್ಮಯಸ್ಮೇರಮುಖಾರವಿಂದನಾಗಿ

ವಾರಸ್ತ್ರೀಯರ ಸೋಂಕುವೆತ್ತನಿತಜೆಂದೇಕಿಂದ್ರಿಯಕ್ಕಂ ಸ್ಮರೋ
ದ್ಗಾರಂ ಪರ್ಚಿದುದೆಂದೊಡೀಕೆಗಳನಂಗಕ್ರೀಡೆಯೊಳ್ ಮಚ್ಚಿದಂ
ದಾರಂ ದಂಡಿಸರಾರಸಂಡಲೆಯರಾರಂ ಗಂಡುದೊಟ್ಟಾಳರಾ
ರಾರಂ ಮಾಸವರಂತೆಮಳ್ದಿ ತುಟಿಯರ್ಪಂಚೇಂದ್ರಿಯಾಸಕ್ತರಂ ೩೯

ವ|| ಎಂದು ಮನದೊಳೆ ಬಗೆದು

ಒದೆದೆಳದಳಿರಂ ನೀಂ ಮಾ
ಡಿದೆ ತನಗೆಂದಸುಕೆ ನಿನಗೆ ಸೋಲ್ತಿತ್ತುದು ಕೊಳ್
ಇದನೆಂದು ನೃಪಂ ಕೋಮಳ
ಪದಪಲ್ಲವೆಗಿತ್ತನರುಣಮಣಿನೂಪುರಮಂ ೪೦

ನನೆಯಂ ಪುಗಳನಾಳೋ
ಕನಮಾತ್ರದೆ ಪಡೆದಳೆಂದು ಮೆಚ್ಚಂ ತಿಳಕಂ
ನಿನಗಿತ್ತುದೆಂದು ಭೂಪಂ
ವನಿತಾತಿಳಕಕ್ಕೆ ಹಂಸತಿಳಕಮನಿತ್ತಂ ೪೧

ಅಂಕುರಮಂ ಕುಚಕಳಶದ
ಸೋಂಕಿಂ ಪುಟ್ಟಿಸಿದ ನಿನಗೆ ದಯೆಗೆಯ್ದುದು ಮೆ
ಚ್ಚಂ ಕುರವಕತರುವೆಂದರ
ಸಂ ಕೊಟ್ಟಂ ವೃತ್ತಕುಚೆಗೆ ಮುತ್ತಿನ ಸರಮಂ ೪೨

ವ|| ಅಂತು ನವಂಬಡೆದು

ಮರನುಂ ಬಳ್ಳಿಗಳುಂ ತೊವಲ್ತೊಡೆ ವಸಂತೋತ್ಸಾಹಮೆಂದಗ್ಗದೆ
ಗ್ಗರೆನುತ್ತಿರ್ಕೆಮ ಪೊಂಗಳಂ ತುಡುಗೆಯಂ ವಸ್ತ್ರಂಗಳಂ ಪೂಣ್ದು ಸಿ
ದ್ಧರಸಂ ಸಿದ್ಧಿಸಿದಂತೆ ಕಲ್ಪತರು ಕೈವಂದಂತೆ ಭೂವಲ್ಲಭಂ
ಧರೆಗೆಲ್ಲಂ ಪಿರಿದೀವ ದಾನಗುಣದಿಂ ನಿಚ್ಚಂ ವಸಂತೋತ್ಸವಂ ೪೩

ವ|| ಎಂದು ಪೊಗಟ್ಟಿ ವಂದಿಜನದಬ್ಬರಮಂ ಮನದೊಳುಬ್ಬರಮಂ ಮಾಡುತ್ತಂ ದಾನವಿನೋದನಿರ್ಪುದಂ

ಏವುದು ಗುರುಕರ್ಕಶಭೂ
ಷಾಪಿಳಸನಮೆಂದು ಪುಷ್ಪಕೋಮಳೆಯರ್ ಪು

ಷ್ಪಾಪಚಯಕ್ಕೊಡರಿಸಿದರ್
ಪೂವಿನ ಪಲ ತೆಱದ ತುಡುಗೆಯಿಂ ಕೈಗೆಯ್ಯಲ್ ೪೪

ನೂಪುರಕಳರವಮುಂ ಕಬ
ರೀಪರಿಮಳಮತ್ತಮಧುಪರವಮುಂ ಬನಮಂ
ವ್ಯಾಪಿಸೆ ಪುಷ್ಪಾಪಚಯ
ವ್ಯಾಪಾರಕ್ಕೆಳಸಿ ಸುೞಿದರಂದಂಗನೆಯರ್ ೪೫

ವ॥ ಆಗಳೊರ್ವಳ್

ಮುಡಿ ಬಿಟ್ಟು ಕಾರ ಸೋಗೆಯ
ಬೆಡಂಗನಭಿನಯಿಸೆ ಮುಡಿಯ ಸೊವಡಿಂಗಲರಂ
ಬಿಡೆ ಮಧುಪಮಾಳೆ ಮಾವಿನ
ಮಿಡಿಯಂ ಮಿಡಿವಟ್ಟನತನುಗಾಯ್ದವೊಲಾಯ್ದಳ್ ೪೬

ಚಪಳವಿಳೋಚನೆ ಸಹಕಾ
ರಪಲ್ಲವೋಲ್ಲಸಿತಪಾಣಿಪಲ್ಲವೆ ಪೋಲ್ತಳ್
ತಪನೀಯಪ್ರಭೆ ಬಾಳಾ
ತಪಮಂ ಸೆಱಗೆಯ್ದು ಬಳ್ಳಿಮಿಂಚಿನ ತೆಱನಂ ೪೭

ಸಿರಿಕಂಡದ ತಳಿರಂ ತಿಱಿ
ವ ರಮಣಿ ಸಾಪಗಿಪ ಮುಡಿಯುಮೆಡಗೆಯ್ಯುಂ ತ
ೞ್ತಿರೆ ನಾಗಬಂಧದಿಂ ನೆರೆ
ವುರಗನುಮುರಗಿಯು ಮಿವೆನಿಸಿ ಪಡೆದುವು ಚೆಲ್ವಂ ೪೮

ಇಂದೀವರದಳನಯನೆಯ
ಕೆಂದಳದೊಳ್ನವತಮಾಳ ಕೋರಕಜಾಳಂ
ಕೆಂದಾವರೆವೂವಿನ ಮಕ
ರಂದಮನೀಂಟುವ ಮದಾಳಿಪಟಳಮೆನಿಕ್ಕುಂ ೪೯

ಕರಕಿಸಲಯರುಚಿಯಿಂದಂ
ಪರಿಭವಮಾಯ್ತೆಂಬ ಲಜ್ಜೆಯಿಂ ತಲೆಯೆಱಕಂ
ಪಿರಿದಾಯ್ತೆನೆ ಜೋಲ್ದು ಸಡಿ
ಲ್ದರುಣಾಶೋಕಪ್ರವಾಳಮಂ ವಧು ತಿಱಿದಳ್ ೫೦

ಎಱಗಿಸಿ ವಿಳಾಸದಿಂ ಪೂ
ತೆಱಗಿದ ಲತೆಯಂ ಲತಾಂಗಿ ಕುಸುಮಸ್ತಬಕ
ಕೈಱಗಿದಳಿಮಾಳೆಯಂ ಸೋ
ದೆಱಗಿಸಿ ಸಳೆಗೊಂಬಿನರಲಸಟ್ಟೆಯೊಳಾಯ್ದಳ್ ೫೧

ಯುವತಿ ಕದಳೀದಳಶ್ಯಾ
ಮೆ ವಸಂತಲತಾಗ್ರಶಾಖೆಯಂ ಪಿಡಿದು ಮನೋ
ಭವಪಾಶಲತಿಕೆಯಂ ಪಿಡಿ
ದ ವಸಂತಶ್ರೀಯ ಚೆಲ್ವನೆಳಕುಳಿಗೊಂಡಳ್ ೫೨

ಮಾವಂ ಮಲಂಗಿ ಸಂಪಗೆ
ವೂವಿನ ಸೆಳೆಗೊಂಬನುಡಿದು ಪಿಡಿದು ಬಟಿಲ್ದಿ
ರ್ದಾ ವಧುವೆಸೆದಳ್ ರನ್ನದ
ದೀವಿಗೆವಿಡಿದಿರ್ದ ಪೊನ್ನ ಪುತ್ತಟಿಗೆಯವೊಲ್ ೫೩

ಲೆಕ್ಕಕ್ಕೆ ತಿಱಗೆ ತಿಱವರ್
ಮಿಕ್ಕರಲನವೇವುವೆಂದು ಮುಗುಳ್ಗಳೊಳಗೆ ಹಾ
ರಕ್ಕೆ ಚೆಳಕಿಗೆ ಬಣ್ಣಸ
ರಕ್ಕಾಯ್ದಳ್ ತರುಣಿ ಮಲ್ಲಿಕಾಕುಟ್ಮಳಮಂ ೫೪

ದ್ವಿಗುಣಿಸೆ ಕೇಕರಾಂಶು ಕುಸುಮಂಗಳಸಾರ್ಗಪಸಂಗರಾಗಮಂ
ತ್ರಿಗುಣಿಸೆ ತೋಳ ಪೆರ್ಮೊಲೆಯ ನಾಭಿಯ ಮೂಲದ ನುಣ್ಪುನೀಳ್ಕೆ ಮ
ಲ್ಲಿಗೆಯಲರ್ಗೊಂಚಲಂ ಚಪಳಲೋಚನೆ ತೊಟ್ಟನೆ ಕಂಡು ಮನ್ಮಥಂ
ತ್ರಿಗುಣಿಸಿ ತನ್ನ ಕಟ್ಟಿದಲಗಂ ಮೆಱದಂ ನೆಱೆ ಗೇಣ ಕೇಣಮಂ ೫೫

ಸನೆಗೊಂಬಂ ನೀಳ್ಕಿ ಚಂಥ್ರತಪಮೆ ಪುದಿದುದೆಂಬನ್ನೆಗಂ ನೋಡಿ ಚಂದ್ರಾ
ನನೆ ಪೂವಂ ಲೀಲೆಯಿಂದಂ ತಿಱಯೆ ತಿಳಕಮೊಳ್ಮತ್ತೆಯುಂ ಕೋರಕಂಗಳ್
ನನೆಗಳ್ ಪುಷ್ಪಂಗಳಂತಂತೊಗೆಯೆ ರತಿ ಲತಾಂತಾಯುಧಂಗಂದು ಸಂಮೋ
ಹನಬಾಣಶ್ರೇಣಿಯಂ ತೀವಿದ ತವದೊಣೆಯಂ ತಾಳಿದಂತಿರ್ದಳೊರ್ಬಳ್ ೫೬

ತೀಪಿದ ತನ್ನ ಯೌವನದ ಸೊರ್ಕಿನೊಳುರ್ಕೆ ನಿತಂಬಸೂತ್ರಘಂ
ಟಾವಿತತಸ್ವನಂ ಲಲಿತಯಾನಮೊಡಂಬಡೆ ಲೀಲೆಯಿಂ ಬಯ
ಲ್ಪಾವರೆಗಾವಿನೊಳ್ಮೊಲೆಗಳಂ ಪರಿವೇಷ್ಟಿಸಿಕೊಂಡು ಬರ್ಪ ಲೀ
ಲಾವತಿ ಪೋಲ್ತಳಂಗಜನ ಕಟ್ಟಿದ ಕೊಂಬಿನ ಪಟ್ಟದಾನೆಯಂ ೫೭

ವ॥ ಅಂತು ಕುಸುಮಾಪಚಯವಿನೋದಮಂ ತೀರ್ಚಿ

ನೃಪಶುದ್ಧಾಂತಃಪುರಪ್ರೌಢೆಯರಲರ್ದೊಡವಿಂ ರಾಜಕಂದರ್ಪನಂ ಮೆ
ಚ್ಚಿಪ ರಾಗೋದ್ರೇಕದೊಳ್ಸಂಪಗೆಯ ಪೊದಱ ಜೊಂಪಂಗಳಿಂ ಮಾಧವೀಮಂ
ಡಪದಿಂ ಶ್ರೀಖಂಡಷಂಡಂಗಳಿನೆಡೆಗಿಱಿದೇಲಾಲತಾಕುಂಜದಿಂ ರಂ
ಜಿಪ ನಾನಾಸೈಕತಸ್ನಾನಮನಸಮಶರಸ್ಥಾನಮಂ ಬಂದು ಪೊಕ್ಕರ್ ೫೮

ವ॥ ಅಂತು ಪೊಕ್ಕು ಮಧುಮಹೀಪಾಲನ ಸಾರಸರ್ವಸ್ವಮೆನಿಪ ಕೋರಕ ಕುಸುಮಕಿಸಲಯಂಗಳಿಂ ನೂಪುರದ ಕಾಲ ಕಡಗಮುಡೆನೂಲಬಣ್ಣಸರದೆಕ್ಕಸರದ ತಿಸರದೈಸರದ ಸಂಕಲೆಯಂ ಪಿಂಡುಗಂಕಣದ ಚಳಿಕಿಗೆಯ ಚೌಕಳಿಯ ಕರ್ಣೋತ್ತಂಸದ ಹಂಸತಿಳಕದ ಪೆಱೆಯ ಕುತ್ತುಂಗಱೆಯ ಮತ್ತಂ ಪಲತೆಱದ ಪೊಸಱಪಟ್ಟಮಂ ಸಮೆದು

ಪೊಸಱೆಂದಾಕಾರದಿಂ ಬಣ್ಣದಿನಿವಱ ಸಮಂಬಂದೊಡಂ ದೇಸೆಯಿಂ ನಿ
ಪ್ಪೊಸಗಂಪಿಂ ಮೆಲ್ಪಿನಿಂ ಪೋಲ್ವುವೆ ಮಣಿಮಯಭೂಷಾಕದಂಬಂಗಳೆಂ ದೇ
ಱಿಸುವಂತೇಕಾಂತಕಾಂತಪ್ರಮದೆಯರಲರ್ವಚ್ಚಂಗಳಂ ತೊಟ್ಟು ಲಾವ
ಣ್ಯಸುಧಾಂಭೋರಾಶಿವೇಳಾವನದೆಳಲತೆ ಕೈಗೆಯ್ದುಪೊಲ್ಕಗ್ಗವಂದರ್ ೫೯

ಕರಮೆಸೆಯ ತಮಗೆ ಪುಷ್ಪಾ
ಭರಣಂ ಕಾಮುಕಮೃಗವ್ಯ ಕೇಳಿಗೆ ಕಾಮಂ
ಸರಲಂ ಪೇಱಿದ ದೀಪದ
ಹರಿಣಿಯನನುಕರಿಸಿ ತರುಣಿಯರ್ ಸೊಗಯಿಸುಗುಂ ೬೦

ವ॥ ಅಂತು ಕೈಗೆಯ್ದು

ಸುಮನೋಭೂಷಣದಿಂ ಜಂ
ಗಮಲತೆಗಳೆನಿಪ್ಪ ಲಲನೆಯರ್ ನೃಪನೇತ್ರ
ಭ್ರಮರಮನಾವಲತೆಯಿಂ
ತಮಗಭಿಮುಖ ಮಾಗೆ ಮಾಡಿದರ್ ತತ್ಕ್ಷಣದೊಳ್ ೬೧

ಮನದೊಳ್ತೆಕ್ಕನೆ ತೀವಿದ
ವನಕೇಳೀರಸಮೆ ಪೊಣ್ಮು ವಂತಿರೆ ಮಧ್ಯಂ
ದಿನತಪನತಾಪದಿಂ ಬೆಮ
ರ್ವನಿ ತಲೆದೋಱಿದುವು ತರುಣಿಯರ ತನುಲತೆಯೊಳ್ ೬೨

ವ॥ ಅಂತು ಕುಸುಮಭೂಷಾವೇಷಮಂ ಘರ್ಮೋದಬಿಂದುಗಳಿರ್ಮಡಿಸೆ

ಜಳಜಾನನೆಯರ್ ನೀಳೋ
ತ್ಪಳಾಕ್ಷಿಯರ್ ಚಕ್ರವಾಕಮಿಥುನಸ್ತನೆಯರ್
ಕಳಹಂಸಾಲಸಗತಿಯರ್
ಜಳಕೇಳಿಯನಾಸೆವಟ್ಟರದು ತಕ್ಕುದೆದಲ್ ೬೩

ವ॥ ಆಗಳವನಿಪತಿ ವಿಳಾಸಿನಿಯರ ಬಟಲ್ಕೆಯಂ ಜಳಕೇಳಿಯೊಳ್ಕಳೆಯಲೊಡರಿಸಿ

ಕ್ಷಾರಮಿದೆಂದರ್ಣವಮಂ
ವಾರುಣದಿಕ್ಪಾಲನುಟಿದು ದೇವೀಸಹಿತಂ
ಸ್ವೈರದೆ ಬರ್ಪಂತರಸಂ
ವಾರಸ್ತ್ರೀವೆರಸು ಪೊಗೊಳಕ್ಕೆಟ್ಟಿಂದಂ ೬೪

ವ॥ ಅಂತು ಬಂದು

ಕಮಳಾಳಂಕರಣಂ ಕವಿಪ್ರಕರಕೇಳೀಮಂದಿರಂ ರಾಜಹಂ
ಸಮನೋಜಂ ಕುಮುದಾಶ್ರಯಂ ಪ್ರಕಟಿತಾಂತಸ್ಸಾರನೆನ್ನಂತೆ ವಿ
ಶ್ವಮಹೀವಲ್ಲಭನೆಂದು ನಿನ್ನ ಬರವಂ ಪೇೞ್ದಿಪ್ಪುದಂಭೋಜಷಂ
ಡಮಿದೆಂಬಂತೆಸೆದತ್ತು ಸಾರಸವಿಹಂಗೋತ್ತಾನಕೋಳಾಹಳಂ ೬೫

ಅವಯವಶೋಭೆಯಿಂ ದಿವಿಜಕಾಂತೆಯರಂ ಮಿಗುವೀ ವಿಲಾಸಿನೀ
ನಿವಹದ ವಕ್ತ್ರದೊಳ್ಸರಸಿಜಂ ಕುಚದೊಳ್ಪೊಣರ್ವಕ್ಕಿ ನೇತ್ರದೊಳ್
ಕುವಳಯಮಲ್ತೆ ಮಚ್ಚರಿಸುತಿರ್ಪೊವಮಂ ಪಡಿಯಿಟ್ಟು ನೋೞ್ಪೆನೆಂ
ಬವೊಲರಸಂ ವಿಲಾಸವತಿಯರ್ವೆರಸೆಯ್ದಿದನಬ್ಜಷಂಡಮಂ ೬೬

ವ॥ ಅಂತೆಯ್ದೆ ವರ್ಪುದುಂ

ಓಲಾಡಿ ಸರೋವರದೊಳ್
ಮೇಲಾದ ಸರೋಜರಜಮನೆಳಕುಳಿಗೊಂಡ
ಬ್ಜಾಲಯಪವನಂ ಕಳೆದುದು
ಬಾಲೆಯರ ವಿಲಾಸವನವಿಹಾರಶ್ರಮಮಂ ೬೭

ವ॥ ತದನಂತರಂ ಸೊಗಯಿಸುವ ಕಮಲಷಂಡಮಂ ಮಂಡಲಿಕಮುಕುಟ ಮಕರಿಕಾಪತ್ರಚಿತ್ರಿತಪಾದಪೀಠಂ ನಿಜಾಂತಃಪುರಪುರಂಧ್ರಿಯರ ಅಗಣ್ಯಲಾವಣ್ಯ ರಸವಿಸರದೊಳಂ ಕುಸುಮಾಭರಣಸೌರಭದೊಳಂ ಸುತ್ತುಂಗುರುಳ ಸುತ್ತಲುಂ ತಳಿವ ಕತ್ತುರಿಯ ಪರಿಮಳದೊಳಂ ತೆಕ್ಕನೆ ತೀವಿದಾಗಳ್

ದರದಳಿತಾಂಭೋಜದೆಸ
ಳ್ಪೊರೆಯೊಳ್ ಮೆಯ್ಗಱಿದು ಮೊರೆವ ಪೆಣ್ದುಂಬಿಯ ಸು
ಣ್ಬರಮವನೀವಲ್ಲಭನಂ
ಪರಸುವ ಕಮಳಿನಿಯ ದನಿಯೊಲೇಂ ಸೊಗಯಿಸಿತೋ ೬೮

ವ॥ ಆಗಳಾ ತಿಳಿಗೊಳದ ತಡಿಯೊಳ್ ಮಡಲ್ತ ಮಾಧವಿಯು ನನೆಗುಡಿಯು
ಸೊವಡಿಂದೋಗಡಿಸಿ ಬಂದು

ಬಿರಿಮುಗುಳೊಳ್ಮಸುಂಬನಲೆದೊಯ್ಯನೆ ಕರ್ಣಿಕೆಯಂ ಕರ್ದುಂಕಿ ಕೇ
ಸರಮನೆಱಂಕೆಯಿಂ ಕೆದಱಿ ಬಂಡನುರಂಬರಮುಂಡು ತೞ್ತಿಸ
ಳ್ಪೊರೆಯೊಳಡಂಗಿ ಸುಣ್ಬರದಿನಾಣತಿಮಾಡಿದುದುನ್ಮದಾಳಿ ತಾ
ವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ೬೯

ವ॥ ತದನಂತರಂ

ಸೊಗಯಿಪ ಲತಾಂಗದಬಲೆಯ
ರೊಗೆದ ಕುಚಂಗಳನೆ ಲತೆಯೊಳೆಱಗಿರ್ದ ಪೂಣರ್ವ
ಕ್ಕಿಗಳೆಂದೆ ಜಕ್ಕವಕ್ಕಿಗ
ಳಗಲದೆ ಮೊಗಸಿದುವು ಜಾತಿಸಂಮೋಹನದಿಂ ೭೦

ಜಳದೇವತೆಯರ್ ಧರಣೀ
ತಳಪತಿಯಂ ನೋಡಲೆಂದು ನೆರೆದಂತೆ ಮನಂ
ಗೊಳಿಸಿದುವು ಸುತ್ತಲುಂ ಸುೞಿ
ವೆಳವೆಂಡಿರ ನೆೞಿಲ ಬಳಗಮಬ್ಜಾಕರದೊಳ್ ೭೧

ಜಳರುಹಮುಕುಳದ ನೀಳೋ
ತ್ಪಳಮುಕುಳದ ಗಿಳಿಯ ನವಿಲ ಕಳಹಂಸೆಯ ಕೋ
ಕಿಳದ ಪೊಣರ್ವಕ್ಕಿಯಂದದ
ಜಳಯಂತ್ರಮನಾಯ್ದು ಪಿಡಿದುದಬಳಾನೀಕಂ ೭೨

ವ॥ ಆಗಳವನೀಶ್ವರಂ ಸಾರಘನಸಾರಕಾಶ್ಮೀರಕಸ್ತೂರಿಕಾಮಳಯರುಹ ಸುರಭಿಸಲಿಲಂಗಳಿಂ
ತೀವಿದ ಮಹಾರಜತದ್ರೋಣಿಗಳೆ ತನಗೆ ಕಂಠಾಭರಣಮಾದ ಕಮಲಷಂಡಮಂ
ಪೆಂಡವಾಸದೆಳವೆಂಡಿರ ಕೇಸಡಿಯ ಕೆಂಪಿಂ ಪಲ್ಲವಿತಂ ಮಾೞ್ಪುದುಂ

ಭೂಪಾಳಂಗವೞಯಿಸಿದು
ದಾ ಪೂಗೊಳದೊಳ್ಚಿತ್ರಕಾಂಡಪಟೀಪ್ರ

ಕ್ಷೇಪಣವಿಳಾಸಮಂ ತ
ತ್ಸೋಪಾನೋತ್ತಾನಮಣಿಮಯೂಖವಿತಾನಂ ೭೩

ವ॥ ಅಂತು ಬಂದು

ಜಳಕೇಳಿಯುಮಂ ಮೇಳದ
ವಿಳಾಸಿನೀಜನವಿಳಾಸರಸವಿಸರಸುಧಾ
ಜಳಕೇಳಿಯುಮಂ ವಸುಧಾ
ತಳಪತಿ ಮನಮೆಳಸೆ ಕಮಳವನಮಂ ಪೊಕ್ಕಂ ೭೪

ಜಲದೇವತೆಯರ್ಕಲ್ವಿಂ
ತಲೆಕೆಳಗಾಗಿರ್ದರೆಂದು ಮಚ್ಚರದಿಂದಂ
ಕೆಲರಿಕ್ಕಿ ಮೆಟ್ಟಿದರ್ ನೃಪ
ಲಲನೆಯರನೆ ತಡಿಯೊಳೆಸೆದುವವರ ನೆಟಿಲ್ಗಳ್ ೭೫

ಚೆನ್ನೆಯ್ದಿಲಿವರ ಕಣ್ಗಳ
ಚೆನ್ನೆಯ್ದಿಲಲುಂಬಮೆಂದು ಮುಗಿದುವು ನಾವಿ
ರ್ದಿನ್ನೇಪೆವೆಂಬ ತೆಱದಿಂ
ಚೆನ್ನೆಯರುಲಿಪಿಂದಡಂಗಿದುವು ಶಫರಂಗಳ್ ೭೬

ಸರಸಿಜಷಂಡಮಂ ನೃಪನ ಚಿತ್ತಮನೊರ್ಮೆಯ ಪೊಕ್ಕ ಪಲ್ಲವಾ
ಧರೆಯರ ಪರ್ವಿ ಕೊರ್ಬಿದ ಪಯೊಧರಭಾರಮವುಂಕೆ ತತ್ಸರೋ
ವರದೊಳಮಾ ಮಹೀಭುಜನ ರಾಗರಸಾಮೃತಪೂರ್ಣಹೃತ್ಸರೋ
ವರದೊಳಮುಣ್ಮಿ ಪೊಣ್ಮಿದುವು ಭಂಗುರಲೋಲತರಂಗಮಾಲೆಗಳ್ ೭೭

ವ॥ ಆ ಸಮಯದೊಳೊರ್ಬಳ್

ಕಡುನೀಱ ಜಂತ್ರದಂಚೆಯ
ನಡಿಗಡಿಗಾ ನೀರೊಳರ್ದಿದಳ್ನಡೆವೆಡೆಯೊಳ್
ಗಡ ನಾಣ್ಚದೆ ಪುರುಡಿಪುದೆ
ನ್ನೊಡನೆಂದುಯ್ವಲ್ಲಿ ಪುಡುಕುನೀರರ್ದುವವೊಲ್ ೭೮

ವ॥ ಮತ್ತಮಲ್ಲಿ

ಮರಕತಜಳಯಂತ್ರದ ಗಿಳಿ
ಶಿರೀಷಕೋಮಳೆಯ ಪಾಣಿಪಲ್ಲವದೊಳ್ಸಂ

ದರಮಾದುದವಳ ರಕ್ತಾ
ಧರಮಂ ವಟಿಫಳಮಿದೆಂದು ಪದೆದೆಳಸುವವೊಲ್ ೭೯

ವ॥ ಅಗಳ್

ನೆರೆದು ತಟಿಲ್ಲತಾವಳಿ ಕದಂಬವಿಕಾಸಮಾಗೆ ಸೂಸುವಂ
ತಿರೆ ಜಲಮಂ ಘನೋಪಲಮನೇನೆಸವತ್ತೊ ಪೂದಟ್ಕೆವೆತ್ತ ಕ
ಪ್ಪುರವಳುಕಂ ಜಳಂಬೆರಸು ರಾಜಮನೋಜನ ಮೇಲೆ ಸೂಸೆ ಪೊ
ನ್ನೊರೆಗೆ ಸವರ್ಣಮಾದ ನಿಜವರ್ಣದ ವಾರವಧೂಕದಂಬಕಂ ೮೦

ವನಿತೆಯ ಕಣ್ಣೆಳಗುಂ ಚಂ
ದನ ಜಲಮುಂ ಬೇಱೆವೇಱೆ ನಿಟ್ಟಿಸಲರಿದಂ
ಬಿನಮಡಱೆ ಪರ್ವೆ ಭೂಪಂ
ಗೆನಸುಂ ಸ್ಪರ್ಶಾನುಮೇಯಮಾದುವು ಕೊಳದೊಳ್ ೮೧

ಕ್ಷಿತಿನಾಥಂ ಯಂತ್ರದಿಂದೊತ್ತಿದ ಮಳಯಜಕಾಶ್ಮೀರಕಸ್ತೂರಿಕಾಮಿ
ಶ್ರೀತಧಾರಾಕಾಂಡಮಾ ಕಾಂತೆಯರ ತರಳನೇತ್ರತ್ರಿಭಾಗಂಗಳೊಳ್ಪಂ
ಗಿನೆತ್ತಾಮೋದಮತ್ತಭ್ರಮರಕುಳಪತತ್ರಾಂಚಿತಂ ಮನ್ಮಥಂ ಚಿ
ತ್ರಿತಶಾಖಾಲೇಖೆಯೊಳ್ಕೀಲಿಸಿದ ಸೆಲಗಿನಂಬಂ ಗೆಲಲ್ಕಾಲ್ದುದಾಗಳ್ ೮೨

ಸವತಿಯ ಮೇಲೆ ಜೀರ್ಕೊಣಿವಿಯಂ ಧರಣೀಶ್ವರನೊತ್ತೆ ಚಂದನಾಂ
ಬುವನನುರಕ್ತೆ ಕಂಡು ಪೆಱಳೊರ್ವಳಣಂ ಜಳಕೇಳಿಯೊಳ್ಪೊದ
ಱ್ದುವೊಲಿರೆ ಕಣ್ಣ ಕೆಂಪು ಬೆಮರ್ಗಳ್ ಜಲಯಂತ್ರಪಯೋಲವಂಗಳಂ
ತೆವೊಲಿರೆ ಕೋಪಮೊಳ್ಪುಡುಗಿ ನೀರೊಳಗಿರ್ದುಮದೇಂಬೆಮರ್ತಳೊ ೮೩

ಮೃಗಮದವಾರಿಯಂ ಮುರಿದು ಸಿಂಪಿಸೆ ಭೂಪತಿ ಪಕ್ಕದಾಕೆಮೇ
ಗೊಗೆದ ಕುಚದ್ವಯಕ್ಕೆ ಮಱೆಮಾಡಿದ ಕೋಮಳಬಾಹುದಂಡದೊಳ್
ಸೊಗಯಿಸೆ ಧಾರೆ ನೀಳ್ದು ಮಣಿಕಂಕಣಝಂಕೃತಮಿಂಪುವೆತ್ತು ಕೈ
ಮಿಗೆ ಜಳಕೇಳಿ ಕೇಳಿಸಿದುದಾಕೆಯ ಮೆಯ್ವಳಿಯಿಂ ಪಿಪಂಚಿಯಂ ೮೪

ಕತ್ತುರಿಯ ಜಳಮನವನಿಪ
ನೊತ್ತುವುದುಂ ಹರ್ಷಗರ್ಭಮಾ ಕಾಂತೆಗೆ ಮೆ
ಯ್ವೆತ್ತಾದ ಚಿಹ್ನದಂತಿರೆ
ವೃತ್ತಸ್ತನಚೂಚುಕಂ ಕಱಂಗಿದುವಾಗಳ್ ೮೫

ಮೃಗಮದಜಳಮಂ ಸಿಂಪಿಸೆ
ಜಗದಧಿಪತಿ ಧಾರೆ ಮುತ್ತಿದುವು ತರುಣಿಯ ಮೇ
ಗೊಗದ ಕಿಱುಮೊಲೆಯಸಬ್ಜದ
ಮುಗುಳ್ಗೆ ಮದಭೃಂಗಮಾಲೆಗಳ್ ಮುತ್ತುವವೊಲ್ ೮೬

ಧರಣೀಶಂ ಸಿಂಪಿಸೆ ಘುಸೃ
ಣರಸದಿನಂಗನೆಯ ಘನಕುಚಂಗಳ್ ರಜದಿಂ
ಪೊರೆದುವು ಸೆಂದುರದಿಂ ತಲೆ
ವೊರೆದ ಮನೋಭವನ ಕುಂಭಿಕುಂಭಗಳವೊಲ್ ೮೭

ಸಮನಿಸಿದೀರ್ಷೆಯಿಂ ನಿಜಸಪತ್ನಿ ಕಡಂಗಿ ತುಳುಂಕೆ ಮೇಲೆ ಕುಂ
ಕುಮಜಳಮಂ ನೆರಂಬಡೆದು ಬೆರ್ಚಿದವೊಲ್ಪೆಱತೊರ್ವಳಾ ಮಹೀ
ರಮಣನನಪ್ಪಿಕೊಂಡತನುರಾಗಸಮುತ್ಪುಳಕೋದ್ಗಮಂಗಳೊಳ್
ಹಿಮಜಳಸೇಕಶೀತಪುಳಕೋದ್ಗಮಮಂ ತಡಮಾಗೆ ಮಾಡಿದಳ್ ೮೮

ಸವತಿ ಜಳಯಂತ್ರದಿಂದೊ
ತ್ತುವ ಮಳಯಜಧಾರೆ ಚಂದ್ರಕಿರಣಂಗಳವೊಲ್
ಕವಿಯೆ ಮೊಗಂದಿರಿದುದು ನೃಪ
ಯುವತಿಯ ವದನಾರವಿಂದಮರವಿಂದದವೊಲ್ ೮೯

ಮನದೊಳ್ ಮಚ್ಚರಿಸುವ ಕಾ
ಮಿನಿ ಕುಂಕುಮಜಳಮನೊತ್ತೆಮತ್ತೊರ್ವಳ ಲೋ
ಚನಕುಮುದಂ ಮುಗಿದುವು ಕುಮುಂ
ದಿನಿಗಳ್ ಬಾಳಾತಪಕ್ಕೆ ಮೊಗಮೀಯದವೊಲ್ ೯೦

ಇರೆ ಮುಡಿ ಬಿರ್ಚಿ ನಾಸ್ದಮರೆ ಪತ್ತಿದ ಪಟ್ಟೆಯಿನುಟ್ಟುದಿಲ್ಲದಂ
ತಿರೆ ಕಮಳೋಸ್ಮುಖಂ ಶಿಖಿಮುಖಾಸಿಯವೋಲಳಿಮಾಲೆ ಮುಂದೆ ನೀ
ಳ್ದಿರೆ ಧರಣೀಶ್ವರಂ ಕೆಲದೊಳುತ್ತರಸಾಧಕನಾದ ಕಾಮನಂ
ತಿರೆ ರತಿ ಖಟ್ಗಿಯೋಗಿನಿಯವೊಲ್ಜಳಕೇಳಿಯೊಳೊರ್ಬಳೊಪ್ಪಿದಳ್ ೯೧

ಲಲನಾಜನಮಗ್ಗಲಿಸಿದ
ನಲವಿಂದಂ ಬಟಲೆ ತುಳ್ಕು ನೀರಾಡುವುದುಂ
ಸುಲಿಪಲ್ಲ ಪೊಳೆಪು ತಮ್ಮೊಳ್
ನೆಲಸಿದ ತೆಱದಿಂ ಬೆಳೆರ್ತುವವರಧರಂಗಳ್ ೯೨

ಕಂತುದ್ವಿಪಮದಪಟ್ಟಿಕೆ
ಯಂತೆಸೆದು ಕಪೋಳಮೂಳದೊಳ್ಳಿಮಿರ್ದುವಿಳಾ
ಕಾಂತನ ಶುದ್ಧಾಂತಃಪುರ
ಕಾಂತಾಸಂತನಕುಟಿಳಕುಂತಳಜಾಳಂ ೯೩

ಪೊಸಮಸೆಯ ಪೂವಿನಂಬಂ
ಕುಸುಮಾಸ್ತ್ರಂ ಕುಂಕುಮಾಂಬುವಿಂ ಬೆರ್ಚಿಸಿದಂ
ತೆಸೆದುವು ಚಳಲೋಚನೆಯರ
ನಸುಗೆಂಪಂ ತಳೆದು ಪೊಳೆವ ಬಿಳಿಯಲರ್ಗಣ್ಗಳ್ ೯೪

ಜಲಕೇಳಿಯೊಳ್ಕಟಿಲ್ದುಡಿ
ದಲರ್ಗಳ ಕಾಲ್ದುಡಿಗೆ ತೇಂಕೆ ಜಲದೇವಿಯರ್ಗಂ
ತಲೆದುಡುಗೆಯಾದುವೆನೆ ನೃಪ
ಲಲನೆಯರ ಮಹಾನುಭಾವಮೇನಚ್ಚರಿಯೋ! ೯೫

ವ॥ ಅಂತು ಜಳಕೇಳಿಯಂ ನಿರ್ವರ್ತಿಸಿ ಪಾಲ್ಗಡಲ ಮಡುವಿಂ ಪೊಱಮಡುವ ಪೂರ್ಣಚಂದ್ರನಂತೆ ಮನುಜೇಂದ್ರಚಂದ್ರಂ ಪೂಗೊಳದಿಂ ಪೊಱಮಡುವುದುಮೊಡನೊಡನೆ ಕೋಮಳಬಾಹುಲತೆಯಿಂ ನೆಲೆಮೊಲೆಯನವುಂಕಿ ದಕ್ಷಿಣಪಾಣಿ ಪಲ್ಲವದಿಂ ನಿಡುಮುಡಿಯಂ ಪಿಡಿದು ನಾನ್ದ ನಿಜೆಯುಂ ಬಟಿಲ್ದುಡೆಯುಂ ತಡಂಗಾಲ್ವೊಯ್ಯೆ ಮೆಯ್ಯ ಬಣ್ಣಂ ಬಳ್ಳಿ ಮಿಂಚಂ ಮಸೆದಂತೆ ತಳತ್ತಳಿಸೆ

ಮೃಗಲೋಚನೆಯರ್ಸಲಿಲಾ
ವಗಾಹಮಂ ಮಾಣ್ದು ಪೊಱಗೆನಿಲೆಕಟ್ಟಿಲೆ ತಾ
ರಗೆಯನುಗುಳ್ದಪ್ಪುವೆಂಬಿನ
ಮುಗುತಂದುವು ಸಲಿಲಬಿಂದುಗಳ್ಸೋರ್ಮುಡಿಯಿಂ ೯೬

ವ॥ ಅದಲ್ಲದೆಯುಮಾಕೆಗಳ ನಿತಂಬಸೂತ್ರದೊಳ್ಮುಕ್ತಾಫಲದಂತೆಯುಮಾಕೆಗಳ ಕುಚಕಲಶದೊಳ್ ಲಾವಣ್ಯರಸದಂತೆಯುಮಾಕೆಗಳ ಸೆಳ್ಳುಗುರ ಮೊನೆಯೊಳಂಶುಜಾಳದಂತೆಯುಮಾಕೆಗಳ ಪಾಳಿಯೊಳ್ ದರಹಾಸಕಳಿಕೆಯಂತೆಯುಮಾಕೆಗಳ ನಯನೋತ್ಪಲಂಗಳೊಳ್ ಮಧುಬಿಂದುವಿನಂತೆಯುಮಾಕೆಗಳ ಪೆಱನೊಸಲೊಳಮೃತಕಳಿಕೆಯಂತೆಯುಮಾಕೆಗಳಳಕವಲ್ಲರಿಗಳ ಕೊನೆಯೊಳ್ ನನೆಯಂತೆಯುಮೋರೊಂದು ಜಲಬಿಂದು ಬಿಂದು ಬಿಡುತಿರ್ಪುದುಮಾ ಸಮಯದೊಳವನಿಪಾಲನಾಪೆಸಱ ಪೆಂಡವಾಸದ ವಿಲಾಸಿನೀಸಮುದಯಕ್ಕೆ ತಕ್ಕ ವಿಚಿತ್ರ ವಸ್ತ್ರಾಭರಣಗಂಧಾನುಲೇಪನಂಗಳು ದಯೆಗೆಯ್ದು ತಾನುಂ ಕೈಗೆಯ್ದು

ಮಲಯಜಯಕ್ಷಕರ್ದಮಮೃಗೋದ್ಭವದಿವ್ಯವಿಲೇಪನಂ ಸಮು
ಜ್ಜ್ವಲಮಣಿಭೂಷಣಂ ವಸನಮೆಂಬಿವಜೇಂ ಪೊಸದೇಸೆ ತನ್ನೊಳ
ಗ್ಗಲಿಸೆ ಭುಜಂಗರಾಜಸುರರಾಜಮನೋಜವಿಲಾಸಮಿಂತು ಕ
ಣ್ಗೊಳಿಸಪೆನಲ್ ಜಗಜ್ಜನವಿಲೋಚನಮಂ ಸೆಱೆಗೆಯ್ದನಾ ನೃಪಂ ೯೭

ವ॥ ಅಲ್ಲಿಂ ಬೞಿಯಂ

ಧವಳಚ್ಛತ್ರಂ ಚಲತ್ಕೇತನದೊಡನೊಡನಾಕಾಶಮಂ ಮುಚ್ಚೆ ವಂದಿ
ಸ್ತವನಂ ಗಂಭೀರಭೇರಿರವದೊಡನೊಡನಾಶಾಂತಮಂ ತೀವೆ ದೇವೇಂ
ದ್ರವಿಲಾಸಂಬೆತ್ತು ಬಂಬಲ್ವರಿಯಿಸುತುಮುದಗ್ರೇಭಮಂ ಬಂದು ಪೊಕ್ಕಂ
ವಿವಿಧಪ್ರಾಸಾದಶೋಭಾವಹನಿಜಗೃಹಮಂ ರಾಜವಿದ್ಯಾವಿನೋದಂ ೯೮

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಕಿರಣಚಂದ್ರಿಕಾಚರೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ವನಕೇಳೀಜಲಕೇಳೀವರ್ಣನಂ ಷಷ್ಠಾಶ್ವಾಸಂ ಸಂಪೂರ್ಣಂ



# ಸಪ್ತಮಾಶ್ವಾಸಂ

ಶ್ರೀಗೆ ಕುಲಭವನಮೆನಿಪ ನೃ
ಪಾಗಾರಮನಂದು ಪೊಕ್ಕು ಮಜ್ಜನಜಿನಪೂ
ಜಾಗುರುವಂದನ ಭೋಜನ
ರಾಗೋತ್ಸವಚಿತ್ತನಿರ್ದನಭಿನವಪಂಪಂ ೧

ವ॥ ಅಂತಾ ದಿವಸ ವ್ಯಾಪಾರಮಂ ತೀರ್ಚಿ ಪರಿಮಿತಪರಿಜನಪರಿವೃತಂ ವಿದೂಷಕ ಸುಭಾಷಿತಮನಾಲಿಸುತ್ತಿರ್ಪುದುಂ

ಗಿರಿಶಿಖರಂಗಳೊಳ್ ತರುಶಿಖಾಮುಖದೊಳ್ ಸುರಸದ್ಮಕೂಟದೊಳ್
ಪರಿಕಲಿಸಿರ್ದುವಸ್ತಮಯಕಾಲದೊಳೊಂದೆರಡಂಶುಬದ್ಧಮು
ತ್ಸರದೊಳೆ ಮೇಲೆ ಬರ್ಪ ತಮದೊಡ್ಡನಿತೆಂಬುದನುಚ್ಚದೇಶಮಂ
ಪರಿದಡರ್ದೇಱೆ ನೋೞ್ಪ ದಿವಸೇಂದ್ರನ ಗುಪ್ತಚರ ಪ್ರಕಾರದಿಂ ೨

ವ॥ ಆ ಪ್ರಸ್ತಾವದೊಳ್ ಪೆರ್ಚಟ್ಟವಿಟ್ಟೆಡೆಯ ಕರ್ದರಿಯ ಘೂಳಿಸಜ್ಜರಕ್ಕೆ ಪಾದದಂಡದಿಂ ಮಗುೞ್ಚಿ ಕಾಡಾನೆಯ ಕಡುಪಿನ ಮದವಟ್ಟೆಯಂ ಮೆಲ್ಕೊಂಡು ಕಾೞ್ಚಟ್ಟೆಯ ಬೆಂಚರವಟ್ಟೆಗೆ ತಲೆಯಿಟ್ಟು ಬರ್ಪಕಾಡೆಮ್ಮೆಯ ಪೆರ್ವೊಲೆಯೊಳೆೞ್ಚುಪಾಯ್ವ ಪಾಲ ಪಿರಿಯ ಬಲ್ಲರಿಯೊಳೋಲಾಡಿಯುಂ ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱಂಗೆ ಕೊಣಕಿಡುವ ಪುಲ್ಲೆಯೆರಲೆಯ ಜವಕ್ಕೆ ಪಕ್ಕುಗೊಟ್ಟು ಮಾರವೆಯ ಪೆರ್ಮರದ ನಟ್ಟೆಗೊಂಬಿನಿರ್ದೆಡೆಗಂ ಮೊಗಸುವ ಪಲತೆಱದ ಪಕ್ಕಿಗಳ ಕೋಡುಗಱೆಯ ಕಿಱುಗಾಳಿಯಂ ನಿಱೆಪುಗೆಯ್ವು ದೇವ ಕುಲದಾವಲಿಯ ನೆಲೆಯ ಕೋಣತಾಣಕ್ಕೆ ಪಾಱುವ ಪಾರಿವಂಗಳಂ ಪಾಱಿ ಪಣೆಯಿಕ್ಕಿಯುಂ ಪೊಂದಾವರೆಯ ರಜದಿಂ ಪುದಿದ ಪೂಗೊಳದ ತಡಿವಿಡಿದು ಸುೞಿಯು-ತ್ತಿರ್ಪಂಚೆಯ ತುಪ್ಪುೞಂಚೆಯುಂ ಪಳಂಚಲಿದುಂ ಜಕ್ಕವಕ್ಕಿಯ ಕರೆಗಣ್ಮುವ ಕಣ್ಣನೀರ ಕಡಲಂ ಕಲಂಕಿಯುಂ ಸೂೞಿಗೇಱಿಯ ಮುಗಿಲ ಜಗಲಿಯ ಮತ್ತವಾರಣದ ಮುಂದೆ ನಿಂದು ಬೀಯದ ಜಾಗದ ಪೆರ್ಮೆಯಂ ಮೇಱಿವ ಬೊಜಂಗರಿಕ್ಕಿದೆಕ್ಕಸರದಕಸೆಯುಮಂ ಸೆಳೆದುಂ ಬಳ್ಳಿಮಾಡದ ಪೆಱಗಣ ಬಳ್ಳಿವಂದ ರಡಿಯಣ ಕುಸುಮದೆಸಱ ಪಸೆಯೊಳಿರ್ದ

ರಸಗೇಯಮನಾಲಿಸುವ ಸೊಬಗೆಯರ ಕತ್ತುರಿಯ ಸೊವಡಂ ಸೂಜಿಗೊಂಡು
ಮಾಲೆಗಾರ್ತಿಯರ ಕೈಯ ಪೂಮಾಲೆಯ ಕಂಪಂ ಕವರ್ತೆಗೊಂಡುಂ ಘಟ್ಟಿವಳ್ತಿಯ
ಮುಖಕಮಳಪರಿಮಳಮಂ ಪರಿಮುತ್ತುಗೊಂಡಪರಸಾಂಧ್ಯಗಂಧವಹನೆಳಸೆ

ನೋಡಿ ಕನಲ್ದೊನಲ್ದು ಪಡು ನೇಸಜೆನುಣ್ಮುವ ಕಣ್ಣ ನೀರೊಳೋ ೩
ಲಾಡುವ ಜಕ್ಕವಕ್ಕಿ ಬಗೆಗೆಟ್ಟು ವಿಯೋಗವಿಷಾದವೇಗದಿಂ
ಪಾಡಟಿದೆಂತೊ ಪಾಜಿದಪುವಾನಜಿದೆಂ ನಿಡುಸುಯ್ಯ ಗಾಳಿ ಕೊಂ
ಡೋಡಿದುದೊಮದನೊರ್ದೆಸೆಗದಲ್ಲದೊಡೇಂ ಗಳ! ಪಾಜಿಲಾರ್ಪುವೇ

ಇನಕಿರಣಂಗಳ್ ಕೀಲಿವ ೪
ಅನುಬಂಧ ಕ್ಕೆನೆ ಮನೋರಥಂ ಕಟಿಕುಟಿಮ
ಪ್ಪಿನೆಗಂ ರಥಾಂಗಸಂಗತಿ
ದಿನನಾಥನ ಕಿರಣದೊಡನೆ ತೊಲಗಿದುವಾಗಳ್

ಕ್ಷಣಿಕಂ ಪೋಗೆರಡಿಲ್ಲದೆನ್ನೊಲವಿನೊಳ್ ತತ್ಕೂರ್ಮೆಗೆಟ್ಟೆನ್ನ ಮೇ ೫
ಗಣ ಕೈಯಂ ಕಳೆದಂ ದಿನೇಶನಪರಶಾಸಕ್ತನೆಂದಂದು ಬಂ
ಬಳ ಬಾಡಿರ್ದು ಜಿನುಂಗುವಂತೆ ನಿಜಗಂಧಾಸಕ್ತ ಭೃಂಗೀಕಳ
ಕ್ವಣಿತಂ ಕೈಮಿಗೆ ಸಂಜೆಯೊಳ್ಸರಸಿಜಂ ತಾಳ್ದತ್ತು ಸಂಕೋಚಮಂ

ಮಿತ್ರವಿಯೋಗದೊಳೀಶತ ೬
ಪತ್ರಂ ಕಡುಗಂದಿ ಕುಂದುಗೊಂಡಿರ್ಪುದದೇಂ
ಚಿತ್ರಮೆ ದೇಹಿಗೆ ಮಾಟ್ಕುಂ
ಮಿತ್ರವಿಯೋಗಂ ವಿಶೇಷಮಪ್ಪದವಟಿಲಂ

ಒಳಗಿರ್ದು ಮೊರೆಯ ಮಧುಕರ ೭
ಕಳಭಂ ನಿಜಗಂಧಲೋಭದಿಂ ಸಂಧ್ಯಾಕು
ಟ್ಮಳಿತಸರೋಜಂ ತಳೆದುದು
ಜಳದೇವತೆಯರ ಶಕುಂತಿಕಾವಿಳಸನಮಂ

ಜಳರುಹದ ಲಕ್ಷ್ಮಿ ತೊಟ್ಟನೆ ೮
ತಳರಲೊಡಂ ವಿಟಪಿನದ್ಧರುಚಿ ಬೇಜಿಸೊಂದ
ರ್ಕೆಳಸುವೊಲೀಕೌಟಿಲ್ಯಮ
ನಳಿವೆಣ್ಣಲಿವೆಣ್ಣ ಕೈಯೊಳೋದಿದಳಕ್ಕುಂ

ವರುಣಂ ಮಿತ್ರಂಗಿದಿರೆ
ರ್ದು ರಾಗದಿಂ ಬೇಗಮರ್ಘ್ಯಮೆತ್ತಿದನರ್ಘ್ಯಾ
ಭರಣಮಣಿಕಿರಣಮೆಂಬಂ
ತಿರೆ ಪಸರಿಸಿ ಪರ್ಬಿದತ್ತು ಸಂಧ್ಯಾರಾಗಂ ೯

ಸ್ಫುರಯಿಸಿ ತೀವ್ರವೃತ್ತಿಯನಡಂಗಿಸಿ ಸತ್ವಥವೃತ್ತಿಯೊಳ್ವಯಃ
ಪರಿಣತಿವೆತ್ತುಮೇನುದಯಕಾಲದ ರಾಗಮನಸ್ತಕಾಲದೊಳ್
ಪರಿಹರಿಸಲ್ಕಣಂ ನೆಱೆದನಿಲ್ಲ ದಿನಾಧಿಪನಂತೆ ದಲ್ ವಯ
ಪರಿಣತನಾದೊಡಂ ಬಿಸುಡಲಾರ್ಪನೆ ರಾಗಿ ನಿಸರ್ಗಭಾವಮಂ ೧೦

ಇನನತಿದೂರಮೆನಲ್ಮೆ
ಲ್ಲನೆ ಭೃಂಗಂ ಬಂದು ಸೋಂಕೆ ಮೊಗಮೀಯದೆ ಪ
ದ್ಮಿನಿ ಮುಗಿದಳ್ ಲಕ್ಷ್ಮೀಭಾ
ಜನ ಗುಣವತಿ ಮಳಿನವೃತ್ತಿಯಂ ಸೈರಿಪಳೇ ೧೧

ತವೆ ಕುಡಿಯಲ್ನೆಱೆಯದು ಬಾ
ಡವಾಗ್ನಿ ಪೋಗೆಂದು ಕುಂಭಸಂಭವಕೋಪಾ
ಗ್ನಿ ವಿಯತ್ತಳದಿಂ ಕಿಡಿವಿಡು
ತುವಿಟಿಪಿವವಪಲ್ವಪನನಪರಜಳನಿಧಿಗಿಟಿಪಿದಂ ೧೨

ಇನನಂ ಕಾಣದೆ ಸಂಚಳ
ತನುವಪರಾಶಾಪ್ರಪಂಚವಿರಹಿತೆ ಸಂಧ್ಯಾಂ
ಗನೆ ನೋಡೆ ನೋಡೆ ಕರಗಿದ
ಳನುರಕ್ತೆ ಪ್ರಿಯನ ವಿರಹಮಂ ಸೈರಿಪಳೇ ೧೩

ವ|| ಆಪ್ರಸ್ತಾವದೊಳ್

ದಿನನಾಥನ ಸುಯ್ಯುಂ ಪಟ
ಹನಿನಾದಂ ಸಾಂಧ್ಯಮೇಘವಿರುತಿ ತಮೋರಾ
ಜನ ಜಯದುಂದುಭಿನಿಸ್ವನ
ಮೆನಿಸಿದುದು ಚತುಃಪ್ರಹಾರಭೇರೀನಿನದಂ ೧೪

ದಿನಕರನೀಬಹಿಸ್ತಮಕೆ ಬೆರ್ಚಿ ಸಮುದ್ರಮನೋಡಿ ಪೊಕ್ಕನಾ
ತನ ಬೆಳಗೇವುದೆಂದು ಜಿನಪಾದಪಯೋಜನಲಾಂಛುಮಂಡಳಂ
ಜನದ ಮನಸ್ತಮೋಬಲಮನಂಜಿಸೆ ಪೊಣ್ಮುವ ತಜ್ಜಯಾನಕ
ಧ್ವನಿಯನೆ ಪೊಣ್ಮಿದತ್ತು ಜಿನಮಂದಿರಸಾಮಘ್ಯಘನಾನಕಸ್ವನಂ ೧೫

ಪ್ರಿಯೆ ತನಗಂಬಿವಂ ಬಗೆಯದೆನ್ನನವಂ ಪೆಜಗಿಕ್ಕಿ ಪೋಗಿ ಸಂ
ಜೆಯೊಳನುರಕ್ತನಾಗಿ ನೆರೆದಿರ್ದಪನಾತನನೆಂತು ಕಾಣ್ಬುದಾಂ
ನಯನಪಥಕ್ಕೆ ತರ್ಪೆನೆನುತುಂ ಪರಿದಿಗ್ವಧುವಿಂತುಗೆಯ್ದುಳಾ
ಕೆಯ ಕಚಭಾರದಂತಿಳಿಗೆ ತಟ್ಟುದಪೂರ್ವದಿಗಂತಮಂ ತಮಂ ೧೬

ಮಸುಳೆ ದಿನಕರನ ತೇಜಃ
ಪ್ರಸರಂ ನಭಮಣ್ಣೆಮೊಡೆವ ಕನ್ನಡಿಯೊಲ್ ತಾಂ
ಮಸಮಸನಾಗಿರ್ದುದು ಮೂ
ಳಿಸಂಜೆಯೊಳ್ ದೈನ್ಯಮೇನೊ ನಿಸ್ತೇಜದವೊಲ್ ೧೭

ಜಗುನೆಯ ಕರ್ಮಡು ನೆಲನಂ
ದಿಗಿಭದ ಮದವಟ್ಟೆ ದೆಸೆಗಳಂ ರಾಹುಶಿರಂ
ಗಗನಮನೆಡೆಗೊಂಡತ್ತೆನೆ
ಜಗಮಂ ಪರ್ವಿದುದು ಬಹಳತಮಸಂತಮಂ ೧೮

ಬಿದಿ ಹರಿನೀಳದೊಳ್ಕಡೆದಜಾಂಡಮನಂಜನದೊಳ್ಪೊರಳ್ಚಿದಂ
ತೊಡವಿರೆ ಮರ್ಬು ಸಂದೆಗದೆ ತಮ್ಮೊಡಲಂ ಬಿಡದಂದು ನೋಟ್ಪಿರೆಂ
ಬುದನೆನೆ ನೋಡಿ ನಿಟ್ಟಿಸುವರಾರಿದು ಪರ್ವತಮೆಂಬಿದುರ್ವಿಯೆಂ
ಬಿದು ದೆಸೆಯೆಂಬಿದಭ್ರಪಥಮೆಂಬ ಚರಾಚರವಸ್ತುಭೇದಮಂ ೧೯

ಘೋರಾಂಧಕಾರಮಂತಿದು
ಪಾರ್ವರಂ ನೆಲೆವೆರ್ಚೆ ಬಯಲೊಳಂ ಜಾರಾಸಂ
ಚಾರಕ್ಕೆಡೆಗೊಟ್ಟಿತ್ತಪ
ಕಾರಿಯ ಸಿರಿ ಖಳರನಲ್ಲದೇಂ ತಣಿಪುಗುಮೇ ೨೦

ಅಂಬಿರಿವಿಡುವ ತಮೋದಾ
ನಾಂಬುವಿನೊಳ್ಮುಳುಗಿ ನಿಂದನಭಮೆಂಬ ಮದ
ಸ್ತಂಭೇರಮನಾಗಳ್ ಚಿ
ಬ್ಬಂಬೊಯ್ದುವೊಲಡಜೆ ತುಜುಗಿದುವು ತಾರಗೆಗಳ್ ೨೧

ವ॥ ಆ ಸಮಯದೊಳ್ ಪರಿಚಿತಸಂಧ್ಯಾಸಮಯಮಂಡಳಿಕಮಣಿಪ್ರದೀಪಂ ನೀರಾಜನದೀಪಕಳಿಕಾಪ್ರದೀಪಮಣಿಕಿರೀಟಂ ಮಂಡಪದ ಮುಂದಣಿಂದ್ರನೀಲಮಣಿ ಕುಟ್ಟಿಮದ ನಡುವಣ ಮಣಿಮಯಾಸನಮನಳಂಕರಿಸಿ

ಉರಗಫಣಮಣಿಯ ಬೆಳಗಿಂ
ದುರಗೇಂದ್ರಂ ಜ್ಯೋತಿರಂಗವೃಕ್ಷದ ಬೆಳಗಿಂ

ಸುರರಾಜಂ ರಂಜಿಸುವಂ
ತಿರೆ ಕೈದೀವಿಗೆಯ ಬೆಳಗಿನೊಳ್ಕಣ್ಗೆಸೆದಂ ೨೨

ಪೆಱದೆಗೆವ ತಮಮಂ ತಱ್ತಿಮೆ
ದುಱುಗಲೆನಲ್ಪೂರ್ವದಿಗ್ವಧೂವದನಂ ಕ
ಣ್ದೆಱೆದವೊಲದೇಂ ಬೆಳರ್ತುದೊ
ಕೆಱ‍ೆದೆಡೆ ತುಹಿನಾಂಶುಬಿಂಬಮುದಯಿಪ ಪದದೊಳ್ ೨೩

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪೂ
ರ್ವದೀಶಾವಲ್ಲೀಫಳಂ ತಾನೆಸೆ ತರತರದಿಂದೇೞ್ಗೆ ಕಣ್ಗೆಡ್ಡಮಪ್ಪಂ
ತುದಯಂಗೆಯ್ದತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ
ಮದಲೀಲಾಲಂಬಮುಜ್ಜೃಂಭಿತಕುಮುದಕದಂಬಂ ಸುಧಾಸೂತಿಬಿಂಬಂ ೨೪

ದಾಂಗುಡಿವಿಟ್ಟು ವಳ್ಳಿಸುವ ಕೆಂದಳದಿಂದೊಸೆದೆತ್ತಿ ಲಕ್ಷ್ಮಿ ಕಾ
ಮಂಗೆ ಮಗಂಗೆ ಶೈಶವನಿರೀಕ್ಷಣಕೇಳಿಗೆ ನೇತ್ರಸೂತ್ರದಿಂ
ದಿಂಗಡಲೆಂಬ ಸೆಜ್ಜೆವನೆಯೊಳ್ತಿರೆದೊಟ್ಟಿಲ ಮೇಲೆ ಕೆಂಬರ
ಲ್ದಿಂಗಣಿಗಟ್ಟಿದಂತುದಯಶೈಲಶಿಖಂಡದೊಳಿಂದುಮಂಡಲಂ ೨೫

ನಿಮಿರ್ದುವು ಸಂಧ್ಯಾರುಣಕಿರ
ಣಮಾಲೆಗಳ್ ಗಗನವಾರ್ಧಿವೇಲಾವನ ವಿ
ದ್ರುಮದೆ ಕದಳೀಪ್ರರೋಹಂ
ನಿರ್ಮಿರ್ದಪುವೆಂಬಂತೆ ಚಂದ್ರಬಿಂಬದಿನಾಗಳ್ ೨೬

ವ॥ ತದನಂತರಂ

ನವಸಂಧ್ಯಾರಾಗಂ ಪಿಂ
ಗುವುದುಂ ಮದನಂಗೆ ವಜ್ರಖೇಟಕಮಂ ಕೆಂ
ಗವಸಣಿಗೆಗಳೆದು ರತಿ ನೀ
ಡುವಂತೆ ತಳತಳಿಸಿದತ್ತು ಹಿಮಕರಬಿಂಬಂ ೨೭

ವ॥ ಮತ್ತಂ

ಶೃಂಗಾರಾರ್ಣವಫೇನಪಿಂಡಮತನುಶ್ರೀಸಿಂಹಪೀಠಂ ನಭೋ
ಮಾಂಗಲ್ಯಾಯತನಪ್ರಕಾಶಕಳಶಂ ಸಂಭೋಗಲೀಲಾನಟೀ
ರಂಗಂ ಲೋಚನಪುತ್ರಿಕಾಕೃತಕಶೈಲಂ ಕಂತುದೇವೇಂದ್ರಮಾ
ತಂಗಂ ಸುಂದರಮಾದುದಭ್ಯುದಯದೊಳ್ಬಿಂಬಂ ಸುಧಾಸೂತಿಯಾ ೨೮

ವ॥ ಆ ಸಮಯದೊಳ್

ಕಾಮನ ದೀವದ ಹರಿಣಂ
ಕಾಮೋರಗನಿರ್ಪಪುತ್ತು ಮೊಲಗಟ್ಟಿಲೆಯಂ
ಕಾಮಿಗೆ ಪುಟ್ಟಿಸುವ ಮೊಲಂ
ಕಾಮಗ್ರಹದಾಲಮೆನಿಸಿತಿಂದುಕಳಂಕಂ ೧೯

ಮೊದಲೊಳ್ವಕ್ರತೆ ನಿಜಮ
ಘ್ಯದಯದೊಳತಿರಾಗಿ ಮತ್ತೆ ಮದನೋನ್ಮಾದಾ
ಸ್ಪದಮೆಂದೊಡಂತರಂಗದಿ
ನದೆಂತೊ ದೋಷಾಕರಂಗೆ ಕಱೆ ಪಿಂಗುಗುಮೇ ೨೦

ವ॥ ಅಂತು ಸುಧಾಸೂತಿ ಮಂಡಳಮತಿ ಪ್ರೌಢಮಾಗೆ

ಪುಗಿಸಿದುವಟ್ಟೆ ಪರ್ವತಗುಹೋದರಮಂ ಕೆಲವಂ ಗವಾಕ್ಷದಿಂ
ದುಗಿದುವು ದೇವಸದ್ಮದೊಳಡಂಗಿದುವಂ ಬಯಲಿಂಗೆ ಬಿರ್ದುವಂ
ತಗುಳ್ದುಱೆಯಟ್ಟಿ ನುಂಗಿದುವು ಪೆರ್ಮರನಂ ಸೆಱೆಗೆಯ್ದುಪರ್ಣಸಂ
ಧಿಗಳಡೆಯಿಂದಮಿಟ್ಟೊಱಸಿ ಕೊಂದುವು ಕತ್ತಲೆಯಂ ಹಿಮಾಂಶುಗಳ್ ೨೧

ನಳಿನೀಸಂಮೋಹನಾಸ್ತ್ರಂ ಕುಮುದನಯನಕರ್ಪೂರಕಾಂಡಂ ಚಕೋರೀ
ತಿಳಕಂ ಶೃಂಗಾರಸಿಂಧುಪ್ಲವಬಿಸಲತೆ ತಾರಾಪುರಂಧ್ರೀಕಪೋಳ
ಸ್ಥಳಪತ್ರಂ ಚಂದ್ರಕಾಂತೋಪಳಸಲಿಲರಾಸಿ ಮೋಕ್ಷಶಸ್ತ್ರಂ ಮನೋಜಾ
ನಳಜಿಹ್ವಾಕ್ಷೀರಧಾರಾಮತಿ ಪಸರಿಸಿ ಪರ್ಬಿತ್ತು ಚಂದ್ರಾಂಶುಜಾಳಂ ೨೨

ನಲಿದು ವಸಂತದೊಳೈಂದ್ರೀ
ಲಲನೆಯ ಸಿಂಪಿಸುವ ಕಾಂತಶಶಿಕಾಂತಶಿಲಾ
ಜಲಯಂತ್ರಮುಕ್ತಚಂದನ
ಜಲಧಾರೆಗಳೆನಿಸಿ ನಿಮಿರ್ದುವಮೃತಕರಂಗಳ್ ೨೩

ಇಂಗಡಲೆ ಕಡಲ್ಗಳ್ ಸೌ
ಧಂಗಳೆ ಸದನಂಗಳಿಂದುಕಾಂತವ ಕಲ್ಗಳ್
ಗಂಗೆಯ ತೊಱೆಗಳೆನಲ್ ಬೆ
ಳ್ಗಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ ೨೪

ಒಗುಮಿಗೆ ಬೆಳಗಿದುದು ವಿಯೋ
ಗಿಗಳ ಮೊಗಂ ಬೆಳ್ಪನಾಗೆ ವಿರಹಾಗ್ನಿಯ ಬೆ

ೞ್ವಗೆ ಕಮಳದ ಪಗೆ ಕುಮುದದ
ಸಗೆ ತಾಂ ಯೌವನದ ಬೇಳದಗೆ ಬೆಳ್ದಿಂಗಳ್ ೩೫

ರ್ಪಿಲ್ಲದ ಕಾಡಿಗೆ ಕಂ
ರ್ಪನ ಜಸಮಿರುಳ ತಣ್ಪೆಸಿಲ್ಬೆಳಕಿಗೆ ಮಿಂ
ಕಿರ್ಪಿಲ್ಲದಿಂಗಡಲ್ವಿಧು
ರ್ಪನ ಪರೆ ಜಲಕನಾಯ್ತು ಪೊಸವೆಳ್ದಿಂಗಳ್ ೩೬

ಮದನಕ್ಷೇತ್ರಮಕೃಷ್ಟಪಚ್ಯಮಿದು ಕಣ್ವೇಟಕ್ಕನಾಯಾಸಲ
ಧ್ಧಿದಲಂಗೋದ್ಭವಖಡ್ಗಸಿದ್ಧಿಗಿದು ಕಾಮೋನ್ಮಾದಪಾನ ಪ್ರಪಾ
ಸದನಂ ಕಾಮಿಜನಕ್ಕಿದಂಗಭವಸೌಖ್ಯೋತ್ಪಾದವಿನ್ನಾದಮಿಂ
ತಿದು ಕಾಂತಾಕುಚತಳ್ಪಶಾಯಿಗೆನೆ ಚೆಲ್ವಾದತ್ತು ಚಂದ್ರಾತಪಂ ೩೭

ತನು ಸತನುವಾದಂ ಕಾಮಸಾಮ್ರಾಜ್ಯಲಕ್ಷ್ಮೀ
ಲತೆಯ ಲಲಿತಲಾಸ್ಯಪ್ರೌಢಿ ಚೆಲ್ವಾದುದೀಗಳ್
ರತಿಯ ಸೊಬಗು ಬಿಂಕಂಬೆತ್ತುದೆಂಬಂತು ನೇತ್ರಾ
ಮೃತಮಯಮೆಸೆದತ್ತಾ ಚಂದ್ರಿಕಾಶ್ರೀವಿಳಾಸಂ ೩೮

ವ॥ ಅಂತು ಕಮನೀಯಮಾದ ಕೌಮುದೀಮಹೋತ್ಸವದೊಳವನೀಶ್ವರಂ ನಿಜವಿಳಾಸಿನಿಯರ ವಿಳಾಸಮುಮಂ ಲೀಲಾಂದೋಳಕೇಳಿಯುಮಂ ನೋಡಲೆಂದು ವಿಟವಿದೂಷಕಾದಿಗಳ್ವೆರಸಾತ್ಮೀಯಪದನಖಮಯೂಖಮಾಲೆಯಿಂ ಮದನರಾಗ ರಸಮಂ ಸೂಸುವಂತೆ ಮುಕ್ತಾಭರಣಕಿರಣಜಾಳದಿಂ ಚಂದ್ರಿಕೆಯ ಚಲ್ಲವಾಡುವಂತೆ ವಿಳಾಸಿನೀಸದನಮನೆಯ್ದೆವರ್ಪುದುಂ

ಜನಪತಿಗಂದು ಪಾದ್ಯಮನದೇಂ ಮೆಱೆವಂತೆ ವಿಳಾಸಿನೀಘನ
ಸ್ತನಶತಪತ್ರ ಪತ್ರಶತದಿಂದೆ ತೊವಲ್ತು ಪಯೋಜಪತ್ರವೀ
ಜನದೆಲರಿಂ ಕವಲ್ತಗರುಧೂಮಲತಾವಳಿಯಿಂ ಮಡಲ್ತು ಮೆ
ಲ್ಲನೆ ಸುಟಿದತ್ತು ಸದ್ಮ ಸರಸೀಶರಶೀಕರಮಂದಮಾರುತಂ ೩೯

ವ॥ ಅಂತು ಮನುಜೇಂದ್ರಚಂದ್ರಂ ತಾರಾಂತಃಪುರವೀಥಿಯಂ ಪುಗುವ ಚಂದ್ರನಂತೆ ಸೂಳೆಗೇಱಿಯಂ ಪುಗುತರ್ಪುದುಮೊಂದು ಪಳುಕಿನ ಸೆಜ್ಜೆವನೆಯ ಕನಕವೇದಿಕೆಯ ಮುಂದೆ ಪೊಂಬಾಳೆಯ ತನಿಗಂಪಿಗಱಿಗಿದ ಮಱಿದುಂಬಿಯ ಬಂಬಲಂ ಮನೋಜರಾಜನ ಪಿಡಿದ ಪೀಲಿದಟೆಯಂತೆ ತಳೆದು ಮನಂಗೊಳಿಸುವೆಳಗೌಂಗಿನುಯ್ಯಲನೇಱಿ

ಉದಯದೊಳಿನ್ನ ಕೇಸಡಿಯ ಕೆಂಪಿನ ದೇಸೆಗೆ ವಾರಲೆಂದುಮೆ
ಯ್ದದು ಪೊಳೆವೆನ್ನ ಮುದ್ದುಮೊಗಮಂ ನಿಜಮಂಡಳಮೆಂದು ಸೂಟಿಸೂ
ಟದೆ ಪಡಿಯಿಟ್ಟಪಂ ಮೆಚ್ಚೆಪಳ್ ಸಸಿಗೆಂಬಿನಮೊರ್ಬಳುಯ್ಯಲಾ
ಡಿದಳೊಲಿದುಯ್ಯಾಲಾಡಿದಳನಂಗಭುಜಾಸಿಗೆ ವೀರಲಕ್ಷ್ಮಿಯಂ ೪

ವ॥ ಆಕೆಯಂ ನೋಡಿ ಮೆಚ್ಚುತ್ತುಂ ಬರೆ ಮತ್ತೊಂದೆಡೆಯೊಳುನ್ಮತ್ತ ಯೌವನೆ ಬಳ್ಳೀಮಲ್ಲಿಗೆ
ಮುಗುಳ ಮಾಲೆಯ ದುಗುಲದ ಕಂಬಗಟ್ಟಿಂ ಮುಸುಗುವಸುಕೆಯಲರ್ಗೊಂಚಲ ಮಾಣಿಕ
ಕನ್ನಡಿಯಿಂ ಸುರಹೊನ್ನೆಯ ಮುತ್ತಿನ ಸೂಸಕದಿಂ ಪೊಂದಾವರೆಯ ಮುಗು
ಪೊಂಗಳಸದಿಂ ಸಂಪಗೆಯಲರ ಪೊಂಗೆಜ್ಜೆಯಿಂ ಕೊಸಗಿನೆಸಟಿ ಪೊನ್ನ ತಿಂಗಣಿಗೆಯಿ
ಮಗಮಗಿಸಿ ಬಂಡನುಂಡು ಮೇಗೆ ನಿಮಿರ್ವ ಮದಾಳಿಮಳಿಕೆಯ ನೀಲಪತಾಕೆಯಿ
ರಯ್ಯುಮಾದ ಪೂವಿನುಯ್ಯಲ ಕೆಲಕ್ಕೆವಂದು ಕತ್ತುರಿಯ ಕ್ವಳದಂಗಳುಮ
ಕಪ್ಪುರವಳುಕುಗಳುಮಂ ಕುಂಕುಮದುರುಳಿಗಳುಮಂ ಬಿಡುಮುತ್ತುಗಳುಮಂ ಕೆಳದಿಯರ್ಗೆ
ಬಾಯಿನಂಗಳಂ ಕೊಟ್ಟು ಕುಸುಮದೆಸಟಿ ಮಸುಳಗೆಯೊಳ್ ಕಳ್ಳಿರ್ದು

ಆಡೆ ಕುರುಳ್ನೊಸಲ್ವಿಡಿದು ಸೋರ್ಮುಡಿ ಬೆಂಬಿಡಿದಾಡೆ ಕಣ್ಗಳೋ
ಲಾಡೆ ವಿಲಾಸಹಾಸರಸದೊಳ್ಮೊಲೆ ಮೇಲುದನೊರ್ಮೆಗೊರ್ಮೆಗೀ
ಡಾಡೆ ಮನೋಜರಾಜ್ಯ ದಧೀದೇವತೆ ಕೈನಿಜೆದಾಡೆ ಬೇಟದ
ಜ್ಬಾಡೆ ಮದಾಳಿ ಸುಯ್ಗೆ ಸುಟೆದಾಡೆ ವಿಳಾಸದಿನುಯ್ಯಲಾಡಿದಳ್ ೪೧

ವ॥ ಆಗಳ್ ವಿದೂಷಕಂ ನೀಡುಂ ನೋಡಿದರ ಮನಮನಲ್ಲಾಡುವಂದಮಲ್ಲದುಯ್ಯ-
ಲಾಡುವಂದಮಲ್ತೆಂದರಸನೊಳ್ನುಡಿಯುತ್ತುಂಬರೆ ಮತ್ತೊರ್ವಳುತ್ತುಂಗ ಸಪ್ತಳತ
ಸಮದ್ರಾಕ್ಷಾಮಂಡಪದ ಮುಂದಣ ರಕ್ತಾಶೋಕ ಶಾಖಾಂದೋಳಮಂ ಸಖೀಜನಂ ತೂಗ

ವಾರಸ್ತ್ರೀ ತಳಿರುಯ್ಯಲಾಡುವೆಡೆಯೊಳ್ ಸೂಸಿತ್ತು ಗೀತಾಮೃತಾ
ಸಾರಂ ನುಣ್ಗೊರಲಿಂ ಸಡಿಲ್ದ ಮುಡಿಯಿಱಿಂ ಕಸ್ತೂರಿಕಾಸಾರ ಭಾ
ಸಾರಂ ಕಣ್ಬೊಳೆಪಿಂ ನವೋತ್ಪಳದಳಾಸಾರಂ ತಟಿನ್ಮಾಳಿಕಾ
ಸಾರಂ ಭೂಷಣದಿಂ ಮನೋಭವಶರಾಸಾರಂ ಧನುರ್ದಂಡದಿಂ ೪೨

ವ॥ ಆ ವಿಳಾಸಿನಿಯರ ವಿಳಾಸಮಂ ರಾಜಮನೋಜಂ ನಿಂದು ನೋಡಿ ನೋಡುತ್ತುಂ ಬರ
ಮುಂದೊಂದೆಡೆಯೊಳಲರ ಸರಲ ಮಸೆಯ ಬಿಸಿಲಿಂ ಮನದ ಲಜ್ಜಾರಸಮಲ್ಲಾಡೆ
ಕಡುಮುಳಿದ ಕಾದಲನಂ ತಿಳಿಪಲೆಂದಲಘುಜಘನ ಭಾರದಿಂ

ತೊಡೆ ತಡಮಾಗೆ ಕೆಂದಳಿರ್ಗಳಂದದ ಮೆಲ್ಲಡಿ ಮೇಖಳಾರವಂ
ಗೆಡೆಗೊಳೆ ನೂಪುರಕ್ವಣಿತಮಂ ನಡೆತಂದೊಲವಿಂಗೆ ದಿವ್ಯಮಂ

ಪಿಡಿದವೊಲಂದು ಕಾಲ್ವಿಡಿದ ಕಾಂತೆಯ ಕಣ್ಬನಿ ಕಾಂತನೇವಮಂ
ತೊಡೆಮ ನಿರಾಕುಳಂ ತೊಡೆದುದಾಕೆಯ ಲಜ್ಜೆಯ ಪೋದ ಪಜ್ಜೆಯಂ ೪೩

ವ|| ಅದಂ ಕಂಡು ನಾಗರಿಕನೆರಡಱಿಯದೊಲವಿನಂದಮಪ್ಪುದೆಂದರಸನೊಳ್ ನುಡಿಯುತ್ತುಂ ಬರೆ ಮತ್ತೊರ್ಬಳಗರುವಿನ ಪೊಗೆಯಿಂ ಮಗಮಗಿಪ ಸೆಜ್ಜೆವನೆಯ ಮುಂದೆ

ಅಲತಗೆಯಣ್ಕೆಯಿಂದಡಿದಳಿರ್ ಸಿರಿಕಂಡದ ಪತ್ರಲೇಖೆಯಿಂ
ನೆಲೆಮೊಲೆ ಸಣ್ಣಗಾಡಿಗೆಯಿನುತ್ಪಲಲೋಚನಮಿಟ್ಟ ರೋಚನಾ
ತಿಲಕವಿಳಾಸದಿಂ ಪೆಱನೊಸಲ್ ಮನಮಂ ಸಱಗೆಯ್ಯೆ ನೋಡಿದಳ್
ತೊಲಗದೆ ದಿಟ್ಟಿ ನಟ್ಟು ನಿಲೆ ಕಾಮಿನಿ ಕಾಂತನ ಬರ್ಪ ಬಟ್ಟೆಯಂ ೪೪

ವ|| ಅದಂ ನೋಡಿ ರಾಜವಿಧ್ಯಾಧರನೀಕೆಗನುಲೇಪನಮತನುಸಮುದ್ದೀಪನಮಾದುದೆನುತ್ತುಂ ಪೋಗೆ ಬೇಱೊಂದೆಡೆಯೊಳೊರ್ಬಂ ಪೞಿಕೆಯ್ದು ಪಾಱುವ ಚಂಚರೀಕದಂತೆ ಚರಣಕಮಳಕ್ಕೆಱಗಿ ರೂಪವತಿಯ ನೂಪುರಾಳಾಪಮೊದವೆ ಪದಹತಿಯಿಂದಿನಿಯನನುರಾಗಮನಂಕುರಿತಂ ಮಾಳ್ಪುದುಮವಳ ಕೆಳದಿ

ಒದೆದೊಡೆ ನೋವದಿರ್ಕೆ ಪುಳಕಾಂಕುರಮೀತನ ಮೆಯ್ಯೊಳುಣ್ಮಿ ಪೊ
ಣ್ಮಿದಪುದುನೋವನೀವ ಬಗೆಯುಳ್ಳೊಡದೇಪೊಡೊ ನಿನ್ನ ಬಾಹುಪಾ
ಶದೊಳೆ ತೊಡರ್ಚೊಡರ್ಚು ದಶನಕ್ಷತಪೀಡೆಯನಿಟ್ಟಮರ್ಚು ಕೊ
ರ್ಬಿದ ಕುಚಕುಂಭದಿಂ ಪಡೆ ಕಚಗ್ರಹನಿಗ್ರಹಮಂ ತಳೋದರೀ ೪೫

ವ|| ಎಂದು ತಿಳಿಪುವುದುಮದಂ ಕೇಳುತ್ತುಂ ಪೋಗೆಪೋಗೆ ಮತ್ತೊರ್ವಳ್ ಕೆಲದಿರ್ದ ತನ್ನ ಕೆಳದಿಗೆ ಮುಂದಟ್ಟಿ ಪುಗಲೆಂದು ನಿಂದ ಜರಾಜರ್ಝರಿತನನಿಂತೆಂದಳ್

ಸ್ತನಭಾರೋದ್ಧತವೃತ್ತಿಯಂ ಕಬರಿಕಾಕೌಟಿಲ್ಯಮಂ ಲೋಲಲೋ
ಚನಚಾಪಲ್ಯಮನೀಕೆ ತನ್ನ ಬಗೆಗಂ ತಂದಾಕೆ ಪೋ ನಿಮ್ಮ ನ
ಣ್ಪನದೇವಳ್ ರಿಣಮಿಲ್ಲ ನಿಮ್ಮೊಡಮೆಗೆಮ್ಮಂ ಮೀಱುವಳ್ ಮೆಚ್ಚಳಾ
ವನುಮಂ ಗರ್ಬದ ಗಾಳುಗೀತರುಣೆಗೀತಾರುಣ್ಯಮೇಂ ನಿಟ್ಟೆಯೋ ೪೬

ವ|| ಎಂದು ಪಱಿಪಡಿಸಿ ಕಳೆಯೆ ರಾಜಸರ್ವಜ್ಞಂ ಮುಗುಳ್ನಗೆನಗುತ್ತುಂ ಬರ್ಪುದುಮೊಂದೆಡೆಯೊಳೊರ್ವಳಿನಿಯನ ನಗಲದವುದೆಂದನುವದಿಸುವ ತಾಯ್ಗೆಕನಲ್ದು

ಕೂಂಟಿಣಿದೊಟ್ಟಿ ಕೂರಿಸಿದ ಕಾದಲನಂ ಬಿಸುಡೆಂದು ಕೀಱಿ ಬಾ
ಯುಂಟೆನಗೆಂದು ಬಗ್ಗಿಸುವೆ ಕೂರದರಾರ್ಕೆಱೆಯಂದು ನಿನ್ನನೇಂ
ನಾಂಟವೆ ಪೂವಿನಂಬು ಕಡುನೋವದಿಯಾದಪೆ ನಿನ್ನ ಮೆಯ್ಯನು
ಣ್ಗಂಟೊಡವುಟ್ಟೆ ಮೆಟ್ಟಮಿರೆ ಮೀಱುವರಾರೊ ಮನೋಜನಾಜ್ಞೆಯಂ ೪೭

ವ|| ಎಂಬುದುಂ ವಿದೂಷಕನೀಗಾಳುಗುಂಟಣಿಯ ನಾಲಗೆಯ ಕೊನೆಯಂ ಕೊಯ್ದಲ್ಲದೆ ಮಾಣೆನೆಂದರಸನಂ ನಗಿಸುತ್ತುಂ ಪೋಪುದುಮೊಂದೆಡೆ ಯೊಳೊಲಿಸಿದಾಕೆಗೆ ದೂರಮುಂ ನನೆಗಣೆಗೆ ಸಾರೆಯುಮಾದ ಕಾದಲರೊಳೊರ್ಬನಿಂತೆಂದಂ

ಅಡಿದಳಿರಾಗಿ ಪೆರ್ದೊಡೆಗಳಂ ತೊಡೆಯಾಗಿ ನಿತಂಬಬಿಂಬಮಂ
ಬಡನಡುವಾಗಿ ಪೆರ್ಮೊಲೆಗಳಂ ಕೊರಲಾಗಿ ಪೊದಟ್ಕಿವೆತ್ತ ಸೋ
ರ್ಮುಡಿಯನದೊರ್ಮೆಯುಂ ತಳೆವ ಸೈಪೆನಗಿಲ್ಲದಗಲ್ದು ಬೇವಸಂ
ಬಡುವುದಿದಾವ ವಿಸ್ಮಯಮೊ ನೀಳಸರೋರುಹಲೋಲನೇತ್ರೆಯಾ ೪೮

ವ|| ಎನೆ ಮತ್ತೊರ್ವಂ ನಿಜಮನೋವಲ್ಲಭೆಯ ಭಂಗುರಾಪಾಂಗಪಾತಮಂ ನೆನೆದು

ಮೊಲೆಯೊತ್ತೊತ್ತಿಂದೆ ಹಾರಂ ಕೆಲಕೆ ತೊಲಗೆ ಪೂಮಾಲೆಯಿಂ ಕೇಶಹಸ್ತಂ
ಬಲಗೈಯಂ ಮೋದೆ ತಟಿಪ್ಪೊಯ್ದೆಡದ ದೆಸೆಗೆ ಸುರ್ಕುಂಗುರುಳ್ಸೂಸೆ ಲೀಲಾ
ವಲಿತಗ್ರೀವಂ ಮುಖಂ ತಂಜಿಸೆ ಮಗುಟ್ದಿನಿಯಳ್ ನೋಟ್ಪುದುಂ ಕರ್ಚಿಪಾಜಿ
ತ್ತಲರಂ ಬಂಬಂ ತಡಂಗೊಂಡೆನೆ ನಿಮಿರ್ದುದು ತತ್ಕೇಕರಾಳೋಕಪಾತಂ ೪೯

ವ|| ಎನೆ ಮತ್ತೊರ್ವಂ ನಿಜಮನೋವಲ್ಲಭೆಯ ನಗೆಗಣ್ಗಳ ವಿಳಾಸಮಂ ಮನದೆಗೊಂಡು

ಮೀಂಗಳನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ ಚಂಚರೀ
ಕಂಗಳನೊರ್ಮೆ ಮೋಹನಶರಂಗಳನೊರ್ಮೆ ಬಸಂತದಚ್ಚ ಬೆ
ಳ್ದಿಂಗಳನೊರ್ಮೆ ಬಾಲೆಯ ಮದಾಲಯಮುಗ್ಧ ವಿಶಾಲಸಸ್ಮಿತಾ
ಪಾಂಗಮುಗುಳ್ಚಿವಾರ್ಬಯಸಿ ಬಣ್ಣಿಸರಾಕೆಯ ಕಣ್ಣಮಾಯೆಯಂ ೫೦

ವ|| ಎಂದು ಪಲುಂಬಿ ಪಂಬಲಿಸುವುದುಮದಂ ಕೇಳ್ದರಸಂ ಮನಸಿಜನ ಮೇಗಿಲ್ಲದ ಬಲ್ಲಾಳ್ತನಕ್ಕೆ ತಲೆಯಂ ತೂಗಿ

ಹರಿಯುರದಲ್ಲಿ ಗೋಪವಧುವಿಂ ಮದನಂ ವಿಜಯಪ್ರಶಸ್ತಿಯಂ
ಬರೆಯಿಸಿದಂ ಹರಂಗರುಣಲೋಚನಮಂ ಪಡೆದಂ ಲಲಾಟದೊಳ್
ಗಿರಿಜೆಯ ಪಾದಯಾವಕದೆ ಮಾಡಿಸಿದಂ ಮೊಗಮಿಟ್ಟು ದೇವಸುಂ
ದರಿಗೆ ಸರೋಜ ಗರ್ಭನನೆನಲ್ ಪೆಜಿರಂ ಕೊಜಿಚಾಡಿ ಕಾಡನೇ ೫೧

ವ|| ಎನುತ್ತುಮಲ್ಲಿಂ ತಳರ್ದೊರ್ಬಳೊತ್ತಗೆ ನಿಂದ ನೀಱೆಯಂ ಮನುಜೇಂದ್ರಚಂದ್ರಂ ನೋಡದಂತೆ ನೋಡೆ ಕಣ್ಣಱೆದು ನಾಗರಿಕನಿಂತೆಂದಂ

ಅಡಿದಳಿರೂಡಿದಂತೆ ಬಗೆಗೊಂಡುವು ಜಂಘೆ ಬೆಡಂಗಾನಾಳ್ದುವೊ
ಳ್ದೊಡೆ ಕಡುನುಣ್ಪುವೆತ್ತುವು ನಿತಂಬಮಳುಂಬಮೆನಲ್ಪೊದಟ್ಟುವೊ

ಪೀಡಿನಡು ಸಣ್ಣಮಾಯ್ತು ಮೊಲೆ ಬಟ್ಟಿದುವಾದುವು ಚಲ್ಲಗಣ್ಣಳೊ
ರ್ಕುಡಿತೆಗೆ ತಿಣ್ಣಮಾದುವಿವಳೀಪರಿಜೇಂ ಕಡು ನೇರಿತಾದುದೋ ೫೨

ವ॥ ಎನ್ನುತ್ತುಂ ಬರ್ಪುದುಂ ಮತ್ತೊರ್ವಳ್ ನಿಜಮನೋಜಕೇಳೀಮಂದಿರದ ಮುಂದಣ ಲವಂಗಲತೆಯಂ ಮಲಂಗಿ

ಬಳ್ಳಿಡಿದಾಳಿಯಂ ಸಖಿಯರೆಂದುದುಗೇಳದೆ ಗೆಂಟುಮಾಬ್ಬುದುಂ
ಕಾಲ್ವಿಡಿದೋಪನಂ ಬಿಡದೆ ಮೆಲ್ಲೆರ್ದೆಯಂ ನನೆಯಂಬು ನಟ್ಟು ನೇ
ರ್ಗೋಲ್ವರಿವಂತು ಕಾಮನಿಸೆ ಸೂಸಿದಿವಾಕೆಯ ಕಣ್ಣನೀರ ತಂ
ದಲ್ವನಿ ಸಿಪ್ಪುಗಳ್ವಿಡಿದು ಸೂಸುವ ಮುತ್ತಿನ ಮೊತ್ತಮೆಂಬಿನಂ ೫೩

ವ॥ ಆಕೆಯನವಲೋಕಿಸುತ್ತುಂ ಪೋಗೆ ಮತ್ತೊರ್ವಳ್ ಪುರುಡಂ ನೀಡುಂ ಮಾಡಿ ನಲ್ಲನಲ್ಲಿಗೆ ವಂದು

ಎನಗೆ ಮದಾಳಿ ಪಲ್ಮೊರೆದು ಕಲ್ತುವು ಗಾವರಿಸಲ್ಪಿಕಂಗಳೆ
ನ್ನನೆ ಜಡಿದೆಯ್ದೆ ನೋಡ ನುಡಿಗಲ್ತುವು ಮನ್ಮಥನೆನ್ನ ನೆಚ್ಚು ನ
ಚ್ಚಿನ ಶರವಿದ್ಯೆಯೊಳ್ಕುಶಲನಾದನಿದೇಂ ಪ್ರಿಯ ಮತ್ತಮಯ್ದದೇ
ಮುನಿಸೆನುತುಂ ಲತಾಂಗಿ ಸುರಿದಳ್ಬಸಮಲ್ಲದೆ ಬಾಷ್ಪವಾರಿಯಂ ೫೪

ವ॥ ಆಗಳರಸನಿವಳೊಲವು ದೇಸೆವೆತ್ತುದೆನುತ್ತುಂ ಬರೆ ಮತ್ತೊರ್ವಳ್ ನಿಜಾನುಜೆಯ ಲಜ್ಜೆಯನುಜ್ಜಯಿಸಿದ ಕಾದಲನೊಲ್ಮೆಗೆ ಕಡುಮುಳಿದು

ಉತ್ತರರೇಖೆ ಭಾಗ್ಯವತಿಗಪ್ಪುದು ಚೋದ್ಯಮೆ ಕೇಶಭಾರಮಂ
ಪೊತ್ತಿರಲಾರ್ಪಳೇ ಕುಸುಮಕೋಮಳೆ ಬೇಡಿದ ಭೂಷಣಂಗಳಂ
ಬತ್ತಳೆ ಬಾಂಗಿ ತಾಂಗುವಳೆ ನಂಬುಗೆಯಿಂ ಪರದಾಡುವಾಕೆ ಬಂ
ದೊತ್ತೆಯನೇವಳೆಂದು ಕಿಱಿದಂಗೆಯನಂಗನೆ ಚುನ್ನವಾಡಿದಳ್ ೫೫

ವ॥ ಆಗಳಾಕೆಯ ವಕ್ರೋಕ್ತಿಯುಂ ಸೂಕ್ತಿನಿಧಾನಸನಾಲಿಸುತ್ತುಂ ಪೋಗೆ ಪೆಱನೊರ್ವನೊಲ್ದುಮೊಲಿಸಿಯುದೊಂದೆಡೆಯಳ್ಕಿಲ್ಲದ ಪಲ್ಲವಗ್ರಾಹಿ

ನೋಡಂಬಾಡನೆ ಬಂದು ಕಾಲ್ವಿಡಿವುದುಂ ಪೂಮಾಲೆಯಿಂ ನಲ್ಲನಂ
ನೀಡುಂ ಮೋದಿ ಕನಲ್ದು ಸೆಜ್ಜೆಗಿರದುಯ್ದಾಲಿಂಗನಂ ಚುಂಬನಂ
ಕ್ರೀಡಾದಂತಶಕುಂತಿಕಾಕಳರವಂ ಕಂಠಸ್ವನಂ ರಾಗಮಂ
ನೀಡುತ್ತಿರ್ಪಿನಮೌಪರಿಷ್ಟಕರತಪ್ರಾಗಲ್ಭ್ಯಮಂ ಬೀಱಿದಳ್ ೫೬

ವ॥ ಆಗಳ್ಪಿದೂಕಷನೆನ್ನ ಕಿವಿಗಳ್ಗೀಕೆ ಸುಸಿಲ ಮಸಕಮನಾಲಿಸುವಿನಿವಿರಿದು ನೃಪನಪ್ಪು

ಕೆಯ್ವಳಿಂದು ನಗಿಸುತ್ತುಂ ಪೋಗೆ ನಾಗರಿಕಂ ಅದೊಂದು ಸಂಭೋಗಸದ ಸದನಮಂ ತೋಱೆ

ಪಗಲುಲಿವಂದದಿಂದಮುಲಿದಪ್ಪುವು ತಮ್ಮೊಳೆ ಕೀಱೆ ದೀವದಂ
ಬೆಗಳೊಡಗೂಡಿ ಪಾರಿವದ ಮೆಲ್ಲುಲಿ ತಪ್ಪದಲಂಪಿನಿಂಪು ಕೈ
ಮಿಗೆ ಮನದಾಣ್ಮ ನೊಳ್ಮೆಱೆದಪಳ್ ರತನಾಟ್ಯಮನೊರ್ವಳಿಂತಿದಾ
ಮೃಗಶಿಸುಲೋಲಲೋಚನೆಯ ಕೂಜನಮೊಂದನುರಾಗಮಾಗದೇ ೫೭

ವ॥ ಎನ್ನುತ್ತುಂ ಬರ್ಪುದುಮೊಂದೆಡೆಯೊಳೊರ್ವಂ ಪ್ರಣಯಕಲಹಕಲುಷಿತೆಯಾದ ವಲ್ಲಭೆಯ ನಿರ್ಭರಪ್ರೇಮಭರದಿನೆಱಗಿದ ನಿಜಸಖನ ಸೌಭಾಗ್ಯಮನೆ ಕೊಂಡುಕೊನೆದು

ಪದಪದ್ಮಾನತನಾದ ಕಾದಲನ ಸೋಂಕಿಂದಾದ ರೊಮೋದ್ಗಮಂ
ವಿದಿತಂ ಮಾಡೆ ಮನಃಪ್ರಸಾದಮಿದನೇನೆಂದೀರ್ಷೆಯಿಂ ಮಿಥ್ಯೆಯಂ
ಪದುಳಂ ಮಾಡುವೆ ಮುಗ್ಧೆ ನೀಱಿನ ಮನಂ ಬೇಱಾಗೆ ನಿಸ್ತ್ರಿಂಶನೇಂ
ಮದನಂ ತೋಱದೆ ಮಾಣ್ಬನೇ ನಿನಗೆ ಬಾಣಾಸಾರಸಂಚಾರಮಂ ೫೮

ವ॥ ಎಂಬುದುಮರಸನಾತನ ಮಾತಂ ಮನದೊಳ್ಮೆಚ್ಚುತ್ತುಂ ಪೋಗೆ ಮುಂದೊಂದು ತಳಿರ್ವಂದರ ಜಗಲಿಯ ಮೇಳೆ ಪೆಂಡವಾಸದೆಳವೆಂಡಿರ್ಪಲರುಮಿರೆ ಮತ್ತೊರ್ವಳ್ತನ್ನ ಮೇಳದ ಕೆಳದಿಯನಿಂತೆಂದಳ್

ಬೀಯದ ಮೆಯ್ದೊಡವಂ ನಿನ
ಗೀಯಲ್ಕಚಕೃಷ್ಣಸರ್ಪಖಂಡನಮಂತ್ರೋ
ಪಾಯಮನಱೆಯಲ್ನೆಱಿದಾ
ಮಾಯಾವಿಯನಱೆದೆನವನೆ ರಾಜಮನೋಜಂ ೫೯

ಎನೆ ಮತ್ತೊರ್ವಳ್

ನೆಲೆಮೊಲೆಯ ಮೇಲೆ ವಲ್ಲಭ
ವಿಲಿಖಿತನಖರೇಖೆ ಚಂದ್ರಲೇಖೆಯೊಲಿರೆ ಕಂ
ಡಲರ್ಗುಂ ವಿಲೋಚನೋತ್ಪಲ
ಮಲರ್ದಪುದೆಂತಬಲೆ ನಿನ್ನ ವದನಾಂಭೋಜಂ ೬೦

ಕೂಱೆಸುವನ್ನೆವರಂ ಕಡು
ನೇಱೆದನಬಲೆಯರ್ಗೆ ಕವರ್ದು ಬಗೆಯಂ ಬಗೆಯಂ
ಬಾರಂ ಸಾರಂ ಮದನನ
ಬಾಱೆಗೆ ಗುಱೆಮಾಳ್ಪನೊಲಿಸಿ ಬಲಿವರ ದೇವಂ ೬೧

ಮನಮಂ ಸೆಱೆಗೆಯ್ದಬಳಾ
ಜನಮಂ ಲತೆವನೆಯ ಸೆಱೆಯೊಳಿಡುವುದೆ ತನಗಂ
ಜಿನದಮೆನೆ ರಾಜಕಂದ
ರ್ಪನ ಸೊಬಗಿನ ದೇಸೆಯಂದಮಿದು ಬಿಸವಂದಂ ೬೨

ಕೊಯ್ಯದೆ ಮಾಣಸೊಂದಿರುಳ ಕುಂತಳಮಂ ಪುಸಿನಲ್ಮೆ ದೋಱೆ ಮುಂ
ಗೆಯ್ಯ ತೊವಲ್ಗೆ ಮೇಣ್ಬೆರಲ ಕಂಡಿಗೆಗಾಡುವನಾಸೆಗೆಯ್ದು ಕ
ಗ್ಣಿಯ್ಯದಿರಾ ತನೊಳ್ಪಸಜಿ ಪೆಂಡಿರುಮಂ ಬಸಮಾಗೆ ಮಾಡಿ ಪೆ
ಣ್ಬುಯ್ಯಲನಾಲಿಸಂ ಕರುಣಮಿಲ್ಲಮವಂ ಮನುಜೇಂದ್ರಚಂದ್ರಮಂ ೬೩

ವ॥ ಎಂದು ನುಡಿವ ತರುಣಿಯರ ನುಡಿಯಂ ವಿದೂಷಕಂ ಕೇಳ್ದು ದೇವ ನಿಜಕ್ಷತ್ರಿಯಪವಿತ್ರನೆಂಬ ಪೆರ್ಮೆಗೆ ಪೆಣ್ಬುಯ್ಯಲನುಪೇಕ್ಷಿಸುವುದುಚಿತಮಲ್ತೆಂದು ನುಡಿಯುತ್ತಿರ್ಪಿನಂ

ತಡೆದಿರ್ಪುದೆ ಮಾದೇವಿಯ
ಕಡೆಗಣ್ಗಳ ನೆಯ್ದಿಲೆಸಟಿ ಬಾಸಿಗದಿಂ ಪೊ
ಯ್ವಡೆಯದೆ ಶಯ್ಯಾಸದನ
ಕ್ಕಡಿಯೆತ್ತಂಬಂತೆ ಘಳಿಗೆ ಮೊಱಗಿತ್ತಾಗಳ್ ೬೪

ವ॥ ಅಂತು ಬೆಳಗಪ್ಪ ಜಾವಮಪ್ಪುದುಂ ರತಿಯ ಸೂೞ್ಗಿವರ್ಪ ಕಂದರ್ಪನಂತೆ ರಾಜಮನೋಜಂ ಧನಶ್ರೀಯ ಸೂೞ್ಗೀವಂದನಲ್ಪತಲ್ಪತಳದೊಳ್ ಸುಖ ಪ್ರಸುಪ್ತನಿರೆ

ತನುಸೋಂಕಿಂ ನಿದ್ರೆಯಿಂದೆಚ್ಚಱಿಸಿ ಕುಮುದಮಂ ನೆಮ್ಮಿ ಕೈಗೆಯ್ದು ಭೃಂಗಾಂ
ಗನೆಯಂ ನಿರೇಜಿನೀಕುಟ್ಮಳದೆಸಱ್ದೊರೆಯಂ ಬಿರ್ಚಿ ಚಂಡಾಳಿಗೀತ
ಸ್ವನದೊಳ್ತಳ್ದೊಯ್ದು ನೀರ್ವಕ್ಕಿಗಳುಲಿಪುಮನಂಭೋಜಷಂಡಂಗಳೊಳ್ಪೀ
ರ್ಪನಿಯಂ ತರ್ಕೈಸಿ ತಂದೊಯ್ಯನೆ ಸುೞಿಮುದೆಲರ್ಸುಪ್ರಭಾತ ಪ್ರಭೂತಂ ೬೫

ನೋಡಿದ ನೋಟಕ್ಕಳಿಪಂ
ನೀಡವೆ ತನಿಗಂಪನುಗುಳ್ವ ಪೂಮಾಲೆಗಳುಂ
ಬಾಡಿದುವು ಕಂದಿನಾರ್ತುವು
ಜೋಡಿಸುಗುಂ ತಪ್ಪ ದಿವಸಮೆಂತಪ್ಪರುಮಂ ೬೬

ಮನೆಯೊಳಗೆ ತೇಜಮಂ ಮೆಱೆ
ದನಿಸ್ನೆವರಮಿರುಳ ಬಲದೊಳಿನನುದಯದೊಳಿಂ
ನೆನಗೆಸೆಯದೆಂದು ಕಂದಿದು
ದೆನೆ ಮಸಮಸನಾಯ್ತು ದೀಪಕಳಿಕಾಜಾಳಂ ೬೭

ಕಂದಿದುದಿಂದುಮಂಖಂ ನಯ
ನೇಂದ್ರೀವರಮತಿಜಡಂಗಳೆನಿಸಿದುವು ನಿಶಾ
ಸುಮದರಿಗೆ ಜರೆಯೊಳೊಗೆದೋ
ರೊಂದೆ ಜರಾಬಿಂದುವೆನಿಸಿದುವು ತಾರಗೆಗಳ್ ೬೮

ನೆಯ್ದಿಲ ಸಿರಿ ತನ್ನಂ ಬಂ
ದೆಯ್ದೆ ಸರೋಜಂ ರಜೋಧಿಕಂ ದರಹಾಸಂ
ಮೆಯ್ದೋಱಿಸಿ ಮೇಲ್ಗೆಱಿ
ಕೆಯ್ದುವು ಸಿರಿ ನಿಂದ ಕಾಲೊಳೇಂ ನಿಂದಪಳೇ ೬೯

ಪೋಗಲಡಹಡಿಸಿ ಮಿತ್ರಸ
ಮಾಗಮಮಂ ಬಯಸಿ ನಳಿನಿ ತಿಳಿಗೊಳದಿಂದಂ
ಮೇಗಣ್ಗೊಗೆವಂತುನ್ಮುಖ
ಮಾಗಿರ್ದುವು ನೀಳ್ದ ಸರಸಬಿಸವಲ್ಲರಿಗಳ್ ೭೦

ನಲಿವಾಱುವಾಜೆ ತಮ್ಮೊಳ್
ನಲಿದೊಂದರೆಗರ್ಚಿದಬ್ಜ ಕಾಂಡಮನೊಂದೆಂ
ಜಲಿಸಿ ಮನೋಜಸುಖಕ್ಕಳ
ವಳಿಸಿದುವಾಗಳ್ ರಥಾಂಗಮಿಥುನಶತಂಗಳ್ ೭೧

ಜಿನಗೃಹದೊಳೊಗೆವ ಜಗಳೆಯ
ದನಿಯಂ ಕಾರ್ಗಾಲ ಮುಗಿಲ ಮೊಱಗಿನ ದನಿಗೆ
ತ್ತನುರಾಗದಿನೊಡರಿಸಿದುವು
ಮನೆಮನೆದಪ್ಪದೆ ಶಿಖಂಡಿಗಳ್ತಾಂಡವಮಂ ೭೨

ದುಸ್ಥಳಮಂದಯಾಚಳಧಾ
ತುಸ್ಥಳಿಯಂ ಬೇಗಮಡರ್ವ ದಿನನಾಥರಥ
ಪ್ರಸ್ಥಾನಪಾಂಸುವೆನಿಸಿ ದಿ
ಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ ೭೩

ಉದರದೊಳೀ ಜಗಮಂ ತಾ
ಳ್ದಿದ ಶಾಶ್ವತಲಕ್ಷ್ಮಿವೆತ್ತ ದಿನಪಂ ಸಂಧ್ಯಾಂ
ಬುದಪೀತಾಂಬರವಿಭು ತಾ
ಳ್ದಿದ ಕವಸ್ತುಭರತ್ನಮೆನಿಸಿದುದು ರವಿಬಿಂಬಂ ೭೪

ವ|| ಅಂತು ನೇಸಮರ್ೞಡುವುದುಂ ರಾಜಸರ್ವಜ್ಞಂ ಶುಚಿಭೂರ್ತನಂ ಮತಿ
ಸಮಾಹಿತಚಿತ್ತನುಮಾಗಿ

ಅಳಿಮಾಳಾಮಿಳಿತಪ್ರಸೂನಸುರಭಿದ್ರವ್ಯಂಗಳಿಂದರ್ಚನಾ
ಫಳಶಾಲ್ಯಕ್ಷತದೀಪಧೂಪಚರುಸಂದೋಹಗಳಿಂ ಸರ್ವಲ
ಕ್ಷಣ ಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ ಜಿನಸ್ತೋತ್ರ ಜಾ
ಪಳಜಿಹ್ವಾಗ್ರಸಮಗ್ರನಾಟಕನಟಂ ಸಾಹಿತ್ಯವಿದ್ಯಾಧರಂ ೭೫

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಕೌಮುದೀಮಹೋತ್ಸವವರ್ಣನಂ ಸಪ್ತಮಾಶ್ವಾಸಂ ಸಮಾಪ್ತಂ



# ಅಷ್ಟಮಾಶ್ವಾಸಂ

ಶ್ರೀ ಪರಮಜಿನೇಶ್ವರಚರ
ಣೋಪಸ್ಥಲಮಂ ಪ್ರಧಾನಮಂಗಳಮಂ ಪು
ಣ್ಯೋಪಾರ್ಜನಮಂ ನಿತ್ಯ
ವ್ಯಾಪಾರಮನಪ್ಪುಕೆಯ್ದನಭಿನವಪಂಪಂ ೧

ಸಿರಿಕಂಡದ ಕೋಟ್ಕಿಸಱಿಂ
ಳ್ಬೆರಸಿದ ಕತ್ತುರಿಯ ಸಾರವಣೆ ಬೆಳಗಿದ ಕ
ಪ್ಪುರವಳುಕಿನ ಸೊಡರ್ಗಳ್ ಸುಂ
ದರಮೆನೆ ಜಿನಪತಿಯನವನಿಪತಿ ಪೂಜಿಸಿದಂ ೨

ಸುರಪೊನ್ನೆಯ ವಾಸಂತಿಯ
ಸುರಯಿಯ ಚಂಪಕದ ಕರ್ಣಿಕಾರದ ಪೊಂದಾ
ವರೆಯ ವಿಚಕಿಳದ ನಸುಬಿಱಿ
ದಲರಿಂದರ್ಚಿಸಿದನವನಿಪತಿ ಜಿನಪತಿಯಂ ೩

ಚಾರುಚರುನಿಚಯದಿಂ ಘನ
ಸಾರಾಗುರುಧೂಮಲೇಖೆಯಿಂ ಮಳಯಜಕಾ
ಶ್ಮೀರರಸದಿಂ ಜಿನೇಂದ್ರನ
ನಾರಾಧಿಸಿದಂ ನರೇಂದ್ರಚೂಡಾರತ್ನಂ ೪

ಬಾಳೆಯ ಮಾವಿನ ಕಂಮರ
ದೀಳೆಯ ತನಿವಣ್ಗಳಿಂದಮರ್ಚಿಸಿದಂ ಭೂ
ಪಾಳಂ ನಿರ್ಭರಭಕ್ತಿಯ
ಜಾಳಕಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್ ೫

ವ॥ ಅಂತು ಸಾಮಯಕನಿಯಮಮಂ ನಿರ್ವರ್ತಿಸಿ ದಿವ್ಯಾಂಬರಮನುಟ್ಟು ತುಱುಂಬಿದ ತೋಱಮಲ್ಲಿಗೆಯ ಮುಗುಳ ಕಂಪುಮಂ ತಳೆದ ಪುಡಿಗತ್ತುರಿಯ ಸೊವಡುಮಂ ಚಾಮರದ

ಗಾಳಿ ದೆಸೆದೆಸೆಗೆ ನೀಡೆಯುಂ ತೊಟ್ಟ ವಜ್ರಾಭರಣಕಿರಣ ಪಟಲಂ ಪಗಲ ಸಿರಿಗೆ ಕನ್ನೆಜವಿಮಾಡೆಯುಂ ಕರ್ಪೂರಪರಿಮಿಶ್ರಿತ ತಾಂಬೂಲರಾಗ ರಂಜಿತಾಧರಮಣಿ ರಮಣೀಜನಕ್ಕೆ ರಾಗಮಂ ಕುಡುವ ಚಿಂತಾಮಣಿಯ ಚೆಲ್ವನುಂಟುಮಾಡೆಯುಂ ನವೀನಯೌವನನಾವಷ್ಟಂಭಮನಪ್ಪುಕೆಯ್ದು ನಿಜನಿರತಿಶಯ ರೂಪದಿಂ ಮನೋಭವರೂಪಾಭಿಮಾನಗರ್ವಗ್ರಂಥಿಯುಂ ಸಡಿಲಿಸುತುಂ ಅಮೋಘ ವಾಕ್ಯಮಾಣಿಕ್ಯಜಲಧಿ

ವಿವಿಧಾತೋದ್ಯವಿದಗ್ಧವಾದಕನಿಕಾಯಂ ಗಾಯಶ್ರೇಣಿ ಪಂ
ದಿವಿತಾನಂ ಬಗೆಗೊಂಡು ಕೊಂಡು ಕೊನೆಯುತ್ತುಂ ಬರ್ಪಿನಂ ಖೇಚರೇಂ
ದ್ರವಿಲಾಸಂ ತನಗಕ್ಕೆಲಾವಣಮೆನಲ್ ಸಂಗೀತಕಾಲೋಕನೋ
ತ್ಸವದಿಂ ನಾಟಕಶಾಲೆಗಂದು ಬಿಜಯಂಗೆಯ್ದಂ ಮಹೀವಲ್ಲಭಂ ೬

ವ|| ಅಂತು ಬರ್ಪುದುಂ

ಗುಣದೊದವಿಂಪರಾಕ್ರಮದಳುರ್ಕೆಯಿನುನ್ನತಿಯಿಂ ವಿಲಾಸದಿಂ
ದೆಣೆ ತನಗೆಂದು ಸೌಖ್ಯಮನಪೇಕ್ಷಿಸಿ ತನ್ನ ವಿಮಾನಮಂ ನೃಪಾ
ಗ್ರಣಿಗೆ ಸುರೇಂದ್ರನೊಲಗಿಸಿದಂತೆಸೆದತ್ತು ವಿಚಿತ್ರಪುತ್ರಿಕಾ
ಮಣಿಮಯಮತ್ತವಾರಣವಿತಾನವಿರಾಜಿತನಾಟ್ಯಮಂಡಪಂ ೭

ವ|| ಆ ಮಂಡಪಮಂ ಮಂಡಲಿಕಮುಕರಧ್ವಜಂ ಮಣಿಮಂಡನಮರೀಚಿಯಿಂ ಚಿತ್ರಿಸುತ್ತುಮೊಳಪುಗುವುದುಂ

ಸಮವಾಯಂ ಸಮನಾದೊಡಂ ಸಕಲಭೂಭೃನ್ಮಸ್ತಕನ್ಯಸ್ತಪಾ
ದಮೆನಿಪ್ಪುನ್ನತಿಯಿಂದಮೆನ್ನೊಡನೆ ಮತ್ತಂ ವಿಕ್ರಮಕ್ರೀಡೆಯೊಳ್
ಸಮನಾಗಲ್ಬಗೆದಪ್ಪುದೆಂದು ಸೆಱಗೆಯ್ದಂ ಸಿಂಗಮಂ ತನ್ನೃಪೋ
ತ್ತಮನೆಂಬಂತಿರೆ ಸಿಂಹಪೀಠಮೆಸೆದತ್ತಾವೇದಿಕಾಭಾಗದೊಳ್ ೮

ವ|| ಆಗಳ್

ಇವು ಚತುರಂಗ ಪ್ರಥಮಾಂ
ಗಮೆನಿಪ್ಪ ಗಜಕ್ಕೆ ಮುಳಿವುವೆಂದಾಗ್ರಹದಿಂ
ದವನಾ ಸಭೆಯೊಳ್ ನೃಪ ಪರಿ
ಭವಿಪಂದದಿನೇಱೆ ದಂ ಮೃಗೇಂದ್ರಾಸನಮಂ ೯

ವ|| ಆ ಸಮಯದೊಳ್

ಉರಗೇಂದ್ರಂ ಪೆಡೆಗಳ್ಪಿಡಂ ಮಗುಳ್ವಿನಂ ಪೊತ್ತಿದೇ ವಿಶ್ವಂಭರಾ
ಭರಮಂ ತನ್ನ ಭುಜಾಗ್ರದೊಳ್ತಳೆದು ಬಿಣ್ಪಂ ತಾಳ್ದಿದೀಧೈರ್ಯಮಂ
ದರನಂ ತಾಳ್ದಿದೆನೆಂದು ರಾಗಮಯಮಾಯ್ತೆಂಬಂತೆ ಚೆಲ್ವಾಯ್ತು ಕೇ
ಸರಿಪೀಠ ಪುದಿದಿರ್ದ ಶೋಣಮಣಿಮಾಲಾರಶ್ಮಿಜಾಲಂಗಳಿಂ ೧೦

ವ॥ ಆ ಸಮಯದೊಳಸಮಶರನ ವಶೀಕರಣಮಂತ್ರಾಧಿದೇವತೆಯರೆ ಸನ್ನಿದಮಾದಂತೆ

ಗಂಡಗುಣಕ್ಕೆ ಚೆಲ್ವಣಮಿಂದೆಂಬೊಡೆ ಪೊತ್ತಿರು ಪುಷ್ಪಕಾಂಡಕೋ
ದಂಡಮನಲ್ಲದಂದು ಬಿಸುಡೀ ತ್ರಿಜಗದ್ವಿಜಯೋದ್ಯಮಕ್ಕದೇ
ಭಂಡಮೊ ಸಾಲ್ವುದೀಕೆಗಳ ಪುರ್ಬಿನ ಜರ್ಬೆನೆ ಪೆಂಡವಾಸದೊ
ಳ್ವೆಂಡಿರ ತಂಡಮಾಗಳೆಸೆದಿರ್ದುದಿಳೇಶನ ಪಾರ್ಶ್ವದೇಶದೊಳ್ ೧೧

ನರೇಂದ್ರದರಹಾಸವಕ್ತ್ರಕಮಳಾಕರೋಲ್ಲಾಸಿಯಂ
ಹರಿನ್ಮಣಿಶಿರೋವಿಭೂಷಣಮಯೂಖಶೈವಾಳಮಂ
ಮರಾಳನಿಕರಂ ಕರ್ದುಂಕುವವೊಲಾದುವಾಗಳ್ ವಧೂ
ಕರಾಂಬುರುಹಸಂಚಳದ್ಧವಳಚಾಮರಶ್ರೇಣಿಗಳ್ ೧೨

ರಾಜಕುಮಾರಕಮುಂ ಗಣಿ
ಕಾಜನಮುಂ ಚತುರಬುಧಕದಂಬಕಮುಂ ರಾ
ರಾಜಿಸೆ ಸಭೆಯೊಳ್ ರಾಜಮ
ನೋಜಂ ಬಿಜ್ಜೋದರೋಲಗಂಗೊಟ್ಟಿರ್ದಂ ೧೩

ವ॥ ಆ ಪ್ರಸ್ತಾವದೊಳ್

ಮೃಗಮದದಾರ್ದ್ರಚಂದನದ ಕುಂಕುಮಪಂಕದ ಸೂಡಿದಚ್ಚ ಬಾ
ಸಿಗದ ಕದಂಬದಂಬುಲದ ಕಂಪನಲಂಪಿನೊಳೀಂಟಿ ಭೃಂಗಮಾ
ಲೆಗಳನುರಾಗದಿಂ ಮೊರೆವ ನಾದಮೆ ಗೇಯದೊಳಾದಲಂಪನಾ
ವಗಮವಟೈಸೆ ಗಾಯನಿಕಾಯಮನೀಕ್ಷಿಸಿದಂ ನರಾಧಿಪಂ ೧೪

ವ॥ ಅಗಳವನೀಶ್ವರಪ್ರಸಾದಾವಲೋಕನಮೆ ತನಗೆ ಸಂಗೀತಕ ಪ್ರವೇಶ ಪ್ರೇರಕಮಾಗೆ

ಕೊರಲಿನಿತು ಬೆರಲ ಪವಣಿಂ
ಕರಮೆ ರಸಂಬಡೆಗುಮೆಂಬ ತೆಱನಱಿದು ಬೆರ
ಲ್ಕೊರಲಾಗೆ ರಾಗಶುದ್ಧಿಯ
ಪರಿಣತಿಯಂ ಮೆಱೆದು ವಾಂಶಿಕಂ ಬಾಜಿಸಿದಂ ೧೫

ವ|| ಆಗಳತಿಸುಕಂಠನುಂ ವಿಂಶತಿಯತಿಪ್ರಗಲ್ಭನುಮಪ್ಪ ಮುಖ್ಯಗಾಯಕಂ ತಾಳನಿವರ್ತನಂ ಮಾಡಿ

ಕೊರಲಂ ನಿಟ್ಟೆಗೆವಂದು ವಂಶಶ್ರುತಿಯಿಂ ತ್ರಿಸ್ಥಾನಸಂಶುದ್ಧಿವೆ
ತ್ತಿರೆ ನಾನಾವಿಧದಿಂ ಪ್ರಯೋಗಿಸುವುಪಾಂಗಂಗಳ್ ರಸಂಬೆತ್ತು ಬಿ
ತ್ತರಿಪಂತಾಣತಿಮಾಡಿದಂ ಮುಖರಿಗಾಣಂ ಭೃಂಗಮಾಳಾಮೃದು
ಸ್ವರಮಲ್ಲಿಂತಿದು ಕಾಮಕಾರ್ಮುಕಲತಾಜ್ಯಾರಾವಮೆಂಬನ್ನೆಗಂ ೧೬

ವ|| ಅಂತಾದತಿಶಯತಪರಿಣತಿಯಂ ಮೆಱೆದು ಮೂಱುಂ ಗ್ರಾಮರಾಗಂಗಳೊಳಂ ಷಡ್ಜಾತಿಋಷಭಾದಿಸಪ್ತಸ್ವರಸಮಾಯೋಗಸಂಭವಮಪ್ಪ ಮೂವತ್ತುಂ ವಿಶುದ್ಧರಾಗದೊಳಂ ಸ್ವರಭಾಷಾವಿಭಾಷೆಯಿಂ ವ್ಯಕ್ತಮಾದ ಮುವತ್ತಾಱುಂ ರಾಗಭೇದೊಳಂ ದೇಶೀಯವಿಶೇಷಭೇದದಿನಾಚಾರ್ಯವಿರಚಿತಾಭಿನಯಬೇದದಿಂ ಜನಿಯಿಸಿದ ನೂಱುನಾಲ್ವತ್ತುಂ ರಾಗಭೇದೊಳಮವನೋರೊಂದಱೊಳ್ಬೆರಸುವ ಸಾಮ್ರಾಣಿಭೇದದೊಳಂ ಚಚ್ಚಪುಟಚಾಚುಪುಟಾದಿ ಸಕಲತಾಳಸಂಚಾರಸಮುದಿತ ಮುಪ್ಪಿರ್ಪತ್ತೆಂಟು ವಸ್ತುಗೀತದೊಳಮತಿಪ್ರವೀಣನಪ್ಪ ಗಾಣಂ ಪಾಡಲೊಡರಿಸುವುದುಮಾಗಳ್

ವಿತತಘನಾವನದ್ಧಸುಷಿರಂಗಳನೊರ್ಮೆಯೆ ಕೂಡೆ ಕೂಡಿ ಕೊಂ
ಡತಿದ್ರುತವಾದಕರ್ತಗುಳಿ ಬಾಜಿಸೆ ನಿರ್ಭರನೀಲಮೇಘಗ
ರ್ಜಿತಮೊ ಸಮುದ್ರಘೂರ್ಣಿತಮೊ ಪೇೞೆನೆ ನರ್ತನಪೂರ್ವರಂಗಸಂ
ಗತಸಮಹಸ್ತ ವಿಸ್ತೃತರವಂ ಪುದಿದತ್ತು ನಭೋವಿಭಾಗಮಂ ೧೭

ವ|| ಅಂತು ಪೂರ್ವರಂಗಸಂಗತಸಮಹಸ್ತಮಂ ಮೆಱೆದು

ತಳದಿಂದವುಂಕಿ ತೊಡೆದು
ದ್ದಳಿಕೆಯ ನೂಲ್ವಾಸಮೆಸೆಯ ಝೇಂಕಾರಮನಿ
ತ್ತಳವಡೆ ಬಾಜಿಸೆ ಶಶಿಮಂ
ಡಳಮುಗುಳ್ವಮರ್ದನಿಸಿದತ್ತು ಢಕ್ಕಾನಿನದಂ ೧೮

ಕಡೆಮುಟ್ಟೆ ನೇತ್ರವಟ್ಟೆಯ
ಕಡೆಯಂ ನೀಳ್ದಂತೆ ವಿಷಮತಾಳದೊಳಿನಿಸಂ
ತೊಡದದಿದವೆಱೆನೆ ಮಡದೊಳ
ಗೊಡನುಡುಗದೆ ಕುಡುಪನಡರ್ವಿನಂ ಬಾಜಿಸಿದಂ ೧೯

ವ|| ಅಂತು ಬಾಜಿಪಾಗಳ್

ಮಾರ್ಗಚತುಷ್ಟಯಮಭಿನವ
ಮಾರ್ಗದೊಳಳವಟ್ಟು ಮಕರಕೇತನಸುಮನೋ
ಮಾರ್ಗಣಮೆನೆ ಸೋಲಿಸೆ ಸಭೆ
ಮಾರ್ಗಣಮೆನೆ ಪೊಗಟ್ಟುದೊಂದೆ ಕೊರಲಿಂದಾಗಳ್ ೨೦

ಸಮಮೆನಿಪ ವಿಷಮಮೆನಿಸಿದ
ಸಮವಿಷಮಮಿದೆನಿಸಿದೀಪ್ರಚಾರತ್ರಿತಯಂ
ಸಮನಿಸೆ ಸಮನಿಸಿದತ್ತೊಡ
ನೆ ಮನೋಜಜ್ಯಾರವಪ್ರಚಾರಂ ಸಭೆಯೊಳ್ ೨೧

ಗುರುಸಂಚಯಲಘುಸಂಚಯ
ಗುರುಲಘುಸಂಚಯಮೆನಿಪ್ಪ ಸಂಯೋಗಂಗಳ್
ಪರಿಣತಿಕೆವಡೆದು ಪಡೆದುವು
ಪರಿಣತರ ಮನಕ್ಕೆ ಹರ್ಷರಸಸಂಚಯಮಂ ೨೨

ದ್ರುತವಿಲಂಬಿತಮಧ್ಯಲಯಂ ತತ್ವಾನುಗತಾಘಗತಿತ್ರಯಂ
ಜತಿಯೊಳೊಂದುವಿಸಂ ಪದಿನೆಂಟುಂ ಚಾರಿ ಮನೋಹರಮಾಗೆ ವಿಂ
ಶತಿವಿಭೇದದಳಂಕೃತಿ ವಿದ್ಯಾಲಕ್ಷ್ಮಿಗಳಂಕೃತಿಯಾಗೆ ಭಾ
ರತಿಕನೋಜೆಗೆ ಬಾಜಿಸಿದಂ ಚಿತ್ತಕ್ಕೆ ಚಮತ್ಕೃತಿಯಪ್ಪಿನಂ ೨೩

ವ|| ಅಂತು ವಾದ್ಯವಿದ್ಯಾಪರಿಶ್ರಮಂ ಮೆಱೆದು ಪಱಿಸನ್ನೆಗೆಯ್ವುದುಂ ಮತ್ತಂ ನರ್ತನಾಲಂಕರಣದಿನಲಂಕರಿಸಿ ನರ್ತಕಿ ನೇಪಥ್ಯ ಗೃಹದಿಂ ವಿವಿಧ ರತ್ನರಚಿತಮೆನಿಸಿದ ಜವನಿಕೆಗವತರಿಸಿ

ಜವನಿಕೆ ಭೂಷಣಂಗಳ ಲತಾಂಗದಪಾಂಗದ ಕಾಂತಿ ಸುತ್ತಿದಂ
ತವೊಲಿರೆ ಲೋಚನೋತ್ಸವಮನೀವ ನಿಜಾಕೃತಿಯಿಂದೆ ಪೋಲ್ತಳಾ
ಯುವತಿ ವಿಚಿತ್ರರತ್ನರುಚಿಯಿಂ ಪೊರೆದಿಂಗಡಲಿಂದಮುಣ್ಮೆ ಪೊ
ಣ್ಮುವ ನಿಱಿಗೊಂಡ ನೀಳ್ದ ತೆರೆಯಿಂ ಬಳಸಿರ್ದಮೃತಾಂಶುಲೇಖೆಯಂ ೨೪

ನವರತ್ನರಚಿತಮೆನಿಸಿದ
ಜವನಿಕೆಯಂ ಕಳೆಯೆ ರಂಗದೊಳ್ಕಣ್ಗೆಸೆದಳ್
ಧವಳವಿಲೋಚನೆ ಚಿತ್ತೋ
ದ್ಭವನೊಱೆಯಿಂದುರ್ಚೆ ಮಿಸುಗುವಲಸಿತಿಕೆಯವೋಲ್ ೨೫

ವ|| ಆಗಳಸವಳಮೆಸೆದು ಪಸರಿಸುವಪಾಂಗಪ್ರಭಾಪಟಲದಿನ ಕಾಂಡಕಾಂಡಪಡಮಂ ಪಡೆದು

ಸ್ಮರಪಾಶದಿನಾನರ್ತಕಿ
ಬರೆತೆಗೆದಪಳೆನೆ ಸಭಾಜನಂಗಳ ಮನಮಂ
ಕರೆಗಣ್ಮೆ ನಿಮಿರ್ವ ಲೋಚನ
ಮರೀಚಿಮಾಳಿಕೆಯಿನೇಂ ಮನಂಗೊಳಿಸಿದಳೊ ೨೬

ಪೊಳೆದಪುವೆಳವಾಳೆಗಳ
ಗ್ಗಳಿಸುವ ಲಾವಣ್ಯರಸತರಂಗಿಣಿಯೊಳೆನಲ್
ಲಲನೆಯ ತನುರುಚಿಯೊಳ್ತಳ
ತಳತಳಿಸಿದುವೆಳಸಿ ಬಳಸಿ ನೋಟ್ಟರ ಕಣ್ಗಳ್ ೨೭

ವ॥ ಆ ಸಮಯದೊಳ್

ನಯಮಳವಟ್ಟು ತೊಟ್ಟ ಪಸುರ್ವಟ್ಟೆಯ ಕಮಚುಕಮುಟ್ಟನೇತ್ರವ
ಟ್ಟೆಯ ಪೊಸಚಲ್ಲಣಂ ಮುಡಿದ ಮುತ್ತಿನ ದಂಡೆ ತೊಡರ್ಚಿದೊಂದು ದೇ
ಸೆಯ ತೊಡವೊಪ್ಪಮಂ ಪಡೆಯೆ ಮೂಱಿಡೆ ಬಳ್ಕಿದ ಶಕ್ರಚಾಪಲೇ
ಖೆಯ ತೆಱದಿಂ ತ್ರಿಭಂಗಮೊಳದೇನೆಸೆದಿರ್ದಳೊ ಕಾಂತೆ ರಂಗದೊಳ್ ೨೮

ವ॥ ಅಂತು ನಿಂದು ನೃತ್ಯೋಪನಯನಮುಮಂ ಪೂರ್ವರಂಗಪ್ರಮಾಣ ಮನೊಡರ್ಚಿ

ಪಸಲೆಯ ಮೇಲೆ ತಟಿಲ್ಲತೆ
ಪಸರಿಸಿದಪುದಾಲಿವರಲನೆಂಬಿನಮಾಗಳ್
ಪಸುರ್ವರಲ ಜಗಲಿಯೊಳ್ ಪಸ
ರಿಸಿದಳ್ ಪೊಂಬಣ್ಣದಬಲೆ ಕುಸುಮಾಂಜಲಿಯಂ ೨೯

ಮದನಾನುರಾಗಮಂ ಬೀ
ಜೆದವಳೊ ಸಭೆಗೆನೆ ಸುವರ್ಣಪುಷ್ಪಾಂಜಲಿಯಂ
ಕೆದಱೆದಳಾವಧು ಮದನನೆ
ಕೆದಱೆದವೊಲ್ತನ್ನ ಪೊನ್ನ ಪೊದೆಯಂಬುಗಳಂ ೩೦

ವ॥ ಆಗಳವನದ್ಯವಾದ್ಯವಿದ್ಯಾವಿದಗ್ಧನಪ್ಪ ವಾದಕಂ ಕೆಯ್ಯೆ ಮನಮಾಗೆ ಕುಡುಪೆ ನಾಲಗೆಯಾಗೆ ತಾಳಾನುಗಮಂ ತಱಗೆಲೆಯ ಮೇಲೆ ಸುಣ್ಮಾಟಿಲಂ ಬಿಡದೆ ಸುರಿವಂತ ಗೀತಾನುಗಮಾಗೆ ಬಿಡದೆ ಬಾಜಿಪಾಗಳ್

ಮನದಿಂ ಭಾವಮುದೀರ್ಣಮಾಗೆ ಮುಖದಿಂ ಕೈಗಣ್ಮೆ ಹಾವಂ ವಿಲೋ
ಚನದಿಂ ಪೊಣ್ಮೆ ವಿಲಾಸಮೊತ್ತರಿಸೆ ಪುರ್ಬಿಂ ವಿಭ್ರಮಂ ಕಿಂಕಿಣೀ

ನಿನದಂ ಗೀತದ ಮೆಯ್ಗೆ ಬಾಜಿಪ ಲಯವ್ಯಕ್ತಾಕ್ಷರವ್ಯಕ್ತಿಯಿಂ
ಜನಸಂಮೋಹನಮಾಗೆ ದೇಸೆವಡೆದತ್ತಾ ನರ್ತಕೀನರ್ತನಂ ೨೧

ಕಳಶಸ್ತನಿಯ ನಿವರ್ತನ
ವಳನಾದಿಗಳೆನಿಪ ನವವಿಧಾಳೋಕದೊಳ
ಗ್ಗಳಿಸುವ ವಿಲಾಸರಸದೊಳ್
ಮುಳುಗಿದುದು ಸಭಾಮನೋಮರಾಳಕದಂಬಂ ೨೨

ರಸವೃತ್ತಿ ಸಭೆಗೆ ಮೋಹನ
ರಸವೃತ್ತಿಯನೀಯೆ ವಿಭ್ರಮಂ ವಿಭ್ರಮಮಂ
ಪಸರಿಸೆ ವಿಲಾಸವತಿ ನ
ರ್ತಿಸಿದಳ್ ಕೆಂದರ್ಪಸಾಯಕಂ ನರ್ತಿಪವೋಲ್ ೨೩

ಚಿತ್ತಮನವಯವದಿಂ ಮೂ
ವತ್ತೆರಡುಂ ತೆಱದ ಚಾರಿ ಚಾರಿಸೆ ತಮ್ಮೊಳ್
ಪತ್ತಿಸಿದುವು ದೃಷ್ಟಿಗಳಂ
ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್ ೨೪

ನಿಱೆದಳಿರೆಲರಲಪಿಂ ಪಲ
ತೆಱದಿಂ ಪೊಳಪಂತೆ ಸಂಯುತಾಸಂಯುತಮಂ
ಬಱುವತ್ತುನಾಲ್ಕು ಹಸ್ತದ
ತೆಱನೊಳ್ ತೆಱಸಱೆಮು ಮೆಱೆದಳವಳಭಿನಯಮಂ ೨೫

ಚರಣನಿತಂಬಗ್ರೀವಾ
ಕರಶಾಖಾಜನಿತರೇಚಕಂ ನಯನಮನೋ
ಹರಮಾಗೆ ನೃತ್ಯವಿದ್ಯೆಯ
ಪರಿಜಂ ಕೈಕೊಂಡುದೆಂಬಿನಂ ಸೊಗಯಿಸಿದಳ್ ೨೬

ಅತಿವಿಷಮವೆನಿಪ ತಾಳದ
ಗತಿಯೊಳ್ನೂಱೆಂಟು ತೆಱದ ಕರಣಂಗಳ ಸಾಂ
ಗತಿ ದೇಸೆವಡೆಯೆ ಪಡೆದಳ್
ಲತಾಂಗಿ ನೃಪಸಭೆಗೆ ವಿಪುಲಪುಲಕೋದ್ಗಮಮಂ ೨೭

ಇವು ಮೊವತ್ತೆರಡಂಗಹಾರಮಿವು ನಾನಾಭೇದಭಾವಾನುಭಾ
ವವಿಭಾವಕ್ರಮಮೆಂದು ಕೀಱೆ ನುಡಿ ಯಲ್ಬರ್ಕುಂ ಯಥಾಸ್ಥಾನಸಂ

ಭವಮಪ್ಪಂತಿರಲಿಂತು ನರ್ತಿಸುವರಾರೆಂಬನ್ನೆಗಂ ಲೋಚನೋ
ತ್ಸವಮಂ ಚಿತ್ತವಿಕಾಸಮಂ ಪಡೆದುದಾಲೀಲಾವತೀನರ್ತನಂ ೩೯

ಮನದ ತೊಡರ್ಪು ಲೋಚನದಡರ್ಪಲರಂಬಿನ ಕೂರ್ಪು ಸರ್ಪಮೋ
ಹನರಸದಿರ್ಪು ಬೇಟದ ಪೊಡರ್ಪಭಿಮಾನದ ನಟ್ಟತುರ್ಪು ಕಾ
ಮನ ಕರವಾಳಕೂರ್ಪು ವಿರಹಾಹಿಯ ಕೊಳ್ವ ಪಸುರ್ಪು ಜೇಯ ಭಾ
ಪೆನಿಸಿದುದಂಗಹಾರಕರಣಾಭಿನಯಂಗಳ ನೇರ್ಪು ನೀಜೆಯಾ ೪೦

ಸ್ಮರವಿಜಯಕ್ಕಿದೆ ನಿರ್ವಾ
ಣರೇಖೆಯೆನೆ ಮಸಗಿ ಮದನಮದಕರಿ ವಿಸಟಂ
ಬರಿದುದೆನೆ ಕಾಮನೇಸಿನ
ಪರಿಣತಿಯೆನೆ ತರುಣಿ ಬಹುವಿಧಂ ನರ್ತಿಸಿದಳ್ ೪೧

ಮದನಮೋಹನಮಂತ್ರನಾದಮೊ ಸೇತುಗಟ್ಟಿದ ಕಾಮಸಂ
ಮದಸುಧಾಬ್ಧಿತರಂಗನಾದಮೊ ಲೋಕಮೆಲ್ಲಮನಿಕ್ಕಿ ಮೆ
ಟ್ಟಿದ ಮನೋಭವ ಸಿಂಹನಾದಮೊ ಪೇಱೆನಲ್ ರಸಗೀತದೊಳ್
ಪುದಿದು ವಾದ್ಯದೊಳೊಂದಿ ತಟ್ಟುದು ಕಿಂಕಿಣೀ ಕಳಝುಂಕೃತಂ ೪೨

ನುಂಗಿದುದು ಸಕಲರಸಮಂ
ಶೃಂಗಾರರಸಪ್ರವಾಹಮೆನೆ ಜನದ ಮನೋ
ರಂಗಪ್ರತಿಷ್ಠರತಿಗಾ
ಯ್ದಂಗಜನಿಂದೆನಿಸಿದತ್ತು ಸಂಗೀತರಸಂ ೪೩

ವ॥ ಅಂತಪಾರಸುಖಸುಧಾರಸಮೆನಿಪ ಸಂಗೀತಪ್ರಸಂಗದೊಳ್

ಅಳಿನೀಝುಂಕಾರಸಾರಂ ಪಸರಿಸೆ ರಸಗೀತಂ ಸುಧಾಂಭೋಧಿನಾದಾ
ಕಳಿತಂ ಕೈಗಣ್ಮೆ ಗೀತಾನುಗಲಯಲಲಿತಾತೋದ್ಯನಾದಂ ತಟಿಚ್ಚಂ
ಚಳಲಾಸ್ಯಂ ಗೀತವಾದ್ಯಾನುಗವಭಿನಯಮಂ ಬೀಱೆ ಚೆಲ್ವಾದುದುದ್ಯ
ತ್ಪುಳಕವ್ಯಾಸಂಗಸಂಗೀತಕರಸಲಹರೀರಂಗವಾಸ್ಥಾನರಂಗಂ ೪೪

ಮದನೋನ್ಮಾದವಿಧಾನಮಂಗಜಬಲಪ್ರಕ್ಷೋಭಮಪ್ರಾಕೃತಂ
ಮದಿರಾದರ್ಪಮಯಂತ್ರಮುಕ್ತಮದನಾಸ್ತ್ರಂ ಕಾಮಸಾಮ್ರಾಜ್ಯಸಂ
ಮದವರ್ಷಂ ಮದನಗ್ರಹಾವ ತರಣಂ ಪೋಗಿಂತಿದೆಂಬಂತು ಪೆ
ರ್ಚಿದ ಸಂಗೀತಸುಧಾತರಂಗಿಣಿಯೊಳೋಲಾಡಿತ್ತು ರಾಜನ್ಯಕಂ ೪೫

ವ॥ ಅಂತತಿಶಯಮೆನಿಪ ಸಂಗೀತಕ ಪ್ರಸಂಗದೊಳ್

ಹರ್ಷದೊಡನೊಡನೆ ಪುಳಕೋ
ತ್ಕರ್ಷಮನೊಡರಿಸಿದ ಕುತುಕಿಗಳ್ಗೆ ವಿಭೂಷಾ
ವರ್ಷದೊಡನೊಡನೆ ಕಾಂಚನ
ವರ್ಷಂ ಕಱೆದತ್ತು ದಾನಮೇಘದಿನಾಗಳ್ ೪೬

ವ॥ ಅಂತು ಸಾಮಾಜಿಕಸಮಾಜಮಂ ಜಗಜ್ಜನದಾರಿದ್ರ್ಯ ನಿದಾಘಕನಕಮೇಘ ನನೂನದಾನದಿಂ ತಣಿಪಿ ಮಾನ್ಯರಾಜನ್ಯಕಮಂ ತಾಂಬೂಲದಾನಪುರಸ್ಸರಂ ವಿಸರ್ಜಿಸುವುದುಮಾ ಪ್ರಸ್ಥಾವದೊಳ್

ನಾನಾಭೂಷಣ ಕಿರಣವಿ
ತಾನಂ ಕಣ್ಗೊಳಿಸೆ ನಿಯಮಿತಾಸನದಿಂದೆ
ಬ್ದಾನತಕಿರೀಟರವನಿಪ
ಸೂನುಗಳಾಸ್ಥಾನರಂಗದಿಂ ಪೊಱಮಟ್ಟರ್ ೪೭

ವ॥ ಅಲ್ಲಿಂ ಬಟಿಯಂ

ನಗೆಗಣ್ಗೊಸೆ ವಿಳಾಸಮಂ ನಗೆಮೊಗಂ ಲಾವಣ್ಯಮಂ ಬೀಱೆ ಸಾ
ವಗಿಸುತ್ತುಂ ಕಚಬಂಧಮಂ ಶಿಥಿಲನೀವೀಬಂಧಮಂ ಕಾಂಚಿಯೊಳ್
ತೆಗೆಯುತ್ತುಂ ಪ್ರಣಯಾನುಬಂಧಮಖಿಲೋರ್ವೀಶಂಗೆ ಶೃಂಗಾರಚೇ
ಷ್ಟೆಗಳಿಂ ಕಣ್ಗೆಸೆದಿರ್ದುದೆರ್ದು ಕೆಲದೊಳ್ನಿಂದಿರ್ದ ಕಾಂತಾಜನಂ ೪೮

ವ॥ ಅದಲ್ಲದೆಯುಂ

ಪುಳಿನದೊಳಾಡುವಂಚೆಗಳ ನುಣ್ದರದಂತೆ ನಿತಂಬಬಿಂಬಮಂ
ಬಳಸಿದ ನೂಲ ತೊಂಗಲುಲಿ ಕೈಮಿಗೆ ತಾವರೆಯೊಳ್ಪರಾಗಪಾಂ
ಸಳಮೆಳದುಂಬಿಗಳ್ಮೊ ಱೆವಪೊಲ್ಪದನೂಪುರಹೇಮಕಿಂಕಿಣೀ
ಕಳರವಮುಣ್ಮೆ ಬಾಲೆಯರದೇಂ ಪೊಱಮಟ್ಟರೊ ನಾಟ್ಯಶಾಲೆಯಂ ೪೯

ಕೆದಱಿದ ಕಪ್ಪುರವಳುಕಿಂ
ಸುದತಿಯರಲತಗೆಯ ಪಜ್ಜೆಯಿಂ ಮುಡಿಯಿಂ ಸೂ
ಸಿದ ಪುಷ್ಪಮಾಲೆಯಿಂದೆಸೆ
ದುದು ಚಿತ್ರಿಸಿದಂತೆ ಮಧ್ಯಮರಕತರಂಗಂ ೫೦

ವಾರವಿಲಾಸಿನೀಚರಣನೂಪುರನಾದ ನಿತಂಬಸೂತ್ರಘಂ
ಟಾರುತಿ ಯಕ್ಷಕರ್ದಮಮೃಗೋದ್ಭವಚಂದನದಿವ್ಯಸೌರಭಾ

ಸಾರಸಮೀರಣಂ ಕಥಕಗಾಯಕವಾದಕವರ್ಣನಂ ಪ್ರತೀ
ಹಾರಕತರ್ಜನಂ ಪರೆವಿನಂ ಪರೆದತ್ತು ನರೇಂದ್ರನೋಲಗಂ ೫೧

ವ॥ ಅಂತೋಲಗಮಂ ವಿಸರ್ಜಿಸಿ

ಜನನಾಥಂ ವಶ್ಯಾಂಜನ
ಮನಿಸಿದ ಕರವಾಳ ಪೊಳೆವ ನುಣ್ಬೊಗರಿಂದಂ
ತನಗೆ ಬಸಂಮಾಡಿ ಜಯಾಂ
ಗನೆಯಂ ಸೊಬಗಿಂಗೆ ನಾಡೆಯುಂ ಮುಯ್ಯಾಂತಂ ೫೨

ವ॥ ಆ ಮಹೀಭುಜನ ಭುಜಪ್ರತಾಪವಜ್ರತಾಪದಿಂ ಪರನರಪತರುವುನ್ಮೂಲಮಾಗೆಯುಂ ರಿಪುಕದಂಬನಾಟಕಸೂತ್ರಧಾರಿಯ ಗಜಘಟಾಬೃಂಹಿತದಿಂ ಜಯಶ್ರೀಕಲಾಪಿನೀಲಲಿತ-ಲಾಸ್ಯಮೆಸೆಯೆಯುಂ ಕರವಾಳ ಭೈರವನ ಬಾಹುದಂಡ ಮಂಡಲಾಗ್ರವಿದ್ಯುದ್ವಿಳಾಸದಿಂ ವಿರೋಧಿಬಳಮರಾಳಮಂಡಳಂ ಭಯಚಕಿತಮಾಗೆಯುಂ ದಾನವಿನೋದನ ದಾನವರ್ಷದಿಂ ವಿಬುಧದ್ರುಮಕದಂಬಮಂಕುರಿತ ಮಾಗೆಯುಂ ಜಗಜ್ಜನದಾರಿದ್ರ್ಯ-ನಿದಾಘಕನಕಮೇಘನ ದಯಾರಸಪ್ರವಾಹದಿಂ ಜನಾನುರಾಗರಸತರಂಗಿಣಿ ನೆಲೆವೆರ್ಚೆಯುಮಿಂತು ಸಾರ್ವಕಾಲಿಕಮಾದ ನೃಪಚರಿತಮೆಂಬ ಮುಱಿಗಾಲ-ಮನೋಲಗಿಸುವಂತೆ

ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ನುಱಿ ಪುಟ್ಟೆ ಪುಟ್ಟ ಕೇ
ದಗೆಗಳ ಸೊರ್ಕು ಚೇತರಿಸೆ ಚಾದಗೆಗಂ ಚಿರವಾಗ ರಾಗವಂ
ಬೆಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸು ಪುಟ್ಟೆ ಬೆಟ್ಟ ಬೇ
ಸಗೆಯ ಬಿಸಿಲ್ಗೆ ತೀಡಿಮುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ ೫೩

ಪರಿತಾಪಂ ಕಿಡೆ ಪುಳಕಾಂ
ಕುರಮೊದಲೆ ಲತಾಂಗದೊಳ್ ನದೀಲೋಚನೆಗು
ರ್ವರೆಗಾನಂದಾಶ್ರುಗಳು
ಬ್ಬರಮಾದುವು ಪಶ್ಚಿಮಾನಿಳಂ ಸೋಂಕಲೊಡಂ ೫೪

ಪಸುರ್ಗಾವಿಲನಾದ ನೀಪದ
ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರ
ಪ್ರಸವಮುಮಂ ಸೂೞ್ನೋೞಿೊಳ್
ಪಸವಟ್ಟಂದದೊಳೆ ಮುಸುಱೆ ಮುತ್ತಿದುವಳಿಗಳ್ ೫೫

ತಿಳಿಗೊಳದ ಸುತ್ತಲುಂ ಕ
ಣ್ಗೊಳಿಸಿತು ತಳತಳಿಸುವೆಳಗಱುಂಕೆಯ ಗಱಿತ

ಚ್ಚಿಳವಸಲೆ ಪೂರ್ಣಶಶಿಮಂ
ಡಳಮಂಡನಮಾದ ಹರಿತಪರಿವೇಷದವೊಲ್ ೫೬

ರತಿಯ ಕಟಾಕ್ಷದೊಳ್ಸೆಣಸೆ ತನ್ನ ಪೊದಟ್ಟಿಸಟ್ಟಿಳ್ಮಧುವ್ರತ
ಪ್ರತತಿಯನಾತ್ಮಸೌರಭದ ಸಂಕಲೆಯಿಂ ಸೆಱೆಗೆಯ್ದು ಕಂತು ನಿ
ರ್ಮಿತಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತೆ ವೀಕ್ಷಣಾ
ಮೃತಮಯಕಂದಳಂ ಪೊಸತರಲ್ದುದು ಕೇದಗೆ ಮೇಘಕಾಲದೊಳ್ ೫೭

ವ॥ ಅಂತು ಘನಸಮಯಪ್ರವೇಶಮಖಿಲ ಭುವನಜನಮನೋವಿಕಾಸಕ್ಕವಕಾಶಮಾಗೆ

ಅಪರಾಂಭೋರಾಶಿವೇಳಾವನಮಮರಪುರೋದ್ಯಾನಮಂ ನೋಡಲೇಟ್ತಿಂ
ದಪುದೋ ನೀಲಾಚಲಂಗಳ್ಕುಲಪರಿಭವಮಂ ಪಿಂಗಿಸಲ್ನಾಕಲೋಕಾ
ಧಿಪನೊಳ್ಮೇಲೆತ್ತಿ ಕಾದಲ್ಪೆರೆದುವೊ ವಡವಾಭೀತಿಯಿಂ ಮೇಣ್ಸರಣ್ಬೊ
ಕ್ಕಪುದೋ ನೀರಾಕರಂ ವ್ಯೋಮನೆನೆ ನೆಗೆದತ್ತಂದು ನೀಳಾಭ್ರಜಾಳಂ ೫೮

ಪಡುವಣ ಕಡಲಿಂದೊಗೆದುದು
ಬಡಬಾಗ್ನಿಯ ಪೊಗೆ ಪೊದಟ್ದಿ ಕಿಡಿವೆರಸೆನಲೇಂ
ಕುಡುಮಿಂಚುವೆರಸು ಗಗನಮ
ನಡರ್ದುದು ನೀರಂಧ್ರನೀಳನೀರದನಿವಹಂ ೫೯

ಪೊತ್ತುವ ವಡವಾಗ್ನಿಯ ಪೊಗೆ
ಸುತ್ತಿದೊಡುಮ್ಮಳಿಸಿ ಕರ್ಗಿ ಪಡುವಣ ಕಡಲೊಳ್
ನಿತ್ತರಿಸದೆ ನೆಗೆದುವು ಜಳ
ಮತ್ತದ್ವಿಪಘಟೆಗಳೆನಿಸಿದುವು ಘನಘಟೆಗಳ್ ೬೦

ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ತೋರಣಂಗ
ಟ್ಟಿದುದೋ ಮೇಣ್ಪಂಚರತ್ನಾವಳಿವಿಲಸಿತಮಂ ಕಂಠಿಕಾಮಾಲೆಯಂ ಕ
ಟ್ಟಿದಳೋ ದಿಗ್ದೇವಿ ಮೇಣ್ ರನ್ನದ ಪೊರಜೆನವಾಂಭೋದಮಾದ್ಯದ್ಗಜಕ್ಕಿ
ಕ್ಕಿದುದೋ ಪೇೞಿಂಬಿನಂ ಕಣ್ಗೆಸೆದುದು ಶಬಳಚ್ಛಾಯೆಯಿಂ ಶಕ್ರಚಾಪಂ ೬೧

ವಸುಧಾವಲ್ಲಭೆ ಮೇಘಕಾಲವಿಟನೊಳ್ಸಂಭೋಗಮಂ ಮಾಡೆ ಬ
ಣ್ಣಸರಂ ಪೊರ್ಕುೞಿಯಿಂದ ಮೇ ಪಜೆದು ಸೂಸಿತ್ತಲ್ಲದಂದೆತ್ತಣಿಂ
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗಿಂಬಾದುವೆಂಬಂತದೇ
ನೆಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ೬೨

ನೆಗೆದ ಮುಗಿಲ್ವೊಯ್ಲಿಂ ತಾ
ರಗೆಗಳ್ಪಿರಿದೊಡೆದು ಸೂಸಿದಪ್ಪುವೆನಲ್ ಮಿಂ
ಚುಗಳಿಕ್ಕುವ ತತ್ತಿಗಳೆನ
ಲುಗುತಂಮುವು ತುಱುಗಿ ತೋಱವನಿ ಪೊಸಗಾರೊಳ್ ೬೩

ತೀಡುವ ಪಶ್ಚಿಮಾನಿಳನ ತೀಟದೊಳುತ್ಕಟಮಾಗೆ ರಾಗಮಿ
ರ್ಪೋಡಿವ ಚಂಚುವಂ ತೆಱೆದೆಱಂಕೆ ಸಡಿಲ್ವಿರೆ ಕಂಠನಾಳಮಂ
ನೀಡಿ ವಿಯತ್ತಳಕ್ಕೊಗೆದು ಕಾರಮುಗಿಲ್ವನಿಯಂ ಮನಂ ಕುಳಿ
ರ್ಕೋಡುವಿನಂ ಕರ್ದುಂಕಿ ನಲಿದಾಡಿದುದಾಡಿದುದೊಂದು ಜಾತಕಂ ೬೪

ರಾಗದ ಬಳ್ಳಿ ಚಾದಗೆಗೆ ಕಾಂಚನಚಂಚಳಲಾಸ್ಯನಿರ್ಝರಂ
ಸೋಗೆನವಿಲ್ಗೆ ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗದೊಳಂದು ಬಿತ್ತರಿಸಿವತ್ತು ತಟಿಲ್ಲತೆ ಲಾಸ್ಯಲೀಲೆಯಂ ೬೫

ಬಿಡೆ ಕೆಮ್ಮನೆ ಗರ್ಜಿಪ ತ
ಕ್ಕಿಡೆ ತಗದೆಡೆಯೆನ್ನದೆಱಗುವಸ್ಥಿರಮಪ್ಪಾ
ಜಡಮಚಿರಪ್ರಭೆ ನಿಮಿಷದೊ
ಳಡಂಗುಗುಂ ಬೆಳಗದೆಂದುಮದು ಸತ್ಪಥಮಂ ೬೬

ಘನಗರ್ಭಾಶಾವಘೂರ್ಪುಂ ಸವನದೆಸೆವ ತೂರ್ಯಸ್ವನಂ ಚೂಳಿಕಾ ವ
ರ್ಧನಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿ ಪಾತೋದ್ಯಘೋಷಂ ವಿಘೂರಾ
ವನಿಯೊಳ್ವೈಘೂರ್ಯರತ್ನಂ ಜನಿಯಿಸೆ ನೆಗೞ್ದಾನಂದಭೇರೀರವಂ ತಾ
ನೆನೆ ರೋದೋಭಾಗದೊಳ್ಘೂರ್ಣಿಸಿದುದಭಿನವಾಂಭೋದಗಂಭೀರನಾದಂ ೬೭

ಘನನಿನದಂ ಭಯ ರಸಮಂ
ಜನಿಯಿಸೆ ನೆನೆಯಿಸಿದರಂದು ಕಳಹಂಸಕುಟುಂ
ಬಿನಿಯಂ ಪ್ರಿಯವಿರಹಾಲಂ
ಬಿನಿಯರ್ಪುದುವೆನಿಪ ಮನದೊಳಂ ಗಮನದೊಳಂ ೬೮

ಘನದೊಡ್ಡಣಕ್ಕೆ ನಿಲಲ
ಳ್ಕಿ ನಿದಾಘಂ ಕಾಯ್ಪುಗೆಟ್ಟು ಬೆನ್ನೀವುದುಮಾ
ತನ ಭೀತಿಗೆ ಬೊಬ್ಬಿಱೆದಪು
ವೆನೆ ಪುದಿದತ್ತೊದವಿ ದರ್ದುರಪ್ರಬಲರವಂ ೬೯

ಉಗುಳುತ್ತುಂ ಸಿಡಿಲೆಂಬ ತೋಱಕಿಡಿಯಂ ಕಾಲೂಱೆ ಭೂಭಾಗದೊಳ್
ಗಗನಾಭೋಗಮನೆಯ್ದೆ ನೀಳ್ದು ಘನವೇಣೀಬಂಧಮಂ ಬಿರ್ಚೆ ಮಿಂ
ಚುಗಳೆಂಬುಳ್ಕುವ ದಾಡೆಗಳ್ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯಂ ಬೆರ್ಚೆ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ೨೦

ಮದಮದಿರಾಪ್ರಮತ್ತನ ಜಡಾಶಯದಂತೆ ಜಡಾಶಯಂ ಕಲಂ
ಕಿಮುದು ಮನೋಜದೀಪಕಳಿಕಾನನದಂತಿರೆ ಕಾನನಂ ಕಱಿಂ
ಗಿಮುದು ವಿರೋಧಿವಾಹಿನಿಗಳಂತಿರೆ ವಾಹಿನಿಗಳ್ಕಡಂಗಿ ಮೀ
ಱಿದುವನುಕೂಲಮಾರ್ಗವನದೇಂ ಮೞೆಗಾಲವಳುಂಬಮಾದುದೋ ೨೧

ನವವಿಧವಪ್ಪ ಕಣ್ಬೊಳೆಪು ರಂಜಿಸೆ ಸಂಚಳಿತಾಂಗಹಾರದಿಂ
ವಿವಿಧಘನಸ್ವನಕ್ಕೆ ನವಿಲಾಡೆ ಘನಾಗಮಲಕ್ಷ್ಮಿ ಕೇತಕೀ
ಧವಳಕಟಾಕ್ಷೆ ಕಂಡು ರಸಮಗ್ನತೆಯಿಂ ಪುಳಕಾಂಕುರಂಗಳ
ತ್ಯವಿರಳಮಾಗೆ ಕೊಟ್ಟಳಚಿರಪ್ರಭೆಯೆಮಬ ಸುವರ್ಣಮಾಲೆಯಂ ೨೨

ಇಂದೊವರೆನಿಸಿದ ತನಿರಸ
ದಿಂದೊದವಿದೆ ನೀಳಪಾಟಳಚ್ಛವಿಯಿಂ ನು
ಣ್ಪಿಂದೆಸೆವರನೇಱಲ ಪ
ಣ್ಣಿಂದರಗಿಳಿಗಾಮ್ರದೊಲವನೇಂ ತೊಲಗಿಸಿತೋ ೨೩

ಮಾಕಂದಂ ಫಲಹೀನಮಾದ ಪದದೊಳ್ ಜಂಬೂಫಲಾಸ್ವಾದನ
ಸ್ವೀಕಾರೋತ್ಸವದಿಂದದಂ ಮಱೆದ ಕೀರಪ್ರೌಢಿಯಂ ಕಾಣ್ಬುದ
ಲ್ತೇಕಗ್ರಾಹಿ ಕನಲ್ದು ಚೂತಕಳಿಕಾಸ್ವಾದವ್ಯವಚ್ಛೇದದಿಂ
ಮೂಕೀಭಾವಮನಪ್ಪುಕೆಯ್ದುದು ವಿವೇಕವ್ಯಾಕುಳಂ ಕೋಕಿಳಂ ೨೪

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳಮೊಡಲಿಂಬಿಲ್ಲೆನಲ್ ಕೊರ್ಬಿ ಕೆಚ್ಚ
ಲ್ಕುಸಿವನ್ನಂ ಪೆರ್ಚೆ ಪಾಲಂಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ
ಪೊಸಗಾರೊಳ್ತಾರಲೊಳ್ ಕಣ್ಣರೆಮುಗುಟ್ದಿರೆ ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ೨೫

ಸುರಿವ ಮೞೆಗಳ್ಕಿ ಗಿರಿಕಂ
ದರದೊಳ್ ಮಡಗಿಟ್ಟು ತಮ್ಮ ಶಾಬಕದಂಬ
ಕ್ಕರೆಗರ್ಚೆ ಹರಿತದೂರ್ವಾಂ
ಕುರಮಂ ಕೊಂಡುಯ್ವುದಂದು ಹರಿಣೀಯೂಥಂ ೨೬

ಭೋರೆಂದೆಱಗುವ ಜಲಧರ
ಧಾರಾಪುಷ್ಕರದಿನಾತ್ಮ ಕರಪುಷ್ಕರಮಂ
ಪೂರಿಸಿ ಸಿಂಪಿಣಿಯಂ ಕಾಂ
ತಾರದೊಳಾಡಿದುವು ಕರಿಗಳುಂ ಕರಿಣಿಗಳುಂ ೭೭

ವ|| ಅಂತಪಗತಹೀನಾಧಿಕಸ್ವಭಾವಮೆನಿಪ ಘನಸಮಯಮನತಿಕ್ರಮಿಸಿ ಮೊಲ್ಲೆ ಪೂಗುಡಿಯಂ ಪಲ್ಲಟಿಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ ಜಾವಗೆ ನವೋದಬಿಂದುಕಣಭಕ್ಷಣವ್ರತಮನುಜ್ಜಯತಿಸೆಯುಂ ಸೋಗೆನವಿಲ ಪಿಂಡು ತಾಂಡವಕ್ಕಲಸೆಯುಂ ಹಂಸಮಂಡಳಿ ಮೃಣಾಳಕಾಂಡಮಂ ಸವಿದು ಸೊರ್ಕೆಯುಂ ಗಿರಿದರೀವನಕ್ಕೆ ನಿರ್ಝರಜ ಲಾಭಿಷವಣಮನೊಡರ್ಚೆಯುಂ ಪೊನ್ನೆ ಪೊಸನನೆಯ ಪಸವನದಿಸೆನೆಯೆಯುಂ ಪೊಂದಾವರೆಯುಮಂದ ಮಕರಂದ ದಿನಳಿಗೆ ಬಳಿಯಟ್ಟೆಯುಮತಿಪ್ರಕಾಶಮಾದ ಶರತ್ಪ್ರವೇಶದೊಳ್

ಪೆರೆಯಿಕ್ಕಿ ಪೋದುವಚಿರಾಂ
ಶುರಸನಗನಕಾಲವಿಷಧರಂಗಳ್ ಗಗನೋ
ದರಗಹ್ವರದೊಳೆನಲ್ತರ
ತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್ ೭೮

ಇರುಳಿಂದುವಿನೊಡವೋಗದ
ಶರದದ ಬೆಳ್ದಿಂಗಳ ಹಿಮಕರಕರತಪ್ತಂ
ತೆರಳೆ ಕೆನೆಗಟ್ಟಿದಂತಿರ
ಪೊರವೊರಗೊಂಡಿರೆ ಮುಗಿಲ್ವಗಿಲ್ತುವು ನಭದೊಳ್ ೭೯

ದೇ ಪಮೀನಮೇಷವೃಷಭಾದಿಗಳಂ ಕ್ರಮದಿಂ ದಿನಾಧಿಪಂ
ಸೇವಿಸಿ ಮತ್ತೆ ಕನ್ನೆಯೊಡಗೂಡಲೊಡಂ ಕಿಡೆ ತನ್ನ ತೇಜಮಿ
ನ್ನಾವುದೊ ಕಜ್ಜಮೆಂದು ತೊಲೆಯಂ ಜನರಂಜನೆಗೇಱೆ ತೇಜಮಂ
ಭೂವಲಯಕ್ಕೆ ಬೀಱೆದನಿದೇಂ ಪ್ರಭು ಮಾಡಿದ ಮಾಯೆ ಸಲ್ಲದೇ ೮೦

ಈಂಗಡಲೊಳಗೋಲಾಡುವ
ಮೀಂಗಳ ಬಳಗಂಗಳೆಂಬಿನಂ ಶರದದ ಬೆ
ಳ್ದಿಂಗಳಲಾಡಿದುವು ಚಕೋ
ರಂಗಳ್ ಚಂದ್ರಾಂಶುಪೂರ್ಣಚಂಚುಪುಟಂಗಳ್ ೮೧

ಬಳಸಿ ಸುಟೆದಾಡಿ ಕಾಲ್ವಿಡಿ
ದಳಸಿ ಕಳಾಳಾಪಮೊದವೆ ಜನನಿಯ ಮೊಲೆವಾ

ಲ್ಗ ಳನುಣ್ಬ ಸಿಸುವಿನಂತಿರೆ
ಕಳಮೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ ೮

ದೂರದೊಳೀಕ್ಷಿಸಿ ತುಂಗಾ
ಕಾರದೊಳೊಂದಿದ ಋಜುತ್ವಮಂ ಪದೆದೆಳಸಿ
ತ್ತಾರಯ್ದು ನೋಡದಂತ
ಸ್ಸಾರತೆಯಂ ಕಾಶಕಣಿಶಮಂ ಶುಕಶಾಬಂ ೮೩

ಕಿಡಿಸಿ ಕಳಂಕಪಂಕದೊದವಂ ಸಮಯೋಚಿತಬಂಧುಜೀವದೊಳ್
ಪಡೆದು ವಿಕಾಸಮಂ ನಿಲೆ ದಿಗಂಬರನಿರ್ಮಲವೇಷಮೊಂದೆ ತ
ನ್ನೊಡನನುಕೂಲವರ್ತನೆ ಸರಸ್ವತಿಗಾತಪಯೋಗದೊಳ್ಪೊಡಂ
ಬಡೆ ಶರದಾಗಮಂ ನೆನೆಯಿಸಿತ್ತು ಜಿನಾಗಮದಿವ್ಯಯೋಗಿಯಂ ೮೪

ವ॥ ಅಂತು ಪಸರಿಸಿದ ಶರತ್ಸಮಯದೊಳೊಂದು ದಿವಸಂ ವೈಶ್ರವಣವಲ್ಲಭಂ ನಿಜರಾಜ್ಯಶ್ರೀಯ ಯೌವನವನಕ್ರೀಡಾಚಲಕ್ಕೆ ದೊರೆಯೆನಿಪ ಕರುಮಾಡದೆರಡನೆಯ ಮರಕತಮಧ್ಯರಂಗದೊಳಿಕ್ಕಿದ ಮಣಿಖಚಿತ ಕನಕಪೀಠದೊಳಿರ್ಪುದುಂ

ಸುಲಿದೆಳೆಯಡಕೆಯ ಪೊಗರಂ
ಗೆಲೆ ತೋಳ ಮೊದಲ್ ವಲಿತ್ರಯಂ ಕಿಡೆ ತಟಿಪ್ಪೊ
ಯ್ದುಲಿಯೆ ಮಣಿವಲಯಮೆರಡುಂ
ಕೆಲದ ವಿಲಾಸಿನಿಯರಿಕ್ಕಿದರ್ಚಾಮರಮಂ ೮೫

ದ್ವಿಗುಣಿಸೆ ಚಮರಜಮಂ ಪೊಳೆ
ವುಗುರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತ
ಟಿಸ್ತೊಗೆವಮಶುಮಾಲೆ ಮೇಗ
ಣ್ಣೊಗೆಯೆ ಕುಚಾಭೋಗಮಿಕ್ಕಿದರ್ ಚಮರಜಮಂ ೮೬

ಮನದನುರಾಗಮನೀ ಕಾ
ಮಿನಿ ತನ್ನಂಗೈಯೊಳಿಕ್ಕಿ ತೋಜಿದಳರಸಂ
ಗೆನೆ ಪಿಡಿದಿರ್ದಳ್ ಮಣಿಭಾ
ಜನರಂಜಿತಕುಂಕುಮಾಂಗರಾಗಮನೊರ್ವಳ್ ೮೭

ವ॥ ಮತ್ತೊರ್ವಳ್

ವದನಾಬ್ಜಗಂಧಮಂ ಮೃಗ
ಮದಗಂಧಮನೋಂದನೊರ್ಮೆ ಸೂಟ್ಯೊಟೊಳ್ ಮಾ

ಇದೆ ಸವಿಯೆ ತುಂಬಿಗಳ್ ಮೃಗ
ಮದಶುಕ್ತಿಕೆಯಂ ವಿಲಾಸವತಿ ಪಿಡಿದಿರ್ದಳ್ ೮೮

ಮದನನ ಕೆಲದೊಳ್ ಪೂವಿನ
ಪೊದೆಯಂಬಂ ಪಿಡಿದು ನಿಂದು ರತಿಗಂ ತನಗಂ
ಪುದು ಬೆಲುವೆನೆ ಭೂಪನ ಪಾ
ರ್ಶ್ವದೊಳಿರ್ದಳ್ ಪುಷ್ಪಮಾಲ್ಯಧಾರಿಣಿಯೊರ್ವಳ್ ೮೯

ಸಿರಿಸದ ಮಾಲೆಯೊಳ್ತೊಡದೇ ನೆಯ್ದಿಲ ಮಾಲೆಯೊ ಪದ್ಮಕೋಶದೊಳ್
ಮೊರೆಯದೆ ನೀಳ್ದ ತುಂಬಿಗಳ ಮಾಲೆಯೊ ಚಂದನಶಾಖಿವತ್ತ್ರಿನಿಂ
ದುರಗಿಯೊ ಪೇೞಿನಲ್ ನೃಪನ ದಕ್ಷಿಣಪಾರ್ಶ್ವದೊಳೊಪ್ಪಿತೋರ್ವ ತ
ತ್ತರುಣಿಯ ಕೈಯ ಖಡ್ಗಲತೆ ಮೂವಡಿಸಿತ್ತು ಮನಕ್ಕೆ ಮೂರ್ಛೆಯಂ ೯೦

ಇನಿಸಂ ಚಂದ್ರಮರೀಚಿಮಾಳಿ ಪಗಲಂ ಮಾರ್ಕೊಳ್ಳುಗುಮೇ ಬೞಿಮಿಂ
ಚಿನಿಸಂ ನಿಶ್ಚಲಮಾಗಿ ನಿಲ್ಕುಮ ವಿಲಕ್ಷ್ಯಂ ತಾನಿದೆಂಬನ್ನಮೋ
ಹನಮಂ ಪುಟ್ಟಿಸಿ ತನ್ನ ದಿಟ್ಟಿವೆಳಗಿಂ ಸುಣ್ಣೆಟ್ಟು ಕೊಟ್ಟಳ್ ಘನ
ಸ್ತನಘಾರಾವನತಾಂಗಿ ವಿಸ್ಮಯಪದವ್ಯಾಹಾರಮಂ ಹಾರಮಂ ೯೧

ಒಂದೆಲೆವೋದಶೋಕೆಯೆರಡೊಳ್ಗುಡಿವೋದ ತಮಾಳಷಂಡದೊಳ್
ಮಂದಸಮೀರನಿಂ ಪೊಳಪವೊಲ್ ತಳಮುಂ ನಳಿತೋಳುಮಂದಮಂ
ಮುಂದಿಡೆ ಪಿಕ್ಕಿ ಪಿಕ್ಕಿ ಪುಡಿಗತ್ತುರಿಯಂ ತಳಿದಳ್ ಪೆಱಿಳ್ ಲತಾ
ಸುಂದರಿ ಕಾಮಪಾಶದವೊಲಿರ್ದವನೀಶನ ಕೇಶಪಾಶದೊಳ್ ೯೨

ವ|| ಅಂತು ನಿಜನಿತಂಬಿನಿಯುರ ಪಿಡಿಪ ಪೊನ್ನ ಸಿಪ್ಪಿನೊಳ್ ರನ್ನದ ಪಡಲಿಗೆಯೊಳಮಿರ್ದನರ್ಘರತ್ನಾಭರಣಸುಗಮಧಾನುಲೇಪನಸುರಭಿಸುಮನೋದಾಮುಸುರುಚಿರವಸನಂಗಳಿಂದಳಂಕರಿಸಿ

ಪೊರೆಯೆತ್ತಿದ ಬೆಳ್ದಿಂಗಳ
ಪೊರೆ ಗಂಗೆಯ ಪೊನ್ನಲೊಳೊಗದ ತಗೆ ಶೇಷನ ಮು
ಯ್ವರೆಯೆನಿಪ ನವದುಕೂಲಾಂ
ಬರಕ್ಕೆ ಪರಭಾಗಮಾಯ್ತು ದೇಹಪ್ರಭೆಯಿಂ ೯೩

ವಿಕಟಮಕುಟಸ್ಫುರದ್ರ
ತ್ನಕಳಾಪೋನ್ಮುಖಮಯೂಖಮಂಡಳಿ ಜೇಱಿಸೊಂ
ದಕೃತಕಚಿತ್ರಚ್ಛತ್ರ
ಪ್ರಕಾರದಿಂ ಮಱಿದುದೀಕ್ಷಣಾಕರ್ಷಣಮಂ ೯೪

ಮರಕತಮಣಿಕುಂಡಳರ
ಶ್ರೀರೇಖೆಯಿಂ ಗಂಡಮಂಡಳಂ ಶೈವಾಳಂ
ಬೊರೆದ ಕನಕಾಬ್ಜದಳದಂ
ತಿರೆ ಕಣ್ಗೆಸೆದಂ ನರೇಂದ್ರಚೂಡಾರತ್ನಂ ೯೫

ಉಭಯಪ್ರಕೋಷ್ಠ ಶಾಖಾ
ಸುಭಗಧನುರ್ಗುಣಕಿಣಂಗಳುಂ ಮಣಿಮುದ್ರಾ
ಪ್ರಭೆಯುಂ ಗೆಲೆವಂದುವು ಬಾ
ಷ್ಪಭುಜಂಗನ ಕೊರಲ ಕಱೆಯ ಫಣಾಮಣಿರುಚಿಯಂ ೯೬

ಉರದಿಂ ತೊಲಗದ ಲಕ್ಷ್ಮಿಯ
ಕರಯುಗಳದೊಳಿರ್ದ ಹಾರನಾಳದ ಬೆಳ್ದಾ
ವರೆವೊಗಳಿವೆನ್ನದರಾ
ರರಸನ ಭುಜಶಿಖರಚಂದನಸ್ಥಾಸಕಮಂ ೯೭

ತೊಳಗುವ ನಿಸ್ತುಳಮುಕ್ತಾ
ವಳಿ ನೃಪನ ವಿಶಾಲವಕ್ಷದೊಳ್ ಸೊಗಯಿಸುಗುಂ
ಕಳಧೌತಗಿರೀಂದ್ರಶಿಲಾ
ತಳದೊಳ್ ವಿಶ್ರಮಿಸಿ ಪೊಳೆವ ತಾರಾವಳಿವೋಲ್ ೯೮

ಕಟ್ಟಿದ ಪಟ್ಟಿಕೆಯೊಳೊಡಂ
ಬಟ್ಟಿರೆ ಪೊಂಜುರಿಗೆ ಪೊಳೆವ ಪೊನ್ನೊಱೆಯ ಬೆಡಂ
ಗಿಟ್ಟಲಮೆಸೆದಿರೆ ಮದನನೆ
ಬಟ್ಟಿಗೆಯೊಳ್ಕಿಟ್ಟವಿಟ್ಟವೊಲ್ ನೃಪನೆಸೆದಂ ೯೯

ವ॥ ಅಂತು ಕಯ್ಗೆಯ್ದು ಕರುಮಾಡದ ಮೊಗಸಾಲೆಗೆ ಬಿಜಯಂಗೆಯ್ದು ಮಾಣಿಕದ ಮತ್ತವಾರಣದೊಳಿಕ್ಕಿದ ಮುತ್ತಿನ ಬಿತ್ತರಿಗೆಯೊಳ್ಕುಳ್ಳಿರ್ದು ಪೊಳೆವ ಪಳುಕಿನ ಕಂಬಮಂ ಮಲಂಗಿ ಮೇಳದ ವಿಳಾಸಿನಿಯರ ಪರ್ಯಂಕತಳಮಂ ಚರಣತಳದಿನಳಂಕರಿಸಿ ತಾಂಬೂಲವಾಹಿನಿ ಕುಡುವ ಕಪ್ಪುರವಳ್ಳಿಯ ಬಿಳಿಯೆಲೆಯ ಬೀಳೆಯಕ್ಕೆ ಕರಸರೋಜಮಂ ನೀಡಿ ಮನೋಜಲೀಲೆಯುನವಕರ್ಣಿಸಿ ಕರ್ಣಾಂತವಿಶ್ರಾಂತ ಲೋಚನಂಗಳಂ-ತಸ್ಫಾರಿತಂಗಳಾಗೆ ದಿಗವಲೋಕನಂಗೆಯ್ದು

ಕಳವೆಯ ಕೆಯ್ವೊಲಂಗಳ ಪಸುರ್ಪು ದಿಶಾಪಟಳಕ್ಕೆ ಪದ್ಮಿನೀ
ದಳದ ಪಸುರ್ಪು ಪೆಗಱೆಗೆ ತಱ್ತಿಳವುಲ್ಲ ಪಸುರ್ಪು ಶೈಳಮೇ

ಖಿಳಿಗೆ ಶುಕಪ್ರತಾನದ ಪಸುರ್ಪು ವಿಯದ್ವಳಯಕ್ಕೆ ಪಚ್ಚೆಯಿಂ
ವಿಳಸಮನಿಕ್ಕಿದಂತೆಸೆಯೆ ಭೂಪತಿ ಮೆಚ್ಚಿ ಶರದ್ವಿಳಸಮಂ ೧೦೦

ವ॥ ಅಂತು ಬೆಳ್ಮುಗಿಲ ತೆಳ್ಪಿನಿಂ ಪಳಚ್ಚನಾದ ವಿಯಚ್ಚಕ್ರಮಂ ಕೆಸರ್ಮಸುಳ್ವು ಪಸಲೆಗವಿದ ಧರಾಚಕ್ರಮನಾತ್ಮೀಯಚಿತ್ತಪ್ರಶಸ್ತಿಯಂ ಪಡೆಯೆ ನಿಜಕ್ರೀಡಾಶೈಲದ ಬಯಲೊಳ್ ನೆಲಸಿ ಚತುರಂಗಬಳಪ್ರಬಳಭಾರಭಗ್ನಭೋಗೀಂದ್ರ ಫಣಾಸಹಸ್ರಫೂತ್ಕಾರವಮಂ ಕೇಳಲುತ್ಕಂಠನಾಗಿ ಪಡೆಯಂ ಪಣ್ಣಿ ಬರವೇೞ್ಕೆಂದು ಬಳಾಧ್ಯಕ್ಷಂಗೆ ಬೆಸಸುವುದುಂ

ಒಡೆದುದೊ ಕೂರ್ಮಪೃಷ್ಠವಹಿರಾಜವರಿಷ್ಠತನುಪ್ರತಿಷ್ಠೆಯಿಂ
ದುಡಿದುದೊ ಶೇಷಕಂಠಕಠಿಣಾಸ್ಥಿ ಧರಾಧರದಿಂ ಕುಳಾಚಳಂ
ಪಿಡಿಗಿಮುದೋ ಸಿಡಿಲ್ಪೊಡೆದು ಭಾನುರಥಂ ಕೆಡೆದತ್ತೊ ಧಾತ್ರಿಗ
ಚ್ಚುಡಿದೆನೆ ತೀವಿದತ್ತು ಗಗನೋದರಮಂ ಘನದುಂದುಭಿಸ್ವನಂ ೧೦೧

ವ॥ ಆ ಧ್ವನಿಯಂ ಕೇಳಲೊಡಂ

ಘನಘಂಟಾಘೋರನಿರ್ಘೋಷಣಚಕಿತದಿಶಾಸಿಂಧುರಂ ಚಂಚಳತ್ಕೇ
ತನಚಕ್ರಾಚ್ಛಾದ್ಯಮಾನುದ್ಯಮಣಿ ಮದನಳಾಸಾರದಾರಾವಳೀದು
ರ್ದಿನಮುದ್ವೃತ್ತಕರ್ಣತಾಳಾನಿಳಚಕಿತಚತುಸ್ಸಾಗರಂ ಗಾತ್ರವಿಕ್ಷೇ
ಪನತಕ್ಷೋಣೀತಳಂ ಬಂದುದು ಘನಘಟೆಯಂ ಮುಟ್ಟೆ ಮತ್ತೇಭಸೈನ್ಯಂ ೧೦೨

ಅವಿಧೇಯಕ್ಷತ್ರಸಂವರ್ತನಸಮಯಪರಿಕ್ಷುಬ್ಧವಾರಾಶಿವೀಚೀ
ನಿವಹಂ ಮರ್ಯಾದೆಯಂ ದಾಂಟಿದುದೆನೆ ನಿಜ ಹೇಷಾರವವ್ಯಾಪ್ತ ರೋದೋ
ವಿವರಂ ಪಲ್ಯಾಣನಿರ್ಯನ್ಮಣಿಕಿರಣತಟಿದ್ವಲ್ಲರೀವೇಷ್ಟಿತಂ ವಾ
ಹವಸಂಖ್ಯಾತಪ್ರವಾಹಂ ನೆಱೆದುದು ಸಮರೋತ್ಸಾಹಸನ್ನಾಹವಾಹಂ ೧೦೩

ಗಣನಾತೀತಮೆನಲ್ ಮಹಾರಥಧನುರ್ಜ್ಯಾಘಾತಗಂಭೀರಘೋ
ಷಣಮುಜ್ಜೃಂಭಿತಚಕ್ರಚೀತ್ಕೃತರವಂ ಜಾತ್ಯಶ್ವಹೇಷಾಪ್ರತಿ
ಕ್ವಣಿತಾಶಾಮುಖಮುನ್ನಮದ್ಧ್ವಜಪಟಚ್ಛನ್ನಾಂಬರಂ ಬಂದು ಸಂ
ದಣಿಸಿರ್ದತ್ತಸುಹೃದ್ಧಯಾನರಕಸಪ್ರಸ್ಯಂದನಂ ಸ್ಯಂದನಂ ೧೦೪

ಪ್ರಬಳಜ್ಯಾಟಂಕೃತಂ ನಿಷ್ಠುರಗುಣಕಿಣಲೇಖಾಪ್ರಕೋಷ್ಠಂ ಪೃಥಸ್ಕಂ
ಧಬ್ಬೃಹತ್ತೂಣೀರಬಂಧಂ ಶರಧಿಶರತನುತ್ರಾಂಗುಳಿತ್ರಾಣರೋಚಿ
ಶ್ಯಬಳಂ ಕಲ್ಪಾಂತಕಾಲಭ್ರುಕುಟಿಳಮೆನೆ ಕೋದಂಡದೋರ್ದಂಡಧಾನು
ಷ್ಕಬಳಂ ತೂಗುತ್ತುವಂಬಂ ನೃಪಭವನಪುರೋಭಾಗದೊಳ್ ನಿಂದುದಾಗಳ್ ೧೦೫

ಪರಚಕ್ರವಿಳತಕಾರಣ
ಪರಂಗಳಿವೆ ಧೂಮಕೇತು ನೆಗೆದುವೆನಲ್ ಭೀ
ಕರಮಾದುವು ಕುಂತಂಗಳ್
ವಿರೋಧಿಗಜಕುಂಭಮೌಕ್ತಿಕೋದ್ಧಂತಂಗಳ್ ೧೦೬

ಆಂತವರಂ ತವೆ ತಿಂಬ ಕೃ
ತಾಂತನ ಕುಡುದಾಡೆಯಂತೆ ಕಡಿತಲೆ ಪಲವುಂ
ತಿಂತಿಣಿಯೆನೆ ಕಲ್ಪಾಂತ ಕೃ
ತಾಂತನ ಪಡೆಯಂತೆ ಪಡೆದುದಣೆ ಸಂದಣೆಯಂ ೧೦೭

ವ|| ಅಂತವಿಶ್ರಾಂತಮಾದ ನದೀಪ್ರವಾಹವರ್ಷಧರಪರ್ವತಂಗಳೆನಿಸಿ ದಿರ್ಪತ್ತೊಂದು ಲಕ್ಕ
ಭದ್ರಹಸ್ತಿಯುಂ ಮಧ್ವರಧೂಮಧ್ವಜವ್ಯಗ್ರ್ಯಳೂಕರವಳಭವ
ಬಾಷ್ಪಸಂಚಾರಿಜಯಶ್ರೀಶಾರಿಕಾವಜ್ರಪಂಜರಂಗಳೆನಿಸಿದಿರ್ಪತ್ತೊಂದು ಲಕ್ಕೆ ರಥಮುಂ
ನಿರ್ಜಿತಾನೇಕಪ್ರತ್ಯನೀಕಮೆನಿಸಿದಿರ್ಪತ್ತೊಂದು ಕೋಟಿ ವೀರಭಟರುಂ ನೆಲಂ
ಬೆಸಲೆಯಾದಂತೆ ನೆರೆದು ನಿಲ್ವುದುಮಾ ಪ್ರಸ್ತಾವದೊಳುದ್ದಂಡಹುಂಡಳಮಮು
ಡಕ್ಕಾಹುಡಕ್ಕಪಣವಮುರವ ಜಯಘಂಟಾಝಲ್ಲರೀಮೃದಂಗವಂಶಕಾಂಸ್ಯತಾಳ
ಧವಳಶಂಕಕಾಹಳಕೋಳಾಹಳಬಧಿರೀಕೃತಬ್ರಹ್ಮಾಂಡಮುದ್ದಂಡಕನಕದಂಡವಿಚಿತ್ರಾತ
ಪತ್ರಪಾಳಿಕೇತನಪಿಹಿತಮಿಹಿರ ಕರಸಹಸ್ರಮುನ್ನತಕಿರೀಟಮನೀಗಣಮರೀಚಿ
ವಿರಚಿತಸುರಶರಾಸನ ಸಹಸ್ರಮಷ್ಟಸಹಸ್ರಮಕುಟಬದ್ಧಸಮಾಜಮಾನತಶಿರಸ್ಸರೋಜಂ
ರಾಜವೀಧಿಯೊಳ್ಮಂಡಳಿಸಿ ನಿಂದು ವೈಶ್ರವಣಮಹಾಮಂಡಲೇಶ್ವರ ಭ್ರೂಲತಾದೇಶದಿಂ
ಬಹಿಃಪುರಾಭಿಮುಖವಾಗಿ ತಳರ್ವುದುಂ

ಪೆಡೆಯೊಳಡಂಗೆ ವಾಸುಗಿಯ ನೆತ್ತಿಯ ಮಾಣಿಕವಾಟಿ ಕಂಠದೊಳ್
ಪೆಡೆಗಳ ಗೊಂದಣಂ ಸರವಿ ಸುತ್ತಿದಪೊಲ್ತಸು ಕೂರ್ಮಪೃಷ್ಠದೊಳ್
ಪಡಲಿಡೆ ಖರ್ಪರಂ ಕುಸಿದು ಕೂರ್ಮಶಿರಂ ಪೊಱಪಾಯ್ದು ಕಣ್ಣುಮಂ
ಳ್ದೊಡೆವನಿತಾಗೆ ತನ್ನ ಭರದಿಂ ತಳರ್ದತ್ತು ನರೇಂದ್ರ ಸೈನಿಕಂ ೧೦೮

ಧರಿತ್ರಿ ಬಲಭಾರದಿಂ ಕುಸಿಯೆ ಪನ್ನಗಾಧೀಶ್ವರಂ
ಶಿರಂ ಬಿರಿದು ಬಿರ್ದು ಕೂರ್ಮಮುಖದೇಶದೊಳ್ಮೂರ್ಛಿತಂ
ಕ್ಷರದ್ರುಧಿರವಾರಿಯುಂ ಕಮಠದೀರ್ಘನಿಶ್ವಾಸಮುಂ
ತೆರಳ್ಚೆ ನಿಜಮೂರ್ಛೆಯಂ ಮುಗುಳ್ದ ಕಣ್ಗಳಂ ಬಿರ್ಚಿದಂ ೧೦೯

ನಳಿದಿರ್ದ ಕೂರ್ಮಪೃಷ್ಠದ
ಕುಟಿಯೊಳ್ ಮಂಡಳಿಸಿ ಕೆಡೆದು ಬಳಭರದಿಂ ಪಾ

ತಟಿದ ಫಣಿನಾಯಕಂ ಸು
ಸ್ತಟಿಯದ ಪೇಟಿಗೆಯ ಪಾಪಿನಂತೆವೊಲಿರ್ದಂ ೧೧೦

ವ॥ ಅಂತು ತಳರ್ವುದುಂ

ಘದಪಿಂ ಮೇಳಿಸೆ ದೂಳಿ ಸೆಜ್ಜರವಿದೆಂದಾಶಾಗಜಂಭೀತಿಯೊಂ
ಏದು ನೂಱಿಕೊಂದೆನಿಸಿರ್ದ ಕೇತುವೆರಸೀಗಳ್ ರಾಹು ಮೇಲೆತ್ತಿ ಬಂ
ದುದೆನುತ್ತುಂ ರವಿಮಂಡಳಂ ನಡುಗೆ ಹವ್ಯಾಸಕ್ತಿಯಿಂ ದೇವರಿಂ
ಕಿದು ಹೋಮಾನಳಧೂಮಮೆಂದೆಳಸೆ ಪರ್ಬಿತ್ತುರ್ಬಿ ಸೇನಾರಜಂ ೧೧೧

ನೆಲನಂ ಕುಡೆ ನಿಮಿರ್ಚುವಂತೆ ಕಡಲಂ ಪೂಟ್ವಿತ್ತು ಚಂಡಾಂಶುಮಂ
ಡಳಮಂ ತೋಱದೆ ಮಂಡಳಾಗ್ರರುಚಿಯಂ ಮಾಣೆಂದು ಮೇಲೆತ್ತಿ ಮಂ
ಡಳಿಸಿತ್ತುತ್ಪಥವಾಹಿವರ್ತಿನಿಯಿದೆಂದಾಟಂದು ದೇವಪಗಾ
ಜಳಮಂ ತೊಟ್ಟನೆ ಸೇತುಗಟ್ಟಿ ತಡೆದತ್ತುತ್ತಾನಸೇನಾರಜಂ ೧೧೨

ವ॥ ಅಂತು ಚತುರಂಗಬಳಪ್ರಬಳಪಾಂಸುಪಟಳಮೆ ಪಟಳಮಾಗೆ

ಅನುಕೂಲಶ್ವಸನಂ ಹಯಾನನಸಮೀರಂ ಚಕ್ರಹಂಗಪ್ರವ
ರ್ತನಸಂಜಾತಸಮೀರಣಂ ಫಳಕಸಂಚಾರಾನಿಳಂ ವಾಳವೀ
ಜನವಾತಂ ಕರಿಕರ್ಣತಾಳವನಂ ಚಂಚತ್ಪತಾಕಾಪ್ರಭಂ
ಜನಮೊಂದಾಗಿ ತೆರಳ್ಚಿ ತೂಳ್ದಿದುದು ತತ್ಸೇನಾರಜೋಜಾಳಮಂ ೧೧೩

ವ॥ ಅನ್ನೆಗಮಿತ್ತಲಮೃತಜಳಧಿವೇಳೆಯಿಂ ಪೊಱಮಡುವ ಶೇಷನಂತೆ ಚಂದ್ರಕಾಂತದ ಮಂದಿರದಿಂ ಪೊಱಮಟ್ಟು ತವದ ಜವದ ಬಿರುದಿಂಗೆ ಗರುಡಂಗೆ ಗಱಿಗಟ್ಟಿದ ಗಱಿಯ ಗಳೆಯುಂ ಉಚ್ಚೈಶ್ರವಕ್ಕೆ ಕಟ್ಟಿದ ತೊವಲ ಪಾಪೆಯಗಳೆಯುಮಾದಿತ್ಯನೇೞು ಕುದುರೆಗೆ ಕಟ್ಟಿದೇೞು ಕವಡಿಕೆಯ ಗಳೆಯುಂ ಮುಂದೆ ಪರಿಯೆ ತನ್ನುಭಯಪಕ್ಷದೊಳಂ ಪರಿವ ಕೆಂಬಟ್ಟೆಯ ಮೇಗಡಂಬರದಿಂ ಕೆಮ್ಮುಗಿಲ ಕೆಳಗೆ ಪರಿವ ಚಂದ್ರಬಿಂಬಮಂ ವಿಡಂಬಿಸಿ ಕಮಳಗರ್ಭನಲ್ಲಿಗೆ ವರ್ಪ ಕಳಹಂಸನಂತೆ ಕಲಾಕಮಳ ಗರ್ಭನಿರ್ದ ಕರುಮಾಡಕ್ಕೆ ವಂದು

ಅತಿನಿರ್ಮಾಂಸಮುಖಂ ವಿಶಾಲಜಘನಂ ವಿಸ್ತೀರ್ಣವಕ್ಷಂ ಸಂಸಂ
ಗತಪಾರ್ಶ್ವಂ ಮೃದುಕೇಸರಂ ನಿಬಿಡಜಂಘಾಕಾಂಡನುದ್ಬದ್ಧಕು
ಕ್ಷಿ ತನುಸ್ನಿಗ್ಧ ತನೂರುಹಂ ಸರಳವಾಳಂ ಬಂಧುರಸ್ಕಮಧನು
ದ್ಧೃತಕರ್ಣಂ ತುರಗಂ ಮನಂಗೊಳಿಸಿದತ್ತುತ್ತಾರಹೇಷಾರವಂ ೧೧೪

ಪೊಱಪಾಯ್ದು ಕಡೆದ ನೀಲದ
ಶಿಱೆಕಲ್ಲಂ ಪೋಲ್ತು ನೀರ ಬೊಬ್ಬುಳಿಕೆಯೆನಲ್

ಮಿಱುಗುವ ಕಣ್ ಚೆಲ್ವಿನ ಕ
ಣ್ದೆಱವಿಯನನುಕರಿಸುಗುಂ ತುರಂಗಾಧಿಪನಾ ೧೧೫

ಎಡೆನೆಱೆಯದೆನ್ನಲಂಘನ
ದೆಡೆಗಂ ಪರಿವೆಡೆಗಮೆಂಬ ಮುಳಿಸಿಂ ನೆಲನಂ
ಪೊಡೆವಂತಿರೆ ಬಾರಿಪುದಡಿ
ಗಡಿಗೆ ಹಯಂ ತನ್ನ ತೀಕ್ಷ್ಣ ದಕ್ಷಿಣಖುರಮಂ ೧೧೬

ಚಮರಜಮಂ ಕಟ್ಟಿದವೋಲ್
ನಿಮಿರ್ದೊಪ್ಪುವ ಕೇಸರಾಳಿ ವಿಚಕಿಳಮದಿರೋ
ದ್ಗಮಗುಚ್ಛದೊಳೆಱಗಿದ ಭೃಂ
ಗಮಾಳೆಯಂ ಪೋಲ್ತು ನಿಟಿಳದೊಳ್ ಸೊಗಯಿಸುಗುಂ ೧೧೭

ಧವಳಗ್ರೀವಾವೇಷ್ಟಿತ
ಸುವರ್ಣಪರಿಪೂರ್ಣಶೃಂಖಳಾಬಂಧಮದೇಂ
ಧವಳಾಂಭೋಧರಪರಿರಂ
ಭವಿಳಾಸಿನಿಯಚಿರರುಚಿಯನಭಿನಯಿಸಿದುದೋ ೧೧೮

ಬರೆದಂಜನದಿಂ ಕಾಲಂ
ಖುರಮಂ ನಿರ್ವಾಣರೇಖೆದೆಗೆದನಜಂ ಕ
ಸ್ತುರಿಯಿಂದಮೆನಿಪ ನಡುಬೆ
ನ್ನ ರೇಖೆಯಿಂದೆಸೆದುದಸದಳಂ ಹಯರಾಜಂ ೧೧೯

ಖುರದಿಂ ಬಾರಿಸುತುಂ ಧರಾವಳಯಮಂ ತೀವ್ರುತ್ತುಮುತ್ತಾರನಿ
ರ್ಭರಹೇಷಾರವದಿಂ ವಿಯದ್ವಿವರಮಂ ಕೆತ್ತುತ್ತಮತ್ಯಂತವಿ
ಸ್ಫುರಿತಪ್ರೋಥಮನೋರ್ಮಿಯುಂ ಕೆದಱುತುಂಲಾಲಾಂಬುವಂ ಘ್ರಾಣಗ
ಹ್ವರದಿಂ ಘೋರಸಮೀರನಂ ಪಸರಿಸುತ್ತಿರ್ದತ್ತುದಾತ್ತಂ ಹಯಂ ೧೨೦

ಬಿರುದಿನ ಕಾಳೆಯ ದನಿ ಮಂ
ದುರಿಗರ ಜೇಂಕರಿಸುತಿರ್ಪ ದನಿ ಪಾಡುವ ಗಾ
ಣರ ದನಿ ಕೀರ್ತಿಪ ಗಳಗ
ರ್ತರ ದನಿ ಪೊಣ್ಮಿತ್ತು ವಾಜಿರಾಜನ ಕೆಲದೊಳ್ ೧೨೧

ವ॥ ಆಗಳೊರ್ವನುರ್ವೀತಳಾಲಿಂಗಿತಸರ್ವಾಂಗಂ ದೇಸೆವೆತ್ತ ಮೊಗಸುತ್ತುಂ ಪಟೆಯ ಪಟ್ಟಂಗಿಯುಂ ಉಟ್ಟ ಪಟ್ಟಣಿಗೆಯುಂ ಪೊದೆದ ಪಾಣಿಯವಣ್ಣಮುಮೆಸೆಯೆ ತಿಸರದ

ನಡುವೆ ಕೀಲಿಸಿದ ಹಯದ ಪೆಸಱಕ್ಕಿರವ ಪದಕಮುಂ ಹರಿನೀಳದ ತೋಳ ಮಣಿಯುಂ ಮಾಣಿಕದ ಕಂಕಣಮುಂ ತಳತ್ತಳಿಸೆ ಕುದುರೆವರ್ಪವನುಜ್ವಳಿತ ಕರಪಲ್ಲವನಪರಿಮಿತ -ವಾಗ್ವಿಳಾಸನವಸರೋಚಿತಸ್ತವನ ಮುಖರಮುಖನಾಗಿ

ಇದಱ ಜವಕ್ಕೆ ಸೋಲ್ತು ಗರುಡಂ ಗಱೆಯಿಂ ಕಡುನೊಚ್ಚನಾದನೇ
ಶೆದನಿದಱೊಳ್ಕಡಂಗಿ ಪರಿದಾಱದೆ ಕಾಲ್ನಡೆಗೆಟ್ಟು ಗಾಳಿ ಮಾ
ಳದ ಮಱೆವುಲ್ಲೆವೋರಿಯನೆನಲ್ ಪೆಱದೇ ಪಡಿಮಾತೂ ಮಾಡದಿ
ರ್ಪುದೆ ಜವದೇಟ್ಗೆಯಿಂ ಪೆಱವು ವಾಜಿಗೆ ಭಂಗಮನೀ ತುರಂಗಮಂ ೧೨೨

ತುರಗಕ್ಕೆ ಜವದೊಳೆಣೆಯೆಂ
ಬರೊಳೇಂ ಸಂಗ್ರಾಮಯೋಗ್ಯಮಲ್ತು ವಿಮಾನಂ
ಗರುಡಂ ವಿಜಾತಿ ಪವನಂ
ವಿರೂಪವೇಷಂ ಮನಂ ನಪುಂಸಕಮಲ್ತೇ ೧೨೩

ಪತ್ತುಂಗತಿಯೊಳಮೀರೊಂ
ಬತ್ತುಂ ಚಾರಿಯೊಳಮೈದು ದಾರಿಗಳೊಳಮೊಂ
ಬತ್ತುಂ ರಸದೊಳಮೀಹಯ
ಮಿತ್ತವುದುಚ್ಚೈಶ್ರವಕ್ಕೆ ನೀಚೈಶ್ರವಮಂ ೧೨೪

ಆದಿತ್ಯನ ತುರಗಂ ಮೇ
ಲಾದುವು ಮೇಲಿರ್ದ ದೂಸಱೆ ಂ ಜವದಿಂ ಕೀ
ೞಾದುವು ಚೆಲ್ವಿಂದೇಟೆದು
ವಾದುವು ತನಗೆನಿಸುಗುಂ ತರಂಗಮತಿಳಕಂ ೧೨೫

ವ॥ ಎಂದು ಕೀರ್ತಿಸಿದ ಗಳಗರ್ತಂಗೆ ಪೊನ್ನ ಪೊಟ್ಟಳದ ಮಱೆಯಂ ಕಱೆದು

ಮಣಿಹರ್ಮ್ಯಸ್ಥಳದಿಂ ನರೇಂದ್ರನಿೞೆದಂ ನಿತ್ಯೋದಯಂ ರತ್ನಭೂ
ಷಣಭಾಸ್ವತ್ಕಿರಣಂ ತಳತ್ತಳಿಸೆ ಲೀಲಾಂಭೋಜಹಸ್ತಂ ಹಯ
ಪ್ರಣಯಂ ಕೈಮಿಗೆ ಸಪ್ತಸಪ್ತಿಗೆಣೆಯಾಯ್ತೆಂತಾನುಮಂದಾನಭೋ
ಮಣಿ ತನ್ನಿರ್ಪ ವಿಮಾನದಿಂದಿೞೆದಿಳಾಭಾಗಕ್ಕೆ ಬರ್ಪಂದದಿಂ ೧೨೬

ವ॥ ಆಗಳೊರ್ವಳೊಡ ನೊಡನಡಿಯೊಡಿದಲತಗೆಯ ಪಜ್ಜೆಯುಂ ಪಜ್ಜೆಯ ನಿಚ್ಚಣಿಗೆಯುಂ ಪಲ್ಲವಿಸುತ್ತುಂ

ಇನಿಸಂ ಕೈಮಿಗೆ ನೂಲ ತೊಂಗುಲುಲಿಯುಂ ಮಂಜೀರಕಾಮಂಜುಳ
ಧ್ವನಿಯುಂ ಕಾಂಚನಶೃಂಖಳಾಕ್ವಣಿತಮಂ ರತ್ನಸ್ಫುರತ್ಸಾರಿಯಾ

ರ್ಯನಿನಾದಂಗಳುಮೊಂದಿ ಸಂದಣಿಸೆ ಬಂದತ್ತೆಂದು ಕಂದರ್ಪಮೋ
ಹನವಿದ್ಯಾಕುಲದೇವತಾಕುಲಮೆನಲ್ ಶುದ್ಧಾಂತಕಾಂತಾಜನಂ ೧೨

ಕಂದದ ಕುಂದದ ನಗೆಮೊಗ
ದಿಂದಂ ಪರಿಭವಮನೆನಸಗೆ ಪಡೆದರ್ ನಿನ್ನೀ
ಸುಂದರಿಯರೆಂದು ದೂಱಲ್
ಬಂದು ಸುಧಾರುಚಿವೊಲಾಯ್ತು ಧವಳಚ್ಛತ್ರಂ ೧೭

ವ|| ಅನ್ನೆಗಮಿತ್ತಲಯಶ್ಶಕ್ತಿ ಚಯುಚರಂಗಳಪ್ಪ ಲೋಹಖುರವಾಹಂಗಳಿಂದಿೞಿ
ತಾಳವ್ಯಜನಪಾಳಿಕೇತನವಿಚಿತ್ರಾತಪತ್ರಂಗಳನತಿದೂರದೊಳಿರಿಸಿ ವಜ್ರಕವಚದ ಕಾಂ
ದಿವಸಲಕ್ಷ್ಮೀವಿಳಾಸಮಂ ದ್ವಿಗುಣಿಸೆ ತನ್ನ ಬರವಂ ಪಾರ್ದುನಿಂದ ರಾಜಲೋಕಮಂ

ಪ್ರಣಯಾಳೋಕನರಸದಿಂ
ತಣಿವುವುಮಂ ದೀಪವರ್ತಿ ನಿಧಿಗೆಱಗುವವೊಲ್
ಗುಣನಿಧಿಗೆ ರಾಜಲೋಕದ
ಮಣಿಮಯಮಕುಟಂಗಳನಿತುಮೇನೆಱಗಿದುವೋ ೧೨೮

ವ|| ಅನಂತರಂ ನಿಜವಲ್ಲಭವಾಜಿವಿಳೋಕನ ಜನಿ ತಪ್ಪವೋದಮಂ ನಿವೇದಿಪಂತ
ಮಣಿಕಂಕಣಪುರಸ್ಸರಂ ವಿಚಿತ್ರವಸ್ತ್ರಮಂ ಹಯಮಹತ್ತರಂಗೆ ದಯೆಗೆಯ್ದು ತಾನುಂ ಕೈಗೆಯ್ದು

ಸರಮಂ ಮೆಲ್ಲನೆ ತೋಱೆ ದಕ್ಷಿಣಕರಾಂಭೋಜಾತದಿಂ ಸ್ರಗ್ಧರೀ
ಸರಮಂ ನೇರ್ಪಡೆ ನೀವಿ ಕಂಧರಕೆ ಕೈಯಂ ನೀಡಿ ರತ್ನಾಂಶುಭಾ
ಸುರಮಂ ಲಾಘವದಿಂದಮಂಕವಣೆಯಂ ಪಾದಾಗ್ರದಿಂ ಮೆಟ್ಟಿ ತ
ತ್ತುರಗಾಧೀಶನ ಬೆಂಗೆ ವಂದನನವದ್ಯಂ ರಾಜವಿದ್ಯಾಧರಂ ೧೩೦

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪ ವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ಶರತ್ಸಮಯವರ್ಣನಂ ಅಷ್ಟಮಾಶ್ವಾಸಂ ಸಂಪೂರ್ಣಂ



# ನವಮಾಶ್ವಾಸಂ

ಶ್ರೀರಮಣಂ ಮಂಗಳಭೇ
ರೀರವಮಾಶಾಂತರಾಳಮಂ ತೀವುವಿನಂ
ವಾರುವದ ಬೆಂಗೆ ಪೌರ
ಸ್ತ್ರೀರತ್ನದ ಕಣ್ಗೆವಂದನಭಿನವಪಂಪಂ ೧

ವ॥ ಆಗಳ್

ಎಡೆಯುಡುಗದೆ ಭೇರೀರವ
ದೊಡನೊಡನೆ ನಭೋವಿಭಾಗಮನಿತುಂ ತನಗಿ
ಟ್ಟೆಡೆಯೆನೆ ಕುಳಗಿರಿ ಮಾರ್ದನಿ
ವಿಡೆ ಪೊಣ್ಮಿತ್ತಂದು ಧವಳಶಂಖಧ್ವಾನಂ ೨

ಪುಟ್ಟಿದುವಬ್ಜಸಂಭವನ ಕಣ್ಣಾಸಿಯಿಂದೆನೆ ಚೀರಘಟ್ಟಿಗಂ
ತಿಟ್ಟಿಮಿಡಲ್ಕೆ ಬಾರದೆನೆ ದಿಟ್ಟಿಗೆ ವಂದು ಮನೋಜವಕ್ಕೆ ಬೂ
ತಟ್ಟುವ ತಕ್ಕು ಮಿಕ್ಕು ಬರೆ ಬಂದುವು ಪೊಂಬುಲಿದೋಲ ಪಲ್ಲಣಂ
ಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ತವಾಜಿಗಳ್ ೩

ಮುಖಶಿಖಿಮುಖಸಂಭವಲೋ
ಹಮಿರಂಗಳಿವೆಸಿಪ ಪಟ್ಟಸಾಹಣದ ಹಯಂ
ಮುಖಲೀನಖಲಿನೋತ್ತಾ
ನಖಣತ್ಕೃತಮೊದವೆ ನಿಂದುವಂದರಮನೆಯೊಳ್ ೪

ವ॥ ಆ ಪ್ರಸ್ತಾವದೊಳ್

ಮುಂದಿರೆ ಭೂಭುಜರ್ಪಡಿಯ ಮೇಲೆ ವಿಳಾಸಿನಿಯರ್ವಿಳಾಸದಿಂ
ಬಂದಿರ ಸೊರ್ಕಿದಾನೆಗಳನೇಱ ಕುಮಾರಕರಿರ್ಕೆಲಂಗಳೊಳ್
ಬಂದಿರೆ ಸುತ್ತಲುಂ ಪುಲಿಯ ಜಂಗುಳಿಯಂದದಿನಂಗರಕ್ಷಕರ್
ನಿಂದಿರೆ ಕೌಸ್ತುಭಾಭರಣನಾಯಕದಂತೆವೊಲಿರ್ದನಾನೃಪಂ ೫

ಚಿತ್ರಲಯಪ್ರಗಲ್ಭಹಯವಲ್ಗನದಿಂ ಮಣಿಕುಂಡಲಾಂಶುಗಳ್
ಚಿತ್ರಿಸೆ ಗಂಡಭಿತ್ತಿಯನುರಸ್ಥಳರಂಗದೊಳಂಗಹಾರಮಂ
ಸೂತ್ರಿಸೆ ತೋಜಹಾರರುಚಿಮಂಜರಿಗಳ್ ತಳರ್ದಂ ಪುರಾಂಗನಾ
ನೇತ್ರಚಕೋರಮಗ್ಗಲಿಸೆ ಸಂಮದಮಂ ಮನುಜೇಂದ್ರಚಂದ್ರನುಂ ೬

ವ|| ಅಂತು ತಳರ್ದು ಮುಕ್ತಾಫಲಪ್ರಳಂಬಲಂಬೂಷಸುಂದರವಂದನಮಾಳ ವಿರಾಜಿತರಾಜವೀಥಿಯೊಳ್ ತಾರಾವೀಥಿಯಂ ಪುಗುವ ಚಂದ್ರನಂತೆ ಬರ್ಪ ಮನುಜೇಂದ್ರಚಂದ್ರನಂ ನೋಡಲೆಂದು ನೆರೆದು

ಚರಣಾಲಕ್ತಕರಾಗಮುರ್ವರೆಯೊಳಾರಕ್ತಾಬ್ಜಮಂ ಪಾಸುವಂ
ತಿರೆ ಸಸ್ಮೇರಕಟಾಕ್ಷಮಾಲೆ ಬಯಲೊಳ್ ಕರ್ನೆಯ್ದಿಲಂ ಸೂಸುವಂ
ತಿರೆ ಭೂಷಾರುಚಿ ಶಕ್ರಚಾಪಲತೆಯಂ ದಿಕ್ಚಕ್ರದೊಳ್ ಬೀಸುವಂ
ತಿರೆ ಬಂದೀಕ್ಷಿಸಿದರ್ಪುರಪ್ರಮದೆಯರ್ಸಾಹಿತ್ಯಸರ್ವಜ್ಞನಂ ೭

ಬಾಸಿಗದಂತೆ ಕಣ್ಗೆಸೆದು ತೋಱಿ ತುಱುಂಬಿನೊಳುತ್ತಮಾಂಗದೊಳ್
ಸೇಸೆವೊಲೊಪ್ಪೆ ಹಾರರುಚಿಯಂತುರದೊಳ್ಕರೆಗಣ್ಮೆ ಚಂದನ
ಸ್ಥಾಸಕದಂತೆ ರಂಜಿಸೆ ಭುಜಾಗ್ರದೊಳುಜ್ಜ್ವಳಕೇಕರಾಂಶುವಿ
ನ್ಯಾಸಮೊಱಲ್ದು ಕೋಮಳೆಯರೀಕ್ಷಿಸಿದರ್ ಮನುಜೇಂದ್ರಚಂದ್ರನಂ ೮

ವ|| ಇನ್ನು ಕೆಲರ್ ಪೊದೆಗೆದಱಿದ ಪೂಗಣೆಗಳಂತೆ ಸಂಗಡದಿನುತ್ತುಂಗಸೌಧ ತಳಮನೇಱಿ ನೋಱ್ಪಾಗಳ್

ಬಯಸಿದುವಟ್ಟಿ ಪತ್ತಿದುವು ಕೀಲಿಸಿ ನಿಂದುವು ಪೌರವಾರನಾ
ರಿಯರ ಚಳಚ್ಚಕೋರನಯನಂ ಶಫರೀನಯನಂ ಮೃಗಾಂಗನಾ
ನಯನವಲಂಪು ನೂರ್ಮಡಿಸೆ ಸುಗ್ಗಿಯ ಮಲ್ಲಿಗೆ ಕಾರ ಮೊಲ್ಲೆ ಮಾ
ಗಿಯ ಪೊಸನೆಯ್ದಿಲೆಂಬ ಬಗೆ ಕೈಮಿಗೆ ರಾಜಮನೋಜಭೂಪನಂ ೯

ವ|| ಮತ್ತಮೊಂದು ಮಣಿಮಯಮಂದಿರದ ಮುಗಿಲ ಜಗಲಿಯೊಳ್ನಿಂದು ಮದನ ಶರಪರವಶೆಯರಾಗಿ

ಒದವಿದಲಂಪು ಕಣ್ಗೊಳಿಳಿವೋಲ್ ಮನಂ ಬಸದಾಗ ಪಾಶಮಿ
ಲ್ಲದ ವರುಣಂ ಫಣಾಪಟಳಮಿಲ್ಲದ ಪನ್ನಗರಾಗ ನಾಲಮಿ
ಲ್ಲದ ಕುಮುದಪ್ರಿಯಂ ಕುಸುಮಸಾಯಕಮಿಲ್ಲದ ಕಂತು ವಜ್ರಮಿ
ಲ್ಲದ ದಿವಿಜೇಂದ್ರನೆಂದಬಲೆಯರ್ ನಡೆ ನೋಡಿದರಾನರೇಂದ್ರನಂ ೧೦

ವ॥ ಮತ್ತಮೊರ್ವಳಭಿನವಯೌವನ ಮದೋನ್ಮತ್ತೆ ಚಿತ್ತವಲ್ಲಭನ ಪಿಡಿದ ಮೇಲುದಱ ಸೆಱಂಗನುಱುಸೆಱಗೆಯಂ

ಮುಡಿಯಿಂದಲ್ಲುಗೆ ಮಾಳತೀಕುಸುಮದಾಮಂ ಹಾರದಿಂ ಸೋರ್ದು ಸಾ
ಲಿಡೆ ಮುಕ್ತಾಫಳಜಾಳಕಂ ಘನನಿತಂಬಾಭೋಗದಿಂದುಣ್ಮಿ ಜೋ
ಲ್ವುದೆನೂಲ್ತುಂಗಕುಚಾಗ್ರದಿಂ ತೊಲಗೆ ಚೀನಾಗ್ರಂ ಬಱಲ್ವುಟ್ಟುದಂ
ಪಿಡಿಯುತ್ತುಂ ಪರಿತಂದು ತನ್ವಿ ನೃಪನಂ ಕರ್ಣಾರ್ವಿನಂ ನೋಡಿದಳ್ ೧೧

ವ॥ ಮತ್ತೊರ್ಬಳ್

ತೆಗೆಯೆ ಮನಃಪ್ರಿಯಂ ಪಿಡಿದು ಹಾರಮಸಾರದ ಮುತ್ತು ಸೂಸೆಯುಂ
ಬಗೆಯದ ಬೇಗಮೇಱೆ ಮಣಿಮಾಡದ ಮೇಗಣ ಭೂಮಿಭಾಗಮಂ
ಮೃಗಶಿಶುನೇತ್ರ ಬೇಟದಗೆಯಂತಿರೆ ಬೇರ್ವರಿದಿರ್ದ ದಿಟ್ಟಿಯಂ
ತೆಗೆಯದೆ ಕಂಡು ಕಣ್ಬಲೆವೊಲಿರ್ದ ನರೇಂದ್ರನ ಗಂಡಗಾಡಿಯಂ ೧೨

ವ॥ ಮತ್ತಮತಿಸಂಭ್ರಮಸ್ಖಲಿತಚಿತ್ರಚೀನೋತ್ತರೀಯಮಂ ಮಱೆದು

ನಿನಗೆನ್ನಂ ಮದನಾಗ್ನಿಸಾಕ್ಷಿಯೊಳೆ ಲಜ್ಜಾಲಾಜೆಯಂ ಸೂಸಿ ಗೋ
ಸನೆಯಿಂ ಹಾರಮರೀಚಿಜಾಳಜಳಧಾರಾಪೂರ್ವಕಂ ಕೊಟ್ಟೆನೆಂ
ದು ನೃಪಂಗೆತ್ತಿದ ಪೊನ್ನಮಳ್ಗಳಸಮಂ ವ್ಯಸ್ತೋತ್ತರೀಯಂ ಘನ
ಸ್ತನಯುಗ್ಮಂ ಗೆಲೆ ನೋಡಿ ಮೆಯ್ಮಱೆದಳೊರ್ವಳ್ ರಾಜಸರ್ವಜ್ಞನಂ ೧೩

ವ॥ ಮತ್ತಮಾ ಮಹೀವಲ್ಲಭ ಸೌಭಾಗ್ಯಯಶಃಪಟಹನಿನದಮಂ ಕೇಳ್ದು ಮುನ್ನಮೆ ಕಿವಿವೇಟಕ್ಕೆ ಪಕ್ಕಾದ ಪೊಸಜೌವನೆ

ಬಗೆ ಬೆಚ್ಚಂತಿರೆ ದಿಟ್ಟಿಮುಟ್ಟೆ ಗಮನಂ ಬೇಗಕ್ಕೆ ಪಕ್ಕಾಗೆ ಸಾ
ವಗಿಸುತ್ತುಂ ಮುಡಿಯಂ ಸಡಿಲ್ವುಡೆ ತಡಂಗಾಲ್ವೊಯ್ಯೆ ಕಾಮಂ ಖಳಂ
ತಗುಳ್ದಪ್ಪಂ ಶರಣೆಂದು ಬಾಯ್ವಿಡುವವೊಲ್ ಕಾಂಚೀರವಂ ಪೊಣ್ಮುವ
ನ್ನೆಗಮೊರ್ವಳ್ ಬೞಿಸಂದಳಾ ನೃಪನ ಸೌಂದರ್ಯಕ್ಕಿದಾಶ್ಚರ್ಯಮೇ ೧೪

ಯುವತಿಯರ ಕಣ್ಗಳೊಂದೊಂ
ದವಯವಮಂ ಪತ್ತಿ ಪತ್ತುವಿಡದಲ್ಲಿಯೆ ನಿಂ
ದುವಿದೇಂ ಭೂಪಾಳನ ರೂ
ಪವಿಳಾಸಂ ವಜ್ರಲೇಪದೊಡನಾಡಿದುದೋ ೧೫

ಮರಕತರತ್ನಾಂಗದ ರ
ಶ್ಮಿರಾಜಿಯಿಂ ಪಸಲೆಗವಿದ ಭುಜಶಿಖರದೊಳಾ

ಧರಣೀಶಂ ತಾಂಗುವುದ
ಚ್ಚರಿಯೆ ಲತಾಂಗಿಯರ ಚಕಿತಪರಿಶೀಕ್ಷಣಮಂ ೧೬

ವ॥ ಅಂತು ಪುರವಿಳಾಸಿನೀವಿಳೋಕನಾಕರ್ಷಣವಿದ್ಯೆಯಂ ರಾಜಂ ನಿರತಿಶಯವಿಳಾಸದಿಂ ಪ್ರಕಟಿಸುತ್ತುಮಗಣ್ಯಪುಣ್ಯವನಿತೆಯರ ತಳಿವ ತೋಱಮುತ್ತಿನ ಸೇಸೆಗಳಿನಳಕವಲ್ಲರಿಯಂ ಕುಸುಮಿಸುತ್ತುಂ ಪುರಮಂ ಪೊಱಮಟ್ಟು

ಸಮನಿಸೆ ವಿಳಂಬಿತಂ ಮಾ
ರ್ಗಮನುಪಜವದಿಂ ಮಹೀಭುಜಂ ತೋಱೆ ತುರಂ
ಗಮತಿಳಕಂ ನೋಟ್ಟರ ಹೃದ
ಯಮನೊಳಪೊಕ್ಕತ್ತು ನಯನಮಾರ್ಗದಿನಾಗಳ್ ೧೭

ವ॥ ಅಂತು ನೋಟ್ಟ ಪುರಜನಕ್ಕೆ ಜಾತ್ಯಶ್ವದ ಚಿತ್ರಗತಿಸ್ತಂಭಮ ನೊಡರ್ಚೆ

ತವೆ ನೋಡಲ್ ನಾಡೆ ಕಣ್ಣುಳ್ಳುವ ರವಿಪಥಮಂ ಕೇತುಹಸ್ತಂಗಳಿಂ ನೀ
ಳ್ಕುವ ಬಿಣ್ಪಿಂ ಭೂತಳಂ ಬಳ್ಕುವ ರಿಪುನೃಪಚಾತುರ್ಬಲಂ ಕಾದಲುಳ್ಳ
ಳ್ಕುವಿಭೋದ್ಯತ್ಕರ್ಣತಾಳಕ್ಷುಭಿತಪವನವಿಕ್ಷೇಪದಿಂ ವಾರ್ಧಿಯಂತು
ಳ್ಕುವ ಸೇನಾಚಕ್ರಮಂ ತೊಟ್ಟನೆ ಸಕಳಮಹೀವಲ್ಲಭಂ ಮಟ್ಟೆವಂದಂ ೧೮

ವ॥ ಆ ಪ್ರಸ್ತಾವದೊಳ್

ಕರಕಿಸಲಯಂಗಳೆನಸುಂ
ಪರಭಾಗಂಬಡೆಯೆ ತಮ್ಮ ಮಣಿಮಕುಟಪಟ
ತ್ಕರಕಿಸಲಯದಿಂ ಭೂಪರ್
ಧರಣೀನಾಥಂಗೆ ವಿನಯವಿನಮಿತರಾದರ್ ೧೯

ವ॥ ತದನಂತರಮಿಳಾವಿಳಾಸಿನೀನಿತಂಬವಳಯದಂತೆ ವೃತ್ತಮುಂ ದರ್ಪಣದಂತೆ ಸಮತಳಮುಮಪ್ಪ ವಾಹಳಿಯ ನಡುವೆ ನಿಂದು ತನಗೆಱಗಿದ ಮಕುಟಬದ್ಧರನುಭಯಕುಳವಿಶುದ್ಧರಂ ಪ್ರಸನ್ನಪ್ರಸಾದದೃಷ್ಟಿಯಿಂ ಪರಿತುಷ್ಟರ್ಮಾಡಿ ತನ್ನ ಕುದುರೆಯ ವಿನ್ನಾಣಮಂ ನೋಡಲಡಪಡಿಸುವ ಹಯಾರೋಹಕರ ಮನೋರತಂ ಸಫಳಮಾಗೆ ಕೀಟಿ ನೇಣನಳವಡಿಸಿ ಪಿಡಿದು ಪೊಳೆಯಿಸಿ

ಮುಟ್ಟವೆನೆ ಪೆಱವು ತುರಗಂ
ಮೆಟ್ಟಿದ ವಾಹಳಿಯನೆಂಬವೊಲ್ ಖುರಮಿಳೆಯಂ
ಮುಟ್ಟಿದುದು ಮುಟ್ಟದೆನಲಳ
ವಟ್ಟು ಬಿಸಿಲ್ಗುದುರೆಯಂತೆ ಪೊಳೆದುದು ತುರಗಂ ೨೦

ಅಳವಡೆ ಗುಣಕೋಟಿಗಳಂ
ತಳೆದುತ್ತಮವಂಶಸಂಭವಂ ಹಯರತ್ನಂ
ತಳದೊಳಳವಟ್ಟುದಾಭೂ
ತಳನಾಥನ ವಿಜಯಚಾಪರತ್ನಾಕೃತಿಯಂ ೨೧

ತೊಡೆಯೊಡನೆ ಪರ್ಚುವಂತಿ
ರ್ಮಡಿಸೆ ಕೊರಲ್ ಕಾಲ್ಕವಲ್ತುವೆನೆ ಮುಂದುದ್ದಂ
ಬಡೆಯ ಪೆಱಗುಡುಗೆ ನೃಪನಳ
ವಡೆ ತೋಱಿದನೇಱಿ ಮಧ್ಯಲಯದಿಂ ಹಯಮಂ ೨೨

ಬಿಂಕಂಬಡೆದುದು ವಿಕ್ರಮ
ಮಂಕಿತಮುಪಕಂಠಮುಪಜಮುಪಜವಮೆಂಬ
ಯ್ದುಂ ಕಣ್ಗೊಳಿಸುವ ಧಾರೆಗ
ಳಿಂ ಕುದುರೆಯ ಕಾಲ್ಗೆ ಕೋಡಗಜೆಯೊಳವಕ್ಕುಂ ೨೩

ಮಾಣದೆ ನೋಡಿ ಕಣ್ದೊಳಲಿ ಕಯ್ಮಿಗೆ ಸೇನೆಗೆ ಸುತ್ತಿ ವಾರುವಂ
ಸಾಣೆಯ ನೇಣವೊಲ್ಪರಿಯೆ ವಾಹಳಿಯೊಳ್ಪರಿವೇಷಮಾದ ಪ
ರ್ಯಾಣದ ಪಂಚರತ್ನರುಚಿಯಿಂದಜೆವರ್ಬೆಜಗಾಗಿ ಬಲ್ಮೆ ನಿ
ರ್ವಾಣಿಸೆತೆಂದು ಬಿಚ್ಚಳಿಸೆ ಪಂಚಮಧಾರೆಯೊಳೇಱಿದಂ ನೃಪಂ ೨೪

ತಿರಿಪಿದ ತಿಗುರಿಯ ಮೇಗಣ
ಗರೆಯಂತೆಡವಱಿಯದಂಕವಣಿ ವಾಹಳಿಯಂ
ಗರೆವರಿಯೆ ದಂಡೆ ಚಾರಿಸೆ
ಪರಿದುದು ಜವದಿಂ ಮನೋಜವಂ ಜಾತ್ಯಶ್ವಂ ೨೫

ನರನಾಥನ ಮಕುಟದ ಪಂ
ಚರತ್ನರುಚಿ ಮೇಘವಟ್ಟೆಯಿಂ ವಾಹಳಿಯಂ
ತೆರೆಸುತ್ತಿದ್ದಂತೆ ರಂಜಿಸೆ
ಪರಿದುದು ತುರಗಂ ಮನೋಜವಂ ಪವನಜವಂ ೨೬

ಸುತ್ತಲ್ಲದು ಕುದುರೆಯ ತೆರೆ
ಸುತ್ತೆನೆ ವಾಹಕರ ಮಾನಗರ್ವಂ ಮನದಿಂ
ಸುತ್ತಱಿಯೆ ಮೆಚ್ಚಿ ಬಿಚ್ಚಳಿ
ಸುತ್ತುಂ ನೃಪನೇಱಿದಂ ತುರಂಗೋತ್ತಮನಂ ೨೭

ಯ್ದಿಡೆ ಬೆಟ್ಟು ಕೆಡೆವ ತೆಜಿದಿಂ
ಕೆಡೆದಾಲಮನಿದಿರೊಳವನಿಪಾಳಂ ಕಂಡಂ ೩೮

ತಲೆಯೊಳ್ತಳ್ತೊಯ್ಯೆ ಬೇರ್ಗಳ್ ಫಣಿಪತಿ ತಲೆಮಟ್ಟೆತ್ತಿದಂ ಕುತ್ತೆ ಸುತ್ತುಂ
ಕೆಲಗೊಂಬಾಶಾಗಜಂ ತಾಗಿದುವೆಡೆಗುಡದಾಕಾಶಮಂ ತೀವೆ ತೀವ್ರಾ
ನಿಲನಾಟಂದೊತ್ತಿದಂತಿರ್ಗ್ಗುರುಚಿಕರಸಹಸ್ರಂಗಳಿಂ ಪೊಯ್ದನಡ್ಡಂ
ನಿಲೆ ತೇರ್ಗಂತಲ್ಲದಂದೀ ತರು ಕೆಡೆವುದೆ ಸೌದಾಮಿನೀಪಾತದಿಂದಂ ೩೯

ಎಂದು ಬಗೆ ಪಚ್ಚು ಪಸರಿಸೆ
ಮಂದರಧೈರ್ಯಂ ಧರಾಧಿಪಂ ಸುರಧನುವಂ
ಮುಂದಿಡೆ ಕಿರೀಟಕಿರಣ
ಸ್ಪಂದನಮಡಿಗಡಿಗೆ ತಲೆಯನೇಂ ತೂಗಿದನೋ ೪೦

ವ॥ ಅಂತು ಮನದೊಳೆ ಬಗೆದು ವಿಸ್ಮಯಮೆ ತನಗೆ ವೈರಾಗ್ಯರಸಕ್ಕೆ ಸೇತುವಾಗೆ

ಆಲಂಬಂ ನಭಮಂ ಪಳಂಚಲೆವ ಶಾಖಾಶ್ರೇಣಿ ಸಗ್ಗಕ್ಕೆನಿ
ಪ್ಪಾಲಂಬನಮನೆಯ್ದೆ ಕಾಲವಶದಿಂ ಕಂಡುಂ ವಿದಗ್ಧಂ ಮಹೀ
ಪಾಲಂ ಭಾವಿಸಿದಂ ದ್ರುಮಪ್ರಕೃತಿಯಂ ದುರ್ಮೋಹದಿಂ ಸಜ್ಜನೋ
ಪಾಲಂಭಾವಿಳನಾಗಿ ನಿಲ್ಲದೊಡಲಂ ನಂಬಲ್ಕನಂದರ್ಪುದೇ ೪೧

ಸ್ಥಿರಮೂಲಮನಾಲದ ಪೆ
ರ್ಮರನಂ ಕಡಿಗೊಂಬುಗೊಂಡ ಕಾಲವ್ಯಾಳ
ದ್ವಿರದಕ್ಕೆ ನರಕಳೇಬರ
ಜರತೃಣಗ್ರಾಸಮಾತ್ರಮಾವುದೊ ಗಹನಂ ೪೨

ಉಸಿರಂ ಕಾಳೋರಗನುಸಿ
ರ್ದುಸಿರ್ದಿರುಳುಂ ಪಗಲುಮೀಂಟಿಯುಂ ಮತ್ತಂ ಜೀ
ವಿಸುವಳಿಪಿಂದೆಸಗುವ ಮಾ
ನಿಸನಂ ಸೋಂಕಿದುದು ದೇಹಮೋಹಪಿಶಾಚಂ ೪೩

ಜೀವನ ಸಂಗತಿಯಿಂದಂ
ಪಾವನಮುಟಿದಂದ ಪಾವನಂ ತಾನೆನೆ ಮೆ
ಯ್ಗಾವನೋ ಬಸದಪ್ಪನವಂ
ಜೀವನ್ಮೃತಕಂ ವಿವೇಕಶೂನ್ಯನಮಾನ್ಯಂ ೪೪

ಎನಿತುಂ ಘನಮಾದೊಡಮಪ
ಘನಮೆ ಗಡಂ ಸ್ಥೂಳರೂಪಮೆನಿತಾದೊಡಮೇಂ
ತನುವೆ ಗಡಂ ದೇಹಂ ಜಾ
ಣನೊ ಸೂತ್ರಿಸಿದಂತೆ ಪೆಸಱನಿಟ್ಟ ವಿಧಾತ್ರಂ ೪೫

ನಿಮಿಷಾರ್ಧದ ಸಂಗತಿಯಿಂ
ಸಮಸ್ತಭೋಗೋಪಭೋಗಶುಚಿವಸ್ತುಗಳೆ
ಲ್ಲಮನಶುಚಿಮಾಳ್ಪುದಂ ದೇ
ಹಮನಾತ್ಮಂ ಬಿಟ್ಟು ಪಿಂಗದನ್ನಂ ಶುಚಿಯೆ ೪೬

ಕುತ್ತದ ಪರಿವರಿ ಪಾಪದ
ಬಿತ್ತು ಪರಾಭವದ ಬೆಳಸು ಪಸಿದ ಕೃತಾಂತಂ
ಗೆತ್ತಿದ ಬೋನಂ ತನುವೆಂ
ದುತ್ತಮರಱಿದುೞಿದರದಱ ನಂಟರ್ತನಮಂ ೪೭

ಮೂತ್ರನಿವಾಸಂ ಜನ್ಮ
ಕ್ಷೇತ್ರಂ ಗಡ ಶುಕ್ಲಶೋಣಿತಂ ಬಿತ್ತು ಗಡೇಂ
ಪಾತ್ರಂ ದೇಹಂ ದೇಹಿಗೆ
ಮೈತ್ರೀಭಾವಮನೊಡರ್ಚಲುಂ ಮೋಹಿಸಲುಂ ೪೮

ಎಲ್ಲರಮೊಳಗಱಿದುಂ ಬಿಡ
ಲೊಲ್ಲರ್ಬಿಡೆ ಸಮಱಿಲೇಸು ಮಾಡಲೆ ಪಡೆವರ್
ಪೊಲ್ಲೆನಿಪ ಸಪ್ತಧಾತುಗ
ಳೆಲ್ಲಮನೊಳಕೊಂಡ ತೊವಲ ಪಾಪೆಯನೊಡಲಂ ೪೯

ನೆಱಪುವುದೊಡಲಂ ಮುನ್ನಂ
ನೆಱೆದೊಡಲಂ ಬಿಟ್ಟು ಕಳೆದು ಬೇಱೊಂದೊಡಲಂ
ನೆಱಪುವುದಿಂತನವಸ್ಥೆಯ
ಮರುಳಾಟದೆ ಮರುಳಮಾನವನಕ್ಕುಂ ಜೀವಂ ೫೦

ಪರಿಕಿಸದೆ ನಿತ್ಯಮರಣದ
ಪರಿಣತಿಯಂ ಕಳಿವ ಕಾಲಮಂ ಮೋಹಾಂಧಂ
ಪರಮಾಣುವನಣು ದಾಂಟುವ
ಪರಿಮಾಣಮನೇಕಸಮಯಮಂ ಸಾವೆಂಗುಂ ೫೧

ತೂಗುವಿನಂ ತಲೆ ಸೆರೆಗ
ಳ್ಬೀಗಿ ಕೊರಳ್ಕುಸಿವನಂ ಕಟಿಲ್ವಿನೆಗಂ ಪಲ್
ಬಾಗುವಿನಂ ಬೆನ್ ಮನುಜರ
ಮೂಗಿನ ಮೇಲಾಡುವಂ ಜವಂ ಪೆಕ್ಕಣಮಂ ೫೨

ಆವುದು ಸುಖಮೆಂದೆಳಸುವ
ನಾವಸ್ತುವೆ ದುಃಖಹೇತು ದುಃಖೋಪಶಮಂ
ಜೀವಕ್ಕೆ ಸುಖಭ್ರಾಂತಿಯ
ನೀವುದು ಭಾವಿಪೊಡಸಾರಮೀ ಸಂಸಾರಂ ೫೩

ಯುವಸಪ್ತಚ್ಛದಮಂ ವಯಃಪರಿಣತಶ್ರೀಖಂಡಮಂ ಬಾಳಶಾ
ಳಿವನಶ್ರೇಣಿಗಳಂ ಪಡಲ್ವಡಿಸಿ ನಾನಾದೇಹಭೂಜಂಗಳಂ
ಕವಳಂಗೊಂಡು ಕಲಂಕಿದತ್ತು ಪಲವುಂ ಪಾತಾಳಕಾಸಾರಮಂ
ಭವಕಾಂತಾರದೊಳದ್ಭುತಂ ವಿಧಿಮದೋನ್ಮತ್ತೇಭವಿಕ್ರೀಡಿತಂ ೫೪

ಸಂಸಾರದೆಱಕದಿಂದಯ
ಶಂ ಸಾರದೆ ಮಾಣದೆಂದು ಮೋಹಮನುೞಿದಾ
ತಂ ಸಕಳವಂದ್ಯನುೞಿದಾ
ತಂ ಸಕಳಂಕಪ್ರಮತ್ತಕಾತರಚಿತ್ತಂ ೫೫

ಆಮಯಮಂದಿರಮಂ ಬಾ
ಧಾಮಯಮಂ ತನುವನೆಯ್ದದನ್ನಂ ಭೀಮಾ
ಯಾಮಯಮಂ ಸಾಧಿಸುವೆನ
ನಾಮಯಮಂ ಪ್ರಿಯಮನಮಳರತ್ನತ್ರಯಮಂ ೫೬

ನಿಸೆಕಂಗಳ್ನೆಱೆವನ್ನಮುತ್ತುಂಗ ದಿನಾಯುಃ ಪ್ರಾಣಮಂ ಬೆನ್ನನೇ
ಱೆಸಿ ಕೊಂಡೋಡುವ ಕಾಲಮೆಂಬೆರಲೆಯಂ ಬೆಂಬತ್ತಿ ಬೀಳ್ತಂದ ದೇ
ಹಸಮೂಹಂಗಳೊಳಾವುದಂ ನೆನೆದು ಮೋಹಂಗೆಯ್ದನೆಂದು ಭಾ
ವಿಸಿದಂ ದೇಹದನಿತ್ಯಮಪ್ಪ ನಿಲವಂ ಸಾಹಿತ್ಯವಿದ್ಯಾಧರಂ ೫೭

ಅನುಲೇಪಂ ಭೂಷಣಂ ತಂಬುಲಮುಣಿಸು ವಿಚಿತ್ರಾಂಬರಂ ಶಯ್ಯೆದಾಮಂ
ವನಿತಾಸಂಭೋಗಮೋರಂತಿವನನುಭವಿಸಲ್ ಭಿನ್ನರೂಪಂ ರಸಾಸ್ವಾ
ದನಮಿಲ್ಲೀ ದೇಹಮುಂ ಧಾತುಗಳ ಪುಡುಕೆ ವಿದ್ಯುಲ್ಲತಾಸಂಚಳಂ ಜೀ
ವನಮೆಂದಾ ಮಾನವೇಂದ್ರಂ ಪರಮಸುಖಸುಧಾಸ್ವಾದನೋತ್ಕಂಠನಾದಂ ೫೮

ವ॥ ಅಂತು ಸಂಸಾರಶರೀರಭೋಗನಿರ್ವೇಗಮನಪ್ಪುಕೆಯ್ದು ಪೂರ್ವಾನುಭವ ವಿಷಯಸುಖ-ವಿಮುಖಚಿತ್ತಂ ನಿಜನಿವಾಸಕ್ಕೆ ಬಿಜಯಂಗೆಯ್ದಾವುಪಚರಿತಮಜ್ಜನ ಭೋಜನ ವ್ಯಾಪಾರಂ ಕರ್ಪೂರರಲಹರಿಬಹಳ ಪರಿಮಳತಾಂಬೂಳರಾಗ ರಂಜಿತಾಧರಂ ವಿಚಿತ್ರವೇತ್ರಧರಪುರಸ್ಸರನಾಗಿ

ವಿಕಟಮಕುಟಕೂಟವ್ಯಕ್ತ ಮುಕ್ತಾಳಿಯಿಂ ತಾ
ರಕಿತಮಮಿತರತ್ನಚ್ಛಾಯೆಯಿಂದಂಬರಂ ಮೇ
ಚಕಿತಮೆನಿಸಿ ಬಂದು ಪಾದವಿನ್ಯಾಸಲೀಲಾ
ಪ್ರಕಟತಮಣಿವೇದೀಶೋಣಪದ್ಮೋಪಹಾರಂ ೫೯

ವ॥ ಅಂತು ಮಂತ್ರಶಾಲೆಗೆ ಬಿಜಯಂಗೆಯ್ದನ್ವಯಾಗತಮಂತ್ರಿಮಂಡಳ ಮಹಾಪ್ರಧಾನ-ಸೇನಾಪತಿಪುರೋಹಿತರಂ ಬರಿಸಿ ಯಥೋಚಿತಾಸನದೊಳಿರಿಸಿ

ಬರವೇಳ್ದಟ್ಟಲೊಡಂ ಸಸಂಭ್ರಮಪದನ್ಯಾಸಂ ಸ್ಫುರತ್ಕರ್ಣಪೂ
ರರುಚಿವ್ಯಾಪ್ತದಿಗಂತರಂ ವಿನಯಮಂ ಮುಂದಿಟ್ಟು ಪೊಕ್ಕಾ ಸಭಾಂ
ತರಮಂ ತಂದೆಯ ಪಾದಪಂಕಜಮನಾಂತಂ ನೆತ್ತಿಯೊಳ್ ಭಕ್ತಿನಿ
ರ್ಭರಚಿತ್ತಂ ನಿಜಧೈರ್ಯನಿರ್ಜಿತಕುಳಕ್ಷೋಣೀಧರಂ ಶ್ರೀಧರಂ ೬೦

ವ॥ ಅಂತು ಪದಪಯೋಜಪಾರ್ಶ್ವಮಣಿಕುಟ್ಟಿಮತಳಮನವತಂಸಮುಕ್ತಾಮಣಿಕಿರಣ-ಜಾಳಜಟಿಳಿತಂ ಮಾಳ್ಪುದುಂ

ರಾಜಿಸಿದುದು ನಿಟಿಳದೊಳಧಿ
ರಾಜನ ಪದನಖಮಯೂಖಮಂಜರಿ ಪಾದಾಂ
ಭೋಜಾನತನೆನಿಸಿದ ಯುವ
ರಾಜಂಗಧಿರಾಜಪಟ್ಟಮಂ ಕಟ್ಟಿದವೋಲ್ ೬೧

ವಿನಯವಿಳಾಸದಿಂ ವಿನತಮಸ್ತಕನಾಗಿರೆ ನೀಳ್ದ ತೋಳ್ಗಳಿಂ
ತನಯನನಪ್ಪಿಕೆಯಿಂ ತೆಗೆದು ತಳ್ಕೈಸೆ ತೆಕ್ಕನೆ ತೀವೆ ತತ್ಕುಮಾ
ರನ ತನುವಂ ನೃಪಾಂಗದ ಮರೀಚಿ ಪಳಂಚಲೆದತ್ತು ಪಟ್ಟಬಂ
ಧನಸಮಯೋಚಿತಪ್ರಥಮಮಂಗಳತೀರ್ಥಜಳಾಭಿಷೇಕಮಂ ೬೨

ವ॥ ಅಂತು ತೆಗೆದು ತರ್ಕೈಸಿ ತನ್ನ ಬಲದ ಕೆಲದೊಳಿಕ್ಕಿದ ಮಣಿಮಯಾಸನಮನೊಲ್ಲದೆ ಪರ್ಯ್ಯಂಕಾಂಕಿತಪಾರ್ಶ್ವದೇಶದೊಳ್ ಕುಳ್ಳಿರ್ದ ಮಗನ ಮೊಗಮ ನಾನಂದಜಳಲುಳಿತ-ಲೋಚನನಾಗಿ ನೋಡಿ

ನಯಶಾಸ್ತ್ರಂ ಧರ್ಮಶಾಸ್ತ್ರಂ ಕರತಳಕಳಿತವ್ಯಕ್ತಮುಕ್ತಾಫಳಂ ದು
ರ್ಜಯನಾನಾಶಸ್ತ್ರವಿದ್ಯಾವಿಭವಮಭಿನವಂ ಬಾಹುವೀರ್ಯಂ ವಿಪಕ್ಷ
ಕ್ಷಯಕಾಳೋತ್ಪಾತಕೇತುಪ್ರತಿಕೃತಿ ಸಹಜಕ್ಷತ್ರತೇಜಂ ಮದೀಯಾ
ನ್ವಯರಾಜಶ್ರೀಲತಾಲಂಬನಮೆಗೆ ನೆಗಟ್ದ್ರಿ ಪುತ್ರ ನಿನ್ನನ್ನನಾವಂ ೬೩

ವ॥ ಅದಱಿಂ ನಿನ್ನ ದೊರೆಯ ರಾಜ್ಯಭರಧುರೀಣನಂ ಪಡೆದು ಪರಮ ಪುರುಷಾರ್ಥಮನೆಮಗೆ ಸಾಧಿಸುವುದೇ ಕರಣೀಯಮೆಂತೆನೆ

ಕಿಱಿಯಂದೋದುವುದೆಲ್ಲಮ
ನಱಿದನುಭವಿಸುವುದು ವಿಷಯಮಂ ಜೌವನದೊಳ್
ತಱಿಸಂದು ತಪದ ನೆರವಿಂ
ತೊಱೆವುದು ಮುಪ್ಪಿನೊಳಿದಲ್ತೆ ಪಾರ್ಥಿವಚರಿತಂ ೬೪

ಸುತ ನಮ್ಮನ್ವಯದೊಳ್ ಪುರಾತನಜಗದ್ವಿಖ್ಯಾತಭೂನಾಥರೀ
ಸ್ಥಿತಿಯಿಂ ರಾಜ್ಯಸುಖಂಗಳೊಳ್ತಣಿದು ತತ್ವಾಭ್ಯಾಸವಿಶ್ರಾಂತಜೀ
ವಿತರಾದರ್ಮಱಿದೀ ಕುಳಕ್ರಮಮನಾನಿಂತಿರ್ದು ಸನ್ಮಾನ ಪ
ದ್ಧತಿಯಂ ಹಾಸ್ಯರಸಪ್ರವಾಹಭರದಿಂ ಪ್ರಕ್ಷಾಳಿತಂ ಮಾಳ್ಪೆನೇ ೬೫

ವ॥ ಎಂದು ನುಡಿದೆಮಗೆ ಮಗನೆ ತಾತ್ಪರ್ಯಕಾರ್ಯಸಿದ್ಧಿಯಪ್ಪಂತು ರಾಜ್ಯದೊಳ್ನಿಂದು ತಪೋರಾಜ್ಯದೊಳೆಮ್ಮಂ ನಿಲಿಸಿ ನಿಜಾನ್ವಯಾಗತಪರಿಜನಕ್ಕಂ ಜನಪದಜನಕ್ಕ-ಮನುರಾಗಮಪ್ಪಂತು ನಯಾಭಿಮುಖದಿಂ ಸುಖಮನನುಭವಿಸೆಂಬುದುಂ ಕುಮಾರಂ ಮೋಹಾಂಧಕಾರಕಲುಷಿತಸುಮತಿಚಕಿತಚಿತ್ತನುಮಾಗಿ ಕಿಱಿದಾನುಂ ಬೇಗದಿಂ ಮೆಯ್ಯಿಕ್ಕದೆ ಮರವಾನಿಸನಂತುಸಿರದಿರ್ದು ಚತುರ್ದಶವಿದ್ಯಾಸ್ಥಾನರತ್ನ ಪ್ರದೀಪನುಂ ಸಹಜಸತ್ವ-ಸಂಪನ್ನನುಯಮಪ್ಪುದಱಿಂ ಕೊರಲ ಗಗ್ಗರಿಕೆಯಂ ಸಂವರಿಸಿ ಮುಕುಳಿತ ಕರಕಮಳನಾಗಿ

ಫಣಿಪತಿಗಮಮರಪತಿಗಂ
ಪ್ರಣಯಪ್ರದಮಪ್ಪ ಪಿರಿಯ ಸಿರಿಯಂ ದೇವರ್
ತೃಣಮಾತ್ರಮಾಗಿ ಬಗೆವೊಡ
ಮಣುಗುಣರಿದನೆಮ್ಮ ವಂದಿಗರ್ತಾಳ್ದುವರೇ ೬೬

ಬಳವದರಾತಿಮಂಡಳಮನಂಡಲೆದುದ್ಧತಬಾಹುದಂಡದಿಂ
ದಿಳೆಯನಿಳೇಶ ನೀಂ ತಳೆದುದಂ ರಣಬಾಳಕರೆಮ್ಮ ವಂದಿಗರ್
ತಳೆವರೆ ಭೂರಿಭೂತಳಮನಶ್ರಮದಿಂ ಪ್ರಬಳಪ್ರಭಂಜನಂ
ತಳೆವವೊಲಕ್ಷಮಂ ತಳೆಯಲಾರ್ಕುಮೆ ವೀಜನಮಂದಮಾರುತಂ ೬೭

ಅಳವೆ ನಿಜರಾಜ್ಯಲಕ್ಷ್ಮಿಯ
ನೊಳಕೊಳ್ವ ಮಹತ್ವಮೆನಗೆ ಗುಣರತ್ನಮಹಾ
ಜಳನಿಧಿಯಲ್ಲದೆ ಕುಳನದಿ
ಕುಳಮಂ ಬಗೆವೊಡೆ ಕೊಳಂಗಳೊಳಕೊಂಡಪುವೇ ೬೮

ವನಜವನಕ್ಕೆ ವಿಕಾಸಂ
ದಿನಪತಿಯಿಂದಲ್ಲಮೞೆವಜೇಂದಕ್ಕುಮೆ ಪೇೞ್
ಜನಪತಿ ನಿಮ್ಮಿಂದಲ್ಲದೆ
ಜನಕ್ಕೆ ಹರ್ಷಪ್ರಕರ್ಷಮಕ್ಕುಮೆ ಪೆಱರಿಂ ೬೯

ವ|| ಎಂದು ಬಿನ್ನವಿಸೆ ವೈಶ್ರವಣ ಮಹಾಮಂಡಳೇಶ್ವರಂ ನಿನ್ನ ವಿನಯ ವೃತ್ತಿಗುಚಿತಮಪ್ಪುದಾದೊಡಂ

ಗುಣನಿಧಿ ನೀಂ ನೆಱೆವೈ ಧಾ
ರಿಣಿಯಂ ತಾಳ್ದಲ್ಕೆ ತರುಣಯುವಭೇದಂ ಕಾ
ರಣಮಲ್ತಿಲ್ಲಿಗೆ ಚಿಂತಾ
ಮಣಿಯಾದೊಡೆ ಸಾಲ್ಗುಮಲ್ತೆ ಕಿಱಿದೇಂ ಪಿರಿದೇಂ ೭೦

ಕಿಸಲಯ ಕೋಮಳಕರಮಂ
ಪಸರಿಸು ಬಾಳಾರ್ಕನಂತೆ ಕಮಳೋತ್ಸವಮಂ
ಪೊಸಯಿಸು ಜನಕ್ಕೆ ಪಡೆ ಸಂ
ತಸಮಂ ನಿನ್ನುದಯಮಾರ್ಗಮಭ್ಯುದಯಕರಂ ೭೧

ಧರೆಯಂ ತೋಳೊಳ್ ಲಕ್ಷ್ಮಿಯ
ನುರದೊಳ್ ಸಾಮ್ರಾಜ್ಯಪಟ್ಟಮಂ ನೊಸಲೊಳ್ ನೀಂ
ಧರಿಯಿಸು ಧರಿಯಿಸಿ ಮನದೊಳ್
ಗುರುವಚನಮಲಂಘನೀಯಮೆಂಬೀ ನುಡಿಯಂ ೭೨

ವ|| ಎಂದು ಮತ್ತಮನಿತಾನುಂ ಪ್ರಾರ್ಥನೆಗಳಿಂ ತನೂಜಂ ರಾಜ್ಯಪದವಿಯೊಳ್ ನಿಲ್ವಂತು ಮಾಡಿ ನಿಜಪರಿಜನದ ಮೊಗಮಂ ನೋಡಿ ಸಿಂಹಕ್ಕೆ ದಾಡೆಯುಂ ದಿಗ್ಗಜಕ್ಕೆ ನಿಗ್ಗವಮುಂ ನಭೋಮಣಿಗೆ ಕಿರಣಮುಮೆಂತಂತೆನಗೆ ನಿಮ್ಮ ಬಲಮೆ ವಿಜಿಗೀಷುವೃತ್ತಿಗೆ ನಿಮಿತ್ತಮೆನಿಸಿದುದು; ನಿಮ್ಮ ಮಂತ್ರಬಲಂ ದೈವಬಲಮಾದುದು; ಎನ್ನ ನೆಲನಂ ಕುಲಗಿರಿಯಂತೆ ನೀಮೆ ತಾಳ್ದಿದಿರ್ ಆನುಂ ನಿಮ್ಮಿಂ ನಿಖಿಳಸುಖಾನುವ್ಯಾಸಂಗಮಲ್ಲದೆ ರಾಜ್ಯರಕ್ಷಣವ್ಯಾಸಂಗಮಂ ಮಱೆದುಮಱೆದೆನಿಲ್ಲ; ಅದುಕಾರಣದಿಂ

ರಾಜ್ಯಭರಧುರಂಧರತೆಗೆ ಕುಮಾರಂ ತರುಣನಾದೊಡಂ ನೀಮೆ ಸಾಲ್ವಿರ್; ಈತಂ ಕ್ರಮಾರ್ಹಂ; ನಿಮಗತಿವ್ಯಾಮೋಹಭೂಮಿಯುಂ ಕುಲಸ್ವಾಮಿಯುಮಾಗಲ್ತಕ್ಕಂ; ಅದೆಂತೆನೆ ಕುಳಾಚಾರಾಭಿಜನಶುದ್ಧನುಂ ಕೋಪ ಪ್ರಸಾದಸ್ವತಂತ್ರನುಂ ರಾಜವಿದ್ಯಾನಿಧಾನನುಂ ಧರ್ಮಶಾಸ್ತ್ರದತ್ತಾವಧಾನನುಮಪ್ಪುದಱಿಂ

ನಿಮಗೆನ್ನಿಮಿಗಿಲೀತನೀತನಯನಂ ಕೈಕೊಂಡು ಸಾಮ್ರಾಜ್ಯಪ
ಟ್ಟಮನಾನಂದದೆ ಕಟ್ಟಿ ರಾಜ್ಯಭರಮಂ ಕೈಕೊಳ್ವುದಾನುಂ ಯಥಾ
ಕ್ರಮದಿಂ ಸಾಧಿಸುವೆಂ ಪರತ್ರೆಯ ನಿದೆಂತುಂ ನಿಮ್ಮೊಳಪ್ರಾರ್ಥಿತಂ
ಕ್ರಮಮಂ ಪಾಳಿಪುದುಂ ಪರಾಕ್ರಮಮನೇಕಾಧೀಷ್ಟಿತಂ ಮಾಳ್ಪುದುಂ ೭೩

ವ॥ ಎಂದು ಪರಿಜನಮಂ ಮಱುಮಾತಿಂಗೆಡೆಯಿಲ್ಲದಂತೊಡಂಬಡಿಸಿ ಗೃಹಮಹತ್ತರಂಗೆ ಪಟ್ಟಬಂಧಸಮಯಸಮುಚಿತವ್ಯಾಪಾರಮಂ ಬೆಸಸಲೊಡಂ

ಮಿಳಿರ್ದುವು ನೇತ್ರದ ಗುಡಿ ಮಣಿ
ಕಳಶಂಗಳ ಮೇಲೆ ಪೌರ್ಣಮಾಸೀಶಶಿಮಂ
ಡಳಸಾಂಧ್ಯಕಿರಣಮುದಯಾ
ಚಳದೊಳ್ಮಿಳಿರ್ವಂತೆ ಹರ್ಮ್ಯಶಿಖರಸ್ಥಳಿಯೊಳ್ ೭೪

ವ॥ ಆ ಕರುಮಾಡದ ಮುಂದೆ

ಹರಿನೀಳಸ್ತಂಭಮಂ ಜಾಗರ ಪಡಲಿಗೆಯುಂ ತುಂಗಭೃಂಗಾರಮುಂ ನೆ
ಮ್ಮಿರೆ ಭಾಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರಚತ್ರಂ ಹರಿದ್ರತ್ನಮಧ್ಯಾ
ಜಿರಮಂ ಮುಕ್ತಾವಳೀರಂಗವಲಿ ಬಳಸೆ ಕರ್ಕೇತನದ್ವಾರಶಾಖಾಂ
ತರಮಂ ರತ್ನಸ್ಫುರತ್ತೋರಣಮಳಸೆ ಬೆಡಂಗಾದುದುತ್ಸಾಹಗೇಹಂ ೭೫

ಆಮೋದಮುದಿತಮಧುಕರ
ದಾಮಕದೊಳ್ ನೀಳರತ್ನಧಾಮಂ ಮಲ್ಲೀ
ದಾಮಕದೊಳ್ ಮುಕ್ತಾಫಳ
ದಾಮಂ ತಡವಾದುವಂದು ಮಣಿಮಂಡಪದೊಳ್ ೭೬

ಪೆಡೆವರಲಿವೆನಿಸೆ ರನ್ನದ
ಸೊಡರ್ಗಳ್ ಮೆಯ್ಗುಱಿದು ತೋರ್ಪ ಕಾಳಿಯ ಸರ್ಪಂ
ಗೆಡೆಗೊಟ್ಟಂದಿನ ಜಗುನೆಯ
ಮಡುವಂ ಪೋಲ್ತತ್ತು ಮಧ್ಯಮರಕತರಂಗಂ ೭೭

ಕಟ್ಟಿದ ಮೇಲ್ಗಟ್ಟಿನ ಪಸು
ರ್ವಟ್ಟೆಯ ಸೂಸಕದ ಪೊನ್ನ ತಿಂಗಣೆಯ ನೆಟಿಲ್
ದಿಟ್ಟಿಗೆ ರಂಗದೊಳೇನಳ
ವಟ್ಟಿರ್ದುವೊ ಕೊಸಗಿನೆಸಟಿ ಪೂವಲಿಗಳವೋಲ್ ೭೮

ಚಿತ್ರಲತಾಕಳಿಕಾಶತ
ಪತ್ರಂಗಳಿನೆಸೆವ ರತ್ನವೇದೀವನದೊಳ್
ಚಿತ್ರಿತಕೃತಕಾಚಳಮೆನೆ
ನೇತ್ರೋತ್ಸವಮಾಯ್ತು ಮಧ್ಯದೊಳ್ ಪರಿಪೀಠಂ ೭೯

ವ॥ ಆ ಸಿಂಹಾಸನದೆರಟ್ಟಿಕಿಲದೊಳಂ

ಶ್ರೀ ವನಿತಾಕಟಾಕ್ಷರುಚಿಮಂಜರಿಯಂತಿರೆ ಚಾಮರಂ ಜಯ
ಶ್ರೀವನಿತಾಸ್ವಯಂವರವಿನೀಳಸರೋರುಹಮಾಳೆಯಂತೆ ಶೋ
ಭಾವಹಮಾಗೆ ಖಡ್ಗಲತೆ ವೀರರಸಾರ್ಣವಫೇನ ಪಿಂಡದಂ
ತಾವಗಮೊಪ್ಪೆ ಬೆಳ್ಗೊಡೆ ಮನೋಹರಮಾದುದು ರಾಜ್ಯಮಂಡಪಂ ೮೦

ವ॥ ಮತ್ತಮಲ್ಲಿ ಪುಂಜಿಸಿದ ಪಂಚರತ್ನಸಂಚಯದೆಸೆವನ್ಯರಂಗದೊಳ್ ಮನಂಗೊಳಿಸಿ ಪುಣ್ಯನದೀಸಲಿಲಪೂರ್ಣಮುಂ ಘನಸಾರಸುರಭಿಮಳೆಯರುಹಚರ್ಚಿತಮುಂ ಕನಕಸೂತ್ರತ್ರಯಸೂತ್ರಿತಮುಂ ಯವಪ್ರರೋಹಪರಿಕಲಿತಮುಂ ದಧಿತಿಳಕವಿಳಸಿತಮುಂ ಧವಳಶಾಲ್ಯಕ್ಷತೋಪಲಕ್ಷಿತಮುಂ ಧವಳಕುಸುಮದಾಮಾಭಿರಾಮಮುಂ ಗರ್ಭೀಕೃತಸರ್ವೌಷಧಮುಂ ಪ್ರಕಟಿತಪ್ರವಾಳಮುಖರಾಗಮುಂ ಸ್ವಸ್ತಿಕಶಸ್ತಮಣಿ-ದರ್ಪಣಸಮರ್ಪಿತಮುಮಪ್ಪಪಳಧೌತಮಂಗಳಕಳಶಮಂಬಳಸಿ

ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣಕ್ರೌಂಚದೊಳ್ ರೋಚನಂ
ಘನಹಾರೀತಕಹಂಸಿಯೊಳ್ ಹರಿತದೂರ್ವಂ ರಾಜತದ್ರೋಣಿಯೊಳ್
ಘನಸಾರಂ ಹರಿನೀಳಶುಕ್ತಿಕೆಗಳೊಳ್ ಕಸ್ತೂರಿಮಾಣಿಕ್ಯಭಾ
ಜನದೊಳ್ ಕುಂಕುಮಪಂಕಮೇಂ ಮೆಱೆದುವೋ ಮಾಂಗಲ್ಯಸಾಕಲ್ಯಮಂ ೮೧

ವ॥ ಅಂತು ಮಂಗಳೋಪಕರಣವಸ್ತುವಿಸ್ತೀರ್ಣ ಮೆನಿಸಿದ ಮಂಡಪಕ್ಕೆ ಮಹಾಮಂಡಳೇಶ್ವರಂ ವೈಶ್ರವಣಂ ಅವಿಶ್ರಾಂತಮಂಗಳಾನಕಧ್ವಾನಬಧಿರಿತ ದಿಗ್ಗಜಶ್ರವಣಂ ಅನ್ವಯಾಗತಪರಿ-ಜನಪರಿವೃತಂ ನೀರಾಜನಗಜರಾಜತುರಗ ರಾಜಿವಿರಾಜಮಾನವಾಮದಕ್ಷಿಣಪಾರ್ಶ್ವಂ ನಿಜಭುಜನಿವಾಸಿನಿಯಂ ಸಂಗ್ರಾಮ ವಿಜಯಲಕ್ಷ್ಮಿಯಂ ಸಮರ್ಪಿಸುವಂತೆ ದಕ್ಷಿಣ-ಬಾಹುಲತೆಯಂ ಶ್ರೀಧರಕುಮಾರ ಭುಜಶಿಖರದ ಮೇಲೆ ನೀಡಿ ಪೂವಲಿಯ ಮೇಲೆ

ಕೆಂದಳಿರಂ ಪಾಸುವಂತೆ ಕೇಸಡಿಯ ಕೆಂಪು ಪಸರಿಸೆ ಕರುಮಾಡದಿಂ ತಳರ್ವುದುಮಾ-
ಸಮಯದೊಳ್ ಪಳಂಚಿಸುಂಗುರದಿಂ ಚರಮುಂ ಮಣಿನೂಪುರದ ಸುಣ್ಣರಮುಂ ನೂಲ
ತೊಂಗಲ ಮೆಲ್ಲುಲಿಯುಂ ಪಿಂಡುಗಂಕಣದ ಬಲ್ಲುಲಿಯುಮಡಿಗಡಿಗೆ ನೆಗಟೆ
ಪೆಂಡವಾಸದ ವಿಳಾಸಿನಿಯರಲ್ಲಿ ಕೆಲರನಂಗಜಂಗಮಲತೆಗಳಂತೆ ಮಜ್ಜನೋಪಕರಣ-
ದ್ರವ್ಯಂಗಳಂ ಧರಿಯಿಸಿಯುಂ ಕೆಲರ್ವನಲಕ್ಷ್ಮಿಗಳಂತೆ ನಾರಂಗನಾಳಿಕೇರಕ್ರಮುಕ-
ಮಾತುಳುಂಗಫಲಂಗಳಂ ತಳೆದುಂ ಕೆಲರ್ವಸ್ತ್ರಾಂಗ ಕಲ್ಪವಲ್ಲಿಗಳಂತೆ ವಿಚಿತ್ರವಸ್ತ್ರಪಟಲಿಕೆ-
ಗಳಂ ತಾಳ್ದಿಯುಂ ಕೆಲರ್ಕುಸುಮಾಸ್ತ್ರಶಸ್ತ್ರಶಾಲೆಯಂತೆ ಪೂಮಾಲೆಗಳನಪ್ಪುಕೆಯ್ದುಂ
ಕೆಲರಿಕ್ಷುಚಾಪ ವಿಜಯಲಕ್ಷ್ಮಿಗಳಂತೆ ಧವಳೇಕ್ಷುದಂಡಂಗಳಂ ಪಿಡಿದುಮೊಡನೊಡನೆ
ನಡೆಯೆ

ಕುಲಗಿರಿ ಬರ್ಪಂತೆ ಧರಾ
ತಲನಾಥಂ ಬಂದನಲ್ತು ಜಳಕಮಳಂ ಮೇಣ್
ಸ್ಥಲಕಮಲಮಲ್ತು ಗಗನ
ಸ್ಥಲಕಮಳಮಿದೆನಿಸೆ ಪಿಡಿದ ಧವಲಚ್ಛತ್ರಂ ೮೨

ವ॥ ಅಂತು ಬಂದು ಮಂದಾಕಿನೀತರಂಗಮಾಲೆಯೆನಿಪ ನವದುಕೂಲ
ಪಾಳಿಧ್ವಜವಿರಾಜಿತರಾಜ ಮಂಡಪಮಂ ಬಂದುಪೊಕ್ಕು

ಕೆಲದೊಳ್ ಸಾಮಂತಸೇನಾಪತಿಮುಕುಟಧರರ್ಮೇರುಸುತ್ತಿಂ ಪಗೋತ್ರಾ
ಚಲಮಿರ್ಪಂತಿರ್ಪಿನಂ ಮಂಗಳಪರಿಕರಮಂ ತಾಳ್ದಿ ಕಾಂತಾಜನಂ ಕ
ಲ್ಪಲತಾಸಂಕಲ್ಪಮಂ ಪುಟ್ಟಿಸೆ ನಿಜತನುಜನ ತನ್ನ ಪರ್ಯಂಕಪಾರ್ಶ್ವ
ಸ್ಥಳಿಯೊಳ್ ಬಾಲಾರ್ಕನಿರ್ಪಂತಿರೆ ಜನಪತಿ ಸಿಂಹಾಸನಾಸೀನನಾದಂ ೮೩

ವ॥ ಆ ಪ್ರಸ್ತಾಪದೊಳ್ ಪುರೋಪತಿರಮೌಹರ್ತಿಕಂ ದೇವಶುಭ ಮುಹೂರ್ತ-
ಮಾಸನ್ನಮೆಂದು ಬಿನ್ನಪಂಗೆಯ್ವುದುಂ ರಾಜಸರ್ವಜ್ಞನಾಜ್ಞೆಯಿಂ ಕುಮಾರಂ
ದುಕೂಲಕಾಂಡಪಟೀಪರಿವೃತಸ್ನಪನಮಂಡಪಕ್ಕೆ ಬಿಜಯಂಗೆಯ್ದು

ಪಳುಕಿನ ಮಜ್ಜನಪೀಠ
ಸ್ಥಳದೊಳ್ ಕಣ್ಗೊಳಿಸಿದು ತದೀಯದ್ಯುತಿ ಮಂ
ಡಳಿಸಿರೆ ತನುವಂ ನಿಜಮಂ
ಡಳದೊಲದ ಕಣ್ಗೊಳಿಪ ರೋಹಿಣೀರಮಣನವೋಲ್ ೮೪

ವ॥ ಆಗಳವನೀಶ್ವರಂ ಗುರುಜನಸನಾಭಿಜನಸಮನ್ವಿತಂ ಚತುಷ್ಕೋಣ ಶೋಣಮಣಿ-
ಕಳಶವಿಳಸಿತಮಜ್ಜನಮಂಟಪಕ್ಕೆ ಬಿಜಯಂಗೆಯ್ದು ಮೌಹೂರ್ತಿಕನಿರೂಪಿತ

ಶುಭಮೂಹೂರ್ತದೊಳ್ ನೀಳಾಚಳಶಿಖಂಡಕಮಲ ಷಂಡಪ್ರಸೂತ ಸಿತಾತರಂಗಿಣೀ-ಸಲಿಲಸಂಪೂರ್ಣಶಾತಕುಂಭಕಳಶಮ ನೆತ್ತುವುದುಂ

ತಳಿರ್ವೆಱೆದ ಸುರಭೂಜದ
ಸೆಳೆಗೊಂಬುಗಳೆರಡುಮೊಂದೆ ಪರಿಣತಫಳಮಂ
ತಳೆದಂತವನೀಶನ ಕರ
ತಳದೊಳ್ ರಮಣೀಯಮಾಯ್ತು ಮಂಗಳಕಳಶಂ ೮೫

ವ॥ ಅಂತು ಪೊಂಗಳಸಮಂ ನೆಗಪಿ

ಪರಸುತ್ತುಂ ಮಗನಂ ಪಲ
ವರಕೆಗಳಿಂದೊಸಗೆವಱೆಯ ದನಿ ಸಕಳದಿಶಾ
ಭರಿತಮೆನೆ ಮಾಡಿದಂ ಬಿ
ತ್ತರದಿಂ ರಾಜ್ಯಾಭಿಷವಣಮಂ ವೈಶ್ರವಣಂ ೮೬

ಉದಯಗಿರಿಕೂಟಕೋಟಿಯಿ
ನುದಿಯಿಸುವಿನನೆಳವಿಸಿಲ್ಗಳೆನೆ ಭೂಭುಜನೆ
ತ್ತಿದೆ ಪೊಂಗಳಸದ ಧಾರಾ
ಕದಂಬಮೆಸೆದತ್ತು ಕನಕರುಚಿಪಿಂಜರಿತಂ ೮೭

ಸುರಭಿಸಲಿಲಾಭಿಷೇಕಂ
ತರುಣಿಯರಿಂ ಕನಕಕಳಶದಿಂ ತಲ್ಲಾವ
ಣ್ಯರಸಾಭಿಷೇಕಮೆಸೆದುದು
ಗುರುಕುಚಕಳಶಂಗಳಿಂ ಕುಮಾರಂಗಾಗಳ್ ೮೮

ನೀರಂಧ್ರಬಂಧುರಸ್ತನ
ಹಾರಾಂಶುಗಳುಂ ವಿಲೋಚನಾಂಶುಗಳುಂ ವಾ
ರ್ಧಾರೆಗಳುಂ ಮೂವಳಸೆ ಕು
ಮಾರಂಗೆಸೆದತ್ತು ಮುಖ್ಯಮಂಗಳಸವನಂ ೮೯

ವ॥ ತದನಂತರಂ ನವದುಕೂಲಪರಿಧಾನಪರಿಶೋಭಿತನುಂ ಮಂಗಳಾ ಭರಣಭೂಷಿತನು-ಮಭಿನವಸುರಭಿಕುಸುಮದಾಮಶೇಖರನುಮಾದ ಮಗನನೊಡಗೊಂಡು ಬಂದು ಮಂಗಳವೇದಿಕಾಮಧ್ಯಮನಳಂಕರಿಸಿರ್ದ ಸಿಂಹಾಸನದೊಳ್ ಕುಳ್ಳಿರಿಸಿ ಮಣಿಮಯಮಾತುಳುಂಗ ಫಳಮನಂಜಳಿಪರಿಪೂರ್ಣಂ ಮಾಡಿ

ವಿವಿಧಾತೋದ್ಯರವಂ ಪಳಂಚೆ ದೆಸೆಯಂ ಮಾಂಗಲ್ಯಗೀತಸ್ವನಂ
ಶ್ರವಣಾನಂದಮನೀಯೆ ಪುಣ್ಯಪಠನಂ ಮೆಯ್ವೆರ್ಚೆ ವಿದ್ವಜ್ಜನ
ಸ್ತವನಂ ಕೈಮಿಗೆ ಬಂದ ವೃದ್ಧಕುಳವೃದ್ಧಶ್ರೀರವಂ ಪೊಣ್ಮೆ ವೈ
ಶ್ರವಣಂ ತನ್ನ ಮಗಂಗೆ ಪಾರ್ಥಿವಪವಿತ್ರಂ ಪಟ್ಟಮಂ ಕಟ್ಟಿದಂ ೯೦

ವ॥ ಅಂತು ತನ್ನ ವೈರಾಗ್ಯರಸಕ್ಕೆ ಸೇತುಗಟ್ಟುವಂತೆ ಮಗಂಗೆ ಪಟ್ಟಮಂ ಕಟ್ಟಿ ಸಕಳಜನಮಂ ನಿಜಪ್ರಸಾಕಲ್ಪಪಾದಪದಿಂ ತಣಿಪಿ

ಕಳೆದಿತ್ತಂ ನಿಜಮಕುಟಮ
ನಿಳಾಧಿಪಂ ಶ್ರೀಧರಂಗೆ ಭೂತಳಭಾರ
ಕ್ಕಳವಟ್ಟ ಸಿಂಬೆಯಂ ತಂ
ದಿಟೆಪುವ ತೆಱದಿಂ ತದುತ್ತಮಾಂಗದಿನಾಗಳ್ ೯೧

ಯುವರಾಜಂಗರಸಂ ರಾ
ಜ್ಯವಿಳಾಸಮನಿತ್ತು ಪರಮಸಂಯಮಸಾಮ್ರಾ
ಜ್ಯವಿಳಾಸತತ್ಪರಂ ಭಾ
ರವಾಹಕಂ ಪೊಱೆಯನಿೞಿಪಿದಂತೆವೊಲಾದಂ ೯೨

ವ॥ ಅಂತು ನಿಶ್ಚಿಂತಸ್ವಾಂತನಾಗಿ

ಸ್ನಪನಪವಿತ್ರಂ ಶುಚಿವ
ಸ್ತ್ರಪೂತಗಾತ್ರಂ ಪ್ರಧಾನಮಂತ್ರವಿಧಾನ
ದ್ಯುಪಚರಿತಾವಮನಣ ಪಂ
ಚಪರಮಗುರುಗರ್ಘ್ಯಮೆತ್ತಿದಂ ಧರಣೀಶಂ ೯೩

ವ॥ ತದನಂತರಂ ಮಹಾಪ್ರವಾಹಿನೀಸಲಿಸಂಮಿಶ್ರಕರ್ಪೂರದಳಬಹಳಕಾಂತಿದಂತುರಿತಚಂದ್ರಕಾಂತಕಳಶಂಗಳಿಂ ಸುರಭಿಮಳಯರುಹಪಂಕಪಿಂಜರಿತರಜತಶುಕ್ತಿಕೆಗಳಿಂ ಜಳಧವಳಕಳಮಾಕ್ಷತಕ್ಷೀರಗವರ ಪಾಂಡುರಿತಕರ್ಕೇತನ ಕರಂಡಕಂಗಳಿಂ ನವೀನಪ್ರಸೂನಮಧು ವಿಲೀನಮಧುಕರಪಟಳ ಕರ್ಬುರಿತರತ್ನಪಟಳಿಕೆಗಳಿಂ ಸುಪಕ್ವಭಕ್ಷೋಪದಂಶಪ್ರಚುರ ಚರುವಿಚಿತ್ರವರ್ಣ ಶಬಳಿತಸುವರ್ಣಪರಿಯಣಂಗಳಿಂ ಉನ್ಮುಖಮಯೂಖಮಾಣಿಕ್ಯ ದೀಪಕಿರಣರುಣಾತಮರಕತಮಣಿಪುತ್ರಿಕೆಗಳಿಂ ಬಹಳಕಾಳಾಗರುಧೂಪಧೂಮ ಶ್ಯಾಮಳಿತಕಳಧೌತಧೂಪಘಟ್ಟಂಗಳಿಂ ಕ್ಷೀರಾದಿಸವನ-ಪಾವನರಸಪವಿತ್ರಿತಶಾಂತ ಕುಂಭಕುಂಭಂಗಳಿಂ ಗಂಧಸಲಿಲಸಂಭೃತವಿಶಾಳ-ಹರಿನಿಭೃಂಗಾರಂಗಳಿಂ ನಿಜಪ್ರಭಾಪಟಳಪಲ್ಲವಿತಮಣಿಶೋಣಕೋಣಕಳಶಂಗಳಿಂ

ಸ್ಫಟಿಕಮಣಿ ಕಿರಣಜಾಳಜಟಿಳಿತಮಧ್ಯರಂಗದಿಂ ಸಂಗೀತಕರಸತರಂಗಿತಬಾಹ್ಯರಂಗದಿಂ ಸ್ಫೂಳ ಮುಕ್ತಾಫಳಮುಕುಳಿತವಿವಿಧರಂಗವಲಿಯಿಂ ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು ದರ್ಶನಸ್ತವನಮುಖರಮುಖಂ ಯಥಾವಿಧಿಯಿನಭಿಷೇಕಾರ್ಚನಾವಿಧಿಗಳಂ ತೀರ್ಚಿ ಜಿನೇಂದ್ರಮುಖನಿರೀಕ್ಷಣಹರ್ಷಪುಳಕಿತಸರ್ವಾಂಗ-ನಾನಂದಬಾಷ್ಪಸಲಿಲವಿಲುಳಿತವಿಳೋಚನಂ ನಿಟಳತಟಕುಟ್ಮಳಿತಾಂಜಳಿಪುಟಂ ವಿನಯವಿನಮಿತಶಿರಸ್ಸರೋಜಂ ಗಂಧಸಲಿಲಶೇಷಕ್ಷತಾಕುಸುಮಶೇಖರಂ ಜಿನಚರಣಚಂದನತಿಳಕವಿಳಸಿತವದನಾರವಿಂದಂ ದೇವತಾನಿಕೇತನಮಂ ಪೊಱಮಟ್ಟು ಅಪಗತಧೌತವಸನಂ ಗಂಗಾ ತರಂಗಧವಳಾವಾಸಕ್ಕನ್ನ ವಾಸಕ್ಕೆ ಬಿಜಯಂಗೆಯ್ದು

ಅಮೃತಾಹಾರಮನುಂಡು ಚಂದನಜಳಪ್ರಕ್ಷಾಳ್ಯದೊಳ್ ಯಕ್ಷಕ
ದಮಸಂಮರ್ದನಹಸ್ತದೊಳ್ಕೊಳೆಯ ತಾಂಬೂಲೀದಳಂ ರತ್ನಕು
ಟ್ಟಿಮದೊಳ್ ಮೆಲ್ಲನೆ ಲೀಲೆಯಿಂ ಸುಱಿದು ಹಂಸಾಂಸೋಪಧಾನಪ್ರಧಾ
ನಮೃದುಪುಚ್ಛದತಲ್ಪದೊಳ್ಳಿಲಸಿದಂ ಸಾಹಿತ್ಯವಿದ್ಯಾಧರಂ ೬೪

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ಶ್ರೀಧರಕುಮಾರ ಪಟ್ಟಬಂಧೋತ್ಸವವರ್ಣನಂ ನವಮಾಶ್ವಾಸಂ ಸಮಾಪ್ತಂ



# ದಶಮಾಶ್ವಾಸಂ

ಶ್ರೀಗಂ ಪರಮಾತ್ಮಪದ
ಶ್ರೀಗಂ ನೆಲೆ ಧರ್ಮಮೆಂದು ಧರ್ಮಧ್ಯಾನೋ
ದ್ಯೋಗಂ ಕೈಮಿಗೆ ವಿಷಯವಿ
ರಾಗಮನಂ ಸುಖದಿನಿರ್ದನಭಿನವಪಂಪಂ ೧

ವ|| ಅಂತಿರ್ಪುದುಂ

ಧರಣೀಶನ ಚಿತ್ತದ ಶಾಂ
ತರಸಂ ನೆಲೆವೆರ್ಚೆ ಬಿಸುಪುಗಿಡಿಸಿತ್ತಕ್ಕುಂ
ಖರಕಿರಣಂಗಳನೆಂಬಂ
ತಿರೆ ಘೋಂಕನೆ ಬಿಸಿಲ ಬಿಸುಪು ಮಸುಳ್ದತ್ತಾಗಳ್ ೨

ಕರುಣಾರಸಮಹಿತಂರಾ
ಗರಹಿತನೀ ಮಹಿಪನಿದಿರೊಳಾನೆಂತಿರ್ಪೆಂ
ಖರದಂಡಪ್ರಿಯನೆಂ ರಾ
ಗರುಚಿಯೆನೆಂಬಂತೆ ಮೇರುವಂ ರವಿ ಸಾರ್ದಂ ೩

ಸಿರಿಗೆ ನೆಲೆಯೆಂದೆನ್ನಂ ಮುನ್ನಂ ನೃಪಂ ಪಿಡಿದಿರ್ಪನಾ
ಸಿರಿಯ ದೆಸೆಯುಂ ಬಿಟ್ಟಂ ವೈರಾಗ್ಯದಿಂದೆನಲಿನ್ನ ಕ
ಣ್ಬರಿಯೆ ಕನಸಿಂ ಪೋಯ್ತೆಂದುದ್ವೇಗದಿಂ ಮುಗಿದಂತೆವೋ
ಲಿರುಳ ಪುಗಿಲೊಳ್ ಸಂಕೋಚಂಗೊಂಡುದಂಬುಜಮಂಡಳಂ ೪

ಸ್ಮರರಾಗಂ ಮನದೊಳ್ಬೇ
ರ್ವರಿದ ರಥಾಂಗಕ್ಕೆ ದಿವಸದವಸಾನದ ನೋ
ವರಿದಾದುದಧಿಕರಾಗಂ
ವಿರಾಮದೊಳ್ ವಿಷಮುಷ್ಣದೊಂದಚ್ಚರಿಯೇ ೫

ಪರಿಹರಿಪೆನೆನ್ನ ದೋಷಾ
ನುರಾಗಮಂ ಸಾಲ್ವುದಖಿಳಪಾವನಮಪ್ಪೀ
ಧರಣೀನಾಥನ ಧರ್ಮಾ
ನುರಾಗಮೆಂಬಂತೆ ಸಂಜೆ ಪರೆದತ್ತಾಗಳ್ ೬

ವ|| ಅಂತು ನೇಸರ್ಪಡುವುದುಂ

ಅರುಣಕರಕಿಸಲಯಾಗ್ರದೊ
ಳಿರೆ ತಾರಾಸುರುಚಿರಾಕ್ಷಮಾಳಿಕೆ ಸಂಧ್ಯಾ
ಚರಣನಿಯಮಾನುರಕ್ತಂ
ಗಿರಿಶಿಖರದೊಳೆಸೆವನಮೃತರುಚಿಯೋಗೀಂದ್ರಂ ೭

ತಮಮುಂ ರಜಮುಂ ಕಿಡೆ ಸ
ತ್ವಮೊಂದೆ ನಿಂದಂತೆ ನಯನಸುಖಮಯನಾದಂ
ತಮಮುಂ ನಿಜಸಂಧ್ಯಾರಾ
ಗಮುಮೊರ್ಮೆಯೆ ಪಿಂಗೆ ಪೋಗೆ ಕುವಳಯಮಿತ್ರಂ ೮

ವ|| ಅಂತು ಶಾಂತರಸಪಿಷಯಮಾದ ದಿವಸದನಸಾನಸಮಯದೊಳ್ ಸಂಧ್ಯಾನಿಯಮಮಂ ನಿರ್ವರ್ತಿಸಿ

ತಪದೊಳ್ಕಳಿಪದೆ ಕಾಲಮ
ನಪಾರಮಂ ವಿಷಯಕಾಂಕ್ಷೆಯಿಂದಿನ್ನವರಂ
ಕ್ಷಯಿಸಿದೆನೆಂದು ನಿರ್ವೇ
ಗಪರಂ ವೈರಾಗ್ಯಪರಮಪದದೊಳ್ನಿಂದು ೯

ಸಕಳಚತುರ್ಗತಿದುಃಖೈ
ಕ ಕಾರಣಂ ಕ್ರೋಧಮಾನಮಾಯಾಲೋಭಾ
ತ್ಮಕಮಶುಚಿದ್ರವ್ಯಕ್ಷೇ
ತ್ರಕಾಲಭವಭಾವಭೇದಮೀ ಸಂಸಾರಂ ೧೦

ವ|| ಎಂದು ಭಾವಿಸುತ್ತುಂ ಸಜ್ಜೆವನೆಗೆ ಬಿಜಯಂಗೆಯ್ದು ಸುಖಪ್ರಸುಪ್ತನಿರೆ

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಳಂ
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ
ರೋಡಿ ಕಬಿಲ್ದು ಬೀೞ್ವ ಕಳಿವೆಗಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್ ೧೧

ಛವನವನಂಗಳಿಂ ಸರಸಸಾರಸಭೃಂಗರತಾಂಗನಾದಮ
ತ್ರಪಿರಳಮಾಗಲುಣ್ಮೆದುವು ಭೋಂಕನೆ ಭೂಭುಜ ಸೆಜ್ಜೆಯಿಂದಮು
ಪ್ಪವಡಿಸಿ ಮುಖ್ಯಮಂಗಳಪರಂಪರೆಯಿಂ ಜಿನಪೂಜೆಯಂ ಮಹೋ
ತ್ಸವದೊಳೆ ಮಾಡಿ ಸಾಧಿಸಘಸಂಘವಿರೋಧಿಯನೆಂಬ ಮಾಟ್ಕೆಯಿಂ ೧೨

ಕರೆಯೆ ಗೃಹದೀರ್ಘಿಕಾವಿಹ
ಗರಾಜಿ ಪರಿಹರಿಸಿ ಭೃಂಗ ನೃಪನಯನೇಂದೀ
ವರಮಂ ಕಾತರೆ ನಿದ್ರಾ
ಪರವಧು ಮೋಹಿಸಿದಳಾಗಳಿಂದೀವರಮಂ ೧೩

ದಿವಸಶ್ರೀಗೆತ್ತಿಸೆ ಗಗ
ನವಲ್ಲಭಂ ಕಾಂಚನಾತಪತ್ರವನೀತ
ಱುವೆ ಪಂಜರಶಾಖೆಗಳೆನೆ
ರವಿ ಪಸರಿಸೆ ಕಿರಣಜಾಳಮುದಯಂಗೆಯ್ದಂ ೧೪

ವ|| ಅಂತು ನೇಸಮೂಡುವುದುಮನುಷ್ಠಿತವಿಹಿತಾನುಷ್ಠಾನಂ ಧರ್ಮ ಸಹಾಯನಪ್ಪುದಱಿಂ ವಿವಿಧಾಯುಧನಿವೃತ್ತಿಗೆಯ್ದುಂ ನಿಶ್ಚಳಗುಣಪತಾಕಾಸಮೇತನಪ್ಪುದಱೆನಾತಪತ್ರ-ವಿಳಾಸಮನುದಾಸೀನಂಗೆಯ್ದುಂ ರತ್ನತ್ರಯೀಭೂಷಣಭೂಷಿತನಪ್ಪುದಱೆ ಪಲತೆಱದ ಭೂಷಣಮನುಱುಸೆಱೆಗೆಯ್ದುಂ ಆರ್ತಘರ್ಮನಿರ್ಮುಕ್ತನಪ್ಪುದಱಿಂ ವಾಳವ್ಯಜನಪವಮಾನನವಮಾನಂಗೆಯ್ದುಮದಲ್ಲದೆಯುಂ

ಇದು ಮಾಟದ ಸಿಂಹಾಸನ
ಮಿದನೇಱುವುದಾವಗಹನಮೆನಗೆಂದದನೊ
ಲ್ಲದೆ ಕಲ್ನೆಲೆಯೊಳ್ ಗಿರಿಶಿಖ
ರದ ಸಿಂಹಾಸಮನೇಱಲುದ್ಯತನಾದಂ ೧೫

ಇದು ಜಾತಿಭಂಗಮಂ ತಳೆ
ದುದು ಮಾತಂಗಪ್ರಸೂತಮುನ್ಮದಮಧುಪಾ
ಸ್ಪದಮೇವುದೆಂದದಂ ಮು
ಟ್ಟದ ತೆಱದಿಂ ತೊಱೆದನಂದು ಗಜವಾಹನಮಂ ೧೬

ನಡೆವುದು ಕುಪತದೊಳೆಂತುಂ
ಪಿಡಿಯಿಸಿದುದು ಕೀೞನೆಂದು ಹಯವಾಹನಮಂ
ಕಡೆಗಣಿಸಿ ಧರ್ಮಪಥಮಳ
ವಡೆ ಮೇಲಂ ಪಿಡಿವ ಬಗೆಯನರಸಂಬಗೆದಂ ೧೭

ನಿಜಪರಿಭ್ರಮಣದಿಂ ರಜಮಪ್ಪದೆಂದು ಭೂ
ಭುಜನೊಲ್ದನಿಲ್ಲ ರಥಮಂ ನೀರಜಮಪ್ಪ
ನಿಜಮನೋರಥದ ನೆಱವಿಂದೆ* ೧೮

ವ|| ಅಂತುನಿಸ್ಪೃಹಸ್ವಾಂತನಾಗಿ ತಪೋವನಕ್ಕಂಪೇ ಪೋಗಲೆಂದ ನಿಶ್ಚಯಿಸಿ ಮುಂದಿರ್ದ ನಿಜನಂದನನ ವದನಾರವಿಂದಮಂ ನೋಡಿ

ನಿನಗೆ ಕಲಿಸುವುದೆ ವಿದ್ಯಾ
ಧನಂಗೆ ಪೆಱಪೆಱವನಿನಿತೆ ಮಱೆಯದೆ ಮನದೊಳ್
ತನಯ ನಿಲಿಸುವುದು ಗುರುಜನ
ವಿನಯಮನತಿಶಯದ ಧರ್ಮಪರಿಪಾಲನಮಂ ೧೯

ವ|| ಎಂಬುದುಂ ನಿಜ ಜನಕಗಮನಪರಿಚ್ಛೇದಮನಱಿದು ಶಿಖಿಮುಖಕ್ಕೆ ವಂದ ಪಾದರಸದಂತೆ ನಿಜನಿಸರ್ಗಧೈರ್ಯಗುಣಂ ದೆಸೆದೆಸೆಗೆ ಪೋಗೆ

ಮನಮೆಳದಾಗೆ ಮನ್ಯುಮಿಗೆ ತಱ್ತಿಮೆಯಿಂ ಕರೆಗಣ್ಮೆ ಸೂಸೆ ಕ
ಣ್ಬನಿ ಪೊಱಪೊಣ್ಮೆ ಗಗ್ಗರಿಕೆ ಹಾರವಮುತ್ಕಟಮಾಗೆ ನಂದನಂ
ಜನಕನ ಕಾಲ ಮೇಲೆ ಕವಿದಿರ್ದಟಱುತುಂ ಪಿರಿದಪ್ಪ ಶೋಕಮಂ
ಜನಿಯಿಸಿದಂ ದಲಾಸಭೆಗೆ ತಂದೆಯಗಲ್ಕೆಯನಾರೊ ಸೈರಿಪರ್ ೨೦

ಉಡಿಸಿಯುಮೂಡಿಯುಂ ನಡಪಿದಾಳ್ದನಗಲ್ಕೆಯ ನೋವೆ ಚಿತ್ತದೊ
ಳ್ಮಡಗಿದ ಕೆಂಡದಂತೆ ಕನಲುತ್ತಿರೆ ಕಾಸಿದಯಶ್ಶಲಾಕೆಯಂ
ತೊಡನೆ ಕುಮಾರನಟ್ಕೆಯ ಸರಂ ಕಿವಿಯಂ ಪುಗೆ ಕಣ್ಣನೀರ್ಗಳಂ
ಸಿಡಿಸಿಡಿದಂದು ಶೋಕರಸಭಾಜನಮಾದುದು ತತ್ಸಭಾಜನಂ ೨೧

ವ|| ಆಗಳಂತಃಪುರಕಾಂತೆಯರುಂ ಪೆಂಡವಾಸದೆಳಪೆಂಡಿರುಮರಸನ ತಪೋಗಮನದೊಳೊ-ದವಿದ ವಿಷಾದಮಂ ಸೈರಿಸದೆ

ನೋಡುವೆನೆಂದು ಪೋಗಿ ಪಡೆಯಂ ಸಿಡಿಲಿಂ ಕಿಡೆದಾಲಮಂ ನೃಪಂ
ನೋಡುವುದೆತ್ತಲೊಲ್ದೊಲಿಸಿ ಮನ್ನಿಸಿ ಮೆಚ್ಚಿಸಿ ನಮ್ಮನೀಗಳೀ
ಡಾಡಿ ತಪಕ್ಕೆ ಪೋಪ ಬಗೆಯೆತ್ತಲಿದಾರಡಿಯೆಂದು ಮೆಯ್ಯನೀ
ಡಾಡಿ ಬೆಳರ್ತುದಟ್ಟುದಱಲಿಂದವರೋಧವಧೂಕದಂಬಕಂ ೨೨

ಬಿಡುತರೆ ತೋಱಕಣ್ಬನಿ ಪದಾಂಬುರುಹಕ್ಕೆಱಗಿರ್ದು ಲಲ್ಲೆಗೆ
ಯ್ದೊಡಮಿಟೆಕೆಯ್ದು ಪೋಪನರಸಂ ಪುರುಡಿಂದಳಿವಾತಿನೇವಮಂ

* ೧೮ನೆಯ ಪದ್ಯದಲ್ಲಿರಬೇಕಾದ ಇನ್ನೊಂದು ಸಾಲು ಮೂಲದಲ್ಲೇ ಇಲ್ಲ.

ಪಿಡಿದು ತಪೋವನಕ್ಕೆ ನಡೆವಲ್ಲಿ ಗಡಮ್ಮಳಿಲಲ್ಲೆಗಿನ್ನೊಡಂ
ಬಡುವನೆ ಪೇಟಿಮೆಂದು ದೆಸೆಗಾಣರ ಕಣ್ಬನಿಯಿಂ ಲತಾಂಗಿಯರ್ ೨೩

ಪುರುಡಿನ ಮಾತನೋತವಳ ಲಲ್ಲೆಯ ಮೆಲ್ನುಡಿಯಿಂ ವಿಪಂಚಿಯಿಂ
ಚರಮನೆರಟ್ಟಿಲಂಗಳೊಳಮೊತ್ತುವ ಬಣ್ಣದ ನುಣ್ಬರಂಗಳೊಳ್
ಬೆರಸಿದ ಗಾಯಿನೀರಸದ ಗಾನಮನಾಲಿಸುವೀ ನೃಪಂಗೆ ನಿ
ಬ್ಬರಿಸುವ ಕಾಡ ಸೀಱುಡುವಿನಬ್ಬರಮಾಲಿಸುವಂತುಟಾದುದೇ ೨೪

ಘನಕುಚಯುಗಳಮೆ ತಲೆಗಿಂ
ಬೆನೆ ರತ್ಯಂತಪ್ರಸುಪ್ತಿಯಂ ಮೆಱೆವೆಮ್ಮೀ
ಮನದಾಣ್ಮಂ ನಿರ್ಜಂತುಕ
ಮೆನಿಸಿದ ಪಾಸಱೆಯ ಮೇಲೆ ಪಡಲಾರ್ತಪನೇ ೨೫

ಇವು ಪಱೆದೀಡಾಡಲ್ತ
ಕ್ಕುವೆ ತುಂಬಿಯ ಬಂಬಲೆಂಬ ಪಂಬಲನಾರ್ಗಂ
ಬವರಿಸುವ ನೃಪನ ಕುಂತಳ
ನಿವಹಂಗಳ್ ಬಹಳಮೃಗಮದಾಮೋದಂಗಳ್ ೨೬

ಪೂವಲಿಗೆಯ್ದ ಪೂವಿನ ತೊಡಂಬೆಯ ನಿಬ್ಬರಮಪ್ಪ ಸೋಂಕಿನೊಳ್
ನೋವುವೆನಿಪ್ಪ ಮೆಲ್ಲಡಿಯನೆಂತಿಡುವಂ ಮಹಿಪಂ ತಪೋವನ
ಗ್ರಾವವಿಕೀರ್ಣಮಪ್ಪೆಡೆಯೊಳೆಂದಳವಲ್ಲದ ಕಣ್ಣ ನೀರ್ಗಳಂ
ತೀವಿದುದಂದು ಗಗ್ಗರಿಕೆ ಕೈಮಿಗೆ ವಾರವಿಳಾಸಿನೀಜನಂ ೨೭

ವ॥ ಅಂತು ನಿಜಸಭಾಜನಮನಸ್ಸರೋವರಂ ಶೋಕರಸಪ್ರವಾಹಭರದಿಂ ಕಲಂಕೆಯುಂ ತಣ್ಣೆಲರ ತೀಡದಿಂ ಕಿರ್ಚು ಕೋಡಿ ಸೇಡುಗೊಳ್ಳದುದ್ದಮುರಿವಂತವರ ಶೋಕವಿಕಳತೆಯ ತನಗೆ ವೈರಾಗ್ಯಮಂ ಪೆರ್ಚಿಸೆಯುಂ ವೈಶ್ರವಣವಲ್ಲಭಂ ಚರಣ ಸರಸೀರುಹದೊಳ್ಪೊರಳ್ವ ಮುಗನಂ ನೆಗಪಿ ವಿಶಾಳಕಮಳದಳಳಿತತುಷಾರ ಬಿಂದುವನರವಿಂದಬಾಂಧವನೆಳ-ವಿಸಿಲಿಂ ತೊಡೆವಂತೆ ಕರಕಿಸಲಯಂಗಳಿಂ ಕಣ್ಬನಿಯಂ ತೊಡೆದು

ಗುಣವಟೆಯೆ ನೋವುದೇವುದೊ
ಗುಣದಭ್ಯುದಯಕ್ಕೆ ನೋವು ಚೋದ್ಯಮೆ ದಿವಿಜಾ
ಗ್ರಣೆಗಳನೆಱಗಿಪ ತಪವಿದ
ನೆಣಿಸದೆ ಜಡನಂತೆ ಮೋಹಮೂರ್ಛಿತನಪ್ಪೈ ೨೮

ಅಱಿಯಮೆಯಿಂಪೆಣ್ಬಡೆ ಅ
ಯ್ದೞಿದುಮ್ಮಳಿಸುವೊಡಮವರ ಮುಷ್ಪರಿಣತಿಯುಂ

ಮಱಿಯಿಪುದುಗೆಟ್ಟು ನೀಂ ಮೆ
ಯ್ಮಱೆವೊಡೆ ಸುರಹಿತಮನಹಿತಮಂ ನೆನೆಯಿಪರಾರ್ ೨೯

ತನಗಂ ಪೆಱಿಂಗವಾಕ್ರಂ
ದನವಧಪರಿದೇವನಂಗಳಂ ಜನಿಯಿಪುದುಂ
ಜನಿಯಿಸುಗುಂ ದುರ್ಗತಿಬಂ
ಧನಮೆಂಬೀ ದಿವ್ಯಭಾಷೆ ನಿನಗಶ್ರುತಮೇ ೩೦

ವ॥ ಎಂದು ಮಗನ ವಿಷಾದವಹ್ನಿಯಂ ಸುಬಾಷಿತಾಮೃತದಿಂ ನಂದಿಸಿ ಪರಿಜನಮಂ ಪ್ರತ್ಯೇಕಸಮರ್ಪಣಂ ಮಾಡ್ಪ ಸಮಯದೊಳ್

ಪೊರೆದಂ ತನ್ನೊಳಬೇದಮಾಗ ಪಿರಿಮುಂ ಕೊಂಡಾಡಿದಂ ನಮ್ಮನೀ
ಧರಣೀಶಂ ಧರಣೀಶನಿಂ ನಮಗೆ ಮುನ್ನಂ ದೃಷ್ಟಸೌಖ್ಯಂ ನಿರಂ
ತರಮಾಯ್ತೀಗಳದೃಷ್ಟಸೌಖ್ಯದೆಡೆಗಂ ಸಂದೇಹಮೇಂ ತಾನೆ ದಲ್
ಗುರುವಾದಂ ವಲಮೆಂದು ಪೂಣ್ದುದೊಡವೋಗಲ್ ಮಾನ್ಯರಾಜನ್ಯಕಂ ೩೧

ವ॥ ಅಂತು ತನ್ನೊಡನೆ ತಪಕ್ಕೆ ತಱಿಸಂದ ಮೂನೂರ್ವರರಸುಮಕ್ಕಳ್ವೆರಸರಮನೆಯಂ ಪೊರಮಟ್ಟು ರಾಜಮಾರ್ಗಂಬಿಡಿದು ನಡೆವಡೆಯೊಳೆಡೆಗಿಱಿದು ನೆರೆದು ನಿಂದು ನೋಳ್ಪ ಪುರಜನದೊಳಖಿಳವಿದ್ಯಾಪರಿಣತರಪ್ಪ ವಯಃಪರಿಣತರ್ ತಮ್ಮೊಳಿಂತೆಂಬರ್

ಸುರರಾಜಂ ಬಯಸಲ್ಕೆ ತಕ್ಕ ಸಿರಿಯಂ ಪುಲ್ಲಿಂ ಗಡಂ ನೊಚ್ಚಿತಾ
ಗಿರೆ ಕಂಡಂ ಲಲಿತಾಂಗಮಂ ತಪದಲಂಪಿಂ ಕಲ್ಲ ಕಂಬಕ್ಕೆ ಮೆ
ಯ್ಸಿರಿಗಂಡಂ ಪ್ರಿಯದಾರದಾರಕಧೃತವ್ಯಾಮೋಹಮಂ ವಜ್ರವ
ಲ್ಲರಿಯಂ ಬಾಳಮೃಣಾತಂತುಗೆಣೆಗಂಡಂ ಗಂಡನೇಂ ಧೀರನೋ ೩೨

ವ॥ ಮತ್ತಮಲ್ಲಿ ಕೆಲರಳೀಕವಿದಗ್ಧರಪ್ಪ ಕುಜೇತುಕುಶಲರಿಂತೆಂಬರ್

ಅರಸೆಂಬೀ ಪೆಸಱಿಂಗೊಂದನಿಟ್ಟು ಕಿಱುಗೂಸಿಂಗಾವಗಂ ನುಂಗಲೀ
ಧರೆಯಂ ಪುಣ್ಣದರೀ ಪ್ರಧಾನಪುರುಷರ್ಮಾಯನಟೀಲಾಸ್ಯಜ
ರ್ಜರಹಸ್ತರ್ಬಱುಗರ್ಜಮಂ ಖಳರ ಮಾತಂ ನಂಬಿ ಮೇಗಿಲ್ಲದೀ
ಸಿರಿಯಂ ಬಿಟ್ಟು ತಪೋವನಕ್ಕೆ ನಡೆವಂ ಭೂಪಾಳನೇಂ ಪ್ಯಾಳನೋ ೩೩

ವ॥ ಮತ್ತಮಲ್ಲಿ ಕೆಲರ್ವಿಷಯ ರಸವಿಲೀಯಮಾನ ಮಾನಸರಪ್ಪ ಸುಕುಮಾರ-ಮತಿಗಳಿತೆಂಬರ್

ಪಿರಿದಪ್ಪ ಪುಣ್ಯದಿಂದಂ
ದೊರೆಕೊಂಡೀ ರಾಜ್ಯಲಕ್ಷ್ಮಿಯಂ ಬಿಟ್ಟುಂ ಸ

ಮ್ಮರಸಂ ಜಡಮತಿ ಪೊಕ್ಕಪ
ನರಣ್ಯಮಂ ಕಳಿವರಾರೊ ವಿಧಿವಿಳಸನಮಂ ೩೪

ವ॥ ಎಂದು ತಂತಮ್ಮ ಮತಿಗನುರೂಪಮಾಗೆ ಬಹುಜನವಿಕಲ್ಪಜಲ್ಪಂ ನೆಗೞೆ ಪುರಮಂ ಪೊರಮಟ್ಟು ಕಿಱಿದಂತರಮಂ ನಡೆದೊಂದು ಕನಕಕಮಳವನ ಸಮೀಪದೊಳ್ನಿಂದು ಕುಮಾರಂಬೆರಸು ಪರಿಜನಮನೆಂತಾನುಂ ಬೀಳ್ಕೊಳಿಸಿ ಜಿನಾಗಮಪ್ರಧಾನರಪ್ಪ ಶ್ರೀನಾಗದತ್ತ ಭಟ್ಟಾರಕರಿರ್ದ ಶ್ರೀಪರ್ವತಕ್ಕಭಿಮುಖನಾಗಿ ಪಯಣಂಬೋಗೆವೋಗೆ

ತನಗಿದಿರ್ವಂದು ವಾಜಿಗಳನಾನೆಗಳಂ ಬಿಡುವೊಂಗಳಂ ವಿಳಾ
ಸಿನಿಯರನಾರಮಂ ತಿಸರಮಂ ಚಳಿಯಂ ಪಟಿಯಂ ದುಕೂಲಮಂ
ತನತನಗಿತ್ತು ಮೆಚ್ಚಿಸಲೊಡರ್ಚೆ ದರಸ್ಮಿತನೊಲ್ಲದಿರ್ದುಮೇಂ
ಜನಪದಮುಖ್ಯರಂ ತಣಿಪಿದಂ ಜನಪಂ ಪ್ರಿಯವಾಕ್ಯಸಾದದಿಂ ೩೫

ಅರಸಿಯರುಂ ವಿಳಾಸಿನಿಯರುಂ ಪೆಱಗಿರ್ದರದೇಕೆ ಗಂಧಸಿಂ
ಧುರಘಟೆವಾಜಿರಾಜಿ ರತಸಂಕುಳಮೆಲ್ಲಿಗೆ ಪೋದುವೆಲ್ಲಿ ನಿಂ
ದರೊ ಧವಳಾತಪತ್ರವಿವಿಧಧ್ವಜಚಾಮರಹಸ್ತರಂಗರ
ಕ್ಕರ ನೆರಮಿಲ್ಲದಿತ್ತಲವನೀಶ್ವರನೊರ್ಬನೆ ಬರ್ಪುದಾವುದೋ ೩೬

ವ॥ ಎಂದು ತಮ್ಮೊಳುಮ್ಮಳದಿಂ ನುಡಿದ ಜನಪದಜನಾವ್ಯಾಮೋಹ ವಚನಮನಾಲಿಸುತ್ತುಂ ಶುಚಿಪ್ರದೇಶಮೆ ಬಿಡುದಾಣಮಾಗೆ ಕತಿಪಯ ಪ್ರಯಾಣಂಗಳಂ ನಡೆಯೆ ನಡೆಯೆ

ಸರಳ ಲತಾಲಸ್ಯನಟಂ
ಹರಿಣೀರೋಮಂಥಮಂಥರಂ ಲವಲೀದು
ರ್ಮರಮುಖರಂ ಕರಿಕರಶೀ
ಕರಶೀತಳಮೆಸಗಿದತ್ತರಣ್ಯಸಮೀರಂ ೩೭

ರೌದ್ರವಚರವಿಕೀರ್ಣಂ
ವಿದ್ರುಮಶೋಭಾವಹಂ ವಿಷೋರಗವಿಷಮಂ
ಮುದ್ರಿಸಿ ದೆಸೆಯಂ ಲವಣಸ
ಮುದ್ರಮನನುಕರಿಸಿದತ್ತಗಣ್ಯಾರಣ್ಯಂ ೩೮

ತಾಂಗಿದುದು ಗಾಳಿಯಂ ದೆಸೆ
ಯಂ ಗವಸಣಿಸಿದುದು ಮೇಗು ಮೊಗೆದಾಗಸಮಂ
ನುಂಗಿದುದೆನೆ ಕಟ್ಟಿಲಿಸಿ ಕ
ರಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ ೩೯

ವಸುಧಾವಿಶ್ರುತರಾಜವಂಶತಿಳಕಂ ದುರ್ಗಾಧಿಪಂ ಕೊಂಬುಗೊ
ಟ್ಟು ಶರಣ್ಬೊಕ್ಕ ತಮಕ್ಕೆ ತಟ್ಟಿರ ಮಧುಚ್ಛತ್ರಾತಪತ್ರಂಗಳ
ರ್ವಿಸೆ ನಿರ್ಮೋಕಪತಾಕೆಗಳ್ ಮೊಟಿಗೆ ಚಿರೀಭೇರಿಗಳ್ ಬಯ್ಸು ಪಾ
ಡಿಸುವಂ ಕೀಚಕಗಾಯಕಪ್ರಕರದಿಂ ಚಂದ್ರಾರ್ಕತೇಜಂಗಳಂ ೪೦

ವ॥ ಅಂತಗುರ್ಬುವಡೆದು ಪರ್ಬಿ ಬೆಳೆದಡವಿಯೊಳಗೆ ನಡೆಯುತ್ತುಂ

ಪಿರಿದಪ್ಪುನ್ನತಿವೆತ್ತು ಮೇವುದೊ ಘಳಂ ಕೈಸಾರೆಯಲ್ತುಂತೆ ನಿ
ಷ್ಠುರವೇಷಂ ಮದಸಮ್ಮದಪ್ರಸವಮಂತ್ರಸ್ಸಾರಬಾಷ್ಯಂ ವೃಥಾ
ಪರುಷವ್ಯಾಹರಣಂಪರರ್ತಚರಿತಚ್ಛಾಯಾತಿದೂರಂ ದ್ವಿಜಾ
ಪರಸೇವ್ಯಂ ತೃಣರಾಜನಿರ್ದುದೆನುತುಂ ಭೂವಲ್ಲಭಂ ನೋಡಿದಂ ೪೧

ವ॥ ಮತ್ತೊಂದೆಡೆಯೊಳ್

ಎಳಿದಿಕೆಯೆ ಚೀರಿಗೆ ವಾ
ಪಾಳಂ ಪಕ್ಕಾಯ್ತು ಶೂನ್ಯಕೋಶನಿವಾಸಂ
ಶೋಲಸ್ವಭಾವನವಗತ
ಮೂಲಬಲಂ ನಾಮಧಾರಕಂ ರಾಜಕುಜಂ ೪೨

ಸುಮನೋವಿಳಾಸವಿಭವಂ
ಸಮನಿಸದೆನೆ ಫಳಿತಮಾಗಿ ಕಷ್ಟನ ಸಿರಿಯೊಳ್
ಸಮನಾಯ್ತೌದುಂಬರತರುವಾ
ರ್ಗಮಭೋಜ್ಯಂ ಕ್ಷುದ್ರಜಂತುಜನ್ಮಾವಾಸಂ ೪೩

ವ॥ ಎನುತುಂ ಬರ್ಪುದುಂ

ವ್ಯೋಮಮನೆಯ್ದಿದ ತರುಶಾ
ಖಾಮುಖಿಮಳ್ಳಿಜೆಯೆ ತರಳತಾರಾಸ್ತೋಮಂ
ಭೂಮಂಡಳಕ್ಕೆ ವಂದಂ
ತಾಮಳಕಫಳಂಗಳೆಸೆದುವೋರೊಂದೆಡೆಯೊಳ್ ೪೪

ವ॥ ಅಂತನೇಕಾನೋಕಹಬಹಳಮಪ್ಪ ಗಹನಾಂತರಾಳದೊಳ್ ಚಂದನಲತೆಯ ಬಾಟಿಜ್ಞೊಂಪದ ಪುಳಿಲೊಳ್ಳಿಂದು .

ಪರಭೃತಲೋಚನಚ್ಛವಿಯ ಗುಂಜೆಯ ಭೂಷಣಮಂ ತೊಡರ್ಚಿ ಕುಂ
ಪರತನುಬಿಂದುಶೋಣರುಚಿಯಂ ಭುಜಪತ್ರಮನುಟ್ಟಳೀಂ ವನೇ

ಚರಿ ಜನತಾಪಿಳೋಚನವಶೀಕರಣಾಂಜನದಿಂ ಮನೋಭವಂ
ಪಿರಚಿಸಿ ಬಣ್ಣಮಂ ಬರೆವ ಚಿತ್ರದ ಪೆಣ್ಣನೆ ಕಣ್ಗೆವಂದಳೋ ೪೫

ವ॥ ಮತ್ತೊಮೊಂದೆಡೆಯೊಳ್

ತರುಣತಮಾಳವಲ್ಲರಿಯಶೋಕೆಯ ಪೂಗಳ ಗೊಂಚಲಾಂತುವ
ಜ್ಜರಿಯನೆ ತೊಟ್ಟುಕೊಂಡು ಗುರುಗುಂಜೆಯ ಪಚ್ಚಮನುಟ್ಟುಕೊಂಡು ತಾ
ಪರೆದಳಿರಂ ತಮಾಳವನಮಾಳೆಯ ತಣ್ಣೆಟಿಲೊಳ್ ಪುಳಿಂದಸುಂ
ದರಿ ನೆಲಸಿರ್ದಳೇಟಿಸೆ ಮದಾಳಿಗಳಂ ಕುಟಿಲಾಳಕಾಳಿಗಳ್ ೪೬

ವ॥ ಮತ್ತೊರ್ವಳ್ ನಿಜನಿಕಟರಕ್ತಾಶೋಕತಳಸೈಕತಪ್ರದೇಶದೊಳ್ ಪುಳಿಂದವೃಂದಾರಕನ ಪರ್ಯಂಕತಳಮನಳಂಕರಿಸಿ ಪರಿಚಾರಕಿಯೆ ಬಾಜಿಸುವ ವಿಪಂಚಿಯಿಂಚರದೊಳೊಡಂಬಟ್ಟು ಶಬರಬಾಳಕಿಯರ ಕಾಕಲೀಧ್ವನಿಯೊಳುಪಾಶ್ರಯಂ ಬಡೆದು

ಆಜಡಿವಟ್ಟುದಾಜಡಿ ವಿಪಂಚಯ ಜೀವಿಗೆ ಜೀವಮಿಲ್ಲ ಮೆ
ಯ್ಪೋಜೆದುವೀಗಳೇಟು ಸರಮಂಗಭವಂಗೆನ ಪಾಡಿದಳ್ ನಯಂ
ಬೇಜಿ ತೆರಳ್ಕೆ ಬೇಜಿ ಜತಿ ಬೇಜಿ ನಿವರ್ತನೆ ಬೇಜಿ ಬಿನ್ನಣಂ
ಬೇಜಿ ಬೆಡಂಗು ಬೇಜಿನ ಪುಳಿಂದಿ ಜಗಜ್ಜನಕಾಮಧೇನುವಂ ೪೭

ವ॥ ಮತ್ತೊಂದೆಡೆಯೊಳೆಳವಸಲೆಯ ಬಾಸಣಿಗೆಯೆನಿಸುವೆಳವಿದಿರ ಪೊದಜ ತಣ್ಪಿನೊಳ್

ಇದು ಕಣ್ಮಲರೊಲ್ ಮಲೆದಿ
ರ್ಪುದು ಗಡ ಸೆಜಿಗೆಯ್ವೆನೆಂಬವೋಲೊರ್ವಳ್ ದೀ
ವದ ಪುಲ್ಲೆಯನತನುವ ದೀ
ವದ ಪುಲ್ಲೆಯೆನಿಪ್ಪ ಶಬರವಧು ಪಿಡಿದಿರ್ದಳ್ ೪೮

ವ॥ ಅಲ್ಲಿಂದತ್ತಲೊಂದು ಕಾಸಾರತೀರದಿಜುಂಬಿನೊಳ್ ಪರ್ವಿ ಸುರ್ವುಗೊಂಡು

ಬಿದಿರ ಸಿಡುಂಬಿನೊಳ್ ಗಜಜೆಗರ್ಜಿಸಿ ಪೆರ್ವುಲಿ ಪಾಯೆ ಕಯ್ದುಕೆ
ಯ್ಯದೆ ಕೆಲಸಾರ್ದು ಮೆಯ್ಯೊಣರ್ದು ಬಂಚಿಸಿ ಗಂಟಲನೊತ್ತಿ ಕಿರ್ಬಸಿ
ರ್ತಿದಿಯವೊಲಾಗೆ ಕಣ್ಣು ಮುಳೆ ಬಿರ್ದು ಮಸುಂಬಿ ಜವಂಗೆ ಬಿರ್ದನಿ
ಕ್ಕಿದನುಸಿರಿಕ್ಕಲೀಯದುಸಿರಿಕ್ಕುವವೋಲ್ ಶಬರಂ ಮಹಾಬಳಂ ೪೯

ವ॥ ಅಲ್ಲಿಂ ಮುಂದೆ ಮುಂದ್ಯೆಸಿದ ಚಂದನಸಲ್ಲಕೀ ಸರಳತಮಾಳಸಾಲಲವಲೀಲವಂಗಲತಾನಿಕುಂಜದೊಳ್

ನೃಪನನಿದಿರ್ಗೊಳ್ವವೋಲೆ ಯೂ
ಥಪತಿ ಮನಂಗೊಳಿಸಿದತ್ತು ಯೂಥಸನಾಥಂ

ಪುಳಾಗ್ರಪಲ್ಲವೋಲ್ಲಸಿ
ಪೂರ್ಣಕುಂಭಪ್ರಶಸ್ತನಕ್ಷತಹಸ್ತಂ ೫೦

ಮದಧಾರಾಜಳದಿಂ ವನಂ ಬೆಳೆಯೆ ಸೋಂಕಿಂ ಸೊಪ್ಪು ಸೊಪ್ಪಾಗೆ ಮು
ದಿನೆತ್ತಂ ಕೊಱಟಾಗೆ ಲಂಡಮೊದವಿಂದಂ ತನ್ನದೀಕೂಲಮಂ
ದಡುತ್ತಿರ್ದುದು ಪೋತಬೆಕ್ಕಕಳಭಾಕೀರ್ಣಂ ಗಜಾದ್ವೈತ ಸೃ
ದಲೆಂಬಂತಿರೆ ಭದ್ರಮಂದಮೃಗಸಂಕೀರ್ಣಂ ಕರೀಂದ್ರೋತ್ಕರಂ ೫೧

ವ|| ಅಲ್ಲಿ

ಡಿ ಮೊಲೆಯೂಡಿ ಪಲ್ಲಮಱೆಯಂ ಕರಪುಷ್ಕರದಿಂ ಕಪೋಳಮಂ
ಡೆಮು ಲವಂಗಪಲ್ಲವಮನಿತ್ತು ವಿಶಾಳಮಾಳವೀಥಿಯೊಳ್
ಡೆಯಿಸಿ ನಿರ್ಝರೋದಕಮನೂಡಿಸಿ ಚಿತ್ತದೊಳಾದ ಮೋಹಮ
ಟ್ಟುಡಿದಿರೆ ಬಿಚ್ಚತಂ ಕಡುಪನೊಲ್ಲದೆ ನಿಂದುದದೊಂದು ತಾಣದೊಳ್ ೫೨

ವ|| ಮತ್ತೊಂದು ಪ್ರದೇಶದೊಳ್

ಸ್ಥಳಕಮಳಪಾಂಸುವಂ ಬೆ
ನ್ನೊಳೊಟ್ಟಿಕೊಂಡೆತ್ತಿ ಹಸ್ತಮಂ ತದಿಕಿನ ಕಂ
ವಳಿರನರೆಗರ್ಚಿ ಪರಿದುದು
ಕಳಭಂ ಕರಿಣಿಯ ಕಟಾಕ್ಷಮೋಡವರಿವೆನಗಂ ೫೩

ವ|| ಮತ್ತೊಂದು ಕರಂಜಕುಂಜದೊಳ್

ವಿಸಟಂಬರಿದಾಟಿಂಗೊಂ
ಡು ಸರಿತ್ತಟಮಂ ತರಂಗನಿರ್ಘೋಷಮನಾ
ಲಿಸಿ ಬೆರ್ಚಿ ಬಂದು ತಾಯ್ಬಿಡಿ
ಯ ಸೋಂಕಿಲಂ ಸೋಂಕಿ ನಿಂದುದೊಂದಿಭಕಳಭಂ ೫೪

ವ|| ಅದಲ್ಲದೆಯುಂ

ಪಿಡಿ ಮತ್ತೊಂದೆಡೆಯಾದೊಡಂ ಕಳಭಮೊಂದೆಯ್ತಂದೊಡಂ ಕಾಯ್ದು ಮೆ
ಲ್ಪಿಡಿದೇಲಾಲವಲೀಲತಾಂಕುರಮನಿತ್ತೆಕ್ಕೆಯಿಂ ಚಿತ್ತಮುಂ
ಕಡೆಗಣ್ಣುಂ ಪರಿದೆಯ್ದೆ ಪೇಚಕಮನಾರಯ್ದೊಂದು ಪೇರಾಸೆ ಪ
ರ್ವಿಡಿಯುಂ ಕಾಮನ ಜಂತ್ರದಾನೆಯವೊಲೇಂ ಕೊಂಡಾಟದಿಂ ಕಾದುದೋ ೫೫

ಒಂದೆಡೆಯೊಳ್ಮುಗಿಲಂ ಮ
ತ್ತೊಂದು ಗಜಂ ತೇನತೇನಮಿಱಿದುದು ಧಾರಾ

ಸಂದೋಹಂ ಮದಧಾರಾ
ಸಂದೋಹಮೊಳೊದವಿ ಕಾಬ್ಬಿರಂ ಮಸಗುವಿನಂ ೫೬

ಅನವರತಗಂಡಕಂಡೂ
ವಿನೋದದಿಂ ಚಂದ್ರನಾಲಮಂ ಮುಱಿದತ್ತೆಂ
ಬಿನಮಾಲದ ಕೊಂಬಿಂ ಕಟ
ಮನುರ್ದುತಿರ್ದತ್ತುದಾತ್ತಮೊಂದು ಮದೇಭಂ ೫೭

ಜರದಜಗರವೆರಡಂ ಕೊಂ
ಡೆರಡುಂ ನಿಗ್ಗವದೊಳಿಱಿದು ಕೋಡೆತ್ತಿ ಮದ
ದ್ವಿರದಂ ಬೇಟಿಸೊಂದು ಭಯಂ
ಕರಮಾದುದು ಕಣ್ಗೆ ಮೂಱುಕಯ್ಯಾನೆಯವೋಲ್ ೫೮

ಬೆದಱಿ ಮನಂ ವನಸ್ಥಳಿಯೊಳೊಂದಿಭಮಿರ್ದುದು ಮೂರ್ಧಪಿಂಡಮ
ಲ್ಲದು ಶಿಖರಸ್ಥಳಂ ನಿಟಿಳಮಲ್ಲದು ಪಾಸಱಿ ಕರ್ಣತಾಳಮ
ಲ್ಲದು ಚಳಪಕ್ಷಸಂಹತಿ ಮದಪ್ಲವಮಲ್ಲದು ನಿರ್ಝರಪ್ಲವಂ
ಮದಗಜಮಲ್ಲದಿಂದ್ರನೊಳಿದಿರ್ಚಿದ ನೀಳನಗೇಂದ್ರಮೆಂಬಿನಂ ೫೯

ವ॥ ಮತ್ತೊಂದು ಗಿರಿದರೀಪರಿಸರದೊಳ್

ಸೊವಡಿಗಂಗೇವಯ್ಸಿ ಪುಲ್ವಟ್ಟೆಯ ತಿವಳಿಯಾನಾರಯ್ದು ಘರ್ಮದ್ರವಂ ಮೆ
ಯ್ನವಿರುಂ ಮೆಯ್ವೆರ್ಚೆ ಕಣ್ಬೇಡುರಿಯಾನುಗುಳೆ ಜಣ್ಮುಟ್ಟಿನೊಳ್ಕಂಡು ಕಾಯ್ದಿಂ
ಜವದಿಂ ಬೆಂಕೊಂಡು ಕೋಡೇಱಿನ ಮಸಕಮಗುರ್ವಾಗೆ ಕಾಡಾನೆಯೊಂದಂ
ತವೆ ಕೊಂಡುಂ ತನ್ನ ಕೋಪಂ ತವದಿರೆ ಮರವಾಯ್ದತ್ತು ಮತ್ತದ್ವಿಪೇಂದ್ರಂ ೬೦

ವ॥ ಮತ್ತಮಲ್ಲಿ

ಪರಿಮೂತ್ರಂ ಭಿನ್ನಲಂಡಂ ಸುರಿಯೆ ಮದಜಳಂ ಮೆಯ್ಯೊಳಳ್ಕಾಡೆ ಭೀತಾ
ತುರಚಿತ್ತಂ ಸುತ್ತಲುಂ ಪೆಳ್ಪೆಳಿಸಿ ನಯನಮುತ್ಕಂಪಿತಂ ಕುಂಚಿತಾಂಗಂ
ಪರಿವೇಳಾಕುಂಜಮಂ ಪೊಕ್ಕಿವೆ ಮಿಡುಕದೆ ನಿಂದತ್ತು ಮತ್ತೊಂದಿಭಂ ಸಾ
ರ್ತರೆ ಕರ್ಣಾಭ್ಯರ್ಣಮಂ ವನ್ಯಮೃಗವಿಳಯನಿಷ್ಪಾದಕಂ ಸಿಂಹನಾದಂ ೬೧

ವ॥ ಮತ್ತಮತ್ತಲೊಂದು ಕಟ್ಟಿಲಿಪ ತಮಾಳವೀಧಿಯೊಳ್

ಖರನಖರಂಗಳಿಂದುಗಿದು ಕೋಪದೆ ಸೀಳ್ದು ಸಿಱುಂಬುಳಾಡೆ ಕುಂ
ಜರಗುರುಕುಂಭಮಂಡಳದಿನಲ್ಲುಗುತಂದು ಕುಳುಂಪೆಗೊಂಡ ನ
ತ್ತಱಿ ಪೊಸಪಜ್ಜೆಯೊಳ್ಕೆದಱಿ ಕಣ್ಗೆಸೆದಿರ್ದುವು ರಕ್ತ ರಕ್ತ ಕೇ
ಸರಪರಿಶೋಭಿಕೇಸರಿಯ ಬೀರದ ಬಿತ್ತುಗಳಂತೆ ಮುತ್ತುಗಳ್ ೬೨

ವ॥ ತತ್ಸಮೀಪದೊಳ್

ಉಗಿಬಗಿಮಾಡುತ್ತುಮುದಾ
ತ್ತಗಜಮನೆಸೆದತ್ತು ರಕ್ತಕೇಸರವಿಸರಂ
ನಗಮಸ್ತಕದೊಳ್ ಸಂಧ್ಯಾ
ಶುಗಳಿಂ ರಂಜಿಸುವ ಚಂದ್ರನಂತೆ ಮೃಗೇಂದ್ರಂ ೬೩

ವ॥ ಅದರ್ಕನತಿದೂರದೊಳ್

ಭರದಿಂ ಲಂಘಿಸಿ ಗಂಧಸಿಂಧುರಶಿರೋಭಾಗಕ್ಕೆ ನಾಗಾರಿ ತ
ಚ್ಚರಣಂ ಮುಟ್ಟಿತು ಮುಟ್ಟದೆಂಬವಸರಕ್ಕಾಕಸ್ಮಿಕಂ ಪಾಯ್ದು ಕೇ
ಸರಿಯಂ ಕೇಸುರಿಯಂತೆ ಪೊಯ್ದು ಶರಭಂ ಕೊಂದಿಕ್ಕೆ ಸಂಜೀವನಂ
ದೊರೆಕೊಂಡತ್ತು ಗಡಾಗಜಕ್ಕೆ ವಿಪರೀತಂ ಕರ್ಮನಿರ್ಮಾಪಣಂ ೬೪

ತತ್ಪ್ರದೇಶದೊಳ್

ಚಂಡಪವಿದಂಡದಿಂದಾ
ಖಂಡಳನೆರಡೆಜಕೆಪೆಟ್ಟುಮಂ ತೂಗುವಪೊಲ್
ತುಂಡತುಳಾಮುಖದಿಂ ಭೇ
ರುಂಡಂ ತೂಗಿದುದು ಶರಭವೆರಡಂ ನಭದೊಳ್ ೬೫

ವ॥ ಅಂತತಿಭಯಂಕರಾಕಾರಮಪ್ಪ ಕಾಂತಾರಮಂ ದಾಂಟಿ ತಿರ್ಯಗ್ಜಾತಿ ಸ್ವಭಾವವ್ಯಾಮೋಹವೈರಸ್ಯಂಗಳಂ ನೋಡಿ ನೋಡಿ ನಿರ್ವೇಗಪರನಾಗಿ ನಡೆವ ರಾಜಸರ್ವಜ್ಞಂಗೆ ತೊಟ್ಟನೆ ಕಟ್ಟಿದಿರೊಳ್

ಬಹುರತ್ನಚ್ಛಾಯೆಯಿಂ ಚಿತ್ರಿಸಿ ನಿಖಿಳದಿಶಾಭಿತ್ತಿಯಂ ಚೂಳಿಕಾನೋ
ಕಹಶಾಖಾಹಸ್ತದಿಂ ಜಕ್ಕುಲಿಸಿ ರವಿರಥಾಶ್ವಂಗಳಂ ಗಂಡಶೈಲಾ
ಗ್ರಪಟತ್ಕೂಟಂಗಳಿಂದುದ್ಧರಿಸಿ ದಿವಮನೇಂ ಪೆಂಪುವೆತ್ತತ್ತೊ ಭೂಭೃ
ನ್ಮಹಿತಂ ಶ್ರೀಪರ್ವತಂ ನಿರ್ಝರಜಳಲಹರೀಲಾಸ್ಯಮಾಂಗಲ್ಯರಂಗಂ ೬೬

ಆ ನಗದ ನೆಗೆದ ಶಿಖರ
ಸ್ಥಾನದ ಮೇಗೊಗೆದ ಮಣಿಮಯೂಖಲತಾಸಂ
ತಾನದ ಲತಾಂತಮಂಜರಿ
ತಾನೆನೆ ರಂಜಿಪುದು ತರಳತಾರಾಪುಂಜಂ ೬೭

ತುಡುಗೆಯ ಮಾಣಿಕದೆಳವಿಸಿ
ಲೆಡೆಗಿಜೆದ ತಮಾಳವನದ ಕಡುಗಟ್ಟಿಲೆಯಂ

ಕಿಡಿಸೆ ಫಣಿಕಾಂತೆಯರ್ ಸೊಡ
ರ್ಗುಡಿಯೆನೆ ಜಲಜಲಿಪರಚಳಲೀಲಾವನದೊಳ್

ಯಕ್ಷವಧೂಜನಧವಳಕ
ಟಾಕ್ಷಪ್ರಭೆಗಳ್ ದುಕೂಳನವಕಾಂಡಪಟೀ
ಪ್ರಕ್ಷೇಪಣಪರಿಶೋಭೆಯ
ನಾಕ್ಷೇಪಂಗೆಯ್ದುವಲ್ಲಿ ವಲ್ಲೀಗೃಹದೊಳ್

ಸುರಕಾಂತಾಮೃದುಪದನೂ
ಪುರನಿನದಮನಂಜಿಯಿಂಚರಂಗೆತ್ತು ನಿರಂ
ತರಮುಲಿವ ಸರಸ್ಸಾರಸ
ವಿರುತಿಯಿನೇಕಾಂತಕಾಂತಮಚಳೋಪಾಂತಂ

ಇರವುವಡೆದಿನ್ನೆಗಂ ಚಿರ
ಪರಿಚಯದಿಂದಿಂದವಜ್ಞೆಗೊಳಗಾಯ್ತಂಬಂ
ತಿರೆ ಸುರ ಮಿಥುಂಗಳ್ಪಿರಿ
ಪರಿಸರನಂದನಮನಗಲವಿರುಳುಂ ಪಗಲುಂ

ವ॥ ಆ ಮಹೀಧರದೊಳೆಡೆಯಾಡುವ ವಿದ್ಯಾಧರವಧೂಜನದ ಸೋರ್ಮುಡಿಯಿಂ ಸೂ
ಪೊಂಗೇದಗೆಯ ಕುತ್ತುಂಗಱೆಯ ತುಱುಗಲಿಂ ಸಿದ್ಧಕಾಮಿನಿಯರ ಕಪೋಳಪತ್ರ
ಮದನಕೇಳಿಯೊಳುದಿರ್ದ ಕನಕಕದಳೀದಳಪತ್ರಭಂಗಂಗಳಿಂ ಕಿಂಪುರುಷದಂಪತಿ
ಸುರತಕೋಳಾಹಳದಿಂದನಂಗಸಂಗೀತಕಸದನಮೆನಿಸುವೆಳಲತೆಯ ಕೊಂಪಂಗ
ಕಿನ್ನರನಿತಂಬಿನಿಯರ ಚೆಂಬೊನ್ನ ಶಿಲೆಯ ಮೇಲೆ ವಿರಚಿಸಿದ ಜೆನ್ನಯ್ದಿಲೆಸಟಿ ಪಸೆಗ
ಗಂಧರ್ವಗಣಿಕೆಯರ ಬಹಳ ಪರಿಮಳಕ್ಕೆಳಸಿ ಬಳಸುವೆಳಮುಂಬಿಗೆ ಬೆರ್ಚಿ ಬಿಸ
ಕರ್ಣಪೂರ ಪಾರಿಜಾತಸ್ತಬಕಂಗಳಿಂ ಮನಂಗೊಳಿಪ ವಿಶಾಳಸಾನುಪ್ರದೇಶಂಗ
ನೊಳಕೊಂಡು

ಸುರಮಿಥುನಂ ಸುರದ್ರುಮದ ತಣ್ಣೆಳಲೊಳ್ ಖಚರದ್ವಯಂ ಮನೋ
ಹರಮಣಿಕೂಟದೊಳ್ ಭುಜಗದಂಪತಿ ಚಂದನ ಕಂದಳಂಗಳೊಳ್
ಗರುಡಯುಗಂ ಲತಾಭವನದೊಳ್ ನಲಿದಂಗಜಕೇಳಿಲೀಲೆಯಿಂ
ದಿರೆ ಗೆಲೆವರ್ಪುದಾ ವಿಪುಳಶೈಳಮನಂಗನ ಕೇಳಿಶೈಳಮಂ

ತನು ಪಸುರ್ವಣ್ಣದಿಂ ಮಱಸೆ ಪಚ್ಚೆಯ ಪಾಸಱೆಯೊಳ್ ವಿಯಚ್ಚರಾಂ
ಗನೆ ನಿಲೆ ನೀರ ಮೇಲೆ ಜಳದೇವತೆ ನಿಂದಾಳೆ ಗೆತ್ತು ತತ್ಸಖೀ
ಜನಮತಿಸಂಭ್ರಮಂಬೆರಸು ಕೈಮುಗಿದಾ ಗಿರಿರಾಜಸಾನುನಂ
ದನದ ಲತಾಗೃಹಾವಳಿಯ ಸಮೀಪದಲಾಳಿಗೆ ಸಾಲ್ವರಾಳಿಯಂ

॥ ಅದಲ್ಲದೆಯುಂ

ಽನೂದ್ಯಾನಂ ಸುರತರುಸಮುತ್ಪನ್ನಮುತ್ತುಂಗಕೂಟಂ
ಽನಾರತ್ನದ್ಯುತಿಜಟಿಳಿತಂ ಮೇಖಳಾಚಕ್ರವಾಳಂ
ನಾವಾಸಪ್ರಚಯನಿಚಿತಂ ಗಹ್ವರಂ ಯೋಗಯೋಗ್ಯ
ನಂ ತಾನೆಂಬನುಪಮವಿಳಾಸಾಸ್ಪದಂ ಶ್ರೀನಗೇಂದ್ರಂ ೭೪

ವಿಜರಮಾಳ್ಪ ಪೂಜೆಗಳೆ ದೇವಕುಜಂಗಳ ಪುಷ್ಪಮಾಳಿಕಾ
ವಹಮೆ ಬೀಣೆಯಂ ಮಿಡಿವ ಬಂಚಮನೊತ್ತುವ ಡಕ್ಕೆವಾಜಿಪಾ
ವ ಬಗೆಮುಟ್ಟೆ ಪಾಡುವವರಗ್ಗದ ದೇವರೆ ತದಿರೀಂದ್ರದಾ
ವಿಜವಿಮಾನದಂತೆ ಬಳಸಿರ್ದ ವಿಶಾಳಜಿನಾಲಯಂಗಳೊಳ್ ೭೫

॥ ಅಂತನಂತಜಿನಭವನಪಾವನಮಪ್ಪ ಗಿರಿದರೀಪ್ರದೇಶಮನೆಯ್ದುವಪೂರ್ವಮಂ

ನಗಂಧೋದಕಶೀಕರಪ್ರಕರಮಂ ಜೈನಾರ್ಚನಾದಿವ್ಯಚಂ
ನಕಾಶ್ಮೀರಪರಾಗಮಂ ಪಸರಿಸುತ್ತುಂ ಸೋಂಕಿ ಸಂಕೇತಕೇ
ನಹಸ್ತಾಭಿನಯೋಪದೇಶಕುಶಲಂ ರೋಮಾಂಚಮಂ ಪುಟ್ಟಿಸಿ
ತ್ತ ನರೇಂದ್ರಂಗೆ ಗಿರೀಂದ್ರಕಂದರಜಿನೇಂದ್ರಾವಾಸಮಂದಾನಿಳಂ ೭೬

ನಂತರಮನಂತರತ್ನ ಮಯಕೂಟದಿಂ ಮಂದರ
ನಂಗೆ ಪಗಲಂಧಕಾರಪಟಳಕ್ಕಿರುಳ್ಜೊಳಿಕಾ
ನತ್ನಕಳಶಕಾಂತಿಯಿಂ ಬಯಲೊಳೊಡ್ಡಿ ದಂತಿರ್ದುದಂ
ನಾವಸಥಮಂ ಗುಣಾವಸಥನೆಯ್ದಿದಂ ಭೂಭುಜಂ ೭೭

॥ ಅಂತೆಯ್ದಿವಂದು ನಿಶ್ರೇಯಸಶ್ರೀಯ ನಿತಂಬಸೂತ್ರಮೆನಿಸುವ ತತ್ಪರಿಸೂತ್ರದೆರಡುಂ ಕೆಲದೊಳಂ ವಸುಂಧರಾಶಿಖಂಡಮಂಡನದಂತಿರ್ದ ಕಮಳ ಷಂಢಮುಂ ಮಂಡಳಿಸಿದಿಂದುಕಾಂತಶಿಳಾಮಯೂಖಜಾಳದಂತೆ ನಿರ್ಮಳಮಾದ ಜಳಮಂ ಚರಣನಖಕಿರಣದಿಂ ದ್ವಿಗುಣಿಸಿ ವದನಕಮಳವಾಸನೆಯಿಂ ವಾಸಿತಂ ಮಾಡಿ ಜಿನಚಂದ್ರಮುಖಚಂದ್ರಿಕೆಯಿಂ ವಿಲೋಚನಚಕೋರಮಂ ತಣಿಪಲುತ್ಸುಕನಾಗಿ ಸಿರಿಗೆ ಕರುಮಾಡಮಾದ ಬಿಳಿಯ ತಾವರೆಯ ಮುಗುಳಂ ತಿಱಿದುಕೊಂಡು ಕೆಂದಳದ ಕೆಂಪಿಂ ಕೆಂದಾವರೆಗಳೆಂಬ ಸಂದೆಗಮಂ ಪುಟ್ಟಿಸುತ್ತುಮಲ್ಲಿಂ ಪೊಱಮಟ್ಟು

ತ್ರಕುಳಪರಿವೃತಂ ನ
ತ್ರಕುಳಂ ಬೆರಸು ಮೇರುಗಿರಿಯಂ ಬಲಗೊ
ತ್ರಿತನೂಭವನಂತೆ ಪ
ತ್ರಜಿನಾಲಯಮನವನಿಪತಿ ಬಲಗೊಂಡಂ ೭೮

ಜನಪಂ ಪ್ರದಕ್ಷಿಣಂ ಗೆ
ಯ್ದು ನಿಟಿಳತಟಘಟಿತಕರಪುಟಂ ಭಕ್ತಿಭರಾ
ವನತನಪವರ್ಗಲಕ್ಷ್ಮಿಯ
ಮನಮಂ ಪುಗುವಂತೆ ಚೈತ್ಯಗೃಹಮಂ ಪೊಕ್ಕಂ ೭೯

ವ|| ಅಂತು ಪೊಕ್ಕು ಸಕಳಭುವನ ಪ್ರಭುವಿಗಭಿಮುಖನಾಗಿ

ಜಯ ಜಿತವೃಜಿನ ಜಿನೇಶ್ವರ
ದಯಾನದೀಪುಳಿನರಾಜಹಂಸಭವಾಂಭೋ
ಧಿಯ ತಡಿಯನೆಯ್ದಿಸೆನ್ನಂ
ನಯನಿಕ್ಷೇಪಪ್ರಮಾಣಮಾತ್ರದಿನರ್ಹಾ ೮೦

ನೇವಾಳಮೆಂದು ಕೆಲಬರ್
ಪಾವಂ ಪಿಡಿವಂತೆ ದೇವ ನೀನಲ್ಲದರಂ
ದೇವರಿವರೆಂದು ಪಿಡಿದಿ
ನ್ನೇವಿಧಿವಟ್ಟಪರೊ ಮೋಹಮೂರ್ಛೆಯಿನರ್ಹಾ ೮೧

ನಿನಗೆ ರಸಮೊಂದೆ ಶಾಂತಮೆ
ಜಿನೇಂದ್ರ ಮನಮಾರಸಾಂಬುನಿಧಿಯೊಳಗವಗಾ
ಹನಮಿರ್ದು ಮಿಕ್ಕರಸಮಂ
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ ೮೨

ಮಣಿಭೂಷಣಭರದಿಂ ತನು
ಕಿಣಮಪ್ಪುದದೇಕೆ ನಿನ್ನ ನಿರ್ಮಳಗುಣಭೂ
ಷಣಮಂ ದಯೆಗೆಯ್ ಪಡೆವೆಂ
ಪ್ರಣಯಮನಪವರ್ಗಲಕ್ಷ್ಮಿಗದಜೆಂದರ್ಹಾ ೮೩

ಸಿಂಗದ ಮಾರ್ದನಿ ಮದಮಾ
ತಂಗಮನಳಜೆಸುವವೊಲ್ ನಿಜಪ್ರತಿಬಿಂಬಂ
ಪಿಂಗದೆ ಮನದೊಳ್ನಿಂದಿರೆ
ಪಿಂಗಿಸುವುದು ಜನನಮರಣದುಃಖಮನರ್ಹಾ ೮೪

ಮೆಚ್ಚಿ ಗಡ ಮುಳಿಯೆ ಗಡ ಬಗೆ
ಬೆಚ್ಚಿರೆ ಬೇಱಾಗೆ ನಿನ್ನ ಪದದೊಳ್ಮನುಜಂ

ಗುಚ್ಚಗತಿ ನೀಚಗತಿ ಪಡೆ
ವಚ್ಚರಿಗಗ್ಗೆಜೀವ ತಱಿನನಜೆಪನಗರ್ಹಾ ೮೫

ಜ್ಯಾಯಂಗೆ ನೀನೆ ವಲಮಾ
ದೇಯಂ ನೀನಲ್ಲದನ್ಯವಸ್ತುಗಳೆಲ್ಲಂ
ಹೇಯಂಗಳೆಂಬ ತತ್ತ್ವೋ
ಪಾಯಮನೆನಗೀವುದೇವೆನುಱೆದುವನರ್ಹಾ ೮೬

ನಿತ್ಯಸುಖಮಾತ್ಮರೂಪಮ
ನಿತ್ಯಸುಖಂ ಮೋಹರೂಪಮೆಂಬ ವಿವೇಕಂ
ಸತ್ಯಸ್ವರೂಪಮದಱೊಳ
ತಗ್ಯಂತಾನುಭವವಿಭವಮಕ್ಕೆನಗರ್ಹಾ ೮೭

ವ॥ ಎಂದರ್ಹತ್ಪರಮೇಶ್ವರನಂ ನಿರ್ಭರಭಕ್ತಿಯಿಂ ಸ್ತುತಿಗೆಯ್ದು ಕೌಸ್ತುಭ ವಿಭೂಷಣವಸ್ತು-ನಾಯಕದಂತೆ ಯೋಗಿಜನಪರಿವೃತನಾಗಿರ್ದ ಬಾಳಚಂದ್ರಾಪರನಾಮಧೇಯರಪ್ಪ ಶ್ರೀನಾಗಭಟ್ಟಾರಕರ ಪಾದಕಮಳಮನಮಳಕಮಳಂಗಳಿಂದ ರ್ಚಿಸಿ ಗುರುಭಕ್ತಿಪೂರ್ವಕ-ಮಪ್ಪವಂದನಾನಂದಭರದಿಂ ವಿನಮಿತಶಿರಸ್ಸರೋಜನಾಗಿರ್ಪುದುಂ

ಮದನಫಣಿನಿರ್ವಿಷೀಕರ
ಣದಿವ್ಯಮಂತ್ರಸ್ವನಂ ಜರಾಮರಣಶಿಲಾ
ವಿದಳನಟಂಕಧ್ವನಿ ಪೊ
ಣ್ಮಿದತ್ತು ಮುಖ ಪರಸೆ ಧರ್ಮವೃದ್ಧಿಧ್ವಾನಂ ೮೮

ಕ್ಷುಭಿತದಯಾರ್ಣವಘೂರ್ಣಿತ
ರಭಸಮೆನಲ್ ಪರಸಿದತ್ತನಂತರಮಾತ
ತ್ಸಭೆ ವಿನತಮಕುಟಮಣಿರುಚಿ
ವಿಭಾಸಿಯಂ ನೃಪಪುರಸ್ಸರಂ ರಾಜಕಮಂ ೮೯

ವ॥ ಅಂತು ಪರಸುವ ಪರಕೆಯ ಪಾರಿಜಾತಸ್ತಬಕಾವತಂಸಮಾಗೆ

ಇರೆ ನರಪತಿ ರಾಜಕುಲಂ
ಬೆರಸಂಬುಜವನಮರಲ್ದವೊಲ್ ವಿಖ್ಯಾತಾ
ಚರಣಂ ಮುನಿಪದ್ಮಾಸನ
ವಿರಾಜಿತಂ ರಾಜಹಂಸಲೀಲೆಯಿನಿರ್ದಂ ೯೦

ಅರವಿಂದಸ್ಮೇರವಾಸ್ಯಂ ತಿಳಿಪೆ ಹೃದಯಸಂಶುದ್ಧಿಯಂ ಮಾನಸಂ ಶಾಂ
ತರಸಾಧೀನಂ ಸಮಾಧಾನಮನಱಿಪೆ ತಪಸ್ತಪ್ತಮುತ್ತಪ್ತಕಾರ್ತ
ಸ್ವರಶಾಖಾಲೀಲೆಯಂ ಪಾಳಿಸೆ ತನು ನಯನಂ ಕಾಪ್ಪಿರಂ ಮಾಡೆ ಕಾರು
ಣ್ಯರಸಸ್ರೋತಂಗಳಿಂ ಲೋಕಮನೆಜಗಿಸಿದಂ ಬಾಳಚಂದ್ರವ್ರತೀಂದ್ರಂ ೯೧

ಶ್ರೀತರರತ್ನಪೀಠವಾಲಂ
ಬಿತಲಂಬನಸಮಿತಿ ನಾಲ್ಕು ಮನುಯೋಗದ ಸಂ
ಗತಿಯೆನೆ ಮಣಿಖಚಿತಮದೇ
ನತಿಶಯಮಾದತ್ತೊ ಠವಣೆಕೋಲ್ ಯತಿಪತಿಯಾ ೯೨

ಪ್ರತಿಲೇಖನದೊಳನಾಲೋ
ಕಿತಮನುಚಿತಮೆಂದು ಪಲವು ಕಣ್ಣಡೆದವೊಲಾ
ಯತಿಪತಿಯ ದಯಾಧ್ವಜಮೇ
ನತಿಶಯಮಾದತ್ತೊ ಮೇದುರಂ ಮಾಯೂರಂ ೯೩

ಕಂಡರಿಸಿ ಪಳುಕಿನಿಂದಮ
ಖಂಡಿತಶೌಚಗುಣಸುರನದೀಸಮುಪಚಿತಂ
ಡಿಂಡೀರಪಿಂಡಮೆನಿಸಿ ಕ
ಮಂಡಲು ಸೊಗಯಿಪುದು ಬಾಳಚಂದ್ರವ್ರತಿಯಾ ೯೪

ವ॥ ಅಂತವಿಶ್ರಾಂತ ಶ್ರೀಯನಪ್ಪುಕೆಯ್ದು

ಕ್ಷಮೆಯಂ ತಾಳ್ದಿದ ಜೈನಯೋಗಿ ಜಿನಪಾದಾಬ್ಜಾರ್ಚನಾ ಯಕ್ಷಕ
ರ್ದಮಶಾಲ್ಯಕ್ಷತಪಾರಿಜಾತಸುಮನೋದಾಮಂಗಳಂ ಪಂಚರ
ತ್ನಮಯಾಮತ್ರದೊಳೀವುದುಂ ಮಣಿಕಿರೀಟಕ್ಕಾಗಳುಯ್ದುಂ ಸಹ
ರ್ಷ ಮುಹುರ್ಜಾತಮಹಾಪ್ರಸಾದನಿನದಂ ಸಾಹಿತ್ಯವಿದ್ಯಾಧರಂ ೯೫

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಳಚಂದ್ರ
ಮುನೀಂದ್ರಚರಣಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ವೈಶ್ರವಣವೈರಾಗ್ಯವರ್ಣನಂ ದಶಮಾಶ್ವಾಸಂ ಸಮಾಪ್ತಂ



# ಏಕಾದಶಾಶ್ವಾಸಂ

ಶ್ರೀಜಿನಪತಿಪದಕಮಳವಿ
ರಾಜಿತಮಂ ಸಿದ್ಧಸೇಸೆಯಂ ತಳೆದನಿಳಾ
ಪೂಜಿತಚರಿತಂ ಸಕಳಕ
ಳಾಜನ್ಮಾವಾಸನೆನಿಸಿದಭಿನವಪಂಪಂ ೧

ವ॥ ಅಂತು ಸಿದ್ಧಸೇಸೆಯಂ ತಳೆದು

ಜನಪದಸುಖವಿಮುಖಂ ಮುನಿ
ಜನಪದಸೇವಾಸುಖಾನುಭವಹರ್ಷರಸಂ
ಮನದಿಂ ಮಿಗೆ ಮುನಿಪರ ಸ
ಮ್ಮನದಿಂ ಮಿಗೆ ಮುಯ್ದು ಮಕುಟಮಂ ನೃಪನಿರ್ದಂ ೨

ವ॥ ಅನಂತರಮವನೀಶ್ವರಾಗಮನವೃತ್ತಾಂತಮಂ ಮುನೀಶ್ವರಂ ಸವಿಸ್ತರಮಱಿದು

ಭಾವಿಜಿನನಪ್ಪ ಜೀವ
ಕ್ಕಾವುದು ವಿಸ್ಮಯಮೊ ವಿಷಯವೈರಾಗ್ಯಮದೇ
ನೇವುದೊ ನಿರ್ವೃತಿಪದಸವ
ಖ್ಯಾವಾಪ್ತಯನಲ್ಲದುೞಿದ ಸಂಸೃತಿಸುಖಮಂ ೩

ವ॥ ಎಂದು ಮನದೊಳ್ ಬಗೆದು

ಕಿಡುವಿಂದ್ರಿಯ ಸೌಖ್ಯಮನೇಂ
ಪಿಡಿವರೆ ನಿಮ್ಮಂದಿಗರ್ ವಿವೇಕಿಗಳೆಂದುಂ
ಕಿಡದ ಪರಮಾತ್ಮಸುಖಮನೆ
ಪಿಡಿವರದೇನೊನಲಿಯಂತೆ ಪಿಡವರೆ ಕಸಮಂ ೪

ವ॥ ಎಂಬುದುಮರಸಂ ಮುಕುಳಿತಕರಕಮಳನಾಗಿ

ಪರುಸಂ ತರ್ಪುದು ಪೊರ್ದೆ ಹೇಮಪದಮಂ ಲೋಹಕ್ಕೆ ನಿರ್ಮ್ಮೀಪದಾಂ
ಬುರುಹಂ ತರ್ಪುದು ದೂರದಿಂ ನೆನೆಯೆ ಮುಕ್ತಿ ಶ್ರೀಯನಾವಂಗವಂ
ತರವೇನೀಯೆರದರ್ಕಮೆಂದೆಜಿಗಿದೆಂ ದೀಕ್ಷಾಪ್ರಸಾದಂ ಭವ
ಚ್ಚರಣಾಂಭೋಜಮದಕ್ಕೆ ಸಾಧಿಸುವೆನಾಂ ಕೈವಲ್ಯಮಾಂಗಲ್ಯಮಂ

ವII ಎಂದು ಬಿನ್ನವಿಸಿ ಮುಂನೂರ್ವರರಸುಮಕ್ಕಳ್ವೆರಸು ಪೂಜಾಪಟಹಪಟುನಿನ
ಬಧಿರಿತದಿಗ್ಗಜಶ್ರವಣಂ ವೈಶ್ರವಣ ನಾಚರಿತದೀಕ್ಷಪ್ರದಾನವಿಧಾನಂ ತತ್ತಪೋನಿಧಿ
ಸನ್ನಿದಿಯೊಳುತ್ತರಾಭಿಮುಖನಾಗಿ

ಕ್ರಮದಿಂ ಪಂಚಪದಂಗಳಂ ಸ್ಮರಿಯಿಸುತ್ತುಂ ಮೋಹವಲ್ಲೀಪ್ರರೋ
ಹಮನುತ್ಪಾಟಿಸುವಂತೆ ಕುಂತಳಸಹಸ್ರೋತ್ಪಾಟನಂಗೆಯ್ದು ಮು
ಖ್ಯಮನಾತ್ಯಂತಿಕಸೌಖ್ಯಮಂ ಪಡೆವಲಂಪಿಂದಾನೃಪಂ ಜಾತರೂ
ಪಮನುದ್ಧೂತವಿಳೇಪಮಂ ಜಿತಮನೋಜಾಟೋಪಮಂ ತಾಳ್ದಿದಂ

ವII ಮತ್ತಂ

ಮೂಲಗುಣೋತ್ತರಗುಣಮಂ
ಶೀಲಮನಳವಡಿಸಿ ಸಮಿತಿಯಿಂ ಗುಪ್ತಿಗಳಂ
ಪಾಲಿಸಿ ಪಂಚಮಹಾವ್ರತ
ಲೀಲೆಯಿನೆಸೆದಂ ಪ್ರಮಾದಮಿಲ್ಲೆನೆ ಮುನಿಪಂ ೭

ಅನುಕೂಲಂ ಮುನಿಸಂ ಬಿಸುಟ್ಟು ಮುನಿಪಂ ಸತ್ಕಾರಸನ್ಮಾನ ಭಾ
ಜನೆಯಂ ಬೇಟ್ಟುದನೀವ ಕಲ್ಪಲತೆಯಂ ಸಂತಾಪಮೂರ್ಛಾಪನೋ
ದಿನಿಯಂ ಶೀಲಗುಣಾವಳಂಬಿನಿಯನರ್ಘದ್ವಾಕ್ಯಮಾಣಿಕ್ಯಮಂ
ಡನೆಯಂ ನೆಲ್ಮೆಯಿನುತ್ತಮಕ್ಷಮೆಯನೇನಾಲಿಂಗನಂಗೆಯ್ದನೋ ೮

ಚಿತ್ತದ ಮದಮಾನಮನುಚಿ
ದುತ್ತಮಮಾರ್ದವದಿನಮಳ ಕೀರ್ತಿಶ್ರೀಯಂ
ಪತ್ತಿಸಿದಂ ಯತಿಪತಿಯರ
ಚಿತ್ತಮನೇನೊಂದು ಮಾರ್ದವಂ ಸೋಲಿಸದೇ ೯

ಗುಣಮಿರ್ಕಂಬುಜ ರೂಪಮಪ್ಪ ಮತಿಯೊಳ್ ಮಾಯಾಪ್ರಪಂಚಂಗಳೊಳ್
ಗುಣಮೇನಿರ್ಕುಮೆ ನಂಬದಲ್ತೆ ಜನಮುಂ ಮಾಯಾವಿಯಾಗಿರ್ದ ನಿ
ರ್ಗುಣನಂ ದುರ್ಗತಿಹೇತು ಚಕ್ರಗುಣಮೆಂದಾನಂದಚಿತ್ತಂ ಗುಣ
ಪ್ರಣಯಯೋತ್ಸಾಹದಿನುತ್ತಮಾರ್ಜವಮನಾ ಯೋಗೀಶ್ವರಂ ತಾಳ್ದಿದಂ ೧೦

ಎನಿತು ಗುಣಮೊಳಮನಿತುಮಂ ಲೋಭಮೆ ಕಿಡಿಸುಗುಂ ಲೋಭದಿನಸುಖಿಯಕ್ಕುಂ
ಮನುಜನಪಜಸಕ್ಕೆಡೆಯಕ್ಕುಂ ಕಡೆವರಂ ಸೂತಕಂ ಪಿಂಗದು ಲೋಭಿಗೆಂದುಂ
ತನಗೆ ಜೀವಿತಾಂತ್ಯದೋಳಿಂದ್ರಿಯವಿಷಯೋಪಭೋಗದೊಳ್ಪಿಂಗೆ ಲೋಭಂ
ಮುನಿಪನುತ್ತಮಶೌಚಮಂ ತಳೆದು ಲೋಕೋತ್ತಮನುತ್ತಮಸ್ತುತ್ಯನಾದಂ ೧೧

ನೆಲೆ ಸತ್ಯಂ ಗುಣರತ್ನಮಾಲೆಗೆ ತಡಂಮಾತಾಡೆ ಕಾಯ್ಗುಂ ಸುಪ್ರ
ತ್ಕುಲವಿದ್ವತ್ಕುಲಮಂತೆ ಸೈರಿಸವು ನಂಜುಂ ನೀರ್ಗಳುಂ ಕಿಚ್ಚುಮಾ
ಕುಲಮಕ್ಕುಂ ಪುಸಿಯಿಂದಮೆಂದು ದಶಭೇದಂಬೆತ್ತ ಸತ್ಕರ್ಣಕುಂ
ಡಲಮಾದುತ್ತಮಸತ್ಯಮಂ ತಳೆದನಾ ಸ್ಯಾದ್ವಾದಯೋಗೀಶ್ವರಂ ೧೨

ದಂಡಕಷಾಯೇಂದ್ರಿಯಮಂ
ದಂಡಿಸಿ ಸಮಿತಿವ್ರತಂಗಳಂ ಕ್ರಮದಿಂ ಕೈ
ಕೊಂಡುತ್ತಮಸಂಯಮಮಣಿ
ಮಂಡನನಾದಂ ಮುನೀಂದ್ರಚೂಡಾರತ್ನಂ ೧೩

ಅಪವರ್ಗಾಥಂ ತನುವಂ
ತಪಿಯಿಸಿ ಮಾರ್ಗಾವಿರೋಧಮಾಗಿರೆ ಕೈಕೊಂ
ಡುಪಶಮಭಾವದಿನುತ್ತಮ
ತಪಮಂ ಮುನಿಮುಖ್ಯನುತ್ತಮೋತ್ತಮನಾದಂ ೧೪

ವ॥ ಅಂತು ಬಾಹ್ಯಾಭ್ಯಂತರಭೇದದಿಂದೆರಡುಂ ಕ್ರಿಯಾಭೇದದಿಂ ಪನ್ನೆರಡುಮಾದ ತಪಮನೆತ್ತಿಕೊಂಡು ದೃಷ್ಟಫಳಮಂತ್ರಸಾಧನಾದಿಗಳನಪೇಕ್ಷಿಸದೆಯುಂ ರಾಗದ್ವೇಷಮಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರನಿವೃತ್ತಿಗೆಯ್ದು

ಕರಣಮನುಪಶಮಿಸುವ ನಿ
ರ್ಜರಿಸುವ ಕರ್ಮಂಗಳಂ ಶುಭಧ್ಯಾನಮನು
ದ್ಧರಿಸುವ ಬಗೆಯಿಂ ತಳೆದಂ
ಗುರುವರ ಧೃತಿನಾಮಧೇಯಮಪ್ಪನಶನಮಂ ೧೫

ವ॥ ಮತ್ತಮಾಮುನೀಶ್ವರಂ ಸ್ವಾಧ್ಯಾಯಸಂಯಮಸಂರಕ್ಷಣಾಥರಮಾಹಾರ ಚತುರ್ಥಾರ್ಧಭಾಗಕ್ರಮನಿನಿಯತಮಾತ್ರಪರಿತೃಪ್ತಿಯನಪ್ಪುಕೆಯ್ದು

ನಿದ್ರಾಜಯಮಾಮಯದೋ
ಷೋದ್ರೇಕಜಯಂ ನಿರಶನನಿಯಮೊತ್ಪನ್ನೋ
ಪದ್ರವಜಯಮಾಯ್ತೆಂದು
ನ್ಮುದ್ರಿತಮೆನೆ ಪರಮಯೋಗಿಗವಮೋದರ್ಯಂ ೧೬

ಮುನಿಪತಿ ಗೃಹನಿಯಮಂ ಭಾ
ಜನಭೋಜನವಿಷಯ ನಿಯಮ ಮೆಂಬಿವಜೆನಿಣಂ
ಮನದಳಿಪಂ ಪಿಂಗಿಸೆ ಪಾ
ವನತರಮಾದತ್ತು ವೃತ್ತಿಪರಿಸಂಖ್ಯಾನಂ ೧೭

ವ॥ ಮತ್ತಂ

ಯೋಗೀಶರೀರೇಂದ್ರಿಯಬಳ
ರಾಗಪ್ರದಮಪ್ಪಸಿತಘೃತಕ್ಷೀರಾದಿ
ತ್ಯಾಗದಿನಿಂದ್ರಿಯನಿಯಮೋ
ದ್ಯೋಗರಸತ್ಯಾಗನಿಯಮತತ್ಪರನಾದಂ ೧೮

ವ॥ ಮತ್ತಂ ಧ್ಯಾನಾಧ್ಯಯನಬ್ರಹ್ಮಚರ್ಯವಿಘ್ನಕರನಸ್ತ್ರೀಪಶುಷಂಡಾದಿನರ್ಜಿತಮಪ್ಪ

ಸರಿತ್ತಟವನಂಗಳೊಳ್ ಗಿರಿದರೀ ಗುಹಾಗೇಹದೊಳ್
ಪರೇತವನಶೂನ್ಯಸದ್ಮ ತರುಕೋಟರಸ್ಥಾನದೊಳ್
ನಿರಸ್ತಪರಪೀಡೆ ಕೂಡೆ ಶಯನಾಶನಂ ತಾಳ್ದಿದಂ
ನಿರಾಕುಳಮನಂ ವಿವಿಕ್ತಶಯನಾಶನೋಪಾಸ್ತಿಯಂ ೧೯

ವ॥ ಮತ್ತಂ ಧ್ಯಾನಸಮಯದೊಳ್ ವಿಷಯಸುಖಾನುಭವಮಾಗದಂತ
ಪರಿಸ್ಪಂದಾಧೀನಮಪ್ಪ ಸಮಾಧಾನಂ ಪೊರ್ದದಂತು ಜಿನಶಾಸನ ಪ್ರಕಾಶನಪರನಾಗಿ

ಸುರಿವ ಮಳೆಯಿಂ ಮಂಜಂ ತರ್ಕೈಸಿ ತೀಡುವ ಗಾಳಿಯಿಂ
ದುರಿವ ಬಿಸಿಲಿಂ ಮತ್ತಂ ಶಯ್ಯಾಶನಂಗಳ ನಿಟ್ಟೆಯಿಂ
ಕೊರಗದಿರೆಯುಂ ಚಿತ್ತಂ ಧ್ಯಾನೋಪಯೋಗದೊಳಿರ್ಪಿನಂ
ಸ್ಥಿರತೆ ನೆಜಿದಂ ಕಾಯಕ್ಲೇಶಪ್ರತಕ್ಕೆ ಮುನೀಶ್ವರಂ ೨೦

ವ॥ ಅಂತು ನೆಜಿದು

ಯತಿಪತಿಗಾಳೋಚನವಿರ
ಹಿತಮೆನಿಸಿದ ಘೋರವೀರತಪವುಮದು ಸಮ
ನ್ವಿತಪಃಪದೊಳಿತ್ತೌಷಧ
ತತಿಯವೊಲಭಿಲಷಿತಫಳಮನೇನಿತ್ತಪುದೇ ೨೧

ಶ್ರೇಯೋಮಾರ್ಗದೊಳೊಂ ದಿನಾರ್ಯರೊಡನೊಲ್ದಾಳೋಚನಂ ಮಾಡಿಯುಂ
ಪ್ರಾಯಶ್ಚಿತ್ತಮನೊಲ್ಲದಿರ್ಪ ಮುನಿಪಂ ನೀತಿಜ್ಞರೊಳ್ ಕಾರ್ಯಪ

ರ್ವ್ಯಾಯಾಳೋಚನೆಮಾಡಿಯುಂ ನೆಗೞಿದುರ್ವಿೞೀಶಂಬೊಲೇಂ ಶಾಶ್ವತ
ಶ್ರೀಯಂ ತಾಳ್ದುಗುಮೇ ನಿರುದ್ಯಮದಿನಾರ್ಗಂ ಸೈಪು ಕೈಸಾರ್ಗುಮೇ ೨೨

ವ|| ಎಂದು ಚತುರ್ವಿಧಾರಾಧನಾರ್ಥಮುಂ ಪ್ರಮಾದಪರಿಹಾರಾರ್ಥಮುಮಾಗಿ ತನ್ನೊಳ್ ಕಂಪಿತಾದಿದೋಷವರ್ಜಿತಮಪ್ಪಂತು

ಶ್ರುತಖ್ಯಾತಾಚಾರ್ಯಪ್ರವರವಿನಯಾಳೋಚನಪರಂ
ಕೃತಪ್ರಾಯಶ್ಚಿತ್ತಂ ಮಣಿಮುಕುರಬಿಂಬಂಬೊಲೆಸೆದಂ
ವ್ರತೀಂದ್ರಂ ನಿಶ್ಶಲ್ಯಂ ನಿಯಮಿತಮನೋವೃತ್ತಿ ಸುಭಗಂ
ಮಿತತ್ಯಾಗೋದ್ಯೋಗಂ ದೃಢತರಮಹಾಸಂಯಮಸುಖಂ ೨೩

ವ|| ಮತ್ತಂ ಮಂತ್ರೌಷಧೋಪಕರಣಕೀರ್ತಿಸತ್ಕಾರಲಾಭನಿರಪೇಕ್ಷನಾಗಿ ಕರ್ಮಕ್ಷಯಕಾಂಕ್ಷೆಯಿಂ ಚಾರಿತ್ರಶುದ್ಧಿಯುಮನಪೇಕ್ಷಿಸಿ ದರ್ಶನಜ್ಞಾನಚಾರಿತ್ರೋಪಚಾರಚತುರ್ವಿಧವಿಕಲ್ಪವಿನಯದೊಳಂ ನೆಱೆದು

ಅಳವಡಿಸಿ ಕಷಾಯೇಂದ್ರಿಯ
ಕುಳಮಂ ರತ್ನತ್ರಯಂಗಳೊಳಮಾಗುಣಮಂ
ತಳೆದನಣಂ ನಮ್ರತೆಯಂ
ತಳೆದಾಮುನಿ ವಿನಯಮೆಂಬ ತಪಮಂ ತಳೆದಂ ೨೪

ವ|| ಮತ್ತಂ ಸಮಾಧಿಸಾಧನೋಪಾಯನಿಪುಣನೆನಿಸಲುಂ ನಿರ್ವಿಚಿಕಿತ್ಸತಾಗುಣರಕ್ಷಣಕ್ಷಮಯನಂಗೀಕೃತಂ ಮಾಡಲುಂ ಪ್ರವಚನವತ್ಸಳತ್ವಮಂ ಪ್ರಕಟಿಸಲುಂ ಪ್ರತ್ಯುಪಕಾರನಿರಪೇಕ್ಷನಾಗಿ ತನಂ ಮುಪದೇಶದಿಂ ಪ್ರಾಸುಕದ್ರವ್ಯಂಗಳಿಂದಾಚಾರ್ಯಾದಿ ದಶಪುರುಷರೊಳಂ

ಅತಿಶುದ್ಧಮಾಗಿ ನೆಗೞ್ದಪ
ಕೃತಿಯಿಂ ಪರಮಾಗಮೋಪದಿಷ್ಟಕ್ರಮದಿಂ
ಯತಿಪತಿ ಚರ್ಯಾವೃತ್ತಿ
ವ್ರತಮಂ ಪರಿಪೂರ್ಣಮಪ್ಪಿನಂ ಪಾಲಿಸಿದಂ ೨೫

ವ|| ಮತ್ತಂ ಪ್ರಜ್ಞಾತಿಶಯಮುಮಂ ಪ್ರಕಟಿಸಲುಂ ಪ್ರವಚನಸ್ಥಿತಿಯನತಿಶಯಿಸಲುಂ ಸಂಶಯಧ್ವಂಸನಂ ಮಾಡಲುಂ ಪ್ರಭಾವನಾಭಿರುಚಿಯಂ ತೋಱಲುಂ ಧರ್ಮಾನುರಾಗಮಂ ನೂರ್ಮಡಿಸಲುಂ ಕಷಾಯೇಂದ್ರಿಯಜಯೋಪಾಯಮುಮನಳವಡಿಸಲುಂ ತಪೋವೃದ್ಧಿಯುಮನಾಚಾರಶುದ್ಧಿಯುಮನಪ್ಪಿಕೆಯ್ಯಲುಮನುರಕ್ತನಾಗಿ

ಮೋಕ್ಷಪ್ರಾಸಾದ ಸೋಪಾನಮನಮಳಗುಣಸ್ಥಾನಮಂ ನಿರ್ಜಿತಾಶೇ
ಷಾಕ್ಷಂ ಸ್ವಾಧ್ಯಾಯಮೆಂಬಗ್ಗಳಿಕೆಯ ತಪಮಂ ವಾಚನಾಪೃಚ್ಛನಾನು
ಪ್ರೇಕ್ಷಾಮ್ನಾಯೋಪದೇಶಕ್ರಮಪರಿಗಣನಾ ವ್ಯಕ್ತ ಪಂಚಾಗಮಂ ಪೂ
ಣ್ದಕ್ಷೂಣಂ ನಿಟ್ಟೆ ನೇರ್ಪಟ್ಟಿರೆ ನಡೆಯಿಸಿದಂ ಸೂಕ್ತಿಮುಕ್ತಾವತಂಸಂ ೨೬

ವ॥ ಮತ್ತಂ ಅವ್ಯಕ್ತಪ್ರಾಣಾಪಾನಪ್ರಚಾರನುಂ ಗಾತ್ರನೇತ್ರಪರಿಸ್ಪಂದಾದಿ ವಿಕಾರವಿರಹಿತನುಂ ಆಧ್ಯಾತ್ಮಿಕಸಕಳಸಾಮಗ್ರೀಸಮಗ್ರನುಂ ಸ್ವರ್ಗಾಪವರ್ಗಸಾಧನೋಪಾಯನಿಪುಣನುಮೆನಿಸಿ

ಪರಿಹರಿಸಿ ಚಿತ್ತದಿಂದಾ
ರ್ತರೌದ್ರಮಂ ಧರ್ಮಶುಕ್ಲಮೆಂಬೀಯೆರಡುಂ
ಸ್ಥಿರಮಾಗೆ ದಿವ್ಯಮುನಿಪಂ
ನಿರಂತರಧ್ಯಾನಯೋಗತತ್ಪರನಾದಂ ೨೭

ಭುವನತ್ರಯಮೆಱಪುದು ಸಂ
ಭವಿಪುದು ಸಪ್ತರ್ಧಿಮೋಕ್ಷಲಕ್ಷ್ಮೀಪರಿರಂ
ಭವಿಳಾಸಂ ಸಮನಿಪುದೆನ
ಲವಾರ್ಯಮಹಿಮೋದಯಂ ತಪಸ್ಸಾಮರ್ಥ್ಯಂ ೨೮

ವ॥ ಅಂತೆನಿಸಿ ಪನ್ನೆರಡು ತೆಱದ ತಪದೊಳ್ನೆಱೆದು ಮತ್ತಂ

ಉಪದಿತ್ಯಾಗಮೆ ಪುರುಷಂ
ಗೆ ಪರಮಹಿತಮೆಂದು ಸಕಳಭೇದಂಗಳನಂ
ದುಪಶಮಿಸಲುತ್ತಮತ್ಯಾ
ಗಪವಿತ್ರಚರಿತ್ರನೆನಿಸಿದಂ ಮುನಿಮುಖ್ಯಂ ೨೯

ದೇಹಸುಖಹೇತುಗಳುಮಂ
ದೇಹಮುಮಂ ತನ್ನವೆಂದು ಪಂಬಲಿಸದೆ ನಿ
ರ್ಮೋಹದಿನಿರೆ ಯತಿಪತಿಗ
ವ್ಯಾಹತಮಳವಟ್ಟುದುತ್ತಮಾಕಿಂಚನ್ಯಂ ೩೦

ಆವುದುಮನೆನಿತು ಕಾಲಂ
ತೀವಿದೊಡಂ ತೀವದಾಪಗಂ ತೊಱೆಯಲೊಡಂ
ತೀವುವುದಿದೇಂ ವಿಚಿತ್ರಮೋ
ಜೀವನ ವಿಪರೀತಮೆನಿಸಿದಾಶಾಗರ್ತಂ ೩೧

ಪೋಗವೇತಱಿೊಳಪ್ಪೊಡಂ ಪಿರಿದಾಗಿ ದೇಹಿಗೆ ದುಃಖಸಂ
ಯೋಗಮಂ ಪಡೆಗುಂ ನಿರಂತರಮಾಸೆಯೆಂಬ ಮಹಾಜ್ವರಂ
ಯೋಗಮಂಜಿನವೈದ್ಯನಾತನದರ್ಕೆ ಮಾಡಿದನುತ್ತಮ
ತ್ಯಾಗಮೆಂಬ ಕಷಾಯಮಂ ನಿಮಿಷಕ್ಕೆ ಮೋಕ್ಷಮನೀವುದಂ ೩೨

ವ॥ ಮತ್ತಂ

ಮನದೊಳ್ ಪೂರ್ವಾನುಭುಕ್ತ ಪ್ರಿಯಲಲನೆಯ ಲಾವಣ್ಯಮಂ ರೂಪುಮಂ ಯೌ
ವನಮಂ ಸ್ರಕ್ಚಂದನಾಲೇಪನಪರಿಮಳಸಂಸಕ್ತಿಸಂಭೋಗಶಯ್ಯಾ
ಸನಮಂ ನಿರ್ವ್ಯಾಕುಳಂ ಪಂಬಲಿಸದೆ ಮದನವ್ಯಾಳಶುಂಡಾಳದಂತಾ
ಶನಿಯಂಕಿಟ್ಟಿಕ್ಕೆ ತತ್ಸಂಯಮಿಗೆ ಸಮನಿಸಿತ್ತುತ್ತಮಬ್ರಹ್ಮಚರ್ಯಂ ೩೩

ವ॥ ಅಂತವಿಶ್ರಾಂತನಿಯಮನಿಷ್ಠಾಪರನಾಗಿ

ಮೂಲಗುಣಂಗಳಿಂದೆ ದಶಧರ್ಮಮೆನೇಱಿಸಿಕೊಂಡಮೋಘಬಾ
ಣಾಳಿಯನಲ್ಲಿ ತೊಟ್ಟು ನಿಲಲೀಯದೆ ತೂಳ್ದಿ ಪರೀಷಹಂಗಳಂ
ಮೇಳಿಸಿದಂ ಜಯಾಂಗನೆಯನೇಕವಿಹಾರದೊಳಾಮುನೀಶ್ವರಂ
ಮೇಳಿಸೆ ಕೀರ್ತಿ ಕೀರ್ತಿಮುಖದಂತ ದಿಶಾರದನೀರದಂಗಳಂ ೩೪

ಅಸದೃಶಮಂ ವಿಭೂತಿಯನೊಡರ್ಚುವಮಾನುಷಮಂ ಪ್ರಭಾವಮಂ
ಪಸರಿಪಚಿಂತ್ಯಮಂ ಪರಮತೀರ್ಥಕರೋಚಿತನಾಮಗೋತ್ರಮಂ
ಪೊಸಯಿಪಜೇಯಮಂ ಜಯಮನೀವುದನೇಂ ದೃಢಚಿತ್ತನಾಗಿ ಭಾ
ವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಂ ಮುನೀಶ್ವರಂ ೩೫

ವ॥ ಮತ್ತಂ

ಕ್ರಮದಿಂ ಸಪ್ತರ್ಧಿವೆತ್ತ ಶ್ರಮದಿನುಪಶಮಶ್ರೇಣಿಯಂ ಸಾರ್ದು ನಿಶ್ಶೇ
ಷಮಶೇಷಂ ಮೋಹನೀಯಂ ಪ್ರಶಮಿಸೆ ಮುನಿಮುಖ್ಯಂ ಯಥಾಖ್ಯಾತ ಚಾರಿ
ತ್ರಮನವ್ಯಾಬಾಧಮಂ ದ್ವಾದಶವಿಧಮನನುಪ್ರೇಕ್ಷೆಯಂ ತಾಳ್ದಿ ಲೋಕೋ
ತ್ತಮನಾದಂ ಸ್ತುತ್ಯನಾದಂ ಚತುರಕವಿಜನಾಸ್ಥಾನರತ್ನಪ್ರದೀಪಂ ೩೬

ವ॥ ಅಂತು ಯಥಾಖ್ಯಾತಚಾರಿತ್ರಸಂಪತ್ತಿವೆತ್ತರಡನೆಯೊಳಮುಪಶಮ ಶ್ರೇಣಿಯನೇಱಿ ಚತುರ್ವಿಧಶುಕ್ಲಧ್ಯಾನಸಮಾಹಿತನುಪಶಾಂತಗುಣಸ್ಥಾನದೊಳ್ ನಿಂದೊಂದು ತಿಂಗಳ್ಗೆ

ಅನಶನದಿಂ ಸಮಾಧಿ ಬಗೆದಂತಿರೆ ಕೂಡೆ ಶರೀರಭಾರಮಂ
ಮುನಿಪತಿ ಬಿಟ್ಟು ರತ್ನ ಸದೃಶಂ ಮುಱುಮೆಯ್ಯುಳುಕಿಂ ಪಳಚ್ಚನ

ಪ್ಪಿನಮಹಮಿಂದ್ರನಾದನಪರಾಜಿತನಾಮವಿಮಾನರತ್ನದೊಳ್
ತನಗಳವಟ್ಟು ತೋಱೆ ಸಪಘಾರಣಾಂಬರಪುಷ್ಪಮಾಲೆಗಳ್ ೩೭

ಅಮರಪಟಲಂಗಳಿಱುವ
ತ್ತಮೂಱುಮಂ ಸುಖದೊಳಂ ವಿಳಾಸದೊಳಮತಿ
ಕ್ರಮಿಸಿದುದೆನಲಪರಾಜಿತ
ವಿಮಾನಮಂ ನಿರುಪಮಾನಮಂ ಪೊಗೞದರಾರ್ ೩೮

ಶುದ್ಧಸ್ಫಾಟಿಕಮಣಿಭವ
ನೋದ್ಧತಕಳಧೌತಕಶಶಕರಕಿಸಲಯದಿಂ
ಸಿದ್ಧಾಲಯಮಂ ಲೀಲೆಯಿ
ನುದ್ಧರಿಸಿದುದಾ ವಿರಾಜಮಾನವಿಮಾನಂ ೩೯

ವ|| ಅಲ್ಲಿ

ಸುಪ್ತಂ ಪ್ರಬುದ್ಧನೆನೆ ಪ
ರ್ಯಾಪ್ತಿಯನಂತರ್ಮುಹೂರ್ತದಿಂ ಪಡೆದು ಸುಖಾ
ವಾಪ್ತಿಯಿನಹಮಿಂದ್ರಂ ಪರಿ
ತೃಪ್ತಿಯನುಪಪಾತತಳ್ಪತಳದೊಳ್ತಳೆದಂ ೪೦

ಮುನ್ನಿನ ಶುಕ್ಲಧ್ಯಾನಮೆ
ಸನ್ನಿದಮಾದಂತೆ ದೇಹರುಚಿ ಪಸರಿಪುದುಂ
ರನ್ನದ ಕೇಗ್ರಳ್ ದುಗುಲದ
ಕನ್ನವಡಂಕಟ್ಟಿದಂತೆ ತೋಱಿದುವಾಗಳ್ ೪೧

ಹಿಮಕರಬಿಂಬದಿಂ ಕಡೆದುದೋ ಪಳುಕಿಂ ಪಡೆವತ್ತೊ ಪೂಗಳಿಂ
ಸಮೆದುದೊ ಚಂದ್ರಕಾಂತಮಣಿಯಿಂ ಬೆಸಕೆಯ್ದುದೊ ಮೌಕ್ತಿಕಂಗಳಿಂ
ಸಮನಿಸಿದತ್ತೊ ಕೋಮಳಮೃಣಾಳಿಕೆಯಿಂ ಪರಿಪೂರ್ಣಮಾಯ್ತೊ ಪೇ
ೞಿಮಿದೆನೆ ಚೆಲ್ವುವೆತ್ತುದಹಮಿಂದ್ರನ ಪಾಂಡುರದೇಹಮಂಡಳಂ ೪೨

ಹರಿನೀಳಭೂಮಿಯೊಳ್ ಕ
ಪ್ಪುರವಳುಕಿನ ಲೆಪ್ಪದಂತೆ ತನು ನಯನಮನೋ
ಹರಮಾಗೆ ಜಗುನೆಯೊಳ್ ಸಂ
ಚರಿಸುವ ಹಂಸಂಬೊಲೆಸೆದನಮರೋತ್ತಂಸಂ ೪೩

ಅರುಣಮಣಿಭೂಷಣಪ್ರಭೆ
ಪರಿಕಲಿಸಿರೆ ದಿವಿಜಪತಿಯ ದಿವ್ಯಶರೀರಂ

ಪರಿಭವಿಸಿದುದೆಳವಿಸಿಲಾ
ವರಿಸಿದ ಕಮನೀಯಪುಂಡರೀಕಶ್ರೀಯಂ ೪೪

ನೆನೆವಂ ಮೂವತ್ತುಮೂಱುಸಾಸಿರಬರಿಸದೊಳಾಹಾರಮಂ ನಿಷ್ಪವೀಚಾ
ರನಪಾರಂ ತನ್ನೊಳಾದಭ್ಯುದಯಸಕಳಸೌಖ್ಯಂ ತ್ರಯಸ್ತ್ರಿಂಶದಂಭೋ
ಧಿ ನಿಜಾಯುಸ್ಸಂಖ್ಯೆ ಪಕ್ಷಾಧಿಕಮನೆ ಪದಿನಾಱೂದ ಮಾಸಕ್ಕುಸಿರ್ಪ
ತ್ತನೆ ಮೋಸಂಗೊಳ್ಳದೇನಂ ಪೊಗೞ್ವೆನಹಮಿಂದ್ರಂಗೆ ಕೂಸಾರ್ದ ಸ್ಸೈಪಂ ೪೫

ಪೂಸವ ಸೌರಭಂ ತವದ ಮೆಯ್ಸಿರಿ ಬಾಡದ ದಾಮಮುಟ್ಟೊಡಂ
ಮಾಸವ ಸೀರೆ ಧಾತುಮಳಮಿಲ್ಲದೊಡಲ್ ಪರಿಪೂರ್ಣಯೌವನಂ
ಲೇಸನಿಸಿರ್ದ ರೂಪು ಶುಭಲಕ್ಷಣಮೆಂಬಿವನಪ್ಪುಕೆಯ್ವನಾ
ಯಾಸದಿನೀಸಿದಂ ಕಡೆವರಂ ದಿವಿಜಂ ಪರಮಾಯುರಬ್ಧಿಯಂ ೪೬

ವ॥ ಅನ್ನೆಗಮಿತ್ತಲ್

ದಿವದಿಂದಾ ದಿವಿಜಂ ವೈ
ಶ್ರವಣಚರಂ ಚರಮದೇಹಮಂ ಕೈಕೊಳಲೆಂ
ದವತರಿಸಿದಪಂ ಧರೆಗೆಂ
ದವಧಿಯಿನಱೆದೊಸೆದನಂದು ಸೌಧರ್ಮೇಂದ್ರಂ ೪೭

ವ॥ ಅಂತವಧಿವಿಧಾನದಿಂ ಸುರಪ್ರಧಾನನಱೆದು ಧನಪ್ರಧಾನನುಮನಮರ ಗಣಿಕಾಪ್ರಧಾನೆಯರುಮಂ ಬರಿಸಿ ರೈ ವೃಷ್ಟಿಯಂ ಮಾಡಿಮೆಂದು ಬೇಱೆವೇಱೆ ನಿಯಮಿಸುವುದುಮಂಗವಿಷಯವಲ್ಲಭನುಂ ಮಿಥಿಳಾಪುರಂಧ್ರೀವಿಳೋಚನಚಕೋರ ತಾರಾವಲ್ಲಭನುಮಿಕ್ಷ್ವಾಕುಕುಲಕಮಳಿನೀಕಳಹಂಸನುಂ ಚಿತ್ತಭವನೋತ್ತಂಭಿತ-ಪ್ರಭಾವತೀಮಹಾದೇವಿಕುಚಕುಂಭನುಮಪ್ಪ ಕುಂಭಮಹಾರಾಜಭವನದೊಳ್ ಗರ್ಭಾವತರಣಕಲ್ಯಾಣಮಱುದಿಂಗಳೆನೆ

ಒದವಿದ ಭಕ್ತಿಯುಂ ದಿವಿಜನಾಯಕನಾಜ್ಞೆಯುಮೊಂದನೊಂದು ಮೀ
ಱೆದುವೆನೆ ಮೂಱು ಕೋಟಿವರೆ ರನ್ನದ ಬಲ್ಸರಿ ಪೊನ್ನ ಸೋನೆ ಮಾ
ಣದ ಸುರಿತಂದುದಂದು ಧನದಾಂಬುದದಿಂ ಮಿಥಿಳಾಪುರಾಂತರಾ
ಳದೊಳಿನರಶ್ಮಿಗಳ್ ಮಸುೞ್ವಿನಂ ದೆಸೆ ಚಿತ್ರಿಸಿದಂದಮಪ್ಪಿನಂ ೪೮

ವಸುಧಾರೆ ಕಱೆಯೆ ಧರಣಿಗೆ
ವಸುಮತಿವೆಸಱಾಯ್ತು ರತ್ನವೃಷ್ಟಿಗಳಿಂ ಚಿ
ತ್ರಿಸೆ ಚಿತ್ರಮಾದುದೆನೆ ಬ
ಣ್ಣಿಸರಾರ್ ಗರ್ಭಾವತರಣಮಂ ಜಿನಪತಿಯಾ ೪೯

ವ॥ ಅಂತು ಕಱೆವ ಕನಕವರ್ಷದೊಡನೆ ಮನಸಿಜವಶೀಕರಣಶರವರ್ಷಮೆನಿಸಿ

ಒದವಿದ ನೂಲ ತೊಂಗಲುಲಿ ನೇವುರದಿಂಚರಮುಣ್ಮೆ ಪೊಣ್ಮೆ ರಾ
ಗದ ತೊಱೆ ಮೇಱೆದಪ್ಪಿ ಕವಿದತ್ತೆನೆ ಭೂಷಣಕಾಂತಿಯುಂ ಕಟಾ
ಕ್ಷದ ಪೊಳೆಪುಂ ತನುಪ್ರಭೆಯುಮಾವರಿಪನ್ನೆವರಂ ಪ್ರಭಾವತೀ
ಸುದತಿಯ ರಾಜಮಂದಿರಮನೇಂ ಪುಗುತಂದರೊ ದೇವಕಾಂತೆಯರ್ ೫೦

ಕುಲವತಿಯಂ ಪ್ರಭಾವತಿಯನೋಲಗಿಸಲ್ ಸುರರಾಜನಾಜ್ಞೆಯಿಂ
ಕುಲನಗಪದ್ಮ ಸದ್ಮದಮರೀಕುಲಮುಂ ರುಚಕಾದ್ರಿಕೂಟದಿ
ಗ್ವಲಯದ ದಿಗ್ವಧುಕುಲಮುಮೊರ್ಮೆಯೆ ತತ್ಪರಿವಾರದೇವತಾ
ಕುಲಮುಮನಂಗನಾಜ್ಞೆಯೆನೆ ಬಂದುದು ರಾಜಕುಲಕ್ಕನಾಕುಲಂ ೫೧

ವ॥ ಅಂತು ಬಂದು ಮಣಿಕುಟ್ಟಿಮತಳಮನಳಕವಲ್ಲರಿಗಡರ್ಪು ಮಾಱ್ಪುದುಂ

ಆನತಸುರಕಾಂತಾಸಂ
ತಾನದ ಕುಂತಳದ ಚೆನ್ನ ಪೂಗಳ ಪೊಳೆಪಿಂ
ದೇನೆಸೆದುಯದೊ ವೇದಿಕೆ ತಾ
ರಾನಿಕರಂ ಪುದಿಯೆ ಪೊಳೆವ ಗಗನಸ್ಥಳಿವೋಲ್ ೫೨

ವ॥ ಅನಂತರಂ

ಲಾವಣ್ಯರಸಂ ತೆಕ್ಕನೆ
ತೀವೆ ಘನಸ್ತನರಥಾಂಗದಿಂ ಸ್ಮಿತನಯನೇಂ
ದೀವರದಿಂದಾಸ್ಥಾನಸ
ರೋವರಮೇನಪ್ಸರೋವರಂ ಸೊಗಯಿಸಿತೋ ೫೩

ಪೊಣರ್ವಕ್ಕಿಯ ಮೇಗಿಕ್ಕಿದ
ಮೃಣಾಳದಂತೆಸೆಯೆ ಮೊಲೆಯ ಮೇಲಣ ಮುಕ್ತಾ
ಮಣಿಮಾಲೆ ಲೀಲೆಯಿಂ ಸುರ
ಗಣಿಕೆಯರೋಲಗಿಸುತಿರ್ದರಾ ನೃಪವಧುವಂ ೫೪

ತೊಳಗುವವತಂಸಮುಕ್ತಾ
ಫಳಕಿರಣದೊಳಮರಕಾಮಿನೀಸ್ಮಿತನಯನಂ
ಪೊಳೆದುವು ಪೊಸವೆಳ್ದಿಂಗಳ
ಬಳಸಿಂಗೊಳಗಾದ ಚಳಚಕೋರಂಗಳವೋಲ್ ೫೫

ಬಗೆಗೊಳಿಸಲ್ ಜಿನಾಂಬಿಕೆಯನೀತೆಱದಿಂ ನೆಱೆವತ್ತು ಮಜ್ಜನಂ
ಬುಗಿಸುವ ದೇವಪೂಜೆಗೆಡೆಮಾಡುವ ಸಗ್ಗದಲುಳ್ಳ ಬಣ್ಣವ
ಣ್ಣಿಗೆಗಳ ವಸ್ತ್ರಮಂ ಕುಡುವ ಕಲ್ಪಕಜಂಗಳ ಮಾಲೆವೂವಸೋ
ಲಗಿಸುವ ಬೋನಮೆತ್ತುವಗಲೆತ್ತುವ ದೇವವಿಳಾಸಿನೀಜನಂ ೫೭

ವ॥ ಅಂತು ಸುರಸುಂದರೀಸಂದೋಹಂ ಪ್ರಭಾವತಿದೇವಿಯಂ ದಿವಸವಳ ಮೋಲಗಿಸುವಲ್ಲಿ ಕೆಲರ್ಕೆಂದಾವರೆಯನೆಳವಿಸಿಲೆಳಸುವಂದಮಾಗೆ ಲಾಕ್ಷಾರಸದಿನಡಿಯೂಡಿಯುಂ ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆ ಯನೋಲಗಿಸುವಂತೆ ಮುಕ್ತಾಫಳನೂಪುರಮಂ ತುಡಿಸಿಯುಂ ಪುಳಿನವಲಯಮಂ ಪೊಂದಾವರೆಯ ಬಳ್ಳಿ ಬಳಸಿದಂತೆ ನಿತಂಬವಲಯದೊಳ್ ಮಣಿಮೇಖಳೆಯಂ ತೊಡರ್ಚಿಯುಂ ಮದನ ಮದರದನೀರದನದೊಳ್ ಕೀರ್ತಿಮುಖಮಂ ಕೀಲಿಸುವಂತೆ ಶತಪತ್ರಭಂಗಮಂ ತುಂಗಸ್ತನಭಾಗದೊಳ್ ಸಂಗಳಿಸಿಯುಂ ಪೀವರಪಯೋಧರಮಂಡಳಕ್ಕೆ ಪರಿವೇಷಮಂ ಪಡೆವಂತೆ ಪಂಚರತ್ನದ ಬಣ್ಣಸರಮಂ ಕೊರಲೊಳಿಕ್ಕಿಯುಂ ಬಾಹಾಲತೆಯ ಬಿಳಲಂತೆ ರತ್ನಕಾಂತಿ ಕವಲ್ವರಿವಿನಮಂಗದಮನಳವಡಿಸಿಯುಂ ಸಿರಿಸದ ಬಾಸಿಗಮಂ ಭೃಂಗಮಾಲೆ ಬಳಸಿದಂತ ನಳಿತೋಳೊಳ್ ನೀಲದ ಪಿಂಡುಗಂಕಣಮನೇಱಿಸಿಯುಂ ನನೆಗಣೆಗೆ ಗಱೆಗಟ್ಟುವಂತಂಗುಳಿಯಂ ರತ್ನಮುದ್ರಿಕೆಯಿಂ ಮುದ್ರಿಸಿಯುಂ ಸ್ಮರವಶೀಕರಣಯಂತ್ರಮಂ ಬರೆವಂತೆ ಕಪೋಳಫಳಕದೊಳ್ ಮಕರಿಕಾಪತ್ರಮಂ ಬರೆದುಂ ಪೊಸಮಸೆಯ ಪೂಗಣೆಗೆ ಪೊಗರಂ ಪಡೆವಂತೆ ನಗೆಗಣ್ಣೊಳಂಜನಮನಣ್ಕಗೆಯ್ದುಂ ಕರ್ಣಾಂತವಿಶ್ರಾಂತವಿಳೋಚನದೊಳ್ವಡಿಯಿಟ್ಟು ನೋೞ್ಪಂತೆ ಕಿವಿಯೊಳವತಂಸೋತ್ಪಳಮಂ ತೊಡರ್ಚಿಯುಂ

ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ ಮೆಲ್ಲಮ
ಲ್ಲಗೆ ತಲೆವಿಕ್ಕಿ ಚಂದ್ರಕಿರಣಂಗಳನಾಗಳೆ ರಾಹು ನುಂಗಿ ಮ
ತ್ತುಗುಳ್ದಪುದೆಂಬಿನಂ ಮುಡಿಸಿ ಮಾಲೆಯ ಸೊರ್ಮುಡಿಯಂ ಲಲಾಟದೊಳ್
ಮೃಗಮದಬಿಂದುವಂ ಪೞಿಗೆ ಸುಣ್ಣಗೞಿಯಂ ಪಡೆವಂತೆ ತಿರ್ದಿದಳ್ ೫೭

ವ॥ ಆಗಳಾ ಪ್ರಭಾವತೀಪ್ರಮುಖದೊಳ್

ಜನನಯನಪುತ್ರಿಕಾನ
ರ್ತನರಂಗಂ ಮುಖವಿಳಾಸರಸಮಣಿಮಯಭಾ
ಜನಮೆಸೆದುದು ಕನ್ನಡಿ ಸುರ
ವನಿತಾಯತಭುಜಲತಾಲತಾಂತಸ್ತಬಕಂ ೫೮

ಬನ್ನಮೆನಗಾದುದೀ ಮುಖ
ಸನ್ನಿಧಿಯಿಂದೆಂದು ಕರಗುವಂತೆವೊಲಾಯ್ತಾ

ಚೆನ್ನೆಯ ಲೋಚನಚಂದ್ರಿಕೆ
ಯಿಂ ನಟ್ಟೊಸರ್ವಿಂದುಕಾಂತಮಣಿಮಯಮುಕುರಂ ೫೯

ನೃಪಸತಿಯ ಕೆಲದ ಚಮರರು
ಹಪಾಣಿಪಲ್ಲವೆ ಲತಾಂಗಿ ಗೆಲೆವಂದಳ್ ದು
ಗ್ಧಪಯೋಧಿಮಥನದೊಳ್ ಫೇ
ನಪಟಳಮಂ ಪಿಡಿದು ನೆಗೆವ ಲಕ್ಷ್ಮಿವಧುವಂ ೬೦

ಯುವತಿಗೆ ಚಮರರುಹಮನಿ
ಕ್ಕುವಮರಿ ತಣ್ಗದಿರನುಗುಳ್ವ ಶಶಿಲೇಖೆಯಿನೊ
ಪ್ಪುವ ಗಗನಲಕ್ಷ್ಮಿಯೆನೆ ಕಾಂ
ತಿವೆತ್ತ ನಕ್ಷತ್ರಮಾಲೆಯಿಂ ಕಣ್ಗೆಸೆದಳ್ ೬೧

ಮುಡಿಯಲ್ತು ರಾಹುಬಿಂಬಂ
ಕೊಡೆಯಲ್ತಿದು ಚಂದ್ರಬಿಂಬಮೆನೆ ದೇವಿಗೆ ಬೆ
ಳ್ಗೊಡೆವಿಡಿದಮರಾಂಗನೆ ಕೀ
ಳ್ಪಡಿಸಿದಳುಪರಾಗಯಾಮಿನೀಕಾಮಿನಿಯಂ ೬೨

ಮರಕತ ಮುದ್ರಾರುಚಿಯಿಂ
ಪರಭಾಗಂಬಡೆದು ಭುಜಲತಾಪಲ್ಲವದಿಂ
ತಿರೆ ತಂಬುಲವಂ ಕೊಟ್ಟಳ್
ನರೇಂದ್ರವಧುವಿಂಗೆ ದಿವಿಜವಧು ಮತ್ತೊರ್ವಳ್ ೬೩

ಅರಸಿಯ ಕೆಲದೊಳ್ ಸುರಸುಂ
ದರಿಯೊರ್ವಳ್ ಪಡೆಯೆ ಗಾಡಿ ನಾಡೆ ಬೆಡಂಗಂ
ಸಿರಿ ಪಿಡಿದರ್ದಳ್ ಪೊಂದಾ
ವರೆವೂವನೆನಲ್ಕೆ ಡವಕೆಯಂ ಪಿಡಿದರ್ದಳ್ ೬೪

ದೆಸೆಬಿದ್ದಂ ಮದನಾಮೃತ
ರಸವರ್ಷಂ ಕಱಿದುದೆಂಬಿನಂ ಗೇಯರಸಂ
ಪಸರಿಸೆ ನುಣ್ಗೊರಲಿಂ ಮೆ
ಚ್ಚಿಸಿದಳ್ ಗಂಧರ್ವಗಣಿಕೆ ನೃಪಸುಂದರಿಯಂ ೬೫

ಕುಡುಪಿನೊಡನೊಡನೆ ಮನಮಂ
ಕುಡುವುರ್ವಿನ ಜರ್ವು ಡಕ್ಕೆಬಾಜಿಸೆ ಜತಿ ನೇ

ರ್ಪಡೆ ಮೋಹನಮಂತ್ರಮನು
ಗ್ಪಡಿಪಂತಿರೆ ಖಚರ ಡಕ್ಕೆಯುಂ ಬಾಜಿಸಿದಳ್ ೬೬

ಎಳಮಿಂಚು ಪೊಳೆದಡಂಗದೆ
ಪೊಳೆದಪುದೆಂಬಂತೆ ವೇಗನರ್ತನದೊಳ್ ಕ
ಣ್ಗೊಳಿಸೆ ಕರಣಾಂಗಹಾರಂ
ವಿಳಾಸವತಿ ಸತಿಗೆ ಪುಳಕಮಂ ಪುಟ್ಟಿಸಿದಳ್ ೬೭

ವ॥ ಅಂತಚ್ಚರಸಿಯರಿಚ್ಚೆಯಱಿದೋಲಗಿಸುತಿರ್ಪಿನಮೊಂದು ದಿವಸಮಾ ಪ್ರಭಾವತೀ-
ಮಹಾದೇವಿ ಚತುರ್ಥಸ್ನಾನಾನಂತರಂ

ಮಂಗಳವಸ್ತುಗಳಿಂ ದೇ
ವಾಂಗನೆಯರ್ಮಾಡೆ ಗರ್ಭಶೋಧನಮಂ ಭೂ
ಪಾಂಗನೆ ಕಾಳಿಂದೀನಿ
ಸ್ಸಂಗೆಯನಾಕಾಶಗಂಗೆಯಂ ಗೆಲೆವಂದಳ್ ೬೮

ಸೊಗಯಿಸೆ ಕೊಂಡ ಬೆಳ್ಪಸದನಂ ಸುಲಿಪಲ್ಗಳ ಕಾಂತಿಯುಂ ಮುಗು
ಳ್ನಗೆಯ ವಿಳಾಸಮುಂ ತೊಡೆದ ಚಂದನಮುಂ ಕಡೆಗಣ್ಣ ಬಣ್ಣಮುಂ
ದುಗುಲಮುಮಿಕ್ಕಿದಯ್ಸರದ ತಣ್ಪೆಳಗುಂ ತಡವಾದುವೆಂದವಂ
ನಗುವವೊಲಾದುದಾಸತಿಯ ಸೂಡಿದ ಮಲ್ಲಿಗೆಯಚ್ಚವಾಸಿಗಂ ೬೯

ವ॥ ಅಂತು ಬೆಳ್ಪಸದನಂಗೆಯ್ದು

ಅಂಚೆಯ ತುಪ್ಪುಳಂಚೆಯ ದುಕೂಲಪರಿಚ್ಛದಚಾರುತಳ್ಪದಿಂ
ಕಾಂಚನ ಮಂಚದಿಂ ಮರಕತ ಪ್ರತಿಪಾದುಕದಿಂ ಮದಾಳಿಮಾ
ಳಾಂಚಿತಧೂಪಧೂಮಲತೆಯಿಂ ಘನಸಾರಸುಗಂಧಶುಕ್ತಿಕಾ
ಸಂಚಯದಿಂ ಮನಂಗೊಳಿಪ ಸಜ್ಜೆಗೆವಂದಳದೊಂದು ಲೀಲೆಯಿಂ ೭೦

ವ॥ ಅಂತು ಬಂದು

ತಿಳಿಗೊಳದೊಳಗಣ ನೀಳೋ
ತ್ಪಳದಂತಿರೆ ನಯನಕಾಂತಿ ಶಶಿಕಾಂತಶಿಳಾ
ತಳಭಿತ್ತಿಗಳೊಳ್ ಲಕ್ಷ್ಮೀ
ವಿಳಾಸಮಂ ತಳೆದು ತಳ್ಪದೊಳ್ ಕುಳ್ಳಿರ್ದಳ್ ೭೧

ವ॥ ಆಗಳಾ ಸೆಜ್ಜೆವನೆಯೊಳಗೆ

ಪರೆದುದಿಲ್ಲರಸಿಯ ಕುರುಳ ಕಟ್ಟಿಲೆ ಬೇಱೆ
ಪರಿಭವಮಧರಮಣಿಯಿಂದಮಾಯ್ತೆಂದು
ಮರವಟ್ಟಂತಾಯ್ತು ಮಣಿದೀಪ* ೭೨

ವ॥ ಅದಲ್ಲದೆಯುಮಾಕೆಯ ಸುಯ್ಯ ಸೊವಡಿಂಗೆ ಸೋಲ್ತು ಕಂದಿದಂತಿದೇ ಮರಕತಶುಕ್ತಿಕೆಯ ಕತ್ತುರಿಯು ಕದಡುವುಮಾಕೆಯ ಕಟಾಕ್ಷಚಂದ್ರಿಕೆಯ ತಣ್ಪಿನೊಳ್ ನಣ್ಪುನಾಸೆಗೆಯ್ದಾಲಿಸುವಂತಿರ್ದ ಚಂದನಕರ್ದಮಮುಮಾಕೆಯ ಸೋರ್ಮುಡಿಯ ವಿಳಾಸಕ್ಕೆ ಸುಗಿದಱಗಂಡಿಯನುಗುಳ್ವಂತೆ ಗವಾಕ್ಷಜಾಳದಿಂನುಗುಳ್ವಗರುವಿನ ಪೊಗೆಯುಮಾಕೆಯ ಸೌಕುಮಾರ್ಯದೊಡನೆ ಮೆಯ್ವತ್ತಿ ಕೆಡೆದಂತಿರ್ದುಪಹಾರ ಕುಸುಮಂಗಳುಮಾಕೆಯ ಕಳರವದೊಡನೆ ಮಚ್ಚರಿಸಿ ಸೆಱೆಗೆ ವಂದಂತಿರ್ದ ಪಂಜರೆ ಶುಕಶಾರಿಕೆಗಳುಮಾಕೆಯೊಳ್ ಕಲ್ತ ಪದಗತಿಯಂ ಪದನೊಪ್ಪಿಸುವಂತೆ ಸುಟಿವ ಬಾಳಮರಾಳಂಗಳುಮಾಕೆಯ ಪೊಸಮುತ್ತಿನ ಪೊನ್ನತುಡುಗೆಯ ಮರೀಚಿ ತರೆಸುತ್ತೆ ನಿಜಮನೋಜವಿಕಾರಕ್ಕೆ ಲಜ್ಜಿಸಿ ಮುಸುಕಿದಂತಿರ್ದ ಭಿತ್ತಿಭಾಗವಿಲಿಖಿತಚಿತ್ರ ದಂಪತಿಗಳುಮತಿರಮಣೀಯಮಾಗೆ

ಆವುದು ಪಲ್ಲವಮಾವುದು
ತಾವರೆಯೆಂದಱಿಯಲಾಗದೆನಲೊತ್ತಿದಳಾ
ದೇವಿಯ ಮೃದುಪದತಳಮಂ
ದೇವಾಂಗನೆ ಕೆಂಪುವೆತ್ತ ನಿಜಕರತಳದಿಂ ೭೩

ವ॥ ಆಗಳೊರ್ವಳಮರರಮಣಿ

ಮುಕ್ಕಳಿಸಿದಮರ್ದನುಗುಳ್ದಪ
ಳಕ್ಕುಮಿವಳ್ ವಂಶಮುಖದಿನೆನೆ ಕಳರುತಿ ಕೈ
ಮಿಕ್ಕು ಕಿವಿಪೊಕ್ಕು ಬಗೆಯಂ
ಜಕ್ಕುಲಿಸೆ ಲತಾಂಗಿ ವಂಶಮಂ ಬಾಜಿಸಿದಳ್ ೭೪

ಸರಸಿಜಸೂತ್ರಸಂಜನಿತಸಿಂಜಿನಿಯೇ ಮದಭೃಂಗಮಾಳಿಕಾ
ವಿರುತಿಯೆ ಕಲ್ತುಕೊಳ್ಳೀಮಿವಳಿಂಗೊರಲೊಳ್ ನಿಮಗಿಂಪನೆಂದವಂ
ಸ್ಮರನಿಱೆಕೆಯ್ವಿನಂ ರತಿಯ ಮೆಲ್ಲುಲಿ ನಿಬ್ಬರಮೆಂದೊನಲ್ವಿನಂ
ಸುರವಧು ವಿರ್ಜಿನಾಂಬಿಕೆಯ ಚಿತ್ತಮನಿರ್ಕುಳಿಗೊಂಡು ಪಾಡುವರ್ ೭೫

---

* ೭೨ನೆಯ ಪದ್ಯದಲ್ಲಿರಬೇಕಾದ ಮೂಲದಲ್ಲಿ ನಾಲ್ಕನೆಯ ಪಾದವಿಲ್ಲ.

ಪೊಂಪುಳಿವೋಗೆ ರಾಗವೆರಡುಂ ಕೆಳದೊಳ್ ಮದನಾನುರಾಗಮಂ
ಸಿಂಪಿಸುವಂತೆ ಬಾಜಿಸುವ ಬಂಚವ ಸುಣ್ಣರದೊಳ್ ಪಳಂಚಿ ಗೀ
ತಂ ಪರಿಪುಷ್ಟಮಾಗೆ ದಿವಿಜಾಂಗನೆ ಪಾಡುವುದುಂ ಲತಾಂಗಿ ಮೆ
ಯ್ಯಂ ಪುಳಕಾಂಕುರಂ ಪುದಿಯೆ ಲೀಲೆಯಿನಿರ್ದಳನಲ್ಪತಲ್ಪದೊಳ್ ೭೬

ವ॥ ಅಂತಿರ್ಪುದುಂ ಕುಂಭಮಹಾರಾಜನುಪಚರಿತಗರ್ಭಾದಾನಮಂಗಳ ವಿಧಾನಂ ನವೀನಚೀನಪರಿಧಾನೋತ್ತರೀಯನುಂ ವಿಚಿತ್ರವೇತ್ರಧರಪುರಸ್ಸರನುಂ ಕತಿಪಯಾಂಗರಕ್ಷಕ ಪರಿವೃತನುಮಂತಃಪುರಪ್ರವೇಶ ಯೋಗ್ಯಪರಿಮಿತ ಪರಿಜನುಮಾಗಿ ಸೆಜ್ಜೆವನೆಗೆ ಬಿಜಯಂಗೆಯ್ದು ಬೆಳ್ಪಸದನದ ಪೊಸದೇಸೆಯಿಂ ಕಪ್ಪುರವಲೆಪ್ಪದ ಪೆಣ್ಣನನುಕರಿಸಿ ಸಂಭ್ರಮ -ದಿನಿದಿರೇಳ್ವ ನಲ್ಲಳ ನಗೆಮೊಗದಿನೊಸವೇ ಲಜ್ಜಾರಸದಿಂ ನಿಜಮನೋರಾಗಲತೆ- ಯನಂಕುರಿತಂ ಮಾಡಿ ಪಾಲ್ಗಡಲ ಮಡುವಿನಂತಿರ್ದ ತಳ್ಪಮಂ ರಾಕಾಶಶಾಂಕನಂತಳಂ -ಕರಿಸಿ ಚತುರಪರಿಹಾಸವಚನಚಂದ್ರಿಕೆಯಿಂ ದೇವಿಯ ಮನಃಕುಮುದಿನಿಯನಲರ್ಚಿ ರತ್ನವೇಳಾವಿಳಸಿತ ಕ್ಷೀರನೀರಾಕರದಂತೆ ಕಾಂತಾಸಮನ್ವಿತಂ ನಿರಂತರೋತ್ಸವಮನಪ್ಪುಕೆಯ್ದಿರೆ

ತೇಂಕಿದುವೆಳಸುವ ಕಣ್ಮಲ
ರಿಂ ಕರೆಗಣ್ಮುವ ವಿಳಾಸರಸದೊಳ್ ತನುಗಳ್
ಸೋಂಕಿನೊಳುಬ್ಬರಿಸುವ ಪುಳ
ಕಾಂಕುರದಿಂ ಕಠಿನವಾದುವಾದಂಪತಿಯಾ ೭೭

ವ॥ ಅಂತು ಸೂಳ್ಗಿವಂದು

ಬೆಳಗಪ್ಪ ಜಾವದೊಳ್ ಸತಿ
ವಿಳಾಸವತಿ ತೀರ್ಥನಾಥ ಜನ್ಮೋತ್ಸವಮಂ
ಗಳಕಾರಣಮಂ ಸ್ವಪ್ನಾ
ವಳಿಯಂ ಪದಿನಾಱುಮಂ ಪ್ರಭಾವತಿ ಕಂಡಳ್ ೮೭

ವ॥ ತದನಂತರಂ

ಸಾರಸನಾದದಿಂದುಲಿದು ಚಂಚಳ ಕಾಂಚನಜಾಳಮಾರ್ಗದಿಂ
ಭೋರನೆ ಬಂದು ಸೋಂಕಿ ಸುಖನಿದ್ರೆಯನೆಚ್ಚಱಿರೆಂದು ಸನ್ನೆಯಿಂ
ಬಾರಿಸುವಂತೆ ತೂಗೆ ತಲೆಯಂ ಸೊಡರ್ಗಳ್ ಸತಿಗೇಂ ಗೃಹಾಬ್ಜಿನೀ
ಸ್ಮೇರಸಖಿಂ ಪ್ರಭಾತಪವನಂ ಪಡೆದತ್ತೊ ಸುಖಪ್ರಬೋಧಮಂ ೭೯

ವ॥ ಅಂತುಪ್ಪವಡಿಸಿ ನಿತ್ಯನಿಯಮಂಗಳಂ ನಿರ್ವರ್ತಿಸಿ ತನ್ನ ಕಂಡಕನಸುಗಳನನು ಕ್ರಮಂದಪ್ಪದೆ ನಿಜಮನೋವಲ್ಲಭಂಗಱಿಪೆ

ಧವಳಸ್ತಂಭೇರಮಂ ಗೋಪತಿ ಹರಿಸಿರಿ ಪೂಮಾಲೆ ಪೂರ್ಣೇಂದುಬಿಂಬಂ
ರವಿಮೀನಂ ಕುಂಭಮಂಭೋರುಹವನಮಮೃತಾಂಭೋದಿ ಸಿಂಹಾಸನಂ ದೇ
ವವಿಮಾನಂ ನಾಗಸದ್ಮಂ ಸ್ಫುರಿತಮಣಿಗಣಂ ಪ್ರಜ್ವಳಜ್ಜ್ವಾಳಿಯೆಂದಿಂ
ತ್ರಿವಸಾರ್ನಿನ್ನಂದದಿಂ ಸುಂದರಿ ಕನಸುಗಳಂ ಕಾಣ್ಬ ಸೈಪಿಂಗೆ ನೋಂತರ್ ೮೦

ನೀನಲ್ಲದರೀ ಕನಸಂ
ಮಾನಿನಿ ಕಂಡಪರೆ ತೀರ್ಥಕರ ಜನನಿಯೆನಲ್
ನೀನೆ ದೊರೆವೆತ್ತೆಯೆನೆ ಧರ
ಣೇನಾಥಂ ರಮಣಿಗಾಯ್ತು ಹರ್ಷೋತ್ಕರ್ಷ ೮೧

ವ|| ಅಂತು ಸಂತೋಷಮನಪ್ಪುಕೆಯ್ದಿರ್ಪಿನಂ ವಯಶ್ರವಣಚರನಪ್ಪ ಅಪರಾಜಿತವಿ
ಮಾನದಹಮಿಂದ್ರಂ ಚೈತ್ರಶುದ್ಧಪ್ರತಿಪದಶ್ವಿನೀನಕ್ಷತ್ರದೊಳ್

ಕಮಳದೆಸಟಿಸೊರೆಯಿಂ ನುಸು
ಳ್ದು ಮೃಣಾಳೀಗರ್ಭದೊಳಗೆ ನೆಲಸುವ ಬಾಳಾ
ರ್ಕಮಯೂಖಮೆಂಬಿನಂ ಮುಖ
ಕಮಳದಿನಾತ್ಮೀಯಗರ್ಭದೊಳ್ ನೆಲಸುವುದುಂ ೮೨

ದೇವಿ ಕರೆಗಣ್ಮೆ ಪೊಣ್ಮುವ
ಲಾವಣ್ಯರಸಪ್ರವಾಹದೊಳಗೆಸೆದಳ್ ಪೊಂ
ದಾವರೆಯ ಬಳ್ಳಿ ತೆಕ್ಕನೆ
ತೀವಿದ ತಿಳಿಗೊಳದ ನಡುವೆ ನಳನಳಿಸುವೊಲ್ ೮೩

ಈಂಗಡಲೊಳಗೋಲಾಡುವ
ಮೀಂಗಳ ಪೊಣರಂತೆ ಸತಿಯ ಚಳನಯನಂಗಳ್
ತಿಂಗಳ ಮಱಿಯಂತೆ ಕಪೋ
ಳಂಗಳ್ ಮೊಗರಸದೊಳೇಂ ಮನಂಗೊಳಿಸಿದುವೋ ೮೪

ಲಾವಣ್ಯರಸಾಬ್ಧಿಯ ರ
ತ್ನಾವಳಿಯೆನಿಸಿದುವು ತೊಟ್ಟ ತೊಡವಿನ ಮಣಿ ಮಾ
ದೇವಿಯ ಕಡೆಗಣ್ಕೆದಱುವ
ಪೂವಲಿಯೆನಿಸಿದುವು ಕರ್ಣಪೂರದ ನೆಯ್ದಿಲ್ ೮೫

ಆ ದರಹಾಸಚಂದ್ರಿಕೆಯಿನೊಪ್ಪುವಕಾತೆಯ ವಕ್ತ್ರಕಾಂತಿ ಮ
ರ್ಯಾದೆಯನೇನುಮಂ ಬಗೆಯದಂಡಲೆಯುತ್ತಿರೆ ಹೇಡಿವಟ್ಟು ಪಾ

ಟೂಮದು ಚಂದ್ರಮಂಡಳಮದಲ್ಲದೊಡಾಲದಮರಕ್ಕದೇಕೆ ಪ
ಕ್ಷಾಮದವೇಕೆ ಪುತ್ತಡರ್ದುದಿರ್ದಪುದೇಕವಜಿರೊಳ್ ಮೊಲಂ ಮೃಗಂ ೮೬

ವ|| ಅಂತಾಶ್ಚರ್ಯಮಾದ ಸೌಂದರ್ಯದೊಡನೆ ಗರ್ಭಂ ಬಳೆಯೆ

ಮೊಲೆಗೆ ಮೊಗಕ್ಕೆ ಬಾಸೆಗೆವಳಿತ್ರಿತಯಕ್ಕೆ ತನೂದರಕ್ಕೆ ಕೋ
ಮಳತನುವಿಂಗೆ ಮುನ್ನಿನ ವಿಳಸಮೆ ಜೀಜಿತ ವಿಕಾರವೇಷಮ
ಗ್ಗಲಿಸುವ ಗರ್ಭಚಿಹ್ನಮಿವು ತೋಜಿವು ಶಾಂತಮನಂ ಜಿನಾರ್ಭಕಂ
ನೆಲಸಿರೆ ಗರ್ಭಪಂಕಜದೊಳಂಗನೆಗಂಗವಿಕಾರಮಕ್ಕುಮೇ ೮೭

ಇನಕಿರಣಂ ಪೊರ್ದಿ ಸರೋ
ಜಿನಿಗುಷ್ಣಮನೀಯದಂತೆ ತೇಜೋನಿಳಯಂ
ಜನನಿಯ ಗರ್ಭದೊಳಿರ್ದುಂ
ಜಿನಾರ್ಭಕಂ ಪಡೆದನಿಲ್ಲ ಪೀಡಾಲವಮಂ ೮೮

ಗುರುಭರಮಂ ಪಡೆಯದವೋಲ್
ಪರಿಮಳಮತಿಬಹಳಮಾಗಿ ಮಂಜರಿಗೆ ಜಗ
ದ್ಗುರು ಗರ್ಭದೊಳಿರ್ದುಂ ಗುರು
ಭರಖೇದಮನಿತ್ತನಿಲ್ಲ ಗರ್ಭಿಣಿಗಿನಿಸಂ ೮೯

ವ|| ಅಂತಪೂರ್ವಮೆನಿಪ ಗರ್ಭದೊಳ್

ಪೂಸಿ ಮುಖೇಂದುವಂ ಸುರಭಿಚಂದನದಿಂ ವಳಿ ರತ್ನಕಾಂತಿಯಿಂ
ದೋಸರಿಪಂತು ಕಾಂಚಿಯನಮರ್಩ಚಿ ಮೃಗೋದ್ಭವದಿಂ ಕುಚಾಗ್ರಮಂ
ಬಾಸಿಯನಣ್ಕಗೈದು ಜಿನಗರ್ಭದೊಳಾ ಸತಿಗಾಗದಿರ್ದುದಂ
ದೇಸೆಗೆ ಸೋಂಕುವಾಸೆಗೆ ನೃಪಂ ಪಡೆದಂ ನವಗರ್ಭಚಿಹ್ನಮಂ ೯೦

ಅಮರಸ್ತ್ರೀಯರ ಗೆಯ್ವ ತೊಟ್ಟುವೆಸನುಂ ಕೊಂಡಾಟಮುಂ ಭಕ್ತಿಯಿಂ
ದಮರಾಧೀಶ್ವರನಟ್ಟುವಾಭರಣಮುಂ ವಸ್ತ್ರಂಗಳುಂ ಬೇಜಿತ ಕುಂ
ಭಮಹಾರಾಜನ ಮಾಟ್ಪ ಮನ್ನಣೆಗಳುಂ ವ್ಯಾಮೋಹಮಂ ನಾಡೆ ಮಾ
ಡೆ ಮನೋರಾಗಮನಾಳ್ವುದಾ ಸತಿಗೆ ಸೌಖ್ಯಾಗ್ರೇಸರಂ ವಾಸರಂ ೯೧

ವ|| ಅಂತು ನವಮಾಸಂ ಪರಿಪೂರ್ಣಮಾಗೆ

ಕುಸುಮಾಸಾರಪುರಸ್ಸರಂ ಸುರಸರಿದ್ವೀಚೀನಟಂ ತಣ್ಣೆಲರ್
ಕುಸಿಯುತ್ತುಂ ಬರೆ ಪೊತ್ತು ದೇವಪಟಹಪ್ರಧ್ವಾನಮಂ ಮಾರ್ಗಶೀ

ರ್ಷಸಿತೈಕಾಶಿಯಂದಿನಶ್ವಿನಿಯೊಳಾ ಸ್ತ್ರೀರತ್ನಮಾಚಾರ ಶೀ
ಲಸರಪದ್ಮಿನಿ ಮಲ್ಲಿನಾಥಜಿನನಂ ಪೆತ್ತಳ್ ಜಗನ್ನಾಥನಂ ೬೨

ಜನನೀನಿರ್ಮಳಗರ್ಭಶುಕ್ತಿಯಿನಮೂಲ್ಯಂ ಮೌಕ್ತಿಕಂ ಪುಟ್ಟಿದ
ತ್ತೆನೆ ಸದ್ವೃತ್ತಮನಪ್ಪುಕೆಯ್ದು ಗುಣಮಂ ಕೈಕೊಂಡು ದೋಷಂಗಳೆ
ಳ್ಳನಿತುಂ ಪೊರ್ದವೆನಿಪ್ಪ ಪೆಂಪೆಸೆಯೆ ನೇತ್ರಾನಂದರೂಪಂ ಜಗ
ಜ್ಜನಚೂಡಾಮಣಿ ಪುಟ್ಟಿದಂ ನಿರುಪಮಂ ಸಾಹಿತ್ಯವಿದ್ಯಾಧರಂ ೬೩

ಇದು ಪರಮಜಿಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥ ಪುರಾಣದೊಳ್
ತೀರ್ಥಕುಮಾರೋದಯವರ್ಣನಂ ಏಕಾದಶಾಶ್ವಾಸಂ ಸಂಪೂರ್ಣಂ



# ದ್ವಾದಶಾಶ್ವಾಸಂ

ಶ್ರೀಗೆ ನೆಲೆಯೆನಿಸಿ ವಿದ್ಯಾ
ಶ್ರೀಗಾಶ್ರಯಮೆನಿಸಿ ಪರಮಪದಮಂ ಪಡೆವು
ದ್ಯೋಗದಿನೊಗೆದಂ ಧರೆಗನು
ರಾಗಂ ಕೈಗುಣ್ಮುವನ್ನಮಭಿನವಪಂಪಂ ೧

ವ|| ಆಸಮಯದೊಳ್

ಸಿರಿಯ ನೆಲೆಯಂತೆ ವಸುಧೆ ನೀರಜಮಾಯ್ತು ತಿಳಿದುದಂದನುನಯಂಬಡೆದರಂತೆ
ಸರಸಿಜಾಕರಂ ದಕ್ಷಿಣಾವರ್ತಮಾಗೆಸೆದುದು ಶಿಖಿ ಪಾಂಚಜನ್ಯದಂತೆ
ಸುರಭಿಯಾಯ್ತೆಲರಿಂದ್ರನ ಪಯದಂತೆ ನಭಮಪಘನಮಾಯ್ತು ತನುವಿನಂತೆ
ಪರಮಜಿನನುದಯದೊಳಿಂತು ತಳೆದುದಪೂರ್ವವಿಭೂತಿಯಂ ಪಂಚಭೂತಂ ೨

ವಿವಿಧಲಯಂಗಳಿಂ ಕುಣಿವೆ ಗೊಂದಲವೆಕ್ಕಣಮಾಗಳಂತೆ ಕ
ಟ್ಟುವ ಗುಡಿ ಪೊಯ್ವ ಬದ್ದವಣ ಮಿಕ್ಕುವ ಮುತ್ತಿನ ರಂಗವಲ್ಲಿ ಸೂ
ಸುವ ಪಟವಾಸಚೂರ್ಣವೊದನುಣ್ಮುವ ಮಂಗಳಗೀತಿಗಳ್ತೊಡ
ಚುವ ಮಣಿತೋರಣಂ ಮೆಱೆದುವುತ್ಸವಮಂ ಜಿನಜನ್ಮಗೇಹದೊಳ್ ೩

ಪುರಲಕ್ಷ್ಮೀಕಾಂತೆ ಜನ್ಮೋತ್ಸವಮುದಿತಲೀಲಾಸ್ಯಮಂ ಲಾಸ್ಯಮಂ ಬಿ
ತ್ತರಿಸುತ್ತಿರ್ದಪ್ಪಳೀತೋರ್ಪುದೆ ಕರತಳವಿನ್ಯಾಸಮೆಂಬಂದದಿಂದಂ
ಬರಮಂ ನೇತ್ರಧ್ವಜಂ ಚುಂಬಿಸಿದುಪಿವ ಸವಾಳೋಕಭೇದಂಗಳೆಂಬಂ
ತಿರೆ ಸೌಧಾಗ್ರಂಗಳೊಳ್ ಮೇಳಸಿದುವು ಸಿತಚಂಚತ್ಪತಾಕಾಂಚಳಂಗಳ್ ೪

ಬಿಳಿಯ ಮುಗಿಲ್ಗಳೆ ರಜತಾ
ಚಳದೊಳ್ಪೊಳೆವಂತೆ ಧವಳಹಾರಂಗಳೊಳೇಂ
ಪೊಳೆದುವೊ ನವೀನಚೀನಾಂ
ಚಳಚಂಚಳಪಾಳಿಕೇತನಪ್ರಚಯಂಗಳ್ ೫

ಶೃಂಗಾರರಸದಿನೋಕುಳಿ
ಯಂ ಗೃಹದೇವತೆಯರಾಡುವಂತಾಗೆ ನಭೋ
ರಂಗದೊಳೆಸೆದುವು ಪಚ್ಚೆಯ
ಮಂಗಳಕೇತನವಶಂಗಳಾಲೋಲಂಗಳ್ ೬

ಒದವಿ ಕವಿತರ್ಪ ಸುರಕುಸು
ಮದಸವಿಯಂ ಪದಪಿನಿಂದಮಿದಿರ್ಗೊಳ್ವಳಿಮಾ
ಳೆದಲೆನಿಸಿ ನೀಳಕೇತನ
ಕದಂಬಮಳ್ಳಿಜೆದುವಾಗಳಂಬರತಳಮಂ ೭

ಸುರರಾಜಪುರಶ್ರೀಗಾ
ಪುರಲಕ್ಷ್ಮೀಕಾಂತ ಸೆಣಸಿ ಕಿಸುಗಣ್ಣೆದ ಕೇ
ಸರಕಾಂತಿಯಂತೆ ನೇತ್ರಾಂ
ಬರಕೇತನಮಾಳೆ ತುಜೆಗಿದುವು ಮನೆಮನೆಯೊಳ್ ೮

ದೇಸೆ ವಿಳಾಸಮಂ ಪಡೆಯ ಗೊಂದಳ ಪಕ್ಕಣಮಾಗಳಾ ನೃಪಾ
ವಾಸಮೊಳಾಡಿದತ್ತೆಸೆಯೆ ಪಾಣಿತಳಂ ಪಡೆವಂತೆ ಕುಂಕುಮ
ಸ್ಥಾಸಕಮಂ ಕುರುಳ್ಕಿದಱುವಂತೆ ತಮಾಳವನಾ ಪ್ರವಾಳಮಂ
ಕೇಸಡಿ ಪಾಸುವಂತೆ ತಳಿರು ನಗೆಗಣ್ಮುಗುಳ್ವಂತೆ ನೆಯ್ದಿಲಂ ೯

ಉದಯಿಪುದುಂ ತ್ರಿಳೋಕತಿಳಕಂ ಗೃಹದೇವತೆಯರ್ ಪ್ರಸನ್ನವೇ
ಷದಿನೊಸೆದಾಡುವಂತೆ ಮಣಿಭಿತ್ತಿಗಳಂ ಮಣಿಕುಟ್ಟಿಮಂಗಳಂ
ಪುದಿದು ಮನಕ್ಕೆ ವಿಸ್ಮಯಮನಿತ್ತುವು ನೃತ್ಯರಸಾಮೃತಪ್ರವಾ
ಹದೊಳವಗಾಃಮಿರ್ದ ಗಣಿಕಾಪ್ರಭೆಯುಂ ಪ್ರತಿಬಿಂಬಲಕ್ಷ್ಮಿಗಳ್ ೧೦

ದೆಸೆಬಿದ್ದಂ ಕುಣಿವಂಗನಾಜನದ ಕಾಂಚೀಘಂಟಿಕಾಘೋಷಮೊಂ
ದೆಸೆಯೊಳ್ ಮಂಗಳಗೀತದೊಂದೆಸೆಯೊಳಾಶೀರ್ವಾದನಾದಂಗಳೊಂ
ದೆಸೆಯೊಳಯ್ ಮಂಗಳಪಾಠಕಸ್ತವನ ಮಾಂಗಲ್ಯಾನಕಧ್ವಾನಮೊಂ
ದೆಸೆಯೊಳ್ ಘೂರ್ಣಿಸೆ ಪೂರ್ಣಮಾಯ್ತು ಜಿನಜನ್ಮೋತ್ಸಾಹ ಕೋಳಾಹಳಂ ೧೧

ಜಿನಜನ್ಮೋತ್ಸಾಹಮಂ ಪೇೞ್ದುವು ಭವನಮರುನ್ಮಂದಿರವ್ಯಂತರಾಧೀ
ಶನಿವಾಸಜ್ಯೋತಿರಿಂದ್ರಾವಸಥದಿವಿಜಲಕ್ಷ್ಮಂಗಳೊಳ್ ದಿವ್ಯಶಂಖ
ಧ್ವನಿ ಭೇರೀನಾದಕಂಠೀರವರುತಿ ಮಣಿಘಂಟಾರವಂ ತಚ್ಚತುರ್ದೇ
ವನಿಕಾಯಂ ನಮ್ರಕಾಯಂ ಜಯಜಯರವಮುಕ್ಕೋಷ್ಟಮುತ್ಪನ್ನಮಾಗಳ್ ೧೨

ಎಱಗಿದೊಡಾದುದೀ ದಿವಿಜರಾಜಪದಂ ಜಿನವಲ್ಲಭಂಗದಂ
ಮಱೆಯೆ ಕೃತಘ್ನವೃತ್ತಿ ದೊರೆಕೊಂಡಪುದೆಂದು ಮರುತ್ಕಿರೀಟಮಂ
ದೆಱಗುವ ಮಾೞ್ಕೆಯಿಂ ದಿವಸದೆಂದೆಱಗಿರ್ದುವು ಕಂದುಗುಂ ಪೆಱ
ರ್ಗೆಱೆದೊಡಿವೆಂಬವೊಲ್ ಸಹಜದಿಂ ಸುರಿತಂದುವು ಪುಷ್ಪವೃಷ್ಟಿಗಳ್ ೧೩

ದಿವಿಜರ್ ಸೂಸದೆ ಕೊಳ್ವ ಪೂಮೞೆಗೆ ದೇವಪೂರ್ಯ್ಯದೋರಂತೆ ಪೊ
ಣ್ಮುವ ಭೇರೀನಿನದಕ್ಕೆ ನಾಕವಿಭವಶ್ರೀ ವಿಸ್ಮಯಂಬಟ್ಟು ತೂ
ಗುವವೋಲ್ತನ್ನ ಕಿರೀಟಮಂ ನಡುಗೆ ತನ್ನಿರ್ದಾಸನಂ ವಾಸವಂ
ಗವಧಿಜ್ಞಾನಮನಂತರಂ ತಿಳಿಪಿದತ್ತೆತ್ತಂ ಜಿನೋತ್ಪತ್ತಿಯಂ ೧೪

ಪತ್ತೊಂಬತ್ತನೆಯ ಜಿನೋ
ತ್ಪತ್ತಿಯನಱೆದಿರ್ದು ಮಣಿಮಯಾಸನದಿಂ ದೇ
ವೋತ್ತಂಸಂ ಕರಕಮಳಮ
ನುತ್ತಂಸಂಮಾಡಿ ಪಲವು ಸೂೞ್ ಪೊಡಮಟ್ಟಂ ೧೫

ವ॥ ಅಂತು ಪೊಡಮಟ್ಟು ಜನ್ಮಾಭಿಷವಣಕಲ್ಯಾಣೋತ್ಸುಕಚಿತ್ತನಪ್ಪುದುಂ

ಭವನವನಜ್ಯೋತಿಷ್ಕ
ಲ್ಪವಾಸದಮರಾಧಿನಾಯಕರ್ಮಣಿಮಕುಟ
ಚ್ಛವಿ ಭುವನವಿವರಮಂ ತೀ
ವುವನ್ನಮೆಟ್ಟಿಂದರಂದು ಮನದಿಂ ಮುನ್ನಂ ೧೬

ವ॥ ಅವರೊಡನೆ ಸಾಮಾನಿಕತ್ರಯಸ್ತ್ರಿಂಶದಾತ್ಮರಕ್ಷಲೋಕಪಾಳಕ ಪ್ರಕೀರ್ಣಕಾಭಿಯೋಗ್ಯ-
ಕಿಲ್ಬಿಷಿತ ಪ್ರಮುಖಸಪ್ತಸೇನೆ ಸಂದಣಿಸೆ ವಂದುನಿಂದರ ನಂತರಂ

ಗಗನಂ ತೆಕ್ಕನೆ ತೀವೆ ಕಾಯಬಲದಿಂ ಶೇಷೋರಗಶ್ರೇಣಿ ಮೇ
ಗೊಗೆದಂತದ್ಭುತಮಾಗೆ ತನ್ನ ಪಲವುಂ ಕೈಗಳ್ ಮಹಾಮೇಘದೊ
ಡ್ಡುಗಳೆಂಬಂತಿರೆ ಕರ್ಣತಾಳವಿಸರಂ ಕೋೞ್ಕಳ್ ಜಯಶ್ರೀವಿಳಾ
ಸಗೃಹಸ್ತಂಭಶತಂಗಳಂತೊದವೆ ಬಂದತ್ತಭ್ರಮೂವಲ್ಲಭಂ ೧೭

ದಿಪಿಜೇಂದ್ರೇಭಕ್ಕೆ ಮೂವತ್ತೆರಡೆ ಮೊಗಮವೋರೊಂದಱೊಳ್ ಕೋೞ್ಕಳೆಂಟೆಂ
ಟವಱೊಳ್ ಜೆಲ್ಲಾದುವೋರೊಂದಲರ್ಗೊಳಸವಱೊಳ್ ಪದ್ಮಿನೀಕಂದ ಮೋರೊಂ
ದವಱೊಳ್ ಪುಷ್ಪಾಳಿ ಮೂವತ್ತೆರಡವಱೆಸಱೊಂದಕ್ಕೆಮೂವತ್ತೆರಟ್ಟಿ
ಳ್ತುವು ಮೂವತ್ತಿರ್ವರೊಂದೊಂದೆಸಱ್ಗಿಳೊಳಮರಸ್ತ್ರೀಯ ರಾಡುತ್ತುಮಿರ್ಪರ್ ೧೮

ವ॥ ಅಂತಗುರ್ವವಡೆದು ಪಿಗುರ್ಪಿಸಿದ ದಿಪಿಜಗಜಮನೇಱೆ

ತನುಸೋಂಕಿಂ ಶಚಿ ಪಾರಿಹಾರ್ಯವಿಸರವ್ಯಾಹಾರದಿಂ ವಾಳವೀ
ಜನದಿಂ ವೀಜನಮಂಗಹಾರಪದಸಂಚಾರಂಗಳಿಂ ನರ್ತಕೀ
ಜನವೆಕ್ಕೆಕ್ಕೆಯಿನೆಟ್ಟಿಱಿಂ ಪಡೆಯೆ ಸೌಧರ್ಮೇಂದ್ರನುದ್ವಾಹುದಂ
ಡನಿಶಾತಾಂಕುಶನಿರ್ದನದ್ಭುತಮೆನಿಪ್ಪೈರಾವತಸ್ಕಂಧದೊಳ್ ೧೯

ವ॥ ಅಂತಿರ್ದು

ಪಲವುಂ ರತ್ನಾತಪತ್ರಂ ಪುದಿಯೆ ಚಮರಜಶ್ರೇಣಿ ತಟಿಪ್ಪೊಯ್ಯೆ ಚಿತ್ರಾಂ
ಚಳವಂಚತ್ಕೇತನಂ ಕಣ್ಗೊಳಿಸೆ ವಿವಿಧತೂರ್ಯಸ್ವನಂ ಪೊಣ್ಮೆ ತನ್ನಿ
ರ್ಕೆಲದೊಳ್ ನಾನಾಮರೇಂದ್ರರ್ಸೋಗಯಿಸೆ ಗಗನಂ ಸಾಲದೆಂಬನ್ನಮೇೞುಂ
ಬಲವೇೞುಂ ವಾರ್ಧಿ ಬರ್ಪತೊಡವರೆ ನಡೆಗೊಂಡಂ ಶಚೀಜೀವಿತೇಶಂ ೨೦

ವ॥ ಅಂತು ಚತುರ್ನಿಕಾಯಾಮರೇಂದ್ರಪುರಸ್ಸರಂ ಸೌಧರ್ಮೇಂದ್ರಂ ತಳರ್ವುದುಂ

ಎಳನೇಸಱ ಬಳಗಂಗಳ
ಬೆಳಗುಗಳೊಂದಾಗಿ ಗಗನಮಂ ಬೆಳಗುವವೊಲ್
ಬೆಳಗಿದುವು ದೇವಕೋಟಿಯ
ತಳತಳಿಪ ಕಿರೀಟಶೋಣಮಣಿಕಿರಣಂಗಳ್ ೨೧

ಉಪಮಾತೀತಂ ವಿಳಾಸಂ ತಮಗಮರ್ದಿರೆ ದೇವೀಜನಂ ಸುತ್ತಿ ದೇವಾ
ಧಿಪನಂ ಬರ್ಪಲ್ಲಿ ತಾರಾಪಥದೊಳವರ ಮಾಣಿಕ್ಯಭೂಷಾಂಶುಜಾಳಂ
ಚಪಳಾಪಾಂಗಪ್ರಭಾಮಂಜರಿ ಚಳದಳಿನೀಕುಂತಳಚ್ಛಾಯೆ ಬಾಳಾ
ತಪಮುಂ ಬೆಳ್ದಿಂಗಳುಂ ಕತ್ತಲೆಯುಮೊಡನೆ ಮೆಯ್ದೋಱುವಂತಾದುವಾಗಳ್ ೨೨

ಅಮರಸ್ತ್ರೀಯರ ವಕ್ತ್ರದಿಂ ಶಶಿಮಯಂ ಧಮ್ಮಿಲ್ಲದಿಂ ಭೃಂಗಜಾ
ಳವಯಂ ಲೋಚನದಿಂ ನವೋತ್ಪಳಮಯಂ ಭ್ರೂಲೇಖೆಯಿಂದಿಕ್ಷುಚಾ
ಪಮಯಂ ಕೆಂದಳದಿಂ ಸರೋರುಹಮಯಂ ವಕ್ಷೋಜದಿಂ ಚಕ್ರವಾ
ಕಮಯಂ ವ್ಯೋಮಮೆನಲ್ ಸಮರ್ಪಿಸಿದುದಾ ದೇವಾಗಮಂ ರಾಗಮಂ ೨೩

ತೊನೆಯೆ ಕುರುಳ್ ಕದಕ್ಕದಿಸ ತುಂಗಕುಚಂ ತೆರೆಸುತ್ತೆ ಲೋಲಲೋ
ಚನರುಚಿ ಜೋಲೆ ಮೇಲುದು ಸಡಿಲ್ತರೆ ನೂಲ್ ನಿಱಿ ಸೂಸೆ ಶಕ್ರಲೋ
ಚನಮನಿತುಂ ಕೃತಾರ್ಥಮೆನೆ ಸಂಗಡದಿಂ ಗೆಡೆವಚ್ಚುರಾಗಮ
ರ್ಚನಮೆನೆ ಬಾನ ಮೇಲೆ ಬಯಲಂಗಣಮಾಡಿದುದಪ್ಸರೋಗಣಂ ೨೪

ನಗೆಮೊಗಮಲ್ಲವು ಶೀತಾಂ
ಶುಗಳೆನೆ ತುಡುಗೆಗಳ ತೋಱಮುತ್ತಲ್ಲವು ತಾ

ಽಗೆಗಳೆನೆ ನಯನಚಂದ್ರಿಕೆ
ಽಗಂತಮಂ ಬಳಸೆ ಬಂದರಮರಾಂಗನೆಯರ್ ೨೫

ಕಳವೀಣಾವೇಣುನಾದಂ ಪುದಿಯೆ ಗಗನಮಂ ದೇವಿಯರ್ ವಿಭ್ರಮಂ ಕ
ಕ್ಕೊಳೆ ದಿವ್ಯಾಮೋದಮಾಶಾವಳಯಮನಿತುಮಂ ತೀವೆ ದೇವಾಂಗಸ್ತ್ರಂ
ಗಳ ಬಣ್ಣಂ ವ್ಯೋಮಮಂ ಚಿತ್ರಿಸೆ ಮಣಿಮಯಭೂಷಾಂಶುವಿಂದಂ
ನಭೋಮಂಡಳಮೆಲ್ಲಂ ಶಕ್ರಚಾಪಂಗಳ ಬಳಗದೆ ಕೇರ್ಗಟ್ಟಿದಂತಾಗೆ ಬಂದರ್ ೨೬

ವ|| ಅಂತು ಮಹಾಮಹಿಮೆಯಿಂ ಸೌಧರ್ಮೇಂದ್ರಂ ಪವನಪಥದಿಂ ಮಿಥಿಳಾಪುರಕ್ಕವತರಿ-
ಸುವುದುಂ

ನಂದನಮಿಂತು ಸುಂದರಮೆ ಪೇೞ್ನುತುಂ ಸುರಸೇನೆ ಲೋಚನಾ
ನಂದಮನಾ ಪುರೋಪವನದೊಳ್ಪಡೆಯುತ್ತಿರೆ ಮದ್ವಿಮಾನಮೀ
ಮಂದಿರದಂತು ಕಣ್ಗೊಳಿಸವೆಂದು ನಿರೀಕ್ಷಿಸುತುಂ ಸುರಾಧಿಪರ್
ಬಂದಿರೆ ತದ್ಗೃಹಾಂಗಣದೊಳೀಕ್ಷಣಮಂ ಸೆಱೆಗೆಯ್ದುದಾಕ್ಷಣಂ ೨೭

ವ|| ಅಗಳಮರಪತಿಯ ಬೆಸದಿಂ ಶಚೀಮಹಾದೇವಿ ಕತಿಪಯಪರಿವಾರ ದೇವೀಪರೀತೆಯಾಗಿ

ಪುಗುತಂದಳ್ ಪೆರ್ದುಡುಗೆಯ
ಸೊಗಯಿಪ ಮಾಣಿಕದ ಪೊಳೆಪು ಬಾಳಾತಪಮಂ
ನಗುವಿನೆಗಂ ದಿವಸಶ್ರೀ
ಪುಗುತರ್ಪವೊಲಾ ಪ್ರಸೂತಿಕಾ ಮಂದಿರಮಂ ೨೮

ವ|| ಅಂತು ಪೊಕ್ಕು ತನ್ನಿಕೇತನಮಂ ನಿದ್ರಾಮುದ್ರಿತಂ ಮಾಡಿ

ಆ ಜಿನರಾಜನಂಬಿಕೆಯುಮಂ ಜಿನರಾಜನುಮಂ ಪರೀತದೇ
ವೀಜನಮೇಖಳಾಕ್ವಣಿತದಿಂ ಪರಸುತ್ತಮನರ್ಘಭೂಷಣಂ
ರಾಜಿಸೆ ತನ್ನ ಚಂಪಕತನುಚ್ಛವಿಯಿಂ ಬಲಗೊಂಡಳಂದು ನೀ
ರಾಜನದೀಪಮಾಳಿಕೆಯವೊಲ್ ಶಚಿ ನಿರ್ಭರಮಪ್ಪ ಭಕ್ತಿಯಿಂ ೨೯

ವ|| ಅಂತು ಮೂಱುಸೂೞ್ ಬಲಗೊಂಡು ಮನದೆಱಕದಿನೆಱಗಿ ಕಾಂಚನ ಮಂಚದೊಳ್
ಮಾಯಾಶಿಶುವನಿರಿಸಿ

ಉದಯಾಚಳಮೇಖಳೆ ತಾ
ಳ್ದಿದವೋಲುದಿತೇಂದಿಬಿಂಬಮಂ ಶಿಶುವಂ ತಾ
ಳ್ದಿದಳಿಂದ್ರಾಣಿ ಮನೋರಾ
ಗದ ಪೆರ್ಚಿಂ ಪೆರ್ಚೆ ಪುಳಕಕಳಿಕಾಜಾಳಂ ೩೦

ವ॥ ಅಂತು ನೆಲೆವೆರ್ಚಿದ ರಾಗರಸತರಂಗಿಣಿಯ ತೆರೆಯ ತಾಮುರ್ಟ್ಟಿನುಲಿಪಮೆನಿ
ಪಾಶೀರ್ವಾದಮೊದವೆ ರಾಜಸದನಮಂ ಪೊಜಿಮಟ್ಟು

ಜಂಗಮಲತೆಯೊಲ್ಮೆಯ್ಗಱಿ
ದಿಂಗೊರಲಂ ಮೇಱಿವ ಭೃಂಗಮಾಲೆಯವೊಲ್ ದೇ
ವಾಂಗನೆಯರ್ಪಾಡುವುದುಂ
ಮಂಗಳಮಂ ಮಂದಗಮನದಿಂ ಶಚಿ ಬಂದಳ್ ೩೧

ವ॥ ಅಂತು ಬಂದು

ತೊಲಗುವಿನಮಂಚಳಂ ನೆಲೆ
ಮೊಲೆಯೊತ್ತಿಂ ತೋಳ ಮೊದಲ ನುಣ್ಬೊಗರಿನಿಸುಂ
ತಲೆದೋಱುವಿನಂ ವಳಿಗಳ್
ತಲೆಗರವಿನಮಮರಿ ನೀಡಿದಳ್ ಬಾಲಕನಂ ೩೨

ವ॥ ಆಗಳ್

ದೇವೇಂದ್ರನುಮೊಡನೆ ಶಚೀ
ದೇವಿಗೆ ನೀಡಿದ ಕರಂಗಳಂಗದಮಣಿಭೂ
ಷಾವಳಿಯಿಂ ಪೋಲ್ತುವು ಶೋ
ಭಾವಹಮಂ ಭೂಷಣಾಂಗತರುಶಾಖೆಗಳಂ ೩೩

ವ॥ ಅಂತು ನೀಡುವುದುಂ

ಚಿಂತಿತಫಳದಾಯಕಮಂ
ಚಿಂತಾಮಣಿಯಂ ಕುಳಾಧಿದೇವತೆ ತಂದೀ
ವಂತೆ ಶುಚಿಸ್ವಾಂತೆ ಶಚೀ
ಕಾಂತೆ ಜಿನಾರ್ಭಕನನಿತ್ತಳಿಂದ್ರನ ಕೈಯೊಳ್ ೩೪

ವ॥ ಅಂತಿವುದುಂ

ಪರಮಪ್ರೀತಿಯಿನತಿನಿ
ರ್ಭರಭಕ್ತಿಯಿನಾ ಜಿನಾರ್ಭಕಕ್ರಮಯುಗಮಂ
ಶಿರದೊಳ್ತಾಳ್ದಿ ಶಚೀಪತಿ
ಕಿರೀಟಮಿತ್ತತ್ತು ಪಾದ್ಯಮಂ ನಿಜರುಚಿಯಿಂ ೩೫

ವ॥ ಅಂತು ವಿನಮಿತಮಸ್ತಕನಾಗಿ ಸೌಧರ್ಮೇಂದ್ರಂ ದಿವ್ಯವಸನಾಳಂಕೃತ
ನಿಜೋತ್ಸಂಗದೊಳ್ಕುಳ್ಳಿರಿಸೆ

ಇರೆ ಪರ್ಯಂಕದೊಳರ್ಭಕಂ ತರುಣತಿಗ್ಮಾಂಶುಪ್ರಭಂ ಪ್ರೀತಿಯಿಂ
ಪುರುಹೂತಂ ನಡೆ ನೋಡೆ ಲೋಚನಸಹಸ್ರಚ್ಛಾಯೆ ಸರ್ವಾಂಗದೊ
ಳ್ಪರಭಾಗಂಬಡೆದೊಪ್ಪೆ ದೇಹರುಚಿಯಿಂ ನೀಶ್ರೇಯತಶ್ರೀಸ್ವಯಂ
ವರಹೇಮಾಂಬುಜಮಾಲೆಯಂತೆ ಪಡೆದತ್ತಾನಂದಸಂದೋಹಮಂ ೩೬

ವ|| ಆ ಪ್ರಸ್ತಾವದೊಳ್

ಮದಮಾತಂಗಾಧಿರೂಢಂನಿಜಮಣಿಮಕುಟಚ್ಛಾಯೆಯುಂ ಮುದ್ರಿಕಾರ
ತ್ನದ ನಾನಾವರ್ಣಮುಂ ಮಂಡಳಿಸಿ ಪಡೆಯೆ ಬೇಱೊಂದು ಚಿತ್ರಾತಪತ್ರಾ
ಸ್ಪದಮಂ ಪೂರ್ಣೇಂದು ಬೇಱೊಂದವತರಿಸಿದುದೆಂಬನ್ನೆಗಂ ಪೆರ್ಚಿದುತ್ಸಾ
ಹದಿನೀಶಾನೇಂದ್ರನಾಗಳ್ ಜಿನಶಿಶುಗೆ ಸಿತಚ್ಛತ್ರಮಂ ತಾಳ್ದಿ ನಿಂದಂ ೩೭

ಇಂದ್ರಕುಜದ್ವಯಂಗಳೆಳಗೊಂಬಿನ ಪೂಗುಡಿ ತುಂಗತಾರಶೈ
ಳೇಂದ್ರವಿಶಾಳಶೋಣಮಣಿಚೂಳಿಕೆಯೊಳ್ಪೊಳೆವಂತೆ ರುಂದ್ರನಾ
ಗೇಂದ್ರದ ಮೇಲೆ ಕಣ್ಗೆಸೆವ ತೀರ್ಥಕರಂಗೆ ಸನತ್ಕುಮಾರಮಾ
ಹೇಂದ್ರಕರೋಚ್ಚಳದ್ಧವಳಚಾಮರಮೇಂ ರಮಣೀಯಮಾದುವೋ ೩೮

ಅಮರೀಮಂಗಳಗೀತದೊಳ್ಪುದಿನ ವೀಣಾವೇಣುನಾದಂಗಳಿಂ
ದಮರ್ದಂ ಸಿಂಪಿಸುವಂತೆ ನರ್ತಿಪ ಸುರಸ್ತ್ರೀಸಸ್ಮಿತಾಪಾಂಗದಿಂ
ಕುಮುದಂಗಳ್ ನೆಲೆವರ್ಚುವಂತೆಸೆಯೆ ಸೌಧರ್ಮೇಂದ್ರನಿಂದ್ರಾಚಳೇಂ
ದ್ರಮುಖಂ ನೂಂಕಿದನದ್ಭುತಕ್ಕೆ ಮೊಗವಿತ್ತೈರಾವತೇಭೇಂದ್ರಮಂ ೩೯

ವ|| ಅಂತು ನೂಂಕುವುದುಂ

ಮೊಗಮಿಕ್ಕಲ್ ಪೆಱವಾವುದೊಂದು ಮೊಗದೊಡ್ಡಿಂದೆನ್ನನಾಂಪಗ್ಗದ
ನೆಗಳಿಲ್ಲೆನ್ನಳವಂ ಶಚೀಪತಿಗೆ ತೋರ್ಪೆಂ ಪಾರ್ವೆನಳ್ಕಾಡುವ
ನ್ನೆಗಮೀ ಮೇರು ನಗೇಂದ್ರದೊಳ್ ಭರದಿನೆಂಬಂತಾಗೆ ಘಂಟಾರವಂ
ನೆಗಟ್ಟಿನ್ನಂ ಮಗುಳ್ದತ್ತು ಮಂದರನಗೇಂದ್ರಕ್ಕಿಂದ್ರನೈರಾವತಂ ೪೦

ವ|| ಅಂತು ಪುರಮಂ ಮೊಱಮಟ್ಟು

ಗೋತ್ರನಗಂ ವಿಕಸಿತಶತ
ಪತ್ರವನಂಬೆರಸು ನೆಗೆವವೊಲ್ ನೆಗೆದತ್ತಾ
ಚಿತ್ರಗಜೇಂದ್ರಂ ಚಿತ್ರಿಸೇ
ಸುತ್ರಾಮಸಹಸ್ರಲೋಚನಪ್ರಭೆ ನಭಮಂ ೪೧

ಇವು ರಾಹುಮಂಡಳಂ ಕವಿ
ದುವೆಂದು ಚಂದ್ರಾರ್ಕಮಂಡಳಂ ನಡುಗುವಿನಂ
ದಿವಿಜವಿಮಾನಂಗಳ್ ನೆಗೆ
ದುವು ಗಗನಕ್ಕಿಂದ್ರನೀರತ್ನಮಯಂಗಳ್ ೪೨

ನಳಿನೀಲತೆಯಂ ತಾಳ್ದಿದ
ತಿಳಿಗೊಳದಂತಾಗೆ ದೇವಕಾಂತಾಕಾಂತ
ಪಳಕಿನ ವಿಮಾನಮಂಬರ
ತಳಕ್ಕೆ ಪಾಱಿದುವು ಕೇತುಮತ್ಸ್ಯಶತಂಗಳ್ ೪೩

ಸಂದಣಿಸಿ ನೆಗೆದ ವಿದ್ಯು
ತ್ಸುಂದರಿಯರ ತೆಕ್ಕೆಗೊಂಡ ಸೋರ್ಮುಡಿ ನಭದೊಳ್
ಮಂದೈಸಿ ನೆಗೆದು ಸೋಗೆಗ
ಳಂದಮನೊದವಿಸಿದರೀ ಕ್ಷಣಾನಂದನಮಂ ೪೪

ಮಣಿಘಂಟಾರವದಿಂ ತಿಂ
ತಿಣಿಯೆನೆ ದೆಸೆ ಕೇತುಮಾಳೆಯಿಂ ಗಗನಂ ಸಂ
ದಣಿಯೆನೆ ಮೇಗೊಗೆದುವು ಸುರ
ಗಣಿಕಾ ಸಂತಾನಲಲಿತಯಾನವಿಮಾನಂ ೪೫

ವ|| ಆ ಸಮಯದೊಳ್ ಚಮರವೈರೋಚನಪ್ರಮುಖಭವನಾಮರರುಂ ಸತ್ಪುರುಚಮಹಾಪುರುಷಪ್ರಮುಖವ್ಯಂತರಾಮರರುಂ ಚಂದ್ರಾದಿತ್ಯಪ್ರಮುಖ ಜ್ಯೋತಿರಮರರುಂ ಸೌಧರ್ಮೇಶಾನಸನತ್ಕುಮಾರಮಹೇಂದ್ರಪ್ರಮುಖಕಲ್ಪಾ ಮರರುಂ ನಿಜನಿಜ ಸಪ್ತಾನೀಕನೀಸಮೇತಂ ಗಗನತಳಮನಳಂಕರಿಸುವುದುಮನಂ ತರಂ

ಸುರವನಿತಾವಿಳಾಸಗಮನಂ ಸುರಸುಂದರಮಂದಯಾನಮಂ
ಬರದೊಳುಪಾಶ್ರಯಂಬಡೆಯದೆಂದು ಮನಂದರೆ ಶಕ್ರವಿಕ್ರಿಯಾ
ವಿರಚಿತ ಚಂದ್ರಕಾಂತವಿಪುಳೋಪಳವೀಧಿನಭೋವಿಭಾಗದೊಳ್
ಸುರನದಿ ಬೇಱಿದೊಂದು ಪರಿವಂತೆವೊಲಾಯ್ತು ಸುರಾಚಳಂಬರಂ ೪೬

ಆ ಪಳಿಕಿನ ವೀಧಿಯ ಪೂ
ರ್ವಾಪರದೊಳ್ ಮೂಱು ಮೂಱು ಹರಿನೀಳಶಿಳಾ
ಸೋಪಾನಂ ನಿಮಿರ್ದುವು ದೇ
ವಾಪಗೆಯಂ ಬಳಸಿ ಪರಿವ ಯಮುನಾನದಿವೋಲ್ ೪೭

ವ|| ಅಲ್ಲಿ

ಒಂದೊಡ್ಡೊಂದೊಡ್ಡಾಗಿರೆ
ಬಂದುವು ಸಪ್ತಾಂಗಮವಱ ಮೊದಲೊಡ್ಡುಗಳೊಂ
ದೊಂದೆ ಚತುಷ್ಷಷ್ಟಿಸಹ
ಸ್ರಂ ದುರ್ಧರಮುತ್ತರೋತ್ತರಂ ದ್ವಿಗುಣಮೆನಲ್ ೪೮

ವ|| ಆಗಳ್

ಅವಿರಳಮಾಗಿ ಕಟ್ಟಿಲೆಯ ಪಿಂಡುಗಳೆಂಬಿನಮೊಡ್ಡುಗಟ್ಟಿ ಬಂ
ದುವು ರವಿರಾಜಿಗಳ್ ಬೆದಱೆ ಬೆಂಗುಡೆ ಹೇಮಕಪರ್ದಕಂಪರಂ
ಪವನಜವಂ ವಿಘೂರ್ಣಿಸೆ ವಿಷಾಣಪರಸ್ಪರಘಾತಘೋಷದಿಂ
ಪವನಪಥಂ ಲುಲಾಯಬಲಮದ್ಭುತಕಾಯಬಲಂ ಮಹಾಬಲಂ ೪೯

ಬಿಡುತರೆ ಲೋಳೆ ಪೂಗುಡಿಗಳಂಬರಮಂ ಪುದಿದಂತೆ ಹೇಷಿತ
ಕ್ಕಡೆಕಿಱೆದಾಗೆ ದಿಗ್ವಿತತಿ ಘೋಣಸಮೀರಣಘೂರ್ಣಿತಾನನಂ
ನುಡಿಯಿಸುತುಂ ಮಹಾಜವನಿವಾರಣದುಮ್ಮಳದಿಂ ಖಲೀನಮಂ
ನಡೆದುದು ದೇವವಾಹಿನಿಯ ತುಂಗತರಂಗಮೆನಲ್ ತುರಂಗಮಂ ೫೦

ತೀವಿದ ಕಯ್ದು ತೋಳ್ವಲದ ಮೆಯ್ಸಿರಿಯಂತಿರೆ ಚಕ್ರನೇಮಿಭಾ
ರಾಮನತಂ ನಭಂ ತೆಣರುವಂತಿರೆ ಚೀತ್ಕರಣಂ ಸುರೇಂದ್ರನಾ
ಜ್ಞಾವರದಾವಿಚಿತ್ರಮಣಿಪಂಜರದಂತಿರೆ ಬಂದುದುತ್ಪತಾ
ಕಾವಳಿಚುಂಬಿತಾಂಬುದಪಂಥ ಸುರಸೈನ್ಯಮನೋರಥಂ ರಥಂ ೫೧

ಮಣೆಯೇಱೆಂಗೆಡೆಗೊಟ್ಟು ಕೀರ್ತಿಮುಖಹೇಮಶ್ಯಾಮದಿಂ ಮಿಂಚಿನೊ
ಳ್ಪಿಣೆದಂತಾಗೆ ದಿಶಾಳಿ ದಾನಜಳಧಾರಾನಿರ್ಝರಂ ದಂತದಾ
ರುಣಶೃಂಗಂ ದೃಶಕುಂಭುಕೂಟವಿಕಟಂ ಕರ್ಚಿಟ್ಟು ಮುಚ್ಚಿರ್ದವೋ
ಲೆಣೆಸಲ್ ಬಾರದೆ ಬಂದುದಪ್ರತಿಹತಂ ಮತ್ತೇಭಸೇನಾಶತಂ ೫೨

ಪತ್ತಿಶತಂಗಳ್ ಕದನೋ
ತ್ಪತ್ತಿಯ ಮಾತೆತ್ತಲೆಂಬಿನಂ ಗಜಘಟೆಯಂ
ಪತ್ತಿ ನಡೆತಂದುವೆನೆ ಸಂ
ಪತ್ತಿಗೆ ಕುಳಭವನಮೊಂದೆ ದಲ್ ಜಿನಸವನಂ ೫೩

ರಸಗೀತಕ್ಕಡೆಗೊಟ್ಟು ತಾಳಲಯದೊಳ್ ಸೇರ್ಪಟ್ಟಳಂಕಾರದೊಳ್
ಪಸರಂಬೆತ್ತುಪವಾದ್ಯದೊಳ್ನಿಱಿದು ಸಂಯೋಗಪ್ರಚಾರಂ ವಿರಾ

ಜಿಸೆ ನಾನಾವಿಧವಾದ್ಯಮಂ ಗತಿಗಳಿಂ ಮಾರ್ಗಂಗಳಿಂ ಮೆಚ್ಚಿ ಬಾ
ಜಿಸುತುಂ ಬಂದುದನಾಕುಳಂ ಬಳಸಿಯುಂ ಗಂಧರ್ವಸೇನಾಕುಲಂ ೫೪

ಕುಡುಮಿಂಚಂ ಪಲವಂ ಮಿಗುರ್ವಿಸಿದನಿಂದ್ರಂ ಪುಷ್ಪಬಾಣಂಗಳಿಂ
ಪಡೆದಂ ಪೆಣ್ಬಡೆಯಂ ಮನೋಜನೆನೆ ನೈಪಥ್ಯಂ ಬೆಡಂಗಪ್ಪಿನಂ
ನಡೆಗೊಂಡತ್ತು ನಿಜಾಂಗಹಾರಪದಸಂಚಾರಂ ಚಮತ್ಕಾರಮಂ
ಕುಡೆ ಹಸ್ತಾಭಿನಯಂ ನಯಂಬಡೆಯೆ ನಾನಾನರ್ತಕೀಸೈನಿಕಂ ೫೫

ವ॥ ಅಂತೆಡೆವಜೆಯದಮರವಾಹಿನಿಯಂತಮರವಾಹಿನಿ ಗಗನಮಾರ್ಗಂ ಬಿಡಿದ
ನಡೆವೆಡೆಯೊಳ್

ಪಾಱಿ ಪಣುಕುತ್ತುಮೋರೊಂ
ದಾಱಿಲನೋರೊರ್ಮೆ ಬಿದ್ದಮಿಱಿಯುತ್ತುಂ ನೀ
ರ್ವೀಱಿದ ಮುಗಿಲೊಂದೊಡ್ಡಂ
ಬೀಱಿದುದಿಂದ್ರಂಗೆ ಬಿನದಮಂ ನಾಗೇಂದ್ರಂ ೫೬

ವ॥ ಆ ಸಮಯದೊಳಮರಪತಿ ಮಂದರಮಹೀಧರಮಂ ಭವನಾಮರಪತಿಗಳಪ್ಪ
ಚರಮವೈರೋಚನರ್ಗೆ ತೋಱಿ

ವಿದಳಚ್ಚಂಪಕವರ್ಣಮಾದ ಶಿಖಿಕಂಠಚ್ಛಾಯೆವೆತ್ತಿಂದ್ರಚಾ
ಪದ ರೂಪಂ ತಳೆದಭ್ರಕಭ್ರಮೆಯನಾಳ್ದುತ್ತಾಟಳಪ್ರಾಂಶು ತ
ಟ್ತಿ ದಳತ್ಕಿಂಶುಕಶೋಣಮಪ್ಪ ಸಮದಸ್ವರ್ಣಪ್ರದೇಶಂಗಳಿಂ
ದಿದೆ ಚೆಲ್ವಾದುದು ಮಂದರಾದ್ರಿ ಮದನಂ ವರ್ಣಕ್ರಮಂ ಗೆಯ್ದವೊಲ್ ೫೭

ಷೋಡಶಕಲ್ಪಮೆಂಬ ನೆಲೆಮಾಡಮನಾಂತಿರಲೊಂದೆ ಕಂಬಮಂ
ಮಾಡಿದನಬ್ಜಗರ್ಭನೆನಲುನ್ನತಿಯಿಂ ನಭಮಂ ತಱುಂಬಿ ಚೆ
ಲ್ವೋಡದ ನಾಲ್ಕು ಮೇಖಳೆಯ ನಾಲ್ಕು ಬನಂಗಳ ನಾಲ್ಕು ಮೆಯ್ಯೊಳಂ
ಮಾಡಿದ ನಾಲ್ಕೆ ನಾಲ್ಕೆ ಜಿನಮಂದಿರದಿಂದೆಸೆದತ್ತು ಮಂದರಂ ೫೮

ಕಳಹಂಸೀಕೂಜನಂ ಸಂಚರದಮರವಧೂಮಂಜುಮಂಜೀರಕಾಮಂ
ಜುಳನಾದಂ ಮತ್ತಪುಂಸ್ಕೋಕಿಳಕಳನಿನದಂ ಸಾರಸೋತ್ತಾರಕೋಳಾ
ಹಳಮುನ್ಮತ್ತಾಳಿಕೀರಂಗಳ ಕಳರುತಿಯಂ ಪೋಲ್ವಿನಂ ತನ್ನಿತಂಬ
ಸ್ಥಳದೊಳ್ ತಾಳ್ದಿತ್ತು ಚಿತ್ರಾಂಬರವಿಳಸನಮಂ ಭದ್ರಶಾಳಂ ವಿಶಾಳಂ ೫೯

ವ॥ ಅಲ್ಲಿಂ ಮೇಲೆ

ಅಳಿನೀಸಿಂಜಿತ ಚಕ್ರಚೀತ್ಕರಣವಾಶಾಚಕ್ರಮಂ ತೀವೆ ಕೋ
ಮಳಶಾಖಾಗ್ರಪರೀತಪಲ್ಲವಪಯಾಕಾಳಂಬನಂ ಕೀರಶಾ
ಡ್ವಳವಾಪಂ ಗಗನಾವೃತೋದ್ಗಮರಜಂ ಸಮ್ಮೋಹಬಾಣಾಸನ
ಸ್ಥಳವೀತೋರ್ಪುವೆ ಕಂತುದಿಗ್ವಿಜಯಯಾತ್ರಾಸ್ಯಂವನಂ ನಂದನಂ ೬೦

ಮತ್ತಮಲ್ಲಿಂದತ್ತ

ಸುಮನೋಬಾಣಕ್ರೀಡೆಗೆ
ಸುಮನೋಮಿಥುನಂಗೆಳೆಳಸಿ ರಮಿಯಿಪ ನಾನಾ
ಸುಮನೋಲತಾಗೃಹಂಗಳ
ಸುಮನಶ್ಯಯ್ಯೆಗಳಿನೊಪ್ಪುಗುಂ ಸೌಮನಸಂ ೬೧

ವ|| ತದುಪರಿಮತಳಪ್ರದೇಶದೊಳ್

ಮೇರು ಮೃಣಾಳದಂಡಮೆನೆ ದಿಗ್ವಳಯಂ ದಳಮಾಗೆ ಕರ್ಣಿಕಾ
ಕಾರದಿನೊಪ್ಪೆ ಕಲ್ಪಪಟಳಂ ಸ್ಥಳಪದ್ಮಮಪೂರ್ವಮಾಯ್ತು ತ
ತ್ಸೌರಭಲೋಭದಿಂ ಪುದಿದ ತುಂಬಿಯ ಬಂಬಲೆನಲ್ ಸಮೇರುಮಂ
ದಾರವಿಳಾಸಪಾಂಡುಕವನಂ ಬಳಸಿತ್ತು ಚತುರ್ಥಸಾನುವಂ ೬೨

ವ|| ಅಲ್ಲಿ

ಬಳಸಿ ವಿದಿಕ್ಚತುಷ್ಟಯಮನುತ್ತರಪೂರ್ವದಿಸರ್ಥವೃತ್ತಮಾ
ಪೊಳೆವುವೆ ಪಾಂಡುರಪ್ರಭೆಯ ಪಾಂಡುಕಮುಂ ಕವಿಲಾದ ರತ್ನಕಂ
ಬಳಮುಮಲಕ್ತಕಚ್ಛವಿಯಲಕ್ತಕಮುಂ ಕಿಸುಗಲ್ಲ ರಕ್ತಕಂ
ಬಳಮುಮೆನಿಪ್ಪ ಜೈನಸವನೋತ್ಸವಪೀಠಶಿಲಾಚತುಷ್ಟಯಂ ೬೩

ಬಲವರುತಿರ್ಪ ಭಾನುಗೆ ತಮಃಪಟಳಂ ಸುಗಿದಭ್ರಮೇಖಳಾ
ವಳಯಮನಾಸೆವಟ್ಟು ನೆಲಸಿರ್ದುದೊ ಪೇಟೆನೆ ಮಂದರಾಗ್ರದೊಳ್
ನೆಲಸಿದ ನೀಲಚೂಳಿಕೆ ಜಿನಾಗಮನಕ್ಕಿದೆ ನಮ್ಮ ಮುಂದೆ ಪೂ
ವಲಿಗೆದಱುತ್ತುಮಿರ್ಪುದು ಮೆಯ್ವಳಗಂಬತಸೀಲತಾಂತಮಂ ೬೪

ವ|| ಎಂದು ಬೇಱೆವೇಱೆ ಮೇಖಳಾವನಮುಂ ಮಂದರಮಹೀಧರವಿಳಾಸಮುಂ ಸಹಸ್ರಮುಖದಿಂ ಪೊಗೞ್ವಸುರಸೇನೆಯ ಕಳಕಳಮಂ ಕೇಳುತ್ತುಂ ಗಗನ ವಿಧಿಯಿಂ ತದ್ಗಿರಿದರೀಪ್ರದೇಶಕ್ಕವತರಿಸಿ ದಿವಿಜಪತಿಗಜಪತಿಯನಣೆದು ಬಿಟ್ಟಕ್ಕೆ

ಕುಡೆ ವೈಢೂರ್ಯಮರೀಚಿಜಾಳಜಳದಿಂ ಮುಂ ಪಾದ್ಯಮಂ ಸೇಸೆಯಂ
ಕುಡೆ ಶೃಂಗಂ ನಡೆ ಮೇಘದಿಂ ಸುರಿವ ಮುಕ್ತಾಜಾಳದಿಂದರ್ಘ್ಯಮಂ

ಕುಡೆ ಕಲ್ಪದ್ರುಮಪಲ್ಲವೋಲ್ಲಸಿತಶಾಖಾಹಸ್ತದೊಳ್ತೋರ್ಪ ಪೂ
ಗುಡಿಯಿಂ ಮಂದರಮಂದದೇನಡರ್ದುದೊ ದೇವೇಂದ್ರನೈರಾವತಂ ೬೫

ಅಡರ್ದುದು ಭದ್ರಶಾಳವನಸಾನುವನೆಂಬನಿತರ್ಕೆ ನಂದನ
ಕ್ಕಡರ್ದುದು ಕೀಜೆನಂದನದಿನೊರ್ಮೆಯೆ ಸೌಮನಸಕ್ಕೆ ವಂದುದಾ
ಯೆಡೆಯಣದೆಮದು ಭಾವಿಸದ ಮುನ್ನಮೆ ಪಾಂಡುಕಮೇಖಳಾವನ
ಕ್ಕಡರ್ದಿದೇಂ ಮನಃಪವನವೇಗಿಯೊ ಶಕ್ರನವಿಕ್ರಿಯಾಗಜಂ ೬೬

ವII ಆ ಸಮಯದೊಳ್

ಕುಸುಮರಸಂ ಗಳಂ ಮೊಗೆದು ನೀರ್ದಳಿದುಂ ಕುಸುಮೋಪಹಾರಮಂ
ಪಸರಿಸಿಯುಂ ಮದಾಳಿಕುಳಮಂಗಳಗೀತಪುರಸ್ಸರಂ ನಿಜಾ
ವಸಥಸಮಾಗಮೋಚಿತಮನೇಂ ಮೆಱೆದತ್ತೊ ಸರಃಪಯೋಲವ
ಪ್ರಸರಸಿತಾಕ್ಷತಂ ರದನಿಗಾವನಪಾವನಮಂದಮಾರುತಂ ೬೭

ವII ಅಂತಮರಪತಿ ಸುರಸಮಿತಿವೆರಸು ನಾಲ್ಕನೆಯ ಮೇಖಳೆಗೇಜ್ತೆರ್ಪುದುಮಾ
ಮಹೀಧರದುತ್ತರಪೂರ್ವಭಾಗದೊಳ್

ಅರೆಯೋಜನದುನ್ನತಿ ಶತ
ದರೆಯೋಜನದಗಲಮ ಗಲದಿರ್ಮಡಿ ನೀಳಂ
ದೊರೆಕೊಂಡಿರೆ ಹಿಮಪಾಂಡುರ
ವರೆದಿಂಗಳನಿಟೆಸಿ ಪಾಂಡುಕಂ ಸೊಗಯಿಸುಗುಂ ೬೮

ಅಗೆಯೊತ್ತುಗೊಂಡುದದು ತಾ
ರಗೆಗಳನರೆಮಾಡಿದತ್ತು ಬೆಳ್ದಾವರೆಯಂ
ನಗುವುದು ಗಿರಿಜೇಶನ ಬೆ
ಳ್ನಗೆಯಂ ಪಾಂಡುಕಶಿಲಾತಳಂ ನಿಜರುಚಿಯಿಂ ೬೯

ಪೊಳೆವೆಳೆವಾಜಿಗಳಿಂ ಕ
ಣ್ಗೊಳಿಸುವ ಪಾಲ್ಗಡಲ ಮಡುವಿದೆನೆ ಸುಚಿವಮರೀ
ಚಳನಯಪ್ರತಿಬಿಂಬಾ
ವಳಿಯಿಂಪಾಂಡುಕಶಿಳಾತಳಂ ಸೊಗಯಿಸುಗುಂ ೭೦

ಆಸಜೆಯ ಮಧ್ಯದೊಳ್ ಸಿಂ
ಹಾಸನವಿಂಗಡಲ ನಡುವೆ ತಲೆದೋಱುವ ಭಾ
ಭಾಸುರರತ್ನಾದ್ರಿಯನಪ
ಹಾಸಂ ಮಾಡುವುದನರ್ಘ್ಯರತ್ನಾಂಶುಗಳಿಂ ೭೧

ಭಿಷೇಕವೃಷ್ಟಿಸೂಚಕ
ುಭಯಪ್ರತಿಸೂರ್ಯಬಿಂಬಮೊಗೆದುವು ತಿಗ್ಮ
ಪ್ರಭೆ ಪಾರ್ಶ್ವದೊಳೆಸೆದಿರ್ದುವು
ುಭಾಸನಂ ಸಿಂಹಪೀಠದೆರಡುಂ ಕೆಲದೊಳ್ ೭೨

॥ ಮತ್ತಮಾಶಿಳಾತಳಮೆ ತಳಮಾಗೆ

ೂಢಿಯ ವಿಶ್ವಕರ್ಮನಿದಜಂದಮೆ ಚಂದಮೆನಲ್ಕೆ ಸೂತ್ರಮಂ
ಮಾಡಿದನಾವ ರತ್ನವಿಪುಳೋಪಳಮಲ್ಲಿಗೆ ತಕ್ಕುದಂತೆ ಕೈ
ಗೂಡಿದುದಾಗಳಾಗಳುಳಿಮುಟ್ಟದೆ ತೀರ್ದುದೆನಲ್ಕೆ ಮೊಗ್ಗ ನಾ
ಡಾಡಿಗಳುಂಬಮೆಂದಿರದೆ ಬಣ್ಣಿಸುವಂತಭಿಷೇಕಮಂಡಪಂ ೭೩

ಮುತ್ತಿನ ಸೂಸಕಂ ಮರಕತಂಗಳ ತಿಂಗಣೆ ಪೊನ್ನ ಘಂಟೆ ತ
ಚ್ಚಿತ್ತಿದ ಕೇತುಸಂತತಿ ತೊಡರ್ಚಿದ ಚಿತ್ರವಿತಾನಮೋಳಿಯಿಂ
ಸುತ್ತಿದ ತೋರಣಂಪುದಿದ ಪೂವಲಿ ರನ್ನದ ರಂಗವಲ್ಲಿ ಸಂ
ಪತ್ತಿಯನರ್ಘ್ಯಮೆತ್ತಿ ಕುಡೆ ರಂಜಿಸಿದತ್ತಭಿಷೇಕಮಂಡಪಂ ೭೪

ಶಿಲ್ಪಿಗಳ ಕಲ್ಪಪತಿ ಸಂ
ಕಲ್ಪಂ ರತ್ನೋಪಳಂ ದಳಂಗಳ ಶೋಭಾ
ತಲ್ಪಮಿದೆನ್ನದೆ ಬೇಱೆ ವಿ
ಕಲ್ಪಿಸುವುದೆ ಜೈನಸವನಮಣಿಮಂಡಪಮಂ ೭೫

ನೆಲೆವಡಲಗೆಗಳ ಜಾಗಂ
ಪಲವಾಗಿರೆ ತನ್ನ ನಗೆವ ಪಸುರ್ಗದಿರಿಂದಂ
ಪೊಲಗಿಡಿಸಿದುದವಾರರ
ಣ್ಮಲರಂ ಜಿನಸವನಭಾವನಹರಿತಸ್ತಂಭಂ ೭೬

ಪರಮದಯಾನಿಧಿಯೆನಿಸಿದ
ಪರಮನ ಸನ್ನಿಧಿಯೊಳುಷ್ಣಮಂ ಪರಪೀಡಾ
ಕರಮಂ ತೋಱದ ಬಾಲಾ
ರ್ಕರಶ್ಮಿಯೆನಿಸಿದುವು ರತ್ನದೀಪಪ್ರಭೆಗಳ್ ೭೭

ಪಳಿಕಿನ ಕಂಬಂಗಳ್ ಕ
ಣ್ಗೊಳಿಸುವ ಮಾಣಿಕದ ಸೊದರ್ಗಳಿಂ ನಾ ಮನಂ
ಗೊಳಿಸಿದುವು ಲಸಿತಭಸಿತೋ
ಜ್ಜ್ವಳಗಾತ್ರಂ ಸ್ಥಾಣು ನೊಸಲ ಕಣ್ದೆರೆದವೊಲ್ ೭೮

ಇದು ಕಲ್ಪಲತಾಪಲ್ಲವ
ಮಿದು ಮೇಗೊಗೆದಂಶುಪಟಳಮೆಂಬ ವಿಕಲ್ಪಂ
ಬೆದಱುವಿನಂ ಬೆಲ್ವಂ ಬೀ
ಱಿದುವು ಚತುಷ್ಕೋಣಶೋಣಮಣಿಕಳಶಂಗಳ್

ಅರುಣಮಣಿದೀಪರುಚಿಯಿಂ
ಪರಭಾಗಂಬಡೆದ ನೀಳರತ್ನಸ್ತಂಭಾಂ
ತರದಮರೀ ಪ್ರತಿಬಿಂಬಂ
ಸಿರಿ ನೆಮ್ಮಿದಳೆನಿಸಿದತ್ತು ಪೀತಾಂಬರನಂ ೬

ವ॥ ಅಂತನತಿಶಯಮುಮಷ್ಟಮಂಗಳಪರಿವೇಷ್ಟಿತಮುಮಾದ ಮಣಿಮಂಡಪದ ನಡುವ
ರ್ಚಿಸಿದ ಸಿಂಹಾಸನದೊಳ್ ಪೂರ್ವಾಭಿಮುಖನಾಗಿ ದೇವಾರ್ಭಕನ ನಿರಿಸುವುದುಂ

ಹರಿಪೀಠಮುದಯಗಿರಿಯಂ
ತಿರೆ ಬಾಳಂ ಬಾಳಭಾನುಮಂಡಳಮೆಂಬಂ
ತಿರೆ ಬಾಳಾತಪಮೆಂಬಂ
ತಿರೆ ತನುರುಚಿ ಪುದಿದುದೊಗೆದು ಗಗನಾಂತರಮಂ ೮

ವ॥ ಅಗಳಾಸಿಂಹಾಸನದಿರ್ಕೆಲದೆ ಶುಭಾಸನಂಗಳೊಳ್ ಸೌಧರ್ಮೇಂ
ನುಮೀಶಾನೇಂದ್ರನುಮುತ್ತರದಕ್ಷಿಣಾಭಿಮುಖರಾಗಿ ಕುಳ್ಳಿರ್ದು ಸಕಳಕಲ್ಪಾವ
ಪ್ರಮುಖಸುರಸಮಿತಿಯನುಚಿತಸ್ಥಾನದೊಳಿರಿಸಿ ಭವನವರ್ಬೆರಸು ಜ್ಯೋತಿರಿಂದ್ರ
ಪರಿಚಾರಕಪದವಿಯೊಳ್ ಯೋಜಿಸುವುದುಂ

ಇರೆ ತಂತಮ್ಮ ದಿಶಾಪ್ರದೇಶಮಱಿದಾಶಾಧೀಶರಾತ್ಮಾಂಗನಾ
ಪರಿವಾರಾಯುಧವಾಹನಂಬೆರಸು ಶೇಷಾಶೇಷದೇವರ್ಕಳುಂ
ನೆರೆದಲ್ಲಲ್ಲಿರೆ ತಜ್ಜಿನಾಭಿಷವಧಾರಾವರ್ಷದೊಳ್ ತೋರ್ಪ ತ
ತ್ಸುರಚಾಪಕ್ಕೆಣೆಯಾದುವಾಸುರಕಿರೀಟಾನರ್ಘರತ್ನಾಂಶುಗಳ್ ೮

ವ॥ ಆ ಸಮಯದೊಳಗರುಘೂಮಲತೆ ಗಗನಮಂಡಳಮನಮರಮಂಗಳಾನಕರವಂ ಬೆರಸ
ಪುದಿಯೆ

ಅಮರಾಧಿಪರರ್ಘ್ಯಮನೆ
ತ್ತೆ ಮುತ್ತಿದುವು ನಭಮನಂದು ಸಲಿಲಾಕ್ಷತಮಿ
ಶ್ರಮೆನಿಪ್ಪ ಮೇರುನಂದನ
ನಮೇರುಮಂದಾರಪಾರಿಜಾತಪ್ರಸವಂ ೮೩

ವ॥ ಅಲ್ಲಿಂಬಟೆಯಮುಚ್ಚರಿತಕಳಶೋದ್ಧರಣಮಂತ್ರಮುಖರಾಗಿ

ಅನಿಮಿಷನಾಯಕರಿರ್ವರು
ಮನುರಾಗದಿನೆತ್ತಿ ರತ್ನಸಂಚಯಮಮಂ ಕಾಂ
ಚನಪೂರ್ಣಕಳಶಯುಗಮಂ
ಜಿನಮಹಿಮೋನ್ನತಿಗೆ ಕಳಶಮಿಟ್ಟಂತಿರ್ದರ್ ೮೫

ತಳಿರಿಂ ಕನ್ನಡಿಯಿಂ ಮಂ
ಗಳಸೂತ್ರದಿನಕ್ಷತಂ ಗಳಿಂ ಮಾಲೆಗಳಿಂ
ಮಳಯರುಪಚರ್ಚೆಯಿಂ ಪೊಂ
ಸಗಳಸಂ ರಂಜಿಸಿದುವಮರಪತಿಗಳ ಕೈಯೊಳ್ ೮೫

ವ॥ ಅನಂತರಂ

ಜಯಜಯಘೋಷಣಂಬೆರಸು ಕೈಮುಗಿವಂತಮರರ್ ಸಹಸ್ರಕೋ
ಟಿಯಿನಮರೀಜನಂ ಪರಸುವಂತಮರಾನಕೋಟಿ ತಮ್ಮೊಳೊ
ರ್ಮೆಯೆ ಸಮಹಸ್ತದಿಂ ಮೊಬಗುವಂತೆಜಿ ದರ್ಘನುದುಗ್ಧವಾರಿಧಾ
ರೆಯನಮರಾಧಿಪರ್ ಪ್ರಣವಪೂರ್ವಕಮಂದು ಜಿನೋತ್ತಮಾಂಗದೊಳ್ ೮೬

ಕಳಶೋಧೋಮಂಡಳಮಂ
ಗುಳಿಸ್ತನಂ ಶಕ್ರಧೇನುವಭಿಷವವೃಷವ
ತ್ಸಳಚಿತ್ತಂ ಕಜಿಯೆ ಮನಂ
ಗೊಳಿಸಿದುದಾಕ್ಷೀರಧಾರೆ ಜಿನಮಸ್ತಕದೊಳ್ ೮೭

ವ॥ ಅಗಳೇಕಯೋಜನವಿಸ್ತಾರಮುಮಷ್ಟಯೋಜನಾಯಾಮಮುನಿನಿಸಿದ ಷ್ಟಾಪದಕಳಶಂ-
ಗಳಂ ತಳೆದುಕೊಂಡು

ಎರಡುಂ ದೆಸೆಯೊಳಮಿರ್ದ
ಸುರಪತಿಗಳ್ಗಮೃತಸಲಿಲಮಂ ಸಂದಿಸಲೆಂ
ದೆರಡೋಳಿಯುಮೇಂ ನಿಮಿರ್ದುವೊ
ಸುರರಿಂ ಕೇರ್ಗಟ್ಟಿದಂತೆ ದುಗ್ಧಾಬ್ಧಿವರಂ ೮೮

ವ॥ ಅಂತೆಯ್ದೆ ವರ್ಪುದುಂ

ವೇಲೆಯ ತಮಾಳವನಮಂ
ಕಾಳದ ಕಟ್ಟಿಲೆಯೆಗೆತ್ತು ಮುತ್ತಿದುವಕ್ಕುಂ

ಬಾರ್ಕಬಿಂಬಶತಮೆಂ
ಬಾಳೋಚಮನಿತ್ತು ವರುಣಮಣಿಕಳಶಂಗಳ್ ೮೯

ಶಾರದನೀರದಂ ಮೊಗೆಯಲೀಕವಿತಂದುವೆ ಪಾಲನೆಂಬಿನಂ
ತಾರಘಟಾಳಿಗಳ್ಮೊಗಸಿ ಬಂದುವು ಚಂದ್ರನ ಪೆರ್ಚಿ ಪೆರ್ಚು ದಲ್
ವೈರಿ ದಲೆಂದು ರಾಹುಗಳೆ ಮುತ್ತಿದುವೆಂಬಿನಮಿಂದ್ರನೀಳಭೃಂ
ಗಾರಮಪಾರಮಾವರಿಸಿ ನಿಂದುವು ದುಗ್ಧಪಯೋಧಿತೀರಮಂ ೯೦

ವ॥ ಆ ಸಮಯದೊಳ್

ಭುವನದೊಳೆನ್ನ ಜೀವನಮೆ ಪಾವನಮೆನ್ನನಪೇಕ್ಷೆಗೆಯ್ದನೀ
ಸವನದೊಳಿಂದ್ರನೆಂದು ನೆಲೆವೆರ್ಚಿದ ರಾಗದ ಬಳ್ಳಿವಳ್ಳಿವೋಲ್
ಪವಳದ ಬಳ್ಳಿ ಕಣ್ಗೆಸೆಯೆ ಕೈನಿಜಿದಾಡುವ ಮಾಟ್ಕೆಯಿಂ ಸುಧಾ
ರ್ಣವಮೆಸೆದತ್ತು ರತ್ನವಳಯಾಂಚಿತತುಂಗತರಂಗಭಂಗದಿಂ ೯೧

ವ॥ ಅದಲ್ಲದೆಯುಂ

ಸುರಸೇನೋದ್ಧತಕುಂಭಸಂಭವಭಯಾಕ್ರಾಂತಂ ಸರಿದ್ವಲ್ಲಭಂ
ಪರಿನೀಳಚ್ಛವಿಯಂ ತೊವಲ್ವಿಡಿದು ವೀಚೀಹಸ್ತದೊಳ್ ಘೂರ್ಣಿತಾ
ತುರನಿರ್ಘೋಷಣಮುಣ್ಮೆ ಪುಯ್ಯಲಿಡುವಂತಿರ್ದತ್ತು ನಿರ್ನೀರಗ
ಹ್ವರದೀನಾನನವಿದ್ರುಮಾಧರದಳಾಂತಶ್ಯುಕ್ತಿಕಾದಂತುರಂ ೯೨

ವ॥ ಅಂತೆಯ್ದೆವಂದು

ಎಮ್ಮ ಮಗನಲ್ಪತನು ಪೀ
ರ್ದಮ್ಮುನ್ನಮಗಸ್ತ್ಯನೆಮಗಿದೇಗಹನಮೆನು
ತ್ತುಮ್ಮುತ್ತಿದಂತನೇಕಘ
ಟಮ್ಮೊಗೆದುವು ಜಳಧಿಯಂ ಮಹಾಕಾಯಂಗಳ್ ೯೩

ಪೊಂಗೊಡದ ಕಪಿಳರುಚಿಯಿಂ
ದಿಂಗಡಲನುಕರಿಸೆ ಘೃತಸಮುದ್ರಮನಮರರ್
ಸಂಗಡದಿಂ ಮೊಗೆದೊಡಿದೊ
ರ್ಮಿಂಗಲ್ಲದೆ ನೆಱೆಯದೆಂದು ಬಗೆ ಬೆದಱುವಿನಂ ೯೪

ವ॥ ಅಂತು ಮೊಗೆವಾಗಳ್

ಮುನ್ನಂ ವೇಳಾವನಾಸ್ಫಾಳಮನುಚಿದು ರೇಖಾಶತಪ್ರಾಂತದೊಳ್ತೋ
ರ್ಪನ್ನಂ ಪಿಂಗಿತ್ತು ಮತ್ತಂ ಮಣಿವಸರಮಿದೆಂಬನ್ನೆಗಂ ತಾಯ್ಗಡಲ್ಗಾ

ಜ್ಜನ್ನಂ ಬತ್ತಿತ್ತುಮತ್ತಂ ಮೊಗೆಯೆ ಮೊಗೆಯೆ ದೇವಾಸುರರ್ಪಾಲ ಮುನ್ನೀ
ರ್ಕಿನ್ನೀರ್ಗಂಡತ್ತಿದೇನಮೃತಮೊ ಶತಮಖಂ ಮಾಡ್ದಿ ಜನ್ಮಾಭಿಷೇಕಂ ೯೫

ವ|| ಅನಂತರಂ

ಮೊಗೆದು ಮಗುಟ್ದು ತಾಯ್ಗಡಲ ವೇದಿಕೆಯಿಂದೆರಡೋಳಿಯಾಗೆ ತ
ನ್ನಗದ ಚತುರ್ಥಮೇಖವರಂ ನಿಮಿರ್ದಾರಯ ಮಾಲೆಗೋದವೋಲ್
ಸೊಗಯಿಪ ಪಂಚರತ್ನಘಟಮಾಲೆ ಪಳಂಚಲೆದತ್ತು ಶಕ್ರನಾ
ಜ್ಞೆಗೆ ಸವನೋತ್ಸವಪ್ರಿಯತಮಂ ಪದೆಪಟ್ಟಿದ ರತ್ನಮಾಲೆಯಂ ೯೬

ದಿವಿಜಾಚಳಮಂ ಪೊರ್ದುವ
ನವಗ್ರಹಂಗಳ ವಿಳಾಸಮಂ ಕೀಟ್ಟಿಡಿಸಲ್
ನವರತ್ನಘಟಂಗಳ್ನೆಱೆ
ದುವು ನಯನಾನಂದಮೆನಿಪ ನಾನಾರುಚಿಯಿಂ ೯೭

ವ|| ಅಂತೆಯ್ದೆವಂದು

ದಿವಿಜರ ಪಡೆ ನೀಡುವ ಕುಂ
ಭವೆಲ್ಲಮಂ ತಳೆದು ವಿಕ್ರಿಯಾವಿಭವಸಮು
ದ್ಭವಭುಜಶಾಖಾಶತದಿಂ
ದಿವಿಜೇಂದ್ರಂ ಬರ್ಕೆವಲಸು ಕಾಯ್ತಂತಿರ್ದಂ ೯೮

ಗಂಡಶಿಳಾತಳದೊಳ್ ಘನ
ಮಂಡಳವೆಱಗಿರ್ದ ಗೋತ್ರನಗದಂದದಿನಾ
ಖಂಡಳನಿರ್ದಂ ನಿಜಭುಜ
ದಂಡುಂಗಳೊಳೆಸೆಯ ಪೂರ್ಣಕುಂಭಶತಂಗಳ್ ೯೯

ಎನಿತಾನುಂ ಘಟಕೋಟಿಯಂ ರಜತರತ್ನಸ್ವರ್ಣನಿಷ್ಪನ್ನ ಮಂ
ತನಗೆತ್ತಂ ಸುರಕೋಟಿತಂದು ಕುಡೆ ಕೋಟಾಕೋಟಿಹಸ್ತಂಗಳೊಳ್
ಜಿನಜನ್ಮಾಭಿಷವೋತ್ಸುಕಂ ತಳೆದು ತಾರಾಮಂಡಳಾಕೀರ್ಣಮಾ
ದ ನಭೋಮಂಡಳದಂತೆ ತತ್ಸಮಯದೊಳ್ ಕಣ್ಗೊಂಡನಾಖಂಡಳಂ ೧೦೦

ವ|| ಅಂತು

ಅನೇಕ ಕಳಶಂಗಳಂ ತಳೆದನೇಕಹಸ್ತಂಗಳಿಂ
ದನೇಕಮನೀಭೂಷಣಾಕ್ಷಣರುಚಿಪ್ರಭಾಶೋಭಿವೆ

ತ್ರನೇಕಸುರದುಂದುಭಿಸ್ತನಿತಮುಣ್ಮೆ ಶಕ್ರಾಂಬುದಂ
ಜಿನಾರ್ಭಕನ ಮೇಲದೇಂ ಕಱಿದುದೋ ಪಯೋಧಾರೆಯಂ ೧೦೧

ತ್ರಿದಶರ್ನಿಱಸುವ ಶಾತಕುಂಭಕಳಶವ್ರಾತಂಗಳಂ ಪರ್ವಿ ಕೊ
ರ್ವಿವ ಪೈಕುರ್ವಣಪಸ್ತಮೊಳ್ತಳೆದು ಪುಣ್ಯಕ್ಷೇತ್ರದೊಳ್ ಪುಣ್ಯಸಂ
ಪವಸಸ್ರಂ ಬಳೆವಂತು ಪುಣ್ಯಜಳಮಂ ಶಕ್ರಂ ಘಟೀಯಂತ್ರಚ
ಕ್ರದವೊಲ್ ಪೊಯ್ಯೆ ಜಿನಂಗದೇನೆಸೆದುದೋ ಜನ್ಮಾಭಿಷೇಕೋತ್ಸವಂ ೧೦೨

ವ|| ತತ್ಸಮಯದೊಳ್

ವಿಗಳದ್ಧಾರಾಪ್ರವಾಹಂ ಪ್ರಬಳವಬಳನೇನಾರ್ಪನೇ ತಾಳ್ದಲೇನಂ
ಬಗೆವಂ ದೇವೇಂದ್ರನೆಂಬೀದಿವಿಜರ ಮನದೊಂದುಮ್ಮಳಂ ಪಿಂಗುವನ್ನಂ
ಪುಗೆ ನಾಸಾಗರ್ಭದೊಳ್ ನೀರ್ವನಿ ನಸುದೆಜಿಸಂದರ್ಭಕಂ ಸೀಂಪುದುಂ ಮೇ
ಗೊಗೆವತ್ತಾಕಾಶದೊಳ್‌ಪೂವಲಿಗೆದಜೆದವೊಲ್ ದೇವಸೇನಾವಿಮಾನಂ ೧೦೩

ಕಡಲತ್ತಲ್ನಡೆಯುತ್ತುಮಿರ್ಪ ಕಡಲಿಂದೇಟ್ಟಿರ್ಪ ಹೇಮಾದ್ರಿಯ
ತ್ತಡರ್ವಲ್ಲಿದಿಟಿತರ್ಪ ಪೂರ್ಣಘಟಮಂ ಕೈಕೈಯೊಳಿಂದ್ರಂಗೆ ಮುಂ
ಕುಡುವಿಂದ್ರಂ ಕುಡೆ ಕೊಳ್ವ ರಿಕ್ತಘಟಮಂ ಕೊಂಡೋಳಿಯಿಂ ಮತ್ತೆಯುಂ
ನಡೆವತ್ಯದ್ಭುತಮಪ್ಪ ದೇವಪಡೆ ಸಂಖ್ಯಾತೀತವೇನಾದುದೋ ೧೦೪

ಕಡಲೊಳಮೆಡೆಯೊಳಮಿಂದ್ರನ
ಕಡೆಯೊಳಮೊರ್ಮೊದಲೆ ಕಾಣ್ಬನಂ ತಮ್ಮಂ ತಾಂ
ಕಡುವೇಗದಿಂದಮಮರರ
ಪಡೆ ಪಡೆಮುದು ಮೇರುಗಿರಿಯ ಮೇಳಿಂಗಡಲಂ ೧೦೫

ವ|| ಅಂತೆಡೆಮುಡಗದೆ ಅಮರಸಮಿತಿ ನೀಡುವುದುಂ ನೀಳಕಳಶಂಗಳೊಳ್ ರಾಹುಮಂಡಳದಿಂ ಪೊಱಮಡುವ ಚಂದ್ರಕಳೆಯಂತೆಯುಂ ಸ್ಫಟಿಕಕಳಶಂಗಳೊಳಾಗಸಮೆ ಕರಗಿ ಸುರಿವಂತೆಯುಂ ಶೋಣಮಣಿಕಳಶಂಗಳೊಳ್ ತಳಿರ ತೊಂಗಲಿಂದುಗುವ ಕುಸುಮದೆಸಟಿಂತೆಯುಂ ಚಂದ್ರಕಾಂತಕಳಶಂಗಳೊಳ್ ಚಂದ್ರಚೂಡನಟ್ಟಹಾಸದಂತೆಯುಂ ಹಿರಣ್ಯಕಳಶಂಗಳೊಳ್ ಹಿರಣ್ಯಗರ್ಭ ನಾನಮೊಳಿರ್ಪ ಸರಸ್ವತಿಯ ಕಣ್ಬೊಳಪಿನಂತೆಯುಂ ಮುಕ್ತಾಫಳಕಳಶಂಗಳೊಳ್ ಪರಮಜಿನಪತಿಯ ಚರಮಧ್ಯಾನದಂತೆಯುಂ ಅಮರಪತಿಪೊಯ್ವಪಾರಕ್ಷೀರ ಧಾರಾಪೂರಂ ಮಂದರಮಹೀಧರದಪೊಪಾಂಡು ಕವನಮನೊಳಕೊಂಡುಂಸೌಮನಸವನಮಂ ಸುತ್ತಿಯುಂ ನಂದನವನಮಂ ಮುತ್ತಿಯುಂ ಭದ್ರಶಾಲವನಮಂ ಮುದ್ರಿಸಿಯುಂ ಮುನ್ನೀರೆ ಮೇರೆವಪ್ಪಿದಂತಪ್ಪುದುಂ

ುದಧಿಯ ಕೋಜಮುತ್ತೆನಿಸೆ ತಾರಗೆ ಶೀತಮರೀಚಿ ಶಂಕಮಂ
ದಿನಿರೆ ನೀರ ಮೇಲೆ ನಲಿವಚ್ಚರಿಯರ್ಜಲಮಾನುಷೀಪ್ರಕಾ
ದಿನಿರೆ ಮಂದರಂ ಮಜ಼ುಗಿವಂದ ಸುನಾಕನಗಂಬೊಲೊಪ್ಪ ತೀ
ಮುದು ಜಿನಾಭಿಷೇಕಸಲಿಲಂ ದೆಸೆಯಂ ನಭಮಂ ಧರಿತ್ರಿಯಿಂ ೧೦೬

ವಶಾಧೀಶನಿನಾವ ಜನ್ಮಸವನಾಂಭಃಪೂರದೊಳ್ ನೀರಸೂ
ಮದೋಲಾಡಿದುದರ್ದಿಕೊಂಡುದು ಮರಳ್ದೀಸಿತ್ತು ತೇಂಕಿತ್ತು ಮು
ಗಿದಾಳಂದಿರಿದತ್ತು ತೇಸಮಿಜೆದತ್ತುತ್ತೇಸಮಂ ಲೀಲೆಯಿಂ
ಮು ನೀರಾನೆಯೊ ಪೇಟೆಮೆಂಬಿನೆಗಮಾದೇವೇಂದ್ರನೈರಾವತಂ ೧೦೭

ವರತ್ನಂ ಕರಿ ವಾಜಿ ಕಲ್ಪತರು ದೇವಸ್ತ್ರೀಜನಂ ಲಕ್ಷ್ಮಿಯುಂ
ವಜುತ್ಪತ್ತಿಗೆ ಮುಖ್ಯಮಾದುದಮೃತಕ್ಕಾವಾಸಮಾದತ್ತಸಲ್
ವಿಜೇಂದ್ರಾಚಳದೊಳ್ ಜಿನಾಭಿಷವಣವ್ಯಾಪಾರದೊಳ್ ದೇವದಾ
ವರಿಂದಾದ ಮಹಾಸಮುದ್ರಮಥನಂ ಭದ್ರಂ ಶುಭಂ ಮಂಗಳಂ ೧೦೮

ವ॥ ತದನಂತರಮಮರಸಮಿತಿ ಗಂಗಾತರಂಗಿಣೀಪ್ರಮುಖಕುಳನದಿನಿರ್ಮಳ ಜಳಂಗಳಂ ದಿವ್ಯಸುರಭಿದ್ರವ್ಯಸಂಮಿಶ್ರಿತಂಗಳನಪಾರ ಕನಕಭೃಂಗಾರ ಶತಂಗಳೊಳ್ ತೀವಿ ತಂದು ಸಂಧಿಸುವುದುಂ

ಕನಕಾಂಭೋಜಪರಾಗಪಿಂಜರಿತದಿಂ ಕರ್ಪೂರಕಾಶ್ಮೀರಚಂ
ದನಕಾಳಾಗುರುಯಕ್ಷಕರ್ದಮಸುಗಮಧದ್ರವ್ಯಸಮ್ಮಿಶ್ರದಿಂ
ದನಿಮೇಷಾಧಿಪನುಣ್ಮೆ ಪೊಣ್ಮೆ ವಿತತಾತೋದ್ಯಸ್ವನಂ ಮಾಡಿದಂ
ಜಿನನಾಥಂಗೆ ಪವಿತ್ರತೀರ್ಥಜಳದಿಂ ಗಂಧೋದಕಸ್ನಾನಮಂ ೧೦೯

ಸುರಭಿದ್ರವ್ಯಲತಾಂತಸಂತತಿಗಳೆಲ್ಲಂ ತಮ್ಮೊಳೊಂದಾಗಿ ತ
ತ್ಪರಮೌದಾರಿಕದಿವ್ಯದೇಹಸಹಜಾಮೋದಕ್ಕೆ ಮಾಜಾಂತು ನಿ
ತ್ತರಿಸಲ್ಪೋದಣಮೆಯ್ದದೋಡಿ ಜಳಮಂ ಪೊಕ್ಕಿರ್ದುವೆಂಬೀ ವಿವಾ
ದರಸಾಸ್ವಾದಮನಾರ್ಗಮೇಂ ಪಡೆದುವೋ ಗಂಧೋದಕಸ್ನಾನದೊಳ್ ೧೧೦

ಉದವಾಸವ್ರತಮಂ ಜೇನೇಂದ್ರಸಹಜಾಮೋದಕ್ಕೆ ಸೋಲ್ತೇಪದಿಂ
ತ್ರಿದಶಾವಾಸದೊಳ್ಳುವ ದಿವ್ಯಸುರಭಿದ್ರವ್ಯಂಗಳುಂ ಪಾರಿಜಾ
ತದ ಮಂದಾರದ ಪೂಗಳುಂ ತಳೆದುವೆಂಬಂತಾಗೆ ತಳ್ಗಿಂಕುಗು
ಟ್ಟಿದುವಿಂದ್ರಂ ಜಿನನಾಥನಂ ಮಿಸೆಸೆ ತತ್ಪುಣ್ಯಾಂಬುಪೂರಂಗಳೊಳ್ ೧೧೧

ವಾಸವನಿರ್ಮಿತಮ ಮೃತಾ
ವಾಸಮನೆಮಗೀಗೆ ಸುರಭಿಶುಚಿವಸ್ತುಶತಾ

ವಾಸಿತಮಸಿತಾಬ್ಜ ಪ್ರಸ
ವಾಸಿತಜಿನಸವನಗಂಧಸಲಿಲಮ ಕಲಿಲಂ ೧೧

ಅವನತಮಸ್ತಕನಾಗಿ
ರ್ದದವ ತಪಸ್ತವನತಾಪಮಂ ತೊಲಗಿಸುವೀ
ಸವನೋದ್ಗಮವಾರಿವಿಳಾ
ಸವನೋದ್ಗಮಸುರಭಿಜೈನಮೀಗಭಿಮತಮಂ ೧೧

ವ॥ ಆ ಸಮಯದೊಳ್

ಏಂ ಬಗೆಗೊಂಡುವೊ ರನ್ನದ
ಕಂಬಂಗಳ ಕೆಲದ ಪೊನ್ನ ಪುತ್ತಳಿಗೆಯ ಕೈ
ದುಂಬಿದ ಸಿತಶೇಷಾಕ್ಷತ
ಮೆಂಬಿನೆಗಂ ಸವನಸಲಿಲಕಣಮಂಜರಿಗಳ್ ೧೧

ಅಂಚಿರಮಲ್ಲದೆ ಜಳಕಣ
ಸಂಚತಮಾವರಿಸೆ ತನುವನಮರೇಂದ್ರಂ ಕ
ಣ್ಗೇಂ ಚೆಲ್ವಾದನೊ ಮುತ್ತಿನ
ಕಂಚುಕಮಂ ತೊಟ್ಟು ನರ್ತನಕ್ಕೊಡರಿಪವೊಲ್ ೧೧

ಸಕಳಾಶಾದಂತಿದಾನಾಸವದ ದೆಸೆಗೆ ಮುಂದಾದುವೇ ದಿಗ್ವಧೂಕೇ
ಶಕಳಾಪಾಸಕ್ತಮಂ ಕತ್ತುರಿಯ ಸೊವಡನೇಂ ಸಾರ್ದುವೇ ಕಲ್ಪವಲ್ಲೀ
ಮುಕುಳಾಮೋದಕ್ಕೆ ಮೆಯ್ದಂದುವೆ ಜಿನಸಹಜಾಮೋದಸಂಮಿಶ್ರಗಂಧೋ
ದಕಗಂಧಂ ತಮ್ಮೊಳಾಕರ್ಷಣಪರಿಣತಿಯಂ ಬೇಱೆ ಭೃಂಗೀಸಹಸ್ರಂ ೧೧

ವ॥ ತದನಂತರಂ

ಜಳದಿಂದರ್ಚಿಸಿ ಜಿನಪದ
ಜಳರುಹಮಂ ಕರ್ಚೆ ಪೋಪುದಚ್ಚರಿ ಚೇತೋ
ಮಳಮೆಂದೇಣರ್ಚಿಸಿದನೊ
ಬಳರಿಪು ಕಾಶ್ಮೀರಜಳದಿನಂಗಜರಿಪುವಂ ೧೧

ಜಿನ ನಿನ್ನದಯೆಯ ತಣ್ಪನೊ
ಳೆನಗೀವುದು ನಣ್ಪನೆಂದು ಕಾಲ್ವಿಡಿವುದು ಚಂ
ದನರಸವೆನೆ ದಿವಿಜೇಂದ್ರಂ
ಜಿನೇಂದ್ರಚರಣಾರವಿಂದಮಂ ಪೂಜಿಸಿದಂ ೧೧

ನಿರತಿಶಯಭಕ್ತಿರಸಶೀ
ಕರನಿಕರಮಿದೆನಿಪ ಧವಳಕಳಮಾಕ್ಷತದಿಂ
ಸುರರಾಜಂ ಸಕಳಜಗ
ದ್ಗುರುಚರಣಸರೋಜಯುಗಳಮಂ ಪೂಜಿಸಿದಂ ೧೧೯

ಸ್ಮರನಂ ಕೊಲ್ಲದೆ ಕಾವುದು
ಕರುಣೆವುದಂದರಲ ಸರಲೆ ಕಾಲ್ವಿಡಿದುವೆನಲ್
ಸುರಪತಿ ಜಿನಪತಿಪದಮಂ
ದರವಳಿತಲತಾಂತಮಾಳೆಯಿಂದರ್ಚಿಸಿದಂ ೧೨೦

ತಣಿವಿಲ್ಲದರಂ ಪೂಜಿಸೆ
ತನಿವಕ್ಕುಮೆ ಸಕಳಸುಖದಿನೆಂದಮರಶಿಖಾ
ಮಣಿ ಭುವನತ್ರಯಚಿಂತಾ
ಮಣಿಯಂ ಚಾರುಚರುನಿಚಯದಿಂದರ್ಚಿಸಿದಂ ೧೨೧

ಜನದ ಮನಸ್ತಮಮಂ ಕಳೆ
ವ ನೆರವನೆಮಗೀವುದೆಂದು ಮಣಿದೀಪಂಗಳ್
ಜಿನಪತಿಯಂ ಸೇವಿಸಿದವು
ವೆನೆ ಸುರಪತಿ ರತ್ನದೀಪದಿಂದರ್ಚಿಸಿದಂ ೧೨೨

ಅಗುರುವ ಪೊಗೆಯಿಂದರ್ಚಿಸಿ
ಜಗದಧಿಪತಿಯಂ ಸುರಾಧಿಪತಿ ಬೇಱೊಂದಂ
ಜಗುನೆಯ ಮಡುವಂ ಪಡೆದಂ
ಗಗನತರಂಗಿಣಿಗೆನಲ್ಕವಲ್ತುದು ನಭದೊಳ್ ೧೨೩

ಸುರಪತಿ ಪೂಜಿಸುವಂ ಗಡ
ಪರಮಂ ಪೂಜ್ಯಂ ಗಡರ್ಚನಾನೀಕಂಗಳ್
ಸುರತರುಫಳಂ ಗಡವಱಿಂ
ದೊರೆಕೊಳ್ವುದು ಮುಕ್ತಿ ಗಡಮದಂ ಪೊಗೞದರಾರ್ ೧೨೪

ವ॥ ಅಂತನೇಕಾರ್ಚನೆಗಳಿಮದರ್ಚಿಸಿ ಕಿಂಚಿನ್ನಮಿತಂ ನಿಟಿಳಕ್ಕೆ ಮುಕುಳಿತಕರ ಪುಟಮನುಯ್ದು

ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನಪದಪ್ರತಿಕೂಳವೃತ್ತಿ ಮಂ
ಕ್ತಿಗೆ ನಿಜತತ್ವಭಾವನೆಯೆ ಕಾರಣವೆಂದೊಡೆ ನೀನೆ ದೇಪಯಾ
ತ್ರೆಗೆ ಸುಖದುಃಖಯೋಜನೆಗೆ ದೇಹಿಗೆ ಮುಖ್ಯನೆ ನಿನ್ನನಂತಱಂ
ಜಗಮನಶೇಷಮಂ ಪಡವೆನೆಂಬುದು ಯುಕ್ತಿ ವಲಂ ಜಿನೇಶ್ವರಾ ೧೨೫

ಕೊಲೆಯ ವಿಕಲ್ಪಕೋಟಿಗಳೆ ದುಷ್ಕೃತಮೆಲ್ಲಮಬಾಧೆಯೊಂದೆ ಬಂ
ಬಲೆ ಸುಕೃತಂಗಳೆಲ್ಲಮವನಿರ್ಬಗಿಯಾಗಿರೆ ಮಾಡಿ ಮಾನವರ್
ಪೊಲಗಿಡದಂತು ದುಃಖಸುಖಹೇತುಗಳಂನಿಜದಿವ್ಯಭಾಷೆಯಿಂ
ಜಳಕನೆ ಮಾಡಿದೈ ಸಕಳದೇಹಿಗೆ ನೀನೆ ಶರಣ್ ಜಿನೇಶ್ವರಾ ೧೨೬

ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಹಿ ನಿನ್ನನ
ಣ್ಮುದು ಕಲುಷಾನಳಂ ನಿಜದಯಾರಸದಿಂ ಮಸಿಯಾಯ್ತು ಪಾಪಮಿ
ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳಮಾಯ್ತೆನೆ ಪೆಣ್ಣ ಮಣ್ಣ ಮೋ
ಹದ ಪರಮಾತ್ಮರತ್ತಿರಲಿ ನೀನೆ ಜಗತ್ಸ್ತುತನೈ ಜಿನೇಶ್ವರಾ ೧೨೭

ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವ ಸೌಖ್ಯಮಂ
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳ್ ಭೇದಮಾದ ಕೊಂ
ಡಾಟದನಂತಸೌಖ್ಯಮನೆ ಮಚ್ಚಿದಮರ್ಚುಗೆಯೊಳ್ಪೊಡರ್ಚು ಮಾ
ಱಾಟದೆ ನಿನ್ನ ದರ್ಶನಸುದ್ಧಿಯ ಮೂಲ್ಯಮೆನಲ್ ಜಿನೇಶ್ವರಾ ೧೨೮

ವ॥ ಎಂದು ಸೌಧರ್ಮೇಂದ್ರಂ ವಸ್ತುಸ್ತವಗುಣಸ್ತವಂ ಮಾಡಿ

ದಿವಿಜರ್ನೀಡುವ ಮಂಗಳೋಪಕರಣದ್ರವ್ಯಕ್ಕೆ ದೇವಾಂಗವ
ಸ್ತ್ರವಿತಾನಕ್ಕೆ ಸಮೇರುಪುಷ್ಪಫಳಮಾಣಿಕ್ಯಪ್ರದೀಪಕ್ಕಣಂ
ವವಣೆಲ್ಲೆಂಬಿನೆಗಂ ಮಹಾಮಹಿಮೆಯಿಂ ಜನ್ಮಾಭಿಷೇಕಾರ್ಚನಾ
ಸ್ತವಮಂ ತೀರ್ಚಿದನಪ್ರಮತ್ತಚರಿತಂ ಸಾಹಿತ್ಯವಿದ್ಯಾಧರಂ ೧೨೯

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಜನ್ಮಾಭಿಷೇಕವರ್ಣನಂ ದ್ವಾದಶಾಶ್ವಾಸಂ ಸಮಾಪ್ತಂ



# ತ್ರಯೋದಶಾಶ್ವಾಸಂ

ಶ್ರೀಮಜ್ಜಿನಪತಿಯಂ ಸಕ
ಳಾಮರಪತಿ ಪರಮಭಕ್ತಿಯಿಂ ಸ್ತುತಿಯಿಸಿದಂ
ಪ್ರೇಮೋತ್ಕಟರಸಪಿಶುನಂ
ರೋಮಾಂಚಂ ಪುದಿಯೆ ತನುವನಭಿನವಪಂಪಂ ೧

ವ॥ ಅನಂತರಂ ನೀರಾಜನದೀಪಕಳಿಕಾಪ್ರತಿಫಳಿಕಳಧೌತಕಾಂತಿಪ್ರವಾಹಕ ಮನೀಯದೇಹನಂ ಮೋಹರಸತರಂಗಿಣಿಯ ತೆರೆಗಳೆನಿಪ ತೋಳ್ಗಳಿಂದೆತ್ತಿ ಕೊಂಡತಿನಿಬಿಡಾಲಿಂಗನಂಗೆಯ್ದು ನಿಜಪರ್ಯಂಕತಳದೊಳ್ಕುಳ್ಳಿರಿಸಿ

ದಿವಿಜೇಂದ್ರವನಿತೆ ದೇವಾಂ
ಗವಸ್ತ್ರದಿಂ ತೊಡೆದಳಾಜಿನಾರ್ಭಕದೇಹ
ಪ್ರವಿಲಿಪ್ತಸ್ನಪನಪಯೋ
ಲವಮಂ ನೀರಂಜಿಪಂತೆ ರತ್ನಮನಾಗಳ್ ೨

ಜಳದಿಂದರ್ಣವಮಂ ಸೊಡ
ರ್ವೆಳಗಿಂ ದಿನಮಣಿಯನರ್ಚಿಪಂತರ್ಚಿಸಿದಳ್
ಮಳಯಜರಸದಿಂ ಶಚಿ ಮಂ
ಗಳಾರ್ಘಮತಿಸಹಜಸುರಭಿಯಂ ಜಿನತನುವಂ ೩

ಲಲಿತಾಂಗುಳಿಯಿಂ ಶಚಿ ಕ
ಜ್ಜಳಮಂ ಕಣ್ಣೆವುವನ್ನೆವರವೆಚ್ಚುವುದುಂ
ಬಿಳಿಯಲರ್ಗಣ್ಗಳ್ ನೀಳೋ
ತ್ಪಳೋಪಮಾನಂಗಳಾದುವಾ ಬಾಲಕನಾ ೪

ಪೊಂದಾವರೆವೂವಿನ ಮಕ
ರಂದಮನನುಕರಿಸೆ ರೋಚನಾತಿಳಕಮನೇ

ನಂದಿಟ್ಟಳೊ ಸುರವಧು ಬೆ
ಳ್ದಿಂದಿಟ್ಟಳಮೆನೆ ಜಿನಾರ್ಭಕನ ನಗೆಮೊಗದೊಳ್

ಅವತಂಸೋತ್ತಂಸಕಂಠಾಭರಣಕಟಕಮುದ್ರಾಮಣಿಕ್ಷುದ್ರಘಂಟಾ
ನಿವಹಂಗಳ್ ನೂಪುರಂಗಳ್ ಚರಣವಳಯವೆಂಬೀ ವಿಭೂಷಾಳಿ ಸುತ್ರಾ
ಮವಧೂಟೀಸೂತ್ರಿತಂ ಕಣ್ಗೊಳಿಸೆ ಕೊನರ್ಗಳಿಂ ಕೋರಕಶ್ರೇಣಿಯಿಂ ಪ
ಲ್ಲವದಿಂ ಚೆಲ್ವಾದ ಕಲ್ಪದ್ರುಮದಗೆಯವೊಲಾ ಬಾಲಕಂ ಲೀಲೆವೆತ್ತಂ

ಕುಡುವುದು ಭೂಷಣಾಂಗತರು ಕೊಟ್ಟುವಸೋಲಗಿಪಂ ಸುರಾಧಿಪಂ
ತೊಡವುಗಳಿನ್ನವಿಲ್ಲೆನಿಪ ರನ್ನದಿನಾದುವು ಬಾಲಕಂಗವಂ
ತುಡಿಸುವಳಪ್ಸರೋಗಣಶಿರೋಮಣಿಯೆಂದೊಡದರ್ಕೆ ವಿಸ್ಮಯಂ
ಬಡೆಯದರಾರೊ ಬಣ್ಣಿಸದರಾರೊ ಜಿನಾರ್ಭಕಪುಣ್ಯಶಕ್ತಿಯಿಂ ೭

ವ॥ ಅಂತು ಕಯ್ಗೆಯ್ದು ನಿಜಕರಕಿಸಲಯಕ್ಕೆ ನೀಡುವುದುಂ

ಚರಮತನು ಸಹಜದಿಂ ಸುಂ
ದರಮದನಿಂದ್ರಾಣಿ ಬಾಳವಂದಮನಳವ
ಟ್ಟಿರೆ ತುಡಿಸೆ ನೋಡಿದಂ ಸಾ
ಸಿರಕಣ್ಗಳುಮೆಯ್ದೆ ತಣಿವಿನಂ ದಿವಿಜೇಂದ್ರಂ ೮

ಎಮೆಯಿಕ್ಕುವರುಂ ನೋಡಿದೊ
ಡೆಮೆಯಿಕ್ಕಲ್ಮಱೆವರೆನಿಪ ಜಿನರೂಪಮನಂ
ದಮರಾಂಗನೆಯರ್ನೋಡಿದ
ರೆಮೆಯಿಕ್ಕದುದಿವರ್ಗೆ ಸಫಳಮಾಯ್ತೆಂಬಿನೆಗಂ ೯

ವ॥ ಆಗಳಖಿಳಸುರಸೇನಾವಿಳೋಚನಮದಾಳಿಮಾಳೆ ಬಾಲಕನ ಕರ್ಣಿಕಾರ
ಕುಸುಮಸುಕುಮಾರತನುವಂ ಸುತ್ತಿ ಮುತ್ತಿ ಸಂತೋಷದಂತನೆಯ್ದೆ

ಮೊಲೆಯೊತ್ತಿಂ ಶಚಿ ಮೆಯ್ಗೆ ಮಾಡೆ ಪುಳಕಪ್ರೋದ್ಭೇದಮಂ ಸೋಂಕಿಲೊಳ್
ನೆಲಸಿರ್ದರ್ಭಕನುಂಟುಮಾಡೆ ನಯನಕ್ಕಾನಂದಮಂ ಪೊಣ್ಮೆ ಮಂ
ಗಳಭೇರೀರವಮೇಱೆ ಗಂಧಗಜಮಂ ಸೇನಾಶತಂ ತನ್ನೆರ
ಟ್ಟೆಲದೊಳ್ ಘೂರ್ಣಿಸೆ ಮೇರುವಿಂ ಮಿಥಿಳೆಗೆಯ್ತಂದಂ ಸುರಾಧೀಶ್ವರಂ ೧೦

ಆಗಳಮರೇಂದ್ರಸೈನ್ಯಂ
ಪೋಗಲೊಡಂ ಪೋಗೆ ಕಳಕಳಂ ಮಧುಸಮಯಂ

ಪೋಗೆ ಕಳನಿನದಮುಡುಗಿದ
ಕೋಗಿಲೆಯೆಂತಂತೆ ಬಿನ್ನನಿರ್ದುನಗೇಂದ್ರಂ ೧೧

ಪಲತೆಱದ ಪಱೆಯ ದನಿಗಳು
ಮುಲಿವಮರರುಮೊಡನೆ ತೂಳಗೆ ಕನಕಾಚಳಮೇಂ
ಗೆಲೆವಂದುದೊ ಬಾಜಿಸುತುಂ
ನಿಲಿಸಿದ ಮಣಿಖಚಿತಕನಕಘಂಟಾಕೃತಿಯಂ ೧೨

ದೆಸೆ ಭೂಷಾರುಚಿಯಿಂ ಕವಿಲ್ಮಸಗುವನ್ನಂ ಭೂತಳಂ ಕೋಟಿಗೆ
ರ್ಮಸಪನ್ನಂ ನಿಜದಂತಿದಾನಜಳದಿಂ ವಜ್ರಾಂಶುವಿಂ ಬಲ್ವಿಸಿ
ಲ್ಮಸಪನ್ನಂ ನಭಮಪ್ಸರೋಗಣದಲಾವಣ್ಯಪ್ಲವಂ ಕಾಬ್ಬಿರಂ
ಮಸಪನ್ನಂ ನೃಪಗೇಹಮೊಳ್ಪರಿತಮುಖಂ ಬಂದಂ ಮಹೋತ್ಸಾಹದಿಂ ೧೩

ವ॥ ಅಂತು ದಿವಿಜಸಮಾಜಂಬೆರಸು ರಾಜಮಮದಿರಮಂ ಪೊಕ್ಕು ತನ್ನ ಬೆಸದಿಂ ಮುನ್ನವೆ ದಿವಿಜಶಿಲ್ಪಿಗಳ್ವಿರಚಿಸಿದ ಕರುಮಾಡದ ಮುಂದಣ ನಾಟ್ಯಮಂಡಪದ ಮಣಿಕುಟ್ಟಿಮದ ನಡುವಣ ಸಿಂಹಪೀಠದೊಳ್ ಬಾಲಕನನಿರಿಸಿ

ಅನುರಾಗಂ ಮಿಗೆ ದಿವಿಜೇಂ
ದ್ರನಿರ್ಪುದುಂ ಕುಂಭನೃಪತಿಯುಂ ಸತಿಯುಂ ತ
ತ್ತನಯಮುಖದರ್ಶನೋತ್ಸುಕ
ಮನರಾಮಂಡಪಮನಟ್ಟಿಜೆಂ ಪುಗುತಂದರ್ ೧೪

ವ॥ ಅಂತು ಬಂದು ಸಿಂಹಾಸನದ ಕೆಲದ ಮಣಿಮಯಾಸನದೊಳ್ ಕುಳ್ಳಿರ್ದು

ತನಯ ಮುಖಾಳೋಕನದಿಂ
ಮನದಿಂ ನೆಲೆವೆರ್ಚೆ ತಮಗತಿಪ್ರೇಮರಸಂ
ನೆನೆಯಿಸಿದತ್ತಾ ಮಿಥುನಂ
ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ ೧೫

ವ॥ ಅಂತು ಸಂತೋಷದಂತನೆಯ್ದಿರ್ಪುದುಂ

ತ್ರಿಜಗನ್ನಾಥಂಗೆ ತಾಯ್ತಂದೆಗಳೆನಿಸಿದ ಸೈಪಿಂಗಡರ್ಪಾದರೆಂದಂ
ದೆ ಜಗತ್ಕಾರಾಧ್ಯರುಂ ಪೂಜ್ಯರುಮಿವರೆನುತಂ ಕಲ್ಪಜಾಲೇಪದಿಂ ಕ
ಲ್ಪಜದಾಮಸ್ತೋಮದಿಂ ಕಲ್ಪಜಮಣಿಮಯಭೂಷಾಕದಂಬಂಗಳಿಂ ಕ
ಲ್ಪಜವಸ್ತ್ರಾನೀಕದಿಂದರ್ಚಿಸಿದನೊಸೆದು ಸೌಧರ್ಮಕಲ್ಪಾಮರೇಂದ್ರಂ ೧೬

ವ|| ತದನಂತರಂ

ಇನ್ನುಂ ರನ್ನದ ಪೊನ್ನ ಸೋನೆ ಸುರಿಯುತ್ತಿರ್ದಪ್ಪುದಿಂಗಳ್ ಸುರೇಂ
ದ್ರನ್ನಾನಾಮರಸೈನಿಕಂಬೆರಸು ಮುಂದಾರಾಧಿಸುತ್ತಿರ್ದಪಂ
ಮುನ್ನಾರ್ಪುತ್ರನನಿನ್ನಸಂ ಪಡೆದರೀಸ್ಸೈಪಾರ್ಗೆ ಕೈಸಾರ್ಗುಮೆಂ
ದುನ್ನೂನಂ ಪೊಗಟ್ದಿತ್ತು ಪೌರಜನಮೆಲ್ಲಂ ತತ್ಪಿತೃದ್ವಂದ್ವಮಂ ೧೭

ಪಲವುಂ ಕಣ್ಬೆತ್ತನಿಂದ್ರಂ ಕೆಲದೊಳೆಳಸಿ ಕುಳ್ಳಿರ್ದಳಿಂದ್ರಾಣಿಸುತ್ತುಂ
ನೆಲಸಿರ್ದರ್ಲೋಕಪಾಲರ್ಶಿಶುವಿನ ಪೆಜಿಗಿರ್ದರ್ಸಮಸ್ತಾಮರೇಂದ್ರರ್
ಕೆಲರಿಂದ್ರರ್ಜಾಮರಂ ಬೆಳ್ಗೊಡೆವಿಡಿದವರೆಂದಂದು ಮಾತಾಡುತುಂ ಕ
ಣ್ಮಲರ್ಗಳ್ಬೆಳ್ದಿಂಗಳಂ ಬಿತ್ತರಿಸೆ ಬಳಸಿ ನೋಡಿತ್ತು ಕಾಂತಾಕದಂಬಂ ೧೮

ವ|| ಆಗಳನೇಕಮಂಗಳವಸ್ತುವಿಸ್ತೀರ್ಣಮಾಗೆ ವಿರಚಿತಜಾತಕರ್ಮೋತ್ಸವಾ ನಂತರಂ

ಅನಿಮಿಷನಾಯಕನಾನಂ
ದನರ್ತನೋತ್ಸವಚಿತ್ತನೀಕ್ಷಿಸಿದಂ ಗಾ
ಯಿನಿಯರ ಮುಖಾಬ್ಜಮಂ ಭೃಂ
ಗನಿಕಾಯಂ ಪುದಿದುವೆನಿಸೆ ನಯನಪ್ರಭೆಗಳ್ ೧೯

ವ|| ಆಗಳವಸರಮಜಿದು ತಾಳನಿವರ್ತನೆಗೆಯ್ದು ಬಂಚದಿಂಚರದೊಳುಪಾಶ್ರಯಂಬಡೆದು
ವಿಂಶತಿಯತಿಪ್ರಚಂಚದೊಳ್ನೆಜಿದು

ಸ್ವರಸಂಯೋಗದೊಳಾದ ರಾಗಮನಿತುಂ ದೇಶೀಯರಾಗಂಗಳುಂ
ಸ್ವರಭಾಷಾವಿದರಿಂದಮಾದ ಪೆಜಿವುಂ ರಾಗಂಗಳುಂ ವ್ಯಕ್ತಮಾ
ಗಿರೆ ತಜ್ಜ್ಞರ್ತಲೆದೂಗೆ ಬೇಜಿ ಪುಳಕಂ ಮೆಯ್ದೋಜೆ ಮೆಯ್ವೆರ್ಚೆ ರಾ
ಗರಸಂ ಕಾಟ್ಪುರಮಾಗೆ ಪಾಡಿದುದು ತದ್ಗಂಧರ್ವದೇವೀಜನಂ ೨೦

ಕಾಮನಬಿಲ್ಲ ಜೇವೊಡೆಯ ಮೆಲ್ಲುಲಿ ಕರ್ಣರಸಾಯನಾರ್ಣವೋ
ಡ್ಡಾಮರರಂಗಭಂಗದುಲಿ ಪೊಣ್ಮಿದುದೆಂಬಿನಮೋಜೆವೆತ್ತು ಗೀ
ತಾಮೃತವೃಷ್ಟಿಯಂ ಕಜೆವಿನಂ ಬಹುಭೇದದ ವಸ್ತುಗೀತಿ ಕ
ಲ್ಪಾಮರಕನ್ಯೆಯರ್ಬಿಡದೆ ತಾಳಲಯಾನುಗಮಾಗೆ ಪಾಡಿದರ್ ೨೧

ವ|| ಆ ಸಮಯದೊಳುಪವಾದ ಪರಿವಾದಕರಂ ಕೂಡಿಕೊಂಡು

ಗತಿಭೇದಂ ಲಯಭೇದನೊಪ್ಪೆ ವಿವಿಧಾಳಂಕಾರಸಂಯೋಗಪ
ದ್ಧತಿ ಚೆಲ್ವಂ ಕುಡೆ ಚಾರಿಗಳ್ ಬಗೆವುಗಲ್ ಮಾರ್ಗಪ್ರಚಾರಂ ಸಭಾ

ಶ್ರುತಿಸೌಖ್ಯಾವಹಮಾಗೆ ತಾಮೆ ಮನದಿಂ ಮುಂ ಕೈಗಳಾರ್ಗಂ ಸಮ
ತ್ವಕೃತಿಯಪ್ಪಂತಿರೆ ಬಾಜಿಸಲ್ತೊಡಗಿದರ್ವಾದ್ಯಂಗಳಂ ವಾದಕರ್ ೨೨

ವ|| ಆ ಪ್ರಸ್ತಾವದೊಳ್

ನೈಪಥ್ಯಂ ಪೊಸದೇಸೆವೆತ್ತೆಸೆಯ ತನ್ನೊಳ್ಪೂರ್ವರಂಗಪ್ರಸಂ
ಗೋಪೇತಂಗಳೆನಿಪ್ಪ ಮಂಗಳಪದಾಖ್ಯಾನಂಗಳಂ ಮಾಡಿ ನಾಂ
ದೀಪೂಜಾವಿಧಿಪೂರ್ವಕಂ ದಿವಿಜರಾಜಂ ಸೂಸಿದಂ ಕಲ್ಪವ
ಲ್ಲೀ ಪುಷ್ಪಾಜಲಿಯಿಂ ಸಭಾಸದರ್ಗೆ ತೋಱಲ್ ತಾಂಡವಪ್ರೌಢಿಯ ೨೩

ಎಸೆದಿರೆ ವೈಶಾಖಸ್ಥಾ
ನಸೌಷ್ಠವಂ ಪಾಣಿಪಲ್ಲವದ್ವಿತಯಂ ರಂ
ಜಿಸೆ ಕಟಿತಟದೊಳ್ ಸುರಪತಿ
ರಸಭಾವಾಭಿನಯಮೊಪ್ಪೆ ರಂಗಂಬೊಕ್ಕಂ ೨೪

ವ|| ಅಂತು ರಂಗಮಂ ಪೊಕ್ಕು

ಭಾವಾನುಭಾವವಿಭಾವಂಗಳ್ ರಸಮನು
ದ್ಭಾವಿಸೆ ನಿಂದ ನಿಱಸು ವಿಚಿತ್ರಶೋ
ಭಾವಹಮಾಗೆ ದಿವಿಜೇಂದ್ರಂ* ೨೫

ವ|| ಅಂತು ನಿಂದು ವೈಕುರ್ವಣಾವಿರ್ಭೂತಮೆನಿಸಿ

ತುಱುಗಿದ ತೋಳ್ಗಳೊಳಂ ಕ
ಣ್ದುಱುಗಲೊಳಂ ನೆಱೆದು ಮೆಱೆದು ರಸಭಾವಮನಂ
ದಱುವತ್ತು ನಾಲ್ಕು ಹಸ್ತದ
ತೆಱನುಮನೊರ್ಮೊದಲೆ ತೋಱೆದಂ ದಿವಿಜೇಂದ್ರಂ ೨೬

ವ|| ಅನಂತರಂ

ಅಳವಡೆ ನಿಜೋದ್ಯತಾಭಿನ
ಯಲೀಲೆ ರಸವೃತ್ತಿ ತನ್ನೊಳಾರಭಟ ಮನಂ
ಗೊಳೆ ರಂಗಮನಮರೇಂದ್ರಂ
ಬಳಸಿದನೊಡವಳಸೆ ಜನದ ಕಣ್ಣುಂ ಮನಮುಂ ೨೭

---

* ೨೫ನೆಯ ಪದ್ಯದಲ್ಲಿರಬೇಕಾದ ಇನ್ನೊಂದು ಸಾಲು ಮೂಲದಲ್ಲೇ ಇಲ್ಲ.

ಭರತಾಗಮಕ್ಕೆ ಟೀಕಂ
ಬರೆದಂತಿರೆ ತಾಂಡವಕ್ಕೆ ಲಕ್ಷ್ಯಮಿದೆಂಬಂ
ತಿರೆ ದೇವಮನುಜಸಭೆಗ
ಚ್ಚರಿ ಬೆಚ್ಚಿರೆ ದಿವಿಜನಾಯಕಂ ನರ್ತಿಸಿದಂ ೨೮

ಧರೆ ಕಂಪಂಗೊಂಡುದಯ್ದು ತೆಱದ ಚರಣಸಂಚಾರದಿಂದೆಂಟುಮಾಶಾ
ಕರಿಗಳ್ ಬಾಯ್ವಿಟ್ಟುವೀರಯ್ದೆನಿಸಿದ ಭುಜವಿಕ್ಷೇಪದಿಂ ದಿಗ್ವಿಭಾಗಂ
ಪರಭಾಗಂಬೆತ್ತುವೊಂಭತ್ತೆನಿಪ ನಯನಸಭೇದಗಳಿಂದೆಂಬಿನಂ ನಿ
ರ್ಭರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವಪ್ರೌಢಿವೆತ್ತಂ ೨೯

ರಾಗರಸಂ ಪೊನಲ್ವೊನಲನಟ್ಟುವಿನಂ ಚರಣಾಂಗಹಾರಮಿಂ
ಬಾಗಿರೆ ದೃಷ್ಟಿಭೇದಮಳವಟ್ಟಿರೆ ಚಾರಿಗಳೊಪ್ಪೆ ತನ್ನೊಳಂ
ದಾಗಸದೊಳ್ ದಿಶಾವಳದೊಳ್ ಧರೆಯೊಳ್ತನಂತೊಂದೆ ರೂಪು ನೂ
ಱಾಗಿರೆ ವಿಕ್ರಿಯಾವಿಭವಮಚ್ಚರಿಯಾಗಿರೆ ಶಕ್ರನಾಡಿದಂ ೩೦

ಲತೆಗಳ್ದಾಂಗುಡಿವಿಟ್ಟು ತಟ್ಟಿಡರ್ದ ರಕ್ತಾಶೋಕಮಂ ವಿದ್ಯುದಾ
ವೃತಸಂಧ್ಯಾಂಬುದಮಂ ಮಣಿದ್ಯುತಿಲತಾಸಂಛನ್ನಮಾಣಿಕ್ಯಪ
ರ್ವತಮಂ ಪೋಲ್ತನನಂತದೇವಗಣಿಕಾಸಂತಾನಮುದ್ಬಾಹು ಸಂ
ತತಿಯೊಳ್ ಲಾಸ್ಯಮನಪ್ಪುಕೆಯ್ಯೆ ಪುರುಹೂತಂ ತಾಂಡವಕ್ರೀಡೆಯೊಳ್ ೩೧

ಎತ್ತಿದ ತೋಳೊಳುಚ್ಚಳಿಸಿ ಸೂಸದೆ ಬೀಸಿದ ಬಾಹುದಂಡದೊಳ್
ಕಿತ್ತಡವಾಗದಂಗವಳನಂಗಳೊಳಲ್ಲುಗದೋಜೆವೆತ್ತು ದೇ
ವೋತ್ತಮವೇಗನರ್ತನಲಯಾನುಗವಾಗಿರೆ ವಜ್ರಲೇಪಮಂ
ಪತ್ತಿಸಿದಂತದೇಂ ಪದುಳಮಾಡಿದುದೋ ಸುರಸುಂದರೀಜನಂ ೩೨

ಅಮರೇಂದ್ರಂ ಕುಡೆ ದಂಡ
ಭ್ರಮರಿಯನುದ್ದಂಡಬಾಹುದಂಡಂಗಳೊಳಿ
ರ್ದಮರಿಯರೇಂ ಯಕ್ಷಾಂದೋ
ಳಮನಾಡುವ ಮಾಟ್ಕೆಯಿಂ ಮನಂಗೊಳಿಸಿದರೋ ೩೩

ಕಿವಿಗಿಂಪಂ ಕಱೆಯುತ್ತುಮಿರ್ಪ ರಸಗೀತಂ ಗೀತದೊಳ್ತಟ್ಟಿ ಪೊ
ಣ್ಮುವ ವಾದ್ಯಂ ರಸಗೀತವಾದ್ಯಮೆರಡರ್ಕಂ ನೇರ್ಪಡಂ ತೋರ್ಪ ತಾಂ
ಡವಭೇದಂ ಕುಡೆ ದೇವಮರ್ತ್ಯಸಭೆಗತ್ಯಾನಂದಮಂ ಲೋಚನೋ
ತ್ಸವಮಂ ಶಕ್ರನಿನಂದದೇನೆಸೆದುದೋ ಸಂಗೀತಕಂ ಕೌತುಕಂ ೩೪

ದೇವೇಂದ್ರಂ ನಿರ್ವೃತಿಸೌ
ಖ್ಯಾವಾಪ್ತಿಗೆ ಬಯಸಿ ಬಲ್ಮೆಯಂ ನೆಱೆ ಮೆಱೆದಾ
ದೇವನ ಮುಂದಾಡಿದನೆನ
ಲೇವೇೞ್ಬುದೊ ನೃತ್ಯಫಳಮುಮಂ ನೃತ್ಯಮುಮಂ ೩೫

ವ॥ ಅಂತಮರನಾಯಕನಾನಂದನರ್ತನಮಂ ನಿರ್ವರ್ತಿಸಿ ಸಮದಮದನ ಮಲ್ಲಂಗೆ ಮಲ್ಲಿನಾಥನೆಂದು ಪೆಸಱನಿಟ್ಟು

ಮಿಸಿಸುವ ಕಾಡಿಗೆಯೆಚ್ಚುವ
ಪೊಸದೊಡವಂ ತುಡಿಪ ಮೊಲೆಯನೂಡುವ ಪೆಱಪುಂ
ಬೆಸದೆಡೆಗೆ ದೇವರಾಜಂ
ಬೆಸವೇೞ್ದಿಂ ಕರೆದು ಸುರಮಹತ್ತಿರಿಕೆಯರಂ ೩೬

ಅಮರಕುಮಾರರಂ ಜಿನಕುಮಾರಕನಂ ಸಪಾಂಸುಕೇಳಿಯೊಳ್
ಸಮವಯಸಂ ಮನಂಗೊಳಿಸೆ ಮೇಳಿಸಲುಂ ಬಹುವಾಜನಸ್ವರೂ
ಪಮನನುರೂಪಮಂ ತಳೆದು ತಾಳ್ದಿರಲುಂ ಬೆಸವೇೞ್ದು ನಾಕಲೋ
ಕಮನತಿಹರ್ಷದಿಂದನಿಮಿಷಪ್ರಮುಖಂ ನಿಮಿಷಕ್ಕೆ ಮುಟ್ಟಿದಂ ೩೭

ವ॥ ಅಂತು ವಾಸವಂ ನಿಜನಿವಾಸಕ್ಕೆ ಪೋಪುದುಮಿತ್ತಲಮರಕಾಮಿನೀ ಕರಸರೋಜವನರಾಜಹಂಸನೆನಿಪ ಬಾಲಕಂ

ತನಗೆಱಕಮೇತಱೊಳಮಿ
ಲ್ಲೆನಿಪ್ಪುದಂ ಪೂರ್ವಸೂಚನಂ ಗೆಯ್ದವೊಲಂ
ದನಪೇಕ್ಷಿತಸಕಳವಿಳೋ
ಕನದಿಂದುತ್ತಾನಶಯ್ಯೆಯೊಳ್ಕಣ್ಗೆಸೆದಂ ೩೮

ಜನನಜರಾಮೃತಿಗೊಳಗಾ
ಯ್ತಿನಿತುಂ ಜಗಮೆಂದು ಬಗೆದು ತನ್ನೊಳ್ ನಗುವಂ
ತನಿಮಿತ್ತ ದರಸ್ಮಿತದಿಂ
ಜಿನಾರ್ಭಕಂ ತಾಯ ಮನಮನಿರ್ಕುಳಿಗೊಂಡಂ ೩೯

ಎನ್ನವೊಲೆಲ್ಲಮನಱಿಪದು
ನಿನ್ನಳಿವಳಗೇವುದೆಂದು ತೇಜೋನಿಳಯಂ
ಮನ್ನಿಸನೆನೆ ಜನನಿಯ ಕೈ
ಯಿನ್ನಿಮಿರ್ವಂ ಪಿಡಿಯಲೆಂದು ದೀಪಾಂಕುರಮಂ ೪೦

ಸುರಧಾತ್ರಿಯ ತರ್ಜನಿಯಂ
ಬೆರಲ್ಗಳಿಂಪಿಡಿದು ಕೆದರುವಂತಿರೆ ಕೆಂದಾ
ವರೆಯೆಸಟಿಂ ತತ್ತರುಣಂ
ಮರಕತಕುಟ್ಟಿಮದ ಮೇಳೆ ದಟ್ಟಡಿಯಿಡುವಂ ೪೧

ಮಣಿಘಂಟಿಕಾರವಂ ಕಿಂ
ಕಿಣೀರವಂ ಕಱಿಯೆ ಬೇಱೆ ಕರ್ಣಾಮೃತವ
ರ್ಷಣಮಂ ಜನನೇತ್ರಾಕ
ರ್ಷಣಮಾದುದು ತಡತಡಾದ ಜಿನಬಾಲಕನಾ ೪೨

ಧರೆಗೆ ಸುಚರಿತಸುಭಾಷಿತ
ವೆರಡರ್ಕಂ ಗುರುವೆನಿಪ್ಪ ಮಹಿಮೆಗೆ ಕುಳಮಂ
ದಿರಮಾದ ಶಿಶುಗಿದಾವ
ಚ್ಚರಿಯೊ ತಳರ್ನಡೆಯ ಮುದ್ದುನುಡಿಯ ವಿಳಾಸಂ ೪೩

ಒವವುದೆ ತನಗೆ ಸಹಜಂ
ಜೀವಮನೆಂದಜೆಪುವಂತೆ ನಡೆಗಲ್ವಂದುಂ
ಪೂವಿನೆಸಟ್ಗಿಳ್ಕಂದವೆ
ಜೀವಂ ನೋಯವೆ ಜಿನಾರ್ಭಕಂ ಮೆಟ್ಟಿದೊಡಂ ೪೪

ವ॥ ಅಂತನತಿಶಯಮೆನಿಪ ಬಾಲಕಾಲಮನತಿಕ್ರಮಿಸಿ

ಶಶಿಲೇಖೆ ಪೂರ್ಣಮಪ್ಪಂ
ತೆಶೈಶವಂ ಪಿಂಗೆ ನಿಜಕಳಾಪರಿಪೂರ್ಣಂ
ವಿಶದಯಶೋಭೂಷಣಮಂ
ದಿಶಾವಿಳಾಸಿನಿಗೆ ತತ್ಕುಮಾರಂ ಕೊಟ್ಟಂ ೪೫

ವ॥ ಅಂತುನಿರಂತರೋಪಚಯಮನಪ್ಪುಕೆಯ್ದು ಕುಮಾರಕಾಲದೊಳ್

ತಾನೆ ಮಹಾವಿವೇಕನಿಧಿ ತಾನೆ ಸಮಸ್ತ ಕಳಾವಿಶಾರದಂ
ತಾನೆ ಜಗಜ್ಜನಾರ್ಜಿತಶುಭಾಶುಭಕರ್ಮವಿಪಾಕವೇದಿಯೆಂ
ಬೀನುಡಿ ಚೋದ್ಯಮಲದೊಡಪುಟ್ಟಿದುವಲ್ತೆ ಮತಿ ಶ್ರುತಾವಧಿ
ಜ್ಞಾನಮನಲ್ ಪವಣ್ಬಡಿಪರಾರೊ ಕುಮಾರನುದಾರ ವೃತ್ತಿಯಂ ೪೬

ಪದವಿದ್ಯಾವಿದರರ್ಥಶಾಸ್ತ್ರನಿಪುಣರ್ಸಾಹಿತ್ಯವಿದ್ಯಾವಿಶಾ
ರದರಾಲೇಪನಲೇಖ್ಯಮುಖ್ಯರಿಭವಾಹಾರೋಹಕರ್ಕಾವ್ಯಕೋ

ವಿದರಾಪ್ತಾಗಮದೇಶಿಕರ್ಭರತವಿದ್ಯಾವೇದಿಗಳ್ಮತ್ತಮಾ
ವುದನಾರ್ಬಲ್ಲರವರ್ಮನಂಗೊಳೆ ಕುಮಾರಂ ಬಲ್ಮೆಯಂ ಬೀಱಿದಂ ೪೭

ಅಱಿಯದ ವಿದ್ಯೆಯಿಲ್ಲವ ಱಿಯೊಳಾವುದಱೊಳ್ ನಲಿದಾಡೆ ಪೊಟ್ಟುಗಳ್
ನೆಱಿಯವು ಮೆಚ್ಚಿಸಲ್ನೆಱಿಯರೆನ್ನದೆ ಮೆಚ್ಚಿ ಕುಡಲ್ಕೆ ಮೇರುವುಂ
ನೆಱಿಯದು ಮೆಚ್ಚಿದಂತದರ್ವ ಕೀರ್ತಿಯ ದಾಂಗುಡಿಗಳ್ಗೆದಿಕ್ತಟಂ
ನೆಱಿಯವೆನಲ್ಕುಮಾರನ ನೆಗೞ್ತೆ ಪೊಗೞ್ತೆಗಳುಂಬಮಲ್ಲದೇ ೪೮

ಪಲತೆಱದಿಂ ಕುಮಾರನ ಮನಂಬಡೆಯಲ್ಬರಿಚಾರಕರ್ಸುರ
ರ್ಕಲರುರಿಲಿಂಗಮಾಗಿ ಕಡಲಂ ಕಡೆವಂತೆವೊಲಾಗಿ ಕಾಲದೊ
ಳ್ಕಲಸಿದ ಜೊನ್ನವಾಗಿ ಪಗಲೊಳ್ತಡವಾದಿರುಳಾಗಿ ವಿಕ್ರಿಯಾ
ವಿಲಸನಮತ್ಯಪೂರ್ವಮೆನೆ ತೋಱಿದರಂತವರಿಂದ್ರಜಾಲಮಂ ೪೯

ಮುಂತೆ ಲುಲಾಯಸಂತತಿಗಳಾಗಿ ಕರಂ ಪುಗೆ ಕೋಡುಗುಟ್ಟಿಯುಂ
ದಂತಿಗಳಾಗಿ ಬಂದು ಮೊಗಮಿಕ್ಕಿಯುಮಂಕದ ಮಲ್ಲರಾಗಿ ಪೊ
ರ್ದುಂ ತಗರಾಗಿ ತಾಗಿಯುಮಗುರ್ವಿನ ಲಾವಗೆಯಾಗಿ ಕಾದಿಯುಂ
ತಂತಮಗಿಂತು ಚಿತ್ತಮಱಿದೋಲಗಿಪರ್ದಿವಿಜರ್ಕುಮಾರನಂ ೫೦

ಕೆಲಬರ್ವಾಹನಮಾಗಿ ಮೆಚ್ಚಿವೆಡೆಗುಯ್ದುಂ ಗೀತಾವಾದ್ಯಂಗಳಂ
ಕೆಲಬರ್ಕೇಳಿಸಿಯುಂ ಕೆಲರ್ಕಥಕರಾಗಿರ್ದುಂ ಕೆಲರ್ನಿಂದು ಮಂ
ಗಳವೃತ್ತಂಗಳನೋದಿಯುಂ ವಿಕೃತವೇಷಂಗಳ್ಮನಂಗೊಳ್ಪಿನಂ
ಕೆಲರಿರ್ದಾಡಿಯುಮಿಂತು ಮೆಚ್ಚಿಸುವರಾದೇವರ್ಜಗನ್ನಾಥನಂ ೫೧

ಭ್ರಮರಾಕೃತಿಯಂ ಕೈಕೊಂ
ಡಮರರ್ ಮಧುಮಧುರಮಂದ್ರತಾರ ಧ್ವನಿಯಿಂ
ದಮರ್ದಂ ಸಿಂಪಿಸಿ ಪುಳಕೋ
ದ್ಗಮಮಂ ನೃಪನಂದಾನಾಂಗದೊಳ್ಪುಟ್ಟಿಸಿದರ್ ೫೨

ಶುಕರೂಪಂ ಕೈಕೊಂಡಮ
ರಕುಮಾರರ್ಸಕಳಕಾವ್ಯನಾಟಕಭರತಾ
ದಿಕಳಾಕಳಾಪಮಂ ಪೇ
ೞ್ದು ಕುಮಾರನ ಬಗೆಗೆ ಬೀಱಿದರ್ಕೌತುಕಮಂ ೫೩

ವ॥ ಅಂತನೇಕವಿವಿಧವಿನೋದಮಗಳಿನಿಚ್ಚೆಯಱಿದು ಮೆಚ್ಚಿಸುತ್ತುಮಿರೆ

ಅನುಲೇಪಂ ಚಿತ್ರವಸ್ತ್ರಂ ಕುಸುಮ ಸಮುದಯಂ ಭೂಷಣಶ್ರೇಣಿಕಲ್ಪಾ
ವನಿಜೋತ್ಪನ್ನಂಗಳಾವಸ್ತುಗಳನನುದಿನಂ ಭಕ್ತಿಯಿಂದಟ್ಟುವಂ ವಿ

ಶ್ವನಿಳಿಂಪಾಧೀಶ್ವರಂ ತಂದವನಮರಿಯರಾನಂದೀವರೆಂದಂ
ದನವದ್ಯದ್ರವ್ಯಭೋಗಾನುಭವವಿಭವಮಂ ತಾಳ್ದಿದಂ ಮಲ್ಲಿನಾಥಂ ೫೪

ಆತಪವಾವರ್ಷವಿಷಕಂಟಕಕಾಷ್ಠಶಿಳಾಕೃಶಾನುಶ
ಸ್ತ್ರಾತುರಬಾಧೆಯುಂ ಜರೆಯುಮಿಲ್ಲ ಸಿತಕ್ಷತಜಂ ಸುವರ್ಣವ
ರ್ಣಾತಿಶಯಂ ಸುಗಂಧಶುಭಲಕ್ಷಣಸುಂದರರೂಪು ಸುಸ್ವರೋ
ಪೇತಮಮಾನುಷಂ ಚರಮದೇಹದ ಮೆಯ್ಸಿರಿ ಮಲ್ಲಿನಾಥನಾ ೫೫

ಪರಮಾಯುಮಯ್ವತ್ತೈಸಾ
ಸಿರಬರಿಸಂ ನೀಳವಿರ್ಪತ್ತೈವಿಲ್ ಬೆಮರು
ಬ್ಬರಿಸದೆನೆ ಜಿನಕುಮಾರನ
ಪರಮೌದಾರಿಕಶರೀರಮೇನತಿಶಯಮೋ ೫೬

ಇದು ಲಕ್ಷ್ಮಂ ಲಕ್ಷಣಕ್ಕಾಗರಮಿದು ಶುಭಚಿಹ್ನಕ್ಕೆ ಸೌಂದರ್ಯಸಸ್ಯ
ಕ್ಕಿದು ಸುಕ್ಷೇತ್ರಂ ಪ್ರತಿಷ್ಠಾಮಣಿಗಿದಮೃತವಾರಾಶಿ ಗಂಭೀರನಾದ
ಕ್ಕಿದು ಪೀಯೂಷಾಂಬುದಂ ಕಾಂಚನರುಚಿಗಿದು ಸೌದಾಮಿನೀಬಂಧುಗಂಧ
ಕ್ಕಿದು ಮಂದಾರೋದ್ಗಮಂ ತಾನೆನೆ ತನು ಸುಭಗಾಕಾರನಾದಂ ಕುಮಾರಂ ೫೭

ಕರುವಿಟ್ಟುಂ ತಿಟ್ಟವಿಟ್ಟುಂ ಕಡೆದುಮೆರಗಿಯುಂಪೋಲಿಸಲ್ ಬಾರದಾ ಸುಂ
ದರರೂಪಂ ಕಂಡು ಕಣ್ಸೋಲ್ತೆಳಸಿ ಪೆಸಱಿ ಪೆಂಡಿರ್ಕುಮಾರಂ ಕರಂ ತೋ
ಳ್ವೆರಗಂ ನಿಶ್ರೇಯಸಶ್ರೀವನಿತೆ ಸಮನಿಸಿತ್ತಾತನೇಗೆಯ್ವೆನೆಮ್ಮಂ
ಪುರುಷಾರ್ತಮೊಲ್ವ ರೂಪಲ್ಲದೆ ಪೆಱಪೆಱವಂ ಸೋಂಕಿಯುಂ ಕಾಣಲ್ತೇ ೫೮

ಕಾಂತೆಯರಂ ಕುಮಾರನ ವಿಳಾಸಮೆ ತೋಳ್ವಲಮಾಗೆ ಕಾಮನೋ
ರಂತಿಸುವಂ ಶಿರೀಷಸುಕುಮಾರಿಯರಪ್ಪುದಱಿಂದಮುರ್ಚಿಪೋ
ಪಂತಿಸಲೊಲ್ಲನಾಪರಮನಂ ಬಗೆ ಪೋಪುದು ಪುಷ್ಪಬಾಣದಿಂ
ದೆಂತಿಸುವಂ ಸ್ಮರಂ ಚರಮದೇಹಮನಾಯುಧಮುರ್ಚದಂತುಟಂ ೫೯

ದೇವರೆಂವೆಂಬ ದೊಡ್ಡವೆಸಱಿಂ ತಳೆದಿರ್ದದುನುರ್ಚಿ ಪೋಗಿ ಪ
ತ್ರಾವಧಿಯಪ್ಪಿನಂ ತಳಿರ ಪಾಸಿನ ಮೇಲೆ ಪೊರಟ್ಟಿದಂಬುಗಳ್
ದೇವರದೇವನಂ ನಡದೆ ಭಂಗಮನೆಯ್ದುಗುಮೆಂದುಪಾಯದಿಂ
ಪೂವಿನ ಬಾಣದಿಂದಿಸದೆ ನಿಂದನಿದೇಂ ಮನದಂ ವಿವೇಕಿಯೋ ೬೦

ವ॥ ಅಂತು ಕುಮಾರಂ ಕುಮಾರಕಾಲದೊಳಮರಮಹತ್ತರಿಕಾವಿರಚಿತ ಮಜ್ಜನಭೋಜನಾದಿ ಭೋಗೋಪಭೋಗಮನಪ್ಪುಕೆಯ್ದು

ಶತಸಂವತ್ಸರಮಿಂತನಂತಸುಖದೊಳ್ ಸಂಪೂರ್ಣನಾಗಿರ್ದನಂ
ಸುತನಂ ನೋಡಿ ವಿವಾಹಮಂ ಸಕಳಲೋಕೋತ್ಸಾಹಮಂ ಧರ್ಮಸಂ
ತತಿಯಂ ಪೆರ್ಚಿಸಲೆಂದು ಮಾಳ್ಪ ಬಗೆಯಿಂದುತ್ಕಂಠರಾದರ್ಪ್ರಭಾ
ವತಿಯುಂ ಕುಂಭನೃಪಾಳನುಂ ತನಯನಂತಸ್ಸಾರಮಂ ಬಲ್ಲರೇ ೬೧

ವ॥ ತದನಂತರಂ ಕುಂಭವಲ್ಲಭಂ ಕುಮಾರನ ವಿಕಾರವಿರಹಿತಾಕಾರಮಂ ಮನದೆಗೊಂಡು ತನ್ನೊಳಿಂತೆಂದಂ

ನನೆಯಂಬು ನಾಂಟದಂತಿರೆ
ಮನದೊಡವುಟ್ಟಿತ್ತು ವಜ್ರಕವಚಮೆನಿಪ್ಪೀ
ಜಿನಪತಿ ದಂಪತಿಯೆನಿಪನೆ
ಧನಕ್ಕೆ ಮಾಣಿಕ್ಯದೀಪಮೇನೆಱುಗುಗುಮೇ ೬೨

ಗಜಮಂ ಕಟ್ಟುವವೋಲಂ
ಬುಜಸೂತ್ರದಿನೀಮನೋಜವೈರಿಯ ಚೇತೋ
ಗಜಮಂ ವಿಳಾಸವತಿಯರ
ಭುಜಲತೆಯ ತೊಡರ್ಪಿನೊಳ್ತೊಡರ್ಚುವನಾವಂ ೬೩

ಎರಲೆಯ ಪಿಂಡುಗಳ್ಮರುಮರೀಚಿಕೆಯಂ ಜಳಮೆಂದು ಮೋಹದಿಂ
ಪರಿವವೊಲಿಂದ್ರಿಯಂಗಳ ಸುಖಂ ಸುಖವೆಂದು ವಿವೇಕಿಯಲ್ಲದಂ
ಪರಿಗುಮನಂತಬೋಧನಿಧಿ ನಿತ್ಯಸುಖೋನ್ಮುಖನೀಕುಮಾರಕಂ
ಪರಿಣಯನೋತ್ಸವಕ್ಕೆ ಬಗೆದರ್ಪನೆ ದರ್ಪಕದರ್ಪಭಂಜನಂ ೬೪

ಮನಮೇನುಂ ಕದಡದೆ ಪಳಿ
ಕಿನಱೆಯ ಮೇಲೇಱಿದ ನೀರ ವೋಲದಱಿಂದೀ
ತನ ಬಗೆಗೆ ಮದನರಾಗಂ
ಜನಿಯಿಸದೆಂದುಸಿರದಿರ್ಪುದಲ್ತೆನಗೆನಯಂ ೬೫

ತನಯಂ ಪರಿಣಯನಪ್ರಾ
ಪ್ತನಾದೊಡಾತಂಗೆ ಮದುವೆಯಂ ಮಾಳ್ಪುದೆ ದಲ್
ಜನಕಂಗೆ ಕೃತ್ಯವಾನದ
ನನುಷ್ಠಿಪೆಂ ತಿಳಿವೆನದಱೆನಾತನ ಬಗೆಯಂ ೬೬

ವ॥ ಎಂದು ನಿಶ್ಚಯಿಸಿ

ಕುಲರೂಪಸಕಲಲಕ್ಷಣ
ಕಳಾಪ್ರಸನ್ನೆಯರೆನಿಪ್ಪ ನೃಪಕನ್ಯೆಯರಂ
ಪಲರಂ ತರಿಸಿದನರಸಂ
ತಲೆದೂಗಿಸೆ ತನ್ನದಾನಸನ್ಮಾನಂಗಳ್ ೬೭

ವ|| ಅನಂತರಂ ಗೃಹಮುಹತ್ತರಂಗೆ ರಾಜ್ಯಗೃಹಮಂ ಕಯ್ಗೆಯ್ವಂತು ಬೆಸಸುವುದುಂ

ನೀಲಪ್ರಸ್ತರಿತಂ ಪರಿಸ್ಫುರಣಿಮಯಸ್ತಂಭಾಂಚಿತಂ ಹೇಮಘಂ
ಟಾಲಂಭೂಷವಿಭೂಷಿತಂ ಸ್ಫಟಿಕಭಿತ್ತಿಭ್ರಾಜಿತಂ ರತ್ನದೀ
ಪಾಲೋಕಂ ಮಣಿತೋರಣಾರುಣಚಿಚ್ಛನ್ನಂ ಪತಾಕಾಪಟೀ
ಲೋಲಂ ಬೇಱೆ ವಿವಾಹಮಂಡಪಮದೇಂ ಚಿತ್ತಕ್ಕೆ ಗೊತ್ತಾದುದೋ ೬೮

ವ|| ಆ ವಿವಾಹಮಂಡಪಮಂ ಮೋಹಮಲ್ಲನಪ್ಪ ಮಲ್ಲಿನಾಥಕುಮಾರಂ ಕಂಡು ಮುನ್ನಂ ತನ್ನ ಪುಟ್ಟಿದಪರಾಜಿತವಿಮಾನಮನವಧಿಬೋಧದಿಂದಱಿದದುವೆ ತನಗೆ ನಿರ್ವೇಗಮಾಗೆ

ಇನ್ನೆವರಂ ಚತುರ್ಗತಿಗಳೊಳ್ತಿರಿತಂದು ಜಘಂಗೆ ಪೇಡಿಯಾ
ದೆಂ ನೆಱೆದಂತಕಂಗಿದಿರಸಾಂತವನಂ ತವೆ ಮೋದಿ ಸೇಸೆಗೊ
ಳ್ವೆಂ ನೆರೆವೆಂ ಜಯಾಂಗನೆಯೊಲೇವೆನೊ ಮತ್ತಿನ ಪೆಣ್ಣನೆಂದು ತಾಂ
ತನ್ನನೆ ತಾನೆ ಸಾಧಿಸುವ ಧೀರತೆಯಂ ತಳೆದಂ ಕುಮಾರಕಂ ೬೯

ತವದ ಸುಖಂಗಳುಂ ತವದ ಮೆಯ್ಸಿರಿಯುಂ ತವದಾಯುರಬ್ಧಿಯುಂ
ತವುತಿರೆ ಬಿಟ್ಟು ಬಂದು ದಿವಮಂ ಜನನೀ ಜಠರಾಂಧಕೂಪದೊಳ್
ಕವಿದ ಜರಾಯುವಿಂ ಕ್ರಿಮಿಕುಳಂಗಳಿನಾಕುಳನಾಗಿ ಪುಟ್ಟಿ ಪೊಂ
ದುವ ಪಿರಿದೊಂದು ದಂದುಗದ ದೈನ್ಯಮನೇಂ ತಲೆದೋಱಲೀವೆನೇ ೭೦

ಮೃಡಸುತನಂತೆ ದಂತಹತಿ ಪೊರ್ದದ ಶೂದ್ರಕನಂತೆ ಶಕ್ತಿಯಂ
ಕಿಡಿಸದೆ ವಾರ್ಧಿಯಂತೆ ತೆರೆಯೇಱದೆ ಕೋಡಗದಂತೆ ಶಾಖೆಯೊಳ್
ನಡೆಯದೆ ಪೋದೆಪೋದ ಮರದಂತೆ ಕರಂ ನರೆಯೇಱಿದಿಟ್ಟು ಮ
ಪ್ಪಡಸದ ಮುನ್ನಮೇಕೆ ಮನುಜರ್ಮುಱಿದಿಕ್ಕರೊ ಮೋಹಮಲ್ಲನಂ ೭೧

ಪವನಪಥದಂತೆ ಮಂದಂ
ಶ್ರವಣೋದಯಮಾಗೆ ತನಗದಂತತೆ ರಾಜಾ
ರಿವೊಲಾಗೆ ಭೀತನೃಪನಂ
ತೆ ವಿಗ್ರಹಂ ಶಿಥಿಲಮಾಗೆ ಮತ್ತಳಿಪುವುದೇ ೭೨

ಜವನೇನಳ್ಕಮೆವಟ್ಟನೇ ಪರಿದು ಮೇಣ್ಕಾಲಂ ಜವಂಗೆಟ್ಟನೇ
ಕಿವಿಕಣ್ನಾಲಗೆ ಮೂಗು ಮೆಯ್ ಜವಜವಕ್ಕೇಂ ಸಲ್ಲವೆ ಯೌವನಂ
ತವದೇಕುತ್ತದ ಬಿತ್ತನೇಂ ಪುರಿದರೇಕೇಡಿಂಗೆ ಕೇಡಾಯ್ತೆ ಮಾ
ನವರೇನೆಂದು ಜಡಾತ್ಮರೈಹಿಕಸುಖವ್ಯಾಮೋಹಮಂ ಮಾಡುವರ್ ೭೩

ವ॥ ಎಂದಪವರ್ಗಸುಖಮನಾಸೆಗೆಯ್ವು ಚತುರ್ಗತಿಯ ದುಸ್ಥಿತಿಯ ನಾತ್ಮಗತದೊಳಮಿಂತೆಂದಂ

ಕಡುಕೆಯ್ದಂತರ್ಮುಹೂರ್ತಸ್ಥಿತಿಗವಧಿಯೆನಲ್ಮೂಱು ಪಲ್ಯಂಬರಂ ಬಾ
ಯ್ವಿಡ ತಿರ್ಯಗ್ಜಾತಿಯಂ ಮಾನಿಸರನಜಿಸಿ ಕೊಲ್ವಂ ಜನಂ ಕಂಡು ಕಂಡುಂ
ಬಿಡದೇ ದುರ್ಮೋಹಮಂ ನಿರ್ವೃತಿಗಳಸದೆಲೇ ದೇಹಸಂಬಂಧದಿಂದಂ
ಜಡನಾದಂ ದೇಹಿ ಶೈಳೋದಕವನೆಳಸಿ ಕಲ್ಲಪ್ಪವೊಲ್ಕಾಷ್ಟಮೆಲ್ಲಂ ೭೪

ಪೋ ಜಡರೇಕೆ ಭಾವಿಸರೊ ಮೂತ್ರಬಿಲಂ ನೆಲೆ ಶುಕ್ಲಶೋಣಿತಂ
ಬೀಜಮೊಡಲ್ಗಡಂ ಕ್ರಿಮಿ ಜರಾಯು ನಿರೋಧಿಸಿ ತೀವ್ರದುಃಖಮಂ
ಯೋಜಿಸುತಿರ್ಪುದರ್ಕಿಸುವುದೆಂಜಲೆನಲ್ವೆಱುವಲ್ಲಿ ವೇದನಾ
ಭೋಜನಮಪ್ಪ ಭವ್ಯಜನದೂಷ್ಯಮೆನಿಪ್ಪ ಮನುಷ್ಯಜನ್ಮಮಂ ೭೫

ಸುಡೆ ದಾವಾನಳನೊಂದನೊಂದು ತಿನೆ ಕುತ್ತಂ ಪತ್ತೆ ಕೊಂದಿಕ್ಕೆ ಕಾ
ಡೊಡೆಯರ್ಶೀತದ ವಾತದಾತಪದ ಧಾರಾಪಾತದತ್ಯಾತುರಂ
ಮಡಿವಂ ಮಾಡೆ ಕರಾಂಕುಶೋಪಹತಿಸಂತಾಪಕ್ಕಡರ್ಪಾಗೆ ಮೂ
ಗಿಡೆ ನಿರ್ಬಂಧದಿನೇಱಿ ಪೇಱಿ ತಿನೆ ತಿರ್ಯಗ್ಜಾತಿಗಳ್ಬರ್ದುಗುಂ ೭೬

ವ॥ ಮತ್ತಮೀ ಗತಿಚತುಷ್ಟಮೆನಿಸಿದ ಚತುರ್ನಿಕಾಯಾಮರರೊಳ್ ವಜ್ರಕ್ಷೇತ್ರದ ಖರಪಂಕಭಾಗದ ಭವನವಾಸಿಗಳಪ್ಪ

ಅಸುರಾಗ್ನಿವಾತದಿಗ್ನಾ
ಗಸುಪರ್ಣಸ್ತನಿತವಿದ್ಯುದುದಧಿದ್ವೀಪಂ
ಪೆಸಱಿನೆ ಭವನಾಮರಕುಳ
ಮೆಸೆಗುಂ ದಶವಿಧವಿಕಲ್ಪಮಳವಡೆ ತಮ್ಮೊಳ್ ೭೭

ಸವಿಸೋಟ್ಟಿಂ ಸಾಗರಾಂತಕ್ಕ ಸುರರಸೆರೆಗೊಳ್ಪಂ ತ್ರಿಪಲ್ಯಕ್ಕೆ ಸಾಗಾ
ನ್ವಯಮಂ ಸಾರ್ಧದ್ವಿಪಲ್ಯಕ್ಕಳವಳಲುಱಿ ಮಾಟ್ಪಿಂ ದ್ವಿಪಲ್ಯಕ್ಕಿದೇಂ ನಿ
ರ್ದಯನೋ ಸಾರ್ಧೈಕಪಲ್ಯಕ್ಕುೞಿವಱುವರುಮಂ ನಂದೆವೊಯ್ವಂ ಕೃತಾಂತಂ ೭೮

ವ॥ ಅದಲ್ಲದೆಯುಮೀ ಚಿತ್ರಾಕ್ಷೇತ್ರದೊಳ್

ಬಗೆವಡೆ ಕಿಂಪುರುಷಮಹೋ
ರಗಭೂತಪಿಶಾಚಯಕ್ಷರಾಕ್ಷಸಗಂಧ
ರ್ವಗಣಂ ಕಿನ್ನರಗಣಮೆಂ
ಬ ಗಣನೆಯಿಂ ವ್ಯಂತರರ್ಕಳಿಂತೆಣ್ಬು ತೆಱಿಂ ೭೯

ಭವನಂಗಳೊಳಂ ದ್ವೀಪಾ
ರ್ಣವದ ಪುರಂಗಳೊಳಮಬ್ಜವನಗಿರಿತರುವೆಂ
ಬಿವಱಾವಾಸಂಗಳೊಳಂ
ಜವನವರಂ ಪಳಿತದಳಿವಿನೊಳ್ ತವೆತಿಂಬಂ ೮೦

ಜಳಶಸ್ತ್ರಪಾಶಗರಳಾ
ನಳಾದಿಯಿಂ ನೆಗೞ್ಚೆ ತಮ್ಮೊಳಸಮಾಧಿಮಯಂ
ವಿಳಯಂ ಮನುಜರ್ವ್ಯಂತರ
ಕುಳದೊಳ್ ಜನಿಯಿಸುವವರದಱಿನಾ ಗತಿ ಗತಿಯೇ ೮೧

ವ|| ಅದಲ್ಲದೆಯುಂ

ಪ್ರಹರಿಸುವಂ ವಿಧಿ ಸಾಯಕ
ವಿಹೀನಪಲ್ಯೋಪಮಕ್ಕೆ ಪಂಚವಿಕಲ್ಪಾ
ವಹಮಂ ಚಂದ್ರಾದಿತ್ಯ
ಗ್ರಹನಕ್ಷತ್ರಪ್ರಕೀರ್ಣತಾರಾಗಣಮಂ ೮೨

ವಾಳಾಗ್ರದನಿತು ಮಂದರ
ಚೂಳಿಕೆಯಂ ಮುಟ್ಟಿದೆನಿಪ ಸೌಧರ್ಮೇಶಾ
ನಾಳಯದಮರರನೇಂ ನೀ
ರ್ಮೂಳಿಸುವನೊ ವಿಧಿ ಪಯೋಧಿಯುಗಳಾವಧಿಯೊಳ್ ೮೩

ಯಮಜಠರಾನಳಮೇನಧಿ
ಕಮೊ ಸಾಗರದೇೞಱಿಂತ್ಯದೊಳ್ ತವೆ ಸುಟ್ಟುಂ
ಸಮೆಯಿಪುದಣಮಲ್ತು ಸನ
ತ್ಕುಮಾರಮಾಹೇಂದ್ರಕಲ್ಪಜನಿತಾಮರರಂ ೮೪

ಮುರಿದೆೞೆದುಯ್ವಂ ದಶಸಾ
ಗರೋಪಮಾಯುಷ್ಯದಂತ್ಯದೊಳ್ ಕೊಲೆಗೆ ಮೊಗಂ
ಮುರಿಯಂ ಬ್ರಹ್ಮಬ್ರಹ್ಮೋ
ತ್ತರಕಲ್ಪಾಮರರನೇಂ ಜವಂ ಜೆಟ್ಟಿಗನೋ ೮೫

ಪಿಂತಿಕ್ಕುವಿನಂ ಪದಿನಾ
ಲ್ಕುಂ ತೋಯಧಿಯಂ ತಗುಳ್ದು ನಡೆಗಿಡೆ ಸಾರ್ತಂ
ದಂತಕನುಗಿಬಗಿಮಾಳ್ಪಿಂ
ಲಾಂತವಕಾಪಿತ್ಥಮೆಂಬ ಕಲ್ಪಾಮರರಂ ೮೬

ಆಕ್ರಮಿಸುವರಾರಂತಕ
ವಿಕ್ರಮಮಂ ಷೋಡಶಾಬ್ಧಿ ತವುತರೆ ನಖತೀ
ಕ್ಷ್ಣ ಕ್ರಕಚದಿಂದೆ ಸೀಳ್ಪಿಂ
ಶ್ಶುಕ್ರಮಹಾಶುಕ್ರಕಲ್ಪಜನಿತಾಮರರಂ ೮೭

ತೀರಲೊಡಂ ಪದಿನೆಣ್ಬುಂ
ವಾರಾಶಿಗಳೞಿಸಿ ಕೊಲ್ವನೞುಗುಲಿ ಬಿದಿದು
ರ್ವಾರಪರಾಕ್ರಮಶಾಳಿ ಶ
ತಾರಸಹಸ್ರಾರಕಲ್ಪಜನಿತಾಮರರಂ ೮೮

ಗತಕಾರುಣ್ಯರಸಂ ವಿಂ
ಶತಿಜಳನಿಧಿ ಕಳೆಯ ಬಸಿಱ ಬಲ್ಗಿರ್ಚಿಂಗಾ
ಹುತಿಮಾಳ್ಪನಾನತಪ್ರಾ
ಣತಕಲ್ಪಾಮರರನೇಂ ಜವಂ ಪಾತಕನೋ ೮೯

ದ್ವಾವಿಂಶತಿ ಪಾರಾವಾ
ರಾವಧಿಗೆಟ್ಟಿದುಯ್ವನಾರಣಾಚ್ಯುತಕಲ್ಪ
ಪ್ರಾವಿರ್ಭೂತರನೆಂದಂ
ದಾವೆಡೆಯುಂ ಜವನ ಧಾಟಿ ಮುಟ್ಟದದುಂಟೇ ೯೦

ಸಮೆವುದುಮಿರ್ಪತ್ತು ಮೂಱ
ಬ್ಧಿಮೊದಲೆನಲ್ಮೂವತ್ತೊಂದುಪರಮಾಯು
ಕ್ರಮದ ನವಗ್ರೈವೇಯಕ
ದಮರರುಮಂ ನೋಣೆವನೇಂ ಜವಂನಿರ್ಗುಣನೋ ೯೧

ವನನಿಧಿ ಮೂವತ್ತೆರಡುಂ
ತನಗಾಪೋಶನಮೆನಲ್ಕಖಾವಧಿಯಪ್ಪಾ
ತನು ದಿಶೆಯೊಂಬತ್ತಱ ದಿವಿ
ಜನಿಕಾಯಮನಿಕ್ಕುವಂ ಜವಂ ಕ್ಷುತ್ ಕ್ಷಾಮಂ ೯೨

ಬತ್ತಲೊಡಂ ಮೂಱುಂ ಮೂ
ವತ್ತುಂ ಪರಮಾಯುರರ್ಣವಂಗಳ್ಪಂಚಾ
ಣುತ್ತರೆಯಪಮಿಂದ್ರರುಮಂ
ತುತ್ತುವನೆನೆ ಜವನ ದಾಡೆಗೊಳಗಾಗದರಾರ್ ೯೩

ಪಂಚಾಣುತ್ತರೆಯಿಂದಮಿತ್ತಲಸುರಾವಾಸಂಬರಂ ಹೀನಮ
ಕ್ಕುಂ ಚೆಲ್ವಿಂ ಪರಮಾಯುವಿಂದವಧಿಯಿಂಸಾಮರ್ಥ್ಯದಿಂ ಲೇಶ್ಯದಿಂ
ಚಂಚದ್ದೇಪಮರೀಚಿಯಿಂ ಸುಖದಿನಾಹೀನತ್ವದಿಂ ಖೇದಮ
ಕ್ಕುಂ ಚಿತ್ತಕ್ಕದಱಿಂ ವಿವೇಕಿಗಮರತ್ವಂ ಹೇಯಮಾದೇಯಮೇ ೯೪

ಸಪ್ತಾನೀಕಿನಿಯಾಗಿ ಬಂದು ಬೆಸಕೆಯ್ವತ್ಯಂತದೈನ್ಯಂ ಮಹಾ
ಸುಪ್ತಿಜ್ಞಾನದಿನಾದ ಮೆಯ್ಯ ಮಱುಕಂ ಸಾಮರ್ಥ್ಯಸೌಂದರ್ಯಪ
ರ್ಯಾಪ್ತಿಶ್ರೀ ಪರಮಾಯುವೆಂದನಿತಜಿಲ್ವಾನಲ್ಪಸಂಕಲ್ಪಸಂ
ತಪ್ತಸ್ವಾಂತಮಿವುಳ್ಳ ನಾಕವಿಭವಂ ಜ್ಯಾಯಂಗುಪಾದೇಯಮೇ ೯೫

ತವಿಲುಳ್ಳಿಂದ್ರಿಯಸೌಖ್ಯದಿಂ ತಣಿವೊಡೀ ಭೂಲೋಕಮೇಂ ನಾಕಮೇಂ
ಜವನಿಂದಪ್ಪ ಪರಾಭವಂ ಬಿಡದು ಬೆನ್ನಿಂದೆಂದೊಡೇಬಾೞ್ತೆಯೋ
ದಿವಮಾತ್ಯಂತಿಕಸೌಖ್ಯವಲ್ಲದುದನೆಲ್ಲಿರ್ದುಂಡುಮೇನಿಲ್ಲಿ ಪು
ಟ್ಟುವುದೇ ಪುದ್ಗಲಕಾರ್ಯಮಲ್ಲದ ಶರೀರಂ ದೇವರೇಂ ಮರ್ತ್ಯರೇಂ ೯೬

ಅನುಭೂತಕ್ಷಣಮುತ್ತರಕ್ಷಣಮಪಾರ್ಥಂ ವರ್ತಮಾನಕ್ಷಣಂ
ತನಗಕ್ಕು ಸುಖಹೇತುವೆಂದೊಡೆನಿತಾನುಂ ಕಾಲಮಿರ್ದುಂ ಪ್ರಯೋ
ಜನಮೇ ಸ್ವರ್ಗದೊಳಾವುದೊಂದುಗತಿಯೊಳ್ ಜೀವಕ್ಕೆ ಬಾಹ್ಯೇಂದ್ರಿಯ
ಕ್ಕೆನಿದೆಂಬಂತಿರೆ ತೋರ್ಪುದೇನದ ಸುಖವ್ಯಾಮೋಹಮಂ ಮಾಡುಗುಂ ೯೭

ವ॥ ಅವಲ್ಲದೆಯುಮಧೋಭೂಮಿಗಳೆನಿಸಿದೇೞುಂ ನರಕಂಗಳೊಳ್

ಮೊದಲ ನರಕಂಗಳಯ್ದಿ
ಕ್ಕಿದ ಲೋಹದ ಬೆಟ್ಟು ಕರಗುವಂತಪ್ಪತ್ಯು
ಷ್ಣದವದನೆ ಗಟ್ಟಿಮಾೞ್ಪಿಂ
ತೊದವಿದ ಶೀತಳಮೆ ಕೆಳಗಣೆರಡುಂ ನರಕಂ ೯೮

ಖರಪಂಕಸಲಿಲಭಾಗಂ
ನಿರಯಕ್ಷೇತ್ರಕ್ಕೆ ಮೊದೆಱಿಂ ಬಿಲ ಮೂಱುಂ
ನರಕದೊಳಮುದಕಭಾಗಾಂ
ತರದಲ್ಲಿಯೆ ಕಡೆಯ ನರಕದೊಳ್ನಡುವಿರ್ಕುಂ ೯೯

ವ॥ ಆ ನರಕವಿವರಂಗಳೊರೊಂದರ್ಕಸಂಖ್ಯಾತಯೋಜನಮಸಂಖ್ಯೆವೆತ್ತಿಂದ್ರ ಕಂಗಳುಮ-
ಸಂಖ್ಯಾತಯೋಜನಪ್ರಮಾಣಮಪ್ಪ ಶ್ರೇಣೀಬದ್ಧಂಗಳ್ ಸಂಖ್ಯಾತಾ ಸಂಖ್ಯಾತಯೋಜನ-
ವಿಸ್ತೀರ್ಣಮಾದ ಪ್ರಕೀರ್ಣಕಂಗಳೆಂದು ಬೇಱೆ ಮೂಱುಂ ಪ್ರದೇಶಂಗಳಕ್ಕುಮಲ್ಲಿ

ಸಕಳಶ್ವಭ್ರಮನೆಯ್ದುಗುಂ ಪುದಿಯೆ ಚೇತೋವೃತ್ತಿಯಂ ಕೃಷ್ಣನೀ
ಳಕಪೋತಾಶುಭಲೇಶ್ಯೆ ಬೆಂದಗುಱೆ ಬಹ್ವಾರಂಭಮೊಂದಾಗೆ ತೀ
ವ್ರಕಷಾಯಂ ತನುಭೃದ್ಗಣಂ ತನುಮನಸ್ಥಂತಾಸುರಾನ್ಯೋನ್ಯಘಾ
ತಕಸಂಜಾತಮುರಂತಮಃಖದಹನಜ್ವಾಳಾಸಹಸ್ರಾಕುಳಂ ೧೦೦

ಭ್ರಮಿಸುಗುಂ ನರಕಂಗಳೇೞಱೊಳಂ ಯಥಾ
ಕ್ರಮದಿನಗ್ನಿಸರೀಸೃಪಂ ವಿಹಗಂ ಭುಜಂ
ಗಮಮಿಭವೈರಿ ವಧೂಜನಂ ಝಷ ಮಾನವರ್
ಸಮನಿಸಿದದ್ಭುತಪಾಪಕರ್ಮವಿಪಾಕದಿಂ ೧೦೧

ವ॥ ಆ ನರಕಬಿಲದ ಮೇಗಣಟ್ಟುಗಳೊಳಿಟ್ಟ ಜೇನ ಪುಟ್ಟಿಗಳನನುಕರಿಸಿ

ಕಾಕೋಳೂಕಸೃಗಾಳಬ
ಳಾಕೋಷ್ಟ್ರಚಮೂರುಖರಮುಖಂಗಳವೊಲ್ ನಾ
ನಾಕುತ್ಸಿತಬೀಭತ್ಸುಶ
ರಾಕಾರದಲಿರ್ಪುವಲ್ಲಿ ಯೋನಿಮುಖಂಗಳ್ ೧೦೨

ನಿಮಿಷಾರ್ಧಕ್ಕೊರ್ಮೊದಲೊಳೆ
ಸಮನಿಸೆ ಪರ್ಯಾಪ್ತಿ ತಮ್ಮೊಳಾಱುಂ ತದ್ಯೋ
ನಿಮುಖಂಗಳಿಂದಮಾಯುಧ
ದ ಮೇಲಧೋಮುಖದೆ ಬಿರ್ದು ಪಱೆವಱೆಯಪ್ಪರ್ ೧೦೩

ಭವಬದ್ಧವೈರಮಂ ತಿಳಿ
ದು ವಿಭಂಗಜ್ಞಾನದಿಂದೆ ಪರಿಕೃದ್ಧಮನರ್
ನವಖಂಡಮಾಗೆ ಮಾಱ್ಪರ್
ನವನಾರಕರಂ ಪುರಾಣನಾರಕರಾಗಳ್ ೧೦೪

ಕೆಲರ್ಕೆಲರ ಬೆಂಗಳಿಂ ಕರುಳನುರ್ಚುವರ್ಚುರ್ಚುವರ್
ಕೆಲರ್ಕೆಲರ ಕಾಲ್ಗಳಂ ಪಿಡಿದು ಬೀಸುವರ್ಕಾಸುವರ್
ಕೆಲರ್ಕೆಲರ ಸುರ್ಕುವೆಣ್ಣೆಗಳೊಳರ್ದುವರ್ಗುರ್ದುವರ್
ಕೆಲರ್ಕೆಲರನಿಂತು ಪಂಚುಪಱೆಮಾಡುವರ್ಕಾಡುವರ್ ೧೦೫

ಮೂವತ್ತೆರಡಾಯುಧದೊಳ
ಮೋವದೆ ಕೊಱೆದಿಱೆದು ಕಡಿದು ಖಂಡಿಸೆ ಕಾಣರ್
ನೋವಂ ಮಱೆದುಂ ಸುಖಸ
ದ್ಭಾವಮನೆಳ್ಳನಿತನಪ್ಪೊಡಂ ಕಂಡರಿಯರ್ ೧೦೬

ಕಿಱಿಕಿಱಿದಾಗೀಳಿಗೆಯೊಳ್
ಕೊಱೆದೊಡೆ ಕಾವಲಿಯೊಳಿಟ್ಟು ಕರಿದೊಡೆ ಕೈರಂ
ದಱೆದೊಡೆ ತನುಸಂಧಿಗಳಂ
ಮುಱೆದೊಡೆ ತತ್‌ಕ್ಷಣದೆ ಮುನ್ನಿನಂತೆವೊಲಿರ್ಪರ್ ೧೦೭

ಕಡಿಯೆ ಕೊಸರ್ವ ಕಾಲ್ ಮುಱಿಯೆ ಮೂಡುವಕಯ್ ಬಿಡೆ ಕೀಲಿಪೆಲ್ವುಕೊ
ಯ್ದೊಡೆ ಕೊನೆಗೊಳ್ವ ಮೂಗುಳಿ ಪದಂಗೊಳೆ ಮತ್ತೆ ತೊವಲ್ವ ಮೆಯ್ದೊವಲ್
ಬಿಡಿಸೆ ತೆರಳ್ದು ಸಂಧಿಸುವ ಸಂಧಿಗಳಿರ್ಬಗಿಯಾಗೆ ಮೆಟ್ಟಿ ಸೀ
ಟ್ದೊಡೆ ಪಳೆಯಂತೆ ಪತ್ತುವೊಡಲೇಂ ವಿಪರೀತಮೊ ನಾರಕರ್ಕಳಾ ೧೦೮

ಪರಿನೀರ ನಡುವನಿಱೆದಂ
ತಿರೆ ಖಂಡಿಸಿ ಕುಸುರಿದಱಿಯೆ ಸಣ್ಣಿಸೆ ಪಳೆಯಂ
ತಿರವಿಕ್ರಿಯಾಶರೀರಂ
ದೊರೆಕೊಳ್ವುದು ನಾರಕರ್ಗೆ ಪಾಪದ ಫಲದಿಂ ೧೦೯

ಗಂಟಲ ಬೇಗಡಂ ಮಣೆಯ ಬೇಗಡದಂತುಟೆ ಬೇಗೆಗಿರ್ಚಿದೊಂ
ದುಂಟೆನೆ ಪೆರ್ಚುಗುಂ ಬಸಿಱ ಕಿರ್ಚುಣಿಸಾವುದುಮಿಲ್ಲ ಕೂಡೆ ಮೆ
ಯ್ಗಂಟುಗಳಾಗಿ ಬಾತ ಪೆಣದಂತೆ ಕರಂ ಕೊಟೆನಾರ್ಕುಮೆಲ್ಲರುಂ
ಕಂಟಳಿಪನ್ನೆಗಂ ಮುದುಪರಾಗಿ ನಪುಂಸಕರಾಗಿ ಪುಟ್ಟುವರ್ ೧೧೦

ವನಿತೆಯರುಂ ಪುರುಷರುಮಿ
ಲ್ಲ ನಪುಂಸಕರಪ್ಪ ಮೊದಲನಾರಕರ್ಗೆಲ್ಲಂ
ತನುವಿನಿಸುದ್ದಮೆನಿಕ್ಕುಂ
ಧನುಮೇೞುಂ ಮೂಱು ಮೊೞನುಮಾಱಂಗುಳಮುಂ ೧೧೧

ದ್ವಿಗುಣದ್ವಿಗುಣೋನ್ನತಿವೆ
ತ್ತು ಗೋತ್ರವಯ್ನೂಱು ಬಿಲ್ವರಂ ಕ್ರಮದಿಂ ಪೆ
ರ್ಚುಗುಮುಟಿದಾಱುಂ ನರಕದೊ
ಳೊಗೆದವರ್ಗೊಡಲೊಡನೆ ದುಃಖಮುಂ ಪಿರಿದಕ್ಕುಂ ೧೧೨

ವೈತರಣೀತರಂಗಿಣಿಯನಂಜಿನ ನೀರ್ಸುಡೆ ಬಂದು ಪೊಕ್ಕರಂ
ಘಾತಿಸೆ ಪತ್ರರೂಪದಸಿಪತ್ರವನಂಗಳ ಪತ್ರಪುಷ್ಪಸಂ
ಘಾತಮೆೞಲ್ದು ಜೋಲ್ದು ನಡುಕಂ ಮಿಗೆ ವಿಪ್ವಳಚಿತ್ತರಾಗಿ ಹಾ
ಹಾತರನಿಸ್ವನಂ ನೆಗೞೆ ನಾರಕರುಣ್ಬರಪಾರದುಃಖಮಂ ೧೧೩

ಕೊಲೆ ಕಡಿದಾಡೆ ಕಯ್ಗುಡಿವರಿಕ್ಕುಳಿನೊಳ್ಪಿಡಿದೊತ್ತಿ ಕೇೞ್ವರಂ
ದಲಸದಸತ್ಯಮಂ ನುಡಿದ ನಾಲಗೆಯಂ ಮಘುಮದ್ಯಸೇವೆಯೊಳ್
ನಲಿನಲಿಯೆಂದು ಬಾಯೊಳೆಱೆವರ್ದ್ರುತಲೋಹಮನೇಱೆಗಾಯ್ದಯೋ
ಲಲನೆಯನಪ್ಪಿಪರ್ ಪೆಱರ ಪೆಂಡಿರನಪ್ಪಿದುರಃಪ್ರದೇಶಮಂ ೧೧೪

ಮೂವತ್ತು ಲಕ್ಕೆವಿವರ
ಕ್ಕಾವಾಸಮೆನಿಪ್ಪ ಮೊದಲ ರತ್ನಪ್ರಭೆಯೊಳ್
ಜೀವಂಗಳೆಯ್ದುಗುಂ ನಾ
ನಾವಿಧದುಃಖಾನುಭವಮನೊಂದಬ್ಧಿವರಂ ೧೧೫

ಲಕ್ಕೆಗಳಿರ್ಪತ್ತಯ್ದು ಬಿ
ಲಕ್ಕಡೆಯೆರಡನೆಯ ಶರ್ಕರಾಪ್ರಭೆಯೊಳ್ಪಾ
ಪಕ್ಕೆ ಗುಱೆಯಾದ ಜೀವಂ
ಕುಕ್ಕುಳಗುದಿಯುತ್ತುಮಿರ್ಕುಮಬ್ಧಿತ್ರಯಮಂ ೧೧೬

ಪದಿನಯ್ದು ಲಕ್ಕೆವಿವರಂ
ಪೊದಟ್ಟಿ ಮೂಱನೆಯ ವಾಲುಕಪ್ರಭೆಯೊಳ್ ಪು
ಟ್ಟಿ ದುರಂತದುಃಖದಿಂ ಬೇ
ವುದು ಜೀವಂ ಪತ್ತುಸಾಗರಾಂತಂಬರೆಗಂ ೧೧೭

ಈರಯ್ದು ಲಕ್ಕೆ ವಿವರಂ
ದಾರುಣಮೆನಿಸಿದ ಚತುರ್ಥಪಂಕಪ್ರಭೆಯೊಳ್
ಘೋರತರದುಃಖದೊದವಿ
ದೂರಿಸುಗುಂ ದೇಹಿಸಾಗರಂ ಪತ್ತುವರಂ ೧೧೮

ಪದಿನೇೞಂಬುಧಿವರೆಗಂ
ಕುದಿಗುಂ ಜೀವಂಗಳಶುಭಕರ್ಮದ ಪರಿಪಾ
ಕದೆ ಮೂಱು ಲಕ್ಕೆ ಬಿಲದಿಂ
ಪುದಿವರ್ದಯ್ದನೆಯದೆನಿಪ ಧೂಮಪ್ರಭೆಯೊಳ್ ೧೧೯

ಬಿಲನಯ್ದುಗುಂದೆ ಲಕ್ಕದ
ಪೊಲನಾದಾಱನೆಯ ತತ್ತಮಪ್ರಭೆಯೊಳಣಂ
ನೆಲಸಿರ್ದಿರ್ಪತ್ತೆರಡುಂ
ಜಲಧಿವರಂ ನಮೆಗುಮಱುನನುಱದ ದುರಾತ್ಮರ್ ೧೨೮

ಕೇಳಲರಿದೆನಿಪ ಬೇವಸ
ದೇೞನೆಯ ಮಹಾತಮಪ್ರಭೆಯ ಬಿಲಮಯ್ದಂ
ಮೇಳಿಸಿ ದುರಾತ್ಮನಲ್ಲಿಂ
ದೇೞುಂ ಮೂವತ್ತು ಮುಱುಮಂಭೋಧಿವರಂ ೧೨೧

ಒಡಲಿಂದಂ ಮನದಿಂದಿ
ರ್ಪೆಡೆಯಿಂದೋರೋರ್ವರಿಂದಮುಗ್ರಾಸುರರಿಂ
ದೊಡರಿಪ ನೋವಿಂ ಜೀವಂ
ಕಡುಗೋಟಲೆವಡುಗುಮಲ್ಲಿಗುಱಿ ನೆಱಿವಿನೆಗಂ ೧೨೨

ವ|| ಆನರಕಂಗಲೇೞಱಿಂ ಕೆಳಗನಿತ್ಯನಿಗೋದಮೆಂಬ ನರಕಮಿರ್ಪುದು ಅಲ್ಲಿಸೂಕ್ಷ್ಮಬಾದರ ಪರ್ಯಾಪ್ತಕಾ ಪರ್ಯಾಪ್ತಕಭೇದದಿಂ ಸೂಕ್ಷ್ಮವನಸ್ಪತಿಕಾಯಂ ಗಳಂತರ್ಮೂಹೂರ್ತದೊಳಗಱುವತ್ತಾಱು ಸಾಸಿರದ ಮುನ್ನೂಱ ಮೂವತ್ತಾಱು ಸೂೞಲ್ಲಿಯೆ ಸಾಯುತ್ತುಂ ಪುಟ್ಟುತ್ತುಮಿರ್ಕುಂ

ಉದಯಿಸುಗುಂ ನಿತ್ಯನಿಗೋ
ದದೊಲೇಕೇಂದ್ರಿಯಮೆ ಸಕಳವಿಕಳೇಂದ್ರಿಯಮಿ
ಲ್ಲದಱಿನೊಳ್ ಜೀವಂ ಕಡೆಯಿ
ಲ್ಲದ ದುಃಖವನುಣ್ಗುಮಶುಭಕರ್ಮದ ಫಳದಿಂ ೧೨೩

ವ|| ಎಂದು ಚತುರ್ಗತಿಸ್ವಭಾವಮಂ ಭಾವಿಸಿ

ಪಂಚಪಱಿಮಾಡಿ ಪಡೆಗುಂ
ಪಂಚತ್ವಮನಾವ ಗತಿಯೊಳಂ ಜವನೆಂದೇಂ
ಪಂಚಶರವೈರಿ ಪಡೆದನೊ
ಪಂಚತ್ವಂ ಪೊರ್ದದೆನಿಪ ಪಂಚಮಗತಿಯಿಂ ೧೨೪

ವ|| ಅನಂತರಂ ಭವಾಂತರಪರಿಚಿತಪರಮಾಗಮವಿಭಾಸಿಗಳುಂ ಬ್ರಹ್ಮ ಕಲ್ಪ ನಿವಾಸಿಗಳುಮಪ್ಪ ಸಾರಸ್ವತಾದಿತ್ಯವಹ್ನ ಗುಣಗರ್ದತೋಯತುಷಿತಾವ್ಯಾಬಾಧಾರಿಷ್ಟರೆಂಬೆಣ್ಬರುಂ ಜಗತ್ರಯಜಾಯನಭಿಪ್ರಾಯಮನವಧಿಬೋಧದಿಂದಮಱಿದು ಬಂದು

ಳಿಮಾಳಾಕೀರ್ಣಕಲ್ಪದ್ರುಮಸುರಭಿಲತಾಂತಂಗಳಿಂ ಪಾದಪೀಠ
ಸ್ಥಳಿಯಂ ಲೋಕಾಂತಿಕರ್ಪೂಜಿಸೆ ಜಿನತನುಗಂಧಕ್ಕೆ ಸೋಲ್ತಾಲತಾಂತಂ
ಗಳ ಕಂಪಂ ತುಂಬಿಗಳ್ ಮೆಚ್ಚದೆ ಬಿಸುಡೆ ಪದಾರಕ್ತಪದ್ಮಂ ನಖಾಂಶು
ಸ್ಥಲದಿಂ ಮಂದಸ್ಮಿತಂಬೆತ್ತುದು ಸುಖಿಜನಕಂ ರಾಗಿಗಂತ್ಯಾಪಕರ್ಷಂ ೧೨೫

ಇರೆ ಲೋಕಾಂತಿಕದೇವರ್
ಪರಿವೇಷ್ಟಿಸಿ ಮಲ್ಲಿನಾಥಜಿನನಾಥಂ ದಿ
ಕ್ಕರಿಗಿರಿಗಳ್ಬಳಸಿದ ಮಂ
ದರಪರ್ವತದಂತೆ ಪೆಂಪನೊಳಕೊಂಡಿರ್ದಂ ೧೨೬

ವ॥ ಅಂತಿರ್ಪುದುಂ

ಮುಕುಳೀತಪಾಣಿಪಲ್ಲವಪುಟರ್ಸ್ಮಿತಾನನಪದ್ಮರೆಂದರಂ
ತಕನಳವಂ ತ್ರಿಲೋಕದಟೆಪಂ ಪರಿಭಾವಿಸಿ ದೇವ ನೀಂ ಬರಂ
ಪ್ರಕೃತಿಗಳೆಣ್ಬುಮಂ ಕಿಡಿಸುಜ್ಜಗದೊಳ್ ತಱಿಸಂದರಾರಲೌ
ಕಿಕಮೆನಿಸಿತ್ತು ನಿನ್ನ ಮಹಿಮೋನ್ನತಿ ದರ್ಪಕದರ್ಪಭಂಜನಾ ೧೨೭

ನಾನಲ ಬಾನಲ ನೀರಂ
ಮೀನೊಲ್ಗುಂ ರಾಜಹಂಸನೊಲ್ಗುಮೆ ಮಿಥ್ಯಾ
ಜ್ಞಾನಿ ಭವಸುಖಮನೊಲ್ವವೊ
ಲೇನೊಲ್ಗುಮೆ ಪರಮಪಾವನಜ್ಞಾನಪರಂ ೧೨೮

ಕುರುಡಂ ಕೋಲಿಂ ಚರಿಯಿಸಿ
ಪರಿವೃತ್ತಿಯನಪ್ಪುಕೆಯ್ವವೋಲಿಂದ್ರಿಯದಿಂ
ದೊರೆಕೊಳ್ವಲ್ಪಜ್ಞಾನಂ
ಮರುಳೇ ಹಿತಮಲ್ತು ನಿನಗೆ ಪರಮಜ್ಞಾನೀ ೧೨೯

ವ॥ ಎಂದವರನುದಮೋದಿಸಿ ಪೋಪುದುಮಿತ್ತಲಮರಪತಿ ಚತುರ್ನಿಕಾಯಾ
ಮರೇಂದ್ರಪರಿವೃತಂ ಬಂದು

ಇದು ಜನ್ಮಾಭಿಷವಕ್ಕವತ್ಯಧಿಕವೆಂಬನ್ನಂ ಸುರಶ್ರೇಣಿ ನೀ
ಡಿದ ದುಗ್ಧಾರ್ಣವದುಗ್ಧಪೂರ್ಣಘಟಸಂಘಾತಂಗಳಂ ಕೊಂಡು ರಾ
ಗದ ಪೆರ್ಚಿಂದಭಿಷೇಕಮಂ ದಿವಿಜನಾಥಂ ಮಲ್ಲಿನಾಥಂಗೆ ಮಾ
ಡಿದನೆಂಟುಂ ದೆಸೆಯಂಪಳಂಚಲೆವಿನಂ ಗಂಭೀರಭೇರೀರವಂ ೧೩೦

ವ॥ ಎಂಬಿನಮಮರಪತಿ ಕಯ್ಗೆಯ್ದನಂತರಮಿಕ್ಷ್ವಾಕುಕುಳಕಮಳವನದಿನ ಪತಿಯೆನಿಪ್ಪ ಜಿನಪ

ಜನನೀಜನಕರನೇಗೊಳಿ
ಸಿ ನಿಖಿಳಬಂಧುಗಳನಂದೊಡಂಬಡಿಸಿದನೇ
ನನವದ್ಯಚರಿತನೆಲ್ಲರ
ಮನಕ್ಕಮನುಕೂಲನಪ್ಪುದೊಂದಚ್ಚರಿಯೇ ೧೩೨

ಬಾಜಿಸೆ ಮಂಗಳಾನಕಮನಾ ದಿವಿಜೇಂದ್ರಸದತ್ತ ಹಸ್ತದೊಳ್
ರಾಜಿಸೆ ಶೋಣಪಾಣಿಕಮಳಂ ಪರಿನಿಷ್ಕ್ರಮಣೋತ್ಸುಕಂ ಮರು
ದ್ವೀಜನಮಾರುತಂ ಕುರುಳಾನಾಡಿಸೆ ಮುಕ್ತಿವಧೂವಿವಾಹಗೇ
ಹಾಜಿರದಂತುಟಂ ಸಿವಿಗೆಯಂ ಭುವನತ್ರಯನಾಥನೇಱಿದಂ ೧೩೩

ವ॥ ಆಗಳ್

ನರವೃಂದಾರಕರುಂ ಖೇ
ಚರವೃಂದಾರಕರುಮುರಗವೃಂದಾರಕರುಂ
ಸುರವೃಂದಾರಕರುಂ ತರ
ತರದಿಂ ವೈವಧಿಕರುಯ್ವ ತೆಱದಿಂದುಯ್ದರ್ ೧೩೪

ವ॥ ಅಂತು ಬೆಳಗಲ್ಲದೆ ಬಿಸುಪಿಲ್ಲದಾದಿತ್ಯನುಮಂ ಕಾಂತಿಯಲ್ಲದೆ ಆಯ್ಕಿಲಿಲ್ಲದ ಚಂದ್ರಮನುಯ್ವಂತೋರೊರ್ವರೇೞಬಿಡಿಯನುಯ್ವೆಡೆಯೊಳ್

ಜವದಿಂ ಮುಯ್ವಿನೊಳಾಂತು ಕೊಂಡು ಗಗನಾಭೋಗಂಬರಂ ಕೀೞಪಾ
ಱುವ ದೇವರ್ಕಳ ದಿವ್ಯಮೌಳಿಮಣಿಮಾಳಾದೀಪ್ತಿಯುಂ ದಿವ್ಯರ
ತ್ನವಿಮಾನಪ್ರಭೆಯುಂ ಜಿನೇಂದ್ರತನುದಿವ್ಯಜ್ಯೋತಿಯುಂ ಧಾೞಿಯಿ
ಟ್ಟು ವಿಯಚ್ಚಕ್ರದೊಳಿಕ್ಕಿ ಮೆಟ್ಟಿದುವನಂತಾರ್ಕಪ್ರಭಾಚಕ್ರಮಂ ೧೩೫

ವ॥ ಅಂತು ಗಗನಮಾರ್ಗಂಬರಂ ನೆಗೆದು

ಧನದಂ ಶ್ವೇತವನಕ್ಕೆ ಭೂಷಣಮೆನಲ್ ರತ್ನಾಂಶುಭಾಸ್ವನ್ನಿಕೇ
ತನಮಂ ಮಾಡಿದನಾಗಳಲ್ಲಿಗೆ ಸುರಾಧೀಶರ್ಜಿನಾಧೀಶನಂ
ಮನದಿಂ ಬೇಗಮೆನಲ್ ಜಯಂತಶಿಬಿಕಾಸ್ಕಂಧರ್ವಿಚಿತ್ರಾನಕ
ಧ್ವನಿಗಳ್ ಘೂರ್ಣಿಸೆ ತಂದರಾರೊ ಬೆಸಕೆಯ್ಯರ್ವೃಣ್ಯ ಸಾಮರ್ಥ್ಯದಿಂ ೧೩೬

ಉಗುಳ್ವಪುದಿಂದ್ರಚಾಪಲತೆಯಂ ನವರತ್ನವಿತಾನಮಾಡಿದ
ತ್ತಗರುವ ಧೂಪಧೂಮಲತೆ ತುಂಬಿಯ ಗೀತದ ಮೆಯ್ಗೆ ಲಾಸ್ಯಮಂ

ಗಲನಿರುಳ್ಗೆ ಮಾಣಿಕದ ದೀವಿಗೆ ಕೈಸೆಜೆಗೊಟ್ಟುಮುತ್ತವಾ
ಗಳನಿಲಂಗೆ ಮಾಡಿದುವು ಮಾರ್ಗನಿರೂಢಮನಾ ನಿವಾಸದೊಳ್ ೧೩೭

ವ|| ಅಲ್ಲಿ

ಯಸಿದ ವಸ್ತುವಂ ಬಯಸಿದಾಗಳೆ ತರ್ಪುದು ದೇವಕೋಟಿ ದೇ
ಯರುಪಚಾರಮಂಗಳಶತಂಗಳನಾಚರಿಪರ್ಸುರೇಶ್ವರರ್
ಕ್ರಿಯಪರಿಚರ್ಯೆಯಂ ಪಿರಿದು ಮಾಳ್ಪಿರಸಲ್ ಪರಿಪೂರ್ಣ ಪುಣ್ಯಸಂ
ಚಯನೆನಲಲ್ಲದೇಪೊಗಟ್ಟೆ ಮಲ್ಲಿಜಿನೇಂದ್ರಮಹಾನುಭಾವಮಂ ೧೩೮

ವ|| ಅನಂತರಂ

ಪ್ರತಿಹಾರವೃತ್ತಿಯಿಂ ಸುರ
ಪತಿ ದೇವಾಸುರರ ನೆಗಟ್ಟೆ ಕಳಕಳಮನುದಂ
ಚಿತತರ್ಜನಿಯಿಂ ನಿಯಮಿಸಿ
ಹಿತಪರಿಚರ್ಯೋಪಚಾರಪರಿಣತಿವೆತ್ತಂ ೧೩೯

ವ|| ಆಗಳಲ್ಲಿ ಜಿನವಲ್ಲಭಂ ಪರಿನಿಷ್ಕ್ರಮಣಮಣಿಮಂಡಪಮಧ್ಯಸ್ಥಿತ ಚಂದ್ರಕಾಂತ-
ಶಿಳಾತಳಮನಳಂಕರಿಸಿ

ಭಾವನೆ ಶುಭಮೆನೆ ಸಮತಾ
ಬಾವಮನೊಳಕೊಂಡು ವಸ್ತ್ರಮಾಳಾಮಣಿಭೂ
ಷಾವಳಿಯಂ ನಿಜತನುವಿಂ
ದೇವರ ದೇವಂ ತ್ರಿಸಾಕ್ಷಿಯಿಂ ತೊಲಗಿಸಿದಂ ೧೪೦

ವ|| ಅಂತು ತೊಲಗಿಸಿ ಬದ್ಧಪಲ್ಯಂಕಾಸನಂ ಪೂರ್ವಾಭಿಮುಖನುಮಂತರ್ಮುಖನುಮಾಗಿ

ಜಯಶಾಲಿ ನಮಸ್ಸಿದ್ಧೇ
ಭ್ಯಯನುತ್ತುಂ ಪಜೆಯೆ ಜಿನಕುಮಾರಂ ಕುರುಳೋ
ಳಿಯನತ್ತಲ್ಪಜೆದಂ ದು
ರ್ಜಯಮೆನಿಸಿದ ಕುಸುಮಚಾಪನಳಿನೀ ಗುಣಮಂ ೧೪೧

ಇರುಳಶ್ವಿನಿನಕ್ಷತ್ರಂ
ದೊರೆಕೊಳೆ ಮಾರ್ಗಶಿರಶುದ್ಧಪೇಕಾದಶಿಯೊಳ್
ಧರಣೀ ಶರ್ಮೂ ಸೂರ್ವ
ರ್ವಸಸಥಂ ಜೈನದೀಕ್ಷೆಯಂ ಕೈಕೊಂಡಂ ೧೪೨

ಒಡನೊಡನೆ ದಿವಿಜಪತಿ ಮಣಿ
ಪಡಲಗೆಯೊಳಗಾಂತುಕೊಳ್ವುದುಂ ತೋಱಿಗುರುಳ್
ತಡವಾದುವಲ್ಲಿ ಕೀಲಿಸಿ
ಬೆಡಂಗನೊಳಕೊಂಡ ನೀಳಮಣಿಮಾಳಿಕೆವೋಲ್ ೧೪೩

ವ।। ಅಂತಾಂತುಕೊಂಡು ಪೋಗಿ

ಘೋರೆನೆ ಮಂಗಳಾನಕಶತಧ್ವನಿಗಳ್ ದಿವಿಜಾಧಿನಾಯಕಂ
ಕ್ಷೀರಸಮುದ್ರದೊಳ್ ಕೆದಱೆ ಕಣ್ಗೆಸೆದಿರ್ದುವು ಕಾಂತಕುಂತಳಂ
ತೀರತಮಾಳಪಲ್ಲವಶತಪ್ರತಿಬಿಂಬಮೊ ಭಾನುಭೀತಿಯಿಂ
ವಾರಿಧಿಯಂ ಶರಣ್ಬುಗುವ ಸಂತಮಸಂಗಳೊ ಪೇೞಿಮೆಂಬಿನಂ ೧೪೪

ವ।। ಅಂತು ಪರಿನಿಷ್ಕ್ರಮಣಕಲ್ಯಾಣಮಂ ನಿರ್ವರ್ತಿಸಿ ವಿವಿಧಾರ್ಚನೆಗಳಿಂದರ್ಚಿಸಿ ವಾಸವಂ ನಿಜನಿವಾಸಕ್ಕೆ ಪೋಪುದುಮಾ ಮುನೀಶ್ವರಂ ಷಷ್ಠೋಪವಾಸಿನಿಯುಮನಿಯಮಿತನಾಗಿರ್ಪುದುಂ

ಕರೆಗಣ್ಮುವ ಶಾಂತರಸಾಂ
ಬುರಾಶಿಯೊಳ್ ಬೆಂಡುನೆಗೆದ ಮತ್ಸ್ಯಂಗಳವೋಲ್
ಅರೆಮುಗುಳ್ದ ಕಣ್ಗಳೇಂ ಸುಂ
ದರಮಾದುವೊ ಮಲ್ಲಿನಾಥಜಿನಪುಂಗವನಾ ೧೪೫

ಮೀನಕ್ಷೋಭವಿಹೀನಮಾನಸದವೋಲಚ್ಛಾನನಂ ಮಂದರಂ
ತಾನೆಂಬಂತೆ ವಿನಿಶ್ಚಳಂ ತನು ಶರಚ್ಚಂದ್ರಾಂಶುವೋಲ್ ನಿರ್ಮಳ
ಧ್ಯಾನಂ ಕೂಡೆ ಸಮಾಧಿಸೌಷ್ಠವದೊಳಿರ್ಪನ್ನಂ ಮನಃಪರ್ಯಯ
ಜ್ಞಾನಂ ತನ್ಮುನಿಪಂಗೆ ಪುಟ್ಟಿದುದು ನಿರ್ವಾತಪ್ರದೀಪೋಜ್ಜ್ವಳಂ ೧೪೬

ವ।। ಅಂತು ದೀಕ್ಷಾನಂತರ ಚತುರ್ಥಜ್ಞಾನಧರನಾಗಿ ಪಾರಣಾದಿನದೊಳ್

ನಗರಾರಣ್ಯವಿಶೇಷಂ
ಬಗೆಗಿಲ್ಲೆನೆ ಕಾಲನಿಯಮದೊಳ್ ಬನದಿಂ ಚ
ರ್ಯೆಗೆ ಪೊಱಮಟ್ಟಂ ಮುನಿ ತ
ನ್ನಗವಸಮಂ ದ್ರುತವಿಳಂಬಿತಂ ಪೊರ್ದದೆನಲ್ ೧೪೭

ಯುಗಮಾತ್ರಕ್ಷೇತ್ರಮಂ ಕಣ್ಪರಿಕಿಸೆ ನಡೆದೀರ್ಯಾವಿಶುದ್ಧಿಕ್ರಮಂ ಕೈ
ಮಿಗೆ ಮೇರುಕ್ಷ್ಮಾಚಳಂ ಬಂದಪುದೆನೆ ಮಿಥಿಳಾವೀಧಿಯೊಳ್ ಪಾದಪದ್ಮಾಂ

ಗಳಿಂ ಪುಷ್ಪೋಪಹಾರಂ ದ್ವಿಗುಣಿಸೆ ಬಟಿಸಂದೆಲ್ಲರುಂ ಭಕ್ತಿಯಿಂ ಕೈ
ುಗಿವನ್ನಂ ನಂದಿಷೇಣಕ್ಷಿತಿಪತಿಯ ಗೃಹದ್ವಾರದೇಶಕ್ಕೆ ವಂದಂ ೧೪೮

ವವುತ್ತಿರ್ನ್ನೆಗಂ ಮಂಗಳಪಟಹರವಂ ಮಂಗಳದ್ರವ್ಯಮಂ ತಾ
ದ ಪುಣ್ಯಸ್ತ್ರೀಜನಂ ಸುತ್ತಿಱಿದು ಬಗೆ ಗೃಹದ್ವಾರಮಂ ಬಳ್ಳಿಮಿಂಚಿಂ
ದಿಯುತ್ತುಂ ತನ್ನ ತೊಟ್ಟಾಭರಣಕಿರಣದಿಂದರ್ಘ್ಯಪಾದ್ಯಂಗಳಂ ಕೊಂ
ದಿರ್ವಂದಂ ನಂದಿಷೇಣಂ ಜಿನನಿಗದಿತಕಲ್ಯಾಣಮಾರ್ಗಪ್ರವೀಣಂ ೧೪೯

ಉಪಭೋಗದ್ರವ್ಯಮಂ ಶಾಶ್ವತಮೆನಿಸಿದುವಂ ಬೇಡಿದರ್ಗೀವ ಕಲ್ಪಾಂ
ಪಮಂ ದುರ್ಮೋಹಮಂ ಪುಟ್ಟಿಸುವ ನಿಧಿಗಳಂ ಕಂಡುಮೇಬಾೞಿಂ
ಪವರ್ಗಶ್ರೀಯನೀಯಲ್ ನೆಱೆದ ಮುನಿಪದಾಂಭೋಜಮಂ ಕಂಡು ಹರ್ಷಾ
ರ್ಪಯಃಪೂರಂಗಳಿಂ ಪಾದ್ಯಮನೊಡರಿಸಿದಂ ಸೂಕ್ತಿಮುಕ್ತಾವತಂಸಂ ೧೫೦

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಪುರಾಣದೊಳ್
ಪರಿನಿಷ್ಕ್ರಮಣಕಲ್ಯಾಣವರ್ಣನಂ ತ್ರಯೋದಶಾಶ್ವಾಸಂ ಸಮಾಪ್ತಂ



# ಚತುರ್ದಶಾಶ್ವಾಸಂ

ಶ್ರೀಪದಮನೀವ ಮುನಿಪ
ಶ್ರೀಪದಮಂ ಪಂಚಮುಷ್ಟಿಯಿಂ ಬಂದಿಸಿ ವಾಕ್
ಶ್ರೀಪತಿ ಶಶಿವಿಶದಯಶ
ಶ್ರೀಪತಿ ಸಂತುಷ್ಟನಾದನಭಿನವಪಂಪಂ ೧

ವ।। ಅಂತು ಮುನಿಪದಪಯೋಜಪಾಂಸುವಿಂ ನಿಜಲಲಾಟಪಟ್ಟದೊಳಪವರ್ಗವಿಳಾಸಿನೀವಶ್ಯ-
ತಿಳಕಮಂ ತಳೆದು ನಿಲಿಸಿ

ಮಣಿಖಚಿತಾಸನದೊಳ್ ಮುನಿ
ಗಣಪತಿಯಂ ನೃಪತಿ ತಂದು ಕುಳ್ಳಿರಿಸೆ ನಭೋ
ಮಣಿ ಪೂರ್ವಾಚಳಚೂಡಾ
ಮಣಿಯೆನಿಸಿದನೆಸೆ ಪೊದಟ್ಟುದಪಘನಕಿರಣಂ ೨

ಮುನಿಮುಖ್ಯಪದಪ್ರಕ್ಷಾ
ಳನಾಂಬುಕಣಮುತ್ತಮಾಂಗದೊಳ್ಸೊಗಯಿಸೆ ಮು
ತ್ತಿನ ಸೇಸೆಯಂತೆ ರೋಮಾಂ
ಚನಿಚಿತಸರ್ವಾಂಗನಾದನಭಿನವಪಂಪಂ ೩

ಜಳಗಂಧಾಕ್ಷರತಕುಸುಮಾ
ವಳಿಯಿಂ ಚರುದೀಪಧೂಪಫಳದಿಂ ತ್ರಿಜಗ
ತ್ತಿಳಕನನರ್ಚಿಪ ನೃಪಂ
ತಳೆದನದೇನಧಿಕಪುಣ್ಯನಿಧಿಯೊ ನೃಪಾಳಂ ೪

ವ।। ಅಂತರ್ಚಿಸಿ ಭಕ್ತಿಭರದಿನಜಗಿರ್ಪುದುಂ

ಇವು ಪಾರಿಜಾತಪಲ್ಲವ
ನವೋದ್ಗಮಸ್ತಬಕಮೆಂಬಿನಂ ಕರ್ಣಯುಗ

ಕ್ಷವತಂಸಮಾಗೆ ಮುನಿ ಪರ
ಸುವುದುಂ ಪರಕೆಗಳನಾಂತನಭಿನವಪಂಪಂ ೪

ವ|| ಅನಂತರಂ

ಜನಪಂ ಪಾಯಸಮಂ ತಣೆ
ವಿನೆಗಂ ತ್ರಿಕರಣವಿಶುದ್ಧಿಯಿಂದಿಕ್ಕಿದನಾ
ಮುನಿಪತಿಯ ಸಮುತ್ತಾನಿತ
ಮೆನಿಸಿದೇ ವಿಶಾಳಪಾಣಿಪಲ್ಲವಪುಟದೊಳ್ ೬

ವ|| ಆಗಳ್

ರೈವೃಷ್ಟಿ ಕುಸುಮವರ್ಷಂ
ದೇವರಹೋದಾನಘೋಷಣಂ ಹಿಮಪವನಂ
ದೇವಾನಕರವಮೊದವೆ ನೃ
ಪಾವಾಸದೊಳೊಗೆದುದಿಂತು ಪಂಚಾಶ್ಚರ್ಯಂ ೭

ವ|| ಅಂತು ಮಲ್ಲಿನಾಥಮುನಿನಾಥಂ ಸಂಯಮರಕ್ಷನಾತರಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಪರಸಿ ಪೋಪುದುಂ

ಕಳಿಪುತ್ತುಂ ಭೂಪಾಳಂ
ನೆಬಿಲಂತೊಡನೊಡನೆ ನಡೆದು ಬೀಳ್ಕೊಳಿಸಿದೊಡಂ
ಪಱುವಂ ಪುಗುವನ್ನಂ ಕ
ಣ್ಬಟಿವಟೆಯಂ ಪರಿಯೆ ನಿಂದು ನೋಡುತ್ತಿರ್ದಂ ೮

ಯತಿಯೊಳಳವಟ್ಟ ಗುಪ್ತಿ
ತ್ರಿತಯಮುಮಂ ಚರಮತನುವಿಳಾಸಮುಮಂ ಭೂ
ಪತಿ ಪಂಬಲಿಸುತ್ತುಂ ವಿ
ಸ್ಮಿತಚಿತ್ತಂ ನಿಜನಿವಾಸದತ್ತೇಟ್ಟಿಂದಂ ೯

ಪಡೆದಂ ದಾನಮನೀಯಲಾಪರಮಯೋಗೀಂದ್ರಂಗೆ ರೈವೃಷ್ಟಿಯಂ
ಪಡೆದಂ ದಾನದ ಪೆರ್ಮೆಯಿಂ ಪಡೆದುದಂ ಸನ್ಮಾನದಿಂದಂ ಕುಡಲ್
ಪಡೆದಂ ಬೇಟ್ಪ ಜನಕ್ಕೆ ಕೊಟ್ಟು ಜಸಮಂ ಚಂದ್ರಾರ್ಕತಾರಂಬರಂ
ಪಡೆದಂ ನೆಟ್ಟನೆ ನಂದಿಷೇಣನೆ ವಲಂ ಧನ್ಯಂ ಪೆಜರ್ ಧನ್ಯರೇ ೧೦

ವ|| ಅತ್ತಲಾ ಶ್ವೇತವನದೊಳಾ ತಪೋನಿಧಿಯ ಸನ್ನಿಧಿಯೊಳ್

ಕರಿಗಳ್ಕೇಸರಿಗಳ ಕೇ
ಸರಮಂ ಕರಪುಷ್ಕರಂಗಳಿಂ ತೊಡೆದುವು ಕೇ
ಸರಿಗಳ್ ಖರನಖರದಿನೋ
ಸರಿಸಿದುವು ಮದೇಭಗಂಡಕಂಡೂತಿಗಳಂ ೧೧

ಎರಲೆಯ ಕೋಡಿಂ ಕಣ್ಣಂ
ತರಕ್ಷು ತುಱಿಸಿದುವು ನೆಱೆದು ಸಿಂಗದ ಮಱಿಗಳ್
ಶರಭದ ಕೆಲದೊಳ್ ನಲಿದುವು
ನಿರವದ್ಯಚರಿತ್ರನಿರ್ದಖುಷ್ಯಾಶ್ರಮದೊಳ್ ೧೨

ಮದವನ್ಮಾತಂಗಮಂ ಸುತ್ತಿದುವು ಪೊರಜೆಯಂ ಸುತ್ತಿದಂತಾಗೆ ಸಾರಂ
ಗದಕೋಡಂ ಸುತ್ತಿ ಕೊಂಡುಯ್ಯಲನೊಲೆದುವು ದೂರ್ವಾಲತಾ ಷಂಡದೊಳ್ ತಂ
ಡದಿನಾಡುತ್ತಿರ್ಪವೊಲ್ಲೋಗೆಗಳ ಮಡೆಯ ಕಣ್ಬೇಲಿಯಂ ಪೊಕ್ಕುವಾಜ
ನ್ಮದ ವೈರಂ ಪಿಂಗೆ ಪುಣ್ಯಾಶ್ರಮಿಯ ಮಹಿಮೆಯಿಂ ಕ್ರೂರಕಾಳೋರಗಂಗಳ್ ೧೩

ಎಸಟಿಂ ಮುಟ್ಟದೆ ತುಂಬಿ ಪುಷ್ಪರಜಮಂ ಕೊಳ್ಗುಂ ಪಿಕಂ ಪಕ್ವಮಾ
ಗಿ ಸಡಿಲ್ದಲ್ಲುಗುತಿರ್ಪ ಪಣ್ಣ ರಸಮಂ ಪೀರ್ಗುಂ ರತಾಂಗಂ ರತ
ವ್ಯಸನಂಗೆಟ್ಟೆಳಸಿರ್ಕುಮಂಚೆ ಸವಿಗುಂ ಸ್ವಚ್ಛಾಂಬುವಂ ಚಂಚುವಿಂ
ತ್ರಸಮಂ ಬಂಚಿಸಿ ದೇವನಿರ್ದ ಬನದೊಳ್ ಸತ್ಲೇವೆ ಸಾಮಾನ್ಯಮೇ ೧೪

ವ॥ ಮತ್ತಮಾ ತಪೋವನದೊಳ್

ಸ್ಮರಚಾರಂಸ್ವೈರಚಾರಂ ಶಿಶಿರಮರುತನಂಭೋಜಿನೀರಾಜಿಯೊಳ್ ಸಂ
ಚರಿಸುತ್ತುಂ ಮಾಧುವೀಮಂಡಪದೆಡೆಗಳೊಳಾರಯ್ಯುತುಂ ಪುಷ್ಪಲೀಲಾ
ಸ್ತರಣಸ್ಥಾನಂಗಳೊಳ್ ಕಾಮುಕರನಱಸುತುಂ ಬಂದು ನಿಷ್ಪನ್ನಯೋಗೀ
ಶ್ವರನಂ ತನ್ನಾಳ್ದನಂ ಕಾಮನನುಱದೆ ತಪಂಗೆಯ್ವನಂ ನೋಡಿ ಕಂಡಂ ೧೫

ವ॥ ಕಂಡೀ ಬನಮಪ್ಪೊಡೆ ಮನೋಜರಾಜನೆಱೆವಟ್ಟು ಈ ಬನಮನಂಜದೆ ಪೊಕ್ಕು ವಿಜುಗೀಷುವೃತ್ತಿಯನೇಕಾಂಗದೊಳ್ ಮೆಱೆದು ತಪೋರಾಜ್ಯಮದ ದೊಳ್ಮೆಯ್ಯಱಿಯದೆ ನಿಂದನಿದನೆಮ್ಮರಸಂಗಱಿಪುವೆನೆಂದು ಬಂದು

ಸಾರಸಚಾರಣಸ್ತವನದಿಂ ಕಳಕೋಕಿಳನಿಸ್ವನಪ್ರತೀ
ಹಾರನಿನಾದದಿಂ ಸ್ತಬಕಮಂಗಳಪರ್ದಣದಿಂ ಶುಕಾವಳೀ
ತೋರಣದಿಂ ವಿಚಿತ್ರತರಪತ್ರದಿನೊಪ್ಪುವುದಂ ಲತಾಗೃಹ
ದ್ವಾರಮನಂದು ಪೊಕ್ಕನಲಗೋರ್ಣಿಂಚಲೆ ದರ್ಶನಮಾಗೆ ಮಾರುತಂ ೧೬

ವ|| ಅಂತು ಪೊಕ್ಕದಱ ನಡುವಣ ದವಸದ ಮರುಗವ ಮಂಡಪದೆ ವೇದಿಕಾಮಧ್ಯಭಾಗದೊಳ್

ಅಲರಂಬಂ ತಿರುಪುತ್ತುಮೊಯ್ಯನಲರ್ವಿಲ್ಲಂ ನೋಡಿ ಪೆರ್ಚುತ್ತುಮು
ಳ್ಳಲರ್ದಂಭೋರುಹಪೀಠದೊಳ್ ನೆಲಸಿ ತನ್ನಂ ಸೋಂಕಿ ಕುಳ್ಳಿರ್ದು ಪೆ
ರ್ಮೊಲೆಯೊತ್ತಿಂ ರತಿ ಮೆಯ್ಗೆ ಮಾಡೆ ಪುಳಕಪ್ರೋದ್ಭೇದಮಂ ಪಾಡುತಿ
ರ್ದಳಿನೀಗೀತರವಕ್ಕೆ ಮೆಚ್ಚಿ ತಲೆದೂಗುತ್ತಿರ್ದನಂಗೋದ್ಭವಂ ೧೭

ಇರೆ ದಕ್ಷಿಣದೊಳ್ಪಿಧು ಮಧು
ವಿರೆ ವಾಮದೊಳಸಿತಸಿತಸರೋಜಾಸನದೊಳ್
ಪರಿಜನಮನಿತುಂ ಸುತ್ತಲು
ಮಿರೆ ತಂತಮ್ಮಿರ್ಪ ತಾಣದುಚಿತಾಸನದೊಳ್ ೧೮

ವ|| ಅಂತಿರ್ದ ಮನಸಿಜಚಕ್ರವರ್ತಿಯನೆಯ್ದೆ ವಂದು ಸರ್ವಾಂಗಪ್ರಣತನಾಗಿ ತನ್ನ ಮೇಲ್ಕೊಂಡ ಸರಸಿಜಪರಾಗಪಲ್ಲವಮಂ ಮುಖಕ್ಕೆ ಕವಿದು

ಇದನೊಂದಂ ಕಂಡೆನಾಶ್ಚರ್ಯಮನಖಿಳಮನಾಟಂದ ನಿನ್ನೀ ಭುಜಾಗ
ರ್ವದಗುರ್ವಂ ದೇವ ಪುಲ್ಲಿಂ ಲಘುವೆನೆ ಬಗೆದೇಕಾಂಗದೊಳ್ಕಾದುವುದ್ಯೋ
ಗದೊಳಿರ್ದಂ ಪುಷ್ಪಚಾಪಾಂಚಿತಮಧುಕರಮೌರ್ವೀಲತಾಟಂಕೃತಕ್ಕ
ಳ್ಕಿದ ಗೌರೀನಾಥನಿಂ ತಾನಧಿಕನೆ ಜಡನೇಗಜ್ಜಮಂ ಪಣ್ಣಿಕೊಂಡಂ ೧೯

ಕರಣಗ್ರಾಮಂಗಳಂ ತೂತ್ತುಱೆದುಱಿದು ಮನೋಭಂಗಮಂ ಮಾಡುವೆಂ ದೇ
ವರ ತೇಜೋರೂಪಮಂ ಕ್ರೋಧಮನಳಱೆಸುವೆಂ ಮಾನಮಂ ಮೀಱುವೆಂ ಸಂ
ಹರಿಪೆಂ ಮಾಯಾಪ್ರಪಂಚಂಗಳನದಟಲೆವೆಂ ಲೋಭಮಂ ಕಾಮನಂ ಪೋ
ಬರವೇಱೆಂದೆನ್ನನಾಳರ್ಪಿಸಿ ಪರಮತಪೋಗರ್ವದಿಂದೊರ್ವನಿರ್ದಂ ೨೦

ವ|| ಎಂದು ಬಿನ್ನಪಂಗೆಯ್ಯಲೊಡಂ

ಕಡೆಗಣ್ಕೆಂಪೇಱೆ ನಾಸಾಮುಕುಳವಲರೆ ಬಾಯ್ಕೆತ್ತೆ ಗಂಡಸ್ಥಳಂಗಳ್
ಬಿಡೆ ಘರ್ಮೋದಂಗಳಂ ಪುರ್ವಡರೆ ಪೊಡರೆ ಕಾಯ್ಪಿಂಗಡರ್ಪಾದ ಮೆಯ್ಗಂ
ನಡುಕಂ ಮೆಯ್ವೆರ್ಚೆ ದೂತಂ ನುಡಿದ ನುಡಿಗಳಂ ಕೇಳ್ದು ಕೋಪಾವಲೇಪಂ
ಸಿಡಿಲಂತಾಸ್ಥಾನದೊಳ್ ಗರ್ಜಿಸಿದನೊದವಿದಾಕ್ಷೇಪದಿಂದಿಕ್ಷುಚಾಪಂ ೨೧

ಆನತನಾಗಿ ಬೆರ್ಚಿ ಬೆಸಕಯ್ಯದನಾವನೊ ನಾಗಲೋಕದೊಳ್
ಮಾನವಲೋಕದೊಳ್ ದಿವಿಜಲೋಕದೊಳೆನ್ನಲರಂಬಿವಾರನಾ
ಲೂನವಿಶೀರ್ಣಮಾಗಿಸದನಿಲ್ಲೆನಗಂ ಗಡ ವಕ್ರನೊವೇನಂ
ಜೀ ನುಡಿಗೇಳ್ವೆನೆಂದು ವಿಳಯಾನಳನಂತುರಿದೆರ್ದನಂಗಜಂ ೨೨

ವ॥ ಆಗಳಂಗಜಂಗಭಿಮುಖಿನಾಗಿ

ಮಲ್ಲಿಕಾಮುಕುಳದಂತಕಾಂತಿಗಳ್
ಮೆಲ್ಲಮೆಲ್ಲನೆ ಪೊದಟ್ಟು ತೋರ್ಪಿನಂ
ಪಲ್ಲವಾಧರದ ಮೇಲೆ ಮಾಧವೀ
ವಲ್ಲಭಂ ನುಡಿದನೆರ್ದು ಮಾಧವಂ ೨

ಅವಿಚಾರಂ ತ್ರಿಪತಾಕೆ ನಿನ್ನ ನೊಸಲೊಳ್ ತೋರ್ಪನ್ನೆಗಂ ಕೂರ್ಪು ದೋ
ರ್ಪವನಾವಂ ನಿಜನಾಮಮೆಯ್ದೆ ಕಿವಿಯಂ ದಿಙ್ಮೂಢನಾಗಿರ್ದು ಮಾ
ಧವನಿಂ ಮಾಧವನಿಂ ವಚೋಧವನಿನಾವಂ ಬಲ್ಲಿದಂ ನೀಂ ಬರಂ
ಬವರಂ ಬರ್ಕುಮೆ ಸೋಲಿಸಲ್ಕುನಿಪನಂ ಚೂತಾಂಕುರಂ ಸಾಲದೇ ೨

ಜಡಿದಂಜಿಸುಗುಂ ಕೋಗಿಲೆ
ನುಡಿದಂಜಿಸುಗುಂ ಶುಕಂಗಳಂಚೆಗಳಿದಿರೊಳ್
ನಡೆದಂಜಿಸುಗುಂ ಲತೆಗಳ್
ತೊಡರ್ದಂಜಿಸುಗುಂ ಮನೋಜ ನಿನಗಂಜದರಾರ್ ೨

ವ॥ ಅದಱಿಂ ದೇವ ನಿಜರಾಜಪರಿಜನದೊಳಾರಂ ಬೆಸಸಿದೊಡಮವರೆ ಸಾಲ್ವರೇಕಾಕಿ
ತಾಪಸಂಗೆ ಮುನಿದು ನಡೆವನಿತುವೇಡೆಂದೊಡಾ ನುಡಿಯನವಕರ್ಣಿಸಿ ನನೆಗಣೆಯ
ದೊಣೆಯುಂ ಬಿಗಿದು ಕಂಕೆಲ್ಲಿಪಲ್ಲವದ ಕಯ್ಪೊಡೆಯುನಳವಡಿ
ಸಹಕಾರಕೋರಕದಂಗುಳಿತ್ರಾಣಮಂ ತೊಡರ್ಚಿ ಮೃದುಮೃಣಾಳಿಕೆಯ ಪಣೆಗಟ್ಟಂ ಕ
ಮಾಧವೀಮಧುಬಿಂದುವಿನ ತಿಳಕಮನಿಟ್ಟು ಮುಱುಂ ಜಗಮನೇಱಗಿಸಿದ ತ
ತೋಳ್ವಲಮನಲ್ಲದೆ ನೆರಮನಾಸೆಗೆಯ್ಯದೆ ನಡೆವೆಡೆಯೊಳ್

ಪದಸ್ಖಳಮಾದುದಂಚೆಗಿದಿರೊಳ್ಪಿಕಂ ವಕ್ರಮಂ
ತೊವಳ್ನುಡಿದುದಾದುದಾಜಡಿಯೊಳಾದ ಕೋಳಾಹಳಂ
ವಿದಾರಿಸಿದುವಾಮ್ರಕೋರಕಶತಂಗಳಿಂದುರ್ಣಿಯಂ
ಪೊದಱ್ದೊಡಮವರ್ಕೆ ನಿಟ್ಟಿರಿಸದುರ್ಕಿ ಬಂದಂ ಸ್ಮರಂ ೨

ವ॥ ಅಂತು ಬಂದು ಮುನಿಪತಿಯಿರ್ದಶೋಕದ್ರುಮದ ಮುಂದಣ ತಮಾ
ಷಂಡಮನೊಳಕೊಂಡು ಮಂದರಮಹೀಧರದಂತಿರ್ದ ಮುನಿಯ ಮನ
ತೆಱಪುಗಾಣದಲ್ಲಿಂ ಪೊಱಮಟ್ಟು ವಶೀಕರಣವಿದ್ಯಾದೇವತೆಗೆ ಪೊಡವಟ್ಟು

ಪೂವಿನ ಬಿಲ್ಲ ಕೊಪ್ಪನೊದೆದೇಱಿಸಿ ತಾವರೆನೂಲ ನಾರಿಯಂ
ಜೇವೊಡಗೆಯ್ದು ಪೂಗಣೆಗಳಯ್ದುಮನೊರ್ಮೆಯ ಪೂಡಿಕೊಂಡು ಕ

ರ್ಣಾವಧಿಯಾಗೆ ತೀವಿ ತೆಗೆದುದ್ಘತನೆಂತುಮಸಾಧ್ಯಮಪ್ಪುದಂ
ಭಾವಭವಂ ನಿರೀಕ್ಷಿಸಿದನಾಮುನಿಮುಖ್ಯನ ಚಿತ್ತಲಕ್ಷ್ಯಮಂ ೨೭

ವ॥ ಅಂತು ನೋಡಿ ನಡುವಗಲಿನಾದಿತ್ಯನಂ ನೋಡಿದಂತಸರಪಸರಂ ಬಡೆಯದೆ

ಚರಮಶರೀರಮಂ ನಡುವ ಕಯ್ದುಗಳಿಲ್ಲ ಮನಕ್ಕೆ ವಜ್ರಪಂ
ಜರಮೊದವುಟ್ಟಿದಂತಿಸುವೆನಾವುದನೆಂದು ಮನೋಭವಂ ಭಯ
ಜ್ವರವಶವರ್ತಿಯಾಗಿ ನಡುಗುತ್ತಿರೆ ದಕ್ಷಿಣವಾಮಪಾಣಿಗಳ್
ಪರವಶಮಾಗೆ ಬಿರ್ದವು ಲತಾಂತಶರಂಗಳುಮಿಕ್ಷುಚಾಪಮುಂ ೨೮

ಬಿದಿರೊಳ್ಪುಟ್ಟಿದ ಕಿಚ್ಚಿನಂತೆ ಸುಡೆ ತನ್ನಂ ತನ್ನ ಕೋಪಾನಳಂ
ಮದನಂ ಮುನ್ನಮೆ ಬೆಂದು ತನ್ಮುನಿಯ ಬೋಧಾಳೋಕಸೌಧಾಂಬುವಾ
ಹದಯಾವರ್ಷಣದಿಂ ಕ್ಷಣಂ ತಡೆವನೇ ತಣ್ಣೀರ್ಗಳಿಂ ಬೇವ ಸು
ಣ್ಣದ ಕಲ್ಲಂತಿರೆ ಬೆಂದನುಣ್ಮೆ ಸುರಪುಷ್ಪಾಸಾರಭೇರೀರವಂ ೨೯

ಮದನಂ ಶ್ರೀಮಲ್ಲಿಭಟ್ಟಾರಕನ ವಿಮಳಬೋಧಾನಳಜ್ವಾಳೆಗಳ್ ಸೋಂ
ಕದ ಮುನ್ನಂ ತತ್ತಪೋರಾಶಿಗೆ ಪುಲಿವರೆದತ್ತಂಬಿನಂ ಬೂದಿಯಾಗಿ
ರ್ಪುದುಮಾಗಳ್ ಮೋದಿಕೊಂಡಳ್ ರತಿಮತಿಮಜಿದಳ್ ಮೆಯ್ಯನೀಡಾಡಿದಳ್ ಕೆ
ಳ್ಗುದಿಗೊಂಡಳ್ಕಣ್ಣನೀರ್ಗಳ್ ತೆರೆಮಸಗುವಿನಂ ಮಾಣದಟ್ಟಿಳ್ ಬೆಮರ್ತಳ್ ೩೦

ಪುಲಿಯುಂ ಪುಲ್ಲೆಯುಮಾದಿಯಾಗ ಭವಬದ್ಧಕ್ರೋಧಮಂ ಕೋಟ್ಕೆಗಂ
ಪಲವುಂ ಬಿಟ್ಟವು ತನ್ನ ಸನ್ನಿಧಿಯೊಳೀ ಶಾಂತಾತ್ಮನೆತ್ತನ್ ಕಾ
ದಲನಂ ಮನ್ಮಥನಂ ತೃತೀಯನಯನಕ್ಕಾಪ್ರೋಶನಂಮಾಡ್ಪುದೆ
ತ್ತಲೆನುತ್ತುಂ ಪಲವಂ ಪಲುಂಬಿ ರತಿ ಹಾಹಾಕ್ರಂದನಂ ಮಾಡಿದಳ್ ೩೧

ಬಜವಜಬತ್ತೆ ಬಾಯ್ ಬೆರಲ ಬಾಸುಳ ಪದ್ಧತಿ ಮಧ್ಯಮೊಳ್ಪುಗಂ
ಡಿಜಿದಿರ ಕಣ್ಣನೀರ್ಗಳ ಪೊನಲ್ಕರೆಗಣ್ಮೆ ಕಪೋಳದೊಳ್ ಬಯ
ಲ್ಪೊಜಿಯನೊಡರ್ಚೆ ಶೋಕರಸದಿಂ ರತಿ ವಿಹ್ವಳೆ ಮುಚ್ಚೆವೋಗಿಮೆ
ಯ್ಯಜಿಯಳೆ ಜೋಗಿ ಮೂಜನೆಯ ಕಣ್ಣುರಿಯಿಂ ಸುಡೆ ಕಾಮದೇವನಂ ೩೨

ಆಲಿಪರಾರೊ ತುಂಬಿಗಳ ಗೀತಮನುನ್ಮದರಾಜಹಂಸಲೀ
ಲಾಲಸಯಾನಮಂ ಬಯಸಿ ನೋಟ್ಪಿಪರಾರೊ ಬಸಂತನಿರ್ಪನಾ
ರೋಲಗದೊಳ್ ವಶೀಕರಣಸಾಯಕದಿಂ ಭುವನತ್ರಯಂಗಳಂ
ಸೋಲಿಪರಾರೊ ನೀಂ ಪುಗೆ ಯಮಾನನಮಂ ರತಿಜೀವಿತೇಶ್ವರಾ ೩೩

ಬಿರಿಮುಗುಳಾರ್ಗೆ ಕೂರ್ಗಣೆಗಳಪ್ಪುವೊ ಕರ್ಬಿನ ಬಿಲ್ಲನಾವನೋ
ಸರಿಸುವನಾರ ಮುಂದೆ ಪರಿಗುಂ ಮಕರಧ್ವಜಮಾರೊ ಮಾಡುವರ್

ಸರಸಿಜಸೂತ್ರದಿಂ ದೊಣೆಯುಮಂ ರತಿ ಲಾಸ್ಯಮಾನಾರ್ಗೆ ತೋರ್ಪಳಾ
ರರಗಿಳಿಯೋದನಾಲಿಪರೊ ನೀಂ ಗತಜೀವಿತನಾಗೆ ಮನ್ಮಥಾ ೩೪

ನೀರಸನಪ್ಪ ತಾಪಸನ ತೋಟಿಯೊಳೋಪನದೃಶ್ಯಮಾಗೆ ಸಂ
ಸಾರಮಸಾರಮಾದುದಬಳಾಜನಮೇ ಮುಖಚಂದ್ರಚಂದ್ರಿಕಾ
ಸಾರದರ ಸ್ಮಿತಾಮೃತಘನಸ್ತನಕಾಂಚನಕುಂಭಪೂರ್ಣಶೃಂ
ಗಾರರಸಂಗಳಿಂ ಮಗುಟಿ ಪುಟ್ಟಿಸಲಾಗದೆ ಕಾಮಧೇವನಂ ೩೫

ಎನ್ನ ಕುರುಳ್ಗಳಂ ತಳದೊಳೊತ್ತದೆ ಹೇಮಸರೋಜರೇಣುವಿಂ
ದೆನ್ನ ಲಲಾಟಪಟ್ಟಿಕೆಗೆ ಬೊಟ್ಟಿಡದುತ್ಪಳಪತ್ರಭಂಗದಿಂ
ದೆನ್ನ ಕದಂಪನರ್ಚಿಸದೆ ನಿನ್ನ ಮನೋನಯನಕ್ಕೆ ತಳ್ಪಮಾ
ದೆನ್ನನಗಲ್ದು ನೀಂ ಕಳಿಯೆ ಮನ್ಮಥ ಬೆನ್ನನೆ ಬಾರದಿರ್ಪನೇ ೩೬

ವ|| ಎಂದು ಶೋಕಶಂಕುಪಾತಂದಿದಟಿಯೆ ನೊಂದು

ಸ್ಮರನ ವಿಯೋಗದೊಳ್ ನೆಗೆದ ಶೋಕದ ದಳ್ಳುರಿ ಸುತ್ತಿ ಮುತ್ತೆ ಮೆಯ್
ಪರವಶಮಾಗೆ ಮೋಹಿಸೆ ಮನಂ ನಯನಂ ನಸುಮುಚ್ಚಿವಕ್ರಮಾ
ಗಿರೆ ಗಳಕಂದಳಂ ರತಿಗುಸಿರ್ ತವೆ ಪೂವಿನ ಕಂಪು ಪಿಂಗುವಂ
ತಿರದಸಂ ಪೋದುದೋಪರೊಡಸಾವುದು ಸೈಪಿನೊಳಲ್ಲದಕ್ಕುಮೇ ೩೭

ವ|| ಅಂತು

ಅವಗುಣನೆನಿಪ್ಪ ಕಾಮಂ
ಗವಸಾನಮನೀಯೆ ರತಿಯುಮೊಡನಟಿಯೆ ಮುನಿ
ಪ್ರವರಂ ನಿಷ್ಕಾಮಂ ಕ
ರ್ಮಮೆಂಟುಮಂ ನೆಱೆಯೆ ಕಿಡಿಸಲುದ್ಯತನಾದಂ ೩೮

ವ|| ಆಗಿ ನಿಜನಿಕಟರಕ್ತಾಶೋಕಪಲ್ಲವಪ್ರತಿಬಿಂಬಶೋಣಿಮದಿಂ ಮಾಣಿಕ್ಯಶಿಲಾತಳದಂತಿರ್ದ ಚಂದ್ರಕಾಂತಶಿಲಾತಳದೊಳ್ ನಿಬದ್ಧಪಲ್ಯಂಕಾಸನನುಂ ಪೂರ್ವಾಭಿಮುಖನುಮಾಗಿ

ನಯನಂ ನಾಸಾಗ್ರದೊಳ್ ಕೀಲಿಸೆ ನೆಲಸೆ ಮರಲ್ದಂಕದೊಳ್ ಪಾಣಿಪದ್ಮ
ದ್ವಯಮೇಕಾಗ್ರಂ ಮನಂ ಭ್ರೂಯುಗಳದ ನಡುವಂ ಪೊರ್ದೆ ದೇಹಂ ಸುವರ್ಣಾ
ದ್ರಿಯವೊಲ್ ನಿಷ್ಕಂಪಿತಂ ಕಣ್ಗೆಸೆಯೆ ಕುಸಿಯೆ ಬಾಹ್ಯೇಂದ್ರಿಯಂ ಬಾಹ್ಯ
ಸಾಮಗ್ರಿಯೊಳವ್ಯಗ್ರಪ್ರತಿಷ್ಠಾಪರನೆನಿಸಿದನೇಕಾಂತ ದೇಶಂ ಮುನೀಶಂ ೩೯

ಅಂತು ಬಹಿಸ್ಸಾಮಗ್ರಿಗ
ಳಂ ತಳೆದು ವಿಶುದ್ಧಸಿದ್ಧಪದದೊಳ್ ಮನಮಂ

ಸಂತಮಿರಿಸಿದನಿದೇನುಪ
ಶಾಂತಾತ್ಮನೊ ಜಗದಭಿಖ್ಯನಾ ಮುನಿಮುಖ್ಯಂ ೪೦

ವ॥ ಮತ್ತಂ

ಅವಗಹನಶಕ್ತಿಬೋಧಾ
ವಿವರ್ಜನಂ ಗುರುಲಘುತ್ವ ಬಾಹ್ಯತೆ ಸೂಕ್ಷ್ಮ
ತ್ವದನಂತಚತುಷ್ಟಯಮೆಂ
ಬಿವೆಂಟುಮಂ ನೆನೆದು ಸಿದ್ಧಗುಣಮಂ ಮನದೊಳ್ ೪೧

ಪರಮಂ ಪ್ರೀಣಿತವಸ್ತು
ಸ್ವರೂಪಮಂ ನವಪದಾರ್ಥಮಂ ನಂಬುಗೆಯಿಂ
ಪರಿಭಾವಿಸಿದಂ ಯೋಗೀ
ಶ್ವರನಾಜ್ಞಾನಿಚಯಮ್ಮ ಶುಭಧ್ಯಾನಪರಂ ೪೨

ಅನಿಯತಯೋಗನಿಯೋಗದಿ
ನನಾದಿಸಂಸಾರಘೋರದಾರುಣದುಃಖಾ
ಪನಯಂ ನಯ ದೊರೆಕೊಂಡಪು
ದೆನಗೆನುತುಮಪಾಯವಿಚಯಮಂ ಧ್ಯಾನಿಸಿದಂ ೪೩

ನಾನಾಗತಿಯೊಳ್ ನಾನಾ
ಯೋನಿಗಳೊಳ್ ತೊಯ್ದು ಕರ್ಮಬಂಧವಿಪಾಕ
ಧ್ಯಾನಂ ವಿಪಾಕವಿಚಯಮ
ದೇನಳವಟ್ಟತ್ತೊ ಮತಿಯೊಳಾ ಯತಿಪತಿಯಾ ೪೪

ತರುಣಯುವವೃದ್ಧಭೇದಂ
ಶರೀರದಿಂ ವ್ಯಕ್ತಮಾಗೆ ಪರ್ಯಾಯಪರಂ
ಪರೆಗೆಯ್ದುವಿತರವಸ್ತು
ಸ್ವರೂಪಮಂ ದ್ರವ್ಯನಿಪುಣನಧ್ರುವಮೆಂಗುಂ ೪೫

ಸಾವೆಯ್ದೆ ಬಂದ ಪದದೊಳ್
ಕಾವನ್ನವು ದೇಶಕಾಲವಿಧಿಹೇತುಗಳಿ
ಲ್ಲಾವುದುಮಶರಣಮಕ್ಕುಂ
ಜೀವಕ್ಕೆ ಶರಣ್ಯಮೊಂದೆ ನಿರ್ಮಳಧರ್ಮಂ ೪೬

ಇಂದ್ರಿಯಕಷಾಯವಶಗತ
ರಂ ದ್ರವ್ಯಕ್ಷೇತ್ರಕಾಲಭವಭಾವವಿಭೇ

ದಂ ದೃಢತರದುಃಖಜ್ವರ
ತಂದ್ರಿಯನೆಯ್ದಿಪುದು ಘೋರತರಸಂಸಾರಂ ೪೭

ಸಮನಿಸಿದನಿಷ್ಟಸಂಯೋ
ಗಮನಿಷ್ಟವಿಯೋಗಮಂ ಚತುರ್ಗತಿಗಳೊಳಂ
ಭ್ರಮಿಯಿಸಿ ಕೈಕೊಳ್ಗುಂ ತಾ
ನೆ ಮತ್ತೆ ನೆರಮಿಲ್ಲ ದೇಹಿಗಿಂತೇಕತ್ವಂ ೪೮

ನಿತ್ಯಂ ನಿರೀಂದ್ರಿಯಂ ಸಂ
ಪ್ರತ್ಯಯನವಿನಾಶಿ ಜೀವನಿತರಂ ತನುವೆಂ
ದತ್ಯಂತಭೇದವಿಷಯಾ
ಪತ್ಯಾದಿಯನೆನ್ನವೆನ್ನನನ್ಯತ್ವವಿದಂ ೪೯

ದೇಹಕ್ಕಶುಚಿತ್ವಮಸಂ
ದೇಹಂ ಪರಶುಕ್ಲಶೋಣಿತಾಪಾದ್ಯಮಶು
ದ್ಧಾಹಾರವೃದ್ಧಮಧುಕೀ
ಟಾಹತಮತಿದುಸ್ತರಾಮಯಂ ಧಾತುಮಯಂ ೫೦

ಬೞಿಲದ ಮಿಥ್ಯೆ ಹಿತಾಹಿಕ
ದೞಿವನವರತಪ್ರಮಾದಮುದಿತಕಷಾಯಂ
ಬೞಿಸಲ್ವ ಯೋಗಮೆಂಬೀ
ಪೞಿಯಿಂ ಪ್ರತ್ಯೇಕಮಾಸ್ರವಂ ಪಂಚವಿಧಂ ೫೧

ಅಪಮಿಥ್ಯಾತ್ವಂ ಸುಚರಿ
ತ್ರಪವಿತ್ರತೆ ನಿರ್ಗತಪ್ರಮಾದಂ ಕ್ರೋಧಾ
ದ್ಯಪಪೃತಿ ವಿಶುದ್ಧಯೋಗ
ಪ್ರಪಂಚಮೆಂದಯ್ದು ತೆಱದ ಸಂವರೆಯಕ್ಕುಂ ೫೨

ಬಿಟ್ಟು ಪರಿಗ್ರಹಮೆರಡಂ
ತೊಟ್ಟಯ್ದಾಚಾರಮಂ ಪರೀಷಹಮಂ ಬೆ
ನ್ನಟ್ಟಿ ವಿಹಿತಮನನುಷ್ಠಿಸಿ
ಮಟ್ಟಯಿಸಿದ ಕರಣಯೋಗಮಘನಿರ್ಜರಣಂ ೫೩

ಮುದಯಂ ಪದಿನಾಲ್ಕು ತಳಂ
ಚದುರನಮೇೞಿಱೊಂದು ನಡುವೆ ಮೇಲಯ್ದೊಂದ

ಗ್ರದೊಳಿನಿತೆ ರಜ್ಜು ಷ
ಡ್ಡ್ವಯದಾಸ್ರವಂ ಭುವನಮಾಶ್ರಿತ ತ್ರಸನಾಳಂ ೫೪

ಮನುಜತ್ವಂ ಸುಕ್ಷೇತ್ರಂ
ವಿನಯಂ ಕುಲಜಾತಿಭವ್ಯಯೋಗಂ ಗುರುಸೇ
ವನೆ ತತ್ವರುಚಿ ಸುಪರಿಣತಿ
ಮನೋವಚಃಕಾಯಶುದ್ಧಿ ಬೋಧನಿಮಿತ್ತಂ ೫೫

ಪಿಂಗೆ ಮನಂ ಮಿಥ್ಯಾತ್ವದಿ
ನಂಗೀಕೃತಮನೆ ವಿಶುದ್ಧಸಮ್ಯಕ್ತ್ವಂ ಸ್ಥಾ
ನಂಗಳ್ ಪನ್ನೊಂದು ಗೃಹ
ಸ್ಥಂಗೀರಯ್ದಾಗೆ ಯತಿಗೆ ಧರ್ಮಮೆನಿಕ್ಕುಂ ೫೬

ಧ್ಯಾನಂ ಮುಕ್ತಿಪ್ರಾಪ್ತಿವಿ
ಧಾನಂ ಗತ್ಯಾದಿಮಾರ್ಗಣಸ್ಥಾನಗುಣ
ಸ್ಥಾನಪರನಾಗೆ ಧರ್ಮಾ
ಧೀನಂ ಸಂಸ್ಥಾನವಿಚಯಸಂಸ್ಥಿತನಾದಂ ೫೭

ವ॥ ಅಂತವಿಶ್ರಾಂತಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧಲೇಶ್ಯಾಪರಿಣಾಮ-ಪರಿಪೂರ್ಣನಪ್ರಮತ್ತಗುಣಸ್ಥಾನದೊಳ್ ನಿಂದು ಮುನ್ನಮಧಃಪ್ರವೃತ್ತ ಮನಿವೃತ್ತಮ-ಪೂರ್ವಮೆಂಬ ಕರಣತ್ರಯದಿಂ ಮಿಥ್ಯಾತ್ಂ ಸಮ್ಯಗ್ಮಿಥ್ಯಾತ್ವಂ ಸಮ್ಯಕ್ತ್ವಪ್ರಕೃತಿಯೆಂಬ ಮೂಱುಂ ದರ್ಶನಮೋಹಂಗಳುಮನನಂತಾನುಬಂಧಿ ಕ್ರೋಧಮಾನಮಾಯಾ-ಲೋಭಂಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ

ತ್ರಿಕರಣದಿವ್ಯಾಂಜನದಿಂ
ಸಕಳಪ್ರತ್ಯಕ್ಷಹೇತು ಸಮನಿಸೆ ಸಪ್ತ
ಪ್ರಕೃತಿಪಟಳಕ್ಷಯಂ ಕ್ಷಾ
ಯಿಕಸಮ್ಯಗ್ದೃಷ್ಟಿವಿಭವಮಂ ವಿಭು ತಳೆದಂ ೫೮

ವ॥ ಮತ್ತಂ ಪ್ರಮತ್ತಾಪ್ರಮತ್ತಪರಾವರ್ತನಸಹಸ್ರಮನಂತರ್ಮುಹೂರ್ತದೊಳ್ ನಿರ್ವರ್ತಿಸಿ ನಿರ್ವೃತಿಸ್ಥಾನಸೋಪಾನಶ್ರೇಣಿಯಂ ನೇಱಲೆಂದಧಃಪ್ರವೃತ್ತಾಧಿಕರಣ ಪರಿಣತಿಯನಪ್ಪುಕೆಯ್ದು

ಪ್ರತಿಸಮಯಮನಂತಗುಣ
ಕ್ಷತಿಕರಣವಿನಿರ್ಜರಾವಿಧಾನದಿನಾಯುಃ

ಸ್ಥಿತಿಯುಟಿಯೆ ಶೇಷಕರ್ಮ
ಪ್ರತಾನಬಂಧಾನುಭಾಗಮಮಂ ಕುಂದಿಸಿದಂ ೫೯

ವ॥ ಅನಂತರಮನಂತಗುಣಖಚಿತಮೆನಿಸಿದೋರೊಂದೆ ಪರಿಣಾಮದಿನ ಪೂರ್ವಕರಣಗುಣ ಸ್ಥಾನದಿನಲಗ್ಧ ನಿವೃತ್ತಿಬಾದರಸಾಂಪರಾಯದೊಳ್ ನಿಂದಂತರ್ಮೂರ್ಹೂರ್ತದೊಳ್ ನಿದ್ರಾನಿದ್ರಾಪ್ರಚಳಾಸ್ತ್ಯಾನೃದ್ಧಿನರಕಗತಿತತ್ಪ್ರತಿಯೋಗ್ಯಾನುಪೂರ್ವಿತಿರ್ಯಗ್ಗತಿತತ್ಪ್ರ ಯೋಗ್ಯಾನುಪೂರ್ವೇಕ ದ್ವಿತ್ರಿಚತುರಿಂದ್ರಿಯಜಾತ್ಯಾತಪೋ ದ್ಯೋತಸ್ತಾವರಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಂ ಪ್ರಕೃತಿಗಳುಮಂ ಪಡಲ್ವಡಿಸಿ ಮತ್ತಮನಿತು ಬೇಗದೊಳ್

ಅಪ್ರತ್ಯಾಖ್ಯಾನವಿಶೇ
ಷಪ್ರತ್ಯಾಖ್ಯಾನಭೇದಭಿನ್ನಾಷ್ಟಕಷಾ
ಯಪ್ರತ್ಯರ್ಥಿಗಳಂ ವೀ
ರಪ್ರವರಂ ಗೆಲ್ದು ವಿಜಯವಲ್ಲಭನಾದಂ ೬೦

ವ॥ ಮತ್ತಮುತ್ತರಕ್ಷಣದೊಳ್

ಅಭಿಭವಿಸಿ ನಪುಂಸಕವೇ
ದಭಾಮಿನೀ ವೇದಯುಗಳದೊಡನೊಡನೆ ಜಗ
ದ್ವಿಭು ಹಾಸ್ಯರತ್ನರತಿಶೋ
ಕಭಯಜುಗುಪ್ಸೆಗಳನಾಱುಮಂ ಬೆಂಕೊಂಡಂ ೬೧

ಬಟಿ ಪುರುಷವೇದಮಂ ಸಂ
ಜ್ವಳನಚತುಃಕ್ರೋಧಮಾನಮಾಯಾಲೋಭಂ
ಗಳನೊರ್ಮೆಯೆ ನಿರ್ಮುಳಿಸಿ
ತಳೆದನಜೇಯಂ ಜಯಾಂಗನಾಲಿಂಗನಮಂ ೬೨

ವ॥ ಮತ್ತಮನಿವೃತ್ತಿಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರ ಶುದ್ಧಿ ಸಂಯಾಮಾನುಗನಯನಿವೃತ್ತಿಸಂಯುತಂ ಸೂಕ್ಷ್ಮಸಾಂಪರಾಯಸಂಪನ್ನನೆನಿಸಿ

ಯತಿ ಸೂಕ್ಷ್ಮ ಸಾಂಪರಾಯ
ಸ್ಥಿತಂ ಯಥೋಕ್ತಪ್ರಶಸ್ತಪರಿಣಾಮಗದಾ
ಹತಿಯಿಂದೆ ಸೂಕ್ಷ್ಮಲೋಭ
ಪ್ರತಿಪಕ್ಷಕ್ಷಯಮನಿತ್ತನೇನುದ್ಧತನೋ ೬೩

ವ॥ ಅನಂತರಂ

ಕಿಡೆ ಮೋಹನೀಯಕರ್ಮಂ
ಪಡೆದು ಯಥಾಖ್ಯಾತಚರಿತಮಂ ಮರಿತವ ಪೆ
ರ್ಬಡೆಗೆ ಕಡುಮುಳಿದು ಮುನಿ ಮೊಗ
ವಡಮುಡಿಗಿದ ವಿಜಯಭದ್ರಗಜದವೊಲಿರ್ದಂ ೬೪

ವ|| ಮತ್ತಂ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದಿಂ ಕ್ಷೀಣಕಷಾಯವೀತರಾಗಚ್ಛದ್ಮಸ್ತಗುಣಸ್ಥಾನಮಂ ಪೊರ್ದಿ ಕಿಱಿದು ಪೊೞ್ತು ವಿಶ್ರಮಿಸಿ ಬೞಿಯಮೇಕತ್ವವಿತರ್ಕವಿಚಾರಮೆಂಬೆರಡನೆಯ ಶುಕ್ಲಧ್ಯಾನದಿಂ ಬಹುತರಾಶ್ರವ ಸಂವರಕರ್ಮನಿರ್ಜರನಾಗಿ ನದಿರಾನಿದ್ರಾಪ್ರಚಳೆಗಳನು ಪಾಂತ್ಯಸಮಯದೊಳಸ್ತಮಯಮಂ ಪೊರ್ದಿಸಿ

ಚರಮದೊಳಯ್ದುಂ ಜ್ಞಾನಾ
ವರಣಮುಮಂ ನಾಲ್ಕು ದರ್ಶನಾವರಣಮುಮಂ
ಪರಮೇಶ್ವರನೊರ್ಮೊದಲೊಳೆ
ಪರಿಹರಿಸಿದನಯ್ದುಮಂತರಾಯಂಗಳುಮಂ ೬೫

ವ|| ಅಂತು ನಾಲ್ಕು ಘಾತಿಗಳಂ ಘಾತಿಸೆ

ಉಪಮಾತೀತನಿಜಪ್ರಕಾಶಗುಣದಿಂ ಪ್ರತ್ಯಕ್ಷಮಪ್ಪಂತು ಮಾ
ಡಿ ಪದಾರ್ಥಂಗಳನೆಲ್ಲಮಂ ಘನತಮೋವಿಧ್ವಂಸನಂಗೆಯ್ದು ವ
ಸ್ತುಪರೀಕ್ಷಾವಿದವಿಶ್ರುತಂ ಪಸರಿಸಿತ್ತುದ್ಯೋತಮಂ ಮಲ್ಲಿನಾ
ಥಪಯಸ್ಸಾಗರಸಂಭವಂ ಸಕಳದಿವ್ಯಜ್ಞಾನರತ್ನಾಂಕುರಂ ೬೬

ಕರಣಮನಾಸೆವಟ್ಟಿರದೆ ದೂರಮಿದೆನ್ನದೆ ಸಾರೆಯೆನ್ನದಂ
ತರಿತಮಿದೆನ್ನದೊರ್ಮೊದಲೆ ವಸ್ತುಗಳಂ ಗುಣಪರ್ಯಯಂಗಳಂ
ಪರಿವಿಡಿಯಿಲ್ಲದೇೞಿ ತಱಿಸಾದುವನಪ್ಪುವನಾಗಲಿರ್ಪುವಂ
ಕರದೊಳಗಿರ್ದ ನೆಲ್ಲಿಗೆಣೆಯಾಗಿರೆ ಕಾಣ್ಬಜೆವಾಯ್ತುಜಾತನೊಳ್ ೬೭

ವಿಶ್ವಜನಾರಾಧ್ಯಂಗವಿ
ನಶ್ವರಮುನ್ಮೀಲಿಸಿತ್ತು ಕೈವಲ್ಯಜ್ಞಾ
ನೈಶ್ವರ್ಯಮ ಪೂರ್ವಾಹ್ಣದೊ
ಳಶ್ವಿನಿಯೊಳ್ ಮಾರ್ಗಶಿರಸಿತೈಕಾದಶಿಯೊಳ್ ೬೮

ವ|| ಆ ಸಮಯದೊಳ್

ಧರೆ ಪೊಸಸುಗ್ಗಿಯ ಪುಣ್ಣಮೆ
ಯಿರುಳಂತಿರೆ ತೀವಿ ತೊಳಗಿ ಬೆಳಗುವ ಸಸಿಯಿಂ

ಕರಮೆಸೆವ ನಯನರ್ತನ
ಮರಕತರಂಗಂಬೊಲೇಂ ಮನಂಗೊಳಿಸಿದುದೋ ೬೯

ಸರಸಿಜವನಮೆಲ್ಲಂ ಸ
ತ್ಪುರುಷರ ಸಂಯೋಗದಂತೆ ತೆಳ್ಪಂ ತಳೆದೇಂ
ವರುಣಾನಿಯ ವೈಢೂರ್ಯದ
ಸಿರಿಗನ್ನಡಿಯೆನಿಪ ಗಾಡಿಯಂ ತಾಳ್ದಿದುದೋ ೭೦

ಮಂಗಳಶಿಖಿಗಳ್ ಜಾತ್ಯ
ಶ್ವಂಗಳವೋಲ್ತಳೆದು ದಕ್ಷಿಣಾವರ್ತವಿಳಾ
ಸಂಗಳನೇಂ ಧನದನ ರ
ತ್ನಂಗಳ ಪಸರಂಗಳಂತೆ ಜಲಜಲಿಸಿದುವೋ ೭೧

ಮಾರುತಮಂಡಳಮನಿತುಂ
ತಾರಾಪಥದಂತೆ ಮಂದಚಾರಂಬಡೆದೇಂ
ರಾರಾಜಿಸಿತ್ತೊ ವನಲ
ಕ್ಷ್ಮೀರಮಣಿಯ ವದನಸುರಭಿನಿಶ್ವಾಸದವೊಲ್ ೭೨

ಘನಪಥಮನಿತುಂ ಕಂದ
ರ್ಪನಂತಿರಪಘನವಿಳಾಸಮಂ ತಳೆದು ದಿಗಂ
ಗನೆಯ ಕಡೆಗಣ್ಣ ಬಣ್ಣಮಿ
ದೆನಲೇಂ ಬೇಱೊಂದು ಕಾಂತಿಯಂ ಬೀಱಿದುದೋ ೭೩

ವ॥ ಅಂತು ಪಂಚಘೂತಪೂರ್ವವಿಭವಮನಪ್ಪಕೆಯ್ಯೆ

ಸುರಪತಿಗಳ್ ಮೂವತ್ತಿ
ರ್ವರ ಮಣಿಪೀಠಂಗಳೊಡನೆ ನಡುಗಿದುವಮರರ್
ಸುರಿಯದೆಯುಂಪೂಮಳೆಗಳ್
ಸುರಿದುವು ಭೋರ್ಗರೆದು ಕಲ್ಪವಲ್ಲೀವನದಿಂ ೭೪

ಅಸವಸದಿನಮರಪತಿಗಳ
ಮಿಸುಗುವ ಮಣಿಮಕುಟಮೆಱಗಿದುವು ದಿವಿಜರ್ ಬಾ
ಜಿಸದೆಯುಮಮರಾನಕರುತಿ
ಪಸರಿಸಿ ಪರ್ವಿದುವು ಸಕಳಭುವನಾಂತರಮಂ ೭೫

ಅವಿದಿತಪರಸ್ಪರೋಚ್ಚ
ವ್ಯವಸ್ಥಿತಿ ತಂತಮಗೆ ವಿಸ್ಮಯಂ ಪುಟ್ಟುವಿನಂ

ಭವನಾಮರಭವನಮನು
ಣ್ಮುವ ಶಂಖನಿನಾದವಾದಮೇಂ ತೀವಿದುದೋ ೭೬

ಕುಳಗಿರಿಯೊಳ್ಮಾರ್ದನಿಗಳ್
ಬಳವಿನೆಗಂ ನೀಳಮೇಘನಿರ್ಘೋಷದಿನ
ಗ್ಗಳಮೆನೆ ವಾನವ್ಯಂತರ
ನಿಳಯದೊಳುಣ್ಮಿತ್ತು ಭೂರಿಭೇರೀನಿನದಂ ೭೭

ರವಿರಥತುರಗಂಗಳ್ಬೆ
ರ್ಚುವಿನಂ ನಿಜಕರ್ಣತಾಳಮಂ ದಿಕ್ಕರಿ ಬಿ
ರ್ಚುವಿನಂ ಘೋಂಕನೆ ಕಂಠೀ
ರವರವಮಾವರಿಸಿವತ್ತು ರೋದೋಂತರಮಂ ೭೮

ಪ್ರಣಯಕಲುಷಿತೆಯರಚ್ಚರ
ಗಣಿಕೆಯರಮರ್ದಪ್ಪೆ ಭೀತಿಯಿಂದನಿಮಿಷರಂ
ಮಣಿಘಂಟಾನಿನದಂ ತಿಂ
ತಿಣಿಯೆನೆ ತೀವಿತ್ತು ದೇವಲೋಕಮನಾಗಳ್ ೭೯

ಆ ಧ್ವನಿಗಳ್ ನಿಜನಿಜಕ
ರ್ಣಾಧ್ವಗಮೆನೆ ಜೈನಪೂಜೆಗಿತರೇಂದ್ರರ್ ನಾ
ನಾಧ್ವಜನಿವೆರಸು ನೆರೆದು ಶ
ತಾಧ್ವರಿಸವಧರ್ಮನಲ್ಲಿಗಂದೇಟ್ಟಿಂದರ್ ೮೦

ವ॥ ಆಗಳವಧಿಬೋಧದಿಂ ಸೌಧರ್ಮದ ದಿವಿಜಪತಿ ಜಿನಪತಿಯ ಕೇವಲ ಜ್ಞಾನೋತ್ಪತ್ತಿಯನಱಿದು

ನಿಟಿಳತಟಘಟಿತಕರಸಂ
ಪುಟಂ ನಿಜಾಸನದಿನೆರ್ದು ಜಿನಸಂಮುಖದಿ
ಕ್ತಟಿದತ್ತದೃಷ್ಟಿ ಮಂಗಳ
ಪಟಹಂಗಳ್ಮೊಳಗೆ ವಿನತಮಸ್ತಕನಾದಂ ೮೧

ವ॥ ಆಗಿ ಸಮವಸರಣಮಂಡಳಮಂ ಸಮೆವಂತು ಬೆಸಸುವುದುಂ ಪರಮಜಿನಪತಿಯ

ತನುಘಾತಿಕ್ಷಯದಿಂ ಸಭಕ್ಕೆ ನೆಗದಂಗೋಪಾಂಗಮಂ ಪೆತ್ತ ಮಿಂ
ಚಿನಪೋಲಿರ್ಪುದುಮಾಗಳಾಯೆಡಗೆ ಸೌಧರ್ಮೇಂದ್ರನಾದೇಶದಿಂ

ಧನದಂ ನಿರ್ಮಿಸಿದಂ ಸಭಾಸದನಮಂ ಲೋಕತ್ರಯೀನೇತ್ರಮಂ
ಡನಮಂ ಧರ್ಮವಿನಿರ್ಮಿತಾಭ್ಯುದಯಲಕ್ಷ್ಮೀಲಾಸ್ಯಮೆಂಬನ್ನೆಗಂ ೮.

ವ॥ ಆಗಳಾಧನಪತಿಯಂ ಸಂಕಲ್ಪಕಲ್ಪಲತೆಯೆ ಸಫಳಮಾದಂತೆ

ಧರೆಗೈಸಾಸಿರಬಿಲ್ಲಂ
ತರದೊಳ್ ಪರ್ವಿದುದು ನೀಲಮಣಿಭೂಮಿ ನಭೋಂ
ತರಮಂ ದ್ವಾದಶಯೋಜನ
ವಿರಾಜಿತಂ ಕಂತುಕವಯರಂ ಬೀಸಿದವೋಲ್ ೮೧

ವ॥ ಅಲ್ಲಿ

ಸುರಚಿರವಿಚಿತ್ರವಸ್ತ್ರದೆ
ಸುರಪತಿ ತೆರೆಸುತ್ತಿದಂತೆ ಹರಿನೀಳಶಿಲಾ
ಪರಿಕಲಿತಂ ಸ್ವರ್ಭಾನುವ
ಪರಿವೇಷಮನಿರೆಸಿದತ್ತು ಧೂಳೀಶಾಳಂ ೮೨

ಅರ್ಕೇಂದುಸಂಪದಂಗಳ
ನಿರ್ಕೊಳ್ವ ಕರಂಗಳಿಂ ನಭೋವಲ್ಲಭೆಯಂ
ತರ್ಕಯಿಸಿ ನಾಲ್ಕು ದೆಸೆಯೊಳ
ಮಿರ್ಕುಂ ವಿಂಶತಿಸಹಸ್ರಸೋಪಾನಂಗಳ್ ೮೩

ಆನಾಲ್ಕುಂ ಸ್ಥಾನದ ಸೋ
ಪಾನದ ಮೇಲಿರ್ದ ಪಾದಲೇಪಂ ನಿಮಿಷ
ಕೇನುಯ್ದುದೊ ಮೇಗಣ ಸೋ
ಪಾನದ ಮೇಗಣ್ಗೆ ಚೋದ್ಯಮೆನಲೆನ್ನರುಮಂ ೮೪

ವ॥ ಆಸೋಪಾನಂಗಳಗ್ರಭಾಗದೊಳ್

ತುಂಗಗಂಗಳ್ಬಾಗಿಲ್ಮಾ
ಡಂಗಳ್ ಮಣಿಕಿರಣಜಾಳಜಟಿಳಿತಬಹುಭೂ
ಮಂಗಳ್ ಭಾಸುರಹೇಮಮ
ಯಂಗಳ್ ನಾಲ್ಕೆಸೆದುವರಣಮಣಿಕಳಶಂಗಳ್ ೮೫

ಅವಱೊಳಗಣ ಪೊಱಗಣ ಜಗ
ಲಿವಿಡಿದು ನವನಿಧಿಯುಮಷ್ಟಮಂಗಳಮುಮೆನಿ

ಪ್ಪವು ಬೇಱೆವೇಱೆ ನೂಱಿಂ
ಟವಿರಳಮಾಗಿರ್ಪುವೀಕ್ಷಣಾನಂದಂಗಳ್ ೮೮

ಮಿಡುಕದೆ ನಾಲ್ಕು ಬಾಗಿಲ
ಪೆಡೆಗಳೊಳಂ ಜ್ಯೋತಿರಮರಪತಿಗಳ್ ಗದೆಯಂ
ಪಿಡಿದಿರ್ಕುಮವರ ಮಕುಟದ
ಕುಡುಮಿಂಚಂಬರದೊಳಾಡುಗುಂ ಪೆಕ್ಕಣಮಂ ೮೯

ಬಾಗಿಲ್ನಾಲ್ಕಱ ಪೊಱಗಣ
ಭಾಗದೊಳಲ್ಲಲ್ಲಿ ಮಕರತೋರಣಶತಮಿಂ
ಬಾಗಿ ಬಗೆಗೊಳಿಕುಮೊಳಗಣ
ಭಾಗದೊಳವಱನಿತೆ ರತ್ನತೋರಣಮೆಸೆಗುಂ ೯೦

ವ॥ ಆ ವಿಚಿತ್ರತೋರಣಮೆ ತಮಗಲಂಕಾರಮಾಗೆ

ಜಿನನಾದಿಪೀಠನಿಕಟಾ
ವನಿವರೆಗಂ ನಾಲ್ಕುವೀಧಿ ನೀಳ್ದುವು ತದ್ವೀ
ಥೀನಿಕಾಯದುಭಯಪಾರ್ಶ್ವಾ
ವನಿಯೊಳ್ ರಂಜಿಸಿದುವೆಂಟು ಪಳಿಕಿನ ಕೇರ್ಗಳ್ ೯೧

ಆನಾಲ್ಕುಂ ವೀಧಿಗಳೊಳ್
ಮಾನಸ್ತಂಭಂಗಳುನ್ನತಂಗಳ್ ಮಣಿಘಂ
ಟಾನಿಚಿತಂಗಳ್ ಮಿಥ್ಯಾ
ಜ್ಞಾನಮನೋಡಿಪುದುಮಂ ದೂರದಿಂ ನೋಡಲೊಡಂ ೯೨

ಮಾನಸ್ತಂಭದ ಜಗತಿಗ
ಳೇನೆಸೆದುವೊ ನಾಲ್ಕು ದೆಸೆಯೊಳಿರೆ ಕಾಂಚನಸೋ
ಪಾನಂ ಚತುರಶ್ರವದ
ಸ್ಥಾನಂ ಸಮವೃತ್ತಮೆನೆ ನಿಜಾಗ್ರಸ್ಥಾನಂ ೯೩

ಕುಂಡಂಗಳೆರಡು ಸರಸಿಜ
ಷಂಡಂ ಪದಿನಾಱು ಕೋಟೆ ಮೂಱೇರಾಱುಂ
ಮಂಡಳಿಸೆ ಗೋಪುರಂ ಬಗೆ
ಗೊಂಡಿರ್ಕುಂ ಬೇಱೆವೇಱೆ ಮಾನಸ್ತಂಭಂ ೯೪

ಭಾಸುರಮಣಿಪೀಠತ್ರಿತ
ಯಾಸೀನಸುವರ್ಣಮಯಜಿನಪ್ರತಿಕೃತಿಭಾ

ಭಾಸುರಮಾನಸ್ತಂಭವಿ
ಳಾಸಂ ಬಣ್ಣಿಸುವೆನೆಂಬ ಮಾನವನಳವೇ ೯೫

ಆ ನಾಲ್ಕುಂ ಮಾನಗಂಬಂಗಳ ನಡುವೆ ಸುಧಾಸದ್ಮಮಯ್ದಾದೊಡಕ್ಕುಂ
ಜೈನೇಂದ್ರಾವಾಸಮೊಂದೀಕ್ರಮದೊಳೆ ಬಳಸಿರ್ದೊಪ್ಪುಗುಂ ಚಕ್ರವಾಳ
ಸ್ಥಾನಂ ಪ್ರಾಸಾದಚೈತ್ಯಾವನಿತಳಮದಱೊಳ್ತಿಟ್ಟವಿಟ್ಟಂತಿರಿರ್ಕುಂ
ನಾನಾಕೂಪಂ ಬಸಂ ತೀವಿದ ನವನಿಧಿಗಳ್ ಕುಂಡಮಂಭೋಜಷಂಡಂ ೯೬

ವ|| ಅಪ್ರದೇಶಮರ್ಧಯೋಜನಮಕ್ಕುಮಲ್ಲಿಂದೊಳಗೆ

ಪರಿಪಾಳಿಸೆ ತಮ್ಮಂ ಜ್ಯೋ
ತಿರಮರರುತ್ತುಂಗರಜತರೂಪಚತುರ್ಗೋ
ಪುರವಷ್ಟಾಪದವೇದೀ
ಪರಿವೃತಮೊದವಿವುದುಂ ದೆಸೆಗೆ ಬೆಳ್ವಸದನಮಂ ೯೭

ವ|| ಅಲ್ಲಿಂ ಪಂಚರತ್ನಸೋಪಾನರುಚಿವಿತಾನದಿಂ ಪುದಿದು

ಸಲಿಲಕ್ರೀಡಾರತಸುರ
ಲಲನಾಸ್ತನಭರವಿಲಿಪ್ತಕುಂಕುಮರಸದೊಳ್
ಕಲಸಿ ಪಿಶಂಗಪ್ರಭೆಯಿಂ
ಜಲಖಾತಿಕೆ ಸಿದ್ಧರಸದ ಕಾಟ್ಟುರಮೆನಿಕುಂ ೯೮

ಚಿತ್ರಸಿದಂತೆವೊಲಿರೆ ಶತ
ಪತ್ರವನಂ ಸಮವಸರಣಲಕ್ಷ್ಮಿಯ ಕಾಂಚೀ
ಸೂತ್ರಮಿದೆನೆ ಸುರವನಿತಾ
ನೇತ್ರೋತ್ಸವಹೇತುವಾಯ್ತು ಪರಿಖಾಕ್ಷೇತ್ರಂ ೯೯

ಪಲವಂದದ ನೀರ್ವಕ್ಕಿಗ
ಳುಲಿ ನೀರಾಟಕ್ಕದೆ ಬರ್ಪ ದೇವಿಯರುಡೆನೂ
ಲುಲಿ ಬಂಬಲ್ದೆರೆಯುಲಿ ಕಿವಿ
ಗೊಲವಂ ಪುಟ್ಟಿಸುವುದೊಡನೆ ನೀರ್ಗಾದಿಗೆಯೊಳ್ ೧೦೦

ವ|| ಆ ನೀರ್ಗಾದಿಗೆಯುಮರ್ಧಯೋಜನಮಲ್ಲಿಂದೊಳಗೆ

ಕನಕಮಯವೇದಿಕಾಮಂ
ಡನಮೆನಿಸಿದ ರಜತಮಯಚತುರ್ಗೋಪುರದೊಳ್

ಕನಕಗದಾಹಸ್ತರ್ ದ್ವಾ
ರನಿಯುಕ್ತರ್ ಜ್ಯೋತಿರಮರನಾಯಕರಿರ್ಪರ್ ೧೦೧

ವ॥ ಅಲ್ಲಿ

ಇಲ್ಲಿಂದೋ ಗರಗಂಪುಗ
ಳಿಲ್ಲೆನಿಪುವು ಪೂಗಳಂಗಜಂ ಬರೆದೊಡಮೇ
ನಿಲ್ಲಿ ತ್ರಿಭಂಗ ಶುದ್ಧಿಗ
ಳಿಲ್ಲೆನಿಪುವು ಲತೆಗಳಲ್ಲಿ ವಲ್ಲೀವನದೊಳ್ ೧೦೨

ಸುಮನೋಮಂಜರಿಯಿಂ ತೊಡರ್ಪು ಸುರಕಾಂತಾಲೋಲನೇತ್ರಕ್ಕೆ ಪು
ಷ್ಪಮಧುಸ್ಯಂದದಿನುರ್ವರಾವಧುಗೆ ನೀರಾಟಂ ಗತಿಸ್ತಂಭಮು
ದ್ಗಮಪಾಂಸೂತ್ಕರಭಾರದಿಂದೆಲರ್ಗೆ ಪುಷ್ಪಾಮೋದದಿಂದಾದುದ
ಳ್ಕಮೆ ಭೃಂಗಕ್ಕೆನೆ ತಾಂಗದಾರ ಬಗೆಯಂ ತತ್ಫುಲ್ಲವಲ್ಲೀವನಂ ೧೦೩

ಜಿನಸಭೆಯೆಂದು ಬಂದು ಪುಗಲುಂ ಪೊಸವುಗಳನಾಯಲುಂ ಭಯಂ
ಜನಿಯಿಸೆ ಗಾಳಿಯಿಂ ಪೊಱಗೆ ಸೂಸಿದುವಂ ಕಱಿವೂವನಾಯ್ದು ಮೋ
ಹನಶರಮಂ ಸ್ಮರಂ ಸಮೆದು ಲೋಕಮನಂಜಿಪನೆಂದೊಡಾ ಲತಾ
ವನದ ವಿಳಾಸಮಂ ವನಜಸಂಭವನುಂ ಪೊಗೞಲ್ ಸಮರ್ಥನೇ ೧೦೪

ಪೊರ್ಕುಳಿಯಾಡಿದುವಲರೊಳ್
ನಿರ್ಕಲಿಸಿದವಟ್ಟು ಬಂಡಿನೊಳ್ ತನಿಗಂಪಿಂ
ದಟ್ಕಿಮೆವಟ್ಟುವು ಕುಡಿಯೊಳ್
ದರ್ಕುಂದಲೆವಾಯ್ದುವಲ್ಲಿ ಮದಮಧುಪಂಗಳ್ ೧೦೫

ವ॥ ಆ ವಲ್ಲೀಕ್ಷೇತ್ರಮೊಂದು ಯೋಜನಮಲ್ಲಿಂದೊಳಗೆ

ಕಿಸುವೊನ್ನಕೋಂಟೆಯಿಂ ರಂ
ಜಿಸುಗುಂ ಯಕ್ಷಾಮರೇಂದ್ರದೌವಾರಿಕರಿಂ
ದೆಸೆಗುಂ ರಜತಮಯಂ ನಾ
ಲ್ದೆಸೆಗಂ ತೊಡವೆನಿಪ ನಾಲ್ಕು ಬಾಗಿಲ್ಮಾಡಂ ೧೦೬

ಬಾಗಿಲ್ಮಾಡಂಗಳ ಕೆಲ
ಭಾಗದ ಮೂನೆಲೆಯ ಮಾಡಮೆರಡೆರಡವಱೊಳ್
ದಿನಾಡುವರಮರಿಯ
ರಾಗಡುಮೋರೊಂದು ನೆಲೆಯೊಳಿರ್ಪದಿನಜುವರ್ ೧೦೭

ವ|| ಆ ಪದಿನಾಱುಂ ನಾಟ್ಯಗೃಹದ

ಪ್ರಘಣಂಗಳೊಳಿರ್ಕುಂ ದೂ
ಪಘಟಂಗಳ್ ನಾಟ್ಯಶಾಲೆಗೋರೊಂದೊಗೆದ
ಲ್ಲಿ ಘನಾಧ್ವಮುಮಂ ಪುದಿಗುಂ
ಮಘವನಿವಾಸಮುಮನಗುರುಧೂಮಸ್ತೋಮಂ ೧೦೮

ವಿಕಚದಶೋಕವನಂ ಪ
ಣ್ತ ಕದಳಿಕಾವನಮನೂನಫಳಭರನ ಮ್ರಾ
ಮ್ರಕುಜಾತವನಂ ನವಚಂ
ಪಕವನಮೀ ನಾಲ್ಕುಮುಪವನಂ ಸೊಗಯಿಸುಗುಂ ೧೦೯

ಇನಿಯವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ ಸುರಾಂ
ಗನೆಯರ ಕೇಶಮುಂ ನವಿಲ ಪಿಂಡುಗಳುಂ ಕುರುಳುಂ ಮದಾಳಿಯುಂ
ಸ್ತನಯುಗಮುಂ ರಥಾಂಗಯುಗಮುಂ ನಡೆಯುಂ ಕಳಹಂಸಯಾನಮುಂ
ತನತನಗೊಂದಸೊಂದು ತಡವಿಕ್ಕುಗುಮೆಕ್ಕೆಯಿನಾ ಬನಂಗಳೊಳ್ ೧೧೦

ಫಳಭಾರಾನತಮಾಗಿ ನೇತ್ರಫರೀಜಾಳಂಬೊಲಿಂಬಾದ ವೃ
ಕ್ಷಲತಾವೀಥಿಗಳಿಂ ಮನಂಗೊಳಿಸಿ ಕೀರೋತ್ತಾರದಿಂ ಚಕ್ರಮಂ
ಜುಳಚೀತ್ಕಾರದಿನುತ್ಕಹಂಸಮಿಥುನವ್ಯಾಹಾರದಿಂ ಭೃಂಗಸಂ
ಕುಳಝುಂಕಾರದಿನುಟುಮಾೞ್ಪುದು ಬನಂ ಕರ್ಣಾಮೃತಾಸಾರಮಂ ೧೧೧

ಜಿನಬಿಂಬಂ ಪ್ರಾತಿಹಾರ್ಯಾಂಚಿತಮಿರೆ ಮಣಿಪೀಠತ್ರಯಾಧಿಷ್ಠಿತಂ ಕಾಂ
ಚನಕೂಟಂ ಸುತ್ತೆ ಶಾಳಾತ್ರಯಮೆಸೆವುವು ಚೈತ್ಯಾವನೀಜಂಗಳಾ ಪಾ
ವನಭೂಜಾತಂಗಳಂ ತಮ್ಮೊಳಗೆ ತಳೆದ ನಾಲ್ಕುಂ ದಿಶಾಭಾಗದಿಂ ಯೋ
ಜನವಿಸ್ತಾರಂ ವಿಳಾಸಂಬಡೆದುಪವನಸಂಕ್ಷೇತ್ರಮಾಳೋಕಪಾತ್ರಂ ೧೧೨

ವ|| ಅಲ್ಲಿಂದೊಳಗೆ

ಪ್ರತಿಹಾರಕರುಂ ಗೋಪುರ
ಚತುಷ್ಕಮುಂ ಪುದಿದ ಶಾಳಮುಂ ಪೂರ್ವೋಕ್ತ
ಸ್ಥಿತಿಯಿಂ ಕಣ್ಗಂ ಬಗೆಗಂ
ಪ್ರತೀತಿಯಂ ಪಡೆದು ಪಡೆದುಪಧಿಕೋತ್ಸವಮಂ ೧೧೩

ವ|| ಅಲ್ಲಿ

ಪರಿಕರಿವೃಷಶಿಖಿಮಾಳಾಂ
ಬರಹಂಸಾಂಭೋಜಚಕ್ರಗರುಡಧ್ವಜಮಂ
ಬರಮಂ ಚುಂಬಿಸಿ ಕಾರ್ತ
ಸ್ವರಕೀರ್ತಿಸ್ತಂಭಶಿಖರದೊಳ್ ನರ್ತಿಸುಗುಂ ೧೧೪

ವ॥ ಅಂತು ಪತ್ತುಂ ಕುಲದ ಮಹಾಧ್ವಜಂಗಳೋರೊಂದರ್ಕೆ ನೂಱೆಂಟಾಗೆ ಬೇಱೆ ನಾಲ್ಕುಂದೆಸೆಯೊಳಂ

ಗಗನಾಂಭೋರಾಶಿಯ ವೀ
ಚಿಗಳೆನೆ ಮಿಳಿಸುವುವಲ್ಲಿ ನಾಲ್ಸಾಸಿರದಿಂ
ಮಿಗಿಲೆನೆ ಮುನ್ನೂಱೆರ್ಪ
ತ್ತು ಗೆಯ್ದ ಮುಖ್ಯಧ್ವಜಂಗಳುದ್ಬದ್ಧಂಗಳ್ ೧೧೫

ವ॥ ಮತ್ತಮಾ ಧ್ವಜಂಗಳೋರೊಂದರ್ಕೆ ನೂಱೆಂಟಾಗೆ

ತುಱುಗಿದ ನಾಲ್ಕುಂ ಲಕ್ಕೆಯು
ಮಱುವತ್ತಱಸಾಸಿರಂಗಳಿಂ ಮೇಲಯ್ನೂ
ಱುಱುವತ್ತುಪಧ್ವಜಂ ಕೈ
ನಿಱಿದವು ಭಾರತಿಕನಾಗೆ ಮಂದಸಮೀರಂ ೧೧೬

ವ॥ ಆ ಧ್ವಜಾವನೀವಳಯವೊಂದು ಯೋಜನಮಕ್ಕುಮಲ್ಲಿಂದೊಳಗೆ

ನಾಗರ ಕಾಪಿನ ನಾಲ್ಕುಂ
ಬಾಗಿಲ್ಗಳಿನೆಸೆವ ರಜತಗೋಪುರದಿಂದಿಂ
ಬಾಗಿರ್ಪುದಾತ್ತಗಗನಾ
ಭೋಗಂ ಶಾಳಂ ವಿಶಾಳಮರ್ಜುನವರ್ಣಂ ೧೧೭

ವ॥ ಅಲ್ಲಿಂ ಮುನ್ನಿನನಿತೆ ನಾಟಕಶಾಲೆಗಳುಮಂ ಧೂಪಘಟಂಗಳುಮಂ ತಳೆದು

ಕಲ್ಪಕುಜಭೂಮಿಯೋಜನ
ಕಲ್ಪಿತಮೊಳಕೊಂಡು ಸಿದ್ಧಚೈತ್ಯದ್ರುಮಮಂ
ಮಾಳ್ಪುದು ನೇತ್ರೋತ್ಸವಮಂ
ಕಲ್ಪಾಮರಖಚರಮಿತುನಶತಸಂಕೀರ್ಣಂ ೧೧೮

ವ॥ ಅಲ್ಲಿಂದೊಳಗೆ

ಕನಕಮಯವೇದಿಯಿಂ ಲೋ
ಚನಮಂ ಸೆಳೆಗೆಯ್ವ ನಾಲ್ಕು ಬೆಳ್ಳಿಯ ಬಾಗಿ

ಲ್ವನೆ ಗಣಿಪತಿಗಳ ಕಾಪಿಂ
ಜಿನಮಹಿಮೋನ್ನತಿಗೆ ತಾನೆ ತಾಯ್ವನೆಯೆನಿಕುಂ ೧೧

ವ॥ ಅಲ್ಲಿ

ಎಡೆಯೆಡೆಯೊಳ್ಮಣಿತೋರಣ
ವೆಡೆಗಿಜಿದಿರೆ ಪರಮಜಿನಪತಿಪ್ರತಿಕೃತಿಗ
ಳ್ಗೆಡೆಗೊಟ್ಟು ನಾಲ್ಕು ಬೀದಿಯ
ನಡುವಿರ್ಪುದು ಬೇಱಿ ನವನವಸ್ತೂಪಂಗಳ್ ೧೨

ವ॥ ಅವಱಕೆಲಂಬಿಡಿದು ಸುತ್ತಿ

ಗೃಹದೀರ್ಘಿಕೆಯಿಂ ಬಳಸಿದ
ಗೃಹವನದಿಂ ಚೈತ್ಯಪೂಜೆಯಿಂ ನಯನಸುಖಾ
ವಹಮಾದುದರ್ಧಯೋಜನ
ವಿಹಾರಭೂವಳಯಮಖಿಳಮಣಿಮಯನಿಳಯಂ ೧೨

ಭವನಾಮರಭವನಂಗಳ್
ಭವನಾಂಗದ್ರುಮವಿಳಾಸಭವನವನಂಗಳ್
ಭವನಂಗಳ ಚೆಲ್ವಿಂದಭಿ
ನವಭೂಮಿಗಳೆನಿಪುವದಱ ಮಣಿಭವನಂಗಳ್ ೧೨

ಆಡುತ್ತುಂ ಪಾಡುತ್ತುಂ
ಮಾಡುತ್ತುಂ ಜಿನಮಹಾಭಿಷವಮಂ ನಾನಾ
ಕ್ರೀಡೆಗಳಿಂದಲ್ಲಿಯ ಮಣಿ
ನೀಡಂಗಳೊಳಿರ್ಪುವಖಿಳಸುರದಂಪತಿಗಳ್ ೧೨

ವ॥ ಆ ಭವನಭೂಮಿಯಿಂದೊಳಗೆ

ನವನಿಧಿಯಿನಷ್ಟಮಂಗಳ
ನಿವಹಂಗಳಿನೆಸೆವ ನಾಲ್ಕು ಬಾಗಿಲ್ಗಳುಮಂ
ದಿವಿಜರ್ ದೌವಾರಿಕವ್ರ
ತ್ತಿವೆತ್ತು ಕಾವರ್ ಬೃಹದ್ಗದಾದಂಡಧರರ್ ೧೨

ಆಕಾಶಸ್ಫಟಿಕಮಯ
ಪ್ರಾಕಾರಂ ನೀಳಮಯಚತುರ್ಗೋಪುರಮ

ಪ್ರಾಕೃತಗಣಭೂಮಿಗಣ
ವ್ಯಾಕೀರ್ಣಂ ಸುಕೃತಕೋಶವೇಕಕ್ರೋಶಂ ೧೨೫

ವ|| ಅಲ್ಲಿ

ಆದಿಯ ನಾಲ್ಕು ಬೀದಿಯೆರಡುಂ ಕೆಲವಾಗದ ಭಿತ್ತಿ ತಮ್ಮೊಳಿಂ
ಟಾದುವು ಬೀದಿಯಂ ಕಳೆದು ಮತ್ತೆರಡೊಂದೆಸೆಗಾಗೆ ಮತ್ತಮೆಂ
ಟಾದುವು ಚಂದ್ರಕಾಂತಮಣಿಭಿತ್ತಿಗಳಂತಱಂತರಾಳಮಂ
ದ್ವಾದಶಕೋಷ್ಠಮಂ ಪೊಗೞಲೆನ್ನಳವೇ ಗಣಭೂಮಿಭಾಗಮಂ ೧೨೬

ವ|| ಅಲ್ಲಿ ವಿಶಾಖಾಚಾರ್ಯರ್ ಮೊದಲಾಗಿರ್ಪತೆಣ್ಬರ್ ಗಣಧರರುಂ ಅಯ್ನೂಱಯ್ವ-ದಿಂಬರ್ ಪೂರ್ವಧರರುಂ ಇರ್ಪತ್ತೊಂಬಯ್ಸಾಸಿರ್ವರ್ ಶಿಕ್ಷಕರುಂ ಇರ್ಛಾಸಿರದಿನ್ನೂ-ರ್ವರವಧಿಜ್ಞಾನಿಗಳುಂ ಇರ್ಛಾಸಿರದೊಂಬಯ್ನೂರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಸಾಸಿರದಿನ್ನೂಱಯ್ವದಿಂಬರ್ ಮನಃಪರ್ಯಾಯಜ್ಞಾನಿಗಳುಂ ಸಾಸಿರದ ನಾನೂರ್ವರ್ ವಾದಿಗಳುಂ ಅಸಂಖ್ಯಾತದೇವಿಯರುಂ ಮಧುಷೇಣಾರಿಕೆಯರ್ವೊದಲಾಗೆ ಅಯ್ವತ್ತುಸಾಸಿರ್ವರ್ ಜೀಯರುಂ ಮೂಱುಂ ಲಕ್ಕೆ ಶ್ರಾವಕಿಯರುಮೆನಿಪ್ಪ

ಮುನಿಜನಮನಿಮಿಷಕಾಂತಾ
ಜನವಾರ್ಯಶ್ರಾವಿಕಾಜನಂ ಪರಿವಿಡಿಯಿಂ
ಜಿನವಲ್ಲಭಪ್ರದಕ್ಷಿಣ
ಮೆನಿಸಿರ್ಪುದು ಮೊದಲ ದೆಸೆಯ ಕೋಷ್ಠತ್ರಯದೊಳ್ ೧೨೭

ವ|| ಆ ಕೋಷ್ಠದಿಂ ಪೊಱಗೆ ಮಹಾವೀಧಿಯಕ್ಕುಂ

ಮನಮೊಸೆದಿರ್ಪರ್ ಜ್ಯೋತಿ
ರ್ವನಭವನಾಮರಿಯರಲ್ಲಿ ತರತರದಿಂದಂ
ಜಿನಪತಿಗೆ ಮುಗಿದ ಕೈವೆರ
ಸನಿಬರುಮೆರಡನೆಯ ದೆಸೆಯ ಕೋಷ್ಠತ್ರಯದೊಳ್ ೧೨೮

ವ|| ಅಲ್ಲಿಂ ಪೊಱಗೆ ಮಹಾವೀಧಿಯಕ್ಕುಂ

ಅವನತಶಿರಸ್ಸರೋಜಂ
ಭವನವನಜ್ಯೋತಿರಮರನಿಕರಂ ಕ್ರಮದಿಂ
ದವತರಿಸಿರ್ಕುಂ ಪರಮೋ
ತ್ಸವದಿಂ ಮೂಱನೆಯ ದೆಸೆಯ ಕೋಷ್ಠತ್ರಯದೊಳ್ ೧೨೦

ವ|| ಅಲ್ಲಿಂ ಪೊಱಗೆ ಮಹಾವೀಧಿಯಕ್ಕುಂ ಇಂತೀ ಗಣಭೂಮಿಯಿಂದೊಳ ಗಣೇಂದ್ರನೀಳಮಯಗೋಪುರಚತುಷ್ಟಯಂ ಕಲ್ಪಾಮರಪ್ರತೀಹಾರಕರಿಂ

ಸ್ಫಟಿಕಯವೇದಿಕೆಯಿಂದೆಸೆವುದು. ಅಲ್ಲಿಂದೊಳಗೇೞುನೂರಯ್ವತ್ತು ಧನುರ್ವಿಸ್ತಾರಮ
ಅಷ್ಟಚಾಪೋತ್ಸೇಧಮುಮನಪ್ಪಕೆಯ್ದು

ಮುತ್ತಿನ ಪೊನ್ನ ಮಾಣಿಕದ ನೀಲದ ಪಚ್ಚೆಯ ರಾಸಿ ಸುತ್ತಲುಂ
ಸುತ್ತಿರೆ ಮಂಗಳೋಪಕರಣಾರ್ಚನೆಗಳ್ ತೆಱಪೇನುಮಿಲ್ಲೆನಲ್
ಮುತ್ತಿರೆ ನಾಲ್ಕುಮೆಯ್ವಿಡಿದು ಯಕ್ಷರನಕ್ಷರಧರ್ಮಚಕ್ರಮಂ
ಪೊತ್ತಿರೆ ಮುಖ್ಯಪೀಠಮೆಸೆದತ್ತು ವಿಡೂರಮಣಿಪ್ರಭಾಪ್ಲುತಂ ೧೩೫

ವ॥ ಮತ್ತಮಪೂರ್ವಪ್ರಣುತಾಯಮಾನಮಂ ಚತುರ್ದಶದಂಡೋತ್ಸೇಧ ಮುಮನಪ್ಪಕೆಯ್ದು

ಎರಡನೆಯ ಕನಕರುಚಿವಿ
ಷ್ಟರಮಷ್ಟಮಹಾಧ್ವಜಂಗಳಿಂ ಬಹುಪೂಜಾ
ಪರಿಕರದಿನೀವುದೀಕ್ಷಣ
ಸರೋಜವಿಕಸನಮನಂಶುಬಾಳಾತಪದಿಂ ೧೩೬

ವ॥ ಅಲ್ಲಿಂ ಮೇಲೆ ಚತುರ್ದಶದಂಡೋತ್ಸೇಧಮನಪ್ಪುಕೆಯ್ದು

ಮೂಱುಂ ಕಾಮನಬಿಲ್ಲಂ
ಬೀಱುತ್ತುಂ ಪಂಚರತ್ನರುಚಿಲೇಖೆಗಳಿಂ
ಮೂಱನೆಯ ರತ್ನಪೀಠಂ
ಮೂಱುಂ ಲೋಕಕ್ಕೆ ತಿಳಕಮಿರ್ಪಂತಿರ್ಕುಂ ೧೩೭

ವ॥ ಅಲ್ಲಿಂ ಮೇಲೆ

ನವಶತದಂಡವಾಭವನದುನ್ನತಿ ವಿಸ್ತರವಲ್ತೆ ನೀಳದಂ
ತೆವೊಲಱದಣಡವೆನಲಾರ್ಪರೆ ಭಂಗುರಪತ್ರಭಂಗಮಿ
ನ್ನವು ಬಹುವಿದ್ಧಮಿನ್ನವುಪಶಾಖೆಗಳಿನ್ನವು ಮುಖ್ಯಶಾಲೆಯಿ
ನ್ನವು ಮಣಿಕೂಟಮಿನ್ನವೆನಲಾರ್ಪರೆ ಪದ್ಮಜನುಂ ಫಣೀಂದ್ರನುಂ ೧೩೮

ಚಿತ್ತಮ ಸೂತ್ರಧಾರನೆನೆ ಸೂತ್ರಿಸಿದಂ ಸುರರಾಜನಾಜ್ಞೆಯಿಂ
ವಿತ್ತಪನಿನ್ನವಿಲ್ಲೆನಿಪ ರನ್ನದಿನೆಂಬ ಜಗದ್ವಿಚಿತ್ರಸಂ
ಪತ್ತಿಗೆ ನೋಂತ ಗಂಧಕುಟಿಯಂ ಪೊಗೞಲ್ಬಗೆದರ್ಪ ದರ್ಪಮೇಂ
ಚಿತ್ತದ ಗೊತ್ತು ಕಣ್ಣ ಪದಪೇನೊಳಕೊಳ್ಳದೆ ಮೌನಮುದ್ರೆಯಂ ೧೩೯

ಆ ರತ್ನಾತ್ಮಕಮಪ್ಪ ಗಂಧಕುಟಿಯೊಳ್ ತಂತಮ್ಮ ಗಂಧಂಗಳಂ
ಸಾರಂಗುಂದಿಸೆ ಜೈನದಿವ್ಯತನುಗಂಧಂ ಬೆಳ್ಮೊಗಂ ಬಿರ್ದುಕ

ರ್ಪೋರಂ ಭಂಗಮನೆಯ್ದಿದತ್ತುದುಂಧುಬಿಂ ದುವ್ಯಾಜದಿಂ ಮಾಲೆಗಳ
ನೀರಾಗುರ್ಕೀದುವೋಡಿ ಪೋಯ್ತುಗರಧೂಪಂ ವ್ಯೋಮಸೀಮಂಬರಂ ೧೩೬

ವ|| ಅಂತನತಿಶಯಮೆನಿಪ ಲಕ್ಷ್ಮೀಮಂಡಪಮಧ್ಯದೊಳ್

ಪದಪಿಂಗಾಶ್ರಯಮೆಂಬ ಕಣ್ಗೆ ನೆಲೆಯೆಂಬೀ ಚೆಲ್ವಿನೊಳ್ನಿಂದುದ
ಲ್ತಿದು ಚಿಂತಾಮಣಿ ಕಾಮಧೇನುವಿದೆ ಬೇಱೊಂದಿಲ್ಲೆನಲ್ ಪೆರ್ಮವೆ
ತ್ತುದು ನಿಷ್ಟಪ್ತಸುವರ್ಣಕಾಂತಿಕಮನೀಯಂ ನಾಲ್ವೆರಲ್ಮುಟ್ಟದಿ
ರ್ಪುದು ಸಿಂಹಾಸನಾದೇಶಮಂ ಚರಮದೇಹಂ ದೇವದೇವೇಶನಾ ೧೩೭

ತನುಸೌಂದರ್ಯದೊಳಂ ಪರಾಭವಿಸಿದಂ ಕಂದರ್ಪನಂ ಮೆಯ್ಯ ಕಂ
ಪಿನೊಳಂ ಬೀಱಿದನಂಗರಾಗಸುರಭಿದ್ರವ್ಯಂಗಳಂ ತನ್ನ ಪು
ರ್ವಿನೊಳಂ ಕರ್ಬಿನ ಬಿಲ್ಲಕೆಚ್ಚ ನುಡಿದಂ ಮೆಯ್ವೆರ್ಚಿದಂಗಾಲ ಕೆಂ
ಪಿನೊಳಂ ರಾಗಮನಿಕ್ಕಿ ಮೆಟ್ಟಿದನುದಾರಂ ಮಲ್ಲಿಭಟ್ಟಾರಕಂ ೧೩೮

ಅನವದ್ಯಂತಳೆದಂ ಮನೋಜ್ಞಮೆನಿಸಲ್ ಸಾಲ್ವಾದ್ಯಾಸಂಸ್ಥಾನಸಂ
ಹನನಂ ಸುಂದರಲಕ್ಷಣಂ ಸುಭಗರೂಪಂ ನಿರ್ಮಳತ್ವಂ ಹಿತ
ಸ್ವನಮಸ್ವೇದಮನಂತವೀರ್ಯತೆ ಸಿತಾಸ್ರಗ್ದಿವ್ಯಗಂಧಂಗಳೆಂ
ಬಿನಿತುಂ ಕಾಯಿಕಮಂ ದಶಾತಿಶಯಮಂ ಶ್ರೀಮಲ್ಲಿಭಟ್ಟಾರಕಂ ೧೩೯

ಚತುರಾಸ್ಯತ್ವಮಭುಕ್ತಿ ಕೇಶನಖಸಾಮ್ಯಂ ನಿರ್ನಿಮೇಷಂ ನಭೋ
ಗತಿ ವಿದ್ಯಾವಿಭವಂ ನಿರಸ್ತವದತುತ್ಸ್ಟೀನೋಪಸರ್ಗಂ ಚತು
ಶ್ಯತಗವ್ಯೂತಿಸುಭಿಕ್ಷತಾವಿಭವಮಚ್ಛಾಯತ್ವಮೆಂದಿಂತಿವಂ
ಕೃತಕೃತ್ಯಂ ತಳೆದಂ ದಶಾತಿಶಯಮಂ ಶ್ರೀಮಲ್ಲಿಭಟ್ಟಾರಕಂ ೧೪೦

ವ|| ಆಗಳಾತ್ರಿಭುವನೈಕವಲ್ಲಭಪ್ರಭಾಮಂಡಳಮಂ ಮಂಡಳಿಸಿ ಚತುಷ್ಷಷ್ಟಿಧವಳಚಾಮರಂಗಳಾಗಳಾಗಳೊಗೆವ ತಿಂಗಳ ಕೆಂಗದಿರ್ಗಳೆನಿಸೆಯುಂ ತೋಱಮುತ್ತಿನ ಮುಕ್ಕೊಡೆ ಪೊಂದಾವರೆಯರಲಡವಕೆಯೆನಿಸೆಯುಂ ಪಿಕಚದಶೋಕಲತೆ ವಿದ್ಮ್ಯಲ್ಲತೆ ಮಡಲ್ತುದೆನಿಸೆಯುಂ ಸುರಪಟಹಪೇಟಕಂ ಹೇಮಾಭ್ರಕಧೃತಿಯಿನಣ್ಕೆಗೆಯ್ದುದೆನಿಸೆಯುಂ ಸುರಕುಸುಮವೃಷ್ಟಿ ರೈವೃಷ್ಟಿಯೆನಿಸೆಯುಂ ಶೋಣಮಣಿಸಿಂಹವಿಷ್ಟರಂ ಕನಕವಿಷ್ಟರಮೆನಿಸೆಯುಂ ಕುಸುಮದೆಸಳ ಸೂವಡಿಂಗೆಱಗುವ ಮಱಿದುಂಬಿ ಪೊಂದಾವರೆಯ ರಜದೊಳ್ ಪೊರೆದ ತುಂಬಿಯೆನಿಸೆಯುಂ ರನ್ನದ ಸೂಸಕಂ ಪೊನ್ನಸೂಸಕಮೆನಿಸೆಯುಂ ಮರಕತಮಣಿತೋರಣಂ ವಿದೂರಮಣಿತೋರಣಮೆನಿಸೆಯುಂ ಪೊಳವ ಪಳಿಕಿನ ಭಿತ್ತಿ ಪೊಂಬಟ್ಟೆಯಿಂತೆರೆಸುತ್ತಿದುವೆನಿಸೆಯುಂ ಸಿತಪತಾಕೆ ಪೊಮ್ಮುಗಿಲ ತೆರೆಗೇಱ್ಗೆಯೆನಿಸೆಯುಂ

ದೆಸೆಗಳೆಲ್ಲಂ ಕೊಸಗಲರ್ದುವೆನಿಸೆಯುಂ ಅಮರಕಾಮಿನೀಸಮಿತಿ ಸೌದಾಮನೀಕಾಮಿನಿ-
ಯರನಿಸೆಯುಂ ಯಕ್ಷಾಮರಕರಕಳಿತಧರ್ಮಚಕ್ರಮೆಳ ನೇಸಱಿನಿಸೆಯುಂ ಸಭಾಸದರೆಲ್ಲ
ಧರ್ಮಾನುರಾಗರಸಪ್ರವಾಹದೊಳವಗಾಹಮಿರ್ದರೆನಿಸಿಯುಮನನ್ಯಸಾಮಾನ್ಯಮೆನಿಸಿ

ಪೊರೆಯೆತ್ತಿದ ಕುಡುಮಿಂಚಿನ
ತಿರುಳಂ ಮಸೆದಂತೆ ಮೆಯ್ಯ ಬಣ್ಣಂ ಬಂಬ
ಲ್ದಿರೆಮಸಗೆ ಗಂಧಕುಟಿಯೊಳ್
ಕರಮೆಸೆದಂ ಭುವನವಲ್ಲಭಂ ಮಲ್ಲಿಜಿನಂ ೧೪೧

ವ|| ಅನ್ನೆಗಮಿತ್ತಲ್

ಭವನಾವಾಸದವರ್ ಪದಿಂಬರಮರೇಂದ್ರರ್ ವ್ಯಂತರಾವಾಸಸಂ
ಭವರೆಣ್ಬರ್ ಶಶಿಸೂರ್ಯರಿರ್ವರುಟಿದರ್ ಪನ್ನಿರ್ವರಿಂದ್ರರ್ ನಭೋ
ವಿವರಂ ತಮ್ಮ ಬಲಕ್ಕೆ ಸಾಲದೆನೆ ಮೂಱುಂ ಲೋಕಮೊಂದಾಗಿ ಬ
ರ್ಪವೊಲೇಂ ಬಂದರೊ ಮಾಟ್ಪ ಕೌತುಕದಿನಾ ಕೈವಲ್ಯಮಾಂಗಲ್ಯಮಂ ೧೪೨

ಆಗುಳಿ ಪುಟ್ಟೆ ನೋಟಕರ ದಿಟ್ಟಿಗೆ ಲೆಕ್ಕಿಪ ತಕ್ಕುಗೆಟ್ಟು ಗೆಂ
ಟಾಗೆ ಮನಕ್ಕೆ ಬೆಕ್ಕಸದ ತಂದಲಗುಂದಲೆಯಾಗೆ ಕಾಲಿಡ
ಲ್ಕಾಗಸಮೇನುಮೆಯ್ದದೆನೆ ಬೇಸಱೆ ನೇಸಱ ಗಾಲಿಗಳ್
ಪೋಗೆಡೆಗೆಟ್ಟು ಬಂದುದು ಚತುರ್ವಿಧದೇವನಿಕಾಯಸೈನಿಕಂ ೧೪೩

ಮಿಂಚಂ ಮೇಣರೆದುಯ್ದ ನಾಗಸದೊಳುದ್ಯೋತಂಗಳಂ ಮೇಣಜಂ
ಸಂಚಂ ಮಾಡಿದನಲ್ಲದಂದು ಬಿಸುಪಂ ಬಿಟ್ಟಾತಪಂ ಬಿಟ್ಟುತ
ಣ್ಪಂ ಚಂದ್ರಾತಪವೊಡ್ಡುಗೊಂಡುದೆನೆ ನಾನಾಭೂಷಣಚ್ಛಾಯಿಯುಂ
ಚಂಚದ್ದೇಹಮರೀಚಿಯುಂಬೆಳಗೆ ಚೆಲ್ವಾದತ್ತು ದೇವಾಗಮಂ ೧೪೪

ವ|| ಅಂತು ಸಮವಸರಣಮಂಡಳಪರಿಸರಂ ಮಹೀಮಂಡಳಕ್ಕವತರಿಸಿ

ಧವಳಚ್ಛತ್ರಂಗಲಂ ಕೇತನವಿತತಿಗಳಂ ರಾಜ್ಯಚಿಹ್ನಂಗಳಂ ರ
ತ್ನವಿಮಾನಶ್ರೇಣಿಯಂ ದೂರದೊಳಿರಿಸಿ ಜಗನ್ನಾಥನಾಸ್ಥಾನಮಂ ನೋ
ಡುವಲಂಪಿಂ ಕಲ್ಪಕಾಂತಾಸಮಿತಿವೆರಸು ಸೌಧರ್ಮಕಲ್ಪಾಮರೇಂದ್ರಂ
ನವರತ್ನೋತ್ತಾನಸೋಪಾನಮನಡಿವಳಿರ್ಗೆಂಪಿಂದಮಂದಣ್ಕೆಗೆಯ್ದಂ ೧೪೫

ವ|| ಅಂತು ಸೋಪಾನಪಙ್ತಿಯನೇಱಿ ಪಂಚರತ್ನಧೂಳೀಶಾಳದಿಂ ಪರಿವೇಷಂಗೊಂಡ
ಸಮವಸರಣಮಂಡಳಮಂ ಪುಗುವ ಸಹಸ್ರಾಕ್ಷನ ಸಹಸ್ರಲೋಚನಮರೀಚಿಗಳ
ಖಿಳದಿವಿಜನಾಯಕರ ದಿಟ್ಟಿಗಳುಮನಚ್ಚರಗಣಿಕೆಯರ ದಿಟ್ಟಿಗಳುಮನೊದನೆ

ಕೂಡಿಕೊಂಡು ಚಕ್ರವಾಳಭೂಮಿಯ ಚಿತ್ರದಂಚೆಯೊಡನೆ ನೆಟಿಲಂಚೆ ಯಾಡಿಯುಂ ಜಳಖಾತಿಕಾಭೂಮಿಯ ನೀರ್ವಕ್ಕಿಗಳೊಡನೆ ನೀರಾಟಮಾಡಿಯುಂ ಮಲ್ಲೀವನ-ಭೂಮಿಯ ಮಱಿದುಂಬಿಯ ಬಂಬಲೊಡನೆ ಪರಿಮಱಿಯಾಡಿಯುಂ ಉಪವನ-ಭೂಮಿಯ ಗಿಳಿಗಳೊಡನೆ ಗಿಲಿಗಿಲಿಗಂಬ ಮಾಡಿಯುಂಧ್ವಜಭೂಮಿಯ ಪೆಟಿಯಿಗ-ಗಳೊಡನೆ ಪೆಕ್ಕಣಮಾಡಿಯುಂ ಕಲ್ಪಭೂಮಿಯ ಕೋಗಿಲೆಗಳೊಡನೆ ತಳಿರುಯ್ಯ-ಲಾಡಿಯುಂ ಭವನಭೂಮಿಯ ಪಾರಿವಂಗಳೊಡನಡಂಗುಱಿಚಾಡೆಯುಂ ಗಣಭೂಮಿಯ ಗೋಪುರಮಣಿಕಳಶಮರೀಚಿಪಲ್ಲವದೊಡನೆ ಚಲ್ಲಮಾಡಿಯುಂ ತಣಿಯದೆ ಮತ್ತಂ

ಬಗೆಯೊಳ್ ಕೌತೂಹಳಂ ಕೈಮಿಗೆ ಪುಳಕಿಸೆ ಮೆಯ್ಯ್ಮಾನಗಂಬಂಗಳಂ ನಾ
ಟ್ಯಗೃಹಗ್ರಾಮಂಗಳಂ ಧೂಪಘಟಕಟಕಮಂ ಸಿದ್ಧಚೈತ್ಯದ್ರುಮಶ್ರೇ
ಣಿಗಳಂ ಸ್ತೂಪಂಗಳಂ ತೀವಿದ ನವನಿಧಿಯಂ ಮಂಗಳದ್ರವ್ಯಮಂ ದ್ವಾ
ರಗೃಹಸ್ತೋಮಂಗಳಂ ಸುತ್ತಿದುವು ಸುಱಿದು ಸುತ್ರಾಮನೇತ್ರಾಂಶುಕಂಗಳ್ ೧೪೬

ವ॥ ಅಂತು ಸಮವಸರಣಭೂಮಿಗಳಂ ನೋಡಿ ಮೆಚ್ಚುತ್ತುಂ ಬಂದು

ಚರಣನಖಾಂಶು ನೀರ್ದಳಿಯೆ ಪಾದತಳಂ ಕುಸುಮೋಪಹಾರಮಂ
ವಿರಚಿಸೆ ಪದ್ಮರಾಗಮಣಿಮುದ್ರಿಕೆ ತಣ್ಪೊದರತ್ತೆ ಮೌಕ್ತಿಕ
ಭರಣಮರೀಚಿಮಾಳೆ ಗುಡಿಗಟ್ಟೆ ಗೃಹಾರ್ಚನೆ ಪುಟ್ಟೆ ಮೊಱಿ ಸೂಟಿ್
ಸುರಪತಿ ಮಲ್ಲಿನಾಥಸಭೆಯಂ ಬಲಗೊಂಡನುದಾತ್ತ ಭಕ್ತಿಯಿಂ ೧೪೭

ವ॥ ಅಂತು ಬಲಗೊಂಡು

ಎಮೆಯಿಕ್ಕದ ನಯನಂಗಳ
ಸಮುದಾಯಂ ಮಲ್ಲಿಜಿನನ ಪೆಸಱಕ್ಕರದಂ
ತಮರ್ದಿರೆ ನಿಂದಂ ಬಾಗಿಲೊ
ಳಮರೇಂದ್ರಂ ರತ್ನಶಾಸನಸ್ತಂಭದವೊಲ್ ೧೪೮

ವ॥ ಅಂತು ನಿಂದು ನಮೇರುಮಂದಾರಪಾರಿಜಾತದಲರನುತ್ತಾನಿತಕರ ಕಿಸಲಯಪುಟಂ -ಗಳೊಳ್ ತೆಕ್ಕನೆ ತೀವಿಕೊಂಡು

ಅಮರಸ್ತ್ರೀಜನಮರ್ಚನೋಪಕರಣದ್ರವ್ಯಂಗಳಂ ತಾಳ್ದಿ ಜಂ
ಗಮವಲ್ಲೀವನಲೀಲೆಯಿಂ ಬರೆ ಸಹಸ್ರಾಕ್ಷಂ ಮನಂಗೊಂಡು ಜಂ
ಗಮನೀಳೋತ್ಪಳಷಂಡದಂತೆ ಪುಗುತಂದಂ ಭಂಗುರಾಸ್ಥಾನರಂ
ಗಮನಾಗಳ್ ಪರಿಷದ್ವಿಳೋಚನಮದಾಳಿಶ್ರೇಣಿ ಮೇಲ್ವಾಯ್ವಿನಂ ೧೪೯

ವ॥ ಅಂತು ಬಂದು ಜಗತ್ತ್ರಿತಯಪತಿಯ ಪಾದಪೀಠೋಪಕಂಠದೊಳ್ ಪುಷ್ಪಾಂಜಳಿಕ್ಷೇಪದೊಡನೆ ಸರ್ವಾಂಗಪ್ರಣಾಮಮನೊಡರ್ಚಿ ಕಿಂಚಿನ್ನಮಿತಮಣಿ ಮಕುಟನುಂ ಮುಕುಳಿತಕರಪುಟನುಮಾಗಿ

ಆತಪಬಾಧಾರಹಿತಂ
ಗಾತಪವಾರಣದೊಳೇಂ ಜಗತ್ತ್ರಯನಾಥ
ಖ್ಯಾತಿಗೆ ನಿಮಿತ್ತಮಿರ್ಕುಂ
ಶ್ವೇತಾತಪವಾರಣತ್ರಯಂ ನಿನಗೆ ಜಿನಾ ೧೫೦

ಸ್ಯಾದ್ವಾದಶ್ರೀರಮಣ ಭ
ವದ್ವೀಭವನಮನಱಿಪುವಂತೆ ಭೋರ್ಗಱಿದುವು ಶ
ಬ್ದಾದ್ವೈತಮೆಂಬಿನಂ ಸಾ
ರ್ಧದ್ವಾದಶಕೋಟಿದೇವದುಂದುಭಿಯ ರವಂ ೧೫೧

ಪುಸಿವ ಪಿಸುಣಾಡುವಳಿಪಂ
ಪೊಸಯಿಪ ಪೊಲದೆಡೆಗೆ ದೇವ ಪರಭಾಷೆಯನೇ
ೞಿಸಿ ದಿವ್ಯಭಾಷೆ ಜಿನ ನಿನ
ಗೆಸೆದುದು ಸಾರ್ಥಂ ಪ್ರಸನ್ನಸಕಳಪದಾರ್ಥಂ ೧೫೨

ಪರಮಶ್ರೀಸುಂದರಿಯೊಳ್
ಪರಿಣಯನೋತ್ಸಹಮಾಗೆ ಲಾಜಾಂಜಳಿಯಂ
ಸುರಿವಂತೆ ದೇವ ನಿಗನೇಂ
ಕರಮೆಸೆದುದೊ ಪಾರಿಜಾತಕುಸುಮಾಸಾರಂ ೧೫೩

ಆತಪದಿಂ ತಾಪಂ ಚಂ
ದ್ರಾತಪದಿಂದ್ಯೈಕಲಪ್ಪುದಿವು ಪರಿಪೀಡಾ
ಹೇತುಗಳಿರುಳುಂ ಪಗಲುಂ
ದ್ಯೋತಿಪುವೆನಿಪುವು ಜಿನೇಂದ್ರ ನಿಜಭಾವಳಯಂ ೧೫೪

ಪೆಱಪೆಱವು ಪೀಠಮಕ್ಕುಂ
ಪೆಱಪಱಿರ್ಗೆ ಜಿನೇಂದ್ರ ಮೋಹಮದಗಜಮಂ ನೀ
ನಱಿಯಟ್ಟಿದುದರ್ಕಿದೆ ಪೆ
ರ್ಗುಱುಪೆನೆ ನಿನಗೆಸೆವುದಲ್ತೆ ಗಜರಿಪುಪೀಠಂ ೧೫೫

ಅಪವರ್ಗಶ್ರೀಯ ಕಟಾ
ಕ್ಷತಾತಮೆಂತಂತೆ ಚಂದ್ರಿಕಾಧವಳಂಗಳ್

ಚಪಳಂಗಳ್ ಜಿನಪತಿ ನಿನ
ಗೆ ಪೊಳೆವುವಜುವತ್ತು ನಾಲ್ಕು ಚಮರರುಹಂಗಳ್ ೧೫೬

ಜವನಿಂ ಶೋಕಾಕ್ರಾಂತಂ
ಭುವನಂ ಜಿನ ನಿನಗಶೋಕಲಾಂಛನಮಾಯ್ತಾ
ಜವನಂ ಗೆಲ್ದುದಱಿಂದಂ
ಬವೊಲುಲಿದುದು ಚಂಚರೀಕರವದಿನಶೋಕಂ ೧೫೭

ವ|| ಎಂದು ನಿರ್ಭರಭಕ್ತಿಯಿಂ ಸ್ತುತಿಯಿಸಿ

ಚರುಮಣಿಪರ್ಯಣಕ್ಕೆ ಬಿಡುಮುತ್ತಿನ ಸೇಸೆಗೆ ಧೂಪಭಾಜನ
ಕ್ಕರುಣಮಣಿಪ್ರದೀಪಿಕೆಗೆ ಕಲ್ಪಫಳಕ್ಕೆ ನಮೇರುಪುಷ್ಪಮಂ
ಜರಿಗೆ ಸುಗಂಧಶುಕ್ತಿಕೆಗೆ ಪುಣ್ಯನದೀಜಳಪೂರ್ಣರತ್ನಭಾ
ಸುರಕಳಶಕ್ಕೆ ಮೇರು ಪವಣೆಲ್ಲೆನೆ ಪೂಜಿಸಿದಂ ಸುರಾಧಿಪಂ ೧೫೮

ಎನಿತೊಳವಾತಪವಾರಣ
ವೆನಿತೊಳವು ವಿಚಿತ್ರಪಲ್ಲವಾಂಚಿತಮಣಿಕೇ
ತನವೆನಿತೊಳವಾಭರಣಮ
ವನಿತಱೊಳಂ ದೇವರನಿಬರುಂ ಪೂಜಿಸಿದರ್ ೧೫೯

ಪೂವಲಿಯಂ ಪರಕಲಿಸುವ
ದೇವಾಂಗವಿತಾನಮಂ ತೊಡರ್ಚುವ ನವಮು
ಕ್ತಾವಳಿಯಂ ಕಟ್ಟುವಧಿ
ಗ್ದೇವಿಯರೇಂ ರಾಗರಸದೊಳೋಲಾಡಿದರೋ ೧೬೦

ಆಗರುವ ಧೂಮಲತಾಶಾ
ಖೆಗಳೆಳಗಾಯ್ದುಱುಗಲೆಂದು ಬಗೆ ಬೆದಱುವಿನಂ
ಮಗಮಗಿಸುವ ತನಿಗಂಪಿಂ
ಗಗಲದೆ ಮೊಗಸಿದುವು ಮಧುಕರಪ್ರಕರಂಗಳ್ ೧೬೧

ಮರಕತಕಳಶಂಗಳ್ ಕೇ
ಸರಿಪಿಠಮನುದ್ಗತಾಂಶುಲೇಖಾದೂರ್ವಾಂ
ಕುರದಿಂದರ್ಚಿಸಿ ಮುಕ್ತಾ
ಭರಣಮನರ್ಚಿಸಿದುವಂಶುಜಳಧಾರೆಗಳಿಂ ೧೬೨

ವ|| ಅಂತಮರಪತಿಗಳರ್ಚಿಸಿ ತಂತಮ್ಮ ಕೋಷ್ಠಂಗಳೊಳ್ ಕುಳ್ಳಿರ್ಪುದುಂ ಮಲ್ಲಿಜಿನವಲ್ಲಭನಭಿಮುಖದೊಳಿರ್ದು ವಿನೀತಮಸ್ತಕನುಂ ಮುಕುಳಿತಹಸ್ತನುಮಾಗಿ

ಅತಿಶಯಮಪ್ಪ ನಾಲ್ಕುಮಳಬುದ್ಧಿಗಳಿಂದಳವಟ್ಟ ಋದ್ಧಿಸಂ
ತತಿಗಳಿನೊಂದಿ ಸಂಧಿಸಿದ ಬೋಧಚತುಷ್ಟಯದಿಂ ತ್ರಿಲೋಕವಿ
ಶ್ರುತನೆನಿಸಿರ್ದ ಸಪ್ತಮುನಿಮುಖ್ಯವಿಶಾಖಗಣಾಧಿಪಂ ಜಗ
ತ್ಪತಿಯನನಂತಬೋಧನಿಧಿಯಂ ಬೆಸಗೊಂಡನಶೇಷತತ್ತ್ವಮಂ ೧೬೩

ವ॥ ಅಂತು ಬೆಸುಗೊಳ್ವುದುಂ

ನಿರುಪಾಧಿಪ್ರಸರಂ ನಿರಸ್ತಪುನರುಕ್ತಂ ದ್ರವ್ಯಪರ್ಯಾಯಗೋ
ಚರಮವ್ಯಾಕುಳಮೇಕಯೋಜನಜನಾಪ್ತಂ ಸರ್ವಭಾಷಾತ್ಮಕಂ
ಸುರವೃಂದಾರಕಚಕ್ರವರ್ತಿಗಣಪಪ್ರಶ್ನಾನುಗಂ ಸ್ಯಾತ್ಪದ
ಸ್ಫುರಿತಂ ಪೊಣ್ಮಿದುದಂತನಂತಮಹಿಮಂ ದೇವಂಗೆ ದಿವ್ಯಸ್ವನಂ ೧೬೪

ವ॥ ಅಂತಪಗತತಾಲ್ವೋಷ್ಠಪುಟವ್ಯಾಪರಮೆನಿಪ ದಿವ್ಯಧ್ವನಿಯೊಳರ್ಹತ್ಪರಮೇಶ್ವರಂ ಬೆಸಸುವುದುಮುತ್ತಂಸಿತಜಿನಚರಣಚಂದ್ರಲೇಖನುಮಊನ್ಮೂಲಿತ ಸಂಸಾರವಿಪಿಶಾಖನುಮಪ್ಪ ವಿಶಾಖಗಣಪ್ರಮುಖಂ ಮಾರ್ಗಶಿರಸಿತೈಕಾದಶಿಯ ಪೂರ್ವಾಹ್ಣದೊಳ್ ದ್ವಾದಶಾಂಗದರ್ಥಂಗಳುಮನಪರಾಹ್ಣದೊಳ್ ಚತುರ್ದಶ ಪೂರ್ವದರ್ಥಪದಂಗಳುಮನವಧಾರಿಸಿ ಪ್ರಥಮಾನುಯೋಗಂ ಕರಣಾನುಯೋಗಂ ಚರಣಾನುಯೋಗಂ ದ್ರವ್ಯಾನುಯೋಗಮೆಂಬ ನಾಲ್ಕುಂ ಕಲ್ಪಮಾಗೆ ಗ್ರಂಥರಚನೆಯಂ ಮಾಡಿ ಸಭಾಜನಹೃದಯಮಣೀಭಾಜನದೊಳ್ ಧರ್ಮಾಮೃತಮಂ ತೀವುತ್ತು ಮಿರ್ಪುದುಮಾಗಳ್

ಹಿತಮಂ ವಿಶ್ರುತಮಂ ದಯಾಮಹಿತಮಂ ಸ್ಯಾದ್ವಾದವಿದ್ಯಾಸಮ
ನ್ವಿತಮಂ ಸನ್ಮತಮಂ ನಿಯೋಜಿಸಿ ವಿನೇಯಶ್ರೇಣಿಯಂ ಕೂಡಿ ನಿ
ರ್ವೃತ್ತಿಯಮ ಪೊರ್ದಿಸಲಿರ್ದ ದೇವಗಮನಾಭಿಪ್ರಾಯಮಂ ತತ್ಸಭಾ
ಪತಿ ದಿವ್ಯಾವಧಿಬೋಧದಿಂದಮಱಿದಂ ಸೌಧರ್ಮಕಲ್ಪಾಧಿಪಂ ೧೬೫

ವ॥ ತದನಂತರಂ

ಸದಯಸ್ವಾಂತಮಯೂರನೀರದರವಂ ದುರ್ಮೋಹಸಂದೋಹಶೈ
ಳದರೀವಜ್ರರವಂ ದಯಾಮೃತತನದೀಕಲ್ಲೋಲಮಾಲಾರವಂ
ಮದನವ್ಯಾಳಗಜೇಂದ್ರಸಿಂಹರವಮೆಂಬನ್ನಂ ಮರುದ್ವಾದಿತಂ
ಪುದಿದತ್ತಂಬರಮೆಲ್ಲಮಂ ಜಿನಸಭಾಪ್ರಸ್ಥಾನಭೇರೀರವಂ ೧೬೬

ವ॥ ಆಗಳ್

ಕುನಯಕ್ಷೋಣೀಧ್ರಮಂ ಚೂರ್ಣಿಸೆ ನಿಜಮತವಜ್ರಪ್ರಹಾರಂ ತ್ರಿಳೋಕೀ
ಜನಮೋಹಧ್ವಾಂತಮಮಂ ಸಂಹರಿಸೆ ನಿಜತನುಚ್ಛಾಯೆ ದುರ್ವೃತ್ತಕೇನಾ
ಶನ ಸೇನಾಚಕ್ರಮಂ ಪಾಳಿಸೆ ನಿಜವಿಯಾರಂಭಗಂಭೀರಭೇರೀ
ಧ್ವನಿ ಧರ್ಮಾನುಗ್ರಹಾರ್ತಂ ನಿಜಮೆನೆ ತಳೆರ್ದಂ ಧರ್ಮಚಕ್ರಾಧಿನಾಥಂ ೧೬೭

ಪಾಡೆಮಜೆದುಂಬಿ ಕೈನಿಜೆ
ದಾಡೆ ಲತಾಪಲ್ಲವಂ ಲತಾಂತಾಸವದೊಳ್
ಮೂಡಿ ಮುಳುಗಾಡಿ ತಣ್ಣನೆ
ತೀಡಿದನನುಕೂಳಮಂದಮಾರುತನಾಗಳ್ ೧೬೮

ಪರೆಯೆ ಘನತಿಮಿರಪಟಳಂ
ನಿರಸ್ತಮೆನಿಸಿರೆ ರಜೋವಿಕಾರಂ ಯೋಗೀ
ಶ್ವರಹೃದಯದಂತೆ ರೋದೋಂ
ತರಮುಂ ದೆಸೆಯುಂ ಪ್ರಸನ್ನಮೆನಿಸಿದುವಾಗಳ್ ೧೬೯

ಗಿಡುಬಳ್ಳಿಮರಂಗಳ್ ದಾಂ
ಗುಡಿಯಿಂ ತಳಿರಿಂದರಲ್ಗಳಿಂ ಪಣ್ಬಳದಿಂ
ಪಡೆದುವು ಚೆಲ್ವಂ ಜಿನಪತಿ
ನಡೆವೆಡೆಯೊಳ್ ನೆಲಸೆ ತಮ್ಮೊಳಾಜುಂ ಋತುಗಳ್ ೧೭೦

ಮರತಕದ ಜಗಲಿವೋಲು
ರ್ವರೆಯೆಲ್ಲಂ ಸರ್ವಸಸ್ಯದಿಂ ನಯನಮನೋ
ಹರಮೆನೆ ಪಸುರ್ವುವೆತ್ತುದು
ಪರಮಜಿನೇಶ್ವರನ ಗಗನಗಮನೋತ್ಸವದೊಳ್ ೧೭೧

ಮಣಿದರ್ಪಣಸಮಮೆನೆ ಧಾ
ರಿಣಿ ರತ್ನದ್ಯುತಿಯಿನೆಸೆಯ ತಂತಮಗೆ ಮರ
ದ್ಗಣಮಲ್ಲಿ ಧೂಳಿಕಂಟಕ
ತೃಣಕೀಟಕಶರ್ಕರೋಪಲಮನುಪಶಮಿಪರ್ ೧೭೨

ಘನಸಾರವಿಮಿಶ್ರಿತಚಂ
ದನರಸಮಂ ತಳಿದರೊಂದು ಯೋಜನದನಿತಂ
ಸ್ತನಿತಕುಮಾರರೆನಲ್ ಪೊಗ
ಳ್ವಿನಳವೆ ಜಿನಪತಿಯ ವಿಭವದತ್ಯುನ್ನತಿಯಂ ೧೭೩

ನೆನೆದಂಗೆ ನಿರ್ವೃತಿಶ್ರೀ
ಯನೀವ ಜಿನಚರಣಸರಸಿಜಂ ನಡೆವೆಡೆಯೊಳ್
ತನಗಿಂದ್ರಂ ಕಿದಜೆದ ಕೋ
ಕನದಂಗಳ ಸಿರಿಯನಪ್ಪುಕೆಯ್ದುವು ಪಿರಿದುಂ ೧೭೪

ಸುರರೋರೊರ್ವರನೊರ್ವರ್
ಕರೆವ ರವಂ ಕಿವುಡುವಿಟ್ಟಿನಂ ದೆಸೆ ರೋದೋಂ
ತರಮಂ ತೀವಿದುದಾಗಳ್
ತೆರೆಮಸಗುವ ತೋಯನಿಧಿಯ ರವಮೆಂಬಿನೆಗಂ ೧೭೫

ಪರಮದಯಾನಿಧಿಯೆನಿಸಿದ
ಪರಮನ ಸನ್ನಿಧಿಯಿನಖಿಳದೇಹಿಗಮಾಗಳ್
ದೊರೆಕೊಂಡತ್ತಾನಂದಂ
ವಿರೋಧಮಂ ಪತ್ತುವಿಟ್ಟು ಮೈತ್ರೀಭಾವಂ ೧೭೬

ಮಂಗಳಪರಿಕರಮಂ ದೇ
ವಾಂಗನೆಯರ್ಪಿಡಿದು ಮುಂದೆ ನಡೆವವಸರದೊಳ್
ಜಂಗಮಕಲ್ಪಲತಾನಿವ
ಹಂಗಳ ಚೆಲ್ವಿಂಗೆ ಭಂಗಮಂ ಪುಟ್ಟಿಸುವರ್ ೧೭೭

ಪರಿವೇಷಂಗೊಂಡವೋಲ್ಕಣ್ಗೊಳಿಸೆ ಬಳಸಿ ಕಾಲ್ಗಾಪಿನೊಳ್ಬರ್ಪ ಯಕ್ಷಾ
ಮರಸೇನಾಚಕ್ರಚೂಡಾಮಣಿಕಿರಣಮನಂತಾರ್ಕಭಾಚಕ್ರದೀಕ್ಷಾ
ಗುರು ಧರ್ಮದ್ರೋಹಚಕ್ರಂ ಸುಗಿದು ಪುಗೆ ದಿಶಾಚಕ್ರಮಂ ತತ್ಸಭಾಗ್ರೇ
ಸರಮೇನುದ್ಯೋತದಿಂ ಬಾಸಣಿಸಿದುದೊ ವಿಯಚ್ಚಕ್ರಮಂ ಧರ್ಮಚಕ್ರಂ ೧೭೮

ವ॥ ಅಂತು ಸುರವಿರಚಿತಚತುರ್ದಶಾತಿಶಯುಮೆಸೆಯೆ ಸಮವಸರಣವಿಹಾರ ಮಹಾಮಹಿಮೆಯಂ ಮೆಱೆಯುತ್ತುಂ

ನೀಡುತ್ತುಂ ಕುಮತಕ್ಕೆ ತೇಜದೇಜೆವಂ ವಿಖ್ಯಾತಿಯಂ ತಾಳ್ದಿದೊ
ಳ್ನಾಡಂ ಕೂಡೆ ತೊಟಿಲ್ದು ಭವ್ಯಜನಮಂ ರತ್ನತ್ರಯಾಳಂಕೃತಂ
ಮಾಡುತ್ತುಂ ದೆಸೆವೆಗ್ಗೆ ಧರ್ಮವಿಜಯಶ್ರೀಕೇಕರಾಳೋಕನಂ
ಕ್ರೀಡಾಮಂಡನಮಾಗೆ ಮಲ್ಲಿಜಿನಪಂ ಸಮ್ಮೇದಮಂ ಮುಟ್ಟಿದಂ ೧೭೯

ವ॥ ಅಂತು ಬಂದು ಕಾಯಸ್ಥಿತಿಕಾಲಮೇಕಮಾಸಮೆನೆ ವಿನೇಯಜನವಿಹರಣ ವಿಕ್ರಿಯಾವಿಭೂತಿಯಂ ವಿಸರ್ಜಿಸಿ ಪಂಚಸಹಸ್ರಪರಮಯೋಗೀಂದ್ರರಿಂ ಪರಿವೃತನಾಗಿ

ಕ್ಷಿತಿಭೃನ್ಮೂರ್ಧಾಭಿಷಿಕ್ತಂ ಬಲಮೆನಿಸಿದ ಸಮ್ಮೇದಶೈಳೇಂದ್ರದೊಳ್ ಕ
ಲ್ಪ ತರುಸ್ತೋಮಂಗಳಿಂ ಮಂಡಳಿಸಿದ ಕನಕಾಂಭೋಜಷಂಡಂಗಳಿಂ ಮಂ
ಡಿತಮಾದತ್ಯಂತಶುದ್ಧಸ್ಫಟಿಕಮಣಿಶಿಳಾಪಟ್ಟದೊಳ್ ಮಲ್ಲಿನಾಥಂ
ಪ್ರತಿಮಾಯೋಗಪ್ರಯೋಗಂ ಗುಣಭವನಮಣಿಸ್ತಂಭಮಿರ್ಪಂತಿರಿರ್ದಂ ೧೮೦

ವ॥ ಅಂತಿರ್ದು ಸೂಕ್ಷ್ಮಶರೀರಯೋಗದಿಂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಪರಮಶುಕ್ಲಧ್ಯಾನದೊಳ್ ನೆಲಸಿ ಲಘುಕರ್ಮಪರಿಪಾಚನಶಕ್ತಿಪ್ರಾಪ್ತಿನಿಮಿತ್ತಂ ದಂಡಕವಾಟಲೋಕಪೂರಣಾಪ್ರತರಾಕ್ರಿಯೆಗಳೊಳಂ ಪ್ರತಿಸಮಯಂ ಪ್ರಯೋಗಿಸಿ ನಾಲ್ಕುಮ ಘಾತಿಕರ್ಮಸ್ಥಿತಿಕಾಲಮಂ ಸದೃಶಂ ಮಾಡಿ ಮೂಲಶರೀರ ಪರಿಣಾಮದೊಳ್ ನಿಂದು ವಾಙ್ಮನಃಕಾಯಯೋಗಮುಸಡಂಗಿಸಿ ಸಕಳಬಂಧಾಶ್ರವನಿರೋಧದಿನ-ಯೋಗಕೇವಳಿಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನ ಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾನಿವೃತ್ತಿ ಧ್ಯಾನಪ್ರವೃತ್ತನಾಗಿ

ಪರಿಪೂರ್ಣಮೆನಿಸೆ ಗುಣಪರಿ
ಕರಂ ಯಥಾಖ್ಯಾತಚರಿತನಾಗಿ ಜಿನಂ ಮು
ಕ್ತಿರಮಾಕಚಗ್ರಹಸ್ತನ
ಪರಿರಂಭಾರಂಭಕೇಳಿಗುತ್ಸುಕನಾದಂ ೧೮೧

ವ॥ ಆಗಿತದು ಪಾಂತಸಮಯದೊಳನನ್ಯತರವೇದನೀಯದೇವಗತಿತತ್ಪ್ರಾಯೋಗ್ಯಾನು-ಪೂರ್ವ್ಯೌದಾರಿತಶರೀರತದ್ಬಂಧಸಂಘಾತಸಂಸ್ಥಾನಾಂಗೋಪಾಂಗಸಂಪನನವರ್ಣಗಂಧರಸಸ್ಪರ್ಶಪ್ರಶಸ್ತಾಪ್ರಶಸ್ತವಿಹಾಯೋಗತಿಗುರುಲಘೂಪಘಾತಪರ-ಘಾತತಪೋದ್ಯೋತೋಚ್ಛ್ವಾಸಪರ್ಯಾಪ್ತಿಪ್ರತ್ಯೇಕಶರೀರಸ್ಥಿರಾಸ್ಥಿರಶುಭಾಶುಭಸಂಭಗದುರ್ಭಗಸುಸ್ವರದುಸ್ವರಾದ್ಯನಾದಿಯಶಸ್ಕೀರ್ತಿನಿರ್ಮಾಣನಿಜ್ಜೈರ್ಣತ್ರಯಂಗಳೆಂಬೆಪ್ಪತ್ತೆರಡು ಪ್ರಕೃತಿಗಳಂ ದೂರೀಕೃತಂಮಾಡಿ

ಪ್ರಕೃತಿಗಳಗಲ್ಕೆಯಿಂ ಶು
ಕ್ತಿಕೆಯಿಂ ಪೊಱಮಟ್ಟ ಮೌಕ್ತಿಕಂ ನೀರದಮಾ
ಲಕೆಯಿಂ ತೊಲಗಿದ ಶಶಿ ಕಾ
ಳಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ ೧೮೨

ವ॥ ಅನಂತರಂ ಚರಮಸಮಯದೊಳ್ ಪರಿಶಿಷ್ಟಾನ್ಯತರವೇದನೀಯಮನುಷ್ಯ ಗತಿಪಂಚೇಂದ್ರಿಯಜಾತ್ಯಾನುಪೂರ್ವತ್ರಸನಾಮಬಾದರ ಪರ್ಯಾಪ್ತಕಸುಭಗಾದೇಯಯಶಸ್ಕೀರ್ತಿತೀರ್ಥಕರನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ

ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ ಸಕಳಸಂಸಾರದುಃಖ ಬಾರಭಂಜನನು ನಿರಂಜನನುಮೆನಿಸಿ

ಕಿಡೆ ನಿಶ್ಶೇಷಮಘಾತಿ ಪಜ್ಜಳಿಸೆ ತನ್ನೆಂಟುಂ ಗುಣಂ ಕೂಡೆ ನೇ
ರ್ಪಡೆ ದೀಪಾರ್ಚಿಗಳಂತಿರೂರ್ಧ್ವಗತಿ ಮೂಱುಂ ಲೋಕದಿಂ ಮೇಲೆ ಬೆ
ಳ್ಗೊಡೆಯಿರ್ಪಂತಿರೆವೊಲಿರ್ದ ಸಿದ್ಧನಿಳಯಕ್ಕಾನಂದದಿಂ ಬಂದು ಕೈ
ವಿಡಿದಂ ಶಾಶ್ವತಮಪ್ಪ ಮುಕ್ತಿಪಥವಂ ಶ್ರೀಮಲ್ಲಿಭಟ್ಟಾರಕಂ ೧೮೩

ಪರಮಂ ಫಾಲ್ಗುಣಶುದ್ಧದ
ಭರಣಿಯ ಪಂಚಮಿಯ ಪೂರ್ವರಾತ್ರದೊಳಪವ
ರ್ಗರಮಾ ವದನಾಂಭೋರುಹ
ಪರಿಮಳಮಂ ಪೀರ್ದನಂತಸುಖಮಯನಾದಂ ೧೮೪

ವ॥ ಆಗಳ್

ಪೂಮಱಿ ಕಱೆದತ್ತಖಿಳಾ
ಶಾಮುಖಮಂ ದೇವದುಂದುಭಿಧ್ವನಿ ತೀವಿ
ತ್ತಾಮೋದಮತ್ತಮಧುಕಲರ
ದಾಮಂ ತೀಡಿತ್ತು ಮಂದಮಂದಸಮೀರಂ ೧೮೫

ಇನಿತರಮಪಟಹಪೇಟಕ
ಮಿನಿತಮರ ವಿಮಾನಪಟಳಮಿನಿತಮರಪತಾ
ಕಿನಿಯೆಂದು ನೆನೆಯಲರಿದೆನೆ
ಜಿನಪೂಜೆಗೆ ವಂದರಮರಪರಿವೃಢರಾಗಳ್ ೧೮೬

ಚಿತ್ರಾತಪತ್ರದಿಂ ಶತ
ಪೊತ್ರವನಸ್ಥಳಿಯನಿಱಿಸೆ ಗಗನಂ ದೆಸೆಯಂ
ಚಿತ್ರಿಸೆ ಕಿರೀಟಕಿರಣಂ
ದ್ವಾತ್ರಿಂಶತ್ತ್ರಿದಶಪತಿಗಳಂದೆಯ್ತಂದರ್ ೧೮೭

ವ॥ ಅಂತು ನಿರ್ವಾಣಪೂಜೆಗೆ ನಿಖಿಳಗೀರ್ವಾಣಪತಿಗಳೆಯ್ತೆವರ್ಪಾಗಳ್

ಪಳಿಕಿನ ಕೊಡದೊಳ್ ಗಂಗಾ
ಜಳಂಗಳಂ ತೀವಿ ತರ್ಪ ಸುರವನಿತೆ ಘನೋ
ಪಳಮಂ ತಾಳ್ದಿದ ವಿದ್ಯು
ದ್ವಿಳಾಸಮಂ ನಿಜವಿಳಾಸದಿಂ ಮಸುಳಿಸಿದಳ್ ೧೮೮

ಚಂದನಕರ್ದಮಶುಕ್ತಿಕೆ
ಕೆಂದಳದೊಳ್ಗಳಿರೊಳಿಸೆವ ಪೂಗೊಂಚಲೆನಲ್
ಬಂದರ್ ತಾರಾಂತಃಪುರ
ಸುಂದರಿಯರ್ ಪರಮಚರಮಪೂಜೋತ್ಸವದೊಳ್ ೧೮೯

ಸಿತವಿಕಸಿತಾಬ್ಜದೊಳ್ ತೀ
ವಿ ತಂದರೆಳವೆಜೆಯ ಕದಿರ ಮೊಳೆಯೆನಿಪ ಸಿತಾ
ಕ್ಷತಮಂ ದಿಗ್ದೇವತೆಯರ್
ಸಿತಲೋಚನರುಚಿ ದಿಗಂತಮಂ ಬಳಸುವಿನಂ ೧೯೦

ಜ್ಞಾನಕೃಶಾನುವಿಂದಮುರಿದಳ್ಗಿದ ಕಾಮನ ಮೋಹನಾಸ್ತ್ರಸಂ
ತಾನಶರಾಸನಾವಳಿಯನೀಕೆಗಳೊಪ್ಪಿಸಲೀ ಜಿನೇಂದ್ರನಾ
ಸ್ಥಾನಿಗ ಬಂದರಕ್ಕುಮೆನೆ ರಂಜಿಸೆ ಕೆಂದಳದೊಳ್ ಲತಾಂತಮಾ
ಲಾಸಿಕುರುಂಬಮಿಕ್ಷುಲತೆ ಬಂದುದು ಕಿನ್ನರಕನ್ಯಕಾಜನಂ ೧೯೧

ಕರೆಗಣ್ಮುವ ನಿಜಲಾವ
ಣ್ಯರಸಂ ಪರಿನಾಳಮಿಕ್ಕಿದತ್ತನೆ ತಂದಳ್
ಸುರಸುಂದರಿ ಚಂದನರಸ
ಭರಿತಾಯತಕೇತಕೀದಳದ್ರೋಣಿಗಳುಂ ೧೯೨

ತಳೆದನಿಮಿಷವಧುವಿರ್ ಕ
ಣ್ಗೊಳಿಸಿದರುನ್ನಿ ಷಿತಕರ್ಣಿಕಾರಲತಾಸಂ
ಕುಳಮನೆ ಸುವರ್ಣಮಯಪ
ರ್ಯಳಮಂ ಭಕ್ಷ್ಯೋಪದಂತೆ ಚರುವಿಳಸನಮಂ ೧೯೩

ಪೆಡೆವರಲಾವೊದೊ ರನ್ನದ
ಸೊಡರಾವೊದೊ ಪೇಟಿಮೆಂಬಿನಂ ಸಂದೆಗದ
ಚ್ಬುಡಿದಿರೆ ನಾಗಾಂಗನೆಯರ್
ಗಡಣದೆ ಸಮ್ಮೇದಸಾನುವಂ ಸಾರ್ತಂದರ್ ೧೯೪

ಒಗೆದ ಕುಚಂ ಮೊಗಂಗುಡದ ಜೆಲ್ವಿನೊಳೀಟಿಸೆ ತತ್ಸಮೀಪದೊಳಗ
ಪೊಗೆಮೊಗವಾದುದವೊಲ್ ತಳೆದ ಧೂಪಘಟಂಗಳಿನುಣ್ಮಿ ಪೊಣ್ಮಿ ತ
ಜ್ಜಿಗುರುವ ಧೂಮಲೇಖೆ ಸುರಸುಂದರಿಯರ್ನಡೆತಂದರಂದು ಸು
ಯ್ಯೊಗೆದಳಿಮಾಲೆ ತಮ್ಮ ಲುಳಿತಾಳಕದೊಳ್ತೊಡವಾದುದೆಂಬಿನಂ ೧೯೫

ವಿವಿಧಫಳಮಾದುವೋರೊಂ
ದುವಲ್ಲಿಗೆನೆ ಬೆಲ್ವುವೆತ್ತುವ ಮರೀಕರಪ
ಲ್ಲವದೊಳ್ ಕಾಂಚನಕದಳೀ
ನವಾಮ್ರನಾರಂಗನಾಳಿಕೇರಫಲಂಗಳ್ ೧

ನಿರತಿಶಯಮೆನಿಪ ಧರ್ಮಾ
ನುರಾಗಮೀರ್ತೋರ್ಪುದೆಂಬಿನಂ ಸುರವನಿತಾ
ಕರಕಿಸಲಯದೊಳ್ ಕುಂಕುಮ
ಪರಿಪೂರ್ಣಸುವರ್ಣಭಾಜನಂ ಕಣ್ಗೊಳಿಕುಂ ೧೯

ವ|| ಅಂತಮರಸಮಿತಿ ಗಗನತಳದಿನವನೀತಳಕ್ಕವತರಿಸಿ

ಜವನಂ ಮಲ್ಲಿಜಿನಂ ಜವಂಗಿಡಿಸಿ ಗೆಲ್ಲಂಗೊಂಡ ಸಮ್ಮೇದಶೈ
ಳವಿಶಾಳಸ್ಫಟಿಕಸ್ಥಳೀನಿಕಟದಿಂ ದ್ವಾತ್ರಿಂಶದಿಂದ್ರರ್ಕಳು
ತ್ಸವದಿಂದರ್ಚಿಸುವಾಗಳೇಂ ಕಱಿದುದೋ ಕರ್ಣಾಮೃತಸಾರಮಂ
ವಿವಿಧಾತೋದ್ಯಲಯಾನುಗಂ ಸುರವಧೂಮಂಜೀರಿಕಾಸಿಂಜಿತಂ ೧೯

ವ|| ಅಂತರ್ಚಿಸಿ ಚತುರ್ನಿಕಾಯನಿಳಿಂಪನಾಯಕನಿಕಾಯಂ ಕರಕಿಸಲಯಮಂ ನೊಸಲ್ಗೆ ತಂ

ಮರಲ್ದರಲಜಾಪಮಂ ಗೊಲೆಗೆ ನೂಂಕಿ ಮಾಱೌಂಪುದುಂ
ಸ್ಮರಂ ನಿಜಶರೀರಸೌರಭಕೆ ಸೋಲ್ತು ತದ್ವ್ಯಾಜದಿಂ
ದ್ವಿರೇಫತತಿ ಚಾಪದಿಂ ತೊಲಗೆ ಬೆಕ್ಕಸಂಬಟ್ಟನಂ
ನಿರಾಯುಧನನೇಕೆ ಸುಟ್ಟೆ ಗಡ ಮಲ್ಲಿಭಟ್ಟಾರಕಾ ೧೯

ಮನೋಭವನ ಜನ್ಮಭೂಮಿ ಮನಮೆಂದು ನಿರ್ಬಂಧದಿಂ
ಮನಕ್ಕೆ ಲಯಮಂ ವಿನಿರ್ಮಿಸಿ ಮನೋಭವಂಗಾಶ್ರಯಂ
ವಿನಿಷ್ಟಮೆನಿಸಿತ್ತೆ ಮತ್ತೆ ಪೆಜರಾಪ್ತರೇನೀಯರೇ
ಮನೋಭವನುಮಂ ಮಹಾಪುರುಷ ಮಲ್ಲಿಭಟ್ಟಾರಕಾ ೨೦

ಪ್ರಿಯಪ್ರಮದೆಯಿಂದಗಲ್ದ ವಿಟರಂ ವಿಯೋಗಾರ್ತರಂ
ಯಂಗೊಳಿಸುಗುಂ ಮನೋಭವನ ಪೂವಿನಯ್ದಂಬುಗಳ್
ವಯಾಂಗನೆಯ ಸಂಗದಿಂ ಪರಮಸೌಖ್ಯಮಂ ಪೆತ್ತನಂ
ಭಯಂಗೊಳಿಸಲೇನಪಾರ್ತಪುವೆ ಮಲ್ಲಿಭಟ್ಟಾರಕಾ ೨೦

ಇನಪ್ರಭೆಯ ಭಂಗಿಯುಂ ಕಿಡಿಸಿ ದುಸ್ತಮಸ್ತೋಮಮಂ
ಜಿನಪ್ರಭೆ ವಿಶಿಷ್ಟದೃಷ್ಟಿಗೆ ಪದಾರ್ಥಮಂ ತೋಱೆಯುಂ

ಘನಕ್ಷುಧಿತದೋಷದೃಷ್ಟಿಗೆ ವಿಷಾದಮಂ ಬೀಜಿಯುಂ
ಬಿನಸ್ವರಮೆ ಭಂಡಮೇ ಬಳಮ ಮಲ್ಲಿಭಟ್ಟಾರಕಾ ೨೦೨

ಇದೇಂ ಜಡರೊ ಮೈತ್ರಿಯಂ ಕರುಣಮಂ ಬಿಸುಟ್ಟನ್ಯರಂ
ವಿದಾರಿಪುದೆ ವೀರಮಂಥರವಿಚಾರಚಾರ್ಕೆಲರ್
ಚಿದಾತ್ಮಭವದುಃಖಕಾರಣಮನಿಂದ್ರಿಯಾರಾತಿಯಂ
ವಿದಾರಿಸುವ ವೀರಮಂ ಮಱೆದು ಮಲ್ಲಿಭಟ್ಟಾರಕಾ ೨೦೩

ಚತುರ್ದಶೆಯೊಳಿರ್ದ ವಸ್ತುಗುಣಪಯರಯಜ್ಞಾನದಿಂ
ಚತುರ್ಮುಖನೆನಿಪ್ಪ ನಿನ್ನೊಳಶರೀರಿಯೊಳ್ಗಾವಿಲರ್
ಚತುರ್ಮುಖಮನೇಕೆ ಕಲ್ಪಿಸಿದರೀ ವಿಪರ್ಯಸ್ತರೊಳ್
ಮತಿಭ್ರಮೆಯನಾಗಲೀಯದಿರೆ ಮಲ್ಲಿಭಟ್ಟಾರಕಾ ೨೦೪

ಮೊದಲ್ಗಿಡಿಸಿ ಘಾತಿಕರ್ಮಮನಘಾತಿಕರ್ಮಂಗಳಂ
ಬಿದಿರ್ಚಿ ಗುಣಮೆಂಟುಮಂ ತಳೆದನಾಕುಳಂ ಪೊರ್ದಿದೈ
ಸದಾಶಿವನಿವಾಸಮಂ ಚರಮದೇಹಮಂ ಬಿಟ್ಟು ನೀಂ
ತ್ವದೀಯಪರಮತ್ವಮಂ ಪಿಡಿದೆ ಮಲ್ಲಿಭಟ್ಟಾರಕಾ ೨೦೫

ವ॥ ಎಂದು ವಸ್ತುಗುಣರೂಪಸ್ತವನಂಗಳಂ ಮಾಡಿ

ಪರಮಾನಂದದಿನಾಡೆ ತಾಂಡವಮನೀಶಾನೇಂದ್ರನುತ್ಕರ್ಷ ಹ
ರ್ಷರಸಾಡಂಬರದಿಂ ಗಣಂ ಕುಣಿಯೆ ಲಾಸ್ಯಪ್ರೌಢಿಯಿಂ ದೇವಸಂ
ದರಿಯರ್ ಮೆಚ್ಚಿಸೆ ಬಿಚ್ಚಳಿಸನಾವಂ ಸರ್ವಗೀರ್ವಾಣಭ
ಕ್ತಿರಸಾವೇಶಕೃತಾರ್ಚನಾತಿಶಯಮಂ ನಿರ್ವಾಣಕಲ್ಯಾಣಮಂ ೨೦೬

ವ॥ ಅಂತು ನಿರ್ವಾಣಪೂಜೆಯಂ ನಿರ್ವರ್ತಿಸಿದೇವ ದೇವರೆಲ್ಲಂ ನಿಜನಿವಾಸಕ್ಕೆ ಪೋಪುದುಂ

ಕುಸುಮ ಶ್ರೀಖಂಡಕೃಷ್ಣಾಗುರುವಿವಿಧಫಳಾದ್ಯರ್ಚನಾದ್ರವ್ಯದಿಂದ
ರ್ಚಿಸಿ ಮತ್ತಂ ತನ್ನ ಚಿತ್ತಂ ತಣಿಯದೆ ನಿರವದ್ಯಂ ಚಿರಸ್ಥಾಯಿ ನಿಚ್ಚಂ
ಪೊಸತೆಂಬೀ ಪೆರ್ಮೆಯಿಂ ಪಾವನಮೆನಿಸಿದ ವಾಕ್ಪೋಪಹಾರಂಗಳಿಂದ
ರ್ಚಿಸಿದಂ ಶ್ರೀಮಲ್ಲಿಭಟ್ಟಾರಕಪದಯುಗಮಂ ಭಾರತೀಕರ್ಣಪೂರಂ ೨೦೭

ಚರಿತಪುರಾಣಮಂ ನೆಱೆಯೆ ಪೇೞ್ಗೆಮ ದಿವ್ಯಭಾಷೆಯಿಂ
ಪರಮಜಿನೇಶ್ವರರ ಗಣಧರರ್ ಜಿನತತ್ವಮಹತ್ವಮನ್ಯಗೋ
ಚರಮೆ ರಸಾವಳಂಬಮೆನೆ ಮಲ್ಲಿಜಿನೇಂದ್ರಮಹಾಪುರಾಣಮಂ
ವಿರಚಿಸಿದಂ ಪ್ರಸಿದ್ಧಕವಿಪದ್ಧತಿಯಿಂ ಕವಿತಾಮನೋಹರಂ ೨೦೮

ಸಮಚಿತ್ತರಪ್ಪ ವಿದ್ವ
ತ್ತಮರಿರ್ದಾರಯ್ಯೆ ಸರಸಕವಿತಾರಸದೊಳ್
ಸಮನಕ್ಕುಮಧಿಕಮಕ್ಕುಂ
ಸಮಸ್ತಕಾವ್ಯಕ್ಕೆ ಮಲ್ಲಿನಾಥಪುರಾಣಂ ೨೮

ಸತತಂ ಪರಿಭಾವಿಸೆ ಮಳ
ಚತುರ್ದಶಂಗಳನದಿರ್ಪುಗುಂ ಚಿತ್ತಚಮ
ತ್ಕೃತಿ ಮಲ್ಲಿಜಿನಪುರಾಣಂ
ಚತುರ್ದಶಾಶ್ವಾಸಮುಚಿತಪದವಿನ್ಯಾಸಂ ೨೧

ನಿಜವಿಭವೋದಯಂ ಸಫಳಮಾಯ್ತೆನೆ ಮಲ್ಲಿಜಿನೇಂದ್ರಗೇಹಮಂ
ವಿಜಯಪುರಕ್ಕಳಂಕರಣಮಾಗಿರೆ ಮಾಡಿಸಿ ತಚ್ಚರಿತ್ರಮಂ
ಸುಜನಸಭಾವತಂಸಮೆನೆ ಪೇೞ್ದುದಿತೋದಿತಮಾಗೆ ಮಾಡಿದಂ
ನಿಜಕವಿತಾಗುಣೋದಯಮದೆಂಬಿನಮೀಕೃತಿ ನಾಗಚಂದ್ರನಾ ೨೧

ಸುಕೃತಿಪ್ರೀತಿಲತಾಸಮುತ್ಕಳಿಕೆ ವಿದ್ವನ್ಮಂಡಳೀರತ್ನಕಂ
ಠಿಕೆ ಧರ್ಮಾಮೃತಮೇಘಮಾಳಿಕೆ ವಚಶ್ರೀನರ್ತಕೀ ನೃತ್ಯವೇ
ದಿಕೆ ಸಾಹಿತ್ಯಸರೋಜಕರ್ಣಿಕೆ ಯಶಶ್ರೀಕೇಕರಾಳೋಕಚಂ
ದ್ರಿಕೆ ನಿಲ್ಕೀಕೃತಿ ಕಲ್ಪಕೋಟಿವರೆಗಂ ಭದ್ರಂ ಶುಭಂ ಮಂಗಳಂ ೨೧

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಲಚಂದ್ರ
ಮುನೀಂದ್ರಚರಣನಖಕಿರಣಚಂದ್ರಿಕಾಚಕೋರಂ ಭಾರತೀ
ಕರ್ಣಪೂರಂ ಶ್ರೀಮದಭಿನವಪಂಪವಿರಚಿತಮಪ್ಪ
ಮಲ್ಲಿನಾಥಚರಿತ ಪುರಾಣದೊಳ್
ಪರಿನಿರ್ವಾಣಕಲ್ಯಾಣನಂ ಚತುರ್ದಶಾಶ್ವಾಸಂ ಸಂಪೂರ್ಣಂ



ಶ್ರೀಮದಭಿನವ ಪಂಪವಿರಚಿತಃ

# ರಾಮಚಂದ್ರಚರಿತಪುರಾಣಂ

## ೧. ಪೀಠಿಕಾಪ್ರಕರಣಂ

ಶ್ರೀ ಕೇಳೀನಿಳಯಂ ನಿಜಾಂಘ್ರಿಕಮಳಂ ವಿದ್ಯಾನಟೀನಾಟ್ಯವೇ-
ದೀಕಲ್ಪಂ ಮುಖಚಂದ್ರ ಬಿಂಬಮಖಿಳೇಂದ್ರೋತ್ತಂಸಮಾಣಿಕ್ಯದೀ-
ಪಾಕೀರ್ಣಂ ಪರಿಪೀಠಪಾರ್ಶ್ವಮೆನಿಪಂ ಪೂಜಾರ್ಹನಾರ್ಹಂತ್ಯಲ-
ಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕೆಸ್ವಾರ್ಥಸಂಸಿದ್ಧಿಯಂ ॥೧॥

ಏನಸ್ಸಂತಾಮೆಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ ಮೆಯ್ಯಿಂ-
ದೇನಾನುಂಗುಂದೆ ಲೋಕಾಗ್ರದೊಳಿರೆ ಸಹಜಾನಂದ ಚೈತನ್ಯರೂಪಂ
ಜ್ಞಾನಜ್ಞೇಯಪ್ರಮಾಣಂ ಪಸರಿಸೆ ಗಣನಾತೀತರಾಗಿರ್ದ ಮುಕ್ತಿ-
ಶ್ರೀನಾಥರ್ ಸಿದ್ಧರಾತ್ಯಂತಿಕಸುಖಪದವೀಸಿದ್ಧಿಯಂ ಮಾೞ್ಕೆ ನಮ್ಮೊಳ್ ॥೨॥

ಮನಮಂ ಕಟ್ಟಿ ಗುಣಂಗಳಿಂ ತುೞಿದು ಪಂಚಾಚಾರದಿಂ ಪಂಚಬಾ-
ಣನ ಬಾಹಾಬಳಮಂ ಸಮಗ್ರತರ ಶಿಷ್ಯಾನುಗ್ರಹಪ್ರೌಢಿವೆ-
ತ್ತನವದ್ಯರ್ದಯೆಗೆಯ್ವರಕ್ಕೆ ದಯೆಯಿಂ ಭವ್ಯಾಳಿಗುದ್ಯತ್ತಪೋ-
ಧನವಿದ್ಯಾಧನದಿಂ ಮಹಾಮಹಿಮೆವೆತ್ತಾಚಾರ್ಯರಾಚಾರಮಂ ॥೩॥

ಪಾತ್ರೀಭೂತವಿನೇಯಸಂತತಿಗೆ ಸಮ್ಯಗ್ದರ್ಶನಜ್ಞಾನಚಾ-
ರಿತ್ರಂಗಳ್ನಿಜಮಪ್ಪನಂತಸುಖಮಂ ರಾಗಾದಿಗಳ್ ಜನ್ಮಮೃ-
ತ್ಯುತ್ರಾಸಂಗಳನೀವುವೆಂದು ಸದಸದ್ಭೇದಂಗಳಂ ಪೇೞ್ದವ-
ರ್ಸೂತ್ರಪ್ರಾಯರಮೇಯರೀಗೆಮಗುಪಾಧ್ಯಾಯರ್ಸುಖೋಪಾಯಮಂ ॥೪॥

ತಪದಿಂ ಶೀಲಮನಪ್ಪುಕೆಯ್ದು ಕರಣಗ್ರಾಮಂಗಳಂ ಗೆಲ್ದು ಚಿ-
ತ್ತ ಪಥ್ಯೈಕಾತಿಥಿಮಾಡಿ ಶಾಂತರಸಮಂ ಕಾರುಣ್ಯಮಂ ತಾಳ್ದಿ ತ-

ತ್ತ್ವಪರಿಜ್ಞಾನಮನಪ್ರಮತ್ತಚರಿತಪ್ರಸ್ಥಾನಮಂ ಸಾರ್ದ ಸಾ-
ಧುಪದಂಗಳ್ಗಮಗೀಗೆ ಸಾಧುಪದಮಂ ಕೈವಲ್ಯ ಮಾಂಗಲ್ಯಮಂ ॥

ಪರಮಬ್ರಹ್ಮ ಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಬೋ-
ಧರಮಾಮೌಕ್ತಿಕಹಾರಯಷ್ಟಿ ಕವಿತಾವಲ್ಲೀಸುಧಾವೃಷ್ಟಿ ಸ-
ರ್ವರಸೋತ್ಪಾದನವೀನಸೃಷ್ಟಿ ಬುಧಹರ್ಷೋತ್ಕೃಷ್ಟಿ ಸರ್ವಾಂಗಸುಂ-
ದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಳೀರಂಗದೊಳ್ ॥

ಅನಘರನುಬದ್ಧಕೇವಳ ।
ರೆನಿಸಿದ ಗೌತಮಸುಧರ್ಮಜಂಬೂಗಣಭೃ- ॥
ದ್ವಿನುತರೆಮಗೀಗೆ ಶಾಶ್ವತ ।
ಧನಮೆನಿಸಿದ ವಿಶ್ರುತಶ್ರುತಾರಾಧನಮಂ ॥೮

ಶ್ರುತಕೇವಳಿ ವಿಷ್ಣುವ್ರತಿ ।
ಪತಿಚಳನಂ ನಂದಿ ಪರಮಮುನಿಪದಮಪರಾ- ॥
ಜಿತಪಾದಂ ಗೋವರ್ಧನ ।
ಯತಿಕ್ರಮಂ ಭದ್ರಬಾಹುಚರಣಂ ಶರಣಂ ॥೯

ದಶಪೂರ್ವಧರರುಮೇಕಾ ।
ದಶಾಂಗಧಾರಿಗಳುಮೆನಿಪ ಮುನಿಪದನಖದೀ- ।
ಪ್ತಿಶರಚ್ಚಂದ್ರಿಕೆ ದರ್ಶನ ।
ವಿಶುದ್ಧಿಯಂ ಮಾಡುಗಘತಮೋವಿಘಟನಮಂ ॥೬

ಭೂತಬಲಿ ಪುಷ್ಪದಂತ ।
ಖ್ಯಾತರ ಜಿನಸೇನ ವೀರಸೇನ ಮುನೀಂದ್ರ- ॥
ಖ್ಯಾತರ ಸಮಂತಭದ್ರ ।
ಖ್ಯಾತರ ಪದಪಾಂಸು ಕಿಡಿಸುಗಘಪಾಂಸುಗಳಂ ॥೧೦।

ಕವಿಪರಮೇಷ್ಠಿಗಳ ಗುಣ ।
ಸ್ತವನಂಗಳ್ ಪೂಜ್ಯಪಾದಯತಿಪತಿಯ ಗುಣ- ॥
ಸ್ತವನಂಗಳೊರ್ಮೆ ನಾಲಗೆ ।
ಗೆ ವಂದ ಮಾನವನ ವಾಙ್ಮಳಂ ನಿಂದಪುದೋ ॥೧೧॥

ಚತುರಂಗುಳ ಚಾರಣ ಋ ।
ದ್ಧಿತಮಗೆ ಸಮನಿಸಿಮದೆನಿಪ ತಪಮುನ್ನತಿಯುಂ ॥

ಖ್ರತದಿಂ ಭೂಮಂಡಲವಿ ।
ಖ್ರತರೆನಿಸಿದರಲ್ತೆ ಕುಂದಕುಂದಾಚಾರ್ಯರ್ ॥೧೨॥

ಕಳಂಚಂದ್ರವಾಕ್ಯಂ ।
ಶ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯ- ॥
ಪ್ರಕರಚಕೋರಂ ನಲಿದುದು ।
ಮುಕುಳಿತಮಾಯ್ತನ್ಯ ವಾದಿವದನಾಂಭೋಜಂ ॥೧೩॥

ಚಾರುಚರಿತ್ರ ತೀರ್ಥಜಲದಿಂದಘಕರ್ದಮಮಂ ಕಳಲ್ಚಿ ಸಂ-
ಸಾರಸಮುದ್ರಮಂ ತೃಣಪಯಃಕಣದಂತಿಳಿಕೆಯ್ದು ದಿವ್ಯಭಾ-
ಷಾರಮಣೀಸ ಮಂ ಶ್ರುತಪಯೋಧಿಯೆನಿಸಿದ ವರ್ಧಮಾನ ಭ-
ಟ್ಟಾರಕರಂ ವಚಃಸುರಭಿಚಂದನ ಚರ್ಚೆಗಳಿಂದಮರ್ಚಿಪೆಂ ॥೧೪॥

ವಿಮಳಶ್ರೌತಂ ಕೈವ ।
ಲ್ಯಮೆಂಬ ಸಂಕಲ್ಪಮಿನಿತೆ ನೇರ್ಗಿಱಿಯಂ ವಿ- ॥
ಶ್ವಮನಱಿವ ಮಹಿಮೆಯಿಂ ವ ।
ರ್ಧಮಾನಜಿನಪತಿಗೆ ವರ್ಧಮಾನಮುನೀಂದ್ರಂ ॥೧೫॥

ಪುರಿದಂತಾದುವು ಪೂಪಿನಂಬುಪಿಸಿಪಿಲ್ ನಿಸ್ಸಾರಮಾದತ್ತು ಸೀ-
ಕರಿಪೋದತ್ತು ಮೃಣಾಳತಂತುರಚಿತಜ್ಯಾಲೀಲೆ ಮೀನಧ್ವಜಂ-
ಕೊರಗಿತ್ತಗ್ಗದ ಕಂತು ಸೀದ ಕರಿಯಂತಾದಂ ತಪೋರಾಜ್ಯತ-
ತ್ಪರಯೋಗೀಶ್ವರಬಾಳಚಂದ್ರಮುನಿನಾಥಜ್ಞಾನನೇತ್ರಾಗ್ನಿಯಿಂ ॥೧೬॥

ಅರಪಿಂದಸ್ಮೇರಮಾಸ್ಯಂ ತಿಳಿಪೆ ಹೃದಯಸಂಶುದ್ಧಿಯಿಂ ಮಾನಸಂ ಶಾಂ-
ತರಸಾಧೀನಂ ಸಮಾಧಾನಮಱಿಪೆ ತಪಸ್ತಪ್ತ ಮುತ್ತಪ್ತಕಾರ್ತ-
ಸ್ವರಶಾಖಾಲೀಳೆಯಂ ಪಾಲಿಸೆ ತನು ನಯನಂ ಕಾಱುರಂಮಾಡೆ ಕಾರು-
ಣ್ಯರಸಸ್ರೋತಂಗಳಿಂ ಲೋಕಮನೆಱಗಿಸಿದಂ ಬಾಳಚಂದ್ರವ್ರತೀಂದ್ರಂ ॥೧೭॥

ಪ್ರಚುರಕಳಾನ್ವಿತರಕುಟಿಳ ।
ರಚಂಚಳರ್ ಶುದ್ಧ ಪಕ್ಷವೃತ್ತದೋಷಾ- ॥
ಪಚಯಪ್ರಕಾಶರೆನೆ ಬಾ ।
ಳಚಂದ್ರದೇವ ಪ್ರಕಾಶಮೇನಚ್ಚರಿಯೋ ॥೧೮

ಅಭಿನವಗಣಧರರೆನೆ ದಿ ।
ವ್ಯಭಾಷೆಯಂ ತಾಳ್ದಿ ಕುಮತಮಂ ತೂಳ್ದಿದರಂ ॥

ಶುಭಕೀರ್ತಿದೇವರಂ ಸಕ ।
ಳಭುವನಜನಪೂಜ್ಯಪಾದರೆನ್ನವರೊಳರೇ ॥೧೯

ಮೂವತ್ತಾಱುಂ ಗುಣದಿಂ ।
ಭಾವಜನಂ ಕಟ್ಟಿ ಪೆಟ್ಟವೆಟಿದರ್ವೃಷದಿಂ ॥
ಭಾವಿಪೊಡೆ ಮೇಘಚಂದ್ರ ।
ತ್ರೈವಿದ್ಯರದೆಂತು ಶಾಂತರಸಮಂ ತಳೆದರ್ ॥೨೦॥

ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ ದಿವ್ಯಬಾ-
ಣನಿಧಾನಂ ನಿನಗಿಕ್ಷುಚಾಪಮಳಿನೀಜ್ಯಾಸೂತ್ರಮೋರೊಂದೆ ಪೂ-
ವಿನ ಬಾಣಂಗಳುಮೈದೆ ಹೀನನಧಿಕಂಗಾಕ್ಷೇಪಮಂ ಮಾಳ್ಪುದಾ-
ವ ನಯಂ ದರ್ಪಕ ಮೇಘಚಂದ್ರಮುನಿಯೊಳ್ ಮಾಣ್ದೆನ್ನ ದೋರ್ದರ್ಪಮಂ ॥೨೧॥

ಮದನನ ದರ್ಪಮಂ ಕಿಡಿಸಿ ಮಾಣ್ದರೆ ತಮ್ಮ ತಪಃಪ್ರಭಾವದಿಂ
ಮದಯುತರಪ್ಪ ವಾದಿಗಳ ದರ್ಪಮನೋವದದಿರ್ಪ ಸತ್ಸಭಾ-
ಸದರಭಿವರ್ಣಿಪಂತು ತಪದಿಂ ಶ್ರುತದಿಂ ಭುವನಪ್ರಸಿದ್ಧಿಗಾ-
ಸ್ಪದರೆನಿಸಿರ್ದರೆಂಬೆನಱಿಯೆಂ ಪೊಗಳಲ್ ಶುಭಕೀರ್ತಿದೇವರಂ ॥೨೨॥

ಕೋಡಿಡೆ ವಾಸುಪೂಜ್ಯಮುನಿಯೊಳ್ಮರುಳಾದಪೆ ಚಿತ್ತಜನ್ಮ ನೀಂ
ನೋಡ ನಿಜಾಪ್ತವರ್ಗದಳವಂ ಮಳಯಾನಿಳನಸ್ಥಿರಂ ರಣ-
ಕ್ರೀಡೆಗೆ ನಿಲ್ವನೇ ಪರಭೃತಂ ನಿನಗಪ್ಪನೆ ಯುದ್ಧದೊಳ್ಬಿಗು-
ರ್ತೋಡದೆ ಮಾಣ್ಬನೇ ಮೃಗಧರಂ ಮಧುಪಂ ಕದನಕ್ಕೆ ಯೋಗ್ಯನೇ ॥೨೩॥

ಆವೊಂ ವಾದಿಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿ-
ದ್ಯಾವಷ್ಟಂಭಮನಪ್ಪುಕೆಯ್ದು ಪರವಾದಿಕ್ಷೋಣಿಭೃತ್ಪಕ್ಷಮಂ
ದೇವೇಂದ್ರಂ ಕಡಿವಂದದಿಂದೆ ಕಡಿದಂ ಸ್ಯಾದ್ವಾದವಿದ್ಯಾಸ್ತ್ರದಿಂ
ತ್ರೈವಿದ್ಯಶ್ರುತಕೀರ್ತಿ ದಿವ್ಯಮುನಿಪೋಲ್ ವಿಖ್ಯಾತಿಯಂ ತಾಳ್ದಿದಂ ॥೨೪॥

ಶ್ರುತಕೀರ್ತಿ ತ್ರೈವಿದ್ಯ ।
ವ್ರತಿ ರಾಘವಪಾಂಡವೀಯಮಂ ವಿಬುಧಚಮ- ॥
ತ್ಕೃತಿಯೆನಿಸಿ ಗತಪ್ರತ್ಯಾ ।
ಗತದಿಂ ಪೇಟ್ದಿಮಳಕೀರ್ತಿಯಂ ಪ್ರಕಟಿಸಿದಂ ॥೨೫॥

ಗಣಧರರಂ ಶ್ರುತದೊಳ್ ಚಾ ।
ರಣ ಋಷಿಯರನಮಳಚರಿತದೊಳ್ ಯೋಗಿಜನಾ-॥

ಗ್ರಣಿಗೆಣೆಯೆನ್ನದೆ ಮಿಕ್ಕರ ।
ನೆಣೆಯೆಂಬುದೆ ವೀರಣಂದಿ ಸೈದ್ಧಾಂತಿಕರೊಳ್ ॥೨೭॥

ಹರಿಹರಹಿರಣ್ಯಗರ್ಭರ ।
ಸುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋ- ॥
ಭರದಿಂದುರಿಪಿದರೆನೆ ಬಿ ।
ತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ ॥೨೭॥

ಉಪದೇಶಂಗೆಯ್ದು ಕಾವ್ಯಚ್ಛಲದಿನಖಿಳಧರ್ಮಂಗಳಂ ಲೋಕಮಂ ಧ-
ರ್ಮಪದಪ್ರಸ್ಥಾನದೊಳ್ ಯೋಜಿಸಿ ಪರಮಪುರಾಣಂಗಳಂ ಪೇೞ್ದು ಕಲ್ಪಾಂ-
ತಪರೀತಖ್ಯಾತಿಯಂ ತಾಳ್ದಿದ ಪರಮಕವಿಜ್ಯೇಷ್ಠರಾದರ್ ತದೀಯಾಂ-
ಘ್ರಿಪಯೋಜಂಗಳ್ ಮದೀಯಾಶಯಮಣಿಭವನಕ್ಕಕ್ಕೆ ಪುಷ್ಪೋಪಹಾರಂ ॥೨೮॥

ಮೃದುಪದಪಾತಮಂ ಬಗೆಯ ಭಾವದ ಮೆಯ್ಸಿರಿಯಂ ರಸಪ್ರವಾ-
ಹದ ನೆಲೆವೆರ್ಚನಿಂಬಱಿದು ಭಾವಿಸಿ ಭಾವಿಸಿ ಮೆಚ್ಚಿ ಮೆಚ್ಚಿ ಪೊ-
ಣ್ಮಿದ ಪುಳಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವ-
ರ್ಷದಿನನುರಾಗಮಂ ಪಡೆವ ಸಜ್ಜನಸಂಸ್ತವವೊಂದೆ ಸಾಲದೇ ॥೨೯॥

ವಾರಾಶಿಯ ಮಣಿಗಣಮಂ ।
ಕ್ರೂರಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ॥
ತಾರನೆ ಕೃತಿವೇಟಲ್ಬಗೆ ।
ದಾರನೆ ಸತ್ಕವಿ ನಿಸರ್ಗದುರ್ಜನಭಯದಿಂ ॥೩೦॥

ವಿಕಸಿತಚಂಪಕಕ್ಕೆಳಗಿ ಬಂಡುಣಲೊಲ್ಲದ ಚಂಚರೀಕನಾ-
ಸಿಕಮನಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌ-
ಶಿಕನಯನಂಗಳಂ ಸುಕವಿಕಾವ್ಯಮನಾಲಿಸಿ ಕಾಯ್ವ ದುರ್ಜನ-
ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ ॥೩೧॥

ಪಡೆದಂ ರಜೋಧಿಕಂ ವಿಧಿ ।
ಪೆಡೆವಣೆಯಂ ಫಣಿಯನಮೃತರಸಮಂ ವಿಷಮಂ ॥
ಕಡಲಂ ಸುೞಿಯಂ ಮೞಿಯಂ ।
ಸಿಡಿಲ ಪಡೆವಂತೆ ಸುಜನರಂ ದುರ್ಜನರಂ ॥೩೨॥

ರಸಮಂ ಭಾವಮನರ್ಥಮಂ ರಚನೆಯಂ ಕಾವ್ಯಜ್ಞರಾರಯ್ದು ಭಾ-
ಪಿಸಿ ನಾಂದೀಪದ ನಾಯಕಾಭ್ಯುದಯ ಪರ್ಯಂತಂಬರಂ ಕೂಡೆ ಲೋ-

ಧಿಸಿ ನೋಟ್ಕೀ ರಘುವಂಶರಾಮಕೃತಿಯೊಳ್ ಪತ್ತೆಂಟು ಪದ್ಯಂಗಳಂ
ಪೊಸವಂ ಯತ್ನದಿನಾಪ್ಯರಪ್ಯ ತನರೇಕಾರಾದೊಡಂ ಪೇಟಿರೇ ||೩೩

ರಾಗದ್ವೇಷನಿಬಂಧಮಪ್ಪ ಕೃತಿಯಂ ನಿರ್ಬಂಧದಿಂ ಬಂಧಮಿಂ-
ಬಾಗರ್ಥಂ ಪೊಸತಾಗೆ ಪೇಟ್ದುವಿಳಮಂ ರಾಗಾವಿಳಂ ಮಾಟ್ಪಿ ವಿ-
ದ್ಯಾಗರ್ವಗ್ರಹಪೀಡಿತಂ ಸ್ವಪರಬಾಧಾಹೇತುವಂ ದುಸ್ತರೋ-
ದ್ಯೋಗಕ್ಲೇಶಿತರಾಗಿ ಬಿತ್ತಿ ಬೆಳೆವಂತಕ್ಕುಂ ವಿಷೋದ್ಯಾನಮಂ ||೩೪

ಪೊಗಟ್ದು ಮಹಾತ್ಮರುಜ್ಜ್ವಳಮೆನಿಪ್ಪ ಗುಣಂಗಳನುಜ್ಜ್ವಳಪ್ರಸಿ-
ದ್ಧಿಗೆ ಪೊಲನಾಗದುಜ್ಜ್ವಳಿಸಿದಪ್ರತಿಮಪ್ರತಿಭಾಪ್ರಭಾವದಿಂ
ಪೊಗಟ್ದು ದುರಾತ್ಮರಂ ಮೊಗದೊಳಿರ್ದುಗುಳಂ ಪೊಱಗಿಕ್ಕಲಾದ ನಾ-
ಲಗೆಯವನೆತ್ತು ನಾಲಗೆಯೊಳೋದಿದವಂ ಕೃತಿಯೇ ಕೃತಾರ್ಥನೇ ||೩೫

ಭೇದಿಸೆ ಭಾನುಭಾನು ತಮಮಂ ತಱಿಸಂದು ಪದಾರ್ಥಮಂ ಪರಿ-
ಚ್ಛೇದಿಸಿ ಕಾಣ್ಬವೋಲ್ಜನವಿಲೋಚನಮಪ್ರತಿಮಪ್ರಭಾವರ-
ಪ್ರಾದಿಕವೀಶ್ವರರ್ನಡೆದ ಪದ್ಧತಿಯಿಂ ತನಗರ್ಥಶುದ್ಧಿವೆ-
ತ್ತೇದೊರೆಯಂಗಮೇಂ ನಡೆವುದಚ್ಚರಿಯೇ ಕವಿರಾಜವೀಥಿಯೊಳ್ ||೩೬||

ನಾಯಕನನ್ಯನಾಗೆ ಕೃತಿವಿಶ್ರುತಮಾಗದುದಾತ್ತರಾಘವಂ
ನಾಯಕನಾಗೆ ವಿಶ್ರುತಮೆನಿಪ್ಪುದು ವಿಸ್ಮಯಕಾರಿಯಲ್ತು ಕಾ-
ಳಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನಮಾಲೆಯಂತುಪಾ-
ದೇಯಮೆನಿಕ್ಕುಮೇ ವಿಷಯಮೊಪ್ಪದೊಡಾವುದುಮೊಪ್ಪಲಾರ್ಕುಮೇ ||೩೭||

ವಿಗತಾಷ್ಟಾದಶದೋಷರಪ್ಪ ಜಿನರುಂ ಜ್ಞಾನರ್ಧಿಸಂಪನ್ನರ-
ಪ್ಪ ಗಣಾಧೀಶ್ವರರುಂ ಕ್ರಮಂಬಿಡದೆ ಮುನ್ನಂ ಪೇಟ್ದುದಂ ಶ್ರಾವ್ಯಕಾ-
ವ್ಯ ಗುಣಖ್ಯಾತಿನಿಮಿತ್ತಮಲ್ಲದೆ ಶುಭಧ್ಯಾನಾರ್ಥಿಯೆಂ ಪೇಟಲಾಂ
ಬಗೆವಂದೆಂ ರಘುವಂಶರಾಮಕಥೆ ಪೇಟ್ವಿಂತನ್ಯ ಸಾಮಾನ್ಯಮೇ ||೩೮||

ರವಿ ಮಾಱಿಟ್ಟಱಿದಂ ವಿಯತ್ತಳಮನಾಶಾಸೀಮೆಯಂ ದಾಂಟುವ-
ನ್ನೆವರಂ ತನ್ನ ಕರಂಗಳಿಂದೆನೆ ಪೆಱಂಗೇ ಮೊಗ್ಗೆ ಮುನ್ನಂ ಗಣ-
ಪ್ರವರರ್ಗೌತಮರಾದಿಯಾಗ ಮುನಿಮುಖ್ಯರ್ಪೇಟ್ದರೆಂದಂದುಮಾ-
ನವನೆಮ್ಮಂದಿಗರಾರ್ಪರೇ ರಚಿಯಿಸಲ್ ರಾಮಾನ್ವಯ ಖ್ಯಾತಿಯಂ ||೩೯||

ವಿಪುಳಾಚಳದೊಳ್ ವೀರಜಿ ।
ನಪಾರ್ಶ್ವದೊಳ್ ಗೌತಮಂ ಗಣಾಗ್ರಣಿ ಮಗಧಾ- ||

ಪನಜಿಯೆ ನೆಱಿಯೆ ಪೇೞ್ದುದ ।
ಪೂರ್ವಮೆನೆ ರಾಮಕಥೆಯನಭಿವರ್ಣಿಸುವೆಂ ॥೪೦॥

ಗಮಮಂ ಯುಗಮಮಂ ಮನ್ವಾ ।
ಗಳಂ ಕಾಲಸ್ವರೂಪಮಮಂ ಜಿನರಂ ಚ- ॥
ಗಳಂ ಹಳಧರಕೃಷ್ಣಾ ।
ಗಳಂ ಶ್ರೀರಾಮಚರಿತದೊಳ್ವಿರಚಿಸುವೆಂ ॥೪೧॥

ಅದೆಂತೆನೆ :

ಕಡದೋಱ್ತ್ರಿಲ್ಲೆನಿಪ್ಪಾಗಸದ ನಡುವೆ ಪಾಯುತ್ರಯಂ ಸುತ್ತೆ ಪೇೞಾರ್
ಪಡೆವನ್ನರ್ ತನ್ನನೆಂಬಗ್ಗಳಿಕೆವಡೆದಧಸ್ತಿರ್ಯಗೂರ್ಧ್ವತ್ರಿಭೇದಂ
ಬಡೆವಾಱುಂ ದ್ರವ್ಯದಿಂ ಮೆಯ್ವಡೆದಖಿಳಜಗಂ ರಜ್ಜು ವೀರೇೞುದ್ದಂ
ಪಡೆವತ್ತಾಪ್ತಂ ಜಿನಂ ಕೇವಳವಿಪುಳತುಳಾಕೋಟಿಯಿಂ ತೂಗೆ ತನ್ನಂ ॥೪೨॥

ಅನತಿಶಯಮಾದುದಾ ತ್ರಿಭು ।
ವನಲಕ್ಷ್ಮಿಗೆ ಮಧ್ಯಮೆನಿಪ ಮಧ್ಯಮಲೋಕಂ ॥
ಜನಹೃದಯಹಾರಿ ಗಂಭೀ ।
ರನಾಭಿಮಂಡಳಮಿದೆನಿಸಿ ಜಂಬೂದ್ವೀಪಂ ॥೪೩॥

ಆ ಜಂಬೂದ್ವೀಪದ ನಟ್ಟ ನಡುವೆ,

ಮುಟ್ಟಿದುದು ಮೊದಲ ದಿವಮಂ ।
ಮೆಟ್ಟಿದುದೆರಡನೆಯ ವಜ್ರಿಯಂ ಮೇಖಳೆಯಿಂ॥
ದಿಟ್ಟಿಗೆ ಪೊಲನಾದುದು ಪೊಂ ।
ಬೆಟ್ಟಂ ಜಿನಜನ್ಮಸವನ ಮಣಿಮಯಪಟ್ಟಂ ॥೪೪॥

ಆ ಕ್ಷೋಣೀಧರವಲ್ಲಭ ।
ದಕ್ಷಿಣದಿಙ್ಮುಖದೊಳೆಸೆದು ಶಶಿಖಂಡದವೋ- ॥
ಲೀಕ್ಷಣಸುಖಮಯಮಿರ್ದುದು
ದಕ್ಷಿಣಭರತತ್ರಿಖಂಡದಾರ್ಯಾಖಂಡಂ ॥೪೫॥

ಅಲ್ಲಿ ವರ್ತಿಸುವುತ್ಸರ್ಪಣಾವಸರ್ಪಣಯುಗಸ್ವರೂಪನಿರೂಪಣವಿವಕ್ಷೆಯಿಂ ಮುಖ್ಯವ್ಯವಹಾರನಯದೊಳು ಭಯಾತ್ಮಕಮೆನಿಪ್ಪ ಕಾಲಸ್ವರೂಪಮೆಂತೆನೆ :

ಜೀವಾಜೀವದ್ರವ್ಯಪ ।
ರಾವರ್ತನಹೇತು ವರ್ತನಾ ಲಕ್ಷಣಸ- ॥

ದ್ಭಾವಂ ನಿತ್ಯಮಮೂರ್ತಂ ।
ಕೇವಳಗಮ್ಯಂ ಸದಾನುಮೇಯಂ ಕಾಲಂ ||೪

ಧಾರಾಹತಿಯಿಂ ಖಂಡಿಸ ।
ದಾರಂ ಜಿನನಾಥನುಱಿಯಲುಱಿದರನೇಕಾ- ।।
ಕಾರಂ ಲೋಕಾಕಾರದೊ ।
ಳೋರಗಲಮೆನಿಪ್ಪ ಕಾಲಚಕ್ರಮಮೋಘಂ ||೪

ವ್ಯವಹಾರಕಾಲಭೇದಮ ।
ನವರಿವರೆತ್ತಱಿವರಾಪ್ತರಲ್ಲರ್ಜಿನಪುಂ- ।।
ಗವನಲ್ಲದಣುವನಣು ದಾಂ ।
ಟುವ ಪೊೞ್ತಿಂ ಸಮಯಮೆಂದು ಪೇೞ್ವಿವನಾವಂ||೪೮||

ಸಮಯಸಮೂಹಮಸಂಖ್ಯಾ ।
ತಮಾದೊಡಾವಳಿಯೆನಿಕ್ಕುಮಾವಳಿ ಸಂಖ್ಯಾ- ।।
ತಮೆನಿಪ್ಪುದಾದೊಡುಚ್ಛ್ವಾ ।
ಸಮೆನಿಕ್ಕುಂ ಸ್ತೋಕಮಕ್ಕುಮೇೞುಚ್ಛ್ವಾಸಂ ||೪೯

ಸ್ತೋಕಂ ನೆಱಿದೇೞಾಗಲ ।
ತಾಕಾಲಂ ಮೂವತ್ತೆಂಟುವರೆಯೆನಿಪಲತಾ- ।।
ನೀಕಂ ನಾಳಿಕೆ ತನ್ನಾ ।
ಳೀಕಾಲಯುಗಂ ಮುಹೂರ್ತಮೆನೆ ವರ್ತಿಸುಗುಂ ||೫೦

ಸಮಯಂಗುಂದೆ ಮುಹೂರ್ತದೊ ।
ಳಮೋಘಮಂತರ್ಮುಹೂರ್ತಮಕ್ಕುಂ ಮೂವ-।।
ತ್ತು ಮುಹೂರ್ತಮಾಗೆ ದಿವಸಂ ।
ಕ್ರಮದಿಂ ಪದಿನಯ್ದು ದಿವಸಮಾದೊಡೆ ಪಕ್ಷಂ ||೫೧

ಮಾಸಂ ಪಕ್ಷದ್ವಿತಯಂ ।
ಮಾಸದ್ವಯಮೊಂದೆ ಋತು ಋತುತ್ರಯಮಯನ- ।।
ನ್ಯಾಸಮಯನದ್ವಯಂ ಜಿನ ।
ಶಾಸನದೊಳೆ ವರಿಸಮಯ್ದು ವರಿಸದೊಳೆ ಯುಗಂ ||೫೨

ಎರಡೆ ಯುಗಂ ದಶವರ್ಷಂ ।
ತರತರದಿಂದಿಂತು ದಶಗುಣಂ ಪೆರ್ಚುತ್ತುಂ ।।

ರೆ ಪೆರ್ಚುವ ಕಾಳಕಳಾ ।
ರಿಸಂಖ್ಯೆಯನಾವನಜೀವನಾತನೆ ದೇವಂ ॥೫೩॥

ಪೆ ತಾರವು ನಿನ್ನೆಗಳುಂ ।
ಪೆಯವು ನಾಳೆಗಳುಮದಱಿನೆಡೆನೆಱಿಯದು ಲೆ-
ವಿಡಲ್ ಶಬ್ದಂ ನೆಱಿಯವು ।
ಕವಣೆಸಲೆನೆ ಕಂಡರಾರೋ ಕಾಲದ ಕಡೆಯಂ ॥೫೪॥

ಅವಸರ್ಪಣದೊಳ್ ಕಾಲ ।
ವ್ಯವಸ್ಥೆ ಷಡ್ವಿಧಮೆನಿಕ್ಕುಮುತ್ಸರ್ಪಣದಂ ॥
ತೆವೊಲಲ್ಲಿ ಮೊದಲ ಕಾಲಂ ।
ಪ್ರವರ್ತಿಕುಂ ಸುಷಮಸುಷಮಮೆಂಬೀ ಪೆಸರಿಂ ॥೫೫॥

ಎರಡನೆಯ ಸುಷಮಕಾಲದ ।
ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ
ಚರಿಯಿಸುಗುಂ ನಾಲ್ಕನೆಯದು ।
ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ ॥೫೬॥

ಅನುಸಂಧಾನಂ ಗಿಡದ ।
ಯ್ದನೆಯದು ದುಷ್ಷಮಮೆನಿಪ್ಪ ಕಾಲಂ ಬಳಿಕಾ- ॥
ಱನೆಯದತಿದುಷ್ಷಮಂ ವ ।
ರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ ॥೫೭॥

ತನುಭೋಗಾಯುಷ್ಯಂಗಳ್ ।
ಮನುಷ್ಯರೊಳ್ ಪೆರ್ಚುವಡೆಗುಮುತ್ಸರ್ಪಣದೊಳ್ ॥
ತನುಭೋಗಾಯುಷ್ಯಂಗಳ್ ।
ಮನುಷ್ಯರೊಳ್ ಕುಂದುವಡೆಗುಮವಸರ್ಪಣದೊಳ್ ॥೫೮॥

ಎರಡೆ ಯುಗಮೊಂದೆ ಕಲ್ಪಂ ।
ನಿರಂತರಂ ಕೃಷ್ಣಶುಕ್ಲಪಕ್ಷಂಗಳವೋಲ್ ॥
ಪರಿವರ್ತಿಸುಗುಂ ತತ್ಕ ।
ಲ್ಪರಾಶಿಗಾರಯ್ವೊಡಿಲ್ಲ ಮೊದಲುಂ ತುದಿಯುಂ ॥೫೯॥

ಅಂತನಂತಕಲ್ಪಪರಿವರ್ತನಮನಪ್ಪುಕೆಯ್ವಾರ್ಯಾಖಂಡದವಸರ್ಪಣದ ಮೊದಲ ಕಾಲದೊಳ್,

ಸುರಭೂಜಂ ಜ್ಯೋತಿರಂಗಂ ಬೆಳಗೆ ತಮದ ಮಾತಿಲ್ಲ ಚಂದ್ರಾರ್ಕರುಂ ಮೆ-
ಯ್ಗರೆದಿರ್ಪರ್ತೋ‌ಜಿವಾಜಿುಂ ಋತು ಪಗಲಿರುಳೆಂಬೀ ವಿಭೇದಂಗಳಿಲ್ಲಾ-
ಳರಸೆಂಬೀ ಪಂಬಲಿಲ್ಲಾರ್ಜವರೆ ಮನುಜರೆಲ್ಲಂ ಜರಾಂತಕಮಿಲ್ಲಾ
ತುರಮಿಲ್ಲಾಶ್ಚರ್ಯಭೂತಂ ಸುಷಮಸುಷಮಕಾಲಸ್ವಭಾವಪ್ರಭಾವಂ ॥೬

ದಂಪತಿಗಳ್ ಪುಟ್ಟುವರಾ ।
ರ್ಗಂ ಪೊಲ್ಲಮೆ ಪುಟ್ಟದನತಿಶಯರೂಪಕಳಾ- ॥
ಸಂಪನ್ನರೆನಿಸಿ ಸುರಗತಿ ।
ಯಂ ಪಡೆವರ್ಕಡೆಯೊಳುಚಿತಭಾಷಾವೇಷರ್ ॥೬೮

ಅಪಮೃತ್ಯುವಿರಹಿತಂ ಮೂ ।
ಱು ಪಳಿತಮಾಯುಷ್ಯಮುದ್ದಮಱುಸಾಸಿರ ಬಿ- ॥
ಲ್ಲಪಸಾರಿತಮಳಮೂತ್ರಾ ।
ದಿಪರೀಷಹದೋಷಮಪಘನಂ ದಂಪತಿಯಾ ॥೬೨

ಮಾಳಿನಿ ॥
ತ್ರಿದಿನದನಿತು ಕಾಲಕ್ಕೊರ್ಮೆ ಸಂಸಾರಸೌಖ್ಯ-
ಪ್ರದಮಿದೆನಿಪ ದಿಬ್ಯಾಹಾರಮಂ ಭೋಜನಾಂಗಂ
ಬದರಫಳಸಮಾನಾಕಾರಮಂ ಕೊಟ್ಟುದಂ ಕೊಂ-
ಡುದರಬಳವಿಳಾಸಂ ಬೆತ್ತು ಯುಗ್ಮಂಗಳಿರ್ಕುಂ ॥೬೩॥

ಸಿರಿಯ ಮೊಗರಸದ ಪೊಸಮೆ ।
ಯ್ಸಿರಿಯೆನಿಕುಂ ಪೂಗೊಳಂಗಳಾ ನೆಲನನಿತುಂ ॥
ಸುರಚಾಪದ ಬೆಳಸಿನ ಹರ ।
ವರಿಯೆನಿಕುಂ ಪಂಚರತ್ನರುಚಿವಲ್ಲರಿಯಿಂ ॥೬೪॥

ಚತುರಂಗುಳಮೆನಿಸಿದ ತರು ।
ಣತೃಣಗ್ರಾಸದೊಳೆ ತಣಿದು ತಿಳಿನೀರಂ ಪೀ- ॥
ರ್ದತನುಕ್ರೀಡಾರತಮೃಗ ।
ತತಿಗಳ್ದಂಪತಿಗಳಲ್ಲಿ ನಲಿಯುತ್ತಿರ್ಕುಂ ॥೬೫॥

ಕುಸುಮಸ್ರಗ್ವಸನಾನ್ನಪಾನವಿವಿಧಾತೋದ್ಯಪ್ರದೀಪಪ್ರಕಾ-
ಶಸುರಾಸದ್ಮ ವಿಚಿತ್ರಭಾಜನಭೂಷಾನೀಕಮಂ ಕೊಟ್ಟು ಸಂ-
ತಸಮಂ ಮಾಡೆ ದಶಾಂಗಲ್ಪತರುಗಳ್ ಸ್ವರ್ಗಕ್ಕೆ ಸಂಸಾರಸಾ-
ರಸುಖಕ್ಕೆಗ್ಗಳಮೆನ್ನದಾ ಪ್ರಥಮ ಕಾಲಶ್ರೀಯನೇವಣ್ಣಿಪೆಂ ॥೬೬॥

ಅಂತಾಕಾಲಮುತ್ತಮಭೋಗಭೂಮಿಸ್ಥಿತಿ ನಾಲ್ಕುಕೋಟಾಕೋಟಿಸಾಗರೋಪಮಮನು ಕ್ರಮದಿಂ ಕುಂದುತ್ತಂ ಬಂದನಂತರಂ ಸುಷಮಮೆಂಬೆರಡನೆಯ ಕಾಲದ ಮಧ್ಯಮಭೋಗ ಭೂಮಿಸ್ಥಿತಿಯೊಳ್,

ತನು ನಾಲ್ಸಾಸಿರ ಬಿಲ್ ನಿಡಿ ।
ವೆನಿಕ್ಕುಮಾಯುಷ್ಯಮೆರಡೆ ಪಳಿತೋಪಮಮಂ- ॥
ದಿನ ಮನುಜರಕ್ಷಫಳದನಿ ।
ತೆನಿಪ ರಸಾಯನಮನೆರಡು ದೆವಸಕ್ಕುಣ್ಬರ್ ॥೬೭।

ಮತ್ತಮಾಕಾಲಂ ಮೂಱುಕೋಟಾಕೋಟಿ ಸಾಗರೋಪಮಂ ಕೞಿದಿಂ ಬೞಿಯಂ ಸುಷಮದುಷ್ಷಮಮೆಂಬ ಮೂಱನೆಯ ಕನಿಷ್ಠ ಭೋಗಭೂಮಿಸ್ಥಿತಿಯಾ ದಿನದ ಮಿಥುನಂಗಳ್

ಅಳವಿಯ ಲೆಕ್ಕಂ ತಮ್ಮೊಳ್ ।
ಪಳಿತೋಪಮಮಾಗೆ ದೇಹಮಿರ್ಚ್ಛಾಸಿರ ಬಿಲ್ ॥
ಬಳೆಯೆ ಸುಧಾಹಾರಮನಾ ।
ಮಳಕಫಳಪ್ರತಿಮಮಂ ದಿನಾಂತರಮುಣ್ಬರ್ ॥೬೮॥

ಮತ್ತಮಾ ಜಘನ್ಯಭೋಗಭೂಮಿಪ್ರವರ್ತನಮೆರಡು ಕೋಟಾಕೋಟಿ ಸಾಗರರೋಪ-ಮದೆಂಟನೆಯ ಭಾಗಮುೞಿಯೆ ಬೞಿಯಂ ಕುಳಧರಾವತಾರಮಕ್ಕುಮದೆಂತೆನೆ ।

ಅಜ್ಞಾನತ್ರಯರಹಿತ ।
ತ್ರಿಜ್ಞಾನಧರರ್ವಿದೇಹದಿಂದ ಬಂದಧಿಕ ॥
ಪ್ರಜ್ಞರ್ಪುಟ್ಟುವರೀ ನೆಲ ।
ನಾಜ್ಞಾಮುದ್ರಿತಮೆನಲ್ ಚತುರ್ದಶಮನುಗಳ್ ॥೬೯॥

ಅಲ್ಲಿ ಮೊದಲ ಕುಳಧರಂ ಪ್ರತಿಶ್ರುತಿಯೆಂಬಂ,

ಬಲವರ್ಪ ಕಾಲಪುರುಷನ ।
ಕಲಧೌತವಿಶಾಲಕರ್ಣಕುಂಡಲಯುಗಮಂ ॥
ಗೆಲೆವಂದು ಸೂರ್ಯಶಶಿಮಂ ।
ಡಲಮಾಸುರಮಾಗೆ ಗಗನದೆರಡುಂ ಕೆಲದೊಳ್ ॥೭೦॥

ಅವಂ ಕಾಣಲೊಡಮಂದಿನ ಯುಗಳಮುತ್ಪಾತಯುಗಳಮೊಗೆದುದೆಂದು ಭೀತರಪ್ಪುದುಂ ಜ್ಯೋತಿರಂಗತರು ತೇಜೋಭಂಗದಿಂ ಕಾಣಲಾದಪು; ಚಂದ್ರಾದಿತ್ಯ ವಿಮಾನಂಗಳೆಂದುಮೊಳವಿಲ್ಲಿಂದಿತ್ತಲಿಂತೆ ತೋರ್ಕುಮಿವರ್ಕೆ ಬೆಚ್ಚದಿರಿಮೆಂದವರ ಮನದ ಶಂಕೆಯುಂ ಕಳೆದನಾತನಿಂ ಬೞಿಯಮೆರಡನೆಯ ಕುಳಧರಂ ಸನ್ಮತಿಯೆಂಬಂ,

ಕಿಸುಸಂಜೆ ಪೆರ್ಚೆ ಮರ್ವ ।
ರ್ವಿಸೆ ತಾರಾನೀಕಮೊಗೆಯೆ ಬೆಬ್ಬುತ್ತಿರ್ಬೆ ॥
ಕ್ಕಸಮುತ್ತರ್ಭಯರಸದಿಂ ।
ದೆಸೆಗೆಟ್ಟರ್ಕಂಡಪೂರ್ವದೃಷ್ಟಮನಾರ್ಯರ್ ॥೭೦

ಅಂತು ಭಯಸ್ಥರಾದಾರ್ಯರಂ ಕಂಡು ಸೂರ್ಯಕಿರಣ ಮಸ್ತಮಯ ಸಮಯದೊ
ತಪ್ತ ತಪನೀಯಮೆನಿಪ್ಪ ನಿಷಧನಗದ ನೆಗೆದ ಕೆಂಬೊಳಪಿನೊಳ್ಪು ರಂಜಿಸಿದ ಸಂಜೆ ಪರೆಯೆ ಕವಿ
ಕಟ್ಟಿಲೆಯೊಡನೆ ತಾರಾಗಣಗ್ರಹ ನಕ್ಷತ್ರಂ ತಲೆದೋಱಿ ಅ [ಲ್ಲಿ] ಂದಿತ್ತಲುಮಹೋರಾ
ಭೇದಮಕ್ಕುಮೆಂದವರ ಮನೋವಿಷಾದಮಂ ಕಳೆದನಾತನಿಂಬಳಿಯಂ ಮೂಱನೆಯ ಕುಳಧ
ಕ್ಷೇಮಂಕರನೆಂಬಂ ಸಿಂಹಶರಭಶಾರ್ದೂಳವ್ಯಾಳಮೃಗಂಗಳ ಮಿಥುನಂಗಳ ಕಾಲಸ್ವಭಾವ
ಋಜುಸ್ವಭಾವಮಂ ಪತ್ತುವಿಟ್ಟು ವಿಷಮಸ್ವಭಾವಮನಪ್ಪುಕೆಯ್ವುದುಂ -

ವಿಪರೀತಮಾದ ಮೃಗಕುಳ ।
ದುಪದ್ರವಂ ನಿಮಗೆ ದಂಡಪಾಶಾದಿಗಳಿಂ ॥
ದಪಹರಿಸುಗುಮೆಂದಾರ್ಯ ।
ರ್ಗುಪದೇಶಂ ಗೆಯ್ದು ಕಳೆದನವರದಮಳಲಂ ॥೭೨

ಆತನಿಂ ಬಳಿಯಂ ನಾಲ್ಕನೆಯ ಕುಳಧರಂ ಕ್ಷೇಮಂಧರನೆಂಬನಂಧಕಾರಮಪ್ಪುದು
ಪ್ರಜೆಗುಪದ್ರವಮಂ ಕ್ಷುದ್ರಮೃಗಯುಗಳಮೊಡರಿಸೆ -

ರವಿರಶ್ಮಿಗಳಂ ಪುಟ್ಟಿಸಿ ।
ರವಿಕಾಂತೋಪಳಕೃಶಾನುವಿಂ ಕೋಟ್ಮಿಗಮಂ ॥
ದಿವಸದವಸಾನಸಮಯದೊ ।
ಳವನಂಜಿಸಿಮೆಂದುಪಾಯಮಂ ಪ್ರಜೆಗಿತ್ತಂ ॥೭೩॥

ಆತನಿಂ ಬಳಿಯಮಯ್ದನೆಯ ಕುಳಧರಂ ಸೀಮಂಧರನೆಂಬಂ ಕಲ್ಪತರುಗಳಲ್ಪಫಲದಂ
ಗಳಾಗೆ ಭೋಗಭೂಮಿಜರ್ತಂತಮಗೆ ನೆಱಿಯವೆಂಬ ಸಂಕಲ್ಪದಿಂ,

ಓರೊರ್ವರ ಸುರತರುಗಳ ।
ನೋರೊರ್ವರಿವೆಮ್ಮವೆಂಬುದುಂ ಪೂರ್ವಸ್ಥೀ ॥
ಕಾರವ್ಯವಸ್ಥೆ ನಿಲೆ ಸಾ ।
ಧಾರಣೆಸೀಮಾವಿವಾದಮಂ ಬಾರಿಸಿದಂ ॥೭೪॥

ಆತನಿಂ ಬಳಿಯಮಾಱನೆಯ ಕುಳಧರಂ ಸೀಮಂಕರನೆಂಬಂ,

ಉಷಾಂಧರ್ಸುರತರುಸಂ ।
ಲಮೆಮ್ಮವು ತಮ್ಮವೆಂದು ತಮ್ಮೊಳಗಾರ್ಯ ॥
ಲವೆತ್ತುಗುಡ್ಡೆವೊಯ್ದುವ ।
ಲವರಿಕೆ ಯೊಳಾದ ತೋಟಿಯಂ ತೊಲಗಿಸಿದಂ ॥೭೫॥

ಆತನಿಂ ಬಱಿಯಮಾರನೆಯ ಕುಳಧರಂ ವಿಮಳವಾಹನನೆಂಬಂ,

ಡಿಗಡಿಗೆ ಧರಾವಳಯಂ ।
ಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜ ॥
ಡೆಯೆ ಹಯಾದಿಗಳಿಂದಂ ।
ನಡೆಯಿಸಿದಂ ಕಲಿಸಿ ವಾಹನಾರೋಹಣಮಂ ॥೭೬॥

ಆತನಿಂ ಬಱಿಯಮೆಂಟನೆಯ ಕುಳಧರಂ ಚಕ್ಷುಷ್ಮಾನೆಂಬನಂದಿನ ಮಿಥುನಂಗಳ ಸುಖಮುಖಾವಲೋಕನದಿನತಿಕುತೂಹಳಮನಪ್ಪುಕೆಯ್ವುದುಂ -

ಯುಗಳಂಗಳ್ಪುಟ್ಟೆ ಸೀಂತಾಗುಳಿಸಿ ಪಿತೃಯುಗಂ ಸತ್ತು ಸರ್ಗಂಗಳೊಳ್ಪು
ಟ್ಟುಗುಮಿಲ್ಲಿಂ ಮುನ್ನಮಿತ್ತಲ್ಕತಿಪಯದಿನದಿಂ ಮಕ್ಕಳಂ ನೋಡಿ ಸಾವೆ ॥
ಯ್ದುಗುಮಿಾಗಳ್ಕರ್ಮಭೂಮಿಸ್ಥಿತಿ ಮೊಗಸಿದುದಿಂ ಬಾಳಕಾಳೋಕದಿಂದ
ಟ್ಟಿಗಮಿಲ್ಲೆಂದಿಂತು ಕಾಲಸ್ಥಿತಿಯನವರ್ಗತಿವ್ಯಕ್ತಮಪ್ಪಂತು ಪೇೞ್ದಂ ॥೭೭॥

ಆತನಿಂ ಬಱಿಯಮೊಂಬತ್ತನೆಯ ಕುಳಧರಂ ಯಶಸ್ವಿಯೆಂಬಂ,

ಅವರಿವರೆನ್ನದೆ ಮುನ್ನಾ ।
ರ್ಯವೆಸರ್ಪೆಸರಾಗೆ ಬೇಱೆವೇಱಿಂದಿನ ಮಾ ॥
ನವರ್ಗೆ ಪೆಸರಿಟ್ಟು ನಾಮ ।
ವ್ಯವಸ್ಥೆಯಂ ಪಡೆದು ಮನುಗಳೊಳ್ಪೆಸರ್ವಡೆದಂ ॥೭೮॥

ಆತನಿಂ ಬಱಿಯಂ ಪತ್ತನೆಯ ಕುಳಧರಂ ನಖಚಂದ್ರನೆಂಬನಾಕಾಲದೊಳ್,

ಉಡುಪತಿಯುಮನುಡುಗಣಮುಮ ।
ನೆಡೆಯುಡುಗಡೆ ತೋಱಿದೋಱಿ ಕಿಱುಗೂಸುಗಳಂ ॥
ನುಡಿಗಲಿಸಿದಲ್ಲ ತೊದಳ್ನುಡಿ ।
ಪಡೆವಿನೆಗಂ ಪಿತೃಯುಗಕ್ಕೆ ಕರ್ಣಾಮೃತಮಂ ॥೭೯॥

ಆತನಿಂ ಬಱಿಯಂ ಪನ್ನೊಂದನೆಯ ಕುಳಧರಂ ಚಂದ್ರಾಭನೆಂಬಂ,

ಇನನಂ ಶೀತಾಂಶುವಂ ಮಂಜಿನ ಮುಗಿಲ ಪೊಡರ್ಪಿಂ ಜನಂ ಕಾಣದಾಕಂ
ಪನಮಂ ಕೈಕೊಳ್ವದುಂ ಬೆಳ್ಪನೆ ಬೆಳಗಲೊಡಂ ತೋಱುಗುಂ ಕರ್ಮಭೂವ ॥

ರ್ತನಮತ್ಯಾಸನ್ನಮೆಂದಾಸ್ಥಿತಿಯನಱಿಪಿ ಸಂತಯ್ಸಿ ಸಂತಾಪವಿಚ್ಛೇ
ದನಮಂ ತಂದಂ ಯಶಶ್ಚಂದ್ರಿಕೆಗೆ ನೆಱಿಯದೆಂಬನ್ನಮಾಶಾಂತರಾಳಂ ॥೮೮

ಆತನಿಂ ಬಟಿಯಂ ಪನ್ನೆರಡನೆಯ ಕುಳಧರಂ ಮರುದೇವನೆಂಬಂ,

ಸರಿ ಸುರಿಯೆ ಮಿಂಚು ಮಿಳ್ಳಿಸೆ ।
ಸುರಚಾಪಂ ನೆಗೆಯೆ ಬೆಗಡುಗೊಂಡವರಂ ಸಂ ॥
ವರಿಸಿ ಘನಾಘನಸಮಯ ।
ಸ್ವರೂಪಮಂ ತಿಳಿಸಿ ಕಳೆದನವರುಮ್ಮಳಮಂ ॥೮೮

ಆತನಿಂ ಬಟಿಯಂ ಪದಿಮೂಱನೆಯ ಕುಳಧರಂ ಪ್ರಸೇನಜಿತೆಂಬನಾ ಕಾಲದೊ
ಧರಿಯುಮಳ್ಧರಿಯುಂ ಕುಟಿಯುಂ ಕುಳ್ತಲುಂ ಬೆಟ್ಟಮುಂ ಗಟ್ಟಮುಮುಪವಡೆಯುಮುಪ
ಸಮುದ್ರಮುಂ ಪುಟ್ಟೆ ಸಲಿಲಸಂಪಾತದಿನಪಮೃತ್ಯುಮರಣಮಾಗೆ ಮಾನಸರಸ
ಶೋಕಾನಳದಂದಹ್ಯಮಾನರಾಗೆ -

ತವೆ ತೈಲಂ ದೀಪಂ ನಂ ।
ದುವಂತೆ ಗಳಿಯಿಸೆ ನಿಷೇಕಮಟಿವರ್ಮುನ್ನಂ ॥
ಪವನಪ್ರಹಾರದಿಂ ತೈ ।
ಲಮುಳ್ಳೊಡಂ ನಂದುವಂತೆ ಪೊಂದುವರೀಗಳ್ ॥೮೨

ಬಡೆಕೊಳೆ ಕಾಯುಂ ಪಣ್ಣುಂ ।
ತೊಡಂಚಿ ಪಱಿದುದಿರ್ವ ಮಾಟ್ಕೆಯಿಂ ಕಿಱುವರೆಯ ॥
ರ್ಮಡಿವರನುಕ್ರಮದಿಂ ಸಾ ।
ವೊಡರಿಸಿದೊಡರಿಸುವುದಲ್ತೆ ಕದಳೀಪಂತಂ ॥೮೩।

ಉದಯಿಸಿ ನಡುಪಗಲಪ್ಪುದು ।
ಮುದಿತೋದಿತಮಾಗಿ ಸೂರ್ಯನಸ್ತಮಿಸುವವೋಲ್ ॥
ಉದಯಿಸಿ ಜೌವನಮಂ ತಳೆ ।
ದೊದವಿದ ಮುಪ್ಪಿನೊಳೆ ಕಳಿಪರಿಲ್ಲಿಂ ಬಟಿಯಂ ॥೮೪॥

ಎಂದು ಕಾಲಸ್ವರೂಪನಿರೂಪಣಂಗೆಯ್ದವರ ಶೋಕಪ್ರತ್ಯನೀಕಮಂ ನಡಪಿದನೀ ಪೇಟ್ದ
ಕುಳಧರಸಂಕುಳಕ್ಕೆ

ಒಂದೆ ಪಳಿತದ ದಶಾಂಶದೊ ।
ಳೊಂದಂಶಂ ಮೊದಲ ಮನುಗೆ ಪದಿಮೂವರೊಳಂ ॥

ಪಿಂದಣವರ್ಗಳ ದಶಾಂಶಮೊ ।
ಳೊಂದಂಶಂ ಮುಂದಣವರ್ಗ ಪರಮಾಯುಷ್ಯಂ ॥೮೫॥

ಸಾಸಿರಮುಮೆಂಟುನೂಱು ಶ ।
ರಾಸನವೊರ್ವಂಗೆ ಪಂಚಶತಹೀನಂ ಬಾ ॥
ಣಾಸನಮಿರ್ವರ್ಗುೞಿದ ।
ರ್ಗೋಸರಿಕುಂ ಕ್ರಮದಿನುದ್ವಮಿರ್ಪತ್ತೆಯ್ದಿಲ್ ॥೮೬॥

ಮನು ಚಂದ್ರಾಭಂ ಪಾಂಡುರ ।
ತನುವೆ ಯಶಸ್ವಿ ಪ್ರಸೇನಜಿಚ್ಚಕ್ಷುಷ್ಮ ॥
ರ್ವನಜದಳಚ್ಛವಿಗಳ್ ಕಾಂ ।
ಚನರೋಚಿಷ್ಣುಗಳೆ ಮಿಕ್ಕ ಕುಳಧರರೆಲ್ಲಂ ॥೮೭॥

ಮಂತಣಮೇನಾದಿಯ ಮ ।
ನ್ವಂತರ ಪದಶೀತಿ ಭಾಗೆ ಪಲ್ಲೆದೊಳಾ ಮ ॥
ನ್ವಂತರದ ಸಮಾನಂ ಮ ।
ನ್ವಂತರಮಕ್ಕುಂ ಪ್ರಸೇನಜಿತ್ಪರ್ಯಂತಂ ॥೮೮॥

ಕ್ರಮದಯ್ವರಿಂಗೆ ಹಾದಂ ।
ಡಮಯ್ವರುಂ ಮನುಗಳಿಂ [ಗೆ] ಹಾಮಾದಂಡಂ ॥
ಸಮನಿಸೆ ಹಾಮಾ [ಧಿಗ್ದಂ ।
ಡಮಯ್ವರಿಂದಾಯ್ತು] ಭರತನಿಂ ತನುದಂಡಂ ॥೮೯॥

ತದನಂತರಂ ಪದಿನಾಲ್ಕನೆಯ ಕುಳಧರಂ ನಾಭಿರಾಜನೆಂಬಂ ಪಂಚವಿಂಶತ್ಯುತ್ತರ ಪಂಚಶತಶರಾಸನೋತ್ಸೇದನುಂ ಪೂರ್ವಕೋಟಿಪರಮಾಯುಷ್ಯನುಮೆನಿಸಿ-

ಮುನ್ನಿನ ಜನ್ಮದ ಸುಕೃತಂ ।
ಸನ್ನಿದಮಾಯ್ತೆನೆ ಮತಿಶ್ರುತಾವಧಿಬೋಧಂ ॥
ತನ್ನೊಡನೆ ಪುಟ್ಟೆ ಪುಟ್ಟಿದ ।
ನೇನ್ನಾಭಿ ಯಶಸ್ಸನಾಭಿಯೋ ಕುಳಧರರೊಳ್ ॥೯೦॥

ಒರ್ಒಂದಂ ಕುಡುಗುಂ ದಶಾಂಗಸುರಭೂಜಂ ಬೇೞ್ಪುದಂ ಭೂತಳ
ಕ್ಕಾರೇನಂ ಪಡೆದಂತು ಜೀವಿಸುವರೆಂಬೀ ಕರ್ಮಭೂವರ್ತನ ॥
ಪ್ರಾರಂಭೋಚಿತ ಜೀವನೋಪಕರಣೋಪಾಯಂಗಳಂ ಕೋೞಿಕೊ
ಟ್ಟಾರಾತೀಯಮನುಪ್ರಧಾನರನುದಾತ್ತಂ ನಾಭಿ ಕೀೞ್ತಿಮಾಡಿದಂ ॥೯೧॥

ಮೊದಲಿಗನವನೀಶ್ವರರೊಳ್ ।
ಪದಿನಾಲ್ಕನೆಯಂ ಮನುಪ್ರಧಾನರೊಳೆಂಬೊ ॥
ಳ್ಪುದಿತೋದಿತಮೆನೆ ಮಹಿಮಾ ।
ಸ್ಪದನಾದಂ ನಾಭಿ ನಾಭಿಖಂಡನಕುಶಲಂ ॥೯

ಭುವನಜನಜೀವನೋಪಾ ।
ಯವೃತ್ತಿಯಂ ತೋಱಿಕೊಟ್ಟು ಕೃತಕೃಷಿಕರ್ಮ ॥
ವ್ಯವಹೃತಿಯಂ ಕೃತಯುಗಮೆಂ ।
ಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ ॥೯

ಪಿಂಡಿ ಪಿಟಿದಿಕ್ಷುರಸಮಂ ।
ಕೊಂಡುಪಯೋಗಿಸುವುಪಾಯಮಂ ತೋರ್ಪುದುಮಾ ॥
ದಂಡಧರವಂಶಮವನೀ ।
ಮಂಡನಮಿಕ್ಷ್ವಾಕುವಂಶಮೆನಿಸಿತ್ತೆಳೆಯೊಳ್ ॥೯

ನಯನಂ ನೀಳಸರೋಜಮಂ ಸೆಣಸುಗುಂ ವಕ್ಷಃಸ್ಥಲಂ ವಶ್ಯವೇ
ದಿಯನಾದರ್ಶಿಸುಗುಂ ಮುಖಂ ಕಮಳಮಂ ಕೀೞ್ಮಾಡುಗುಂ ಕಯ್ಗಳಾ ॥
ನೆಯ ಕಯ್ಯಂ ನಖಕಾಂತಿಯಂ ನಗುಗುಮೂನಂ ಮಾಡುಗುಂ ಜಾನು ಬಾ
ಳೆಯ ಕಂಬಂಗಳನೆಂದೊಡೇವೊಗೞ್ವೆ ಶೋಭಾನಾಭಿಯಂ ನಾಭಿಯಂ ॥೯

ಮರುದೇವಿಯೆ ತಕ್ಕಳ್ ನಾ ।
ಭಿರಾಜವಲ್ಲಭೆಯೆನಲ್ಕೆ ವಲ್ಲಭನೆನಿಸಲ್ ॥
ಮರುದೇವಿಗೆ ತಕ್ಕಂ ನಾ ।
ಭಿರಾಜನನುರೂಪರಿನ್ನರಾರ್ದಂಪತಿಗಳ್ ॥೯

ಪರಿಚಾರಕಿಯರ್ಸುರಸುಂ ।
ದರಿಯರ್ಪೊಡೆವಟ್ಟು ಪೂಜಿಪಂ ಪುರುಹೂತಂ ॥
ಪುರುದೇವಂ ಪೆರ್ಮಗನೆನೆ ।
ಮರುದೇವಿಯ ಮಹಿಮೆ ಬಣ್ಣಿಸಲ್ಬಂದಪುದೇ ॥೯

ಅವತಂಸಂ ತನ್ನ ಗುಣ ।
ಸ್ತವನಂ ಧರೆಗೆನಿಸಿ ನಾಭಿರಾಜಂ ಧರಣೀ ॥
ಯುವತಿಗೆ ಮರುದೇವಿಯೆ ದಲ್ ।
ಸವತಿಯೆನಲ್ ಸುಖದಿನರಸುಗೆಯ್ಯುತ್ತಿರ್ದಂ ॥೯

ಅಂತಿಪ್ಪುದುಂ -

ಪುರುದೇವಿಗೆ ಪುಟ್ಟಿದಪಂ ।
ಪುರುದೇವಂ ಬಂದು ದಿವದಿನೆಂದವಧಿಯಿನಾ ॥
ಪುರುಹೂತನಱಿದಯೋಧ್ಯಾ ।
ಪುರಮಂ ನಾಡಾಡಿಯಲ್ಲದಂತಿರೆ ಪಡೆದಂ ॥೯೯॥

ಅದರೊಳ್ಕೌಸಲದೇಶವೊಂದೆ ಪುರದೊಳ್ ಸಾಕೇತಮೊಂದೀಕ್ಷಣ
ಕ್ರೀಡಾವಾಸಮೆನಲ್ಪುರಂದರನಲಂಪಿಂ ನಾಭಿರಾಜಂಗವಂ ॥
ಮಾಡಿಟ್ಟಂ ಕರುವಿಟ್ಟು ಮನ್ಮಥನ ಬಣ್ಣಂಗಯ್ವನಂದೆಂದೊಡಾ
ನಾಡುಂ ಬೀಡುಮನೊಂದೆ ನಾಲಗೆಯೊಳಿನ್ನೇವಣ್ಣಿಪೊಂ ಬಣ್ಣಿಪೊಂ ॥೧೦೦॥

ಬೀಡು ಸುಕೃತಕ್ಕೆ ಚೆಲ್ವಿಂ ।
ನಾಡುಂಬೊಲನಾಶ್ರಯಂ ಸುಖಕ್ಕೆನೆ ಪೆಱತೇಂ ॥
ನಾಡಾಡಿಯ ನಾಡಲ್ಲದು ।
ನಾಡೊಳಗುತ್ಕೃಷ್ಟಮಲ್ತೆ ಕೌಸಲದೇಶಂ ॥೧೦೧॥

ಪರ್ವತಸಾನು ಸರ್ವಮಣಿಯಿಂ ಪಟು ಸರ್ವಫಳದ್ರುಮಂಗಳಿಂ
ದುರ್ವರೆ ಸರ್ವಸಸ್ಯದೊದವಿಂ ತರುಗುಲ್ಮಲತಾವನಸ್ಥಳಂ ॥
ಸರ್ವಋತುಪ್ರವೇಶದಿನಶೇಷಜನಂ ಪರಿಪೂರ್ಣಲಕ್ಷ್ಮಿಯಿಂ
ಸರ್ವಗುಣಂಗಳಿಂದೆಸೆಯೆ ಸರ್ವಸುಖಾವಹಮಾಮಹೀತಳಂ ॥೧೦೨॥

ಲೀಮರ್ದಂ ಮುಂದಿಡೆ ಮಂದಹಾಸಮಲರ್ಗಣ್ಬೆಳ್ಪಿಂಗಳಂ ಬೀಱಿ ತೋ
ಳ್ ಮೊದಲ್ಗೆಯ್ದೆ ಪೊದಪ್ಪಿ ಪೆರ್ಮೊಲೆಗೊಡಂಗಳ್ಲೂಸೆ ಲಾವಣ್ಯತೋ ॥
ಯುಮನಾಳೋಕನಮಾತ್ರದಿಂ ಮಱೆದು ಪಾಂಥಶ್ರೇಣಿ ನೀರಟ್ಟಿಯಂ
ಶ್ರಮಮಂ ತೀರಮೆಯಂ ಪ್ರಪಾಂಗನೆಯರಿಂ ಕಣ್ಗಾವುದಾದೇಶದೊಳ್ ॥೧೦೩॥

ಲೀವಿದ ತಿಳಿಗೊಳದಿಂ ಪೊಂ ।
ದಾವರೆಗೊಳದಿಂದರಲ್ದ ನೆಯ್ದಿಲ್ಗೊಳದಿಂ ॥
ದಾವಲ್ಗೊಳದಿಂ ಚೆಲ್ವಿಂ ।
ದಾವಾಸಮೆನಿಪ್ಪುವೊಪ್ಪುವಾ ನಾಡೂರ್ಗಳ್ ॥೧೦೪॥

ಕಳಕಂಠಕ್ಕತನುಗೆ ಜಾ ।
ಪಳತಾರೋಪಣವಿಕಾರಮಳಿಗಾಮ್ರಕುಜಾ ॥
ವಳಿಗೆ ಮಧುವಿಕೃತಿ ಮಾನವ ।
ಕುಳಕ್ಕೆ ಕನಸಿನೊಳಮಿಂತಿರಿಲ್ಲಾ ನಾಡೊಳ್ ॥೧೦೫॥

ಸಮರತಸಂಜನಿತಪರಿ ।
ಶ್ರಮಮಂ ದಂಪತಿಗೆ ಕಳೆದು ಮಗುಳ್ದುಂ ರತಿರಾ ॥
ಗಮನಿರದೊದವಿಪುದು ನವೋ ।
ದ್ಗಮಪರಿಮಳವಿಷಯಮೆನಿಪ ವಿಷಯಸಮೀರಂ ॥೯

ಆ ವಿಷಯಂ ವಿಳಾಸಿನೀಮಣಿಮಯಮುಕುರಮೆನಿಸಿ -

ಕಣ್ಣೆಮೆಯಿಕ್ಕದಾಱು ಋತುವುಂ ಬನಮಂ ಸಿರಿ ಕೆಯ್ವೊಲಂಗಳಂ
ಕಣ್ಣೆಮೆಯಿಕ್ಕದಲ್ಲಿ ಪಥಿಕರ್ಗಳಿ ಸೋವಬಳಾಜನಂಗಳಂ ॥
ಕಣ್ಣೆಮೆಯಿಕ್ಕದೀಕ್ಷಿಸಿ ಪುರಂ ಸುರಲೋಕಮನೇಕೆ ಱೆಕ್ಕಟಂ
ಕಣ್ಣೆಮೆಯಿಕ್ಕದೆಂದೆ ನಗುಗುಂ ನಿಜರತ್ನಗೃಹಾಂಶುಜಾಳದಿಂ ॥೧೦॥

ಆ ಪುರೋಪವನದೊಳಸಮಶರ ಕಿಶೋರಕೇಸರಿ ಗಜಱೆ ಗರ್ಜಿಸದ ಕೃತಕಗಿರಿಗ
ಮನೋಜರಾಜವಿಜಯ ಕೇತನಶಫರಸಂಚಾರಮಿಲ್ಲದ ಸರೋವರಂಗಳಿಲ್ಲ ರತಿಪತಿ
ಪೊಗಣೆಯ ದೊಣೆಗೆದಱದ ಪೂದೋಂಟಮಿಲ್ಲ ಕುಸುಮಶರಕೋಪಶಿಖಿಯನುದ್ದ ಮುರಿ
ತಣ್ಗಾಳಿಯಿಲ್ಲ ರತಿಯ ಲಾವಣ್ಯರಸಪ್ರಭಾವದಿಂದ ಪಲ್ಲವಿಸದ ಚೂತವನವಿ
ಕಾಮರಾಗರಸಮಂ ಕಾಟ್ಟುರಂ ಮಾಡದಶೋಕವನಮಿಲ್ಲ ಕಂದರ್ಪದಂದ ಶೂಕಮಾವರಿ
ಚಂದನನಂದನಂಗಳಿಲ್ಲ ಮನೋಜರಾಜನೀರಾಜನದೀಪಕಳಿಕೆಯುಂ ಬೆಳಗ
ಚಂಪಕವನಮಿಲ್ಲಪಂಚಬಾಣಕೃಪಾಣಪಟ್ಟದೊಡನೆ ಕೊನೆಯ ವಿಣ್ಪಂ ತೊನೆದು ತೂ
ಪೂಗವನಮಿಲ್ಲ ಮದನಮೋಹಾಂಧಕಾರಮಂ ಕೆದಱದ ತಮಾಳವನಮಿಲ್ಲ ರತಿಯ ಮಧುಪ
ಗೋಷ್ಠಿಯ ಸುವರ್ಣಚಷಕಮನವಕರ್ಣಿಸದ ಕರ್ಣಿಕಾರಮಿಲ್ಲ ಮಕರಧ್ವಜವಿಜಯಲಕ್ಷ್ಮಿ ನಲಿ
ನರ್ತಿಸದ ದವನದ ಮಂದವನದ ವೇದಿಕೆಗಳಿಲ್ಲ ಮಧುಮಹಾದೇವಿ ಪಟ್ಟಂಗಟ್ಟದ ಮಾಧವಿಗಳ
ಕಂತುದಂತಿ ವಿಸಟಂಬರಿಯದೇಳಾವನ ವೀಥಿಗಳಿಲ್ಲ ಜಗದ್ವಶೀಕರಣತಿಲಕ- ಮೆನಿಸ
ತಿಳಕವನಮಿಲ್ಲ ಮನೋಭವನ ಭುವನವಿಜಯಮಂ ನಿರಾಕುಳಂ ಮಾಡದ ವಕುಳಮಿಲ್ಲ ಚಿತ್ತ
ಕೀರ್ತಿಲತೆಯ ಬಿತ್ತು ಮೊದಲೆನಿಸದ ವಿಕಚವಿಚಕಿಳವಲ್ಲರಿಗಳಿಲ್ಲ ಪುಷ್ಪಶರವಶೀಕರಣಮಂತ್ರ
ಪದಂಗುಟ್ಟದ ಕೋಗಿಲೆಗಳಿಲ್ಲ ಸ್ಮರನಬಿರುದಂಕಮಾಲೆಯ- ನೋದದರಗಿಳಿಗಳ
ಅಂತಃಕರಣಸಮುದ್ಭವಚಾಪಟಂಕೃತಮನಲಂಕರಿಸದ ಮಧುಕರಂಗಳಿಲ್ಲ ಜಳದೇವತ
ಕಳಕೂಜನಮನುಪದೇಶಂಗಳಂ ಗೆಯ್ಯದ ಸಾರಸಂಗಳಿಲ್ಲ ಮನ್ಮಥಂಗೆ ಪಥಿಕರ ಪಥಿಕ
ಪಿಸುಣ್ಪೇೞದ ಪಾರಾವತಂಗಳಿಲ್ಲ ದರ್ಪಕದರ್ಪಾವಲೇಪಮನುದ್ದೀಪನಂ ಮಾಡ
ರಥಾಂಗಮಿಥುನಂಗಳಿಲ್ಲ ವನದೇವತೆಗೆ ಪೀಲಿದಟ್ಟಿಯನೆತ್ತಿಸದ ಸೋಗೆನವಿಲಿಲ್ಲದೆಯುಂ -

ಪೌರವನಂಗಳೊಳ್ಕುಸುಮಸೌರಭಸಾರಸಮೀರಮಂದಸಂ
ಚಾರಮೆ ಪಾಂಥರಳ್ಕೆರ್ದೆಯನಾರ್ದಿಸುವಂಗಜಬಾಣಮೋಕ್ಷಮುಂ ॥

ಾರಮೆ ಬಂಡನುಂಡು ನನೆಗೊಂಬುಗಳಿಂ ಮೊರೆದೇಳ್ವ ಭೃಂಗರ್ಘುಂ
ಾರಮೆ ಮಾೞ್ಪುದಾರ ಬಗೆಗುಂ ಮದನೋತ್ಸವಹರ್ಷಭಾರಮಂ ॥೧೦೮॥

ಸಹಕಾರಾಶೋಕರಂಭಾತಿಳಕವಕುಳಪುನ್ನಾಗಕರ್ಪೂರವಲ್ಲೀ
ಗೃಹದೊಳ್ ಬಾಳಪ್ರವಾಳಾಸ್ತರಣದಲದರನ್ಮಲ್ಲಿಕಾಕಲ್ಪಶೋಭಾ
ಸಹದೊಳ್ ಮೆಯ್ವೆರ್ಚೆ ನಾನಾವನವಿಹಗರವಂ ತಮ್ಮ ಸಂಭೋಗಕೇಳೀ
ಬಹರವ್ಯಾಪಾರದಿಂದಿರ್ಪುವು ಪುರವನದೊಳ್ ವಾರನಾರೀಕದಂಬಂ ॥೧೦೯॥

ಪದೆಪಂ ಬೀಱುಗುಮಾ ಪುರೋಪವನದೊಳ್ ಪೆಣ್ದುಂಬಿವಿಂಡಿಂ ಕಱಿಂ
ಗಿದ ನೆಯ್ದಿಲ್ಗೊಳನಂಚೆವಿಂಡನೊಳಕೊಂಡಂಭೋಜಷಂಡಂ ತಳಿ ॥
ರ್ಪುದಿದೇಳಾವನಮೊಡ್ಡುಗೊಂಡ ಕದಳೀಕಾಂಡಂ ತರಂಗೊಂಡ ಚೂ
ತದ ಸಾಲ್ ಚಂದನವೀಥಿ ಸಂಪಗೆಯ ಜೊಂಪಂ ಮಾಧವೀಮಂಟಪಂ ॥೧೧೦॥

ವನಜವನರಾಜಿ ಕೂಜಿತ ।
ವನವಿಹಗವಿರಾಜಿ ಪುರಬಹಿಃಪುರಕೇಳೀ ॥
ವನದೊದವು ರತಿಯ ಪೊಸಜ ।
ವ್ವನದೊದವೆನೆ ನೆಱೆಯೆ ಪೊಗೞಲಾಪಂ ನೆಱೆಪಂ ॥೧೧೧॥

ಬೇರ್ವಿಡಿದು ಕಾಯ್ತ ಪಲಸೆಳ ।
ನೀರ್ವೊನಲಂ ಕಱೆವ ತೆಂಗು ಪೂಬಾಳೆಮರಂ ॥
ಸೋರ್ವಡಕೆಯ ಸಸಿ ಬೆಳಗಂ ।
ಬೀರ್ವೆಲೆಯೆಳವಳ್ಳಿ ಸೊಗಯಿಕುಂ ಪುರವರದೊಳ್ ॥೧೧೨॥

ಅಂತು ಕಂಪುಗಜವಿಹಾರವೀಥಿಯುಂ ಸುಕೃತಸುರಭಿಸಂಚಾರಕ್ಷೇತ್ರಮುಂ ನೇತ್ರಪುತ್ರಿಕಾಪ್ರಸಾಧನವುಂ ಲಕ್ಷ್ಮೀಲೀಲಾಲಾಸ್ಯ [ಮಾಂಗಲ್ಯ] ರಂಗಮುಮೆನಿಪ ಪುರಬಹಿಃಪುರದೊಳಗೆ -

ಬಡವಾನಳಂಗೆ ಸೆಡೆದಿಂ ।
ಗಡಲೆ ಸರಣ್ಬೊಕ್ಕುದಮರಶೈಳಮನೆಂಬೀ ॥
ಪಡೆಮಾತಂ ನೀರ್ಗಾದಿಗೆ ।
ಪಡೆಯುತ್ತಾ ಪೊನ್ನಕೋಟೆಯುಂ ಬಳಸಿರ್ಕುಂ ॥೧೧೩॥

ಚೆಂಬೊನ್ನ ಕೋಟೆ ಪರಿವೇ ।
ಸಂಬೆತ್ತೆಳನೇಸಱಂತೆ ನೀರ್ಗಾದಿಗೆಯಂ ॥

ತ್ತಿಂಬಿದ ನೀರ್ವೂಗಳ ಪಲ ।
ವುಂ ಬಣ್ಣದಿನಾರ ಕಣ್ಣುಮಂ ಸೆಱಗೆಯ್ಗುಂ ॥೧

ಮಂದರಕಂದರಮೆಂಬೀ ।
ಸಂದೆಗದಿಂ ಮೀಱ ಸೂತನಂ ಕೀಱ ನಿಜ ॥
ಸ್ಯಂದನಮಂ ಕೋಟೆಗೆ ಭರ ।
ದಿಂದೆೞಗುಂ ಕರ್ಚಿ ಕೀೞನಿನನ ಹಯಂಗಳ್ ॥೧

ಮುಗಿಲಟ್ಟಳೆಗಳ ಕೆಲದಂ ।
ಬುಗಂಡಿಯಿಂ ನುಸುಳ್ದು ನಡೆವ ದಿನಕರನ ಹಯಂ ॥
ಗಗನಾಧ್ವಖೇದಮಂ ಪೞ ।
ಯಿಗೆಗಳ ತಣ್ಣೆಲರ ತೀಟದಿಂ ತೊಲಗಿಸುಗುಂ ॥೧೧

ಅಂತಲಂಘ್ಯಮುಮಭ್ರಂಕಷವಿವಿಧಾಟ್ಟಾಳ ಮುಮೆನಿಪ ಕನಕಪ್ರಾಕಾರದಿಂದೊಳ

ಬರೆದ ವಿಚಿತ್ರಪತ್ರನಿಚಯಂ ನಿಜಲೋಚನಚಂದ್ರಿಕಾಪರಂ
ಪರೆ ನಡೆನಟ್ಟು ಸೋರ್ವಶಶಿಕಾಂತದ ನೀರ್ಗಳ ನೀರ್ವೊನಲ್ಗಳಿಂ ॥
ಪರೆಯೆ ಕಸಲ್ದು ಕಣ್ಗೆ ಕಿಸುಗಣ್ಪೆ ಹರಿನ್ಮಣಿಭಿತ್ತಿಭಾಗದೊಳ್
ಪುರವನಿತಾಜನಂ ಬರೆಯುತಿರ್ಪುದು ಭಂಗುರ ಪತ್ರಭಂಗಮಂ ॥೧೧

ಒದವಿದ ತಮ್ಮ ಕೆಂದಳದ ಕೆಂಪುಗಳಿಂ ಗಿಳಿ ಪದ್ಮರಾಗರ
ತ್ನದ ಗಿಳಿಯಂತೆ ತಮ್ಮ ನಯನಾಚಳಚಂದ್ರಿಕೆಯಿಂದಮಿಂದುಕಾಂ ॥
ತದ ಗಿಳಿಯಂತೆ ಕೌತುಕಮನಾಕ್ಷಣದೊಳ್ಕುಡೆ ನೋಡಿ ನೋಡಿ ಮಾ
ಯದ ಗಿಳಿಯೆಂದೆ ಪಂಜರದಲಿಕ್ಕುವರೋದಿಸಲಂಜಿ ಮುಗ್ಧೆಯರ್ ॥೧೧೮

ತುಂಗಕುಚಕುಂಭಯುಗಮುಂಗಜಗಜಂ ಮೊಗವಡಂಗಳಿದುವೆನಿಸೆ ವಿಗತಾಂಚಳಮಪಾಂಗಂ
ಮೀಂಗಳಸುವಿಂದುಕಿರಣಂಗಳೆನಿಸೆ ಕರ್ಣಯುಗಳಂಗಳವತಂಸಮಣಿಯಂ ಬಳಸೆ ಘರ್ಮೋ ॥
ದಂಗಳಿರೆ ಸೊಸಲೊಳಿಳದಿಂಗಳಮರ್ದಿನ ಪನಿಯ ಪಾಂಗನೊಳಕೊಂಡು ನಳಿತೋಳ್ಮಳಿದು ನೀಡು
ತ್ತಂಗಭವಪಾಶಮೆನೆ ಪಿಂಗದರವದು ಘಟ್ಟಿಯಂ ಗಡಣದಿಂ ಘಟ್ಟಿವಳ್ತಿಯರ ತಂಡಂ ॥೧೧೯

ನಱುಸುಯ್ಗಂ ಮಾಲೆಗಂ ಸೂಳಱದೆಱಗುವಿನಂ ತುಂಬಿಗಳ್ನೋಡಿದರ್ಮೆ
ಯ್ಮಱವನ್ನಂ ಬಾಹುಮೂಳಂ ಪೊಗರನುಗುೞ್ವಿನಂ ಕಣ್ಮಲರ್ ಬಳ್ಳಿಮಿಂಚಂ ॥
ಕೞವನ್ನಂ ಮಾಲೆಪೂವಂ ನೆಗಪಿ ಸೊಗಯಿಕುಂ ನೀಱರೊಳ್ಪುಷ್ಪಚಾಪಂ
ಗುಱಯೇಸಂ ತೋಱಲಂಬಂ ಪೆಱಗೆವಱದವೊಲ್ ಪುಷ್ಪಲಾವೀಕದಂಬಂ ॥೧೨೦॥

ರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ
ರುಣನ ಮುತ್ತಿನೆಕ್ಕಸರಮುಂ ಗರುಡಾಂಗದ ಪಚ್ಚೆಯುಂ ಫಣೀ ॥
ರಫಣರತ್ನಮುಂ ಬೆಲೆಗೆ ಬಿಣ್ಣಿದುವಲ್ಲವೆನಿಪ್ಪ ರತ್ನದಿಂ
ರಡನೆಯಬ್ಧಿ ರನ್ನವಸರಂ ಗೆಲೆವಂದುದು ರೋಹಣಾದ್ರಿಯಂ ॥೧೨೧॥

ನಜಂ ಪಂಕಾಂಕಿತಂ ಗೋವುಳಿಗೆಯ ಮೊಲೆಯೊತ್ತಿಂಗೆ ಪಕ್ಕಾಯ್ತು ಗೋಪ
ನವಕ್ಷೋಭಾಗಮೌರ್ವಜ್ವಳನಬಹುಳ ಧೂಮಾಕುಳಂ ಪಾಲ ಮುನ್ನೀ ॥
ನಪಾಯಸ್ಥಾನಮೆಂದಾ ಪುರವರದವಣೆಗ್ವಾಟ ಹರ್ಮ್ಯಂಗಳೊಳ್ ಮು
ನ ಸಂಚಾರಿಸ್ವಭಾವಂ ಪಱಿಪಡೆ ಪದಪಿಂ ಲಕ್ಷ್ಮಿ ನಿಶ್ಚಿಂತಮಿರ್ಪಳ್ ॥೧೨೨॥

ವಿಜವಿಮಾನಂ ಮಾಡದ ।
ವು ಮಾಡಿದುವೆಂಬ ಭೇದಮಲ್ಲದೆ ಚೆಲ್ವಿಂ ॥
ವರತ್ನರಚಿತದಿಂ ಭೇ ।
ವಿಲ್ಲ ತತ್ಪುರದ ಭವನಮೆನಿತನಿತಱೊಳಂ ॥೧೨೩॥

ರುಳುಂ ಪಗಲುಂ ಪುರದೊಳ್ ।
ರಸಿರ್ಪುವು ಪದ್ಮರಾಗಗೃಹದೆಳವಿಸಿಲಿಂ ॥
ರಿನೀಳತಮದ ಗೃಹದು ।
ಬ್ಬರದಿಂ ಶಶಿಕಾಂತಗೃಹದ ಚಂದ್ರಾತಪದಿಂ ॥೧೨೪॥

ಲ್ಪಿ ಗಡ ಕಲ್ಪಪತಿ ಸಂ ।
ಲ್ಪಂ ರತ್ನೋಪಳಂ ದಳಂ ಗಡ ಶೋಭಾ ॥
ಲ್ಪಮಿದೆನ್ನದೆ ಬೇಱೆ ವಿ ।
ಲ್ಪಿಸುವಂ ಗಾಂಪನೆನಿಸುಗುಂ ಕರುಮಾಡಂ ॥೧೨೫॥

ಲೆಮಾಡದ ಪೊಸದೇಸಿಯ ।
ಲೆಮಾಡದ ಕಲ್ಪಸದನಮೆಯ್ದದಣಂ ಕೀೞ್ ॥
ಲೆಯಾದುದಿದಱ ತೆಱದಿಂ ।
ಲೆಯಾದುದು ಸಕಳಜನದ ಕಣ್ಗಂ ಮನಕಂ ॥೧೨೬॥

ಳತೃಣಂಗಳೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಿಂ ಮೃಗೀ
ಳಕಮಲ್ಲಿ ಮಾಣಿಕದ ಕೆಂಬೊಳಪಿಂ ಬಿಸಿಲೆಂದು ನಟ್ಟಿರುಳ್ ॥
ಳಿಸುಗುಂ ರಥಾಂಗಮೆಱಲಿಕ್ಕಿದ ಮುತ್ತಿನ ಸೂಸಕಂಗಳಂ
ಳಮೃಣಾಳಮೆಂದು ಕರ್ಮಕಲ್ಪದೆಗುಂ ಕಳಹಂಸಪೋತಕಂ ॥೧೨೭॥

ಗಿಳಿ ಗಿಳಿವೆಣ್ಗೆ ಪೂಗಫಳಮಂ ಕಳಹಂಸೆಗೆ ಹಂಸನಬ್ಜಕಂ
ದಳಮನಿಭಂ ಕರೇಣುಗೆ ಲವಂಗದಳಂಗಳನೀವ ಚಿತ್ರಮಂ ॥
ತಳೆದು ವಿಳಾಸಮಂ ತಳೆದ ರಾಣಿಯವಾಸದ ಬಳ್ಳಿಮಾಡದು
ಜ್ವಳಮಣಿಭಿತ್ತಿ ಚೆಲ್ವನೊಳಕೊಂಡೊಳಕೊಂಡುದಪೂರ್ವಭಿತ್ತಿಯೊಳ್ ॥೧೨೮॥

ಬೆರಲಂ ಮಿಡಿಯಿಪ ಪುಳಕಾಂ ।
ಕುರಮಂ ಪುಟ್ಟಿಸುವ ನೋಡೆ ತಲೆವಾಗಿಪ ಸುಂ ॥
ದರಮೆನಿಪ ಕುಸುರಿವೆಸದಿಂ ।
ದರಮನೆ ಮಾಳ್ಪುದು ಮಯಂಗಮತಿವಿಸ್ಮಯಮಂ ॥೧೨೯॥

ನೆರೆದಿರ್ಪರ್ಚತುರಾಸನರ್ಪಲಬರೆನ್ನೊಳ್ ರಾಜಬಾಧಾಪರಂ
ಪರೆಯುಂ ಕಂಟಕರಾಜಿಯುಂ ರಜಮುಮೆನ್ನೊಳ್ಪೊರ್ದವೆಂದು ನಿರಂ ॥
ತರಮೊಪ್ಪಂಗಿಡದೆಂದು ನಾಭಿಕಮಳಾವಾಸಂ ಪುರಂ ನಾಭಿಪಂ
ಕರುಹಕ್ಕೀವುದು ನೀಳರತ್ನಗೃಹಕಾಂತಿಧ್ವಾಂತದಿಂ ದೈನ್ಯಮಂ ॥೧೩೦॥

ಅಂತತಿಶಯಮೆನಿಪಯೋಧ್ಯಾ ಪುರವರಾಧಿಪತಿ,

ಮನುಚೂಡಾಮಣಿ ನಾಭಿ ನಾಭಿಸುತನಾದಿಬ್ರಹ್ಮನಾಬ್ರಹ್ಮನಂ
ದನನಾರ್ಗಂ ಮಿಗಿಲಾದನಾದಿ ಭರತಂ ಷಟ್ಖಂಡಭೂನಾಥನಾ ॥
ಮನುಜೇಂದ್ರಾತ್ಮಜನರ್ಕಕೀರ್ತಿ ನೆಗಟ್ದಿಂ ತದ್ವಂಶಮತ್ಯಂತಪಾ
ವನಮತ್ಯುನ್ನತಮಾಯ್ತು ಸದ್ಗುಳಪತಾಕಾದಂಡಮೆಂಬನ್ನೆಗಂ ॥೧೩೧॥

ನೆಲಸಂ ಮರ್ಯಾದೆಯಿಂ ಪಾಲಿಸಿ ನಿಯಮಿಸಿ ವರ್ಣಾಶ್ರಮಾಚಾರಮಂ ದೋ
ಷಲವಂ ಮೆಯ್ವೆರ್ಚದಂತಿಂದ್ರಿಯಸುಖದೊದವಂ ತೀರ್ಚಿ ಸಾಮ್ರಾಜ್ಯದೊಳ್ ಮು ॥
ನ್ನಲಿವಲ್ಲಿಂಪತ್ತ ಲಾತ್ಯಂತಿಕಸುಖಪದಮಂ ಪೆತ್ತ ರಾಜಾಧಿರಾಜ
ರ್ಪಲರಿಂದಿಕ್ಷ್ವಾಕುವಂಶಂ ಕುಲನದಿಯವೊಲಾಯ್ತುವ್ಯವಚ್ಛಿನ್ನರೂಪಂ ॥೧೩೨॥

ಮನು ನಾಭಿನರೇಂದ್ರನಿನಿ ।
ತ್ತಮುಕ್ರಮಂಗಿಡದೆ ಪೆರ್ಚುವಡೆದಾ ವಂಶಂ ॥
ಮುನಿಸುವ್ರತ ಜಿನಪತಿವರ ।
ಮನೂನಮಾದತ್ತುದಾತ್ತಶಾಖಾಕೀರ್ಣಂ ॥೧೩೩॥

ಕ್ಷಿತಿನಾಥಂ ತನ್ಮುನಿ ಸು ।
ವ್ರತನಾಥರ ಕಾಲದಂದು ತದ್ವಂಶದೊಳ ॥

ಪ್ರತಿಮಂ ವಿಜಯರಥಂ ತ ।
ತ್ಪತಿ ಹೇಮಲತಾಂಗಿ ಹೇಮಮಾಳಿನಿಯೆಂಬಳ್ ॥೧೩೪॥

ವಿಜಿಗೀಷುವೃತ್ತಿಯಿಂ ಭೂ ।
ಭುಜರಂ ಬೆಸಕೆಯ್ಸಿಕೊಂಡು ಭೂಮಂಡಳಮಂ ॥
ಭುಜಡದಂಡದೊಳಿರಿಸಿದನೇ ।
ನಜೇಯಭುಜಬಳನೊ ವಿಜಯರಥನರನಾಥಂ ॥೧೩೫॥

ಆ ನರೇಂದ್ರನಂದನಂ,

ಜಿತರಿಪು ಸುರೇಂದ್ರಮನ್ಯು ।
ಕ್ಷಿತಿಪತಿ ರಿಪುನೃಪಕುಳಾಂಗನಾಜನಮನ್ಯೂ ॥
ದ್ಗತಸಲಿಲಬಾಷ್ಪಧಾರಾ ।
ಪ್ರತಾನದಿಂ ಕೀರ್ತಿವಲ್ಲಿಯಂ ಬಳಯಿಸಿದಂ ॥೧೩೬॥

ಆ ವಿಶದಕೀರ್ತಿಗೆ ಕೀರ್ತಿಶ್ರೀಯೆಂಬೊಳರಸಿಯಾಗೆ -

ಅಂದಮದಟಲೆಯೆ ಮನಸಿಜ ।
ನಂದಮನಳವಳವಿಗಳೆದು ಕೇಸರಿಯಳವಂ ॥
ಬೆಂದಗುಳೆ ವಜ್ರಬಾಹು ಪು ।
ರಂದರರೆಂಬಿರ್ವರವರ್ಗೆ ನಂದನರಾದರ್ ॥೧೩೭॥

ಕಡಿದು ವಿಪಕ್ಷಮನಿಂದ್ರಂ ।
ಕಡಿವಂತೆ ಕುಳಾದ್ರಿಪಕ್ಷಮಂ ತೋಳ್ಬಲಮಂ ॥
ಪಡೆದಂ ಪರಪ್ರತಾಪಂ ।
ಪೊಡರ್ಪುಗಿಡುವಂತೆ ವಜ್ರಬಾಹುಕುಮಾರಂ ॥೧೩೮॥

ಪರಪುರಮನುರಿಪಿ ದೆಸೆಗುರಿ ।
ವರಿವಿನೆಗಂ ತನ್ನ ತೇಜಮರಿನೃಪವದನಾಂ ॥
ಬುರುಹಂ ಕರಿಂಕುವರಿದಿರೆ ।
ಪುರಂದರಂ ನೃಪಪುರಂದರಂ ಪೊಗಟಿಸಿದಂ ॥೧೩೯॥

ಮಗನೊರ್ವಂ ತನಗಿರ್ವ ।
ರ್ಮಗಂಗೆ ಸುತರಾಗೆ ಮೂಱು ಕಣ್ಣನೆ ಮೂಱುಂ ॥

ಜಗಮಂ ತನಗೆಱಗಿಸಿದಂ ।
ತ್ರಿಗುಣೆಸೆ ತನ್ನೊಳ್ ಮನೋರಥಂ ವಿಜಯರಥಂ ॥೧೪೭

ವಿಜಯರಥಂ ಧರಿತ್ರಿಗೆ ಮನೋರಥಸಿದ್ಧಿಯನಿತ್ತು ವಕ್ತ್ರಪಂ
ಕಜವನರಾಜಹಂಸವಧು ವಾಗ್ವಧು ರಂಜಿಸೆ ತನ್ನ ಕೀರ್ತಿ ದಿ ॥
ಗ್ಗಜರಥನಕ್ಕೆ ಕೀರ್ತಿಮುಖಮಾಗೆ ಜಗಜ್ಜನ ಕಂಠಭೂಷಣಂ
ನಿಜಗುಣನಾಮಮಾಗಿರೆ ವಿರಾಜಿಸಿದಂ ಕವಿತಾಮನೋಹರಂ ॥೧೪೧

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರ ಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತಪುರಾಣದೊಳ್
ಪೀಠಿಕಾಪ್ರಕರಣಂ ಪ್ರಥಮಾಶ್ವಾಸಂ



# ೨. ವಂಶವರ್ಣನಂ

ಶ್ರೀಯಂ ವಿತರಣದೊಳ್ ವಾಕ್ ।
ಶ್ರೀಯಂ ಸೌಜನ್ಯ ವೃತ್ತಿಯೊಳ್ ವಿಮಲಯಶಃ -
ಶ್ರೀಯಂ ಜಿನಪ್ರವಚನ ।
ಶ್ರೇಯದೊಳತಿಶಯಿಸಿ ನೆಗಳ್ದಿನಭಿನವಪಂಪಂ ॥೧॥

ಆ ವಿಜಯರಥನರನಾಥನೊಂದುದಿವಸವೊಡ್ಡೋಲಗಂಗುಟ್ಟಿರ್ದಲ್ಲಿ,

ಸಕಲಕ್ಷತ್ರಕಿರೀಟತಾಡಿತಪದಾಂಭೋಜಾತನಾಸ್ಥಾನವೇ-
ದಿಕೆಗುತ್ತಾನಿತ ಚಿತ್ರವೇತ್ರಲತನೊರ್ವಂ ಕಾರ್ಯವಿಜ್ಞಾಪನೋ-
ತ್ಸುಕಚಿತ್ತಂ ಧವಳೋತ್ತರೀಯವಸನಂ ಲಂಬೋದರಂ ಲಂಬಕೂ-
ರ್ಚಕಳಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ ॥೨॥

ಅಂತು ಬಂದು ಮೊಗಸುತ್ತಿನ ದುಗುಲದ ಬಿನ್ನಪದ ಸೆಱಂಗನಧರಪಲ್ಲವಕ್ಕೆ ತೆಗೆದು, 'ದೇವ, ನಾಗಪುರಮನಾಳ್ವ ಭವಾಹನತನೂಭವನುದಯಸುಂದರನರಮನೆಯ ಬಾಗಿಲೊಳ್ಬಂದುನಿಂದಿರ್ದಪನೆ'ಂದು ಬಿನ್ನವಿಸೆ ಬರವೇೞೆಂಬುದುಂ,

ದಿವದೊಳ್ ಬೆಳ್ದಿಂಗಳಂ ಬಿತ್ತರಿಸೆ ತರಳಮುಕ್ತಾವತಂಸಪ್ರಭಾಪ-
ಲ್ಲವಮಾಕಾರಂ ಸ್ಮರಾಕಾರಮನಜನಿಸೆ ಪೊಕ್ಕಂ ನೃಪಾವಾಸಮಂ ವಾ-
ಸವಸೌಂದರ್ಯಂ ಧರಾವಲ್ಲಭಸುಭಗಸಭಾಳೋಕನಾಕರ್ಷಣಂ ಮಾ-
ಡೆ ಶಿಶಾಲೋರಃಸ್ಥಳೀನಿಸ್ತುಳಚಕಚಕಿತಸ್ಫಾರಹಾರಂ ಕುಮಾರಂ ॥೩॥

ಕತಿಪಯ ಪರಿಜನ ಪರಿವೃತ ।
ನತಿಲಲಿತಾಕೃತಿ ಸಿತಾತಪತ್ರದ ನೆೞಲೊಳ್ ॥
ಸಿತಶತಪತ್ರಚ್ಛಾಯಾಂ ।
ಚಿತಬಾಳಮರಾಳಲೀಲೆಯಂ ಪಾಳಿಸಿದಂ ॥೪॥

ಅಂತು ಬಂದು ನೃಪಸಭಾಸದನಮಂ ಪೊಕ್ಕು,

ಓಲಗಿಸಿ ವಸ್ತುವಾಹನ ।
ಮಾಲೆಯನುತ್ತಂಸಮಣಿಮರೀಚಿಗಳಿಂ ಭೂ ॥
ಪಾಳನ ಚರಣಸರೋಜ ।
ಕ್ಕೋಲಗಿಸಿದನುದಯಸುಂದರಂ ತಣ್ಬಿಸಿಲಂ ||೫

ಅಂತು ವಿನತನಾದನಂತರಂ ಸುರೇಂದ್ರಮನ್ಯು ವಜ್ರಬಾಹು ಪುರಂದರರೋ
ವಿನಯವೃತ್ತಿಯಂ ಮೆಱೆದು ಸಮುಚಿತಾಸನದೊಳ್ಕುಳ್ಳಿರ್ದು ಮುಕುಳಿತಾಂಜಳಿಪುಟನಾಗಿ,

ಸಕಲಕ್ಷತ್ರಪವಿತ್ರ ನಿನ್ನ ಚರಣಾಂಭೋಜಾತಸೇವಾಸಮು -
ತ್ಸುಕನಸ್ಮತ್ಪಿತೃವೆನ್ನ ತಂಗೆಯನನಂಗಶ್ರೀನಟೀನಾಟ್ಯವೇ -
ದಿಕೆಯಂ ತನ್ನ ಮಗಳ್ಗುಣೋದೆಯನನಂಗೋನ್ಮಾದೆಯಂ ವಜ್ರಬಾ-
ಹುಕುಮಾರಂಗಿಭವಾಹನಂ ಮದುವೆಮಾಳ್ಪುತ್ಸಾಹದಿಂದಟ್ಟಿದಂ ||೬

ಎಂದು ಬಿನ್ನವಿಸೆ ವಿಜಯರಥನರನಾಥನುದಯಸುಂದರನ ಮುಖಾರವಿಂದಮಂ ನೋಡಿ,

ಕನ್ಯಕೆ ವಜ್ರಬಾಹುಗನುರೂಪೆ ಗಡಂ ಕುಡುವಂ ಗಡಂ ಜಗ-
ನ್ಮಾನ್ಯನೆನಿಪ್ಪುದಾತ್ತನಿಭವಾಹನವಲ್ಲಭನಿಂತಿದನ್ಯಸಾ-
ಮಾನ್ಯಮೆ ನಮ್ಮ ಕೊಳ್ಕೊಡೆಗೆ ತಕ್ಕೆಡೆಯಂ ಸಮಕಟ್ಟಿ ಕೊಟ್ಟನೇಂ-
ಧನ್ಯನೊ ಧಾತ್ರನೆಂದು ನುಡಿದಂ ಪ್ರಿಯಮಂ ವಿಜಯಾಂಗನಾಪ್ರಿಯಂ ||೭||

ಅಧಿರಾಜಂ ವದನಾಂಬುಜ ।
ಮಧುವೆನಿಸಿದ ಮಧುರವಚನದಿಂ ತಣಿಪೆ ಮನೋ ॥
ಮಧುಕರಮನುದಯಸುಂದರ ।
ನಧಿಕೋತ್ಸವರಸತರಂಗಿತಾಶಯನಾದಂ ||೮||

ಅಂತಾತನಂ ಸಂತಸಂಬಡಿಸಿ ವಿಜಯರಥಂ ವಿವಾಹಮಂಗಳೋಪಕರಣಪುರಸ್ಸರ-
ಮಾಶೀರ್ನಿನದಮೊದವೆ ಶುಭದಿನ ಮುಹೂರ್ತದೊಳ್,

ಓರನ್ನರೆನಿಪ ರಾಜಕು ।
ಮಾರಕರೊಡನೇಱಿ ವಜ್ರಬಾಹುಕುಮಾರಂ ॥
ವಾರಣಮನೇಱಿದಂ ದಿ ।
ಗ್ವಾರಣಮಂ ದಿಕ್ಕುಮಾರನೇಱುವ ತೆಱದಿಂ ||೯||

ಪಟುಪಟಹಶಂಖರುತಿ ದಿ ।
ಕ್ತಟಮಂ ತಳ್ಪೊಯ್ಯೆ ಗಂಡಮಂಡಳತಟದೊಳ್ ॥
ನಟಿಯಿಸೆ ಮಣಿಕುಂಡಳರುಚಿ ।
ಪಟಲಂ ನೃಪನಣೆದು ನೂಂಕಿದಂ ವಾರಣಮಂ ||೧೦||

ಎರಡುಂ ಪಕ್ಕದೆ ಪಣ್ಣಿದೋಜೆವಿಡಿಯಂ ಕೈಗೆಯ್ದು ಬಂದೇಱೆ ಚಾ-
ಮರಮಂ ಚೆನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ದಾಪಿನೊಳ್
ಬರೆ ಬಂದಂ ಧವಳಾತಪತ್ರವಡಿಯೊಳ್ಕಾಲ್ದೋದು ಗಂಧಾಂದ ಸಿಂ-
ಧುರಮಂ ಮೆಯ್ಗಲಿ ವಜ್ರಬಾಹುಮಹಿಪಂ ವಜ್ರಾಯುಧಂ ಬಪ್ಪವೋಲ್ ||೧೧||

ಕೆಲಕೆಲದೊಳ್ ರಾಜಸುತರ್ ।
ಕೆಲಬರ್ಬರೆ ರಾಜಚಿಹ್ನ ಪಾಳಿಧ್ವಜಸಂ ॥
ಕುಲಮುಂ ಭಟಕಟಕಮುಮಾ ।
ದಲೆಯೊಳ್ಬರೆ ವಜ್ರಬಾಹು ಪಯಣಂಬಂದಂ ||೧೨||

ಅಂತು ಬರುತ್ತುಂ,

ಮುಗಿಲಂ ಮುಟ್ಟಿದ ರತ್ನಕೂಟರುಚಿಯಿಂ ಜ್ಯೋತಿರ್ವಿಮಾನಂಗಳಂ
ತಗೆವಂತುದ್ಧ ತನಿರ್ಝರಪ್ಲವನದಿಂ ಗಂಗಾಸರಿತ್ಪೂರಮಂ
ನಗುವಂತುನ್ನತಿವೆತ್ತ ಕಲ್ಪ ತರುಸಾನೂದ್ಯಾನದಿಂ ಮೇರುವಂ
ನಗುವಂತೊಪ್ಪುವುದಂ ವಸಂತಗಿರಿಯಂ ಕಂಡಂ ಮಹೀಮಂಡನಂ ||೧೩||

ಆ ವಸಂತಗಿರಿಯೊಳೆಡೆಯಾಡುವ ವಿದ್ಯಾಧರವಧೂಜನದ ಸೋರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱಿಯ ತುಱುಗಲುಮಂ, ಸಿದ್ಧಕಾಮಿನಿಯರ ಕಪೋಳಪತ್ರದಿಂ ಮದನಕೇಳಿಯೊಳುದಿರ್ದ ಕನಕಕದಳೀದಳಪತ್ರಛೇದಂಗಳುಮಂ, ಕಿಂಪುರುಷದಂಪತಿಯ ಸುರತಕೋಳಾಹಳದಿನನಂಗ ಸಂಗೀತಕ ಸದನಮೆನಿಸುವೆಳಲತೆಯ ಜೊಂಪಂಗಳುಮಂ, ಕಿನ್ನರನಿತಂಬಿನಿಯರ ಚೆಂಬೊನ್ನ ಶಿಲೆಯ ಮೇಲೆ ವಿರಚಿಸಿದ ಚೆನ್ನೆಯ್ದಿಲೆಸಳ ಪಸೆಗಳುಮಂ, ಗಂಧರ್ವಗಣಿಕೆಯರ ಬಹಳ ಪರಿಮಳಕ್ಕೆಳಸಿ ಬಳಸುವೆಳಮುಂಬಿಗಳ ನಾದಕ್ಕೆ ಬೆರ್ಚಿ ಬಿಸುಟ್ಟ ಕರ್ಣಪೂರಪಾರಿಜಾತಸ್ತಬಕಂಗಳುಮನೋರೊಂದೆಡೆಯೊಳ್ಕಿಸುಸಂಜೆಯಂ ಪಸರಿಸುವ ಕಿಸುಕಲ್ಲ ಕೂಟಂಗಳುಮನೋರೊಂದೆಡೆಯೊಳಂಧಕಾರಮಂ ಕೆದಱುವಿಂದ್ರನೀಲದೊಡ್ಡುಂಗಲ್ಗಳುಮನಲ್ಲಲ್ಲಿಗೆ ನಿರ್ದ್ರವಜಳಧೃತಿಯನೊದಯಿಸುವ ವೈಡೂರ್ಯ ಶಿಖರಂಗಳುಮನತ್ತಲಿತ್ತಲೆಳಬೆಳ್ದಿಂಗಳಂ ಬಿತ್ತರಿಸುವ ಚಂದ್ರಕಾಂತದ ಪಾಸಱೆಗಳುಮನೆಲ್ಲ ದೆಸೆಗಂ ತಣ್ಪಿಸಿಲನವಟಯಿಸುವ ವಜ್ರಶಿಳಾತಳಂಗಳುಮಂ, ಬೇಱೆವೇಱೆ ಮಾಣಿಕದ ಪೊಳಪು ಮುಟ್ಟೆ ಕಿಡಿಯಿಡುವ ಸೂರ್ಯಕಾಂತದ ಶಿಲೆಗಳುಮನತಿಕುತೂಹಳದಿಂ ನೋಡುತ್ತುಂ ಬರ್ಪ ಸಮಯದೊಳ್ ತೊಟ್ಟನೆ ಕಟ್ಟಿದಿರೊಳ್,

ಮನಮುಂ ಮುಟ್ಟಯ್ಸಿ ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ ತನ್ನಿಂ
ತನುವಂ ಬೇರ್ಕೆಯ್ದು ಬಾಹ್ಯೇಂದ್ರಿಯಮನುಡುಗಿ ಕೆಯ್ಯಿಕ್ಕಿಕೆಯ್ಯಿಕ್ಕಿ ನಿರ್ವಾ-
ಣನಿವಾಸಕ್ಕೊರ್ವನಂತರ್ಮುಖನಭಿಮುಖನಾದಿತ್ಯಬಿಂಬಕ್ಕೆ ಯೋಗೀಂ-
ದ್ರನತಂದ್ರಂ ನಿರ್ನಿಮೇಷಂ ನಗನಿಕಟತಟದ್ರತ್ನಕೂಟಂಬೊಲಿರ್ದಂ ||೧೪||

ಅಂತಾ ಮಹಾತಿಥಿ ನಯನಾತಿಥಿಯಾಗಿರ್ಪುದುಂ,

ಮುಗಿದುವು ಕರಕಮಳಂಗಳ್ ।
ಬಗೆಯಿಂ ಮುಂಬರಿದು ಮುನಿಮುಖಾಂಬುಜಮಂ ತುಂ ॥
ಬಿಗಳಂತೆ ಮುಸುಱಿದುವು ದಿ ।
ಟ್ಟಿಗಳೇನಭಿನುತನೊ ವಜ್ರಬಾಹುಕುಮಾರಂ ॥೧೫॥

ದಾರುಣಸಂ ಸರಣವಿಷೋ ।
ರ್ವೀರುಹಮಂ ಕೀೞ್ವ ಬವಸೆಯಿಂದಿರ್ದಪನೇ ॥
ವೀರನೆನುತ್ತುಂ ರಾಜಕು ।
ಮಾರನುಮಾ ಮುನಿಯ ಬಗೆಯ ಬಗೆಯಂ ಬಗೆದಂ ॥೧೬॥

ದಿನಮುಖದರ್ಶನದಿಂ ತೊ ।
ಟ್ಟನೆ ಕಟ್ತಿಲೆ ತೊಲಗುವಂತೆ ಮುನಿಪತಿಮುಖದ ॥
ರ್ಶನದಿಂ ಚಿತ್ತದ ಕಟ್ತಿಲೆ ।
ಜನಪತಿಗೊರ್ಮೊದಲೆ ಪಿಂಗಿಪೋದತ್ತಾಗಳ್ ॥೧೭॥

ಏನಯ್ಯ ಖಡ್ಗಧಾರೆಯ ।
ಜೇನೆಯ್ಯಂ ನಕ್ಕುವಂತೆ ಸಂಸಾರಸುಖ ॥
ಕ್ಕಾನಳಿಪೆ ವಿಷಯಲೋಭದಿ ।
ನೇನಸ್ಸಂತಾಸಮೆನ್ನನೇನಟಿಲಿಸದೇ ॥೧೮॥

ಎಂದು ತಱಿಸಂದು ಮನದೆಱಕದಿನವನವಲೋಕಿಸುತಿರ್ಪುದುಮುದಯಸುಂದರಂ ವಜ್ರಬಾಹುಕುಮಾರನ ವದನಾರವಿಂದಮಂ ನೋಡಿ,

ಬಾವ ಮುನೀಂದ್ರರಂ ಬಿಡದೆ ನೋಡಿದಪ್ಪೈ ಮನಮೊಲ್ದೊಡಂ ತಪಃ
ಶ್ರೀವಧುಕಾಮಿನೀಜನದವೋಲ್ನಿನಗೀವಳೆ ಕೂರ್ತು ವಸ್ತ್ರಭೂ-
ಷಾವಳಿಯಂ ಕಱಾವಳಿಯನೀ ವಧು ಗರ್ವದ ಗಾಳು ವಸ್ತ್ರಭೂ-
ಷಾವಳಿಯಂ ಕಱಾವಳಿಯನಿತ್ತರನಲ್ಲದೆ ಪೊರ್ದಲೀವಳೇ ॥೧೯॥

ಎಂದು ಸರಸಮಂ ನುಡಿದೊಡರಸನುದಯಸುಂದರಂಗೆಂದನಾಂ ತಪಮಂ ಕೈಕೊಂಡೊಡೆ ನಿನ್ನ ಗೆಯ್ವುದೇನೆನೆ ನಿನ್ನೊಡನಾನುಂ ತಪಂಬಡುವೆನೆಂಬುದುಂ,

ಒಡಂಬಡಿಸಿ ವಾಗ್ವಿಡಂಬನದಿನಾತನಂ ಬಂಧಮಂ
ಪಡಲ್ವಡಿಪ ಬೇಗದಿಂದಿೞಿದು ವಾರಸ್ಕಂಧದಿಂ

ತೊಡರ್ಪಱಿವ ವನ್ಯವಾರಣದ ಮಾಱ್ಕೆಯಿಂದೇಱಿದಂ
ತೊಡರ್ಪನಿನಿಸಾನುವಂ ಬಗೆಯದಾಕುಭೃತ್ಸಾನುವಂ ॥೨೦॥

ಆಗಳಾತನ ಮನದ ತಱಿಸಲವಂ ಕಂಡು,

ನಗೆ ದಿಟಮಾದೊಡೆ ನಾಡೆಯು ।
ಮುಗಿದು ಸುಹೃಜ್ಜನಮುಮುದಯ ಸುಂದರನುಂ ಕೆ ॥
ಯ್ಮುಗಿದೆಱಗೆ ಮಾಣ್ಬನಲ್ಲೆಂ ।
ಬಗೆಯದಿರಿಂ ಪೆಱತನೆಂದು ಪಱಿಪಡೆನುಡಿದಂ ॥೨೧॥

ಈ ಮುನಿಯುಮನೀ ಮನಮುಮ ।
ನೀಮೆಯ್ಯುಮನೀಮನುಷ್ಯಗತಿಯುಮನಾಂ ಮು ॥
ನ್ನೇಮಾತೊ ಪಡೆದೆನಿಲ್ಲೀ ।
ಸಾಮಗ್ರಿಯೊಳಪುಕೆಯನಘವಿಘಟನಮಂ ॥೨೨॥

ಎಂದು ಮನದ ಪರಿಚ್ಛೇದಮಂ ನಾಲಗೆಗೆ ತಂದು ಪರಿಜನಮನೊಡಂಬಡಿಸಿ,

ಕರ್ವಿನ ಬಿಲ್ಲನಿಕ್ಕಿ ಮದನಂ ಭಯದಿಂ ಪರಿದೇಱಿ ಪುತ್ತನಾ
ಪರ್ವತಮಂ ನರೇಂದ್ರಸುತನೇಱಿ ವಿರಾಜಿತ ಕೇಶಪಾಶಮಂ
ಪರ್ವಿದ ಮೋಹಪಾಶದೊಡನೊರ್ಮೊದಲೊಳ್ಪಱಿದಿಕ್ಕಿದಂ ಜಸಂ
ಪರ್ವುವಿನಂ ಜಗತ್ತ್ರಯಮನಾಮುನಿಮುಖ್ಯನ ಪಾದಪಾರ್ಶ್ವದೊಳ್ ॥೨೩॥

ಅಂತು ವಜ್ರಬಾಹುಕುಮಾರಂ ಗುಣಸಾಗರಭಟ್ಟಾರಕರ ಚರಣೋಪಾಂತದೊಳ್ ತಪಶ್ಚರಣನಿರತನಪ್ಪುದುಂ,

ಎನ್ನೊಡವಂದಂತಕನಂ ।
ಬೆನ್ನಟ್ಟಲೊಡರ್ಚಿದಂ ಜಿತಾತ್ಮಂ ಸೆಡೆದಂ ॥
ದೆನ್ನ ಜಸಮಟಿಗುಮೆನಗದೆ ।
ಬನ್ನಂ ಬನ್ನಕ್ಕೆ ಬೇಱಿ ಕೋಡೆರಡೊಳವೇ ॥೨೪॥

ಎಂದುದಯಸುಂದರಂ ಪರಿಚ್ಛೇದಿಸಿ ತನ್ನೊಡನೆ ತಪಕ್ಕೆ ತಱಿಸಂದಿರ್ಪತ್ತು ಮೂವರರಸುಮಕ್ಕಳ್ವೆರಸು ತಪೋನಿಧಿಯ ಸನ್ನಿಧಿಯೊಳ್ ಜಾತರೂಪಧರನಪ್ಪುದುಂ,

ಅಗ್ರಜನೊಳಾದ ಜಿನದೀ ।
ಕ್ಷಾಗ್ರಹಣಮನನುಜೆ ಕೇಳ್ದು ತಾನುಂ ಜಿನದೀ ॥

ಕ್ಷಾಗ್ರಹಣಂ ಬಡೆದಳ್ ಲ ।
ಬ್ಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ ॥೨೫॥

ಅಂತು ಗುಣೋದೆಯುಂ ನಿರ್ಭರ ತಪೋಭರಮಮಂ ತಳೆದಳಿತ್ತಲ್ ವಿಜಯರಥ-ಮಹೀನಾಥಂ ತನ್ನ ಮಮ್ಮನಪ್ಪ ವಜ್ರಬಾಹುಕುಮಾರನ ತಪಃಪ್ರಪಂಚಮಂ ತಿಳಿದು,

ಮದುವೆಗೆ ಪೋಪುದೆತ್ತ ಗಿರಿಕಂದರದೊಳ್ಮುನಿಯಂ ಮನಸ್ವಿ ಕ-
ಟ್ಟದಿರೊಳೆ ಕಾಣ್ಬುದೆತ್ತದುವೆ ಕಾರಣಮಾಗಿ ಕಡಂಗಿ ಮೋಹ ಪಾ-
ಶದ ತೊಡರಂ ಬಿದಿರ್ಚಿ ದೆಸೆಯಂತುವರಂ ನಿಜಕೀರ್ತಿಯಂ ನಿಮಿ-
ರ್ಚಿದನೆನೆ ವಜ್ರಬಾಹುವ ಪೊಗೞ್ತೆ ನೆಗೞ್ತೆಗಳುಂಬಮಲ್ಲದೆ ॥೨೬॥

ಯುವರಾಜಂ ನವಯೌವನ ।
ನವಯವದಿಂ ದೀಕ್ಷೆಗೊಡ್ಡಿದಂ ತನುವನದೇ ॥
ನವಿಕಳನೊ ಕುಮಾರಂ ಮೋ ।
ಹವಿಷಾಹಿಯ ಕಾಳಕೂಟರದಮಂ ಕಿೞ್ತಂ ॥೨೭॥

ಕಿಱುಗೂಸು ವಿಷಯಸುಖಮಂ ।
ತೊಱೆದು ತಪಂ ಬಟ್ಟನಿನ್ನೆವರಮಱಿಪಿಂದಾಂ ॥
ಮಱೆದಿರ್ದೆನೆಂದು ಕಂಡಂ ।
ತಱಿಸಲವಂ ತನ್ನ ಚಿತ್ತದೊಳ್ ವಿಜಯರಥಂ ॥೨೮॥

ಅಂತು ವಿಜಯರಥನರೇಂದ್ರಂ ನಿಜತನೂಜನಪ್ಪ ಸುರೇಂದ್ರಮನ್ಯುವೆರಸು ತನ್ನ ಮಮ್ಮನಪ್ಪ ಪುರಂದರಂಗೆ ರಾಜ್ಯಮನಿತ್ತು ನಿರ್ವಾಣಘೋಷರೆಂಬ ಮುನಿಮುಖ್ಯರ ಸಮೀಪದೊಳ್ ತಪೋರಾಜ್ಯದೊಳ್ ನಿಂದನಿತ್ತಲಾ ಪುರಂದರಂ ಸಕಳ ಸಾಮ್ರಾಜ್ಯಸುಖ ಸುಧಾರಸದಿಂ ತಣಿದು ವಿಷಯವೈರಾಗ್ಯತತ್ಪರಂ ಕ್ಷೇಮಂಕರ ಮಮುಕ್ಷುಗಳ ಸಮಕ್ಷದೊಳ್ ದೀಕ್ಷೆಗೊಳ್ವುದುಂ,

ಕೀರ್ತಿಮುಖದಂತೆ ಕೀಲಿಸೆ ।
ಕೀರ್ತಿ ದಿಶಾದಂತಿದಂತಮಂ ತದಪತ್ಯಂ ॥
ಕೀರ್ತಿಧರನೆಂಬನರಸಂ ।
ಕಾರ್ತಸ್ವರಕುಧರದಂತಿರಿಳೆಯಂ ತಳೆದಂ ॥೨೯॥

ಆ ಕೀರ್ತಿಧರನರೇಂದ್ರನೊಂದು ದೆವಸಂ ಮಣಿಮಾಡದಮೇಲೆ ಮಣಿಮಯಾಸನ-ದೊಳಾಪ್ತಪರಿಜನಪರಿವೃತನೊಡ್ಡೋಲಗದೊಳಿರ್ಪುದುಮಾ ಸಮಯದೊಳ್,

ಇನಮಂಡಳಮಂ ಸ್ವರ್ಭಾ ।
ಸು ನುಂಗೆ ಕಡುಗಂದಿ ಕುಂದುಗೊಂಡಿರ್ಪುದುಮಾ ॥
ಜನನಾಥನಮುವೆ ನಿರ್ವೇ ।
ಗ ನಿಮಿತ್ತಮೆನಲ್ ವಿರಾಗಮಮಂ ಕೈಕೊಂಡಂ ॥೩೦॥

ಜಗಮಂ ಬೆಳಗುವ ಚಂಡಾಂ ।
ಶುಗಮಿಾ ಸ್ಥಿತಿ ರಾಹುವಿಂದಮಾದತ್ತೆನಲೇ ॥
ನುಗಿಬಗಿ ಮಾಡದೆ ಕಾಳೋ ।
ರಗನಸ್ಮದ್ವಿಧಮನನ್ಯ ರಾಜನ್ಯಕಮಂ ॥೩೧॥

ಎಂದು ವೈರಾಗ್ಯ ಪರಿಣತಿಯಿಂ ಚತುರುದಧಿವಳಯವಳಯಿತ ಧರಿತ್ರಿಯಂ ಜರತ್ತೃಣಮಂ ಬಗೆವಂತೆ ಬಗೆಯೆ ಮಂತ್ರಿಮಂಡಳ ಮಹಾಸಾಮಂತರತಿ ಚಕಿತಚಿತ್ತರಾಗಿ,

ಪರಚಕ್ರಕ್ಕೆಡೆ ಮಾಡಿ ಭೂವಳಯಮಂ ಭಂಡಾರಮಂ ಬಾಲವೃ-
ದ್ಧರನೀಡಾಡಿ ತಪಕ್ಕೆ ಪೋಪುದನಯಂ ಭೂಪಾಳ ನಿನ್ನಂ ಪುರಂ-
ದರನೀ ರಾಜ್ಯಭರಕ್ಕೆ ಯೋಜಿಸಿ ತಪೋರಾಜ್ಯಕ್ಕೆ ಮೆಯ್ದಂದನಂ-
ತಿರೆ ನೀನಾಚರಿಸಲ್ಲದಂದು ಧರೆ ಮತ್ಸ್ಯನ್ಯಾಯಮೇನಾಗದೇ ॥೩೨॥

ಅದಱಿನನ್ವಯರಾಜ್ಯರಕ್ಷಣಾರ್ಥಮಾತ್ಮಜನಂ ಪಡೆದು ತಪಂಬಡೆವುದೆಂದು ಮಂತ್ರಿಮಂಡಲವೊಡಂಬಡಿಸೆ ಕೀರ್ತಿಧರನೊಡಂಬಟ್ಟು ಪಲವುಂ ಕಾಲಮರಸುಗೆಯ್ಯುತ್ತಿರ್ಪುದುಮಾಮಹೀವಲ್ಲಭನ ಸಹದೇವಿಯೆಸರ ಮಹಾದೇವಿಗೆ,

ಪೀನಕುಚಾನನದೊಳ್ಕ ।
ರ್ಪಾನನದೊಳ್ಬೆಳ್ಪು ತೋಱಿ ತೋಱಿದುದಾ ಚಂ ॥
ದ್ರಾನನೆಗೆ ಗರ್ಭಚಿಹ್ನಂ ।
ಮಾನಸದೊಳ್ತೋಱಿ ಬೇಱಿ ಹರ್ಷವಿಷಾದಂ ॥೩೩॥

ಸಂತತಿ ರಾಜ್ಯರಕ್ಷಣೆಗೆ ಪುಟ್ಟಿದ ಸಂತಸಮಂ ಮಹೀಭುಜಂ
ಸಂತತಿ ಪುಟ್ಟೆ ಬಿಟ್ಟು ಧರೆಯಂ ತಪದೊಳ್ ತಱಿಸಲ್ಗುಮೆಂಬ ಚಿಂ-
ತಾಂತರಮುಂ ಮನಕ್ಕೆ ಬರೆ ಮಾಡಿದಳಾಕ್ಷಣದೊಳ್ ನರೇಂದ್ರಸೀ-
ಮಂತಿನಿ ತದ್ವಿರುದ್ಧರಸನಾಟಕರಂಗಮನಂತರಂಗಮಂ ॥೩೪॥

ಅಂತಾಕೆ ಗೂಢಗರ್ಭದಿಂ ಕೆಲವಾನುದಿವಸಕ್ಕೆ ಮಗಂಬಡೆದು ಬಡವಂ ನಿಧಾನಂಬಡೆದಂತೆ ಪೆಱರಱಿಯದಂತು ನಡಪುತ್ತಿರ್ಪುದುಂ,

ಭೇದಿಸಿ ಸಹದೇವಿಗೆ ಮಗ ।
ನಾದುದನೊರ್ವಂ ಧನಾರ್ತಿ ಮೆಚ್ಚಂ ಪಡೆವೊಂ ॥
ದಾದರದಿನಱಿಪೆ ಭೂಪತಿ ।
ಗಾದುದು ಬಗೆ ತೀರ್ದುದೆಂಬ ಮನದನುರಾಗಂ ॥೩೪॥

ಮಗನಾದಂ ಸಹದೇವಿಗೆಂದೊಸಗೆದಂದಾತಂಗೆ ಚೆಂಬೊನ್ನರಾ-
ಶಿಗಳಂ ವಸ್ತ್ರವಿಲೇಪನಾಭರಣಮಂ ಸಾಲ್ವನ್ನೆಗಂ ಕೊಟ್ಟನಾ-
ಜಗತೀವಲ್ಲಭನೆನ್ನ ಪುಣ್ಯಕೆ ತುದಿಯೆಯ್ದಿತ್ತೆಂಬ ಸಂಪ್ರೀತಿ ಕೈ-
ಮಿಗೆ ಸಂಸಾರಶರೀರಭೋಗಪರಿನಿರ್ವೇಗಂ ತಪಃಪ್ರೀತಿಯಂ ॥೩೬॥

ತೊಟ್ಟಿಲಮಗಂಗೆ ಪಟ್ಟಂ ।
ಗಟ್ಟಿ ಜರತ್ತೃಣಸಮಾನಮೆನೆ ವಸುಮತಿಯಂ ॥
ಬಿಟ್ಟು ಜಿನದೀಕ್ಷೆಗೊಂಡಂ ।
ಮುಟ್ಟುವಿನಂ ಕೀರ್ತಿ ದೆಸೆಗಳಂ ಕೀರ್ತಿಧರಂ ॥೩೭॥

ಇತ್ತ ಸುಕೌಶಲಕ್ಕೊಡೆಯನಾಗಿ ಸುಕೌಶಲನೆಂಬ ನಾಮಮಂ
ಪೆತ್ತು ನಿರಂತರೋಪಚಯದಿಂ ನವಯೌವನನಾಗಿ ಮಿಾಱಿದು-

ದ್ವೃತ್ತರನಿಕ್ಕಿ ಸುತ್ತಣ ಕಡಲ್ವರೆಗಂ ನೆಲನಂ ನಿಮಿರ್ಚಿ ಭೂ-
ಪೋತ್ತಮನಿಂತು ತನ್ನ ಜಸಮಂ ದೆಸೆಯಂತುವರಂ ನಿಮಿರ್ಚಿದಂ ॥೩೮॥

ಚತುರುದಧಿಮೇಖಳಾಳಂ ।
ಕೃತವಸುಧಾದೇವಿಗಜ್ಜಗಾಪಿನವರ್ದಿ ॥
ಕ್ಷತಿಗಳೆನೆ ಸಾರ್ವಭೌಮೋ ।
ನ್ನತಿಯಂ ತಳೆದಂ ಸುಕೌಶಲಕ್ಷಿತಿನಾಥಂ ॥೩೯॥

ಆ ಸುಕೌಶಲನ ಜನನಿಯಪ್ಪ ಸಹದೇವಿ ಸಹಚರೀಸಮನ್ವಿತೆ ಮಣಿಮಾಡದ ನೆಲೆಯ ಮಣಿಮಯಾಸನದ ಮೇಲೆ ಲೀಲೆಯಿಂ ಕುಳ್ಳಿರ್ಪುದುಮೊಂದು ದಿವಸಂ,

ಊರಡವಿಯೆಂಬ ಬಗೆಯಂ ।
ತಾರದತಿತ್ವರಿತಮಂದಮಲ್ತೆನೆ ಗತಿ ಬಂ ॥
ದೂರಂ ಯತಿಪತಿ ಪೊಕ್ಕಂ ।
ತಾರಾಪತಿಯಂತೆ ಪಡೆದು ನಯನೋತ್ಸವಮಂ ॥೪೦॥

ಮುನಿಯಂ ಕಂಡಾಕ್ಷಣದೊಳೆ ।
ತನೂಭವಂ ದೀಕ್ಷೆಗೊಳ್ಗುಮೆಂಬಾದೇಶಂ ॥

ಮನದೊಳಿರೆ ಲೋಚನಾತಿಥಿ ।
ಯನತಿಥಿಯಂ ಕಂಡು ಕಲುಷಮಂ ಕೈಕೊಂಡಳ್ ॥೪೧॥

ಗುಣಹೀನೆ ಧರ್ಮಹಾನಿಯ ।
ನೆಣಿಸದೆ ಪಾಪಕ್ಕೆ ಮಣಿಯದುಪವಾಸದ ಪಾ ॥
ರಣೆಯೊಳ್ ಪೊಟಲಿಂದತಿದಾ ।
ರುಣಮತಿ ಪೊಱಮಡಿಸಿ ಕಳೆದಳಾಯತಿಪತಿಯಂ ॥೪೨॥

ಪತಿ ಮುನ್ನಂ ತನಗೆಂಬಿದಂ ಬಗೆವಳಿಲ್ಲಿಕ್ಷ್ವಾಕುಂಶಾವನೀ-
ಪತಿ ಲೋಕಸ್ತುತನೆಂಬಿದಂ ನೆನೆವಳಿಲ್ಲೀಗಳ್ತಪೋಮಾರ್ಗವಿ-
ಶ್ರುತನೆಂಬುನ್ನತಿಯಂ ವಿಚಾರಿಸಿದಳಿಲ್ಲಾ ಕಾಂತೆ ದುರ್ಮೋಹದಿಂ
ಮತಿಗೆಟ್ಟಾಯತಿಯಂ ಪರಾಭವಿಸಿ ಚರ್ಯಾವಿಘ್ನಮಂ ಮಾಡಿದಳ್ ॥೪೩॥

ಆಗಳದಂ ಕಂಡು ಸುಕೌಶಲನ ದಾದಿಯಪ್ಪ ವಸಂತಮಾಲೆ ಕೀರ್ತಿಧರೇಂದ್ರನಪ್ಪುದನಱಿದು,

ಅಪಮಾನಮಂ ಸುಕೌಶಲ ।
ನೃಪಾಲಜನಕಂಗೆ ಪತಿಗೆ ಕೀರ್ತಿಧರಕ್ಷ ॥
ತ್ರಪವಿತ್ರಂಗೊಡರಿಸಿದಳ್ ।
ವಿಪರೀತಮಿದೆಂದು ನೊಂದು ಶೋಕಂಗೆಯ್ದಳ್ ॥೪೪॥

ಬಸಿಱಂ ಮೋದಿಕೊಳ್ಳುಮಟ್ಟಿ ನಿಜಧಾತ್ರೀವಕ್ತ್ರಮಂ ನೋಡಿ ಬೇ-
ವಸಮಂ ನಿಮ್ಮ ಮನಕ್ಕೆ ನಿರ್ಭಯದಿನಾವಂ ತಂದನಾತಂಗೆ ಸೈ-
ರಿಸೆನಾನೆಂದು ಸುಕೌಶಲಕ್ಷಿತಭುಜಂ ಕಟ್ಟಾಗ್ರಹಂ ಗೆಯ್ಯೆ ಸೂ-
ಚಿಸಿದಳ್ ಕಾಂತೆ ವಸಂತಮಾಲೆ ನಿಜಶೋಕೋದ್ರೇಕವೃತ್ತಾಂತಮಂ ॥೪೫॥

ಆಗಳದಂ ನೆಱೆಯೆ ಕೇಳ್ದು,

ಪಸುಗೂಸಿಂಗೆನಗಿತ್ತು ರಾಜ್ಯಪದಮಂ ನಿಂದಂ ತಪೋರಾಜ್ಯದೊಳ್
ವಸುಧಾವಲ್ಲಭನಾಮುನೀಶ್ವರನ ಪಾದೋಪಾಂತಮಂ ಪೊರ್ದಿ ಸಾ-
ಧಿಸುವೆಂ ನಿರ್ವೃತಿಸೌಖ್ಯಮಂ ವಿಷಯಸೌಖ್ಯಂ ಮುಖ್ಯಮಲ್ತೆಂದು ಭಾ-
ವಿಸಿ ಬಿಟ್ಟಂ ಸಿರಿಯಂ ಸುಕೌಶಲನದೇಂ ವೈರಾಗ್ಯಸಂಪನ್ನನೋ ॥೪೬॥

ಮುನಿಭೋಜನವಿಘ್ನಂ ಮ ।
ಜ್ಜನನಿಯಿನಾಯ್ತೆನ್ನ ದೂಸಱಿಂ ತಾಯ್ಗೇನಂ ॥

ಮುನಿವೆನೊ ಮುನಿಯಪ್ಪನ್ನೆಗ ।
ಮನಶನಮೆನಗೆಂದು ಚಿತ್ತದೊಳ್ತಱಿಸಂದಂ ॥೪೭॥

ಅಂತು ಪರಿಚ್ಛೇದಿಸಿ,

ಧವಳಾತಪತ್ರವಾರಣ ।
ವಿವಿಧಧ್ವಜಚಾಮರಂಗಳಂ ರಾಜ್ಯಶ್ರೀ ॥
ಗಿವು ತೊಡವೆಂದವನೊಲ್ಲದೆ ಭುವನೇಶಂ
ರಾಜಭವನಮಂ ಪೊಱಮಟ್ಟಂ ॥೪೮॥

ಅಂತು ಪೊಱಮಟ್ಟು ಪಾದಮಾರ್ಗದಿನುಪವನಮನೆಯ್ದಿ ಕೀರ್ತಿಧರಭಟ್ಟಾರಕರಂ ತ್ರಿಪ್ರದಕ್ಷಿಣಂಗೆಯ್ದು ದೀಕ್ಷಾಪ್ರಸಾದಮೆಂದು ವಂದಿಸಿ ಕುಳ್ಳಿರ್ಪುದುಮಾಗಳಖಿಳಪರಿಜನಮತಿ-ಸಂಭ್ರಮಂಬೆರಸು ಬಂದು,

ಎಮಗಿನ್ನಾರ್ಶರಣೆಂದು ಮಂಡಳಿಕರುಂ ಸಾಮಂತರುಂ ಮಂತ್ರಿವ-
ರ್ಗಮುಮಂತಃಪುರಮುಂ ವಿಳಾಸಿನಿಯರುಂ ಬಾಯ್ವಿಟ್ಟು ಪುಯ್ಯಲ್ಚಿ ಶೋ-
ಕಮಿದೇಕೀಕೆಯ ಗರ್ಭದರ್ಭಕನೆ ನಿಮ್ಮಂ ರಕ್ಷಿಸಲ್ಸಾಲ್ಗುಮೆಂ-
ದು ಮಹಾದೇವಿಗೆ ಚಿತ್ರಮಾಲೆಗವರಂ ಭೂಪಾಳನಪ್ಪಯ್ಸಿದಂ ॥೪೯॥

ಸ್ತ್ರೀ ಬಾಲ ಸಾಧ್ಯಮೆಳೆ ನಿ ।
ಮ್ಮಾ ಬಾಹಾಬಳದಿನಾದುದೆನಗಾ ತೆಱದಿಂ ॥
ದೀ ಬಾಳೆಯ ಗರ್ಭದೊಳಿ ।
ರ್ದಾ ಬಾಳನನರಸುಮಾಟ್ಟುದಿದು ನಿಮಗೆ ಬೆಸಂ ॥೫೦॥

ಎಂದು ಪರಿಜನಮನೊಡಂಬಡಿಸಿ ಕೀರ್ತಿಧರಮುಮುಕ್ಷುಗಳ ಸಮಕ್ಷದೊಲ್ ದೀಕ್ಷೆಯಂ ಕೈಕೊಂಡು,

ಶ್ರುತದಗ್ಗಳಿಕ್ಕೆ ತಪದು ।
ನ್ನತಿಕ್ಕೆ ತನ್ನೊಳ್ ನೆಗಟ್ತೆವೆತ್ತಿರೆ ಭೂವಿ ॥
ಶ್ರುತನೆನೆ ಸುಕೌಶಲವ್ರತಿ ।
ಪತಿ ತಪದಿಂ ಶ್ರುತದಿನಾರುಮಂ ಗೆಲೆವಂದಂ ॥೫೧॥

ಅಂತವಿಶ್ರಾಂತತಪಃಶ್ರೀಯಪ್ಪುಕೆಯ್ದಿರ್ಪಿನಂ,

ಕಡವಲರ್ದುವು ಮೊಲ್ಲೆಯ ಪೂ ।
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಬೆ ॥
ಳ್ಗೊಡೆವೋದುವು ಬಾದಗೆಗಳ್ ।
ಕಡಂಗಿ ನುಂಗಿದವು ತೋರವನಿಯಂ ಕಾರೊಳ್ ॥೫೨॥

ಆ ಘನಸಮಯಪ್ರವೇಶದೊಳ್ ತನ್ಮುನಿಯುಗಳಂ ವೃಕ್ಷಮೂಲನಿಯೋಗ ನಿರ್ವರ್ತನಾನಂತರಂ ಯೋಗ್ಯ ಕಾಲಾಪೇಕ್ಷೆಯಿಂ ಕಾಂತಾರಭಿಕ್ಷೆಗೆವರುತ್ತಿರೆ,

ಕಣ್ಬರಿಗೆಟ್ಟು ದಿವ್ಯಮುನಿಗಿತ್ತಪಮಾನದಿನಾತ್ತ ರೌದ್ರದಿಂ
ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆ ಕಂಡಶಂಕಿತ.

ರ್ಣಕ್ಷೋಲದೊಳ್ ನಿವೃತ್ತಿ ಪರಿಣಾಮಮೊಡಂಬಡೆ ಧರ್ಮಶುಕ್ಲದೊಳ್
ಜಾಣ್ಬಡೆದಿಕ್ಕೆ ಕೈಯನುಪಸರ್ಗಸಹಿಷ್ಣುಗಳಿರ್ದರಿರ್ವರುಂ ॥೫೩॥

ತನುವಂ ಬೇರ್ಕೆಯ್ದುತಮ್ಮಿಂ ಮುನಿಪತಿಗಳನುಪ್ರೇಕ್ಷೆಯಂ ತಾಳ್ದಿ ಸಂನ್ಯಾ-
ಸನಯುಕ್ತರ್ಚಿತ್ತದೊಳ್ನಿಶ್ಚಳಮಿರಿಸಿ ಜಿನಶ್ರೀಪದಾಬ್ಜಂಗಳಂ ಪಂ-
ಚನಮಸ್ಕಾರಂಗಳಂ ನಾಲಗೆ ಜಪಿಯಿಸೆ ಗುಂಜದ್ಗು ಹಾರಂಜಿತಂ ಕಾಂ-
ಚನಶೈಳದ್ವಂದ್ವಮಿಪ್ಪಂತಿರೆ ಶುಭಚರಿತಪೂರ್ಣನ್ಬು ಕೆಯ್ಯಿಕ್ಕಿ ನಿಂದರ್ ॥೫೪॥

ಅಂತು ನಿಂದ ಮುನಿಯುಗಳಮಂ ಕಂಡು ಕಡುಮುಳಿದು,

ಜಡಿಯುತ್ತುಂ ಬಾಲಮಂ ಕಣ್ಣುರಿಯನುಗುಳೆ ಜಿಹ್ವಾನಟಂ ಬಿಚ್ಚೆ ಬಾಯ್ಬಿ-
ಟ್ಟೊಡೆವನ್ನಂ ಗರ್ಜಿಸುತ್ತಂ ಪವನ ಜವದೆ ಮೇಲ್ವಾಯ್ದು ಪೊಯ್ವುತ್ತು ಕೈಯೇ-
ಱಿಡೆಯಂ ಬಾಯೇಱ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ
ಸಿಡಿಲೆಂಬಾಶಂಕೆಯಂ ಪೆಣ್ಬುಲಿ ಪಡೆದು ಮೃಗೀರಕ್ತಸೇವಾನುರಕ್ತಂ ॥೫೫॥

ಅಂತಾಪುಲಿ ಸುಕೌಶಲ ಮುನಿಯ ಮೇಲೆವಾಯ್ದುಗಿ ಬಗಿಮಾಟ್ಬುದುಮಾ ಮಹೋಪಸರ್ಗಮಂ ಸೈರಿಸಿ,

ಘಾತಿಯುಮನಘಾತಿಯುಮಂ ।
ಘಾತಿಸಿ ಕೀರ್ತಿಧರಯೋಗಿ ಮುಕ್ತಿಗೆ ಸಂದಂ ॥
ಘಾತಿಕ್ಷಯದಿಂ ಕೈವ ।
ಲ್ಯಾತಿಶಯಂ ಬೆತ್ತನಾ ಸುಕೌಶಲಮುನಿಪಂ ॥೫೬॥

ಇತ್ತ ವಿಚಿತ್ರಮಾಲೆಗೆ ತನೂಭವನಾಗೆ ಹಿರಣ್ಯಗರ್ಭನೆಂ-
ದಿತ್ತು ಧರಿತ್ರಿ ಗರ್ಭದೊಳೆ ವಲ್ಲಭನಾಗಿ ಸಮಸ್ತರಾಜ್ಯಸಂ-
ಪತ್ತಿಗೆ ತತ್ಸುತಂ ಬಳೆದು ಚಾಗದ ಬೀರದ ಪೆರ್ಮೆಯಂ ದಿಶಾ-
ಭಿತ್ತಿಯನೆಂಟನೆಯ್ದುತಿರೆ ಸುತ್ತಿದನಾತ್ಮಯಶೋದುಕೂಲದಿಂ ॥೫೭॥

ಸರಸಬಿಸಗರ್ಭಗೌರಂ ।
ಪರೆಯೆ ಜಸಂ ಪರಪುರಕ್ಕೆ ಗರ್ಭಸ್ರಾವಂ ॥

ದೊರೆಕೊಳೆ ಹಿರಣ್ಯಗರ್ಭಂ ।
ಧರಿತ್ರಿಯಂ ಹರ್ಷಗರ್ಭಮೆನೆ ಪಾಲಿಸಿದಂ ॥೫೮॥

ತದಪತ್ಯಂ ನಹುಷಂ ಚತು ।
ರುದಧಿವರಂ ವಸುಧೆಯಂ ನಿಮಿರ್ಚಿ ಭುಜಾಗ॥
ರ್ವದಗುರ್ವಿಂ ಮಾಣ್ದನೆ ಚತು ।
ರುದಧಿಯೊಳುದವಾಸಮಿರಿಸಿದಂ ರಿಪುನೃಪರಂ॥೫೯॥

ಈ ಸಕಳಧರೆಯನುಗ್ರಭು ।
ಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂ ॥
ವಾಸಕರಿಪುಧಾರಕರಂ ।
ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ ॥೬೦॥

ತತ್ತನೂಭವಂ,

ಸಂಹರಿಸಿ ರಿಪುಮದದ್ವಿಪ ।
ಸಂಹತಿಯಂ ಬೀರಸಿರಿಗೆ ವಲ್ಲಭನಾದಂ ॥
ಸಿಂಹಪರಾಕ್ರಮನೆನಿಸಿದ ।
ಸಿಂಹರಥಂ ಸಾರ್ವಭೌಮವಿಭವಸನಾಥಂ ॥೬೧॥

ಆ ಸಿಂಹರಥನ ಸುತನಯೋಧ್ಯಾ ಸಿಂಹಾಸನಮಳಂಕರಿಸಿ,

ಒರ್ವನೆ ಧ್ವನಿಯೆನಲ್ಸಕ ।
ಳೋರ್ವರೆಯಂ ಕಾದು ತನ್ನ ಬಾಣದ ಮೊನೆಯೊಳ್ ॥
ಮಾರ್ವಳಮಂ ತವಿಸಿದನೆನೆ ।
ದೋರ್ವಳಮೇಂ ಬ್ರಹ್ಮರಥನೊಳವಿತಥಮಾಯ್ತೋ ॥೬೨॥

ತತ್ತನಯಂ,

ಸಮರಮುಖದೊಳ್ವಿರೋಧಿ ।
ಪ್ರಮುಖರನೆಯ್ದಿಸಿ ಶಿಳೀಮುಖಂ ಯಮಮುಖಮಂ ॥
ಕ್ಷಮೆಯಂ ತಳೆದಂ ಚಾಪಾ ।
ಗಮಚತುರಚತುರ್ಮುಖಂ ಚತುರ್ಮುಖನೆಂಬಂ ॥೬೩॥

ಭೂಮಂಡಳಮಂ ತಳೆದಂ ।
ಪ್ರೇಮಾಸ್ಪದಮಾಗೆ ನಾಮಮಹಿಮೋನ್ನತಿಯಿಂ ॥

ಹೇಮಾಚಳಮಮಂ ಮೆಚ್ಚಂ ।
ಹೇಮರಥಂ ಶ್ರುತಿಮುಖಿಂ ಚತುರ್ಮುಖತನಯಂ ॥೬೪॥

ಆ ರಾಜಸುತಂ ಕೀರ್ತಿಸು ।
ಧಾರಸದಿಂ ತಂಪುವಡೆದು ಪರಿಪೂರ್ಣಕಳಾ ॥
ಧಾರಂ ಸಕಳೇಂದುರಥಂ ।
ವೈರಿಮನೋರಥರಥಾಂಗಮಂ ವಿಘಟಿಸಿದಂ ॥೬೫॥

ಆ ಮಹೀಭುಜನ ತನೂಭವಂ,

ತೇಜಂ ಪುದುವಿಲ್ಲೆನಿಸಿ ವಿ ।
ರಾಜಿಸೆ ಪರರಾಜಮಂಡಳಂ ತನ್ನಿಂ ನಿ ॥
ಸ್ತೇಜಂ ಬೆತ್ತಿರೆ ಬೆಳಗಿದ ।
ನೀಜಗಮಂ ಭಾನುವೆಂಬಿನಂ ಭಾನುರಥಂ ॥೬೬॥

ಮತ್ತಂ ತದನ್ವಯದೊಳ್ ಮಯ ಮಾಂಧಾತ ವೀರಸೇನ ಕಮಳಬಂಧು ವಸಂತತಿಳಕ ಕುಬೇರದತ್ತ ಮೃಗಾರಿ ಮದನದ್ವಿಪ ಹಿರಣ್ಯಕಶಿಪು ಕರ್ಕರಥ ದಿಳೀಪ ರಘುವೀರ ಪ್ರಮುಖರೆನಿಬರಾನುಮರಸುಗಳನುಕ್ರಮದಿಂ ರಾಜ್ಯಂಗೆಯ್ದು ಕೆಲಂಬರಮರಕಾಮಿನೀಕಚಗ್ರಹಣಮಂ ಕೆಲಂಬರಮೃತಲಕ್ಷ್ಮೀಪಾಣಿಗ್ರಹಣಮಂ ಪಡೆವುದುಂ,

ಧರಣೀಪ್ರಾಕಾರಂ ವೀ ।
ರರಸಾರ್ಣವಸೇತು ದಾನಗುಣಭೂಷಣ ದಿ ॥
ಕ್ಕರಿ ಧರ್ಮರತ್ನರೋಹಣ ।
ಗಿರೀಂದ್ರಮಿಕ್ಷ್ವಾಕುವಂಶಮಾಯ್ತು ಪ್ರತಿಮಂ ॥೬೭॥

ಆ ವಂಶದೊಳ್ ವಿನೀತಾಪುರಮನಾಳ್ವನನರಣ್ಯನೆಂಬನರಸನಖಿಳರಾಜಕುಳ-ಮಣಿಮಕುಟಮಕರಿಕಾಪತ್ರ ವಿಚಿತ್ರಚಿತ್ರಿತಪಾದಪೀಠಂ,

ನನೆಯಿಸುವಂ ಮಾನ್ಯಪುರಾ ।
ತನರಾಜನ್ಯಕಮನತುಳಬಾಹಾಬಳದಿಂ ॥
ದನರಣ್ಯಂ ಕೃತಪುಣ್ಯಂ ।
ಮನುವಂಶವರೇಣ್ಯನಖಿಳಭುವನಶರಣ್ಯಂ ॥೬೮॥

ಅನರಣ್ಯನೆಂಬ ಪೆಸರಂ ।
ಜನಪತಿದೇಶದೊಳರಣ್ಯಮಿಲ್ಲೆನೆ ನಾನಾ ॥

ಜನಪದಮಂ ಪಡೆದು ಜಗ ।
ಜ್ಜನಂ ಕುಡಲ್ಪಡೆದನುಂತೆ ಪಡೆದನೆ ಪೆಸರಂ ॥೬೯

ನ್ಯಾಯಾರ್ಜಿತವಿತ್ತಂ ಧ ।
ರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇ ॥
ಕಾಯತ್ತಮಾಗೆ ಧರೆಯಂ ।
ಜೀಯೆನಿಸಿದನಿಂತುದಾತ್ತಚರಿತರುಮೊಳರೇ ॥೭೦

ಆ ವಸುಧಾವಲ್ಲಭನ ಮ ।
ನೋವಲ್ಲಭೆ ರೂಪವತಿ ಕಳಾವತಿ ಸತಿ ಪೃ ॥
ಥ್ವೀವಧು ಧೈರ್ಯದೊಳಂ ಪೃ ।
ಥ್ವೀ ವನಿತೆಗೆ ಯುವತಿ ಸಮತಿಯೆನೆ ಪೆಸರ್ವಡೆದಳ್ ॥೭೧

ಕಡುಚೆಲ್ವಿಂ ರತಿಗೆಗ್ಗಂ ।
ಪಡೆದು ವಿಳಾಸಕ್ಕೆ ದೇಸಿವಡೆದವನಿಪನೊಳ್ ॥
ಪಡೆದು ಪಿರಿಯರಸಿತನಮಂ ।
ಪಡೆದಳ್ ತನಯರನನಂತರಥ ದಶರಥರಂ ॥೭೨॥

ಆ ಪೃಥ್ವೀಮಹಾದೇವಿಯೊಳಖಿಳಪೃಥ್ವೀವಲ್ಲಭಂ ಧರ್ಮಾರ್ಥವಿರುದ್ಧಮಾಗದಂತ
ವಿಷಯಸುಖಮನನು ಭವಿಸುತ್ತಿರ್ದೊಂದು ದಿವಸಂ,

ಭುವನಸ್ತುತ್ಯಪದಂ ಸಹಸ್ರಕಿರಣಂ ಸ್ವರ್ಭಾನುವಿಂದಂ ಪರಾ -
ಭವಮಂ ಪೊರ್ದುವವೋಲ್ ಸಹಸ್ರಕಿರಣಂ ಮಾಹಿಷ್ಮತೀವಲ್ಲಭಂ
ಬವರಂಗೆಯ್ದು ದಶಾನನಂಗೆ ರಣದೊಳ್ಸೋಲ್ತೇವದಿಂ ಕ್ಷತ್ರಪು-
ತ್ರವರೇಣ್ಯಂ ಜಿನದೀಕ್ಷೆಗೊಂಡನನರಣ್ಯಂ ಕೇಳ್ದನಾವಾರ್ತೆಯಂ ॥೭೩॥

ಕೇಳ್ದದುವೆ ತನಗೆ ನಿರ್ವೇಗಮಾಗೆ,

ಕೆಳೆಯಂ ಸಹಸ್ರಕಿರಣಂ ।
ತಳೆದಂ ದೀಕ್ಷೆಯನುಪೇಕ್ಷಿಸಲ್ಬದನಲ್ಲೀ ॥
ಯಿಳೆಯನಪೇಕ್ಷಿಸಲೆಂದಾ ।
ಗಳನಂತರಥಂಗೆ ನುಡಿದನಿಂತನರಣ್ಯಂ ॥೭೪॥

ಪಡೆದೆಂ ನಿನ್ನನನಂ ರಕ್ಷಿಸಲಖಿಳಧರಾಚಕ್ರಮಂ ಪುತ್ರ ನೀಂ ಬೆ-
ಳ್ಗೊಡೆಯಂ ಕೈಕೊಳ್ಧರಾಭಾರಮನಿಜಿ ಪೆನಗಂದಂಗೆ ದಂತಾಂಶುಜಾಳಂ

ಕುಡಿಮಿಂಚಂ ಬೀಱೆ ಕೈಯಂ ಮುಗಿದು ನುಡಿದನೇ ಮಾತೊ ನಿರ್ವಾಣಮಾರ್ಗ-
ಕ್ಕೊಡಸಲ್ವೆಂ ನಿಮ್ಮ ಚಿತ್ತಕ್ಕಡಱಿದ ನೆಲನಂ ದೇವ ಕೈಕೊಳ್ವೆನಲ್ಲೆಂ ॥೭೫॥

ಎಂದು ತನ್ನೊಡನೆ ತಪಂಬಡಲೊಡಂಬಟ್ಟು ತಱಿಸಂದು ನುಡಿವುದುಮೊಂದು ತಿಂಗಳ ಮಗನಪ್ಪ ದಶರಥಂಗೆ ಪಟ್ಟಂಗಟ್ಟಿ ತಾನಮನಂತರಥನುಮಭಯಘೋಷಭಟ್ಟಾರಕರ ಪಾದೋಪಾಂತದೊಳ್ತಪಂಬಟ್ಟು,

ಅನರಣ್ಯಂ ಮುಕ್ತಿಶ್ರೀ ।
ವನಿತಾವರನಾದನಂತರಥಂ ಚಿ ॥
ತ್ತನಿರೋಧದಗ್ಧಕರ್ಮೇಂ ।
ಧನಭಾರನನಂತವೀರ್ಯಕೇವಳಿಯಾದಂ ॥೭೬॥

ಆ ಮಹಾಮಹಿಮೆಯೊಳ್,

ಅಮರೇಂದ್ರೋದ್ಯಾನದಿಂ ಪೂಮಳೆ ಸುರೇಂದ್ರಾಗಮಂ ರಾಗಮಂ ಬೀ-
ಱೆ ಮರುದ್ಗಂಭೀರಭೇರೀನಿನದಮೊದವೆ ನಿರ್ವಾಣಕೈವಲ್ಯಮಾಂಗ-
ಲ್ಯಮಹೋತ್ಸಾಹಪ್ರಮೋದಾಮರಕಳಕಳಮಾನಂದಮಂ ಮಾಡೆ ರೋಮಾಂ-
ಚಮನಾನಂದಾಶ್ರುವಂ ತಾಳ್ದಿದನಮಳಯಶಂ ಭಾರತೀಕರ್ಣಪೂರಂ ॥೭೭॥

ಇದು ಪರಮಜಿನಸಮಯಕುಮುದಿನೀ ಶರಚ್ಚಂದ್ರ ಬಾಳಚಂದ್ರಮುನೀಂದ್ರ
ಚರಣನಖಕಿರಣ ಚಂದ್ರಿಕಾಚಕೋರ ಭಾರತೀಕರ್ಣಪೂರ
ಶ್ರೀಮದಭಿನವಪಂಪ ವಿರಚಿತಮಪ್ಪ
ರಾಮಚಂದ್ರಚರಿತಪುರಾಣದೊಳ್ ವಂಶವರ್ಣನಂ
ದ್ವಿತೀಯಾಶ್ವಾಸಂ



## ೩. ಕುಮಾರೋದಯ ವರ್ಣನಂ

ಶ್ರೀವನಿತೆ ವಕ್ಷದೊಳ್ ಮು ।
ಕ್ತಾವಳಿಯಂತೆಸೆಯೆ ತೊಟ್ಟಿಲೊಳ್ ಪಟ್ಟಿರ್ದಲ್ ॥
ಭೂವಳಯಂ ಭುಜದೊಳ್ ಶೋ ।
ಭಾವಹಮೆನೆ ಪೆಂಪುವೆತ್ತನಭಿನವಪಂಪಂ ॥೧॥

ಎಳನೇಸಱಿಂತೆ ಜಗಮಂ ।
ಬೆಳಗಿದನೆಳದಿಂಗಳಂತೆ ಸಕಳಧರಿತ್ರೀ- ॥
ತಳಮನೆಱಗಿಸಿದನೆಳವೆಯೊ ।
ಳೆಳೆ ಬಣ್ಣಿಸೆ ದಶರಥಂ ಭಗೀರಥಚರಿತಂ ॥೨॥

ಆ ವಂಶಜನ ಗುಣಂಗಳ ।
ನಾವಗಮೊಳಕೊಂಡು ತನ್ನ ವಿಶದಯಶೋಮು- ॥
ಕ್ತಾವಳಿಯಂ ಧರೆಗಿತ್ತು ಧ ।
ರಾವಲ್ಲಭನತ್ಯುದಾತ್ತನೆನೆ ಪೆಸರ್ವಡೆದಂ ॥೩॥

ಚಿರಕಾಲದ ಕಟಿವೂವೆಂ ।
ದಿರದೆ ವಿರಂಚನಮುಖಾರವಿಂದಮನುಟಿದಾ- ॥
ದರದಿಂದಿರ್ದಳ್ ಸಿತಮಧು ।
ಕರವಧು ವಾಗ್ವಧು ನರೇಂದ್ರಮುಖಸರಸಿಜದೊಳ್ ॥೪॥

ಜಡಧಿಯ ರತ್ನಂಗಳ್ ಪೊಂ ।
ದೊಡವಿನುಪಾಶ್ರಯದಿನೆಸೆವವೋಲ್ದಶರಥನಿಂ ॥
ಜಡಜಜನ ವಿದ್ಯೆಗಳ್ ನೂ ।
ರ್ಮಡಿಸಿದುವಾಶ್ರಯವಿಶೇಷಮೇಂ ಕೇವಳಮೇ ॥೫॥

ಅಱುವತ್ತುನಾಲ್ಕು ವಿದ್ಯೆಯ ।
ನಱಿದುಂ ದಶರಥನ ಚಿತ್ತವನುರಾಗದಿನೇ- ॥

ನೆಱಗಿತ್ತೊ ಧರ್ಮಶಾಸ್ತ್ರ ।
ಕ್ಕಱುವುಳ್ಳಂ ವಿಕಥೆಯೊಳ್ ಮನಂ ನಿಱಿಸುಗುಮೇ ॥೬॥

ಓದಿದೊಡೇನರಗಿಳಿ ಕ ।
ಲ್ತೋದುವವೋಲ್ಧರ್ಮಶಾಸ್ತ್ರಮಂ ದಶರಥನಂ- ॥
ತೋದಿ ತಿಳಿದವನಿಪತಿ ಮ ।
ರ್ಯಾದೆಯೊಳೆಸಗುವುದು ಧರ್ಮಪರನೆನೆ ಲೋಕಂ ॥೭॥

ಕಾದಳ್ ವರ್ಣಾಶ್ರಮಧ ।
ರ್ಮಾದಿಗಳಂ ಮೀಱದಂತು ನೃಪನಾ- ॥
ಜ್ಞಾಧ್ದೇವತೆ ವೇದಿಕೆ ಮ ।
ರ್ಯಾದೆಯೊಳಂಭೋನಿಧಾನಮಂ ನಿಲಿಸುವವೋಲ್ ॥೮॥

ಮನಮೆಳದಾಗೆ ವೈರಿಗೆ ಮನೀಷಿಜನಂ ಮನಮಿಾಯೆ ಮಾನಿನೀ-
ಜನಮಭಿಮಾನಮಂ ಮಱೆಯೆ ಭೂಭುವನಸ್ತವನೀಯಮಾದುದಾ-
ತನ ಬಲಗೈಯೊಳಿರ್ಪ ಜಯಲಕ್ಷ್ಮಿಗಮಾತನ ಸೋಲ್ತೊಳಿರ್ಪ ವಾ-
ಗ್ವನಿತಗಮಾ ಮಹೀಪತಿಗಮಪ್ರತಿಮಂ ಪರಿಪೂರ್ಣಯೌವನಂ ॥೯॥

ಅಂತು ದಶರಥನರನಾಥಂ ನವಯೌವನಲಕ್ಷ್ಮಿಯನಪ್ಪುಕೆಯ್ದು ಲಾವಣ್ಯಲಕ್ಷ್ಮೀವಿ-ರಾಜಿತೆಯೆನಿಪ್ಪ ಪರಾಜಿತೆಯುಂ ಮದನಮೋಹನವಿದ್ಯಾ ದೇವತೆಯನಿಪ್ಪ ಸುಮಿತ್ರೆಯುಂ ಕಂತುಸಂತಾಪನ ದೀಪಕಳಿಕಾಪ್ರಭೆಯೆನಿಪ್ಪ ಸುಪ್ರಭೆಯು ಮೋರೊರ್ಮೆ ಪೇರುರದೊಳಿರ್ಪ ಸಿರಿಯಂ ಗಾಢಾಲಿಂಗನದ ನೆವದಿಂ ನೆಲೆಮೊಲೆಯೊಳಿಟ್ಟೊತ್ತುವಂತೆರ್ದೆವತ್ತಗೆವೆತ್ತು ಕಳಭಾಷಿತಸುಧಾಜಲದಿಂ ಸರಸ್ವತಿಯ ಕಳಾವಲೇಪಮಂ ಕರ್ಚಿ ಕಳೆವಂತೆ ಮೊಗಂಬಡೆದು ಪ್ರಣಯಕಲಹಕಕೇಳಿಯಿಂ ವಿಜಯನಂ ಜನಿಸುವಂತೆ ತೋಳ್ವೆರಗನಿಪ್ಪುಕೆಯ್ದು ತನಗೆ ಮನೋನಯನವಲ್ಲಭೆಯರೆನಿಸೆ,

ಕುಲವತಿಯರಿಂ ನೃಪಂ ದಾ ।
ನಲೇಖೆಯಿಂ ದಿಗಿಭಮಮೃತಕಳೆಯಿಂ ಶಶಿ ಮೇ- ॥
ಖಲೆಯಿಂ ಮಂದರಶೈಳಂ ।
ವಿಲಾಸಮಂ ತಳೆದುದೆನೆ ಬೆಡಂಗಂ ತಳೆದಂ ॥೧೦॥

ಇನನೆಂತು ಬೆರಸಿ ಸಂಜೆಯೊ ।
ಳನುರಾಗಿಯೆನಿಪ್ಪನಂತೆ ನೃಪನಾ ನೃಪನಂ- ॥
ದನೆಯರೊಳನುರಾಗದಿನಿ ।
ರ್ದನನವರತಂ ತೊಳಗಿ ಬೆಳಗಿದಂ ಸತ್ಪಥಮಂ ॥೧೧॥

ನೀರೋಳಗಿರ್ದುಂ ಪೊರ್ದದು ನೀರಂ
ನೀರೇಜಮೆಂಬವೋಲಬಳಾಶ್ರಂ- ॥
ಗಾರರಸಮಗ್ನನಾಗಿ ।
ರ್ದಾರಳವೆನೆ ತಳೆದನರಸನಿಂದ್ರಿಯ ಜಯಮಂ ॥೧೨॥

ಕುಳಭೂಭೃತ್ಕೂಟದೊಳ್ ಮಾಣಿಕದೆಳವಿಸಿಲೆಂತಂತೆ ದಿಕ್ಕುಂಬಿಕುಂಭ-
ಸ್ಥಳದೊಳ್ಸಿಂಧೂರಮೆಂತಂತಮರನದಿಯೊಳಾರಕ್ತನೀರೇಜಪತ್ರಾ-
ವಳಿಯೆಂತಂತಬ್ಧಿಯೊಳ್ವಿದ್ರುಮಸಮುದಯಮೆಂತಂತೆ ಪರ್ವಿತ್ತು ರಾಗಾ-
ವಿಳಮಪ್ಪಂತುರ್ವಿಯೆಲ್ಲಂ ದಶರಥವಸುಧಾಧೀಶತೇಜಃಪ್ರಕಾಶಂ ॥೧೩॥

ಖಂಡಿಸಿ ವೈರಿವಂಶವನಮಂ ಕಡಿದುದ್ಧತಶಾಖೆಯಂ ಭುಜಾ-
ದಂಡಕೃಪಾಣದಿಂ ಸಮೆಜಿ ಕಂಟಕಮಂ ಸಮೆದಾತಪತ್ರಮಂ
ಚಂಡಕರಪ್ರತಾಪಮಖಿಳೋರ್ವರೆಗಿಲ್ಲೆನೆ ತಂಪುಮಾಡಿದಂ
ದಂಡಧರೋಪಮಂ ದಶರಥ ಸಫಳೀಕೃತಸನ್ಮನೋರಥಂ ॥೧೪॥

ಅನಿಮಿಷಗಾಯಕರ್ದಶರಥಕ್ಷಿತಿನಾಯಕನಂಕಮಾಲೆಯಂ
ತನತನಗೊಲ್ದು ಪಾಡುವೆಡೆಯೊಳ್ಪುಳಕಂ ಪೊಜಿಪೊಣ್ಮೆ ಸೋಲ್ತುಕೇ-
ಳ್ವನಿಮಿಷನಾಯಕಂ ತನಗೆ ಚಾಮರವಿಕ್ಕುವ ದೇವಕಾಮಿನೀ-
ಜನಮಣಿಕಂಕಣಧ್ವನಿಗೊನಲ್ದವರಂ ಕಿಸುಗಣ್ಣೆ ನೋಡುವಂ ॥೧೫॥

ನೋಡಿರೆ ಕಿನ್ನರರ್ದಶರಥಕ್ಷಿತಿನಾಥನ ವೀರದೇಳ್ಗೆಯಂ
ಪಾಡೆ ಮರುಳ್ದು ಕೇಳ್ವ ಪದದೊಳ್ಕಿವಿ ಸಾರ್ದು ಜಿನುಂಗೆ ಸೌರಭ-
ಕ್ಕಾಡುವ ತುಂಬಿಗಳ್ದಿವಿಜನಾಥನವಕ್ಕೆ ಕನಲ್ದು ಮಾಣದೀ-
ಡಾಡುವನಾ ನಮೇರು ಕುಸುಮಸ್ತಬಕಂಗಳ ಕರ್ಣಪೂರಮಂ ॥೧೬॥

ಬಾಳ ಬಿಸುಪಿದಿರ ತೇಜಮ ।
ನೇಳಿಸೆ ನೆಲನಂ ಪಯೋಧಿ ಪರ್ಯಂತಂ ಬಾ- ॥
ಯ್ಕೇಳಿಸಿ ದಶರಥನೊಳ್ಪಂ ।
ಪಾಳಿಸಿ ಸುಖದಿಂದಮರಸುಗೆಯ್ಯುತ್ತಿರ್ದಂ ॥೧೭॥

ಆ ನಿಖಿಳರಾಜಕುಳಕಿರೀಟಕೀಳಿತ ಹರಿನೀಲಮಣಿಮದಾಳಿ ಮಾಳಾಪರಿಚುಂಬಿತ ಚರಣಾರವಿಂದನೊಂದು ದಿವಸಮಾಪ್ತಪರಿಜನಂಬೆರಸು ಕರುಮಾಡದೆರಡನೆಯ ನೆಲೆಯೋಲಗಸಾಲೆಯೊಳಿಕ್ಕಿದ ಮಣಿಮಯಾಸನಮನಳಂಕರಿಸಿ ಕರ್ಣ ಪೂರಪಾರಿಜಾತ ಸ್ತಬಕಪರಿಮಳಕ್ಕೆಳಸಿ ಬಳಸುವೆಳದುಂಬಿಯ ಕಳರವಮನಾಲಿಸುತಿರ್ಪುದುಮಾ ಸಮಯದೊಳ್,

ನಯನೋತ್ಸಾಹಮನಿತ್ತು ದೇಹರುಚಿಯಿದೆಯ್ತಂದನಾಕಾಶಗಂ -
ಗೆಯ ನೀರ್ಮಾನಿಸನೆಂಬಿನಂ ದಶರಥಕ್ಷೋಣೀಶನಾಸ್ಥಾನಭೂ -
ಮಿಯನಾ ನೀರದಮಾರ್ಗದಿಂದಿೞಿದು ಸನ್ಮಾರ್ಗಕ್ಕೆ ಮೆಯ್ವಾರದಂ
ನಯಮಂ ಸಾರದನಾವ ಕಾಳೆಗದೊಳಂ ಕಣ್ಣಾರದಂ ನಾರದಂ ॥೧೮॥

ಬಿಸಸೂತ್ರದ ಕಟಿಸೂತ್ರಂ ।
ಪೊಸದುಗುಲದ ಕೋವಣಂ ಕಮಂಡಳು ರಾರಾ- ॥
ಜಿಸೆ ದಂಡಪಾಣಿ ಪೊಕ್ಕಂ ।
ಕಿಸುರಟಿಪಂ ಪಿಸುಣ ಪಸರಿಗಂ ನೃಪಸಭೆಯಂ ॥೧೯॥

ಅಂತಾ ನಾರದಂ ನಭೋಮಂಡಳದಿಂ ಸಭಾಮಂಡಳಕ್ಕವತರಿಸೆ,

ಇದಿರೆರ್ದಿಜ್ಯಾಕಾರಮ ।
ನುದಾತ್ತನೇನಿತ್ತು ಮಾಣ್ದನೇ ಕಾಂಚನಪೀ- ॥
ಠದೊಳಿರಿಸೆ ಮುಕುಳಿತಾಂಜಳಿ ।
ಸದರ್ಘಸಾಕ್ಷ ತಮನರ್ಘ್ಯಪಾದ್ಯಮನಿತ್ತಂ ॥೨೦॥

ಬಂದ ಬರವಾವುದೀ ಬರ ।
ವಿಂದಂ ಚರಿತಾರ್ಥನಾದೆನಾನೆಲ್ಲಿಂದಂ ॥
ಬಂದಿರೆನೆ ನೃಪತಿ ನಾರದ ।
ನೆಂದಂ ದಂತಾಂಶು ಕೆದಱೆ ಚಂದ್ರಾತಪಮಂ ॥೨೧॥

ಆನೀ ಜಂಬೂದ್ವೀಪದ ಪೂರ್ವವಿದೇಹದ ಪುಂಡರೀಕಿಣೀಪುರದ ಸೀಮಂಧರ ಸ್ವಾಮಿಗಳ ಪರಿನಿಷ್ಕ್ರಮಣ ಕಲ್ಯಾಣವಿಭೂತಿಯಂ ನೋಡಿ ಬಂದೆನೆಂದು ಸಭೆಯಂ ಸನ್ನೆಯಿಂ ತೊಲಗಿಸಿ ದಶರಥಂಗೆ ಕಟ್ಟೇಕಾಂತದೊಳಿಂತೆದಂ,

ಲಂಕೆಗೆ ಪೋಗಿ ಶಾಂತಿಜಿನಭಕ್ತಿಯೊಳಾಂ ಸ್ಮರದಾನದಂತಿವ-
ಜ್ರಾಂಕುಶದರ್ಶನಸ್ತವನದಿಂ ಚರಿತಾರ್ಥನೆನಾದೆನಾಗಿ ವೀ-
ತಾಂಕುಶನಪ್ಪ ರಾವಣನೊಳಂ ನೆರೆದೀ ನುಡಿಗೇಳ್ದು ನಾಡೆಯುಂ
ಶಂಕೆಯೊಳೊಂದಿ ಬಂದೆನಱಪಲ್ವೆಱತೆಂ ನಿಮಗಾ ಪ್ರಪಂಚಮಂ ॥೨೨॥

ಅದೆಂತೆನೆ ವಿಭೀಷಣಂ ಸಾಗರವೃದ್ಧಿವೆರಸು ನೈಮಿತ್ತಿಕನಂ ಬರಿಸಿ ರಾವಣನ ಮರಣಕಾಲಮಂ ಬೆಸಗೊಳ್ವುದುಂ,

ಏನುಂ ತೊದಳಿಲ್ಲಿದುವೆ ಶಿ ।
ಳಾನಿಕ್ಷಿಪ್ತಾಕ್ಷರಂ ವಿಭೀಷಣ ರಣದೊಳ್ ॥

ಜಾನಕಿಯ ದೂಸಱಿಂ ಲಂ ।
ಕಾನಾಥಂ ದಾಶರಥಿಯ ಕೈಯೊಳೆ ಮಡಿಗುಂ ॥೨೩॥

ಎಂಬುದು ವಿಭೀಷಣಂ ವಿಷಣ್ಣ ಚಿತ್ತನಾಗಿ,

ಅರಯಲವರುತ್ಪತ್ತಿಗೆ ।
ಕಾರಣಮೆನಿಸಿರ್ದ ಜನಕನಂ ದಶರಥನಂ ॥
ಮಾರಣಮಂ ಪೊರ್ದಿಸುವೆಂ ।
ಕಾರಣವಿಘಟನಮೆ ಕಾರ್ಯವಿಘಟನಮಲ್ತೇ ॥೨೪॥

ಎಂದು ತಱಿಸಂದು,

ಎನಗಿದಯುಕ್ತಮೆನ್ನ ಬಗೆ ಪಾಪನಿಬಂಧನಮೇವುದೆಂಬಿದಂ
ನೆನೆಯದೆ ತನ್ನ ಸೋದರನೊಳಪ್ಪ ವಿಪತ್ತಿಗಣಂ ವಿಭೀಷಣಂ
ಮನದೊಳಟಿಲ್ದು ನಿಮ್ಮ ನಟಿಯಲ್ಬಗೆದಂದನಿದಕ್ಕೆ ತಕ್ಕುದಂ
ನೆನೆದಿರಿಮಾನಿದಂ ತಡೆಯದಿಂ ಜನಕಂಗಱಿಪಲ್ಕೆ ಪೋದಪೆಂ ॥೨೫॥

ಎಂದು ನಾರದಂ ನೀರದಪಥಕ್ಕೆ ಮಿಥಿಳೆಯನೆಯ್ದಿ ಜನಕಂಗಾ ಸ್ವರೂಪಮನಱಿಪಿ ಪೋಪುದುಮಿತ್ತಲ್ ದಶರಥನಾ ವಾರ್ತೆಯೆಲ್ಲಮಂ ಸಮುದ್ರಹೃದಯನೆಂಬ ತನ್ನ ಮಂತ್ರಿಮುಖ್ಯಂಗಱಿಪುವುದುಮಾತನಿದಕ್ಕೆ ಕಾಲ-ವಂಚನಮೆ ಕಾರ್ಯಮೆಂದು ನಿಶ್ಶಂಗೆಯ್ದು ದಶರಥನಂ ಕಳಿಪಿ ಚಿತ್ರಕನುಂ ತಾನುಮಲ್ಲದೆ ಪೆಱರಱಿಯದಂತು ಕರುವಿಡಿಸಿ ಲಾಕ್ಷಾರಸಾದಿಗಳಿಂ ಸಪ್ತಧಾತುಗಳಂ ಪಡೆದು ವರ್ಣಕ್ರಮಂ ಗೆಯ್ಯೆ,

ಇದು ಭೂಪನ ರೂಪಿದು ಲೆ ।
ಪ್ಪದ ರೂಪನಲೆಂತುಮಱಿಯಲರಿದೆನೆ ಬಗೆಗೊಂ- ॥
ಡುದು ನಡೆವ ನುಡಿವ ತೆಱದಿಂ ।
ಪ್ರದೇಶಸೌಷ್ಠವಮಿದೇಂ ವಿಚಿತ್ರಮೊ ಚಿತ್ರಂ ॥೨೬॥

ಅಂತು ಪರವಿದ್ಧಮಂ ಪ್ರತ್ಯಕ್ಷಮಂ ಮಾಡಿದ ಚಿತ್ರಕನ ಪರಿಣತಿಯಂ ಮನದೆಗೊಂಡು ಲೆಪ್ಪದರಸಂ ಕರುಮಾಡದೇಟಿನೆಯ ನೆಲೆಯೋಲಗಸಾಲೆಯೊಳಿರಿಸಿ ಪರಿಜನವುಂ ತಾನುಮೋಲಗಿಸುತ್ತುಮಿರೆ,

ಜನಕನ ಮಂತ್ರಿಯುಮಿಾ ಕ್ರಮ ।
ದಿನನುಷ್ಠಿಸಿ ಕಳಿಪೆ ಜನಕನುಂ ದಶರಥನುಂ ॥
ದಿನಕರನುಂ ಹಿಮಕರನುಂ ।
ಘನಾಘನಾಂತರಿತರಾವರೆನೆ ತಲೆಗರೆದಿರ್ ॥೨೭॥

ಅನ್ನೆಗಮಿತ್ತಲ್ ವಿಭೀಷಣಾದೇಶದಿಂ ಬಂದ ತೀಕ್ಷ್ಣಪುರುಷರ್ಪುರಮಂ ಪೊಕ್ಕು ಕರುಮಾಡಮಂ ಪುಗಲ್ಪಡೆಯದೆ ತಡೆದಿರ್ಪುದು,

ಅಟ್ಟಿವ ಜಟ್ಟಿಗರ್ತಡೆದುದರ್ಕೆ ಕನಲ್ದು ವಿಭೀಷಣಂ ಮುಗಿ-
ಲ್ಪಟ್ಟೆಯಿನಟ್ಟಿ ತಿಂಬ ಜವನಂತಿರಯೋಧ್ಯೆಗೆ ಬಂದು ಪೊಕ್ಕು ಪೊಂ-
ಬೆಟ್ಟಮೆನಿಪ್ಪ ಪೊನ್ನ ಕರುಮಾಡಮಮನೊಂದಿದನಲ್ಲಿ ಕಂಡು ಕ-
ಣ್ಮುಟ್ಟಿನೊಳಿರ್ದ ಲೆಪ್ಪದರಸಂ ಕೊಲವೇಟ್ದಿನಸಾರಚೇತಸಂ ॥೨೮॥

ಅಂತು ಪೇೞ್ದುದುಂ,

ಬೆಸನಂ ವಿದ್ಯುದ್ವಿಳಸಿತ ।
ವೆಸರ ವಿಯಚ್ಚರಭಟೋತ್ತಮಂ ಪಡೆದು ಜವಂ ॥
ಮಸಗಿದನೆನೆ ಕಾಪಿನವ ।
ರ್ದೆಸೆಗಿಡೆ ಪೊಕ್ಕಿಱಿದು ಕೊಂದು ತಲೆಯಂ ತಂದಂ ॥೨೯॥

ಆ ಸಮಯದೊಳ್,

ಪರಿಜನದ ಭೂಪನಂತಃ ।
ಪುರದಬಳಾಜನದ ನೆಗೆದ ಹಾಹಾರವಮೆ- ॥
ಯ್ತರೆ ಕಿವಿಗೆ ಕೇಳ್ದು ನಲಿದಂ ।
ಕರುಣಾರಸರಹಿತನಾವನಾ ಖಚರನವೋಲ್ ॥೩೦॥

ಕೊಲಲೆಂದು ಬಂದು ಲೆಪ್ಪದ ।
ತಲೆಯಂ ಕೊಂಡುಯ್ದನಾ ವಿಭೀಷಣನಾರುಂ ॥
ಕೊಲಲಾರ್ಪರೆ ಸಾಯದರಂ ।
ಲಲಾಟದೊಳ್ ಬರೆದ ಲಿಪಿಯದೇಂ ಜಳಲಿಪಿಯೇ ॥೩೧॥

ಅಂತವನ ತಂದ ತಲೆಯಂ ಕಡಲೊಳೀಡಾಡಿ ಜನಕನುಮನಂತೆ ಮಾಡಿ ಮಗುೞೆ ಲಂಕೆಗೆ ಪೋಗಿ,

ಮನದೊಳ್ತನ್ನ ನೆಗೞ್ತೆಯಂ ನೆನೆದು ಕಷ್ಟಂಗೆಯ್ದನಾನೀ ದಶಾ-
ನನನಂ ಕೊಲ್ವವನಾವನೀ ಕಡಲನಾವಂ ದಾಂಟುವಂ ಲಂಕೆಗಾ-
ವನೊ ಬರ್ಪಂ ಗಡ ಭೂಮಿಗೋಚರನಿದಂ ನೈಮಿತ್ತಿಕಂ ಪೇೞ್ದೊಡಾ-
ತನ ಮಾತಿಂಗವಿಚಾರಿತಂ ನೆಗೞ್ದೆನೆಂದುದ್ವೇಗಮಂ ತಾಳ್ದಿದಂ ॥೩೨॥

ಜಿನಗೃಹಮಂ ಪ್ರಾಯಶ್ಚಿ ।
ತ್ತನಿಮಿತ್ತಂ ನಿರತಿಶಯಮೆನಲ್ಮಾಡಿಸಿದಂ ॥

ತನಗೆ ಕಷಾಯೋದಯದಿಂ ।
ಜನಿಯಿಸೆ ಪೊಲ್ಲಮೆಯನೊಳ್ಪಿದಂ ಸೈರಿಪನೇ ॥೩೩॥

ಅನ್ನೆಗಮಿತ್ತ ದಶರಥನ ಪರಿಜನಂ ಲೆಪ್ಪದರಸನಪ್ಪುದನಱಿದು ಸಂತೋಷಂ ಬಟ್ಟಿರ್ಪುದುಮತ್ತ ದಶರಥನುಂ ಜನಕನುಂ ರೂಪಪರಾವರ್ತನದಿನನೇಕದೇಶಂಗಳಂ ನಡೆವು[ದೆ] ತಮಗೆ ವಿನೋದಮಾಗೆ ತೊೞಲುತ್ತಂ ಬಂದು,

ಸಕಳರ್ತುಕವನದಿಂ ದೀ ।
ರ್ಘಿಕೆಯಿಂ ಪುಷ್ಕರಣಿಯಿಂ ಸರೋವರದಿಂ ಕೌ- ॥
ತುಕಮನವರ್ಕಂಡರ್ಕೌ ।
ತುಕಮಂಗಳಪುರಮನುರ್ವರಾನೂಪುರಮಂ ॥೩೪॥

ಮಿಸುಗುವ ಪೊನ್ನಕೋಟೆ ಮುಗಿಲಂ ತುಡುಕುತ್ತಿರೆ ಪೆಂಪುವೆತ್ತಗೞ್
ಬಿಸರುಹಮುಳ್ಳಲರ್ದು ಸಿರಿ ಕಣ್ದೆಱೆದಂತಿರೆ ಸುತ್ತಲುಂ ಬನಂ
ಕುಸುಮಶರಂಗೆ ಪೊಚ್ಚ ಪೊಸ ಜೌವನದಂತಿರೆ ರಾಜಧಾನಿ ಕ-
ಣ್ಗೆ ಸದಳಮೊಪ್ಪಿ ತೋಱಿದುದು ಕೌತುಕಮಂಗಳಮಾತ್ತಮಂಗಳಂ ॥೩೫॥

ಆ ಪೊೞಲ ಪೊಱವೊೞಲನೆಯ್ದೆವರ್ಪಾಗಳ್,

ಲಲನಾರತ್ನದೊಳರಿಜಯ ।
ಲಲನಾರತ್ನದೊಳಮಪ್ಪ ತೋಳ್ವೆರಗನನಾ- ॥
ಕುಳಮಱಿಪುವಂತೆ ಬಲಗ ।
ಣ್ಬಲಗೆಯ್ಕತ್ತಿದುವು ದಶರಥಂಗೊರ್ಮೊದಲೊಳ್ ॥೩೬॥

ಅಂತೆಯ್ದೆ ವರ್ಪುದುಮಾಪುರಬಹಿಃಪುರೋದ್ಯಾನ ಪ್ರದೇಶದೊಳ್ ಕನಕಪ್ರಾಕಾರಕಮನೀಯಮುಮಂಬರತಳ ಚುಂಬಿತ ಚಂಚದ್ಧ್ವಜರಾಜಿ ವಿರಾಜಮಾನಮುಮನೇಕಮಣಿಭವನಭಾಸುರಮುಮೆನಿಸಿ ಜನಮನೋಹರಂ ಸ್ವಯಂವರ ಭೂಮಿ ನಯನಾಭಿರಾಮಮಾದುದಲ್ಲಿ,

ಪಳಿಕಿನ ಚೌಖಂಡಂಗಳ ।
ಕೆಳಗಣ ಚೆಂಬೊನ್ನ ಮತ್ತವಾರಣದೊಳ್ ಕ- ॥
ಣ್ಗೊಳಿಸಿದರನೇಕದೇಶಂ ।
ಗಳ ರಾಜಕುಮಾರರೋಳಿಯಿಂದಿಕ್ಕೆಲದೊಳ್ ॥೩೭॥

ಆಗಳಲ್ಲಿಗೆ,

ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಕೊಂಡುದೋ ಗಂಡಗಾ-
ಡಿಯನೀತಂಗೆ ಮನೋಜನೊಪ್ಪಿಸಿದನೋ ಪೇೞೆಂಬಿನಂ ಬಣ್ಣಿಸ-

ಳ್ಬಯಸಲ್ತಕ್ಕ ಬೆಡಂಗು ಕಣ್ಗೊಳಿಸೆ ತನ್ನಂ ಕಂಡಣಂ ಕನ್ನೆಯಾ-
ಸೆಯನಾ ರಾಜತನೂಭವರ್ತವುವಿನಂ ಪೊಕ್ಕಂ ಸಭಾಸದ್ಮಮಂ ॥೩೮॥

ತೊಡವುಗಳೆಡ್ಡಮಾದನಿತಱಿಂ ತನಗಕ್ಕುಮೆ ಗಾಡಿ ಗಾಡಿ ಮೆ-
ಯ್ಯೊಡವೆನೆ ಮಾಸಿ ರೂಪುಗರೆದಿರ್ದೊಡಮಾತನ ರೂಪಿದೊಂದು ಕ-
ಣ್ಣೊಡವೆನೆ ಬೇಱೆದೊಂದು ಬಗೆಗಿಕ್ಕಿದ ಕಕ್ಕಿನ ವಶ್ಯಮೊಂದು ತ-
ಣ್ಣೊಡರೆನೆ ನೋಟ್ಪ ನೋಟಕರ ಕಣ್ಗೊಳಗಾದುದು ಕಣ್ಣ ಪಾಪೆವೋಲ್ ॥೩೯॥

ಅಂತು ದಶರಥಂ ಸ್ವಯಂವರಸಭಾಸದನಮಂ ಪೊಕ್ಕು ತಾನುಂ ಜನಕನುಮೊಂದು ಕಡೆ ಪಟ್ಟಮಂಚೋಪಾಂತದೊಳ್ ನಿಂದು ನೋಡುತ್ತಮಿರೆ,

ಏಱಿ ಮಣಿವೆಸದ ಸಿವಿಗೆಯ ।
ನೇಱಿಸಿ ಕುಡುವಿಲ್ಲನೊಡನೆ ಬರೆ ಕಂದರ್ಪಂ ॥
ನೀಱೆ ಮುಗಿಲ್ವೊರೆಯೊಳ್ ಮೆ ।
ಯ್ದೋಱುವ ಶಶಿಕಳೆಯ ಗಾಡಿಯಂ ಗೆಲೆವಂದಳ್ ॥೪೦॥

ಯುವತೀರತ್ನದ ಕೆಲದೊಳ್ ।
ಧವಳವಿಲೋಚನಮರೀಚಿ ತಿಂಗಳ ಸಿರಿಯಂ ॥
ಕವರ್ದುಕೊಳೆ ಕುಂಚದಡಪದ ।
ಡವಕೆಯ ಕನ್ನಡಿಯಂ ಕನ್ನೆಯರ್ಕಣ್ಗೆಸೆದರ್ ॥೪೧॥

ಎಳವೆಱೆ ಪೊನ್ನ ಪುತ್ತಳಿಗೆ ರನ್ನದ ದೀವಿಗೆ ತನ್ನ ಪುಷ್ಪಕೋ-
ಮಳತನು ಬೇಱೆ ಬೀಱೆ ನಯನೋತ್ಸವಮಂ ನಿಜಲೋಚನಂಗಳು-
ತ್ಪಳದಳದಾಮಮಂ ಕೆದಱೆ ಕಣ್ಗೆಸೆದಳ್ ನವರತ್ನಮಾಲೆ ಕೆಂ-
ದಳದೊಳನಂಗಪಾಶಮೆನೆ ಕೈಕೆ ಮನೋಜನ ಬಯ್ತ ಬಯ್ಕೆವೋಲ್ ॥೪೨॥

ಆ ಸಮಯದೊಳಖಿಳರಾಜಕುಳದುಭಯಕುಳಶುದ್ಧಿಯುಮನ್ವಯ ಪ್ರಸಿದ್ಧಿಯುಮನಱಿಪಿ,

ಕಂಚುಕಿ ಪರಿವಿಡಿಯಿಂ ನೃಪ ।
ಸಂಚಯಮಂ ತೋಱೆ ನಿಂದುದಿಲ್ಲವಳ ತಟಿ- ॥
ಚ್ಚಂಚಳನಯನಯುಗಂ ನಿಜ ।
ದಿಂ ಚಳವೊಂದೆಡೆಯೊಳೆಂತುಮೇಂ ನಿಂದಪುದೇ ॥೪೩॥

ಟ ನೆರೆದಿರ್ದ ರಾಜಸುತರಂ ಪರಿದಯ್ದಿ ಬಟಲ್ದು ವಿಶ್ರಮ -
ಸ್ಥಾನಮನಾ ಮಹೀಭುಜನ ಮೆಯ್ಸಿರಿಯಂ ಸೆಱೆಗಯ್ಯೆ ತತ್ಪರೋ-

ಜಾನನೆ ತನ್ನ ಲೋಳನಯನೋತ್ಪಳಮಾಳೆ ನೃಪಾಳಮಾಳೆಯಂ
ತಾನೊಸೆದಿಕ್ಕಿದಳ್ ನಿಖಿಳರಾಜಕುಳಂ ಮನಮಿಕ್ಕುವನ್ನೆಗಂ ॥೪೪॥

ಆ ರಾಜನ್ಯಕಮಿರೆ ಕ।
ನ್ಯಾರತ್ನಂ ರೂಪುಗರೆದೊಡಂ ನಿಜಪುಣ್ಯ॥
ಪ್ರೇರಣೆಯಿಂ ಕೈಸಾರ್ದ।
ತ್ತಾರಘುವೀರಂಗೆ ಪುಣ್ಯದೊಳ್ಪುರುಡುಂಟೇ ॥೪೫॥

ಎತ್ತಿದುವಾತಪತ್ರಶತಮಿಕ್ಕಿದುವಾಗಳೆ ಹೇಮಚಾಮರಂ
ಮುತ್ತಿನ ಸೇಸೆಯಂ ತಳಿದರಂಗನೆಯರ್ಗಗನಾಂತರಾಳಮಂ
ಮುತ್ತಿದುದುತ್ಸವಾನಕರವಂ ದ್ವಿಜಮಂಗಳಮಂತ್ರನಾದಮು-
ಣ್ಮೆತ್ತಿನಿತುಂ ವಿಭೂತಿ ಪತಿಗಾದುದು ಬಾಲಿಕೆ ಸೂಡೆ ಮಾಲೆಯಂ ॥೪೬॥

ಅಂತಾತಂಗೆ ಕನ್ನೆ ಕೈ ಸಾರ್ವುದುಂ,

ಬಾಲಕಿ ಮುಗ್ಧೆ ತಕ್ಕುದಱಿಯಳ್ಪಲರಂ ಪೆಱಗಿಕ್ಕಿ ಸೂಡಿದಳ್
ಮಾಲೆಯನಾಕೆಯಂ ಕಳೆದುಕೊಳ್ವುದು ದೇಸಿಗನಂ ತಗುಳ್ವುದಿಂ
ಕಾಲವಿಲಂಬಮೇವುದೆನುತಂ ರಣಬಾಳಕರಾ ಸಮಸ್ತ ಭೂ-
ಪಾಲಕಬಾಲಕರ್ಕದನಕೇಳಿಗೆ ಮಚ್ಚರದಿಂ ತೊಡರ್ಚಿದರ್ ॥೪೭

ಅನರಣ್ಯಪ್ರಿಯನಂದನಂ ದಶರಥಂ ಸಾಕೇತನಾಥಂ ಶರಾ-
ಸನವಿದ್ಯಾಗುರುವೀರನೆಂದಱಿದುದಿಲ್ಲೇಕಾಕಿ ಸಾಮಾನ್ಯನೆಂ-
ದನಿತುಂ ರಾಜಸಮಾಜಮಾಜಿಗುಱಿದೆಯ್ತಂದತ್ತು ನೀರ್ಗೆತ್ತು ಬೆ-
ಳ್ತನದಿಂ ಕರ್ತರಿವಾಣಿಯಂ ಜಡಜನಂ ಕೈಗುತ್ತಲೇಟ್ಟಿರ್ಪವೋಲ್ ॥೪೮

ಅಂತು ರಣಪಟಹ ಪಟುನಿನದಮೊದವೆ ವಿಳಯಜಳಧಿಯಂತೆ ನೆಲೆಯಂತೆ ತಳದ
ರಾಜಕುಳಮಂ ಕಂಡು ಕೈಕೆಯ ಜನಕಂ ಭಯಚಕಿತಚಿತ್ತನಾಗಿ,

ಶುಭಮತಿ ಪೂಡಿ ತಂದು ರಥಮಂ ತಡೆಯಲ್ಪದನಲ್ತು ಸಾಮದಿಂ
ಶುಭಮನೊಡರ್ಚಲಾಂ ನೆಱೆವೆನೇಱಿಸಿ ಕೈಕೆಯನೀ ವರೂಥಮಂ
ಸಭೆಯಿನಗಲ್ದು ಪೋಪುದೆನೆ ಕೇಳ್ದಿನಿಸಂ ನಸುನಕ್ಕು ಭೂಭುಜ-
ಪ್ರಭು ನುಡಿದಂ ಮುಖೇಂದುಕಿರಣಂ ನಿಮಿರ್ವಂತಿರೆ ದಂತಕಾಂತಿಗಳ್ ॥೪೯

ಆನೆ ಕಲಂಕುವಂತೆ ಕೊಳನಂ ಬಿಡದಾನೆ ಕಲಂಕುವೆಂ ಕರು-
ತ್ತೀ ನೆರೆದಾಂತ ರಾಜಕಮನೊಂದಿಸಿಸಂ ನಡೆ ನೋಟ್ಟುದೆಂದು ಪಂ-

ಜಾನನನಂತೆ ಗರ್ಜಿಸಿ ರಘೂದ್ವಹನೇಱೆ ವರೂಥಮಂ ಘನ-
ಜ್ಯಾನಿನದಂ ಭಯಂಗೊಳಿಸೆ ಜೇವೊಡೆದಂ ನಿಜಚಾಪದಂಡಮಂ ||೫೦||

ಅತಿಶಯಮಾಗೆ ತನ್ನ ಮುಖಚಂದ್ರಬಲಂ ಮಣಿಮೇಖಳಾರವಂ
ಶ್ರುತಿಪಥಮಂ ಪಳಂಚೆ ಜಯಡಿಂಡಿಮನಿಸ್ವನದಂತೆ ಮೇಲುದು-
ದ್ಗತಜಯಕೇತುವಂ ಮಿಗೆ ಮನೋರಥಸಾರಥಿ ಕೈಕೆ ಬಂದು ಭೂ-
ಪತಿಯೊಡನೇಱೆದಳ್ ರಥಮನಾ ರಘುವೀರನ ವೀರಲಕ್ಷ್ಮಿವೋಲ್ ||೫೧||

ಆಗಳಾ ಕಾಳಜಳಧರಂಗಳಂತೆ ನಿಖಿಳನೃಪಸುತರ್ಸುತ್ತಿ ಮುತ್ತಿ ಶರವರ್ಷಮಂ ಕಱೆವುದುಂ,

ತಾಗೆ ಸರಲ್ಪಾವಿನ ಪಲ್ ।
ತಾಗಿದವೋಲ್ಮುೞ್ವೋಗೆ ಸಾರಥಿ ರಥಮಂ ॥
ಬೇಗಂ ಚೋದಿಸಿದಳ್ ವಧು ।
ರಾಗರಸಂ ದಶರಥಂಗೆ ನೆಲೆವೆರ್ಚುವಿನಂ ||೫೨||

ಮೀಱಿದೆ ಕೀಱಿದೆ ನೇಣಂ ।
ತೋಱಿದ ದೆಸೆಗಾಕೆಗಂ ಹಯಕ್ಕಂ ಚಿತ್ತಂ ॥
ಬೇಱಿಲ್ಲೆನೆ ಪರಿದುದು ಜವ ।
ನೇಱಿದ ರಥಮಿಂತಿದೆನೆ ರಥಂ ದಶರಥನಾ ||೫೩||

ಸೆಸೆ ಮಸುಳ್ವನ್ನೆಗಂ ಮಸಗಿ ರಾಜತನೂಭವರೆಚ್ಚ ಬಾಣಮಂ
ಪೊಸಮಸೆಯಂಬಿನಿಂ ಕಡಿದು ಕಟ್ಟಿಲೆಯಂ ಬೆದಱಿಟ್ಟಿ ಕಣ್ಗಗು-
ರ್ವಿಸುವಿನಮಂಡಳಕ್ಕೆ ಪರಿವೇಷಮದಾಯ್ತೆನೆ ತೀವ್ರತೇಜಮಂ
ಪಸರಿಸೆ ಕರ್ಣ್ಣ ಕುಂಡಳಿತಚಾಪನಗುರ್ವಿಸಿದಂ ಮಹೀಭುಜಂ ||೫೪||

ಕೆಲರ ವರೂಥಮಂ ಕೆಲರ ವಾಜಿಗಳಂ ಕೆಲರುಗ್ರಬಾಣಮಂ
ಕೆಲರ ಕಿರೀಟಮಂ ಕೆಲರ ಚಾಪಮನಿರ್ಕಡಿ ಮಾಡಿ ತನ್ನ ದೋ-
ರ್ವಲದ ಪೊಡರ್ಪು ಜೀಯೆನಿಸೆ ಮಾರ್ಪಡೆಯಂ ಕೊಲಲೊಲ್ದ ನಿಲ್ಲ ಮೆ-
ಚ್ಚುಗಲಿ ರಘುವೀರನಾತನ ಶರಾಸನವಿದ್ಯೆಗಿದಾವ ವಿಸ್ಮಯಂ ||೫೫||

ಗಱೆಯಿಂ ನೊೞ್ಚಿದರೆನೆ ಕೆಂ ।
ಗಱೆಯಂ ಬೆರ್ಬಟ್ಟೆ ರಾಜಸುತಸಂದೋಹಂ ॥
ಗಱೆ ಸೋಂಕದೆ ಬೆಳ್ಗೆರಳೆಗೆ ।
ಗಱೆ ಮೂಡಿದ ತಱದಿನೋಡಿ ಪೋದತ್ತಾಗಳ್ ||೫೬||

ಮೃಗರಾಜಂಗಗಿದೋಡುವಾನೆಗಡುಪಂ ಕೈಕೊಂಡು ಯೂಥಾಧಿಪಂ
ಮಗುಟ್ಚಿಂ ಸಿಂಪದ ಮೇಲೆ ಪಾಯ್ವ ತೆಱದಿಂ ಹೇಮಪ್ರಭಂ ರಾಜಸೂ-
ನುಗಳಂ ತನ್ನೊಡಗೂಡಿಕೊಂಡು ಕಱಿದಂ ಜ್ಯಾಘಾತಮೇಘಧ್ವನಿ-
ಸ್ಥಗಿತಾಶಾಮುಖನುನ್ಮುಖಾಂಶು ಚಪಳಂ ವೇಗಂ ಶರಾಸಾರಮಂ ||೫

ಆ ಸಮಯದೊಳ್,

ಇದು ಮಾಯಾಮಯಮೊಂದ ।
ಲ್ತಿದು ಕೋಟಾಕೋಟಿ ರಥಮೆನಲ್ವೈರಿಬಲಂ ॥
ಬೆದಱಿ ಮನೋಜವದಿಂ ಪರಿ ।
ದುದು ಪೂರ್ಣಮನೋರಥಂ ದಶರಥನಾ ||೫೮

ಅಂತು ಪರಿದು ನೆರೆದ ರಾಜನ್ಯಕಮಂ ಪಳ್ಳಿಯಂತೆ ಪಲಾಯನಶೀಲಮ್ಮಾ
ಹೇಮಪ್ರಭನಂ ಮುಟ್ಟೆವಂದು,

ಕಡುಕೆಯ್ದು ಗಂಡವಾತಂ ।
ನುಡಿದಿದಿರಾದಂತೆ ಗಂಡನಾಗೆನುತಂ ಕೆ- ॥
ಯ್ಮಡಗದೆ ದಶರಥನೆಚ್ಚಂ ।
ಸಿಡಿಲಳ್ಗಿಡಿಗಳವೊಲಂಬನಂಬಟ್ಟುವಿನಂ ||೫೯

ಅಂತೆಸುವುದುಂ,

ಉಡಿಯೆ ಪಟಿಯಿಗೆ ವರೂಥಂ ।
ಕೆಡೆಯೆ ಭುಜಾದಂಡವಜ್ರಮಯಕೋದಂಡಂ ॥
ಕಡಿಕಂಡಮಾಗಿ ಪಱಿಪಡೆ ।
ಪೊಡರ್ಪುಱ ಹೇಮಪ್ರಭಂ ಹತಪ್ರಭನಾದಂ ||೬೦

ಆ ಸಮಯದೊಳ್ದಶರಥನಭಯಘೋಷದೊಡನೆ ಜಯಪತಾಕೆ ನಭಮನಳ್ಕಿಱಿ
ಬೀರಸೇಸೆಯೊಡನೆ ಸ್ವಯಂವರಸೇಸೆಯುನಾಂತು ಪೌರಜನವುನದೊಡ
ಕೌತುಕಮಂಗಳಪುರಮಂ ಪುಗುವಾಗಳ್,

ಓಡಿಸಿದಾತನೀತನಿದಿರಾದ ವಿರೋಧಿಗಳಂ ವಿಳಾಸದಿಂ
ದೋಡಿಸಿದಾತನೀತನಸಮಾಯುಧನಂ ತನಗೊಲ್ದು ಮಾಲೆಯಂ
ಸೂಡಿಸಿದಾತನೀತನವನೀಶ್ವರಕನ್ನೆಯನೆಂದು ತೋಱಿ ಮಾ-
ತಾಡಿದುದೊಲ್ಪು ನೋಡಿದುದು ಪೌರವಧೂಜನಮಾದಿರಾಜನಂ ||೬

ಅಂತು ಪುರಮಂ ಪೊಕ್ಕರಮನೆಗೆ ವಿಜಯಂಗೆಯ್ವುದುಂ ದಶರಥನಪ್ಪುದನಱಿದು,

ನೋಡಿರೆ ಕನ್ನೆಯುಂ ದಶರಥಂಗನುರೂಪೆಯನೀವ ಸಯ್ಪು ಕ-
ಯ್ಗೂಡಿದುದೆಂದು ತನ್ನ ವಿಭವಕ್ಕನುರೂಪಮೆನಲ್ ವಿವಾಹಮಂ
ಮಾಡಿದನುತ್ಸವಕ್ಕೆ ಪೊಱಗೋರ್ವನುಮಿಲ್ಲೆನೆ ಕೊಟ್ಟು ಸಂತೊಸಂ
ಮಾದಿದನಾರೊಳಂ ಶುಭಮತಿ ಕ್ಷಿತಿನಾಥನಿದೇನುದಾತ್ತನೋ ॥೬೨॥

ಆ ವಿವಾಹಾನಂತರಂ ಕೈಕೆವೆರೆಸು ದಶರಥನಯೋಧ್ಯೆಗೆ ಜನಕಂ ಮಿಥಿಳೆಗೆ ಪೋಗಿ ಮುನ್ನಿನಂತೆ ಸುಖದಿನರಸು ಗೆಯ್ಯುತ್ತಿರ್ದು ದಶರಥನೊಂದು ದಿವಸಂ,

ಪರಿಮಿತಪರಿಜನ ಪರಿವೃತ ।
ನರಸಂ ಬಗೆದರಸಿ ತೇರನೆಸಗಿದ ಗೆಲವಂ ॥
ತರವೇೞೆ ವೃದ್ಧಕಂಚುಕಿ ।
ತರೆ ಬಂದಳ್ ಕೈಕೆ ಬಳಸಿ ಬರೆ ಸಹಚರಿಯರ್ ॥೬೩॥

ತರಳಕಟಾಕ್ಷಂ ಮೋಹನ ।
ಶರಮೆನೆ ಮೇಖಳೆಯ ಪಾರಿಹಾರ್ಯದ ಮಣಿನೇ- ॥
ವುರದ ಮಧುರಸ್ವನಂ ಮು ।
ಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್ ॥೬೪॥

ಅಂತು ಬಂದು,

ತನು ಸೋಂಕೆ ಸೋಂಕಿ ಸಿಂಹಾ ।
ಸನದೊಳ್ತನ್ನೊಡನೆ ಕೈಕೆ ಕುಳ್ಳಿರೆ ಪುಳಕಂ ॥
ತನುಗೆ ತಲೆದೋಱೆ ದಶರಥ ।
ಜನಪತಿ ಕೆಯ್ವಂದ ಕಲ್ಪತರುವಂ ಪೋಲ್ತಂ ॥೬೫॥

ಅಂತರಮಾಕೆಯ ಮುಖಾರನಿಂದಮಸಾನಂದವಿಸ್ಫಾರಿತವಿಳೋಚನನಾಗಿ ನೋಡಿ,

ಈಕೆ ರಥನೆಸಗೆ ವೈರಿಪ ।
ತಾಕಿನಿಯಂ ಗೆಲ್ದೆನೀಕೆ ಗೆಯ್ದುಪಕೃತಿಗಾಗಿ- ॥
ನೀಕೆಯ ಬೇಡಿದುದಂ ನಿ ।
ರ್ವ್ಯಾಕುಳಮೀಯದೊಡೆ ಮೆಚ್ಚು ಪೊಳ್ಳಾಗಿರದೇ ॥೬೬॥

ಎಂದು ಪರಿಜನದ ಮೊಗಮಂ ನೋಡಿ ಕೈಕೆಯಂ ನಿನ್ನ ಮೆಚ್ಚಿದುದಂ ಬೇಡಿಕೊಳ್ಳೆಂಬುದಂ,

ಏನಂ ಬೇಡುವೆನೆಂದ ।
ಜ್ಞಾನನೆ ಬಗೆ ಬೆದಱೆ ಬಗೆಗೆ ಬಂದೊಡಮೆಯನೊ- ॥

ಲ್ದಾನೆರೆದಾಗಡೆ ಕುಡಿಮೆಂ ।
ದಾನ್ನಪತಿಗೆ ಕೈಕೆ ಬೈಕೆಗೊಟ್ಟಳ್ ಮೆಚ್ಚಂ ॥೬೭

ಅನಂತರಂ ನಿಜಪ್ರಿಯನ ನಿಯಮದಿನರ್ಧಾಸನದಿನೆಟ್ಟು ಪೂಮಾಲೆಯುಮನವ ಪತಿಯ ನಯನಕುವಳಯ ಮಾಲೆಯುಮನಾಂತು ಬಟಿಲ್ಮುಡಿಯ ಚೆಲ್ವಿಂಗೆ ಮುಡಿಗವಿದ ಸೊಗಸೆಯುಂ, ಕೊರಲೊಳಿಕ್ಕಿದೆಕ್ಕಸರದ ಕೆಂಬಟ್ಟೆಯ ತೊಂಗಲನಂಗ ಜಂಗಮಲತೆಯ ತಳ ತೊಂಗಲಂತೆ ಪೊಳೆಯೆಯುಂ, ಮೇಲುದಱ ಸೆಱಗನುಱೆಸೆಱಗೆಯ್ದು ಪೊಱ ಪೊಣ್ಮು ಪರಭಾಗಶರೀರಕಾಂತಿ ಲಾವಣ್ಯರಸದ ತಂದಲನಗುಂದಲೆ ಮಾಡೆಯುಂ, ಘನನಿತಂಬವ ಬಳಸಿದ ನೂಲ ತೊಂಗಲ ಮಧುರಧ್ವನಿ ಮನುಜಮಕರಧ್ವಜನ ಮನಮನೊಡನೊಡ ಕರೆವಂತಡಿಗಡಿಗೆ ಪೊಣ್ಮೆಯುಂ ಮನೋಜ ರಾಜೀರಾಜನ ದೀಪಕಳಿಕೆಯಂತೆ ನಿಜವಾಸಕ್ಕೆ ಕೈ ಬಿಜಯಂಗೆಯ್ವುದುಂ,

ನೆನೆಯಿಸೆ ಪೂವಿನಂಬನಪರಾಜಿತೆ, ಕಣ್ಗೆ ಸುಮಿತ್ರೆ ಮೈತ್ರಿಯಂ
ಜನಿಯಿಸೆ, ಬೀಱೆ ಸುಪ್ರಭೆ ತನುಪ್ರಭೆಯಂ, ಗೆಲೆ ಕೈಕೆ ಕಂತುರಾ–
ಜನ ಜಯಲಕ್ಷ್ಮಿಯಂ ನಿಜಕುಲಾಂಗನೆಯರ್ಪೆಸರ್ವೆತ್ತ ನಾಲ್ವರಿಂ
ಜನಪನ ರಾಜಲೀಲೆ ಗೆಲೆವಂದುದು ಮನ್ಮಥರಾಜಲೀಲೆಯಂ ॥೬೮

ಅಂತು ದಶರಥನಿಷ್ಟವಿಷಯಸುಖಸಂತುಷ್ಟನಾಗಿರ್ಪುದುಂ,

ಅಪರಾಜಿತಾಮಹಾದೇ ।
ವಿ ಪತಿವ್ರತೆ ಶೀಲಗುಣಕಳಾಪರಿಣತಿಯಿಂ
ನೃಪನ ಮನಂಬಡೆದುಮ ಧ ।
ರ್ಮಪತ್ನಿಯೆನೆ ಪಡೆದಳಿರಮಹಿಷೀಪದಮಂ ॥೬೯

ಅಂತಾ ಕಾಂತೆ ದಶರಥಮನೋರಥಜನ್ಮಭೂಮಿಯೆನಿಸಿರ್ದೊಂದು ದಿವಸಂ,

ಋತುಮತಿ ದೇವಿ ರನ್ನದ ವಿತರ್ದಿಕೆಯೊಳ್ ನೆಲಸಿರ್ದು ಮಾಧವೀ
ತಲೆಯ ಬೆಡಂಗುವೆತ್ತ ಸಳೆಯಂ ಪಿಡಿದಂಗಜಮೋಹಪಾಶಮಂ
ರತಿ ಪಿಡಿದಂತೆ ದೇಸೆವಡೆದಳಡೆದಂತು ಮದಾಯಸಂಗಳಾ–
ಯತನಯನಂಗಳಾತ್ಮರುಚಿಮಂಜರಿಯಿಂ ಕುಸುಮೋಪಹಾರಮಂ ॥೭೦

ಕಮಳಾನನೆಗೆ ದರಸ್ಮಿತ ।
ಕುಮುದಾಕ್ಷಿಗೆ ಕರ್ಣಿಕಾರಕೋಮಳೆಗೆ ವಿಚಿ–
ತ್ರಮೆ ಪುಷ್ಪವತಿಗೆ ನೇತ್ರ ।
ಭ್ರಮರಾಕರ್ಷಣವಿಳಾಸಮೆನೆ ಸೊಗಯಿಸಿದಳ್ ॥೭೧॥

ಅನಂತರಂ ಕೌಶಲ್ಯೆ ಚತುರ್ಥಸ್ನಪನಮಾಂಗಲ್ಯಮನಪ್ಪಗಕೆಯ್ದು,

ಮಳಯಜದಂಪು ಮಲ್ಲಿಗೆಯ ಸೋರ್ಮುಡಿ ನಿಪ್ಪೊಸತಪ್ಪ ಮೌಕ್ತಿಕಂ–
ಗಳ ತೊಡವುಟ್ಟ ಪಟ್ಟಣೆಗೆ ದಂತಮರೀಚಿಗಳಿಂ ಬೆಳರ್ತ ಬಾ–
ಯ್ವಳಿಕಿನ ಪೆಣ್ಗೆ ಹಾಸಟಿಯೆನಿಪ್ಪ ವಿಳಾಸಮೀಯೆ ಪುಷ್ಪ ಕೋ–
ಮಳೆ ವಧು ಕೊಂಡ ಬೆಳಸದನಂ ಸೆಱೆಗೊಂಡುದನಂಗನಾಜ್ಞೆಯಿಂ ॥೭೨॥

ಅಂತು ಕೆಯ್ಗೆಯ್ದು,

ಕಡೆಗಣ್ಣಾಮಶರಂಗಳಂ ಕೆದಱೆ ಭೃಂಗಾಕೃಷ್ಟಿಯಂ ಮಾಡೆ ಸೋ–
ರ್ಮುಡಿ ಲಾವಣ್ಯರಸಪ್ರವಾಹಭರಮಂ ತುಂಗಸ್ತನಂ ತಾಗೆ ಕೇ–
ಸಡಿಗಳ್ ಕೆಸರಪಾಂಸುವಂ ಕೆದಱೆ ಬಂದಳ್ಪೋರ್ಲತಾಂದೋಲನಂ
ಹಡೆವನ್ನಂ ಮಣಿಪಾರಿಹಾರ್ಯರವದಿಂ ಕರ್ಣಾಮೃತಾಸಾರಮಂ ॥೭೩॥

ಅಂತು,

ಶಶಿಲೇಖೆ ಬಂದು ಪುಗುವಂ ।
ತೆ ಶರದ್ಘನಕೂಟ ಸದನಮಂ ಲೀಲೆಯಿನಾ
ಶಶಿವದನೆ ಬಂದು ಪೊಕ್ಕು ।
ಳ್ವಿಶಾಳ ಶಶಿಕಾಂತಶಯ್ಯಾಗೃಹಮಂ ॥೭೪॥

ಅಂತು ಪೊಕ್ಕು,

ಹಳಕಿನ ಪಱೆವಾವುಗೆಯಿಂ ।
ತೊಳಗುವ ಹಂಸೋಪಧಾನಕಲ್ಪಿತ ತಲ್ಪ
ಸ್ಥಳದಿಂ ರಂಜಿಪ ರನ್ನದ ।
ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್ ॥೭೫॥

ಆಗಳ್ ಗೃಹಾಧಿದೇವತೆಯಧರಮಣಿಯಂತೆ ಜಲಜಲಿಸುವ ಮಾಣಿಕದ ಸೊಡರ್ಗುಡಿಗಳುಣ, ಇಕ್ಷುಚಾಪಶರಮೋಕ್ಷಹೂಂಕಾರದಂತೆ ಶಿಳೀಮುಖಝುಂಕಾರ ಮುಕರಂಗಳೆನಿಸುವುಪಹಾರಕುಸುಮಂಗಳುಂ, ಸ್ಮರಗುರುಶಿಷ್ಯರಂತೆ ಸಂಮೋಹನ ಮಂತ್ರಮಂ ಪದಂಗುಟ್ಟುವ ಶುಕಸಾರಿಕೆಗಳುಂ, ಸಂಭೋಗರಸತರಂಗಿಣಿಯ ತೆರೆಯುಲಿಪದಂತೆ ಮಧುರಮಾದ ಪಾರಿವದುಲಿಪಂಗಳುಂ ಮದನಂ ಮೋಹನ ಮೂರ್ಛೆಯಂ ಬೀಱುವಂತೆ ದಂತದಂಡದಿಂ ಕಂಡರಿಸಿದಂಚೆವಿಂಡವೆಳಸಿ ಸುಱೆವ ಬಾಳಮರಾಳಂಗಳುಂ, ಪಚ್ಚೆಯ ಜಗಲಿಯ ಚೆಲ್ವಿಂಗೆ ಕಣ್ಣೆಱೆನಿಯಾದಂತೆ ತೆಱಂಬೊಳೆವ ದೀವದ ಹರಿಣಂಗಳ ಲೋಚನ ಪ್ರತಿಬಿಂಬಂಗಳುಂ, ಚಂದ್ರಾತಪಕ್ಕೆ ತನಿಗಂಪಾದಂತೆ ಚಂದ್ರಕಾಂತದ ಚಷಕಂಗಳೊಳ್ ಮಗಮಗಿಸುವ

ಚಂದನಕರ್ದಮಮುಂ, ಮಣಿಭಾಜನದೊಳ್ ಮನಂಗೊಳಿಸೆ ಕುಸುಮ ಶರಕೃಶಾನುವಿಸುರಿಯ ಪೊಗೆಯುಮೆಂಬಂತೆ ಮೇಗೆ ನೆಗೆವ ಮಱಿದುಂಬಿಯ ಬಂಬಲಿಂದೆಸೆವ ಕುಂಕುಮ ಪಂಕಮುಂ ಕಂದರ್ಪಘಟಸರ್ಪದಂತೆ ಧೂಪಘಟದಿನೊಗೆವಗುರುವಿನ ಪೊಗೆಯುಮತಿರಮಣೀಯಮಾಗೆ

ಪಳಿಕಿನ ಶುಕ್ತಿಕೆಯೊಳ್ಕ।
ಣ್ಗೊಳಿಸುವ ಕತ್ತುರಿಯ ಕರ್ದಮಂ ಹಿಮಕರಮಂ- ॥
ಡಳದ ಕಱಿಯಂತೆ ನಯನೋ।
ತ್ಪಳಮನಲರ್ಚಿದುದು ಸೌಧಶಯ್ಯಾಗೃಹದೊಳ್ ॥೭೬।

ಉಗಿಬಿಗಿ ಮಾಡಿ ಧೂಪದ ಕವಿಲ್ವೊಗೆಯೊಳ್ ತನಿಗಂಪನುಂಡು ತ-
ಣ್ಣಗೆ ತಣಿದೊಯ್ಯನೊಯ್ಯನಿದಿರುಂ ಬಱಿಯಂ ನಡೆಯುತ್ತುಮಿರ್ಪ ತುಂ-
ಬಿಗಳಱಿಪಂ ಮನಕ್ಕೆಡರಲಾರ್ತುವು ತದ್ಗೃಹದೇವತಾಜನಂ
ಸೊಗಯಿಸುವಿಂದ್ರನೀಲಮಣಿಯಿಂ ತಿಱಿಕಲ್ಗಳನಾಡುವಂತೆವೋಲ್ ॥೭೭॥

ಅಂತು ಸೊಗಯಿಸುವ ಸೆಜ್ಜೆವನೆಯೊಳಪರಾಜಿತಾಮಹಾದೇವಿ ಸರೋವರದೊಳಿರ್ಪ ಜಲದೇವತೆಯಂತೆ ವಿಳಾಸ ತಲ್ಪತಳದೊಳಿರ್ಪುದುಮಾಗಳ್ ಚರಿತಗರ್ಭಾಧಾನಮಂಗಳ-ವಿಧಾನಂ ದಶರಥಮಹೀನಾಥಂ ನಿಜನಿರತಿಶಯರೂಪಂ ದರ್ಪಕನರೂಪದರ್ಪಮನದಿರ್ಪೆ ಭೂಷಣಮಯೂಖಲೇಖೆ ಚಿತ್ರ ಭಿತ್ತಿಗೆ ನಿರ್ವಾಣಲೇಖೆಯೆನಿಸೆ ಚರಣನಖಕಿರಣದಿ ನುಪಹಾರ ಕುಸುಮಂಗಳಂ ದ್ವಿಗುಣಿಸುತ್ತಮೊಳಗಂ ಪುಗುವುದುಂ,

ಮದನಂ ಜೇವೊಡೆಗೆಯ್ದವೋಲ್ಕನಕಕಾಂಚೀನಿಸ್ವನಂ ಪೊಣ್ಮೆ ಮೇ-
ಲುದನೊಟ್ಟಯ್ಸಿ ಕುಚಂ ಕದಕ್ಕದಿಸೆ ಮುಗ್ಧಾಳೋಕನಂ ಲಜ್ಜೆಯಂ
ಪದೆಪಂ ಮುಂದಿಡೆ ಮೇರೆದಪ್ಪೆ ನಿಜಲಾವಣ್ಯಾರ್ಣವಂ ಭೂಭುಜಂ-
ಗಿದಿರೆಟ್ಟಿಳ್ಪತಿ ಪುಷ್ಪಚಾಪಚತುರಂಗಂ ಮಿಾಱಿ ಮೇಲೇಟ್ಟಿವೋಲ್ ॥೭೮॥

ಆಗಳರಸನರಸಿಯ ಮನಃಕುಮುದಿನಿಯುಂ ಚತುರಪರಿಹಾಸವಚನ-ಚಂದ್ರಿಕೆಯಿಂದಲರ್ಚೆ,

ಮರಕತಮಣಿಮುದ್ರಿಕೆಯಿಂ।
ನರೇಂದ್ರನಂಗನೆಯ ಕೋಮಳಾಂಗುಳಿಯನಳಂ- ॥
ಕರಿಸುವ ನೆವದಿಂ ಮೆಲ್ಲನೆ।
ಬರೆ ತೆಗೆದುತ್ಸಂಗತಲ್ಪಮಂ ದಯೆಗೆಯ್ದಂ ॥೭೯॥

ಅನಂತರಂ,

ಓರೊರ್ವರ ತನುಸೋಂಕಿಂ ।
ದೋರೊರ್ವರ ಮೆಯ್ಯೊಳೊಗೆಯೆ ರೋಮಾಂಚನ ಶೃಂ - ॥
ಗಾರಸುಧಾರಸವಾರಿಧಿ ।
ತೀರಲತಾದ್ರುಮಮೊಳೊಗೆದ ಕೊನರೆಂಬಿನೆಗಂ ॥೮೦॥

ಅಂತು ಸೂಱ್ಗೆವಂದು ನಿದ್ರಾವಸರನಿಮೀಳಿತಲೋಚನೆ,

ದಾನದ್ವಿರದನಮಂ ಪಂ ।
ಚಾನನಮಂ ಚಂಡಭಾನುವಂ ಚಂದ್ರಮನಂ ॥
ಮಾನಿನಿ ನಿಶಾವಸಾನದೊ ।
ಳೀ ನಾಲ್ಕುಂ ಶುಭದಮಪ್ಪ ಕನಸಂ ಕಂಡಳ್ ॥೮೧॥

ಆ ಸಮಯದೊಳ್ ನಿಜರಾಜಸದನಸರಸೀಸರೋಜರಜಮನೊಟ್ಟಿ ಕೊಂಡು ಸುೞಿವ ಸುಪ್ರಭಾತಪ್ರಭಂಜನನುಂ, ಮದನಮದಕುಂಜರದ ಮಣಿಯೋಱಂ ಮಿಱುವ ರಾಜಹಂಸಕೂಜಿತಮುಂ, ದಿನಮುಖದರ್ಶನಾತುರತೆಯಿಂ ಬರ್ಪ ಸಂಧ್ಯಾದೇವತೆಯ ನೂಪುರನಿನದಮಂ ನೆನೆಯಿಸುವ ಚಂಚರೀಕದಿಂಚರಮುಮುದಯನಗ ನಿಕುಂಜಮನೇಱುವ ರವಿಯ ರಥಚೀತ್ಕಾರಮಂ ಚಿಲ್ಲಾಡುವ ರಥಾಂಗರವಮುಂ, ನೆಯ್ದಿಲ್ಗೊಳದ ಸೊಬಗು ಸೊಪ್ಪಾಗೆ ಕಮಳಿನಿಗೆ ಪುಟ್ಟಿದಟ್ಟಹಾಸಮನುದಾಸೀನಂ ಮಾಟ್ಪಿ ಕೊಳರ್ವಕ್ಕಿಯ ಕಳಧ್ವಾನಮುಮನುಕೂಳಮಾಗೆ,

ಮಂಗಳಪಾಠಕರವಮುಂ ।
ಮಂಗಳಗಾಯಿನಿಯ ಗೀತರವಮುಂ ಪರಿಚ- ॥
ರ್ಯಾಂಗನೆಯಯರ ನೂಪುರದ ರ ।
ವಂಗಳುಮಿತ್ತುವು ಸುಖಪ್ರಬೋಧಮನಾಗಳ್ ॥೮೨॥

ಅಂತುಪ್ಪವಡಿಸಿ,

ವ್ಯವಹಾರಮಂಗಳಾಚಾ ।
ರವೆಲ್ಲಮಂ ತೀರ್ಚಿ ಮುಖ್ಯಮಾಂಗಲ್ಯಮನಾ ॥
ಯುವತಿ ಜಿನಪೂಜೆಯಂ ಮಾ ।
ಡಿ ವಿಚಿತ್ರಮೆನಿಪ್ಪ ಚಿತ್ರಶಾಲೆಗೆ ಬಂದಳ್ ॥೮೩॥

ಅಂತು ಬಂದು ಮರಕತಮಣಿವೇದಿಕೆಯ ನಡುವಣ ಚಿಂಬೊನ್ನಪಟ್ಟವಣೆಯ ಮೇಲೆ ರೋಹಣನಗನಿತಂಬದೊಳ್ಪೊಳೆವ ರತ್ನಮಾಲೆಯಂತೆ ನಿಜಶರೀರಕಾಂತಿ ಪಸರಿಸೆ, ಕುಳ್ಳಿರ್ದುದುಮಾಗಳುಭಯಪಾರ್ಶ್ವದೊಳಂ ಚಾಮರಗ್ರಾಹಿಣಿಯರ ಕಾಂಕಣೆರಂಗಳಿಂದೆಸೆವ

ವರಲಕ್ಷ್ಮಿಯುಂ ನೆನೆಯಿಸೆ, ಕುಂಚಪಡಪದ ಡವಕೆಯ ಪರಿಚಾರಿಕೆಯರ್ ಅಸಮ
ವಶೀಕರಣಮಂತ್ರಾಧಿದೇವತೆಯ ಪರಿವಾರದೇವಿಯರೆನಿಸೆ,

ಕರಕಿಸಲಯ ರುಚಿಯಿಂದಂ ।
ಪರಭಾಗಂಬಡೆದು ರಾಗಮಂ ಬೀಱುವಿನಂ ॥
ಚರಣಮಣಿವಳಯಮಣಿನೂ ।
ಪುರಮಂ ನೃಪವಧುಗೆ ತೊಡಿಸಿದಳ್ ಮತ್ತೊರ್ವಳ್ ||೮೪

ಗೆಲೆವಂದುವಲರ್ದ ಕನ್ನೆ ।
ಯ್ದಿಲ ಪೂಗಳ ಚೆಲ್ವನೀಗಳೆನೆ ಕೆನ್ನೆಗಳಾ ॥
ದಲೆಗೆಯ್ದಿದ ಚೆನ್ನೆಯ ಕ ।
ಣ್ಣಲರೊಳ್ಕಾಡಿಗೆಯನೆರ್ಚಿದಳ್ ಮತ್ತೊರ್ವಳ್ ||೮೫

ಅಂಬುಜದ ಬಂಡನುಂಬೆಳ ।
ದುಂಬಿಯನಜನಿಸೆ ಮನೋಜಗಜಗಮನೆಯ ವ- ॥
ಕ್ತ್ರಾಂಬುಜದೊಳ್ಮತ್ತೊರ್ವಳ್ ।
ಬಿಂಬಾಧರೆ ಮೃಗಮದಾಂಬುತಿಳಕಮನಿಟ್ಟಳ್ ||೮೬

ತೊಳಗುವವತಂಸಮುಕ್ತಾ ।
ಫಳರುಚಿಯೊಳ್ ಕೆಲದ ಕನ್ನೆಯರ ನಗೆಗಣ್ಗಳ್ ॥
ಪೊಳೆದುವು ಪೊಸವೆಳ್ದಿಂಗಳ ।
ಬಳಸಿಂಗೊಳಗಾದ ಚಳಚಕೋರಂಗಳವೋಲ್ ||೮೭|

ಒಂದೆಲೆವೋದಶೋಕೆಯೆರಡಳ್ಗುಡಿ ಬಾಳತಮಾಳಷಂಡದೊಳ್
ಮಂದಸಮೀರನಿಂ ಪೊಳೆವವೋಲ್ತಳಮುಂ ನಳಿತೋಳಿನಂದಮುಂ
ಮುದಿಡೆ ಪಿಕ್ಕಿ ಪಿಕ್ಕಿ ಪುಡಿಗತ್ತುರಿಯಂ ತಳಿದಳ್ಪೆಱಳ್ ಲತಾ-
ಸೌಂದರಿ ಕಾಮಪಾಶದವೊಲಿರ್ದ ಲತಾಂಗಿಯ ಕೇಶಪಾಶದೊಳ್ ||೮೮|

ಅಂತು ಕಯ್ಗಯ್ದು ಮಣಿದಪ್ಪುದುಮಾ ಪ್ರಸ್ತಾವದೊಳ್,

ಚಿತ್ರಲಯಪ್ರಗಲ್ಭಪಯವಲ್ಗನದಿಂ ಮಣಿಕುಂಡಳಾಂಶುಗಳ್
ಚಿತ್ರಿಸೆ ಗಂಡಭಿತ್ತಿಯನುರಃಸ್ಥಳರಂಗದೊಳಂಗಹಾರಮಂ
ಸೂತ್ರಿಸೆ ತಾರಹಾರರುಚಿಮಂಜರಿಗಳ್ ನಿಜರೂಪಮಂಗನಾ-
ನೇತ್ರವಿಕಾಸಮಂ ಪಡೆಯೆ ಪೊಕ್ಕನಿಳಾಧಿಪನಾ ನಿವಾಸಮಂ ||೮೯||

ಅಂತು ಪೊಕ್ಕು ಪರಿಮಿತಪರಿಜನಂ ದಶರಥಮಹೀನಾಯಕನುಚ್ಚೈಃಶ್ರವದಿನಿೞಿವ
ನಿಳಿಂಪನಾಯಕನಂತೆ ವಾಹನದಿನಿೞಿದು ಬಂದು ನಿಜಸತಿಯಂಕಮಂ ಸೋಂಕಿ ಕುಳ್ಳಿರ್ದುದುಮಂ.

ಅರಸಿ ಸುಲಿಪಲ್ಲ ಪಸರಿಪ ।
ಮರೀಚಿ ಮನಸಿಜನ ಶರಮಿದೆನಲಮರ್ದಿನ ಬ- ॥
ಲ್ಸರಿ ಸುರಿದಪುದೆನಲವನೀ ।
ಶ್ವರಂಗಿರುಳ್ತನ್ನ ಕಂಡ ಕನಸಂ ಪೇಳ್ದಳ್ ॥೯೦॥

ಆಗಳವನೀಪತಿ ನಿಜವಲ್ಲಭೆಯ ಶುಭಸ್ವಪ್ನದರ್ಶನಕ್ಕೆ ಹರ್ಷಚಿತ್ತನಾಗಿ,

ಸತತಂ ದಾನಿ ಮದೇಭದಿಂ ಸಕಳಭೂಭೃನ್ಮಸ್ತಕನ್ಯಸ್ತಪಾ-
ದತಳಂ ಕೇಸರಿಯಿಂ ಪ್ರತಾಪನಿಳಯಂ ತಿಗ್ಮಾಂಶುವಿಂ ಸತ್ಕಳಾ-
ಚತುರಂ ಚಂದ್ರನಿನಾದಪಂ ನಿನಗೆ ನೇತ್ರಾನಂದನಂ ನಂದನಂ
ಸತಿ ನೀನಲ್ಲದಲೆನ್ನಮಪ್ಪ ಕನಸಂ ಕಾಣ್ಬಂತುಮನ್ಯೋಂತರಾರ್ ॥೯೧॥

ಎಂದು ತತ್ಫಳನಿರೂಪಣಂ ಮಾಳ್ಪುದುಂ,

ಶ್ರುತಿಪಥಮಂ ಸಾರ್ತರೆ ಘನ ।
ರುತಿ ರಾಗಮನಪ್ಪುಕೆಯ್ವವೋಲ್ ಸೋಗೆ ನವಿಲ್ ॥
ಸುತಲಾಭವಾರ್ತೆಯಂ ಕೇ ।
ಳ್ದು ತನೂದರಿ ರಾಗರಸತರಂಗಿತೆಯಾದಳ್ ॥೯೨॥

ಅನಂತರಮವನೀಪತಿ ಸತಿಗೆ ಸಮಯೋಚಿತ ಪರಿಚರ್ಯಾಚತುರೆಯರಂ ನಿಯೋಜಿಸಿ ಬಿಜಯಂ ಗೆಯ್ವುದುಂ ಕತಿಪಯದಿವಸಂಗಳ್ ನಿರತಿಶಯಸುಖರೂಪಂಗಳಾಗಿ ಪೋಗೆ,

ಎಳವಸಿಱುಸೊಲ್ಲತಿಯ ಮೊಗಂ ।
ಬೆಳರ್ತುದನ್ವರ್ಥಮಾಯ್ತು ಚಂದ್ರಾನನೆಯಂ- ॥
ದೆಲೆ ಪೊಗೞೆ ಮಾತು ನೀಳ್ದುವು ।
ಲುಳಿತಾಳಕಮಾಲೆ ಸುಯ್ಗೆ ಸಾರ್ವಳಿಗಳವೋಲ್ ॥೯೩॥

ಮಕರಾಂಕರದ್ವಿಪಮದಘ ।
ಟ್ಟಿಕೆಯೆನಿಸಿ ಕಪೋಳಮೂಲಮಂ ಮುಟ್ಟಿದುವಾ ॥
ಚಕಿತಾಕ್ಷಿಯ ಹರಿನೀಳಾ ।
ಳಕಂಗಳಾನನಸರೋಜಿನೀಮಧುಪಂಗಳ್ ॥೯೪॥

ತೋರಮೊಲೆಗಳ ಮೊಗಂಗಳ್ ರಾರಾಜಿಸ
ಕರ್ಪುವೆತ್ತು ಮೋಹನಧೂಮೋ- ॥
ದ್ಗಾರಿಗಳಂತ ಕಾಂಚನಭೃಂ ।
ಗಾರಿಗಳಂ ಪೋಲ್ತುವರಸಿಗಂದೆಳವಸಿಱೊಳ್ ॥೯೫॥

ಬಟ್ಟಿದುವೆನಿಪ್ಪ ಮೊಲೆಗಳ ।
ತೊಟ್ಟು ಕಱಂಗುವುದುಮೊಡನೆ ಸರ್ವಸ್ವಮಿಮಂ ॥
ಕೊಟ್ಟು ಕಱಂಗಿದರಹಿತ ।
ರ್ಕೆಟ್ಟುವು ವಳಿಯೊಡನೆ ವೈರಿವಂಶಾವಳಿಗಳ್ ॥೯೬

ಉದರದೊಳಿರ್ಪ ಬಾಲಕನೇಷಕಳಾನಿಧಿ ತಪ್ಪದಪ್ಪನ -
ಲ್ಲದೊಡೊಗೆದೊಂದೆ ನಾಳದೊಳೆ ಹೇಮಸರೋಜಮಮಳ್ಗಳಾಗಿ ಪು-
ಟ್ಟಿರುವವಱಿರೊಳ್ ಮದಾಳಿ ನೆಲಸಿರ್ದಪುವೆಂತೆನೆ ನೀಳ್ದ ಬಾಸೆ ಬೀ-
ಗಿದ ಮೊಲೆ ನೀಳಚೂಚುಕಮಿವೇಂ ಬಗೆಗೊಂಡುವೊ ಲೋಲನೇತ್ರೆಯಾ ॥೯೭

ಉದರದೊಳಿರ್ದ ತನೂಭವ ।
ನುದಾರತಾಗುಣದ ಪೆರ್ಮೆಯಂ ಪೇಟ್ವವೊಲಾ ॥
ಸುದತಿಗೆ ನಿರಂತರಂ ಪಾ ।
ತ್ರದಾನಮಂ ಮಾಟ್ಪ ಬಯಕೆ ಪುಟ್ಟಿತ್ತಾಗಳ್ ॥೯೮

ಉಭಯಶ್ರೇಣಿಯ ಖಚರ ।
ಪ್ರಭುಗಳ ಸಿಂಹಾಸನಂಗಳೊಳ್ಕುಳ್ಳಿರಲಂ- ॥
ದಿಭಗಮನೆ ಬಯಸಿದಳ್ಸಾ ।
ರ್ವಭೌಮನೀ ತನಯನೆಂಬುದಂ ಸೂಚಿಪವೋಲ್ ॥೯೯

ಪರಭೂಪಾಳದ್ವೀಪಾಂ ।
ತರಾಳ ಕೇಳೀವನಂಗಳಂ ಕಿಱ್ತಂ ತ- ॥
ತ್ಪುರಮನುಪಿಪುವುನೀಕ್ಷಿಸ ।
ಲರವಿಂದಾನನೆಗೆ ಬಯಕೆಯಾಯ್ತೆಳವಸಿಱಿರೊಳ್ ॥೧೦೦॥

ಕುಲಕುಧರಮನೇಱಿ ದಿಶಾ ।
ವಲೋಕನಂ ಮಾಡುವಖಿಳ ಕುಳವಾಹಿನಿಯೊಳ್ ॥
ಜಲಕೇಳಿಯನಾಡುವ ಬಯ ।
ಕೆ ಲತಾಕೋಮಳೆಗೆ ಪುಟ್ಟಿದತ್ತೆ ಳವಸಿಱಿರೊಳ್ ॥೧೦೧॥

ಬಸಿಱ ಮಗಂಗಿಲ್ಲಿವರಂ ।
ವಸುಧಾತಳಮೇಕಭೋಗ್ಯಮೆಂದಱಿಪುವವೋಲ್ ॥
ವಸುಧೆಯ ನಾಲ್ಕುಂ ಕಡೆಯೆಡೆ ।
ಯ ಸುರಭಿಮೃತ್ತಿಕೆಯನಱ್ರ್ತಿಯಿಂ ಸೇವಿಸುವಳ್ ॥೧೦೨॥

ಅವನೀಶ್ವ ರನಾಗಳ್ ಪುಂ ।
ಸವನಂ ಮೊದಲಾದ ಸಕಳಮಾಂಗಲ್ಯಮಹೋ- ॥
ತ್ಸವಮಂ ಮೆಱೆದಂ ತಣಿವ ।
ನ್ನವಿತ್ತು ವಸುಮತಿಗೆ ವಸ್ತ್ರಭೂಷಾವಳಿಯಂ ॥೧೦೩॥

ಅಂತು ನೆಗಟ್ದ ಮಹೋತ್ಸವಂಗಳೊಡನೆ ಗರ್ಭಮುಂ ಬಂಧುಜನ ಹರ್ಷಗರ್ಭಮುಂ ಪರಿಪೂರ್ಣಮಾಗೆ,

ಮರಕತರಂಗದೊಳ್ ರಮಣಿ ತೀವಿದ ಗರ್ಭದ ಬಿಣ್ಪಿನಿಂ ನಯಂ-
ಬೆರಸೆಡೆಯಾಡುವಾಗಳಡಿಯೂಡಿದ ಮೆಲ್ಲಡಿವಜ್ಜೆಗಳ್ ಮನೋ-
ಹರಮೆನಿಸಿರ್ದುವೀ ಸತಿಯ ಗರ್ಭದೊಳಿರ್ದ ತನೂಜನಾದಪಂ
ವರನೆನಗೆಂದಿಳಾವಧುಗೆ ಪಲ್ಲವಿಸಿತ್ತನುರಾಗಮೆಂಬಿನಂ ॥೧೦೪॥

ಹಾರಮನಿಕ್ಕಿ ಮಿಕ್ಕ ಕನಕಾಭರಣಂಗಳ ಬಿಣ್ಪನೇನುಮಂ
ಸೈರಿಸದಿರ್ಪುದಪ್ಪುದೆ ವಲಂ ಕನಕಾದ್ರಿಯ ಬಿಣ್ಪನಪ್ಪೊಡಂ
ಸೈರಿಸದರ್ಭಕಂ ಬಳಿಯೆ ಗರ್ಭಸರೋಜದೊಳಾ ವಿನೀಳನೀ-
ಲೇರುಹನೇತ್ರೆ ತತ್ಕನಕಮಾತ್ರದ ಬಿಣ್ಪನದೇಕೆ ಸೈರಿಪಳ್ ॥೧೦೫॥

ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತಮಂಗಳ ಪ್ರಸಾ-
ಧನುಮೆಸೆದತ್ತು ಕಪ್ಪುರದ ಕಂಠಿಕೆ ಬಣ್ಣದ ಸಣ್ಣ ಮಾಲೆ ತಂ-
ಗಿನ ತಿರುಳೋಲೆ ತಾವರೆಯ ನೂಲುಡೆನೂಲ್ ಸಿರಿಕಂಡದಣ್ಪು ಮು-
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ ॥೧೦೬॥

ಘನಕುಚಿ ಮೇಳದಂಗಸೆಯ ಮೇಲೆ ಮಲಂಗಿ ಸರೋಜಪತ್ರವೀ-
ಜನಪವನಂ ವಿಕಾಸಮನೊಡರ್ಚೆ ಮನಕ್ಕೆ ಸುಧಾಪ್ರವಾಹಮೆಂ-
ಬಿನಮೆರಡುಂ ಕೆಲಂಬಿಡಿದು ಬಾಜಿಪ ವಾದ್ಯದಿನೋಜೆವೆತ್ತ ಗಾ-
ಯನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳೊರ್ಮೆಯುಂ ॥೧೦೭॥

ಸೋರ್ಮುಡಿ ಮಾಲೆಯಿಂ ಕದಪುಗಳ್ ಮಲಯೋದ್ಭವಪತ್ರಭಂಗದಿಂ
ಪೆರ್ಮೊಲೆ ಹಾರದಿಂದೆಸೆಯೆ ಬಂಬಲ ಬಾಡಿದ ರೂಪು ಗಾಡಿಯಂ
ನೂರ್ಮಡಿ ಮಾಡೆ ಮೇಳದವಳಂ ಸತಿ ನಿರ್ಭರಗರ್ಭಭಾರದಿಂ
ನೆರ್ಮೆ ನಿಮಿರ್ಚುವಳ್ಪುರುಳಿಯೊಳ್ಪರಿಹಾಸವಚೋವಿಳಾಸಮಂ ॥೧೦೮॥

ಅಂತು ವಿವಿಧವಿಳಾಸಂಗಳಿಂ ದಿವಸಂಗಳಭಿಲಷಿತಫಲಪ್ರಸವಂಗಳಾಗಿ ಸುಖಪ್ರಸವಸಮಯದೊಳ್,

ಉರ್ವರೆ ಮಣಿಪರ್ವತಮಂ ।
ಶಾರ್ವರಿ ಪರಿಪೂರ್ಣ ಚಂದ್ರನಂ ಪಡೆವಂತಂ- ॥
ತರ್ವತ್ತಿ ಸರ್ವಲಕ್ಷಣ ।
ಸರ್ವಗುಣಾನ್ವಿತನೆನಿಪ್ಪ ಸುತನಂ ಪಡೆದಳ್ ॥೧೦೯॥

ನೀರಜಮಾದುದು ಮೇದಿನಿ ।
ನೀರಜಮಿತ್ರಾತನ ಚರಿತ್ರಮೆಂದಱಿಪುವವೋಲ್
ನೀರಚ್ಛಮಾದುರದೀ ಪಸು ।
ಧಾರಮಣಂ ಸ್ವಚ್ಛಹೃದಯನೆಂದಱಿಪುವವೋಲ್ ॥೧೧೦॥

ಉದಯಿಸಿದ ತನೂಜನ ತೇ ।
ಜದೊಳೆಂತುಂ ಮಳಿನಭಾವಲಾಂಛನಮಿಲ್ಲೆಂ
ಬುದನಱಿಪುವಂತೆ ಪೊಗೆಯಿ ।
ಲ್ಲದೆ ಪೊಣ್ಮಿತ್ತಗ್ನಿ ದಕ್ಷಿಣಾವರ್ತಮುಖಂ ॥೧೧೧॥

ಈ ತನಯನೆಸಕಮುತ್ಸವ ।
ಹೇತು ಜಗತ್ತಾಪಶಮಮುಮೆಂದಱಿಪುವವೋಲ್
ಶೀತಳಸಮೀರನೆಸಗಿ ।
ತ್ತಾತನ ಜಸದಂತೆ ವಿಶದಮಾಯ್ತಾಕಾಶಂ ॥೧೧೨॥

ಎಳವಿಸಿಲುಂ ಬೆಳ್ದಿಂಗಳು ।
ಮೆಳಸಿದುವೆನೆ ರಮ್ಯಹರ್ಮ್ಯಶಿಖರಸ್ಥಳಿಯೊಳ್
ಪೊಳೆದುವು ಪೊಂಗಳಸಂಗಳ ।
ಪೊಳೆಪುಂ ಕೇತನದುಕೂಳಚೇಳಾಂಚಳಮುಂ ॥೧೧೩॥

ಅವಿರಳಮೆನೆ ಪೂವಲಿ ಪುದಿ ।
ದುವು ಗುಡಿಯುಂ ತೋರಣಂಗಳುಂ ತಱ್ತುವು ಬ
ಕ್ಕವಣಂ ಬಾಜಿಸಿದುವು ಬೀ ।
ದಿವೀದಿಯೊಳ್ ಕೇರಿಕೇರಿಯೊಳ್ಮನೆಮನೆಯೊಳ್ ॥೧೧೪॥

ರಾಗದ ಬಳ್ಳವಳ್ಳಿಯೆನೆ ರನ್ನದ ತೋರಣಮಾಲೆ ಕೂಡೆ ಚೆ
ಲ್ವೆಗಿರೆ ದಾನಮೇಘರುತಿಯಂತಿರೆ ಮಂಗಳ ತೂರ್ಯನಾದಮಾ
ಶಗಜಕರ್ಣಪೂರರಮೆನೆ ರಾಗರಸಾಮೃತವಾರ್ಧಿ ಘೋಷವಂ
ತಾಗಿರೆ ಪುಣ್ಯಪಾತಕರವಮ ಪೊಸತಾದುದು ರಾಜಮಂದಿರಂ ॥೧೧೫॥

ದೇಸೆ ವೀಳಾಸಮಂ ಪಡೆಯೆ ಗೊಂದಣ ಮೆಕ್ಕಳಮಾಗಲಾ ನೃಪಾ-
ವಾಸದೊಳಾಡಿಪತ್ತ್ರಸೆಯೆ ಪಾಣಿತಳಂ ಪಡೆವಂತೆ ಕುಂಕುಮ-
ಸ್ಥಾಸಕಮಂ ಕುರುಳ್ಕೆದಱುವಂತೆ ತಮಾಳನವಪ್ರವಾಳಮಂ
ಕೇಸಡಿ ಪಾಸುವಂತೆ ತಳಿರಂ ನಗೆಗಣ್ಣ್ಳಗಳ್ವಂತೆ ನೆಯ್ದಿಲಂ ॥೧೧೬॥

ಉದಯಿಪುದುಂ ತ್ರಿಳೋಕತಿಳಕಂ ಗೃಹದೇವತೆಯರ್ಪ್ರಸನ್ನವೇ-
ಷದಿನೊಸೆದಾಡುವಂತ ಮಣಿಭಿತ್ತಿಗಳಂ ಮಣಿಕುಟ್ಟಿಮಂಗಳಂ
ಪುದಿದು ಮನಕ್ಕೆ ಸಂತೊಷಮನಿತ್ತುವು ನೃತ್ಯರ ಸಾಮ್ಯತಪ್ರವಾ-
ಹದೊಳವಗಾಹಮಿರ್ದ ಗಣಿಕಾಪ್ರಜಯಪ್ರತಿಬಿಂಬಲಕ್ಷ್ಮಿಗಳ್ ॥೧೧೭॥

ಆ ಪ್ರಸ್ತಾವದೊಳ್ ದಶರಥಮಹೀನಾಥಂ ಸುಖಮುಖನಿರೀಕ್ಷಣಾನುಭವದಿಂ ಪಾರಿಜಾತಂ ಕೋರಕಿತಮಾದಂತೆ ಪುಳಕಿತಶರೀರನಾಗಿ,

ಜಿನಪೂಜೋತ್ಸವಮಂ ಸುರೇಂದ್ರನಳವಲ್ಲಿಂಬನ್ನೆಗಂ ಮಾಡಿ ಬೇ-
ಡ್ಪಿನಿತಂ ಬೇಡ್ಪವರ್ಗಿತ್ತು ಕಲ್ಪಕುಜಮಂ ಕೀೞ್ಮಾಡಿ ಸನ್ಮಾನಭಾ-
ಜನಮಂ ಸಜ್ಜನಮಂ ವಿಚಿತ್ರವಸನಸ್ರಗ್ಭೂಷಣಾಲೇಪದಿಂ
ಜನಪಂ ಮನ್ನಣೆಮಾಡಿ ತತ್ತನಯಜನ್ಮೋತ್ಸಾಹಮಂ ಮಾಡಿದಂ ॥೧೧೮॥

ದಿವಿಜಕುಜಂಗಳಾರಮೆಗಳಾದವು ಸಿದ್ಧರಸಂ ತಟಾಕಮಾ-
ದುವು ಸುರಧೇನು ಪಿಂಡಱಿಯದೊಂಡೆಯೊಳ್ನೆರೆದಿರ್ದುವೆಂಬಿನಂ
ಭುವನಜನಕ್ಕೆ ಬಾಂಧವಜನಕ್ಕಖಿಳಾರ್ಥಿಜನಕ್ಕೆ ಹರ್ಷದಿಂ-
ದವರಿವರೆನ್ನದಿತ್ತು ಮೆಱೆದಂ ಜನಪಂ ಸುತಜಾತಕರ್ಮಮಂ ॥೧೧೯॥

ಅಂತು ಜಾತಕರ್ಮೋತ್ಸವಮಂ ಮಾಡಿ ದಶಮದಿನದೊಳ್ ಪದ್ಮಾಳಂಕೃತ ವಿಶಾಳವಕ್ಷಃಸ್ಥಳನಪ್ಪುದಱಿಂ ಪದ್ಮನುಂ ಸಕಳಶುಭಲಕ್ಷಣಾಭಿರಾಮನಪ್ಪುದಱಿಂ ರಾಮಚಂದ್ರನು -ಮೆಂದಿವು ಮೊದಲಾಗೆ ಪೆಱವುಮನ್ವರ್ಥನಾಮಂಗಳನಿಟ್ಟು ಕತಿಪಯದಿನದೊಳ್,

ರವಿಕಿರಣಂ ಸೋಂಕದೆ ಹಾ ।
ಸವಿಳಾಸಂಬಡೆದ ಕಮಳಮಂ ನೆನೆಯಿಸುಗುಂ ॥
ನೆವಮಿಲ್ಲದ ನಗೆಯಿಂದೊಪ್ಪುವಾಸ್ಯಮು ।
ತ್ತಾನಶಯ್ಯೆಯೊಳ್ ಬಾಳಕನಾ ॥೧೨೦॥

ನಿರಪೇಕ್ಷಕನೆನಿಸಿಯುಮೇಂ ಪರಿದತ್ತಲೆ
ಪರಿವ ಸುತನ ಪಣ್ಬೊಳಪಿಂದಂ
ತರೆ ಮಸಗಿದುದರಸಿಯ ಮೋಹರಸಂ
ಚಂದ್ರಿಕೆಯಿನಮೃತಜಳರಾಶಿಯವೋಲ್ ॥೧೨೧॥

ರಹಿನೀಳೋಪಳವಿರಚಿತ ಮರಳೆಲೆ
ಬಾಲಕನ ನಿಟಿಳದೊಳ್ನಯನಮನೋ –
ಹರಮಾದುದರ್ಘ ಚಂದ್ರೋದರದೊಳ್ಕಣ್ಗೊಳಿಸಿ
ತೋರ್ಪ ಕರ್ಪೆಂಬಿನೆಗಂ ॥೧೨೨

ಅರುಣಮಣಿಕರ್ಣಭೂಷಣ ಮರೀಚಿ
ಪರಕಲಿಸೆ ರಾಮಚಂದ್ರಶರೀರಂ
ಪರಿಭವಿಸಿದುದೆಳವಿಸಿಲ ವರಿಸಿದ
ಕಮನೀಯಪುಂಡರೀಕಶ್ರೀಯಂ ॥೧೨೩।

ಅರಸಿಯ ಮನದೊಳ್ ಕೆಂಜೆಡೆ
ದೊರೆಕೊಳಿಸುವುದುಚಿತಮೊಡನೆ ಕಜ್ಜಳರುಚಿಯೊಳ್
ಪೊರೆದ ನಯನೋತ್ಪಳಂಗಳ್ ದೊರೆಕೊಳಿಪುದು
ಚಿತ್ರಮಲ್ತೆ ರಾಗೋತ್ಸವಮಂ ॥೧೨೪॥

ಧಾತ್ರಿಯೊಳನ್ಯರ ತೇಜೋ ಮಾತ್ರಮನಾಂ
ಸಲಿಸೆನೆಂಬ ತೆಱದಿಂ ಪೊಯ್ಯಲ್
ಧಾತ್ರಿಯ ಕೈಯಿಂ ನಿಮಿರ್ವಂ ಕ್ಷತ್ರಶಿಖಾಮಣಿ
ಮಣಿಪ್ರದೀಪಾಂಕುರಮಂ ॥೧೨೫॥

ಕಿವಿಗಿನಿದೆನಿಪ್ಪ ವೀಣಾ ।
ರವದೊಳನಾದರಮನುಂಟುಮಾಡಿತ್ತು ತನೂ ॥
ಭವನ ತಳರ್ನಡೆಯೊಳ್ಪು ।
ಣ್ಮುವ ಚದುಪದಕನಕಕಿಂಕಿಣೀರಣಿತಂ ॥೧೨೬॥

ಶ್ರವನಕ್ಕರ್ಥವ್ಯಕ್ತಿಯ ।
ನವಟಯ್ಸದೆ ನೆಗಪ್ವ ವಶ್ಯಮಂತ್ರಾಕ್ಷರದಂ ॥
ತೆಪೊಲೆಲ್ಲರುಮಂ ಸೋಲಿಸಿ ।
ದುವು ತೊವಳಂ ನುಡಿವ ರಾಮಚಂದ್ರನ ನುಡಿಗಳ್ ॥೧೨೭॥

ತಿಳಿಗೊಳದೊಳಗೆಡೆಯಾಡುವ ।
ಕಳಹಂಸನ ಬಾಲಕೇಳಿ ಪುದುವೆನೆ ಮಧುಪಾ ॥
ಟಳನೇತ್ರಂ ದೌಳಾಂಗಂ ।
ಪಳಿಕಿನ ಕುಟ್ಟಿಮದ ಮೇಲೆ ದಟ್ಟಡಿಯಿಟ್ಟ ॥೧೨೮॥

ನಡೆಗಲ್ವಂದುಂ ಬಿಣ್ಪಂ ।
ಕೊಡೆ ನೆಗೆದಪುದುವಿಯೆಂದು ವಾಸುಗಿ ಪಲವುಂ ॥
ಪೆಡೆಯಂ ಸಿಸು ನಡೆವಡೆಯೊಳ್ ।
ಪಡೆದಾಂತು ಸಹಸ್ರಫಣವೆನಲ್ಪೆಸರ್ವಡೆದಂ ॥೧೨೯॥

ಮಣಿದೇಱಂ ಚೆಂಬೊನ್ನುಡೆ ।
ವಣೆಯಲಿ ಗೆಲೆ ಗೆಲ್ದನಂಗರುಚಿಯಿಂದೈರಾ ॥
ವಣಮಂ ಕುಮರಚೂಡಾ ।
ಮಣಿ ಲೀಲಾಮದದೊಳಂ ಚತುರ್ದಂತವಳಂ ॥೧೩೦॥

ಅಮೃತಾಂಶು ಪೆರ್ಚೆ ಪೆರ್ಚುವ
ಸಮುದ್ರಮೆಂತಂತೆ ರಾಮಚಂದ್ರಂ ದಿವಸ
ಕ್ರಮದಿನಭಿವೃದ್ಧಿವೆತ್ತಾ ।
ಕ್ರಮಿಸಿದನತಿಮುಗ್ಧಭಾವಮಂ ಶೈಶವಮಂ ॥೧೩೧॥

ಅಂತು ರಾಮಚಂದ್ರನಾದಿತ್ಯನಂತೆ ನಿತ್ಯೋದಯಮನಪ್ಪುಕೆಯ್ದು,

ಬಾಲತ್ವದೊಳಮುದಾತ್ತಗು ।
ಣಾಲಯನೆನಿಸಿದ ತನೂಜಮುಖಚಂದ್ರಮನಂ ॥
ಲೀಲೆಯಿನೀಕ್ಷಿಸಿ ದಶರಥ ।
ನೋಲಾಡಿದನಧಿಕರಾಗರಸವಾರಿಧಿಯೊಳ್ ॥೧೩೨॥

ಅಂತು ಸಂತೋಷದ ಪರಮಪದಮಂ ಪಡೆದಿರ್ಪುದುಮದಲ್ಲದೆಯುಮಾ ಮಹೀವಲ್ಲಭನ ಮೋಹವಲ್ಲರಿಗಳೆ ಪೂತುವೆಂಬಂತೆ ಪುಷ್ಪವತಿಯರಾಗಿ ನಾಲ್ಕು ನೀಮಿಂದು ಬೆಳ್ಪಸದನದಪ್ಪೊಸದೇಸೆವಿಳಾಸಂಬಡೆಯೆ ಸೂಜ್ಗೆವಂದು ಶುಭಸ್ವಪ್ನದರ್ಶನಾನಂತರಂ ಕೆಲವು ದಿವಸಮಿರ್ಪಿನಂ,

ಕುಲದೊದವಿಂದೀ ಸತಿಯರೆ ।
ಕುಲದೇವತೆಯರ್ಕಳೆಂಬ ಬರೆ ಪುಟ್ಟುವಿನಂ ॥
ತಲೆದೋಱೆ ಗರ್ಭಚಿಹ್ನಂ ।
ತಲೆದೋಱ್ದುದವನಿಪತಿಗೆ ರಾಗೋದ್ರೇಕಮ ॥೧೩೩॥

ಆಗಳಾಕೆಗಳ ಪಸುರ್ಪೆಸೆವಸಿಯ ಬಾಸೆ ಲಾವಣ್ಯ ನದಿಯ ಶೈವಾಲಲತೆಯ ಲಾಸ್ಯಮನಪಹಾಸ್ಯಂ ಗೆಯ್ಯೆಯುಮಾಕೆಗಳ ಕಱಂಗಿದ ಕುಚಚೂಚುಕಂಗಳಿಂದೆಸೆಮು ತೋಳಮೊದಲಂ ಜಕ್ಕುಲಿಸುವ ಪೆರ್ಮೊಲೆ ಕರ್ನೆಯ್ದಿಲೆಸಳಂ ನಲಿದು ಕರ್ಚುವ ಜಕ್ಕವಕ್ಕಿಯ

ವಿಳಾಸಮನಿಕ್ಕಿಮೆಟ್ಟೆಯುಮಾಕೆಗಳ ಮೊಗರಸದೊಳ್ ಮೂಡಿ ಮುಳ್ಕಾಡುವ
ಕಪೋಳಯುಗಳಂಗಳ್ ತಿಳಿಗೊಳದೊಳಹೂ ಬಿಳಿಯ ತಾವರೆಯೆಸಳಂ ಸರಸವಾಡೆಯುಮಾಕೆಗ
ಪೆಱಿನೊಸಲಂ ಮೆಟ್ಟಿ ನಿಮಿರ್ದ ತೋರಗುರುಳ್ಗಳ ತೊಂಗಲೆಳವೆಱೆಯಸಂಧಕಾರಮಾವರಿಸಿ
-ದಂತೆ ತೋಱೆಯುಮನಂತರಮವರ್ಗೆ ಪುಂಸವನ ಸೀಮಂತೋಪನಯನ ಸಕಳಮಂಗಳಮಂ
ದಶರಥನರನಾಥಂ ಮಾಡಿಿದುಮನುಕ್ರಮದಿಂ ಶುಭದಿನಮುಹೂರ್ತದೊಳ್ ಸುಮಿತ್ರೆ
ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ,

ಪಸರಿಸೆ ಪೂಬಲಿಗಳ್ ಬಾ ।
ಜಿಸೆ ಬದ್ಧವಣಂಗಳೊಡನೆ ಮಿಳ್ಳಿಸೆ ಗುಡಿಗಳ್ ॥
ದೆಸೆಬಿದ್ದಮಾಗೆ ತರುಣಿಯ ।
ರೊಸಗೆಯ ಮೇಲೊಸಗೆಯಾದುದಂದರಮನೆಯೊಳ್ ॥೧೩೪॥

ಆ ಸಮಯದೊಳ್ ದಶರಥಂ ಸುತಮುಖದರ್ಶನೋತ್ಸುಕಂ ಕತಿಪಯಾಪ್ತಪರಿಜನ
-ಪರಿವೃತಂ ಸೂತಿಕಾಗೃಹಮಂ ಪೊಕ್ಕು,

ಸಿರಿ ಸಿಂಗಕ್ಕಭಿಷೇಕಮಂ ಪಡೆಸುದಂ ರತ್ನಾಕರಂ ಸುತ್ತಿದು
ರ್ವರೆಯಂ ಭಾಸುರಚಕ್ರಮಂ ಕನಸಿನೊಳ್ಪೊಂಬೆಟ್ಟನೇಱಿರ್ದುದಂ
ಹರಿಣೀನೇತ್ರೆ ಸುಮಿತ್ರೆ ಕಂಡುದಱಿನಾಳ್ಗುಂ ಬೆಳ್ಳಿವೆಟ್ಟಂಬರಂ
ಭರತಕ್ಷೇತ್ರಮನೆಂದು ಕಣ್ತಣಿವಿನಂ ಸೌಮಿತ್ರಿಯಂ ನೋಡಿದಂ ॥೧೩೫॥

ಬಾಳಾರ್ಕಮರೀಚಿಯೆನಲ್ ।
ಬಾಳಕನ ಶರೀರಕಾಂತಿ ಪಸರಿಸೆ ಹರ್ಷೋ ॥
ನ್ಮೀಳನದಿಂ ದಶರಥನರ ।
ಪಾಳಕ ಮುಖಕಮಳಮೇಂ ಮನಂಗೊಳಿಸಿದುದೋ ॥೧೩೬॥

ಅನಂತರಂ ಭರತಶತ್ರುಘ್ನರ ಜನ್ಮೋತ್ಸವಮಂಗಳಮನಾಚರಿಸಿ,

ಮನುವಂಶಾಂಬರಭಾನು ಕಲ್ಪತರು ಕೈಪಂದಂತೆ ರೈವೃಷ್ಟಿ ಪ–
ಳ್ಚನೆ ಕೊಂಡಂತೆ ಸುರೇಂದ್ರಧೇನು ಕಱೆದಂತಾರ್ತಿತ್ತು ಕೂರ್ತಿತ್ತು ಸ–
ಮ್ಮನದಿಂದಿತ್ತು ಸುಹೃಜ್ಜನಂ ಪರಿಜನಂ ವಿದ್ವಜ್ಜನಂ ಜೀಯೆನಲ್
ತನಯಮೂವರ್ವರ ಜಾತಕರ್ಮಮುಮನಲ್ಯುತ್ಸಾಹದಿಂ ಮಾಡಿದಂ ॥೧೩೭॥

ಅಂತು ದಶರಥಮಹೀನಾಥಂ ಸಂತಾನಸಮೃದ್ಧಿಯಿನತಿ ಪ್ರವರ್ಧಮಾನ ಸುಖಾಧೀನ
ಮಾನಸನಾಗಿರ್ಪುದುಂ,

ಅವನೀವಲ್ಲಭತನಯ ।
ರ್ನವಶಶಿಕಳೆಯಂತೆ ಪಡೆದು ನಯನೋತ್ಸವಮಂ ॥
ದಿವಸಕ್ರಮದಿಂದಮು ವೃ ।
ದ್ಧಿವಡೆದರಮರಾವನೀಜದಗೆಯೆಂಬಿನೆಗಂ ॥೧೩೮॥

ನಸುನಗೆ ಕಮಳದ ಸಿರಿಯಂ ।
ನಸುನಗೆ ಜನನಿಯರ ಲೋಚನಭ್ರಮರಂಗಳ್ ॥
ಮುಸುಜ್ಮುವು ಮೋಹವಲ್ಲರಿ ।
ಪಸರಿಸಿ ಪರ್ವಿದುದು ಸುತರ ಲಾಲಾಜಳದಿಂ ॥೧೩೯॥

ತಳರಡಿಯಿಡುವತ್ತಲೆ ಪರಿ ।
ದೆಳಸುವ ಜನನಿಯರ ದಿಟ್ಟಮಣಿಕುಟ್ಟಿಮಮಂ ॥
ಬಳಸೆ ಪೊಸತಲರ್ದ ಸಯ್ದಿ ।
ಲೊಳದೊಳಗಣ ರಾಜಹಂಸನಂ ನೆನೆಯಿಸಿದರ್ ॥೧೪೦॥

ಅಂತು ದಶರಥನ ಸಾಮ್ರಾಜ್ಯಶ್ರೀಯ ಮಣಿಮಯಾಭರಣದಂತೆ ಸೊಗಯಿಸುವ ಸುತರ ಬಾಳಕೇಳೀದರ್ಶನದಿಂ ಸುಮಿತ್ರೆಯ ನಯನಪುತ್ರಿಕೆ ನಲಿದು ನರ್ತಿಸೆಯುಂ ಕೈಕೆಯ ತನುಲತಿಕೆ ಪುಳಕಕಳಿಕೆಯಂ ತಳೆಯೆಯುಂ ಸುಪ್ರಭೆಯ ಮನಃ ಪ್ರಮೋದಮುದಿತೋದಿತಮಾಗೆ-ಯುಂರಾಮಲಕ್ಷ್ಮಣಭರತಶತ್ರುಘ್ನರನುಕ್ರಮದಿಂ ಶೈಶವಮನತಿಕ್ರಮಿಸೆ,

ವಸುಮತಿವೆಸರನ್ವರ್ಥಂ ।
ವಸುಧೆಗೆನಲ್ಕಱಿದು ಪೊನ್ನ ಮಱಿಯಂ ದಾನ-॥
ವ್ಯಸನಿ ದಶರಥನಿದೇಂ ಪೊಸ ।
ಯಿಸಿದನೊ ಚೌಳೋಪನಯನ ಮಹಿಮೋತ್ಸವಮಂ ॥೧೪೧॥

ಪರಮಪ್ರೇಮಂ ಜನ್ಮಾಂ ।
ತರಮಂದೊಡವಂದುದೆನಿಸಿ ಗಡೆವಚ್ಚಲವ-॥
ಚ್ಚರಿಯಾಗಿ ರಾಮಲಕ್ಷ್ಮೀ ।
ಧರರೊಳಮಾದತ್ತು ಭರತಶತ್ರುಘ್ನರೊಳಂ ॥೧೪೨॥

ಅಮಳ್ಗಳಿವರೆಂಬಿನಂ ತಮ ।
ಗಮಳ್ವೆಸರಮರ್ದೆಸೆಯೆ ತಾಯ ತಂದೆಯ ಚಿತ್ತ-॥
ಕ್ಕಮರ್ದಿನ ಮಱಿಯಂ ಕಱಿದರ್ ।
ಕುಮಾರಕಮೂರ್ತಿಗೊಂಡ ಪುರಷಾರ್ಥದವೋಲ್ ॥೧೪೪॥

ಸುರಧೇನುಸ್ತನಭಾರದಂತೆ ಪುರುಷಾರ್ಥಂ ಮೂರ್ತಿಗೊಂಡಂತೆ ನಾ-
ಲ್ವರುಮೊಂಪಾಗಿರೆ ನಂದನರ್ ದಶರಥಂ ನಾಲ್ಕುಂ ಸಮುದ್ರಂಬರಂ
ಧರೆಯಂ ಕೂಡೆ ನಿಮಿರ್ಚಿ ನಾಲ್ದೆಸೆಯೊಳಂ ನಾಲ್ಕುಂ ಜಯಸ್ತಂಭಮಂ
ಚರಿತಾರ್ಥರ್ನಿಱಿಸಲ್ಸಮರ್ಥರಿವರೆಂದುತ್ಸಾಹಮಂ ತಾಳ್ದಿದಂ ॥೧೪೫॥

ಮತ್ತಂ ನಿಜತನೂಭವರ ನಿರ್ಜಿತಮನೋಭವಾಕಾರಮುಮಂ, ತಿಳಮಸೂಲಿಕಾದಿ ಶುಚಿವ್ಯಂಜನರಂಜಿತಪ್ರಶಸ್ತಾ ವಯವಂಗಳುಮಂ, ಹಳ ಕುಳಿಶ ಶಂಖ ಚಕ್ರಲಾಂಛನಗಳಪ್ಪ ಕರಚರಣಂಗಳುಮಂ ನೋಡಿ ಸಕಳಸಾಮ್ರಾಜ್ಯಶ್ರೀಯನಪ್ಪುಕೆಯ್ದಂತೆ ಸಂತೋಷಮನೆಯ್ದಿ,

ಸವಿವವಸರಮಿದು ವಿದ್ಯಾ ।
ಯುವತಿಯ ವದನಾರವಿಂದಮಧುವನೆನುತ್ತುಂ ॥
ವಿವಿಧಕಳಾಚಾರ್ಯರನಾ ।
ರ್ಯವರ್ಯರಂ ಗುರುನಿಯೋಗದೊಳ್ನಿಯಮಿಸಿದಂ ॥೧೪೬॥

ಶುಭದಿನಮುಹೂರ್ತದೊಳ್ ಪು ।
ಣ್ಯಭಾಗಿಗಳ್ ಕಲಿಸೆ ಗುರುಗಳೊಡವಂದುದೋ ಪೂ- ॥
ರ್ವಭವೋಪಾರ್ಜಿತವಿದ್ಯಾ ।
ವಿಭವಮೆನಲ್ಸಕಳಶಾಸ್ತ್ರಪರಿಣತರಾದರ್ ॥೧೪೭॥

ರೋಮಾಂಚಮನೊಡರಿಸಿಯುಂ ।
ರಾಮನ ಲಕ್ಷ್ಮಣನ ಭರತಶತ್ರುಘ್ನರ ವಿ- ॥
ದ್ಯಾಮಹಿಮೆ ಚತುಷ್ಷಷ್ಟಿಕ ।
ಳಾಮಹಿತರ ಮನದೊಳಿರಿಸೆಯಂ ಪುಟ್ಟಿಸುಗುಂ ॥೧೪೮॥

ಸೊಡರಂ ಪೊತ್ತಿಸಿಕೊಂಡು ಪೋಗೆ ಸೊಡರೊಳ್ತೇಜಂ ಗುಣಾಧಿಕ್ಯದಿಂ
ಕಡುಗೊರ್ವಂ ಪಡೆವಂತೆ ತಮ್ಮ ವಿಶದಪ್ರಜ್ಞಾಗುಣೋತ್ಕರ್ಷದಿಂ
ಪಡೆಮಾತೇನಱುವತ್ತುನಾಲ್ಕು ಕಳೆಯಂ ತತ್ಕ್ರೋವಿದರ್ಮೆಚ್ಚೆ ನೂ-
ರ್ಮಡಿ ಮೇಲಾದುವು ರಾಮಲಕ್ಷ್ಮಣರಿನೇಂ ಸತ್ಸೇವೆ ಸಾಮಾನ್ಯಮೇ ॥೧೪೯॥

ಕಲಿತನಮುಂ ಮಹಾಬಲಮುಮುಳ್ಳನ ಕಯ್ದುನೆ ಕಯ್ದು ಪಂದೆ ದು-
ರ್ವಲನೆನಿಸಿರ್ದವಂ ಪಿಡಿವ ಕಯ್ದುವದೇತಱ ಕಯ್ದುವೆಂಬಿನಂ
ಕಲಿಸಿದ ಭಾರ್ಗವಾತ್ಮಜನಿನೋದಿದ ತಜ್ಞನ ಮುಯ್ದುನೆತ್ತಿಯಂ
ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಱೆ ಕಲ್ತರೊ ಕಯ್ದುವೆಲ್ಲಮಂ ॥೧೫೦॥

ಮಿಗೆವನಂದೆಲ್ಲರ ಬಿಲ್ಲ ಬಿನ್ನಣರ ಬಿಣ್ಪಂ ರಾಮನೇಸೆಂಬಿನಂ-
ಮಿಗೆ ತನ್ನೇಸುಪಮಾನಮಾದುದನೆ ರಾಮಂ ಕಲ್ತ ಬಿಲ್ಬಲ್ಮೆಯಂ
ಪೊಗಟಲ್ವೇಳ್ಪುದೆ ರಾಮನೊಳ್ಸದೃಶಮೆಂಬನ್ನಂ ಧನುರ್ವಿದ್ಯೆಯಿಂ
ಜಗಮಂ ಮೆಚ್ಚಿಸೆ ಚಾಪಚಾಪಲತೆಯಂ ಕೊಂಡಾಡಿದಂ ಲಕ್ಷ್ಮಣಂ ॥೧೫೧॥

ಅಂತವರ್ಸಕಳಶಸ್ತ್ರವಿದ್ಯಾವಿಶಾರದರಾಗಿ ಕುಮಾರಶಾಂತಿಶಯಮನಪ್ಪುಕೆಯ್ದುದುಂ,

ಹಿಮಕರಬಿಂಬದಿಂ ಕಡೆದರೊ ಪಳುಕಿಂ ಪಡೆದತ್ತೊ ಪೂಗಳಿಂ
ಸಮೆದುದೊ ಚಂದ್ರಕಾಂತಮಣಿಯಿಂ ಬೆಸಕೆಯ್ದುದೊ ಮೌಕ್ತಿಕಂಗಳಿಂ
ಸಮನಿಸಿದತ್ತೊ ಕೋಮಳಮೃಣಾಳಿಕೆಯಿಂ ಪರಿಪೂರ್ಣಮಾಯ್ತೊ ಪೇ-
ೞಿಮಿದೆನೆ ರಂಜಿಸಿತ್ತು ರಘುರಾಮನ ಪಾಂಡುರದೇಹಮಂಡಲಂ ॥೧೫೨॥

ಉನ್ನತಲಲಾಟಪಟ್ಟಂ ।
ಮನ್ನಿಸಿದಷ್ಟಮಿಯ ಚಂದ್ರನಂ ನಗೆಗಣ್ಗಳ್ ॥
ಮುನ್ನಡೆವಿಡಿದುವು ಕಮಳಮ ।
ನಿನ್ನೇವಣ್ಣಿಪುದೊ ರಾಮನಭಿರಾಮತೆಯಂ ॥೧೫೩॥

ತೆರ ಕಱೆಗಣ್ಮಿದಿಂಗಡಲ ಗಾಡಿಯನೇಳಿಸ ತೋರಮುತ್ತಿನೈ-
ಸರದ ಮರೀಚಿಯಿಂ ಸಿರಿಯ ತಾಯ್ವನೆ ರಾಮನ ಪೇರುರಂ ಮನೋ-
ಹರಮೆನಿಸಿತ್ತು ವಾರವನಿತಾಜನಪರ್ಯವಿತಾವೇದಿಯೊಳ್
ದೊರೆಯೆನಿಸಿತ್ತು ಧೈರ್ಯಗುಣರೋಹಣಶೈಳಶಿಳಾತಳೋಪಮಂ ॥೧೫೪॥

ಏಳಿಸಿದುವು ಲಕ್ಷ್ಮಣನ ವಿ ।
ಶಾಳ ವಿಲೋಚನಯುಗಂಗಳಂಗಪ್ರಭೆಯಿಂ ॥
ಮೇಳಿಸಿ ನಗೆಯಂ ಪಾಳಿಸಿ ।
ಕಾಳಿಂದಿಯೊಳಲರ್ದ ಪುಂಡರೀಕಶ್ರೀಯಂ ॥೧೫೫॥

ಹರಿನೀಳರತ್ನಮಂ ಕಂ ।
ಡರಿಸಿದ ಕಣ್ದೆಱವಿಗೆಯ್ದೆ ಜೀವಂಬೊಯ್ವಂ- ॥
ತಿರೆ ತೋರ್ಪ ಗಂಡುಗಾಡಿಗೆ ।
ಪುರುಷೋತ್ತಮನೆಂದು ಕೊಂಡು ಕೊಸೆದುದು ಲೋಕಂ ॥೧೫೬॥

ಮನಮನಸರಲ್ಚಿದತ್ತು ಪುರುಷೋತ್ತಮನುಜ್ವಲಲಾಟಲೇಖೆ ಕೃ-
ಷ್ಣನ ಕುರುಳೋಳಿ ಪಿಷ್ಣಪಿನ ಪೇರುರಮಾಯತಿವೆತ್ತ ವಾರಿಜಾ-

ಕ್ಷನ ಧವಳೇಕ್ಷಣಂ ಪುರುಷಸಿಂಹನ ಸಿಂಹಕಟೀತಟಂ ಜನಾ-
ರ್ದನನ ಭುಜಂಗ ಭೀಮಭುಜಮಂಬುಜನಾಭನ ನಾಭಿಮಂಡಲಂ ||೧೫೭||

ಪೊಳೆಯೆ ನಖಾಂಶು ಮಂಡಳ ಫಣಾಮಣಿ ಪಂಚಫಣಾಸಿತಾಹಿಗಳ್
ಬಳೆದಪುವೀಂಟಲೆಂದು ದಳಕಂಠನ ಬಲ್ಲುಸಿರಂ ತದೀಯನಿ-
ರ್ಮಳತರಕೀರ್ತಿಮುಗ್ಧರಸಪಾನಮನೆಂಬಿನೆಗಂ ಪೊದಱ್ದು ಕೋ-
ಮಳಿಕೆಯನಾಳ್ದು ನೀಳ್ದು ಬಗೆಗೊಂಡುವು ಕೃಷ್ಣನ ಬಾಹುಶಾಖೆಗಳ್ ||೧೫೮||

ಹಾರಮರೀಚಿಯಂ ಮರಕತಚ್ಛವಿಯಂ ಗೆಲೆ ದೇಹದೀಪ್ತಿ ನೀ-
ಹಾರಮರೀಚಿಯಂ ಕುಸುಮಸಾಯಕನಂ ಗೆಲೆ ಗಂಡಗಾಡಿ ಕಂ-
ಠೀರವನಾದಮಂ ಜಳಧರಧ್ವನಿಯಂ ಗೆಲೆ ಬೇಱೆವೇಱೆ ಗಂ-
ಭೀರರವಂ ಬಳಾಚ್ಯುತರದೇನೆಸೆದಿರ್ದರೊ ರಾಮಲಕ್ಷ್ಮಣರ್ ||೧೫೯||

ರಣದೊಳ್ ರಾವಣಂ ಜವಂಗೆ ಪೊಸೆತಿಕ್ಕಲ್ ತಾರಶೈಳಕ್ಕೆ ತೆಂ-
ಕಣದಂ ಕಂಕಣದಂತೆ ಕೈಗೆವರಿಸಲ್ ಭೂಚಕ್ರಮಂ ಚಕ್ರಮಂ
ರಣದೊಳ್ ಸಾಧಿಸಲೆಂದು ಪುಟ್ಟಿದವರೇಂ ಸಾಮಾನ್ಯರೇ ರಾಮಲ-
ಕ್ಷ್ಮಣಪ್ರಾಕೃತವಿಕ್ರಮತ್ರಿಭುವನ ಪ್ರಖ್ಯಾತಕೀರ್ತಿಧ್ವಜರ್ ||೧೬೦||

ಅಂತು ರಾಮಲಕ್ಷ್ಮಣಭರತಶತ್ರುಘ್ನರೆಂಬ ನಾಲ್ವರ್ ತನೂಭವರುಂ ನಾಲ್ಕುಂ ರತ್ನದ ಶಿಳಾಸ್ತಂಭಂಗಳಂತೆ ರಘು ಕುಳಸಮುದ್ಧರಣ ಸಮರ್ಥರಾಗೆ ದಶರಥಂ ಪರಿಪೂರ್ಣಮನೋರಥನಾಗಿ,

ಧನಮಂ ಮರ್ಯಾದೆಯಿಂದಾರ್ಜಿಸಿ ವಿಷಯಸುಖಾಸ್ವಾದನಂ ದೋಷನಿಷ್ಪಾ-
ದನಮಲ್ತೆಂಬಂತೆ ಚಿತ್ತಕ್ಕೊದವಿಸೆ ಮುದಮಂ ಭಾರತೀಹಂಸವಕ್ತ್ರಾ-
ಬ್ಜಿನಿಯೊಳ್ನಾನಾವಿಧಂ ನರ್ತಿಸೆ ಹಿಮಕರಭಾಸ್ವದ್ಯಶೋವಲ್ಲಿಗಾಳಂ-
ಬನಮಂಭೋರಾಶಿ ವೇಳಾವನಮನೆ ನೆಗಟ್ದಿಂ ಭಾರತೀಕರ್ಣಪೂರಂ ||೧೬೧||

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತಪುರಾಣದೊಳ್
ಕುಮಾರೋದಯ ವರ್ಣನಂ
ತೃತೀಯಾಶ್ವಾಸಂ



# ೪. ಜಿನಭವನದರ್ಶನ ವರ್ಣನಂ

ಶ್ರೀಸುದದಿ ತನ್ನುರಸ್ಸರ ।
ಸೀಸದನದೊಳಿಟ್ಟು ಪಾತ್ರದಾನವ್ಯಸನ- ॥
ವ್ಯಾಸಂಗಮನೊದವಿಸೆ ಸೌ ।
ಖ್ಯಾಸೀನಂ ಪೆಂಪುವೆತ್ತನಭಿನವಪಂಪಂ ॥೧॥

ಅನ್ನೆಗಮಿತ್ತಲ್

ಮಿಥಿಳಾಪುರಾಧಿನಾಥಂ ।
ಪ್ರಥಿತಯಶಂ ಜನಕನಾ ಮಹೀಭುಜನ ಮನೋ- ॥
ರಥಭೂಮಿ ವಿದೇಹಿಗದೇಂ ।
ಪೃಥುಕುಚಭರದೊಡನೆ ಕೊರ್ವುವಡೆದುದೋ ಗರ್ಭಂ ॥೨॥

ಶಶಿಕಾಂತಮುಕುರದಂತಿರೆ ।
ಶಶಿಮುಖಿಯ ಕದಂಪುಗಳ್ ಬೆಮರ್ತುವು ಹರಿನೀ- ॥
ಳಶಲಾಕೆಯಂತೆ ಬಾಸೆಗೆ ।
ವಿಶೇಷಮನೆ ಪಸರಿಸಿತ್ತು ಕರ್ಪೆಳವಸಿಜೊಳ್ ॥೩॥

ವಳಿರೇಖೆ ಮಸುಳೆ ಗರ್ಭಂ ।
ಬಳೆವುದುಮೊಪವಳಿದು ಸತಿಯ ಮಧ್ಯಂ ಬೆಳ್ಪಂ ॥
ತಳೆದುದು ನಯನಾನಂದಮ ।
ನೆಳನಜಿ ಪರಿಪೂರ್ಣಮಾದೊಡಂ ಪುಟ್ಟಿಪವೋಲ್ ॥೪॥

ಆ ಸಮಯದೊಳ್

ಭವಬದ್ಧವೈರದಿಂ ಕಾ ।
ದು ವಿದೇಹಿಯ ಗರ್ಭಮಂ ನಿಶಾಚರನಿರ್ದಂ ॥
ವಿವಿಧೋಪಸರ್ಗಮಂ ಪಡೆ ।
ಯವೆ ಮುಳಿಸಂ ಪಡೆವ ಮುಳಿವ ದುಶ್ಚರಿತಂಗಳ್ ॥೫॥

ಆ ವಿದೇಹಿಯ ಗರ್ಭಮಸಾ ನಿಶಾಚರನದೇಕಾರಣದಿಂ ಕಾದಿರ್ದನೆಂದೊಡೆ ಚಂದ್ರಪುರಮನಾಳ್ವ ಚಂದ್ರ ಧ್ವಜನಸರಸಿ ಮನಸ್ವಿಯೆಂಬಬಳಾಕೆಗೆ ಪುಟ್ಟಿದ ಚಿತ್ರೋತ್ಸವೆಯೆಂಬ ಬಾಳಕಿಯುಮಾ ನೃಪನ ಪುರೋಹಿತನ ಮಗನಪ್ಪ ಕಪಿಳನೆಂಬ ಬಾಳಕನುಂ,

ಒಡನಾಡಿಯುಮೊಡನೋದಿಯು ।
ಮೊಡವೆಳೆದುಂ ಪಲವುಕಾಲದಿಂದನುಬಂಧಂ ॥
ಗಿಡದೊಡಲೆರಡಸುವೊಂದೆನೆ ।
ಗೆಡೆವಕ್ಕಿಗಳಂತೆ ಕೂಡಿ ನಡೆಯುತ್ತಿರ್ದರ್ ॥೬॥

ಅಂತವರೋರೊರ್ವರಂ ಮೆಚ್ಚಿ,

ಪದೆಪಿಂ ಚುಂಬಿಸದುಮ್ಮಳಂ ಬಯಸಿದಾಗಳ್ ಮನ್ಮಥಕ್ರೀಡೆ ಕೂ-
ಡದಟಿಲ್ ಕಳ್ದೊಡಗೂಡುವಂಜಮೆ ಮನಕ್ಕುದ್ವೇಗಮಂ ಮಾಡೆ ನೋ-
ಡದೆ ತಾಯ್ತುಂದೆಯಗಲ್ಕೆಯಂ ಮದನರಾಗೋನ್ಮಾದದಿಂ ಮುಂದುಗಾ-
ಣದೆ ಮುಗ್ಧಾಶಯರಾ ವಿದಗ್ಧಪುರಮಂ ಪೊಕ್ಕಿರ್ದರಾ ಇರ್ವರುಂ ॥೭॥

ಅನಿತಿಂದ್ರಿಯಸುಖಮುಂ ಸ್ಪ ।
ರ್ಶನಸುಖಮೊಂದಱೊಳಡಂಗಿದತ್ತೆನೆ ನೃಪನಂ- ॥
ದನೆಯುಂ ದ್ವಿಜನಂದನನುಂ ।
ಮನೋಜಸುಖರವಿಲೀನಮಾನಸರಿರ್ದರ್ ॥೮॥

ಅಂತಿರ್ಪುದುಮೊಂದು ದಿವಸಂ ಪ್ರಕಾಶಸಿಂಹನ ಮಗಂ ತತ್ಪುರಾಧಿಪತಿ,

ಕೊಡೆವಿಡಿದಂತೆ ಮಂಡಳಿಸೆ ಮೇಲೆ ಕಿರೀಟಮರೀಚಿ ಸುತ್ತಲುಂ
ಕಡಿತಲೆಯೊಳ್ಕಡಂಗಿ ಬರೆ ಮಾರ್ಗಮೊಡಂಬಡೆ ರಾಜಮಾರ್ಗದೊಳ್
ನಡೆಯೆ ಹಯಂ ವಿಲಂಬಿತದೆ ಕುಂಡಳಮಂಡಿತನೇಂ ವಿಳಾಸಮಂ
ಪಡೆದನೊ ಪದ್ಮರಾಗಮಣಿಕುಂಡಳಮಂಡಿತಗಂಡಮಂಡಳಂ ॥೯॥

ಅಂತು ಬರುತ್ತುಂ,

ಶರದದ ಚಂದ್ರನಂ ನಗೆಮೊಗಂ ನಗೆ ಚಂದ್ರಮರೀಚಿಮಾಳೆಯಂ
ತರಳಕಟಾಕ್ಷಮಾಲೆ ಗೆಲೆ ಬಂದು ಗೃಹಾಂಗಣದೊಳ್ ಲತಾತನೂ-
ದರಿ ನಡೆ ನೋಡೆ ಕಂತು ನಡೆಪೂಡಿದ ಪೊಗಣೆಗೆತ್ತು ನಾಡೆ ಕಾ-
ತರತೆಯನಪ್ಪುಕೆಯ್ಯೆ ಬಗೆ ನೋಡಿದನಾಕೆಯನಾ ಕುಮಾರಕಂ ॥೧೦॥

ಅಂತಾಂತ ಕಣ್ಣೋಲ್ದು ನೋಡಿ ಮೂಪವಿಯನಟ್ಟುವುದುಂ,

ಗೆಯದೆ ತನ್ನ ಮುನ್ನಿನೊಲವಂ ನೆಲೆಯಿಂದೊಡಗೂಡಿ ಬಂದುದಂ
ಗೆಯದೆ ಪಾಳಿಯುಂ ಪಸುಗೆಯುಂ ಗುಣಹಾನಿಯನಪ್ರಸಿದ್ಧಿಯುಂ
ಗೆಯದೆ ಬಂದ ದೂದವಿಗೆ ಚಿತ್ತಮನೊಪ್ಪಿಸಿ ಕೂಟದಾಸೆಯಂ
ಗೆದಳಿದಾವ ಕೌತುಕಮೊ ನಾರಿಗೆ ನಚ್ಚಿನ ಕೆಯ್ಪು ಕೈತವಂ ॥೧೧॥

ಅಂತಾಕೆಯುಂ ಕುಮಾರಕಂ ಬರಿಸಿ ತನಗರಸಿ ಮಾಡಿ ಕಪಿಲನಂ ಮರುಳ್ಮಾಡಿ ಳಿವುದುಮಾತನದುವೆ ನಿರ್ವೇಗ ಕಾರಣಮಾಗೆ ಕೆಲವು ಕಾಲದಿನಾರ್ಯಗುಪ್ತರೆಂಬಾಚಾರ್ಯರ ಸಮೀಪದೊಳ್ಬಾಹ್ಯತಪೋರೂಪಮಂ ತಳೆದು,

ಆ ಸುದತಿ ನೆಲಸೆ ಚಿತ್ತನಿ ।
ವಾಸದೊಳಾ ಕಪಿಲಮುನಿ ತಪಶ್ರೀತನುವಂ ॥
ಬಾಸಣಿಸೆ ತೇದು ಪೊನ್ನಂ ।
ಪೂಸಿದ ಕರ್ಬೊನ್ನ ಪಾಪೆಯಂತೆಪೊಲಿರ್ದಂ ॥೧೨॥

ಒಪ್ಪಿಸಿ ಮನಮಂ ಮಾನಿನಿ ।
ಗೊಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ॥
ಸೊಪ್ಪಾಗಿದೊಚ್ಚವಡಿಯ ।
ಕುಪ್ಪಸಮಂ ಪೋಲ್ತು ಪೊಜಗೆ ನೇರಿದನಾದಂ ॥೧೩॥

ಮುನಿ ನಡೆದಾ ತಪದೊಳ್ ಜೀ ।
ವನಮಂ ತವೆ ಪೀರ್ದು ದೇವಗತಿ ಸಮನಿಸೆ ಮು- ॥
ನ್ನಿನ ಪಗೆಯುಂ ಕುಂಡಲನಂ ।
ನೆನೆದವಧಿಯಿನಳವಿಗಟಿದ ಮುನಿಸಂ ತಳೆದಂ ॥೧೪॥

ಆತಂ ನಿಜವಿರೋಧಿಯಪ್ಪ ಕುಂಡಳಮಂಡಿತಂ ಪೆಜತೊಂದು ಪೆಣ್ಗೂಸುವೆರಸು ವಿದೇಹಿಯ ಗರ್ಭದೊಳ್ ಬಳೆವುದಂ ತಿಳಿದು,

ಗರ್ಭದ ಪೆಣ್ಗೂಸಿಂಗಂ ।
ಗರ್ಭಿಣಿಗಂ ಬಾಧೆ ಪಿಂಗೆ ಪೆತ್ತಾದೂಡೆ ಗ- ॥
ರ್ಭಾರ್ಭಕನನುಯ್ವೆನೆಂಬೀ ।
ದುರ್ಭಾವನೆಯಿಂ ವಿದೇಹಿಯಂ ಕಾದಿರ್ದಂ ॥೧೫॥

ಹರಿದಿಕ್ಕಾಂತೆಗೆ ಚಾರುಚಂದ್ರಕಳೆಯುಂ ಚಂಡಾಂಶುವುಂ ಪುಟ್ಟುವಂ-
ತಿರೆ ಭೂವಲ್ಲಭಚಿತ್ತವಲ್ಲಭೆಗೆ ಪುತ್ರೀ ಪುತ್ರರೊಂದಾಗಿ ರಾ-
ಗರಸಂ ಕೈಮಿಗೆ ಪುಟ್ಟೆ ಪೂರ್ವಭವಬದ್ಧಕ್ರೋಧದಿಂ ಬಾಳನಂ
ಸುರನೊರ್ವಂ ಪಿಡಿದುಯ್ದನೊಯ್ಯ ತೆಜದಿಂ ಸ್ವರ್ಭಾನು ಬಾಳಾರ್ಕನಂ ॥೧೬॥

ಅಂತು ನೆಗೆದು ಗಗನಮಾರ್ಗದೊಳ್ಪೋಗುತ್ತುಂ,

ಒಗೆವೆನೊ ಬೀಸಿ ಪಾಸಱೆಯೊಳರ್ದುವೆನೋ ಕಡಲೊಳ್ಕರುಳ್ಗಳಂ
ತೆಗೆವೆನೊ ಕುತ್ತಿ ಕತ್ತಿಗೆಯೊಳಿಕ್ಕುವೆನೋ ವಿಪಿನಾಗ್ನಿಯೊಳ್ಕಱು-
ತ್ತುಗಿವೆನೊ ಕೂಡೆ ಮೆಯ್ದೊವಲನಲ್ಲದೊಡೆನ್ನಳಲಾಱದೆಂದು ದಿ-
ಟ್ಟಿಗಳೊಳೆ ನುಂಗುವಂತೆ ನಡೆ ನೋಡಿದನಾ ಶಿಶುವಂ ನಿಶಾಚರಂ ॥೧೭

ಅಂತು ನೋಡಲೊಡಮರ್ಭಕನ ಪೂರ್ವಭವದಣುವ್ರತದ ಸಾಮರ್ಥ್ಯದೊಳ
ನಿಜಮಹಾವ್ರತದಸಂಸ್ಕಾರದೊಳಂ,

ಫಣಿ ಗರುಡಾಂಡದ ಪಚ್ಚೆಯ ।
ಮಣಿಯಂ ಕಂಡಂತೆ ಮಣಿಯೆ ಶಿಶುವದನನಿರೀ- ॥
ಕ್ಷಣದಿಂದಾಕ್ಷಣದೊಳ್ ದಾ ।
ರುಣಭಾವಂ ದೇವನುಪಶಮಕ್ಕೆಡೆಯಾದಂ ॥೧೮॥

ಒಡಲೊಳಗುರ್ಚಿದ ಸರಲ್ಪೊಱ ।
ಮಡುವುದಯಸ್ಕಾಂತ ಸನ್ನಿಧಾನದೊಳೆಂತಂ- ॥
ತೊಡಲಿಂ ಪೋದುದು ಮುನಿಸಿನ ।
ತೊಡರ್ಪು ನಕ್ತಂಚರಂಗೆ ಶಿಶುಸನ್ನಿಧಿಯೊಳ್ ॥೧೯॥

ಅಂತುಪಶಮಭಾವಮುಂ ಪಾಪಭೀರುತ್ವಮುಂ ತನಗೆ ತೊಟ್ಟನೆ ಪುಟ್ಟೆ ತನ್ನ
ಕರ್ಣಕುಂಡಳಮಂ ಬಾಳಕನ ಕರ್ಣಯುಗಳಂಗಳೊಳಮರ್ಚಿ ಪರ್ಣಲಘುವಿದ್ಯೆಯಿನೀಡಾಡಿ
ಪೋಪುದುಂ,

ತನುರುಚಿ ಕರ್ಣಕುಂಡಳಮರೀಚಿ ವಿಯತ್ತಳಮೆಲ್ಲಮಂ ಪಳ-
ಚ್ಚನೆ ಬೆಳಪಂತು ಪರ್ಣಲಘುವಿದ್ಯೆಯಿನೊಯ್ಯನೆ ಬಂದು ಖೇಚರೇಂ-
ದ್ರನ ಮೃದು ತಳ್ಪದೊಳ್ಸುರಕುಮಾರಕನಂದುಪಪಾತತಳ್ಪದೊಳ್
ಜನಿಯಿಸಿದಂತೆ ಕಣ್ಗೆ ಪಡೆದಂ ಶಿಶುನಿರ್ಭರಹರ್ಷಭಾರಮಂ ॥೨೦॥

ಅಂತಾ ಶಿಶುವಂ ದಕ್ಷಿಣಶ್ರೇಣಿಯ ರಥನೂಪುರಚಕ್ರವಾಳಪುರಮನಾಳ್ವಿಂದುಗತಿ
ವಿಯಚ್ಚರೇಂದ್ರನಂದಿನ ಸೂಳ್ಗಿವಂದ ಪುಷ್ಪವತಿಪೆಸರ ಮಹಾದೇವಿ ಫಳವತಿಯಾದಳೆನಿಸಿ ಕೊಟ್ಟು
ಕುಂಡಳಪ್ರಭಾಮಂಡಳವಿಳಾಸಮಂ ತಳೆದನಪ್ಪುದಱಿಂ ಪ್ರಭಾಮಂಡಳನೆಂದು
ಪೆಸರನಿಟ್ಟನನ್ನೆಗಮಿತ್ತಲ್,

ಈಗಳೆ ಪುಟ್ಟಿದೆನ್ನ ಶಿಶುವಂ ಕರುಣಂ ತನಗಿಲ್ಲದೆತ್ತಿಕೊಂ-
ಡಾಗಸದತ್ತಲಂತಕನ ದೂತನವೋಲ್ಪಿಡಿದುಯ್ವನೋರ್ವನಿ-

ನ್ನೇಗಳ ಗೆಯ್ವೆನೆಂದಱೆ ವಿದೇಹಿ ನರೋತ್ಪಳಮಾಳೆ ಕಾಱುವಂ-
ತಾಗೆ ಕದುಷ್ಣವಾರಿಗಳನುಣ್ಮೆದುವಾಕೆಗೆ ಬಾಷ್ಪವಾರಿಗಳ್ ॥೨೧॥

ಬಡವಂ ಚಿಂತಾಮಣಿಯಂ ।
ಪಡೆವಂತೆಂತಾನುಮೊರ್ವನಂ ತನಯನನಾಂ ॥
ಪಡೆದಾಗಳೆ ಮರ್ತ್ತೊರ್ವಂ ।
ಪಿಡಿದುಯ್ದಂ ದನುಜನೆಂದು ಶೋಕಂಗೆಯ್ದಳ್ ॥೨೨॥

ರಕ್ಷಾವಿಧಾನಮಮಂ ತನು ।
ರಕ್ಷಕರಂ ಬಗೆಯದೆನ್ನ ತನಯನನುಯ್ದಂ ॥
ರಾಕ್ಷಸನೆಂದಟ್ಟಿಳ ಧವ ।
ಳೇಕ್ಷಣೆ ದಳದಳಿಸಿ ಸುರಿಯೆ ಬಾಷ್ಪಜಲಂಗಳ್ ॥೨೩॥

ಕುಳವೃದ್ಧೆಯರುಂ ಧಾತ್ರೀ ।
ಕುಳಮಂ ಶುದ್ಧಾಂತಕಾಂತೆಯರ್ಕರುಮಱಿಲಿಂ- ॥
ದೞೆ ಕಂಡು ಜನಕನತಿವಿ ।
ಹ್ವಳಚಿತ್ತಂ ಶೋಕರಸಮನೊಳಕೊಂಡಿರ್ದಂ ॥೨೪॥

ಆಗಳ್ ಮೌಹೂರ್ತಿಕರ್ ಶುಭಮುಹೂರ್ತದೊಳ್ ಪುಟ್ಟಿದ ಬಾಳಕಂಗಮೋಘ-ಮಪಾಯಮಾಗದೀಕೆಯುಮ ಗಣ್ಣ ಪುಣ್ಯವತಿಯಕ್ಕುಮೆಂದು ಶೋಕಮನದಿರ್ಪ ವಿದೇಹಿ ಸಂತೋಷಂಬಟ್ಟು ನಿಜತನೂಜೆಯ ಮುಖಸರೋಜಮಂ ನೋೞ್ಪುದುಂ,

ಆ ಸತಿಗೆ ಪುಟ್ಟೆ ಹರ್ಷವಿ ।
ಕಾಸಂ ಮಧುಬಿಂದುಮಾಳೆ ನೀಳೋತ್ಪಳದಿಂ ॥
ಸೂಸುವವೋಲ್ ನಗೆಗಣ್ಣಿಂ ।
ಸೂಸಿದುವಾನಂದಬಾಷ್ಪಬಿಂದುವಿತಾನಂ ॥೨೫॥

ಅನಂತರಂ,

ಆ ರಾಜಭವನದೊಳ್ಮಣಿ ।
ತೋರಣಮೊಡರಿಸುವ ವೀಕ್ಷಣಾಕರ್ಷಣದಿಂ ॥
ಭಾರತಿಕನಾಗೆ ಮಂದಸ ।
ಮೀರಂ ಕೈನಿಱಿದುವುತ್ಸವಧ್ವಜತತಿಗಳ್ ॥೨೬॥

ಕೆದರಿಱಿದ ಪಿಷ್ಟಾತಕದಿಂ ।
ದೊದವಿದ ಪಟವಾಸಚೂರ್ಣದಿಂದಳವಡೆ ಕ- ॥

ಟ್ಟಿದ ರನ್ನದ ಮೇಲ್ಕಟ್ಟಂ ।
ಪಡೆಪಂ ಪುಟ್ಟಸಿದುದಿಟ್ಟಳಂ ನೃಪಸದನಂ ॥೨೭॥

ಬದ್ದವಣಂ ಬಾಜಿಸೆ ದೆಸೆ ।
ಬಿದ್ದಂ ಕುಣಿದಾಡೆ ಗಣಿಕೆಯಪೂರ್ವಲಿಯೊಳ್ ॥
ಮುದ್ದಾಡೆ ತುಂಬಿಗಳ್ಮುಗಿ ।
ಲುದ್ದಂ ಪರಿದತ್ತು ಹರ್ಷರಸಮಾ ಪುರದೊಳ್ ॥೨೮॥

ಪಡೆದುದು ಗಾಯಿನೀಮಧುರಮಂಗಳಗೇಯಮುಪಾಯನಂಗಳಂ
ಕುಡುತೆಡೆಯಾಡುತಿರ್ಪ ಗಣಿಕಾಮಣಿನೂಪುರಕಿಂಕಿಣೀರವಂ
ಕುಡಿದುಪಹಾರಪುಷ್ಪರಸಮಂ ಮೊರೆದೇಟ್ಟಳಿನೀರವಂ ಮಗು-
ಳ್ವಡೆಯೆ ವಿದೇಹಿ ಪೌರಜನಕರ್ಣರಸಾಯನದೊಂದು ತಂದಲಂ ॥೨೯॥

ಅಂತು ಜಾತಕಮೋತ್ಸವಮಂ ಮಾಡಿ ದಶಮದಿನದೊಲ್ ಸಕಲಲಕ್ಷಣ ಸಸ್ಯಸಂಪತ್ತಿಗೆ ಸೀತೆಯುಪ್ಪುದಱಿಂ ಸೀತೆಯೆಂದು ಪೆಸರನಿಟ್ಟು ಕೊಂಡಾಡಿ ನಡಪುತ್ತಮಿರೆ ಮದನಮೋಹನದೀಪಕಳಿಕೆಯಂತೆಯುಂ, ಕಾಮುಕಲ್ಪಲತೆಯಂದೆಯುಂ, ನಿರಂತರೋಪಚಯಮನಪ್ಪುಕೆಯ್ದು ಭರತಶಾಸ್ತ್ರಾದಿಸಕಳಕಳೆಯೊಳತಿ ಪರಿಣತಿವಡೆದು,

ಶಶಿಲೇಖೆಯೆನಲ್ಕಪೂರ್ಣ ।
ರಶಲಾಕೆಯೆನಲ್ಪಿ ಳೋಚನೋತ್ಸವಮಂ ಮಾ- ॥
ಡಿ ಶಿಳೀಮುಖಕುಂತಳೆ ಮದ ।
ನ ಶಿಳೀಮುಖದಂತೆ ಭುವನಮಂ ಸೋಲಿಸಿದಳ್ ॥೩೦॥

ಮನಸಿಜನಾಜ್ಞಾರೂಪಮಿ ।
ದೆನೆ ಕರ್ಬಿನ ಬಿಲ್ಲನೊಲ್ಲದುರ್ಚುವ ಸಂಮೋ- ॥
ಹಂಶರಮೆನೆ ಬಾರಿಸಿದುದು ।
ಜನಕಜೆಯ ಬೆಡಂಗು ಮದನ ಜಯಡಿಂಡಿಮಮಂ ॥೩೧॥

ಲೀಳೆಯನಪ್ಪುಕೆಯ್ದು ನಯನೋತ್ಸವಮಂ ದಯೆಗೆಯ್ವ ಗಾಡಿಯಿಂ-
ದೇಳಿಸಿ ಕಾಮಕಲ್ಪಲತೆಯಂ ಪರಿಪೂರ್ಣಕಳಾವಿಳಾಸದಿಂ-
ದೇಳಿಸಿ ಚಾರುಚಂದ್ರಕಳೆಯಂ ನೆಲೆವೆರ್ಚಿಸಿದಳ್ ಮರಾಳಲೀ-
ಲಾಳಸಯಾನೆ ಜಾನಕಿ ವಿದೇಹಿಗೆ ಮೋಹರಸಪ್ರವಾಹಮಂ ॥೩೨॥

ಜನಕಂಗೆ ಹರ್ಷದೊದವಂ ।
ಜನಿಯಿಸಿ ಜಾನಕಿಯ ರೂಪವಿಭವಂ ಮಾಡಿ- ॥



ಜಿನಭವನ ವರ್ಣನ ವರ್ಣನ

ತ್ತನುರೂಪಂ ನೃಪಸುತನಾ ।
ವನೊ ವರನೀ ವನಿತೆಗೆಂದು ಮನಮುಮ್ಮಳಮಂ ॥೩೩॥

ಜನಕಜೆ ಮೀಱೆ ಶೈಶವಮನೇಂ ತಲೆದೋಱೆದುದೋ ನವೀನ ಯೌ-
ವನವಿಭವಂ ಮುಗುಳ್ನಗೆಯನೊಂದೆರಡಂ ನಿಜಪಲ್ಲವಾಧರಂ
ನನೆಯ ಸರಲ್ಗಳೊಂದನೆರಡಂ ಕಡೆಗಣ್ ಕುಡುವುರ್ಕಾಮದೇ
ವನ ಕುಡುವಿಲ್ಲನೊಂದನೆರಡಂ ಪಡೆದೊಪ್ಪಮನಪ್ಪುಕೆಯ್ವಿನಂ ॥೩೪॥

ಅಂತು ಜಾನಕಿ ಜನನೀಜನಕರ ಮನಕ್ಕೆ ಸಂತೊಸಮನೊದವಿಸುತಿರ್ಪಿನಮೊಂದು ದೆವಸಂ,

ಚರನೊರ್ವಂ ಬಂದು ಬೇಗಂ ಜನಕನ ಸಭೆಯಂ ಪೊಕ್ಕು ಮೆಯ್ಯಿಕ್ಕಿ ಭೀತಾ-
ತುರಚಿತ್ತಂ ಚೀನಚೇಳಾಂಚಳಮನಧರತ್ತುಯ್ದು ಚಿತ್ರೈಸಿದೊಂದಂ
ಹರಿವಂಶೋತ್ತಂಸ ಲೋಕಾದ್ಭುತಮನಸಮಯೋತ್ಪಾತಮಂ ಲೋಕಲುಂತಾ-
ಕರಸಂಖ್ಯಾತರ್ಕಿರಾತರ್ಸೆರೆದು ನಿಖಿಳ ಭೂಚಕ್ರಮಂ ಸೂಱೆಗೊಂಡರ್ ॥೩೫॥

ಇಱಿದು ತವಿಸುವೊಡೆ ಪಡೆ ನಾ ।
ಡೆಱೆಯರ ಕೈಯಳವಿಯಲ್ತು ಕಂಡಂತುಟನೆ- ॥
ನ್ನಱೆವಂತುಟನುಳ್ಳಂತುಟ ।
ನಱೆಪುವೆನವಧರಿಪುದೆಂದು ಚರನಿಂತೆಂದಂ ॥೩೬॥

ಕನಕಾಚಳಕ್ಕೆ ಬಡಗಣ ।
ದೆಸೆ ವಿಜಯಾರ್ಧಾಚಳಕ್ಕೆ ತೆಂಕಣದೆಸೆ ದು- ॥
ಷ್ಟನಿವಾಸಮಿರ್ದು ಪರಮೆಂ ।
ಬ ನಾಮದಿಂ ಮ್ಲೇಚ್ಛದೇಶಮಿರ್ಪುದಪಾರಂ ॥೩೭॥

ಅಲ್ಲಿ ಮಯೂರಮಾಲೆಯೆಂಬ ಶಬರಶಿಬಿರಮನಾಳ್ವ ತರಂಗತಮನೆಂಬ ಶಬರನಾಯಕಂ ತನ್ನಾಳ್ವನಾಡಬೇಡವಡೆಯೆಲ್ಲಮಂ ಕೂಡಿಕೊಂಡು ಕಪೋತಕಾಂಭೋಜಕಣಾದಿ ದೇಶಂಗಳಂ ಕಿಡಿಸುತ್ತುಂ ಬಂದು,

ನಾಡರಸಂ ತಗುಳ್ದು ಕಡಗಾಲದ ಮಾರಿಯ ಮೂರಿಯಂತೆ ಕ-
ಣ್ಣಾಡದೆ ಬಾಲವೃದ್ಧವನಿತಾವಧೆಗೆಯ್ದು ಕವರ್ತೆಗೊಂಡು ಸು-
ಟ್ಟೋಡಿಸಿ ಜಾತಿಯಂ ಕಿಡಿಸಿ ನಾಡನವಂ ಕಡಿದಿಕ್ಕಿ ಮೆಟ್ಟಿದಂ
ಬೇಡರಸಂ ತರಂಗತಮನಾಸಿರ ಬೇಡರಸೆಂಬ ಗರ್ವದಿಂ ॥೩೮॥

ಎಂದು ಬಿನ್ನವಿಸೆ,

ಚರವಚನಮನಾಲಿಸಿ ತುಂ ।
ಬುರಕೊಳ್ಳಿಯ ತೆಱದಿನಂಬರಕ್ಕೆ ಸಿಡಿಲ್ದಾ ॥
ಹರಿವಂಶಕೇತು ಕಣ್ಕೆಸು ।
ಸೆರೆವರಿಯೆ ಕೃತಾಂತನಂತೆ ಮುಳಿದಿಂತೆಂದಂ ॥೩೯॥

ಒಂದೆ ಕುಠಾರದಿಂದಡವಿಯಂ ಕಡಿವಂತಿರೆ ಪೋಡುಗಾಱನೆ-
ನ್ನೊಂದು ಭುಜಾಸಿಯಿಂ ಶಬರಕೋಟಿಯನಿಕ್ಕಿ ಪಿಶಾಚಕೋಟಿಗಾ-
ನಂದಮನುಂಟುಮಾಳ್ಪೆನುಱಿದಾನಿದನೇಳಿಸಿದಂದು ದುರ್ಯಶೋ
ದುಂದುಭಿನಾದಮಾವರಿಸದಿಕ್ಕುಮೆ ಕೂಡೆ ಜಗಂಗಳೆಲ್ಲಮಂ ॥೪೦॥

ಇಱಿಯದೆ ಬೇಡಿದೊಡೀಯದೆ ।
ಬಱಿದೆ ಕುಲೀನತೆಗೆ ಬೆಸೆದು ಪಾರ್ಥಿವಜನ್ಮ - ॥
ಕ್ಕೆಱೆವಟ್ಟೆನಿಸಿ ಧರಿತ್ರಿಗೆ ।
ಪೊಱೆಯೆನಿಪಂ ರಾಜನಾಮಧಾರಕನಲ್ತೇ ॥೪೧॥

ಎಂದು ಪರಿಚ್ಛೇದಿಸೆ,

ನಿನಗೆ ಸಹಾಯಂ ದಶರಥ ।
ಜನನಾಥಂ ತತ್ಸಹಾಯದಿಂ ಲುಬ್ಧಕವಾ- ॥
ಹಿನಿಯಂ ಮರ್ದಿಸು ಧರೆಯೊ ।
ಳ್ನಿನಗಂ ತನಗಂ ಜವಂಗಮಿದಿರಾಂಪವರಾರ್॥೪೨॥

ಎಂದು ಮಂತ್ರಿಮಂಡಳಂ ಬಿನ್ನವಿಸೆ ಜನಕಂ ದಶರಥನಲ್ಲಿಗೆ ಲೇಖವಾಹಕರನಟ್ಟಿ ಸಮರಸನ್ನದ್ಧನಾಗಿ ಬೇಗಮೊಂದೆರಡು ಪಯಣಮಂ ನಡೆದನಿತ್ತಲ್,

ಬಾರಿಸಿ ಲೇಖಾರ್ಥಮನವ ।
ಧಾರಿಸಿ ದಶರಥಮಹೀಭುಜಂ ಪೊಯ್ಸುವುದುಂ॥
ಭೇರೀಭಂಭಾರವಮದು ।
ಬೈರವರವದಂತೆ ತೀವೆ ಗಗನೋದರಮಂ ॥೪೩॥

ಅನಂತರಮಾ ವೃತ್ತಾಂತಮಂ ತಿಳಿದು,

ಪುದಿಯೆ ವಿಭೂಷಣಾಂಶು ನಭಯಂ ತನುದೀಧಿತಿ ಬೇಱದೊಂದು ಜೊ-
ನ್ನದ ಸಿರಿ ಕಾರ ಕಾರಿರುಳ ಮೆಯ್ಸಿರಿ ತಪ್ಪದೆನಲ್ ದಿಗಂತಮಂ
ಪುದಿಯೆ ಬಳಾಚ್ಯುತರ್ತರುಣಕೇಸರಿವೋಲ್ಪುಗುತಂದರಿರ್ವರುಂ
ಕದನಮದೋರ್ದ್ಧಶರಥಕ್ಷಿತಿನಾಥ ಸಭಾಂತರಾಳಮಂ ॥೪೪॥



ಜಿನಭವನ ದರ್ಶನ ವರ್ಣನ

ಅಂತು ಬಂದು ತಂದೆಯ ಪದಾರವಿಂದಕ್ಕೆಱಗಿ,

ಲದೆಡಗೆಲದಾಸನದೊ ।
ಲಾಚ್ಯುತರ್ನೆಲಸಿ ಮೇರುನಗುಪವನಮಂ ॥
ಲೆವದರ್ಪಸರಿಸೆ ನಿ ।
ತ್ತಲಮುಕ್ತಭರಣಕಿರಣ ನಿರ್ಝರನೀರಂ ॥೪೫॥

ಅನಂತರಂ,

ಗೆಲೆ ನಿಟಮಮರ್ಧಚಂದ್ರನ ।
ವಿಲಾಸಮಂ ನೊಸಲೊಳೆಸೆಯೆ ಕರಸರಸಿಜಕು- ॥
ಟ್ಮಲಮಮೃತಕಳೆಗೆ ದಂತಾಂ ।
ಶುಲೇಖೆ ಮಾರ್ಪೊಳೆಯೆ ರಾಮಚಂದ್ರಂ ನುಡಿದಂ ॥೪೬॥

ದೇವರ್ ದಿಗ್ವಿಜಯವ್ಯಸ ।
ನಾವಷ್ಟಂಭದೊಳೆ ನಡೆಯದಾಟವಿಕರೊಳಾ- ॥
ದೀ ವಿಗ್ರಹಕ್ಕೆ ನಡೆವುದಿ ।
ದಾವುದು ಜಸಮಿಱುಪೆಗಾನೆ ಮುಖವಿಳಿಪುವುದೇ ॥೪೭॥

ಅದಱಿಂ ದೇವರೀ ಬೆಸನನೆನಗೆ ದಯೆಗೆಯ್ವುದಿವರನಾಸ್ವಾದಿತರಣರಸರ್ಕಿಱಿಯರೆಂದು ಬಗೆಯವೇಡದೆಂತೆನೆ,

ಕಿಡಿ ಕಿಱಿದಾದೊಡಂ ಸುಡದೆ ಕಾನನಮಂ ತರುಣಾರ್ಕನಾದೊಡಂ
ಕಿಡಿಸನೆ ತೀವ್ರಮಪ್ಪ ತಮಮಂ ಹರಿ ಬಾಳಕನಾದೊಡಂ ಪಡ-
ಲ್ವಡಿಸದೆ ಗಂಧಸಿಂಧುರಘಟಾವಳಿಯಂ ಕಿಱುಗೂಸೆನಲ್ಕೆವೇ-
ಡೆಡಱಿದರಂ ಜವಂಗೆ ಪೊಸೆದಿಕ್ಕನೆ ವಿಕ್ರಮಶಾಳಿ ಲಕ್ಷ್ಮಣಂ ॥೪೮॥

ಮಾತೇನೊ ಕಿಂಕಿರಾತಂ ।
ಪೂತಂತೆ ಕಿರಾತಸೇನ ಪುಣ್ಬಡೆ ಶರಸಂ- ॥
ಘಾತದ ಸವಿದೋರ್ಕುಂ ರಘು ।
ಜಾತಂಗೆಂಟನೆಯ ಕೇಶವಂಗಿದಿರುಂಟೇ ॥೪೯॥

ಅಂಬೇಱಿಂಗಾಂತರಂ ತತ್ತ ಱದಱಿಯ ಭುಜಾಗರ್ವಮಂ ಬಿಟ್ಟು ಬಾಯ್ವಿ-
ಟ್ಟಂಬೇಯೆಂಬನ್ನೆಗಂ ಬೆಂದಗುಳ್ದು ಮಱಿದು ಬಿಲ್ಬಲ್ಮೆಯಂ ನಾಡನಿನ್ನೆಂ-
ದುಂ ಬೇಡರ್ಪೊರ್ದದಂತಾಗಿರೆ ನಿಯಮಿಸಿ ಬಂದಪ್ಪೆನಾನೆಂದು ಶೌರ್ಯಾ-
ಳಂಬಂ ರಾಮಂ ರಣಕ್ಕರ್ತಿಗನೆನೆ ಬೆಸನಂ ತಂದೆಯಂ ಬೇಡಿಕೊಂಡಂ ॥೫೦॥

ಅಂತು ಬೆಸನಂ ತಂದೆಯಂ ಬೇಡಿಕೊಂಡು,

ಅಪರಿಮಿತಮೆನಿಪ ಚತುರಂ ।
ಗಪತಾನಿಕಿ ತಮಗೆ ಕದನಕೇಳಿಗೆ ನೆರಮ- ॥
ಲ್ತು ಪಕರಣಮೆನಿಸಿ ಕೋದಂ ।
ಡಪಾಣಿಗಳ್ ದಂಡಪಾಣಿಗೆಣೆಯೆನೆ ತಳರ್ದರ್ ॥೫೮

ಗೆಲಲರಿರಿವರಿರ್ವರ ದೋ ।
ರ್ಮಲಮಂ ತ್ರಿಭುವನದೊಳಿವರ್ಗೆ ನೆರಮಲ್ತು ಚತು- ॥
ರ್ಬಲಮಿನಿತುಂ ನುಡಿ ನೆರಮೆನೆ ।
ಬಲಾಚ್ಯುತರ್ನಿಚ್ಚವಯಣದಿಂದೆಯ್ತಂದರ್ ॥೫೨

ಅಂತೆಯ್ದೆ ಬರ್ಪುದುಮವನುಚಿತಪ್ರತಿಪತ್ತಿಯಿಂ ಕಾಣಿಸಿಕೊಂಡು,

ನೆಲಂ ಬೆಸಲೆಯಾದವೋಲ್ ನೆರೆದ ಲುಬ್ಧಕವ್ಯೂಹಮಂ
ಗೆಲಲನೆಱಿದೆನೀಗಳೆಂಬ ಬಲಗರ್ವಮಂ ತಾಳ್ದಿದಂ
ಬಲಾಚ್ಯುತರ ಕೂಟದಿಂ ಜನಕನುಗ್ರವನ್ಯದ್ವಿಪಂ
ಬಲಂಬಡೆದುದೆಂಬಿನಂ ವಿಕಟದಂತಕೂಟಂಗಳಿಂ ॥೫೩।

ಅನಂತರಮುದಾತ್ತರಾಘವನಮೋಘಶರಶರಾಸನಾದಿ ವಿವಿಧಾಯುಧಸನಾಥಮಪ್ಪ ರಥಮನೇಱಿ ಲಕ್ಷ್ಮಣಂ ಕಾಲ್ಗಾಪಿನೊಳ್ನೆರೆದು ಬರೆ ಜನಕಕನಕರ್ವಿ ಜಯ ಗಜಮನೇಱಿ ಮುಂಗೋಳೊಳ್ ನಡೆಯೆ ನಾಡ ಗಡಿಯನೆಯ್ದೆ ವರ್ಪಸಮಯದೊಳ್,

ಬಲಭಾರಕ್ಕೆ ಬಿಗುರ್ತು ಸುಯ್ಯೆ ಫಣಿರಾಜಂ ಸುಯ್ಲ ಪುಯ್ಲಿಂ ಧರಾ –
ವಲಯಂ ಕಿಱ್ತು ನಭಕ್ಕೆ ಪಾಱಿದಪುದೋ ಪೇೞೆಂಬಿನಂ ಭಾನುಮಂ
ಡಲಮಂ ಮಂಡಳಿಸಿತ್ತು ತದ್ಬಳಪದಪ್ರೋದ್ಭೂಲಧೂಳಿಚ್ಛಟಾ
ವಲಿ ಕಲ್ಪಾಂತಕೃಶಾನುಧೂಮಪಟಳೀಶಂಕಾಸಮುತ್ಪಾದಕಂ ೫೪

ಅನಂತರಂ ನೆಲಂ ಬೆಸಲೆಯಾದಂತೆ ಬರ್ಪ ಬೇಡವಡೆ ರಸೆಯಿನೊಗೆವಸುರರ ಪಡೆಯಂತೆಯುಂ, ವ್ಯೋಮತಳದಿನಿೞಿನ ಧೂಮಕೇತುಗಳಂತೆಯುಂ ಕಡೆಗಾಲದಡೆವೊತ್ತಿ ಸುತ್ತಲುಂ ನೆಗೆದ ಪೊಗೆಯಂತೆಯುಳಿ, ಪಡೆವ ನಂಜಿನ ಬಿಂಜದಂತೆಯುಣ, ಕರ್ಬುಲಿಯ ಹಿಂಡಿನಂತೆಯುಂ, ಸಿಂಹದ ಜಂಗ ಯಂತೆಯುಂ, ಜವನೆರ್ಮೆವೋರಿವಿಂಡಿನಂತೆಯುಂ, ಬಱಿಸಿಡಿಲ ಬಳಗದಂತೆಯುಣ, ಕಾಳಯಸಕಾಳಪುರುಸಪರಿಸಜ್ಜನದಂತೆಯುಂ, ಕಾಳರಕ್ಕಸನ ಸಂತಾನದಂತೆಯುಂ, ಕುಳಿಕನ ಕುಳಮುಹತ್ತರ ಕುಳದಂತೆಯುಂ, ಅರ್ಥಪ್ರಹಾರ ವರ್ಧನದಂತೆಯುಂ, ಯಮಘಂಟಸಂತಾನದಂತೆಯುಂ, ಮಾರಿಯ ಮೂರಿಯಂತೆಯುಂ, ಕ್ರೂರಗ್ರಹಪರಿಗ್ರಹದಂತೆಯುಮಗುರ್ವರ್ಗಮದ್ಭುತಮುಮಾದುವಲ್ಲಿಂ ಬಱಿಯಂ,

ಕರಿಗಳೆಜಂಕೆವಟ್ಟುಗಳವೋಲ್ನಡೆತಂದುವು ವಾಜಿರಾಜಿಗಳ್
ತೆರೆಗಳ ತೆರ್ಕೆಯಂತೆ ಕವಿತಂದುವು ಲುಬ್ಧಕಸೈನಿಕಾಬ್ಧಿಯೊಳ್
ಕರಿ ಮಕರಂಗಳಂತೆ ರಥಕೋಟಿಗಳಾಸುರಮಾಗ ಬಂದುವಾ
ಪರಿಸಿದುವಾವಗಂ ಗಗನಮಂ ವೃಕಕಾಕಶೃಗಾಲಕೇತುಗಳ್ ॥೫೫॥

ಬಲದೆವಸಕ್ಕೆತ್ತಾನುಂ ।
ಕಲಹಂ ದೊರೆಕೊಂಡುದೆಂದು ಕೆಲಬರ್ಬಿಲ್ಲಂ
ಗೊರೆತೊತ್ತಿ ತೀವಿ ತೆಗದೇಂ ।
ನಲಿವರಿದರೊ ಜನವ ದೂತರೆನಿಸಿ ಕಿರಾತರ್ ॥೫೭॥

ಕರಿಘಂಟಾನಾದಂ ಹಯ ।
ಖುರಪುಟನಿನದಂ ವರೂಥಚೀತ್ಕಾರಂ ಕಿಂ– ॥
ಕರಚಾಪಟಂಕೃತಂ ಘೋ ।
ರ್ಗರೆವಿನಮಾರ್ದೆತ್ತಿದತ್ತು ವನಚರ ಸೈನ್ಯಂ ॥೫೮॥

ಮತ್ತಿತ್ತ ರಾಮಚಂದ್ರನ ಬಲಮೆ ಚಂದ್ರಬಲಮಾಗೆ,

ಆನೆ ಹಯಂ ತೇರಾಳೆಂ ।
ಬೀ ನಾಲ್ಕುಂ ಸೇನೆ ಬೇಡವಡೆಯೊಡೆಯನ ಪೇ ॥
ರಾನೆ ಹಯಂ ತೇರಾಳೆಂ ।
ಬೀ ನಾಲ್ಕುಂ ಸೇನೆಯೊಡನೆ ತಾಗಿದುವಾಗಳ್ ॥೫೯॥

ಪಂದಲೆ ಪಾಜಿ ಪುಟ್ಟೆ ಬಿಸುನೆತ್ತರ ಸುಟ್ಟುರೆ ಬಾಣಜಾಳದಿಂ
ಪಂದರನಿಕ್ಕಿದಂತಿರೆ ನಭಂ ಮದದಾನೆಯ ದಂತಶಲ್ಕಮಂ
ಟುಂ ದೆಸೆಗುಳ್ಕದಂತೊಗೆಯೆ ಕೂರಸಿ ಕೂರಸಿಯೊಳ್ಪಳಂಚೆ ಘೋ
ರಂದೊಡನುಣ್ಮೆ ತೋರಗಿಡಿ ತಾಗಿದುವಂದೆರಡುಂ ಚತುರ್ಬಲಂ ॥೬೦॥

ಅಂತು ಕಾದುವಾಗಳ್,

ಇನಿತು ಸಿಡಿಲ್ಗೆ ಕಾಯ್ಪನಿತು ನಂಜಿನ ಗಾಳಿಗೆ ವೇಗಮಿಲ್ಲೆನಲ್
ಕನಕನವಾಜಿಯೊಳ್ಪಿಡಿದು ಕಟ್ಟಿದನಳ್ಕುಜಿ ಸುತ್ತಿಮುತ್ತಿದಂ
ಜನಕನನೆಚ್ಚನಚ್ಚುಡಿಯ ಲಕ್ಷ್ಮಣನೇಜಿದ ತೇರನಾವನಾಂ –
ಪನೊ ಯಮನಂ ತರಂಗತಮನಂ ಸುಭಟೋತ್ತಮನಂ ಮಹಾಜಿಯೊಳ್ ॥೬೧॥

ತೇರಚ್ಚಂ ಮುಜಿಯೆಚ್ಚು ಬಿಲ್ಲನುಡಿಯೆಚ್ಚಶ್ವಂಗಳಂ ಸೂತನಂ
ಕೂರಂಬಿಂ ಕೆಡೆಯೆಚ್ಚು ತಾಂ ಗಡೆನಗಂ ಮಾಜಾಂಪ ಗಂಡಂ ಗಡೆಂ –

ದಾರುತ್ತುಂ ಗೆಲೆ ಕಾದೆ ಲಕ್ಷ್ಮಣನುಮಂ ಕಂಡಂತದಂ ಲೋಕಸಂ –
ಹಾರಂ ಮಾಳ ಕೃತಾಂತನಂತೆ ರಘೂಜಂ ಕೊಂಡಂ ಧನುರ್ದಂಡಮಂ ॥೬೨॥

ಒದವಿದ ಚಾಪಟಂಕೃತಿ ಭಯಂಕರಮಾಗೆ ವರೂಥಭಾರದಿಂ –
ದದಿರೆ ನೆಲಂ ಮನಃಪವನವೇಗದಿನೆಯ್ದಿ ಬಳಂ ಮಹಾಬಳಂ
ಕದನಮದಾವಿಳಂ ಕಱಿಯೆ ಬಲ್ಸರಿಯೆಂಬಿನಮಂಬನಂಬು ಸ –
ಟ್ಟುದೆ ನೆಱನಾಗೆ ಕೂಡೆ ಗತಜೀವಿತಮಾಯ್ತು ಕಿರಾತ ಸಾಧನಂ ॥೬೩॥

ಆಗಳ್,

ಗೆಲ್ದಾರೆ ಜನಕಸೇನೆ ಸ ।
ಡಿಲ್ದಗಿಯೆ ಕಿರಾತಸೇನೆ ದಶರಥರಾಮಂ ॥
ಬಿಲ್ದೆಗೆದಿಸೆ ಮಾರ್ಪಡೆಯೊಳ್ ।
ಬಲ್ದಲೆಯರ್ ಶಬರನಾಯಕ್ ಪಡಲಿಟ್ಟರ್ ॥೬೪॥

ಆ ಸಮಯದೊಳ್ ಲಕ್ಷ್ಮಣರಂ ಲಯಸಮಯಸಮುತ್ಪಾದನ ಸಮಗ್ರ ವೀರಗ್ರಹಾವೇಶಮನಪ್ಪುಕೆಯ್ದು,

ಪಾರದೆ ಕೈದುವ ಬಲಮಂ ।
ಪಾರದೆ ನೆಲವಲಮನೊಂದು ತೋಳ್ವಲದಿಂ ಸಂ ॥
ಹಾರಿಸಿದಂ ಮಾರ್ಬಲಮಂ ।
ವಾರಿಜನಾಭಂಗೆ ಸಂಗರಕ್ಕಿದಿರುಂಟೇ ॥೬೫॥

ಅಂತು ರಾಮಲಕ್ಷ್ಮಣರ್ ಕಡಂಗಿ ಕಾದುವಾಗಳವರ ಬವರಕ್ಕೆ ಸುಗಿದು ಮೆಯ್ದೆಗೆವ ಬೇಡವಡೆಯಂ ಕೂಡಿಕೊಂಡು,

ಅಧಿರದಿದಿರ್ಚಿ ತಾಗಿದ ತರಂಗತಮಂ ದಿನನಾಯಕಂಗಿದಿ –
ರ್ಚಿದ ತಮದಂತೆ ಮೆಯ್ದೆಗೆಯೆ ಮಾರ್ಬಲದಾನೆಗೆ ಕೂಟಪಾಕಳಂ
ಕುದುರೆಗೆ ಕರ್ಣದೂಷಿಕೆ ರಥಕ್ಕೆ ಸಿಡಿಲ್ ಭಟಮಂಡಳಕ್ಕೆ ಕೆಂ –
ಡದ ಮಱಿಯೆಂಬಿನ ಪೆರ್ಮಟಿಯಂ ಹಳಾಯುಧಂ ॥೬೬॥

ಕಾದಲಿದಿರ್ಚಿ ಕಯ್ದುವಿಡಿಯಲ್ಪಗೆದಪ್ಪುದು ಮೊಗ್ಗೆ ಮಂಜಿನಂ –
ತಾದುದು ನಂಜನೆಂಜಲಿಸಿದಂತೆವೊಲಾದುದು ಬೇಗೆ ಪರ್ವಿದಂ –
ತಾದುದು ಗಾಳಿಗೊಡ್ಡಿದ ಮುಗಿಲ್ಗೆಣೆಯಾದುದು ಕೂಡೆಯೊಕ್ಕಿದಂ
ತಾದುದು ರಾಮಬಾಣಪತಿಯಿಂದಿದಿರಾದ ವಿರೋಧಿಸಾಧನಂ ॥೬೭॥

ಆಗಳ್,

ಲವಱಿಯೆ ತರಂಗತಮಂ ।
ಲಾಯನೋದ್ಯುಕ್ತನಾಸೆವಟ್ಟಂ ಜಂಘಾ – ॥
ಲಮಂ ದಶರಥರಾಮನ ।
ಲೀಮುಖಕ್ಕೆಡಱುವಂತವಂ ದಶಮುಖನೇ ॥೬೮॥

ಡಲೊಡರಿಸುವೊಡಂ ತೊಡೆ ।
ೀಡೊಡರಿಸಿದಪ್ಪುದೆಂದು ಭಯರಸದಿಂದ – ॥
ೄಡೆ ಮನಂ ಕೈದುವನೀ ।
ಾಡಿದನಂಜಿಸುಗುಮಾರುಮಂ ರಾಮಶರಂ ॥೬೯॥

ಱಿಲಾಳ್ತನಕ್ಕವಂ ನೀ ।
ಱಿವಂತಶಳವಱಿದು ಸೂಸೆ ಕಣ್ಣೀರ್ತೇರಿಂ ॥
ಱಿದಂ ನೆಲಕ್ಕೆ ಜಸಮಡಿ ಗಿಱಿವಿನೆಗಂ
ಬ್ಧಕಂ ನೆಲಂ ಪಱಿವಿನೆಗಂ ॥೭೦॥

ಗಿದಿರೆ ಸಂಪ್ರಮಂಡಲದ ಮುಂದೆ ತಮಂ ಕಿಡೆದಿರ್ದುದೆಂಬಿನಂ
ಮುಗಿಯೆ ಕರಾಂಬುಜಂ ಕುವಳಯಂ ನಗುವಂತಿರೆ ರಾಮಚಂದ್ರನೇ–
ಗ್ಗೆ ದೆಸೆಗಟ್ಟು ತೊಟ್ಟನೆ ತರಂಗತಮಂ ಶರಣೆಂದು ಬೀೞ್ವಮಂ
ಗನಮನಾಗಳಾವರಿಸಿದತ್ತಪಹಾರಘನಾಘನಸ್ವನಂ ॥೭೧॥

ಂಬರಮಂ ವಿಜಯಪತಾ ।
ಾಂಬರಮೊಡನೊಡನೆ ಸಕಳದಿಗ್ವನಿತಾವ – ॥
ತ್ರಾಂಬುಜಮನಭಯಘೋಷಂ ।
ಚುಂಬಿಸಿದುದು ಕಱಿದುದಮರಕುಸುಮಾಸಾರಂ ॥೭೨॥

ಂಜದಿರಂಜದಿರೆನೆ ಮುಗಿ ।
ನಂಜಳಿಪುಟಮಂ ತರಂಗತಮನಿದಿರೊಳ್ನಿಂ – ॥
ನಂಜನಗಿರಿಯವೊಲಿರೆ ಕೊ ।
ಟ್ಟಂ ಜಯಜಾಯಾಸಹಾಯನಭಯಮನಾಗಳ್ ॥೭೩॥

ಮುತ್ತಿನ ಪೊನ್ನ ಪೆರ್ದುಡುಗೆಯಂ ವಸನಂಗಳನಿತ್ತರಣ್ಯದೊ–
ಕ್ಷಿತ್ರರಿಪಂತುನಾಡಗಡಿಯಂ ಮಱಿದುಂ ಪುಗದಂತವಂಗೆ ಭೂ
ಪೋತ್ತಮನಾಜ್ಞೆಯೆಂಬ ಮಣಿಮಂಡನಮಂ ನಡುನೆತ್ತಿಗಿತ್ತು ದಿ
ಗ್ಭಿತ್ತಿಗೆ ಕೀರ್ತಿ ಚಂದನವಿಲೇಪಮನಿತ್ತನಿದೇನುದಾತ್ತವೋ ॥೭೪॥

ಪ್ರಬಲನಬಲನಪೊಲಂತಾ ।
ಶಬರಂ ಬೀಱಿಕ್ಕೊಂಡು ಬೇಗಮೆಂದುದನೇಗೊ– ॥
ಡು ಬರ್ದುಂಕಿ ಪೋದನೆನೆ ರಾ ।
ಮಬಾಣಮಂ ಕದನಭೂಮಿಯೊಳ್ ಮೀಱುವರಾರ್ ॥೭

ಆಗಳನೇಕ ಮಂಗಳಾನಕರವಂಗಳೊದವೆ,

ನಗುವಂತೆ ಹೆಜರ ಬಿಲ್ವ ।
ಲ್ಮೆಗಳಣ ತಣ್ಬೆಳಗನುಗುಳೆ ಪೂಜಿಪ ನೆವದಿಂ
ಜನದಧಿಪಧನುರ್ಗುಣಮಂ ।
ತ್ರಿಗುಣೆಸಿದಂ ತೋರಮುತ್ತಿನೆಕ್ಕಾವಳಿಯಿಂ ॥೭೬

ಅಂತು ಪೂಜಿಸಿ,

ಮಾರಣಮಂತ್ರನಾದಮೆನಿಸಿತ್ತು ವಿರೋಧಿಗೆ ಶಾಂತಿಕಕ್ರಿಯಾ –
ಕಾರಣಮಂತ್ರನಾದಮೆನಿಸಿತ್ತು ಧರಿತ್ರಿಗೆ ಮೃತ್ಯುವಂಚನೋ –
ಚ್ಚಾರಣಮಂತ್ರನಾದಮೆನಿಸಿತ್ತೆಮಗಚ್ಚರಿ ನಿನ್ನ ಚಾಪಟಂ –
ಕಾರನಿನಾದಮೊಂದೆ ಪಲವುಂ ತೆಱನಂ ತಳೆದಂದಮಾವುದೋ ॥೭೭

ಏನಂ ಪ್ರತ್ಯುಪಕಾರಮ ।
ನಾನೊಡರಿಸುವಮ ಕುಮಾರ ಕನ್ನೆಯನಿತ್ತೆಂ ॥
ಮೇನಕೆಯಿಂ ಮಿಗಿಲೆನಿಸಿದ ।
ಜಾನಕಿಯಂ ಮದನವಶ್ಯಮಣಿದೀಪಿಕೆಯಂ ॥೭೮

ಅನುಬಂಧಮನ್ವಯಾಗತಮೆನಿಸಿದುದದನಧಿಕಮಾಗೆ
ಮಾೞ್ಪನುನಯದಿಂ –
ದನನುಗುಣಸಸ್ಯಸಂಪಾ ।
ದನಸೀತೆಯೆನಿಪ್ಪ ಸೀತೆಯಂ ನಿನಗಿತ್ತೆಂ ॥೭೯

ಎಂದು ನುಡಿದು ರಾಮನುಮಂ ಸೌಮಿತ್ರಿಯುಮಂ ವಸ್ತ್ರಭೂಷಣದಿನರ್ಚಿಸಿ ಜನಕಂ ಕತಿಪಯ ಪ್ರಯಾಣಂಗಳಿಂ ಕಳಿಪುವುದುಂ ರಾಮಲಕ್ಷ್ಮಣರಯೋಧ್ಯೆಯುಂ ಪೊಕ ಸುಖದಿನಿರ್ಪುದುಮೊಂದು ದಿವಸಂ,

ಜನಕಂ ತನುಜೆಯನಿತ್ತಂ ।
ಮನುವಂಶಲಲಾಮನಪ್ಪ ರಾಮಂಗೆಂಬೀ ॥
ಜನವಾರ್ತೆಗೇಳ್ದು ನಾರದ ।
ಮುನಿಗಾದುದು ನೋಡೆ ಕೌತುಕಂ ಜಾನಕಿಯಂ ॥೮೦।

ಂಡಿರ ಲೀಲೆಯಣ ಯತಿಗೆ ಸೋಜ್ಗುಮು ಪಾೞಿಯೆ ಮುಂಜಿ ಕಚ್ಚುಟಂ
ಂಡಿಕೆ ಜೋಳಮಂಡೆ ಮಣಿದಂಡಮಿವೀಕ್ಷಣ ಸೌಖ್ಯಹೇತುವೇ
ಂಡೊಡೆ ಬಾಲೆಯರ್ತಮಗೆ ಪೇಸದೆ ಮಾಣ್ಬರೆ ನಾರದಂ ಮರು–
ಳ್ಗೊಂಡವೊಲಾಗಸಕ್ಕ ನೆಗೆದಂ ವೃಥೆಯಲ್ತೆ ಸರಾಗಸಂಯಮಂ ॥೮೧॥

ಅಂತು ನಾರದಂ ಗಗನಪಥದಿಂ ಮಿಥಿಳೆಗೆವಂದು ಕನ್ನೆವಾಡದ ಬಾಗಿಲ್ವಾಡಮಂ
ಗುವಾಗಳ್,

ರಿಮುಗುಳಿಂ ತುಱುಗಿದ ತಾ ।
ರೆಗೊಳದೊಳಗಾಡುವಂಚೆವೆಣ್ಣನದೇಂ ಚ – ॥
ರಿಸಿದಳೊ ಸೀತೆ ಕನ್ಯಾ ।
ರೀತೆ ವೈಡೂರ್ಯರತ್ನಮಯವೇದಿಕೆಯೊಳ್ ॥೮೨॥

ಆಗಳಪ್ಪರಷ್ಟಪೂರ್ವಮಂ ನಾರದನ ವಿಕೃತಾಕಾರಮಂ ಕಂಡು ತರುಣಿ ಪರಿಣೆಯಮತೆ
ರ್ಚಿ ಬೀೞೆತೋಡುವುದುಂ,

ತ್ತರುಣಿಯ ಬೞೆವೞೆಯಂ ।
ತ್ತಿ ಹಿತಾಹಿತವಿವೇಕವಿಕಳಂ ಪೞೆಯಂ ॥
ತ್ತಾ ಮುನಿಪಂ ಭ್ರಾಮಕ ।
ತ್ತೆಳಸುವ ಪಚ್ಚೆಗರ್ಬುನಕ್ಕೆಣೆಯಾದಂ ॥೮೩॥

ಾರದನೇಂ ತಳೆದನೋ ಕಾಂ ।
ಾರತ್ನಮನೆಳಸಿ ಪರಿವ ಪರಿಣತಿಯಿಂ ನಿ। ॥
ಾರಮನಂ ನೀಳಶಳಾ ।
ಾರತ್ನಮನಳಸಿ ಪರಿವ ತೃಣಪರಿಣತಿಯಂ ॥೮೪॥

ಅಂತು ಬೞೆಯನುೞೆಯದೆಯ್ತರ್ಪುದುಂ,

ಾತ್ರಿ ಪೞೆವಂತು ತನ್ನಂ ।
ಾತ್ರೀಜನವಡಸಿ ಪಿಡಿದು ಪರಿಭವಿಸುವುಂ ॥
ಮಿತ್ರಂ ಶಲಭಕ್ಕೆನೆ ಮುನಿ ।
ತ್ರೇಂದ್ರಿಯಲೋಭದಿಮದಮಂಧಘಪಟ್ಟಂ ॥೮೫॥

ಆಗಳಾ ಕಳಕಳಮಂ ಕೇಳ್ದು,

ಡಿತಲೆಯಣ ತೂಗುತ್ತುಂ ।
ಡುಗಲಿಗಳ್ ಮುಟ್ಟಿ ಬಪ್ಪುದುಂ ಭಯರಸದಿಂ ॥

ವಡುತ್ತುಂ ನಾರದಮುನಿ ।
ಕುಡಿಮಿಂಚಿನ ಗೊಂಚಲಂತೆ ಗಗನಕ್ಕೊಗೆದಂ ॥೩

ಅಂತು ಪೊಳೆದು ಪಾಱೆ,

ಪಿಂದಂ ಬಂದಗುಳ್ದಪ್ಪರೆಂದು ಪೆಱಗಂ ನೋಡುತ್ತು ನೋಡುತ್ತುಮೆ –
ಯ್ತಂದಂ ಗಾಳಿಗೆಱಂಕೆ ಮೂಡಿದವೊಲಾಕಾಶಂಬರಂ ನೀಳ್ದುದಂ
ಕುಂದೇಂದು ಪ್ರಭೆಯಿಂ ಮನಂಗೊಳಿಪುದಂ ವಿದ್ಯಾಧರೀಲೋಚನಾ –
ನಂದಸ್ಯಂದಿ ತಟೀವಿಳಾಸವನಮಂ ಕೈಳಾಸಮಂ ನಾರದಂ ॥೮

ಅಂತಾ ನಗಮನೆಯ್ದಿ ಸಾನುನಂದನಲತಾಮಂದಿರದೊಳಗಣೆಂದುಕಾಂತಶಿಲಾ
ದೊಳ್ವಿಶ್ರಮಿಸಿ ಮನೋವಿಷಾದ ಮುಮಂ ಗಗನಾಧ್ವಖೇದಮುಮಂ ಕಳೆದು ತನ್ನೊಳಿಂತೆ

ಖೇದಮನೆನಗಿನಿತಂ ಸಂ ।
ಪಾದಿಸಿದಾ ಕನ್ನೆಗಟಿಲನದವಱಲ ಸಂ
ಪಾದಿಸುವೆನೆಂದು ಪರಪೀ ।
ಡಾ ದುಶ್ಚರಿತಕ್ಕೆ ನಾರದಂ ಬಗೆದಂದಂ ॥೮

ನೂಲ ಪವಣ್ಪವಣ್ಗೆವರೆ ನಿಮ್ನಘನೋನ್ನತಮಂ ಪ್ರದೇಶಮಂ
ಪಾಲಿಸಿ ನಾರದಂ ವಿಷಮ ಚಿತ್ರವಿಚಿತ್ರಕಳಾವಿಶಾರದಂ
ಬಾಲೆಯ ಮುದ್ದುಗೆಯ್ತು ಮುಮನಾಕೆಯ ಸೌಂಪರರೂಪಮಂ ಮಹಾ –
ಲೀಲೆಯುಮಂ ದುಕೂಲಪಟದೊಳ್ಬರೆದಂ ಪ್ರತಿಬಿಂಬಮೆಂಬಿನಂ ॥೮೯

ಅಂತು ಪರಿವಿದ್ಧಪರಿಣತೆಯಿಂ ಮೆಱೆದಾ ಪಟಮಂ ವಿದ್ಯಾಧರರಾಜದಾ
ರಥನೂಪುರಚಕ್ರವಾಳಪುರದ ಪೊಱವೊಟಿಲ ವಿನೋದವನದೊಳಗಣ ಮಣಿಭವನದೊ
ನೆಱೆಪಿ ಪೋಪುದುಮಿತ್ತಲ್,

ಕೆಲವರ್ಖೇಚರರಾಜಕರ್ಬಳಸೆಯುಮ ಕೇಳೀವನಸ್ಥಾನದೊಳ್
ಚಲನನ್ಯಾಸವಿಳಾಸಮಂ ಮೆಱೆಯೆ ದೇಹಚ್ಛಾಯೆಯುಂ ರತ್ನಕುಂ -
ಡಲಭೂಷಾರುಚಿಯುಂ ಪಳಂಚಿ ದೆಸೆಯುಂ ಸೌಂದರ್ಯದಿಂ ಮನ್ಮಥಂ –
ಗಲಗಿಕ್ಕಲ್ಲಡೆವಂತೆ ಮಂದಗತಿಯಿಂ ಬಂದಂ ಪ್ರಭಾಮಂಡಲಂ ॥೯೦

ಅಂತು ಬರುತ್ತುಮಾನಿಕೇತನದೊಳಿರ್ದ ಚಿತ್ರಪಟಮಂ ನೋಡಿ,

ಸಮುದಾಯಶೋಭೆ ವರ್ಣ ।
ಕ್ರಮದಿಂ ಪ್ರತ್ಯೇಕಶಾಖೆ ಚೆಲ್ವಿಂ ನಯನ – ॥

ಕ್ಕಮರ್ದಂ ಮುಂಡಿದೆ ಖೇಚರ ।
ನೆಮೆಯಿಕ್ಕದೆ ಬಯಸಿ ನೋಡಿ ಬರೆಪದ ಪೆಣ್ಣಂ ॥೯೧॥

ಅನುರಾಗಂ ತನಗಾಗೆ ಕಂಡನಿತಱಿಂದಾವಿದ್ಧಮಂ ತನ್ನ ಮು –
ನ್ನಿನ ಜನ್ಮಾಂತರದಚ್ಚಿಱಿಂ ಪೊಸಯಿಪಂತಾಳೋಕಿಸುತ್ತಿರ್ಪುದುಂ
ಸನೆಯಂಬಿಂದಿಸೆ ನಿರ್ದಯಂ ಮನಸಿಜಂ ಕರ್ಣಾಂತವಿಶ್ರಾಂತಲೋ –
ಚನಯುಗ್ಮಂ ನಸುಮುಚ್ಚೆ ಮುಚ್ಚೆಗೊಳಗಾಗಿರ್ದಂ ಪ್ರಭಾಮಂಡಲಂ ॥೯೨॥

ಬರೆದುರಗಲೇಖೆ ಮೂರ್ಛಾ ।
ಪರಿಣತಿಯಂ ಮಂತ್ರಶಕ್ತಿಯಿಂ ಪುಟ್ಟಿಪವೋಲ್ ॥
ಬರೆಪದ ಕನ್ನೆ ಭವಾಂತರ ।
ಪರಿಚಯದಿಂ ಮೋಹಮೂರ್ಛೆಯಂ ಪುಟ್ಟಿಸಿದಳ್ ॥೯೩॥

ಅದನಾತನ ತಂದೆಯಪ್ಪಿಂದುಗತಿ ಕೇಳ್ದು ಸಂಭ್ರಮದಿಂ ಬಂದು ಶೀತಲಕ್ರಿಯೆಗಳನೊಡರ್ಚೆ

ಶಿಶಿರೋಪಚಾರದಿಂ ಖಚ ।
ರಶಿರೋಮಣಿ ನಯನಕುವಲಯಂ ಬಿರ್ಚೆ ಮನೋ – ॥
ಜಶಿಲೀಮುಖಕೀಲಿತಹೃ ।
ತ್ಕುಶೇಶಯಂ ತಡೆದು ಮೂರ್ಛೆಯಿಂದೆಚ್ಚತ್ತಂ ॥೯೪॥

ತದನಂತರಮಾವಿಯಚ್ಚರಾಧಿರಾಜನೀ ಪಟಮನಿಲ್ಲಿಗಾರ್ತಂದರೆಂದುಮ್ಮಳಿಸುತ್ತುಮಿರೆ ನಾರದನಾಗಳಲ್ಲಿಗೆ ಬಂದು ಚಿತಾಸನದೊಳಿರ್ದು ಖಚರಪತಿಗಿಂತೆಂದಂ,

ಜನಕಂ ಮಿಥಿಲಾಧಿಪನಾ ।
ತನ ವನಿತೆ ವಿದೇಹಿಯೆಂಬಳಾಕೆಗೆ ವಿಯದಂ ॥
ಗನಗೆ ತುಹಿನಾಂಶುಕಳೆಯನೆ ।
ಜನಿಸಿದಳ್ ಸೀತೆಯೆಂಬ ಕನ್ಯಾರತ್ನಂ ॥೯೫॥

ಸುರವಿದ್ಯಾಧರ ಕನ್ಯಕಾಜನದೊಳಾ ಸ್ತ್ರೀರತ್ನಮಂ ಪೋಲ್ವರೊ –
ರ್ವರುಮಿಲ್ಲೀ ನೃಪರತ್ನವಾಕೆಗನುರೂಪಂ ರತ್ನಮೇಳಾಪಕಂ
ದೊರೆವೆತ್ತಿರ್ಕುಮಿದಂ ನಿವೇದಿಸುವೆನೆಂದಾ ಕನ್ಯಕಾವಿದ್ಧಮಂ
ಬರೆದಾನಿಲ್ಲಿಗೆ ತಂದೆನಕ್ಕೆ ನಿಮಗಂ ಭದ್ರಂ ಶುಭಂ ಮಂಗಳಂ ॥೯೬॥

ಎಂದು ನಾರದಂ ಪರಸಿ ಪೋಪುದುಮಿತ್ತಲ್,

ಏನುಮನಾರೊಳಂ ನುಡಿಯದುಮ್ಮಳದಿಂ ವಿರಹಾಕುಲಂ ಮನೋ–
ಗ್ಲಾನಿಯನೊಂದಿ ಹೆಣ್ಣಬರೆಪಂ ಬರೆದಂತಿರೆ ಚಿತ್ತಭಿತ್ತಿಯೊಳ್
ಜಾನಿಸಿ ಚಿತ್ತಮಂ ಪುದಿಯೆ ಮೋಹತಮಂ ಬೆಮರುಣ್ಮೆ ಪೊಣ್ಮೆ ಲ –
ಜ್ಞಾನಮಿತಾನನಂ ತಳೆದನಾ ಖಚರಾಗ್ರಣಿ ಮೌನಮುದ್ರೆಯಂ ||೯೭|

ಅಂತು ದಿಙ್ಮೂಢನಾದ ಮಗನ ಮೊಗಮನಿಂದುಗತಿ ನೋಡಿ,

ಮಾನವಕನ್ಯೆಯಂ ಬಯಸಿ ನಂದನ ನಿನ್ನ ಮನಕ್ಕೆ ಚಿಂತೆಯಂ
ಮ್ಲಾನತೆಯಂ ಮುಖಕ್ಕೆ ತರವೇಳ್ವುದೆ ಕೊಳ್ಕೊಡೆಗಟ್ಟಿವಟ್ಟೆನಂ
ದಾನೆರೆವಟ್ಟಿ ನಿನ್ನ ದೊರೆಯಂ ವರನಂ ಪಡೆದಿರ್ಮೆ ಕೇಳ್ವೆನೇ
ಜಾನಕಿಯಂ ವಿವಾಹವಿಧಿಯಿಂ ಜನಕಂ ನಿನಗೀಯದಿರ್ಪನೇ ||೯೮||

ಎಂದು ನಿಜನಂದನನ ಮನೋವಿಷಾದಮಂ ಕಳೆದು ನಮಗಿಲ್ಲಿಗೆ ತಕ್ಕುದಾವುದೆನೆ ವಿಯಚ್ಚರವೀರನೊರ್ವನಿಂತೆಂದಂ :

ಇದು ಮಂತ್ರಾಲೋಚಂಬರ ।
ಮುದಾತ್ತಮಣಮಲ್ತು ಮಿಥಿಳೆಯಂ ಜನಕನುಮಂ ॥
ಬೆದಱಿಸಿ ಜಾನಕಿಯಂ ತ ।
ರ್ಪುದು ಮಾೞ್ಪುದು ದೇವ ಸುತವಿವಾಹೋತ್ಸವಮಂ ||೯೯||

ಎನೆ ವಿಯಚ್ಚರೇಂದ್ರನಿಂತೆಂದಂ :

ಈಯೆ ತರವೇೞ್ಪುದಬಲೆಯ ।
ನೀಯದೆ ತಂದಂದು ತನಗದತ್ತಾದಾನಂ ॥
ಸ್ತೇಯಮದಱಿಂದಮದನ ।
ಶ್ರೇಯಮನಾಚರಿಸವಲ್ತೆ ಖೇಚರವಂಶಂ ||೧೦೦||

ಸಮನೆನಿಪನೊಡನೆ ಕೊಳ್ಕೊಡೆ ।
ಸಮನಿಸೆ ಸಮದತ್ತಿ ಭೂಚರರ್ ಖೇಚರರೊಳ್ ॥
ಸಮನಲ್ಲರ್ಸುತಮೋಹದಿ ।
ನೆಮಗಮಪಶ್ರೇಯಮಾದೊಡಂ ಕರಣೀಯಂ ||೧೦೧||

ಎಂಬುದುಮಿಂದ್ರಗತಿ ವಿಯಚ್ಚರೇಂದ್ರನಿಗೆ ಕುಲಮಹತ್ತರಂ ಚಂದ್ರವರ್ಧನನಿಂತೆಂದಂ:

ಎರೆದಟ್ಟಿದೊಡೀಯಭರ್ೞ ।
ಸರರೆಂತುಮನೀಚರವಜ್ರನಿಲ್ಲಿಗುಪಾಯಾಂ ॥
ತರದಿಂ ತಂದೆರೆಯೆ ಭಯಾ ।
ತುರಂ ನಿಜಾತ್ಮಜೆಯನೀವೊಡೀವಂ ಜನಕಂ ॥೧೦೨॥

ಎಂಬುದುಮಾ ಬೆಸನಂ ಚಪಲವೇಗನೆಂಬ ವಿದ್ಯಾಧರಂ ಬೇಡಿಕೊಂಡು,

ಗಗನೇಚರತೇಜಶ್ಶಿಖಿ ।
ಪಗವರ ಭಾಸುರಯಶೋವಿತಾನಮನುರಿಪಲ್ ॥
ನೆಗೆಮದೆನೆ ಚಪಳವೇಗಂ ।
ನೆಗೆದಂ ಗಗನಕ್ಕೆ ವಿಜಿತಚಪಳಾವೇಗಂ ॥೧೦೩॥

ಭೋಂಕನೆ ಬಡಗಣ ದೆಸೆಯಿಂ ।
ತೆಂಕಣ ದೆಸೆಗಾಗಿ ನಡೆದುದುಳ್ಕಮಿದೆಂಬಾ ॥
ಶಂಕೆಯನೊಡರಿಸಿ ಮಿಥಿಲೆಗ ।
ಶಂಕಿತನಾ ಖಚರನಿೞಿದನಂಬರತಳದಿಂ ॥೧೦೪॥

ಅಂತವನಿಗವತರಿಸಿ ಪುರಶ್ರೀಯ ಮುಖಶ್ರೀಯನನುಕರಿಸುವ ಕಮಳವನಸಮೀಪದೊಳ್ ವಿಶ್ರಮಿಸಿ ಜನಕಂ ಹಯಪ್ರಿಯನಪ್ಪುದಂ ತಿಳಿದು,

ನೃಪನೀತಂ ತುರಗಪ್ರಿಯಂ ವಿಷಮವಾಹಾರೋಹಣಾತ್ಯಂತಲೋ –
ಲುಪನೊಲ್ದೀಜವದೆ ಮಾಣನೀಜಿಮೊಡೆಸಾಲ್ಗುಂ ಕೊಂಡು ಪೋಪೆಂ ಮದೀ –
ಪುರಕ್ಕೆನ್ನಯ ಪ್ರಾಣಕ್ಕೆ ತೀರ್ಗುವಿದಜೆಂಪೋಗೆಂದು ನಿಶ್ಚೈಸಿ ರೂ –
ಪಪರಾವರ್ತನವಿದ್ಯೆಯಿಂ ತುರಗರೂಪಾದಂ ಚರಂ ಖೇಚರಂ ॥೧೦೫॥

ಅಂತು ವಿಷಮಹಯವೇಷಮಂ ತಳೆದು,

ಎಯ್ದಿದೆಡೆಯೆಲ್ಲಮಂ ಪರಿ ।
ದೆಯ್ದಿ ಪುರೋಪವನಮೆಲ್ಲಮಂ ತುಳಿದು ಪಲರ್ ॥
ಬಾಯ್ದೆ ಱೆ ದು ಪುಯ್ಯಲಿಡೆ ಕಡು ।
ಕೆಯ್ಯುಕ್ಕೆವಗುದುರೆ ಪೊಜಿಲನಜಲಿಸಿತಾಗಳ್ ॥೧೦೬॥

ಅದು ತಿಗುರಿಯಂದದಿಂ ತಿರಿ ।
ದುದು ಮುಂದಂ ನೆಗೆದು ಪಿಂದನೀಡಾಡಿ ಬಿಸಿ ॥
ಲ್ದುದುರೆಯವ್ರೋಲ್ಬಿಱುವರಿವರಿ ।
ದುದು ಕೆಳರ್ದ ಕೃತಾಂತನಿಂತಿದೆನೆ ಕೃತಕಾಶ್ವಂ ॥೧೦೭॥

ಕತ್ತರಿಸಿ ಕಿವಿಗಳಂ ನಸು ।
ಗುತ್ತುತ್ತುಂ ಮೆಯ್ಯ ಖಂಡಮಮಂ ಘುರುಘುರೆಸು ॥
ತ್ತೊತ್ತರಿಸೆ ಘೋಣ ಪವನನು ।
ದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯವೋಲ್ ॥೧೦೮॥

ಖರಖುರಪತಿಯಿಂ ಖರಮಂ ।
ಕರಭಂಗಳನಟ್ಟಿ ಮುಟ್ಟಿದಂತಾಹತಿಯಿಂ ॥
ಪರಿದೊರಸಿ ಮನುಷ್ಯರನಾ ।
ತುರಗಂ ಪುಗಿಸಿತ್ತು ನಿಮಿಷದಿಂ ಯಮಪುರಮಂ ॥೧೦೯॥

ಇಡೆ ಗುಂಡೆಯ್ದುವು ಪೊಯ್ದೊಡೆ ।
ಬಡಿಕೊಳ್ಳವು ತುತ್ತೆ ಕಯ್ದುವುರ್ಚವು ಮನದಿಂ ॥
ಕಡುಗಡಿದು ಮಿಥಿಲೆಯಂ ಕೂ ।
ಗಿಡಿಸಿಮುದದ್ಭುತತುರುರಂಗಮಂ ಸಿಂಗದವೋಲ್ ॥೧೧೦॥

ಕರೆ ವೋಯೆಂಬತ್ತಲಿತ್ತಲ್ ತೊಲಗು ತೊಲಗು ಪೋಗೆಂಬ ಬಾಯೆಂಬ ಬಿದ್ದಂ
ಬರಿಯೆಂಬೋವೋವೊ ಕಕೂಗಿಗಿದೆನುಡಿದೆನೇಗೆಯ್ವೆನೆಂಬುಚ್ಚನೀಚಂ
ಪುರುಷ ಸ್ತ್ರೀ ಬಾಲ ವೃದ್ಧ ಸ್ಥವಿರ ಯುವಜನಾತಂಕಾತಿರೇಕಂ
ಪುರದೊಳ್ಪೊಣ್ಮಿತ್ತು ವಿದ್ಯಾಧರಕೃತಕಹಯಾಟೋಪ ಘೋರಪ್ರಳಾಪಂ ॥೧೧೧॥

ಬಾಲಕರಂ ಕೆಲರ್ಮುದುಪರಂ ಕೆಲರವಿಹೀನರಂ ಕೆಲ
ರ್ಬಾಲೆಯರಂ ಕೆಲರ್ಪಿಡಿದು ಬೆಚ್ಚರದಿಂದರರೀಪುಟಂಗಳಂ
ಕೀಲಿಸಿ ತಮ್ಮ ತಮ್ಮ ಮನೆವೊಕ್ಕಿರೆ ತತ್ಪರುಮೆಲ್ಲಮಲ್ಲಕ
ಲ್ಲೋಲಮಕಾಲಮೃತ್ಯುಭಯವಿಹ್ವಲಮಾದುದು ಸೂಕಳಾಶ್ವದಿಂ ॥೧೧೨॥

ಆ ಸಮಯದೊಳ್,

ಕಳಕಳನಾದಮಾದ ತೆಜನಂ ಜನಕಂ ತಿಳಿದಾ ಸವಾರಿಗಳ್
ತಳೆದು ಖಲೀನಮಂ ತುರಿಪದಿಂ ಬರೆ ಸಂಧಿಸಿ ಪಿಂದೆ ರಾಜಮಂ
ಡಳಿ ಬರೆ ಬಂದು ನಿಂದು ಹಯಮಂ ನಡೆ ನೋಟ್ಟುದುಮಿಕ್ಷಣಾಂಶುಮಂ-
ಡಳಿಸಿಮುದಿಂಮುರಶ್ಮಿಯೊಲೆ ತೀರ್ಚಿತೊಡರ್ಚಿದ ಕೀಟಿ ಸೇಣವೋಲ್ ॥೧೧೩॥

ಅಂತು ನೋಡಲೊಡಂ,

ಸೂಕರಮಲ್ದಿದು ಸಕಳಗು ।
ಣಾಕರಮೆನೆ ಜನಕಮುಖವಿಲೋಕನದಿಂದು ॥

ಪ್ರೇಕಮನುಟಿದಿರೆ ವಾಹಕ ।
ನಾ ಕುಟಿಳಾಶ್ವಕ್ಕೆ ಖರಖಲೀನಮನಿಟ್ಟರ್ ॥೧೧೪॥

ಒಟ್ಟಜೆಗೆಟ್ಟು ಕಾರ್ಯವಶದಿಂ ಖಚರಂ ಪಿಡಿಪಟ್ಟು ಪಲ್ಲಣಂ
ಗಟ್ಟಿಸಿಕೊಂಡುಮೇನೊ ಮುಖಲೀನ ಖಲೀನ ಕಶಾಭಿಘಾತದಿಂ
ಕೊಟ್ಟನೆ ನೋವನೆಯ್ದುವನಿದಾವುದು ಚೋದ್ಯಮೊ ಕೈತವಕ್ಕೆ ಕೈ
ಗೊಟ್ಟ ಖಳಂಗೆ ತೀವ್ರಪರಿವೇದನ ಬಂಧನಮಾಗದಿರ್ಕುಮೇ ॥೧೧೫॥

ಅಂತು ಮಾಯಾಹಯಮಂ ಮಂದಿರಂಬುಗಿಸುವುದುಮಾಸಮಯದೊಳ್,

ಮೃಗನಾಭಿಯನಾನೆಯ ಕೊಂ ।
ಬುಗಳಂ ಪೆರ್ವಿದಿರ ತೋರಮುತ್ತಂ ಕಣ್ಪೇ ॥
ಳಿಗಳಂ ಮುಂದಿಟ್ಟೊರ್ವಂ ।
ಪುಗುತಂದಂ ರಾಜಭವನಮೊಳಗಂ ಶಬರಂ ॥೧೧೬॥

ಅಂತು ಬಂದು ತನ್ನ ತಂದುಪಾಯನಮಂ ಕೊಟ್ಟೆಱಗಿ ಪೊಡೆವಟ್ಟು ದೇವ ನಮ್ಮ ಬನದೊಳೊಂದು ಭದ್ರಗಜಮಿರ್ದುದೆಂದು ಬಿನ್ನವಿಸೆ,

ಜನಕಂ ವನ್ಯಗಜಾಳೋ ।
ಕನಕೌತುಕಚಿತ್ತನಾದನುಚಿತಮೆ ವಲಮಾ- ॥
ವನೊ ಭೂಭುಜಂ ಗಜಪ್ರಿಯ ।
ನೆನಿಸದನರಸಾನೆಯಿಲ್ಲದೇನೊಪ್ಪುಗುಮೇ ॥೧೧೭॥

ಅನಂತರಂ,

ಪರಿಜನಮುಮಾಪ್ತಜನಮುಂ ।
ಪರಿಕಾಱಿರುಮೋಜೆವಿಡಿಯುತೊಡವರೆ ವನ್ಯ ॥
ದ್ವಿರದನ ಬಂಧನಕೌತುಕ ।
ನರಣ್ಯಮಂ ಮುಟ್ಟೆವಂದನಂದು ನರೇಂದ್ರಂ ॥೧೧೮॥

ಆ ಮಹಾಗಹನ ಸರಸಲ್ಲಕೀ ಪ್ರದೇಶದೊಳ್,

ಮುಗಿಲೊಡ್ಡಂ ಗೆಲೆವಂದ ಕಾಯಭರದಿಂ ಪೊಂಬಟ್ಟನೊಟ್ಟೈಪ ದಿ
ಟ್ಟಿಗಳಿಂ ಕಾಳಿಗನಾಗನಂ ನಗುವ ಕೆಯ್ಯಿಂ ಕಾರ ತಂದಲ್ಪೊಲ
ಲ್ಲುಗುವೆಂಟುಂ ಮದವಟ್ಟೆಯಿಂ ಪೆಱೆಯ ಸೌಭಾಗ್ಯಕ್ಕೆ ತೋಡಾದ ಕೋ
ಡುಗಳಿಂದೇ ಜನಕಂಗೆ ಹರ್ಷಜನಕಂ ತಾನಾಯ್ತೊ ವನ್ಯದ್ವಿಪಂ ॥೧೧೯॥

ಆಗಳಾ ಗಜದ ಬೞಿಸಂದು ನಡೆವಾನೆವಾಹಕರೊಡನೆ ಪೋಗಲೆಂದು ಪಲ್ಲ
ಕೆಲದೊಳಿರ್ದ ಕೃತಕತುರಂಗಮಮಂ ತರಿಸಿ,

ಉಂಗುಟಮನಂಕವಣೆಗೆ ಕ ।
ರಾಂಗುಳಿಯಂ ಸ್ಕಂಧಸಂಧಿಗುಯ್ದೇಱಿದನು- ॥
ತ್ತುಂಗ ತುರಂಗಮಮಂ ನೃಪ ।
ತುಂಗಂ ಸೂಕಳಮಿದೆಂದು ಸೆಡೆದನೆ ಮನದೊಳ್ ॥೧೨೦

ಅಂತು ಬೆಂಗೆವಂದು ಕೀಱಿನಳವಡೆ ಪಿಡಿದು ತೊಡೆಯೊಳವುಂಕಿ ನೂಂಕುವುದು
ಬಿಸಿಲ್ಗುದುರೆಯುಂತೆ ಪೊಳೆದುಚ್ಚೈಶ್ರವದಂತೆ ನಭಕ್ಕೆ ನೆಗೆದು ರವಿರಥವಾಜಿಯಂ
ಪವನಪಥದೊಳ್ಪರಿವುದುಂ,

ತ್ರಿದಶಂ ಮೇಣ್ಖಚರಂ ಮೇ ।
ಣ್ಕುದುರೆಯರೂಪಿಂದಮರಸನಂ ಮುನ್ನಿನ ಜ ॥
ನ್ಮದ ಪಗೆವನೊಯ್ದನಂತ ।
ಲ್ಲದೊಡೆ ವಿಯದ್ಗಾಮಿಯಪ್ಪ ಕುದುರೆಗಳೊಳವೇ ॥೧೨೧

ಎಂದು ಸಕಳಜನಂ ವಿಕಳಮಾಗಿಯುಂ ನೈಮಿತ್ತಿಕನಿಂದರಸನ ಬರವನಱಿದುಮ್ಮ
ಮನುೞಿದಿರ್ಪುದುಂ,

ಎಡೆಯೆಡೆಯ ಬೆಟ್ಟನೆಡೆಯೆಡೆ ।
ಯಡವಿಯನೆಡೆಯೆಡೆಯ ನಾಡನೆಡೆಯೆಡೆಯೂರಂ ॥
ಮಿಡಿದನಿತು ಬೇಗದಿಂ ಕೞಿ ।
ದೊಡರಿಸಿದುದು ನೃಪತಿಗಾಹಯಂ ವಿಸ್ಮಯಮಂ ॥೧೨೨

ತ್ವರಿತದಿನೆಯ್ದೆವಂದು ಪುರಮಂ ರಥನೂಪುರಚಕ್ರವಾಳಮಂ
ಪುರವನವೀಥಿಯೊಳ್ನಡೆಯೆ ವಾಜಿವಿಳಂಬಿತದಿಂ ಧರಾಧಿಪಂ
ಧರಣಿಗೆ ಪಾಯ್ದು ಕೆಯ್ಯ ಕರವಾಳಳಿಮಾಲೆ ಸರೋಜಕೋಶದೊಳ್
ಪೊರೆಯದೆ ನೀಲ್ದಪೋಲಿರೆ ವಸಂತನನೇಳಿಸಿದಂ ವನಾಂತದೊಳ್ ॥೧೨೩

ಇಡಿದಡರೆ ಕಾಯ್ತ ಮಾಮರ ।
ದಡಿಯೊಳ್ವಿಶ್ರಮಿಸೆ ಪಥಪರಿಮ್ಲಾನತೆಯಂ ॥
ಕಿಡಿಸಿ ನರೇಂದ್ರಂ ತನ್ನೊಳ್ ।
ನುಡಿದಂ ಸಂಸೃತಿಯ ಕರ್ಮವಿಷಮಸ್ಥಿತಿಯಂ ॥೧೨೪॥

ಮೃತಂ ವಿಷಮಕ್ಕುಂ ವ ।
ಮಾದೊಡಾ ವಿಷಮುಮಮೃತಮಕ್ಕುಂ ವಿಧಿ ವ- ॥
ಮನುಟಿದೊಡಂತೆ ಹಯಮೆ ।
ಷ್ಷಮನಿಲ್ಲಿಗೆ ತಂದುದಿನ್ನಮಘಟಿತಮೊಳವೇ ॥೧೨೫॥

ನೆಲದಿಂ ಮಾಯಾಹಯ ।
ಯಾ ನೆಲದತ್ತೆನ್ನನೆಟಿದು ತರ್ಪುದುಮಾ ಕ- ॥
ಯಾನೆಯುಮಾ ಕುದುರೆಯುಮಾ ।
ನೆಯುಮೇನೆನಗೆ ಮಾಡಲಾರ್ತುವೆ ಹಿತಮಂ ॥೧೨೬॥

ಮನಿಸಿದನಿಷ್ಟಸಂಯೋ ।
ಮುಮಿಷ್ಟವಿಯೋಗಮುಂ ಚತುರ್ಗತಿಗಳೊಳಂ ॥
ಪ್ರಮಿಯಿಸೆ ಕೈಕೊಳ್ಗುಂ ತಾ ।
ಮಿಕ್ಕವರ್ನೆರೆದು ತನಗೆ ನೆರವಾದಪರೇ ॥೧೨೭॥

ಉದಯಿಸಿದ ಶುಭಾಶುಭಕ ।
ರ್ಮದ ಫಲಮಂ ಸದೃಶಮಾಗೆ ಕಾಣ್ಬುದು ಸಮಚಿ ॥
ತ್ತದೊಳಿರ್ಪುದು ತಕ್ಕುದು ತ ।
ಕ್ಕುದಲ್ತು ತಕ್ಕಂಗೆ ತಗದು ಹರ್ಷವಿಷಾದಂ ॥೧೨೮॥

ಎಂದುದಾತ್ತನಲ್ಲಿ ತಳರ್ದು ವನವಿಳಾಸಮಂ ನೋಡಿ ಮೆಚ್ಚುತ್ತುಂ ನಡೆಯೆ ನಡೆಯೆ ಮುಂದೆ ಮಾಕಂದನಂದನದ ಬಳಸಿನೊಳವಶೋಕವನದ ಪುದುವಿನೊಳಂ ನಾಗಚಂಪಕದ ಸುತ್ತಿನೊಳಮತಿರಮಣೀಯಮಾಗೆ,

ಪದೆಪಂ ಕಣ್ಗೆ ಮನಕ್ಕೆ ಸಂತೊಸಮನಿತ್ತೇಂ ಮಾಣ್ಬುದೇ ಮಾಣ್ಬುದಿ-
ಲ್ಲದು ಬೀಜಜ್ಞೊಂದಮರಾಚಳೀಂದ್ರಮೆನೆ ನಾನಾರತ್ನಕೂಟಾಂಶುಜಾ-
ಳದಿಳದಿನಾಶಾವಧುಗಿತ್ತು ಚಿತ್ರಪಟಮಂ ಚೈತ್ಯಾಲಯಂ ಮತ್ತಮಿ-
ತ್ತುದು ಸಪ್ತಾರ್ಣವ ಸಪ್ತಸಕ್ತಿಗೆ ಸಮಗ್ರಪ್ರಗ್ರಹಾಶಂಕೆಯಂ ॥೧೨೯॥

ಇದುಳ್ಳುಮುದನೇತ್ರದಿಂ ಕಮಳನೇತ್ರದಿಂದಂ ಪಗಲ್
ನಿರೀಕ್ಷಿಸುವಪೇಕ್ಷೆಯಿಂ ವಸುಧೆ ತಜ್ಜಿನಾವಾಸಮಂ
ಪರಸ್ಮಿತಮುಖಂಗಳಂ ಪಲವನಪ್ಪುಕೆಯ್ದಿರ್ಪವೋಲ್
ಸರಸ್ಸಮಿತಿ ಸುತ್ತಿ ಪೊಮ್ಮುಗಿಲ ಸುತ್ತಲುಂ ರಂಜಿಕುಂ ॥೧೩೦॥

ಅಂತತಿಶಯಮಪ್ಪ ಜಿನಭವನಮಂ ಕಂಡು ಬಲಗೊಂಡು,

ಅಳಿಮಾಳಾಮಿಳಿತಪ್ರಸೂನಸುರಭಿದ್ರವ್ಯಂಗಳಿಂದರ್ಚನಾ-
ಫಳಶಾಳ್ಯಕ್ಷತೆ ದೀಪದೂಫ ಚರುಸಂದೋಹಂಗಳಿಂ ಸರ್ವಮಂ-
ಗಳ ಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ ಜಿನಸ್ತೋತ್ರ ಚಾ-
ಪಳಜಿಹ್ವಾಗ್ರ ಸಮಗ್ರನಾಟಕನಟಂ ಸಾಹಿತ್ಯ ವಿದ್ಯಾಧರಂ ||೧೩೧

ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರ ಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತಪುರಾಣದೊಳ್
ಜನಕ- ಜಿನಭವನದರ್ಶನ ವರ್ಣನಂ
ಚತುರ್ಥಾಶ್ವಾಸಂ



# ೫. ಸೀತಾಸ್ವಯಂವರ ವರ್ಣನಂ

ಶ್ರೀಜಿನಗೃಹಮಂ ತ್ರಿಭುವನ ।
ಪೂಜಿತಮಂ ಪದ್ಮರಾಗಮಣಿತೋರಣವಿ ॥
ಭ್ರಾಜಿತಮಂ ಪೊಕ್ಕಂ ಜನ ।
ತಾಜಂಗಮಕಲ್ಪವೃಕ್ಷನಭಿನವಪಂಪಂ ॥೧॥

ಅಂತು ಪೊಕ್ಕು ಪವಪಯೋರುಹಮರೀಚಿಯಿಂ ಮಧ್ಯರಂಗಮನಳಂಕರಿಸಿ ಮುಕುಳಿತಕರಾಂಬುಜಂ ತ್ರಿಭುವನ ಪ್ರಭುಗಭಿಮುಖಿವಾಗಿ,

ಕೇವಳ ಬೋಧದಿಂದಱಿದು ಪಾತ್ರಮಪಾತ್ರಮಿದೆಂಬ ಭೇದಮಂ
ದೇವರ ದೇವ ಸಂಚಕರಮಕ್ಷಯಮೋಕ್ಷ ಸುಖಕ್ಕೆನಲ್ವಿನೇ
ಯಾವಳಿಗಿತ್ತುದಾತ್ತ ದಿವಿಜೇಂದ್ರನರೇಂದ್ರಫಣೀಂದ್ರರಾಜ್ಯಲ
ಕ್ಷ್ಮೀವಿಭವಂಗಳಂ ತಳೆದೆ ನೀಂ ಜಸಮಂ ಜಗದೊಳ್ಜಿನೇಶ್ವರಾ ॥೨॥

ಇತ್ತಪೆ ನೀನೆ ದೇಹಿಗನುರೂಪಮನಲ್ಪುಖಲೇಶಮಾದಿಯಾ-
ಗಿತ್ತಲನಂತಸೌಖ್ಯಮವಸಾನಮನಲ್ಪಜಿರಾರುಮಿಾವರಿ
ಲ್ಲಿತ್ತಪರಸ್ಪರಂದು ಬಹಿರಂಗನಿಮಿತ್ತದಿನೆಂಬರಂಗೆ ದೇ
ವೋತ್ತಮ ನೀನೆ ಚಾಗಿವೆಸರಂ ಪಡೆದೈ ಜಗದೊಳ್ಜಿನೇಶ್ವರಾ ॥೩॥

ಪಗೆಕೆಳೆಯೆಂಬ ಭೇದವಱಿತಂ ತಮಗಿಲ್ಲದೆ ತಮ್ಮ ನಂಟರಂ
ಪಗೆವರೆಗೆತ್ತು ಕೊಂದು ಕಲಿಯಪ್ಪವರಕ್ಕಿಮ ಘಾತಿಕರ್ಮಮಂ
ಪಗೆವಡೆಯಂ ಪಡಲ್ವಡಿಸಿ ಕೀಱಿ ಕೃತಾಂತನನಿಕ್ಕಿ ವೀರಲ
ಕ್ಷ್ಮಿಗೆ ನೆಲೆಯಾದ ಮಯ್ಗಲಿಯ ನೀನೆ ವಲಂ ಜಗದೊಳ್ಜಿನೇಶ್ವರಾ ॥೪॥

ನನೆಗಣೆಯಿಂ ಜಗತ್ರಯಮನಂಡಲೆದಂಗಭವಂಗೆ ಭಂಗಮಂ
ಜನಿಯಿಸಿದೈ ಚರಾಚರರುಮಂ ತವೆ ನುಂಗಿದ ಕಾಳದಂದರೂ
ಕನ ರದಮಂ ಕಟಿಲ್ಚಿ ಕಳೆದೈ ಕಡುವಲ್ಲಿದನಪ್ಪ ಮೋಹಮ-
ಲ್ಲನ ಬಲಗೈಯನಯ್ಯ ಮುಱಿದೈ ಕಲಿ ನೀನೆ ವಲಂ ಜಿನೇಶ್ವರಾ ॥೫॥

ನೀಱಿಯರುನ್ನತಸ್ತನಭರಂಗಳ ಭಾರಮವುಂಕಿ ಸೋಂಕೆ ನೀ
ರೇಱಿದರೇಱಿದರ್ಪಱಿವು ಪೀಠಮನನ್ಯರೊಳಾಪ್ತರೆಂಬ ಮಾ
ತೇಱಿಮ ಭಾರತೀಸ್ತನಭರಂಗಳ ಭಾರಮವುಂಕಿ ಸೋಂಕೆ ನೀ
ರೇಱಿವ ಸಿಂಹವಿಷ್ಟರಮನೇಱಿದೆ ನೀನೆ ವಲಂ ಜಿನೇಶ್ವರಾ ॥೬॥

ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದಪ್ರತಿಕೂಲವೃತ್ತಿ ಮು
ಕ್ತಿಗೆ ನಿಜತತ್ತ್ವಭಾವನೆಯೆ ಕಾರಣಮೆಂದೊಡೆ ನೀನೆ ದೇಹಯಾ
ತ್ರೆಗೆ ಸುಖದುಃಖಯೋಜನೆಗೆ ದೇಹಿಗೆ ಮುಖ್ಯನೆ ನಿನ್ನನಂತಱಿಂ
ಜಗಮನಶೇಷಮಂ ಪಡೆವನೆಂಬುದು ಯುಕ್ತಿ ವಲಂ ಜಿನೇಶ್ವರಾ ॥೭॥

ಕೊಲೆಯ ವಿಕಲ್ಪ ಕೋಟಿಗಳೆ ದುಷ್ಕೃತಮೆಲ್ಲಮಬಾಧೆಯೊಂದೆ ಬಂ
ಬಲ ಸುಕೃತಂಗಳೆಲ್ಲಮವನಿರ್ಬಗೆಯಾಗಿರೆ ಮಾಡಿ ಮಾನವರ್
ಪೊಲೆಗಿಡಮಂತು ದುಃಖಸುಖ ಹೇತುಗಳಂ ನಿಜ ದಿವ್ಯಭಾಷೆಯಿಂ
ಜಲಕನೆ ತೋಱಿದೈ ಸಕಲದೇಹಿಗೆ ನೀನೆ ಶರಣ್ ಜಿನೇಶ್ವರಾ ॥೮॥

ಮದನಪತತ್ರಿ ನಿನ್ನ ದೆಸೆಗಾಣದು ಮೋಹಮಹಾಹಿ ನಿನ್ನ ಸ-
ಣ್ಮದು ಕಲುಷಾನಲಂ ನಿಜದಯಾರಸದಿಂ ಮಸಿಯಾಯ್ತು ಪಾಪವಿ-
ಲ್ಲದ ಪಯಣಕ್ಕೆ ನಿನ್ನ ನುಡಿ ಸಂಬಳಮಾಯ್ತೆನೆ ಪೆಣ್ಣ ಮಣ್ಣ ಮೋ-
ಹದ ಪರಮಾತ್ಮರಂತಿರಲಿ ನೀನೆ ಜಗತ್ತ್ರತಸ್ಸೈ ಜಿನೇಶ್ವರಾ ॥೯॥

ನೋಟದ ತೀಟದಾಲಿಸುವ ಸೇವಿಪ ವಾಸನೆಗೊಳ್ವ ಸೌಖ್ಯಮಂ
ಮಾಟದ ಸೌಖ್ಯಮೆಂದು ಪೆಸರ್ಗೊಳ್ಳದೆ ನಿನ್ನೊಳಭೇದಮಾದ ಕೊಂ
ಡಾಟದನಂತ ಸೌಖ್ಯಮನೆ ಮಱ್ಱಿದ ಮಱ್ಱುಗೆಯೊಳ್ ತೊಡರ್ಱು ಮಾ
ಱಾಟದಿನೆನ್ನ ದರ್ಶನವಿಶುದ್ಧಿಯೆ ಮೂಲ್ಯಮೆನಲ್ ಜಿನೇಶ್ವರಾ ॥೧೦॥

ಎಂದು ದರ್ಶನಸ್ತುತಿಗೆಯ್ದು,

ಜಿನಮುಖದರ್ಶನದಿಂದಂ ।
ಜನಕಂ ಮುನ್ನಾದ ಖೇದಮಂ ಮಱೆದು ಸುಧಾ ॥
ವನನಿಧಿಯೊಳ್ ಮುಳುಗಿದವ್ವೋಲ್ ।
ತನು ಪುಳಕಿತಮಾಗೆ ಹರ್ಷರಸಮಯನಾದಂ ॥೧೧॥

ಅನ್ನೆಗಮಿತ್ತಲ್,

ಕೃತಕಚತುರಂಗಮಾಕೃತಿಯನಂದುಪಸಂಹೃತಿ ಮಾಡಿ ಮುನ್ನಿನಾ
ಕೃತಿಯೊಳೆ ಪೋಗಿ ಪ್ರೋಕ್ತನುಚರಂ ಖಚರಂ ಖಚರೇಂದ್ರಸದ್ಮಮಂ

ಪತಿಯ ಪದಾರವಿಂದಮನರಿಂದಮನರ್ಚಿಸಿದಂ ಕಿರೀಟಕೀ
ಲಿತ ಪರಿನೀಳರತ್ನರುಚಿಮಂಜರಿಯೆಂಬತಸೀಲತಾಂತದಿಂ ॥೧೨॥

ಅಂತು ಸರ್ವಾಂಗಣಪ್ರಣತನಾಗಿ,

ತಂದೆಂ ರಮ್ಯಕವನ ಜಿನ ।
ಮಂದಿರದ ಕೆಲಕ್ಕೆ ಮಿಥಿಳೆಯಿಂ ಜನಕನನೆಂ ॥
ದಿಂದುಗತಿಗನುಚರಂ ಪೋ ।
ದಂದಮುಮಂ ಬಂದ ತೆಱನುಮಂ ನೆಱೆ ಪೇೞ್ದಂ ॥೧೩॥

ಅಗಳಾಪಿಯಚ್ಚರಾಧಿರಕಾಜನತಿಹರ್ಷದಿಂ ಅಂಗಚಿತ್ತಮನಿತ್ತು,

ಗಗನಾಂತರ್ಭಾಗದೊಳ್ಪೊಗೊಳಸಲರ್ದಪ್ಪೊಲಿಂಬಾಗೆ ಚಿತ್ರಾತಪತ್ರಂ
ಪಗಲಂ ಭೂಷಾಂಶುಜಾಲಂ ದ್ವಿಗುಣಿಸೆ ಮುಗಿಲಂ ಮುಟ್ಟೆ ನಾನಾಧ್ವಜಂಗಳ್
ಭಗವಜ್ಜೈನಾಂಘ್ರಿಪೂಜಾಪರಿಕರಸಹಿತಂ ಮಂಗಳಾತೋದ್ಯನಾದ
ಸ್ಥಗಿತಾಶಾಖಂಡಳಪಿಥವದಿನೇೞ್ತಂದನಾ ಖೇಚರೇಂದ್ರಂ ॥೧೪॥

ಆ ಸಮಯದೊಳ್,

ಇದು ಖಚರಲೋಕಮೀ ಇ ।
ರ್ಪುದೆ ಖೇಚರನಿಚಯಮೆಂದು ಮನದೊಳ್ಜನಕಂ ॥
ಪದೆದೀಕ್ಷಿಸುವನ್ನೆಗಮದು ।
ಪುದಿದುದು ಮಣಿಮಕುಟಕಿರಣದಿಂದಾ ವನಮಂ ॥೧೫॥

ಅಂತು ಗಗನತಳದಿನವನೀತಳಕ್ಕೆ ವಂದಿಂದುಗತಿ ಮಂದಗತಿಯಿಂ ಜಿನಮಂದಿರಮಂ ಬಲವಂದೊಳಪೊಕ್ಕು ದರ್ಶನ ಸ್ತುತಿಗಯ್ದನೇಕಾರ್ಚನೆಗಳಿಂದರ್ಚಿಸಿ,

ಆ ಗಗನಚರಪ್ರವರಂ ।
ಸ್ವಾಗತಸಂಭಾಷಣಂಗಳಿಂ ಜನಕನನ- ॥
ಭ್ಯಾಗತನಂ ಮನ್ನಿಸಿದಂ ।
ಶ್ರೀಗುಂತುಂ ವಿನಯಮೊಂದೆ ಭೂಷಣಮಲ್ತೆ ॥೧೬॥

ಅಂತು ಮನ್ನಿಸಿ,

ಅಲರ್ದ ಮುಖಾಬ್ಜದಿಂದಱಿಪಿ ಚಿತ್ತದ ಪತ್ತುಗೆಯಂ ಕದಂಗಿ ಕ-
ಣ್ಬಲರನುರಾಗಮಂ ಕದಱೆ ನೋಡಿ ನರೇಂದ್ರಮುಖಾರವಿಂದಮಂ
ಜಲಜಲಿಸುತ್ತುಮಿರ್ಪ ದಶನಾಂಶು ಪೊದಟ್ಟ ತಟದ್ವಿಳಾಸಮಂ
ಗೆಲೆ ನುಡಿದಂ ಘನಧ್ವನಿ ಘನಧ್ವನಿಯಂ ಮಿಗೆ ಖೇಚರಾಧಿಪಂ ॥೧೭॥

ಎನ್ನ ತನಯಂಗೆ ತಕ್ಕಳ್ ।
ನಿನ್ನ ತನೂಜಾತೆ ರೂಪವತಿ ಸೀತೆ ಗಡಾ ॥
ಕನ್ನೆಯನೆನ್ನ ಮಗಂಗಿ ।
ತ್ತೆನ್ನೊಡನೊಡರಿಸು ಧರಾಧಿಪತಿ ಕೊಳ್ಕೊಡೆಯಂ ॥೧೮

ಎನೆ ಜನಕನಿಂತೆಂದಂ :

ನಿನ್ನ ತನಯಂಗೆ ನಮಿವಂ ।
ಶೋನ್ನತ ಕುಡಲಪ್ಪುದಾದೊಡಂ ಕನ್ನೆಯನಾಂ ॥
ಮುನ್ನಮೆ ರಾಮಂಗಿತ್ತೆನಿ ।
ದಂ ನಿಲೆ ನುಡಿಯದೊಡೆ ಮೆಚ್ಚಲಱಿಗುಮೆ ಲೋಕಂ ॥೧೯।

ಎನೆ ಸನ್ಮತಿವೆಸರ ವಿಯಚ್ಚರನಿಂತೆಂದಂ :

ದೊರಕೊಂಡ ನಿಧಿಯನೊಲ್ಲದೆ ।
ಜರಗಂಗರ್ಚುವುದೆ ತನ್ನ ತನಯಂಗೆ ವಿಯ- ॥
ಚ್ಚರರಾಜನೆರೆದೊಡೀಯದೆ ।
ದೊರೆಯಲ್ಲದ ಮಾನವಂಗೆ ಕುಡುವುದೆ ಕೂಸಂ ॥೨೦॥

ಆರಾದೊಡಮೆರೆವರ್ಕ ।
ನ್ಯಾರತ್ನಮನೆರೆದೊಡೀಯೆನೆಂಬರೆ ಕೊಡುವಂ- ॥
ತಾರಾಮನೊಳೇಗಂಡ್ಮೆ ।
ಪೌರುಷಮಂ ತಕ್ಕುದಱಿದು ನೆಗಟಿಲ್ವೇಡಾ ॥೨೧॥

ಎನೆ ಜನಕಂ ಮುನಿಸಂ ಮೊಗಕ್ಕೆ ತಾರದೆ ರಾಮನ ಭುಜಪ್ರತಾಪಮಿಲ್ಲದಂದು ತರಂಗತಮನೆಂಬ ಶಬರನಾಯಕನಿಂ ವಿನೀತಾಖಂಡಮನಿತುಂ ಮ್ಲೇಚ್ಛದೇಶಮಕ್ಕುಮಂತಾಗಲೀ-ಯದೆಮ್ಮು ಮನೆಮ್ಮಭಿಮಾನಮುಮಂ ಕಾದೊಡೆಮ್ಮ ಮಗಳಂ ಕನ್ಯಾರತ್ನಮಂ ಸೀತೆಯನಿತ್ತೆನೆನೆ ಮತ್ತೊರ್ವನಿಂತೆಂದಂ :

ಎರಳೆಯುಮಂ ಬೇಡನುಮಂ ।
ಧುರದೊಳ್ಪೆಂಕೊಂಡನೆಂದದಂ ಸಾಹಸಮಾ- ॥
ಗಿರೆ ಪೊಗೞ್ವೆ ಸಕಳವಿದ್ಯಾ ।
ಧರವಲ್ಲಭಸಭೆಯೊಳಿದು ಪೊಗೞ್ತೆಗೆ ಪೊಲನೇ ॥೨೨॥

ಗಗನಾಂಗಣದೊಳ್ನಡೆವ ।
ರ್ಬಗೆದೆಡೆಗಾವಾರ್ತೆಯಾದೊಡಾ ಒಡವೆಗಳಂ ॥

ಬಗೆದಾಗಳೆ ಕುಡುಗಂ ವಿ ।
ದ್ಯೆಗಳನೆ ಖೇಚರರ ಮಹಿಮೆ ಭೂಚರರ್ಗುಂಟೇ ॥೨೩॥

ಎನೆ ಜನಕಂ ಮುನಿದು,

ಪುರುಜಿನರಾದಿಯಾಗಿ ಜಿನಪುಂಗವರುಂ ಭರತೇಶನಾದಿಯಾ-
ಗಿರೆ ಸಕಳಾರ್ಧಿಚಕ್ರಿಗಳುಮೇಂ ಗಳ ಭೂಚರರಲ್ಲದಾರೊ ಖೇ-
ಚರರವನೇಕ ನೀನಱಿಯ ಪಾಱಿದೊಡೇಂ ಫಲಮುಂಟೆ ಪಕ್ಕಿಯಂ-
ತಿರೆ ಪುರುಷಾರ್ಥಮಲ್ತು ಪರನಿಂದೆಯುಮಾತ್ಮಗುಣಪ್ರಶಂಸೆಯುಂ ॥೨೪॥

ನಿಮಗವರೇತಱಿಂದುಱವರೆಂದಿಱಿಕೆಯ್ವಿರೊ ವಂಶವೀರ್ಯದಿಂ
ಸಮನವರ್ಗಾರುಮಿಲ್ಲವರಶೇಷಕಳಾಕುಶಲರ್ಪ್ರಚಂಡ ವಿ-
ಕ್ರಮರವರೀ ತ್ರಿಖಂಡಭರತೋರ್ವರೆಯಂ ಭುಜದಂಡದಿಂದಮಾ-
ಕ್ರಮಿಸುವ ಗಂಡಗರ್ವದ ಬಳಾಚ್ಯುತರಲ್ಲರೆ ರಾಮಲಕ್ಷ್ಮಣರ್ ॥೨೫॥

ಎಂಬುದುಮಿಂದುಗತಿ ವಿಯಚ್ಚರೇಂದ್ರನಾ ನುಡಿಗೆ ಕನಲ್ದು,

ದೆಸೆಬಿದ್ದಂ ಬಲಗರ್ವಮಂ ಪೊಗಱಿ ವಜ್ರಾವರ್ತಮಂ ರಾಮನೇ-
ಱಿಸೆ ವೈದೇಹಿಯನೀವುದಾಜಿಮೊಡೆ ಮತ್ಪುತ್ರಂ ಪ್ರಭಾಮಂಡಲಂ-
ಗೆ ಸರೋಜಾಕ್ಷಿಯನೀವುದೀ ನುಡಿಯನೇಗೊಳ್ಳೆಂಬುದುಂ ರಾಮಸಾ-
ಹಸಮಂ ಬಲ್ಲುದಱಿಂದಮಾ ನುಡಿಯನೇಗೊಂಡಂ ಮಹೀವಲ್ಲಭಂ ॥೨೬॥

ಅನಂತರಂ ಜನಕನಂ ವಿಚಿತ್ರವಸ್ತ್ರಾದಿಗಳಿನರ್ಚಿಸಿ ವಿದ್ಯಾಧರಕುಲಕ್ಕೆ ಮೊದಲಿಗರಪ್ಪ ನಮಿವಿನಮಿಗಳ್ಗೆ ನಾಗರಾಜನಿತ್ತ ನಾಗವಿದ್ಯಾಧಿಷ್ಠಿತಮಪ್ಪ ವಜ್ರಾವರ್ತಸಾಗರರಾವರ್ತಂಗಳೆಂಬ ಬಿಲ್ಗಳಂ ಪಳಾಯುಧಗದಾಯುಧಸಮೇತಂಗಳಂ ತರಿಸಿಕೊಟ್ಟು ವಾಕ್ಚಂದ್ರವರ್ಧನಮಹತ್ತರನಂ ಕಾಪುವೇೞ್ದು ಕಳಿಪುವುದುಂ ವಿಯಚ್ಚರ ಬಲಂಬೆರಸವರಿರ್ವರುಂ ಮಣಿಮಯವಿಮಾನಂ-ಗಳನೇಱಿ ಪವನಪಥದೊಳ್ ಮನಃಪವನವೇಗದಿಂ ಮಿಥಿಳೆಗೆ ಬರುತ್ತುಮಿರ್ಪುದುಮಂ,

ಗಗನದೊಳೊಡ್ಡುಗಟ್ಟಿ ಬೆಳಗಾ ಬರುತಿರ್ಪುದದಲ್ತು ರೋಹಣಾ
ದ್ರಿಗಳಿಚಿತರ್ಪುವಲ್ಲವು ನವಗ್ರಹಮಂಡಳಮಲ್ತು ಕಲ್ಪನಾ
ಸಿಗರ ವಿಮಾನಮಲ್ತು ಜನಕಂ ಬರುತಿರ್ದಪನೆಂದು ಕಣ್ಬೊಲಂ
ಬುಗೆ ನಲಿದತ್ತು ದಿಟ್ಟವಳಗಿಂ ಗುಡಿಗಟ್ಟಿ ಪುರಾಂಗನಾಜನಂ ॥೨೭॥

ಎಲ್ಲಿಗೆ ಪೋದನೆಮ್ಮರಸನಿನ್ನೆಮಗಾರ್ಶರಣೆಂಬ ಖೇದಮಂ
ತಲ್ಲಣಮಂ ಮೊದಲ್ಗಿಡಿಸಲೋ ಬರುತಿರ್ಪನೆ ನಿಮ್ಮ ಸೃಪಿನಿಂ

ದಿಲ್ಲಿಗೆ ಭೂಪನಂದು ನಡೆ ನೋಡಿಬ್ಬಿಡೆಯೊಳ್ನಿಜಲೋಚನಪ್ರಭಾ
ಪಲ್ಲವಮಂ ವಿಪಲ್ಲವಮನಿತ್ತುದು ಚಂದ್ರಿಕೆಗಂಗನಾಜನಂ ॥೨೮॥

ಅಂತು ಜನಕಂ ಮಿಥಿಳೆಯಂ ಪೊಕ್ಕು ಚಂದ್ರವರ್ಧನಾದಿಗಳನುಚಿತಪ್ರತಿಪತ್ತಿಯಿಂ ಮನ್ನಿಸಿ ಬೀಡಿಂಗೆ ಬೆಸಸೆ ಪುಬಹಿರ್ಭಾಗದ ರಮ್ಯಪ್ರದೇಶದೊಳ್,

ನೆಲೆಮಾಡಂಗಳನೇಕಮಾಗೆ ನೆಲೆವೀಡಂ ವಿದ್ಯೆಯಿಂ ಮಾಡಿ ಮೆ-
ಯ್ಗಲಿ ತಳ್ವಿಲ್ಲದೆ ಚಂದ್ರವರ್ಧನನಭೀಷ್ಟಾ ವಲ್ಲರೀವರ್ಧನಂ
ಬಲನಾರಾಯಣ ಬಾಹುದಂಡದಳವಂ ನೋಡಲ್ಗದಾದಂಡದಿಂ
ಪಲದಿಂ ಕೂಡಿದ ಚಾಪದಂಡಯುಗಮಂ ಬಯ್ತಲ್ಲಿ ಕಾದಿರ್ಪುದುಂ ॥೨೯॥

ಅನ್ನೆಗಮಿತ್ತಲ್,

ಪ್ರಿಯ ಸಂಭಾಷಣಸಹಿತಂ ।
ಬಯಸಿದುದುಂ ಪರಿಜನಕ್ಕೆ ಸಾಲ್ವಿನಮಿತ್ತ ॥
ಪ್ರಿಯಮಂ ಪುಟ್ಟಿಸಿದಂ ಸುರ ।
ಭಿಯೊಳೀಸೌದಾರ್ಯನಿಧಿಯೊ ಜನಕನರೇಂದ್ರಂ ॥೩೦॥

ಅನಂತರಂ ಮಜ್ಜನಭೋಜನಾದಿ ದಿವಸವ್ಯಾಪಾರವಂ ತೀರ್ಚಿ ಸೆಜ್ಜೆವನೆಯೊಳುಪಧಾನವಿರಾಜಮಾನಹಂಸತಳ್ಪದೊಳ್ ವಿಶ್ರಮಿಸಿ ನಿಜಮನೋವಲ್ಲಭೆಗೆ ಪೋದಬಂದ ವೃತ್ತಾಂತಮಂ ನೆಱೆಯೆ ಪೇೞೆ ಘನನಿನದಮಂ ಕೇಳ್ದ ಹಂಸೆಯಂತೆ ವಿಕಳೆಯಾಗಿ,

ನೋಡಿರೆ ಪುಟ್ಟಿದಾಗಳೆ ಖಳಂ ಶಿಶುವಂ ಪಿಡಿದೊಯ್ದೊಡೀಕೆಯಂ
ನೋಡಿ ತನೂಜನಂ ಮಱೆದೆನೀಕೆಯುಮಂ ಗಡ ಬಿಲ್ಗಳಂ ನೆವಂ
ಮಾಡಿ ವಿಯಚ್ಚರಾನುಚರರುಯ್ವುಪರೆಂದ ವಿದೇಹಿ ಮೆಯ್ಯನೀ
ಡಾಡಿ ಕಪೋಳಮಂ ತೊಳೆದಳುಣ್ಮುವಲೋಚನವಾರಿಧಾರೆಯಿಂ ॥೩೧॥

ಅಂತು ವಿಕಳೆಯಪ್ಪುದುಂ,

ಅಂಬುಜನೇತ್ರೆ ನಿನ್ನ ಮನದುಮ್ಮಳಮಂ ಬಿಡು ತನ್ನ ತೋಳ್ಗೆ ಪಾ
ಱುಂಬಳೆ ಘೂರಿಘೂವಳಯಮೆಂಬಳವಂ ತಳೆದಿರ್ದನಂತವೀ
ರ್ಯಂ ಬಲಭದ್ರನೀಱುಸುಗುಮಂಕದ ಬಿಲ್ಲನಳುರ್ಕೆಗೆಟ್ಟು ಬಿ
ಲ್ಲುಂ ಬೆಜಗಾಗಿ ಪತ್ತುವಿಡೆ ಕನ್ನೆಯ ಲೋಭಮನನ್ಯರಾಜಕಂ ॥೩೨॥

ಗುಣಮಿಲ್ಲಾ ಬಿಲ್ಗೆ ವಿದ್ಯಾಧರರ್ಗಿವು ಗುಣಸಂಬಂಧದಿಂ ರಾಮನಂ ಲ
ಕ್ಷ್ಮಣನಂ ಪೊರ್ದಲ್ಕೆ ವೇಡಿದ್ರ್ದುವು ನವದೊಳ್ ಕೈಸಾರ್ದುವಾ ಬಿಲ್ಗಳಿಂ ಧಾ

ರಿಣೆಯಂ ಬಾಯ್ಕೇಳಿಸಲ್ಕಾರಣಪುರುಷರಿವರ್ಪುಟ್ಟಿದರ್ಪಕ್ಷ್ಮವಿಕ್ಷೇ-
ಪಣಮಾತ್ರಂ ಕಾರ್ಮುಕಾರೋಪಣಮವರ್ಗದಜ಼ಂದೇಕೆ ಶೋಕಾತಿರೇಕಂ ॥೩೩॥

ಎಂದು ಸತಿಯ ಶಂಕೆಯಂ ಕಳೆದು ಗೃಹಮಹತ್ತರಂಗೆ ಬೆಸಸುವುಮಂ,

ಬಹಿರುದ್ಯಾನದ ಕೆಲದೊಳ್ ।
ಬಹುರತ್ನಸುವರ್ಣಮಯಮೆನಲ್ನಯನಸುಖಾ ॥
ವಹಮಂ ಮಾಡಿಸಿದಂ ಗೃಹ ।
ಮಹತ್ತರಂ ನಿಮಿಷದಿಂ ಸ್ವಯಂವರಗೃಹಮಂ ॥೩೪॥

ಆ ಸ್ವಯಂಬರಭೂಮಿ ಪೂರ್ವಾಪರಯಚತುರಸ್ರಮೆನಿಸಿ ಸೊಳೆವ ಪೊಮ್ಮಗಿಲ ಬಳಸಿ-ನೊಳಂ ದಕ್ಷಿಣೋತ್ತರ ಮುಖಂಗಳಾಗಿ ತೋರ್ಕೆವೆತ್ತಿರ್ಕೆಲದ ಸೆಲೆಯಮಾಡಂಗಳೊಳಮವಜಿ ಮುಂದಣೆಂದು ಕಾಂತದ ಬಯಲ ಮಂಟಪಂ ಗಳೊಳಮವಜ಼ಿರ್ಕೆಲದ ಕರ್ಕೇತನದ ಚೌಪಳಿಕೊಗಳೊಳಮವಂ ಸುತ್ತಿ ಮುತ್ತಿದ ಮಾಣಿಕದ ಮತ್ತವಾರಣಂಗಳೊಳಮಲ್ಲಿಂ ಪೊಜಗೆ ಶೋಣಮಣಿಕಳಶಕರಕಿಸಲಯಂಗಳಿಂ ನಭಃಶ್ರೀಯನಲಿಂಗಿಸುವ ಬಾಗಿಲ್ವಾಡಂಗಳೊಳಮವಜಿ ಮುಂದೆ ಸಂದಣಿಸಿದ ಚರಕತಮಕರತೋರಣಂಗಳೊಳಮತಿ ರಮಣೀಯಮಾಗಿ,

ದಿವಿಜಕ್ಷ್ಮಾಜದಿನಾದ ದೇವರ ಮನೋವ್ಯಾಪಾರದಿಂದಾದ ದೇ
ವವಿಮಾನಂಗಳಿವೆಂಬ ಭೇದಮೊಳೆ ಭೇದಂ ಮಾಟಕೂಟಂಗಳಿಂ
ನವರತ್ನಾಫಳಕರ್ಮದಿಂ ಮಣಿವಿತಾನಶ್ರೇಣಿಯಿಂ ಭೇದಮಂ
ಬವರಾರೆಂಬಿನೆಗಂ ಸ್ವಯಂಬರಗೃಹಂ ಕಣ್ಗೇಂ ಬೆಡಂಗಾದುದೊ ॥೩೫॥

ಆ ಸ್ವಯಂವರವಿವಾಹಕ್ಕೆ ಜನಕಂ ಪ್ರಧಾನಪುರುಷಪುರಸ್ಸರಂ,

ಪುರುವಂಶದ ಕುರುವಂಶದ ।
ಹರಿವಂಶದ ನಾಥವಂಶದುಗ್ರಾನ್ವಯದು ॥
ರ್ವರೆಯೊಡೆಯರಾದಿಯಾಗಿರೆ ।
ನರನಾಥಸುತರ್ಕಳೆನಿಬರಾನುಂ ಬಂದರ್ ॥೩೬॥

ನಾನಾವಾಹನಮುಂ ನಾ ।
ನಾನಕಮುಂ ವಂಶವಿದಿತನಾನಾಧ್ವಜಸಂ ॥
ತಾನಮುಮೆಸೆದಿರೆ ಬಂದ ।
ರ್ನಾನಾದೇಶಾಧಿನಾಥನಂದನರರಬರ್ ॥೩೭॥

ಆ ಸಮಯದೊಳ್ದಶರಥಂ ರಾಮಲಕ್ಷ್ಮಣಭರತಶತ್ರುಘ್ನರ್ವೆರಸು ಬಂದೊಂದು ಪಳಿಕಿನ ಚೌಪಳಿಕೆಯೊಳ್ ರತ್ನ ಮುದ್ರಿಕೆಯೊಳ್ ಮಧ್ಯನಾಯಕವಂತಿರ್ಪುದುಂ,

ಶರನಿಧಿ ರತ್ನರಾಶಿಗಳಿನುರ್ವರೆ ರೋಹಣಪರ್ವತಂಗಳಿಂ
ಸುರಗಿರಿಸಾನು ಕಲ್ಪಕುಜದಿಂ ಗಗನಸ್ಥಳಿ ತಚ್ಚಿ ತಾರಕಾ
ಪರಿಕರದಿಂ ಸರೋಜಿನಿ ಮರಾಳದೊಸೊಪ್ಪುವ ಮಾಳ್ಕೆಯಿಂ ಸ್ವಯಂ
ವರಗೃಹಮೊಪ್ಪಮಂ ತಳೆದುದೊಪ್ಪುವ ರಾಜತನೂಜರೋಳಿಯಿಂ ॥೩೮॥

ಮಳಯಜಮಿಶ್ರತೀರ್ಥಜಳಧಾರೆಗಳಿಂ ಶಶಿಕಾಂತಕಾಂತಮಂ
ಗಳಕಳಶಾಂಬುಧಾರೆಗಳಿನಿರ್ಮಡಿಸಿತ್ತು ವಿವಾಹಮುಖ್ಯಮಂ
ಗಳ ಸವನಂ ವಿಳಾಸವತಿ ಸೀತೆಗೆ ದಿಕ್ತಟಮಂ ಪಳಂಚೆ ಮಂ
ಗಳಪಟಹಸ್ವನಂ ಪುದಿಯೆ ಮಂಗಳಗಾಯಕಗೀತನಿಸ್ವನಂ ॥೩೯॥

ಹಿಮಕಿರಣಮಾಳೆ ಮುಸುಕಿದ ।
ಕುಮುದಿನಿಯ ಬೆಡಂಗು ತನಗೆ ಪುದುವೆನೆ ಮೃಗನೇ ॥
ತ್ರೆ ಮನಂಗೊಂಡಳ್ ಮಳಯಜ ।
ಹಿಮಕರ್ದಮಕಲಿತಸಲಿಲಸವನೋತ್ಸವದೊಳ್ ॥೪೦॥

ಆ ಮಂಗಲಸವನ ಸಮಯಾನಂತರಂ ಜಾನಕಿ ನೀರಾಜನವಿರಾಜಮಾನೆ ಧಾರಾನಿಳಯ ಜಳಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಮೆನಿಸಿ, ಪಳಿಕಿನ ಪಟ್ಟವಣೆ ಕೇಸಡಿಯ ಕೆಂಪಿಂದರುಣಮಣಿಯುನೊಟ್ಟೈಸೆ ಮೆಟ್ಟನೋಟ್ಟುದುಮಾ ನಿತಂಬಿನಿಯ ನಿತಂಬಸೂತ್ರದೊಳ್ತೊಡರ್ಚಿದ ತೋರಮುತ್ತುಗಳಂತೆಯುಮಾ ವೃತ್ತಕುಚೆಯ ಕುಚ ಕಳಶದೊಳೊಸರ್ವ ಲಾವಣ್ಯರಸಬಿಂದುಗಳಂತೆಯುಮಾ ಕನಕಕೇತಕೀದಳನಖೆಯ ನಖಮಯೂಖದೊಳುನ್ಮುಖ ಮಯೂಖ ಮಂಜರಿಯಂತೆಯುಮಾ ಪಲ್ಲವಾಧರೆಯಧರಪಲ್ಲವದೊಳ್ಪೊಳೆವ ದರಹಾಸಕಳಿಕೆಯಂತೆಯುಮಾ ಚಳಾಳಕೆ ಯಳಿಕವಲ್ಲರಿಯೊಳ್ ಬೆಳರ್ತಬಿರಿಮುಗುಳಂತೆಯುಮೋರೊಂದು ಜಳಬಿಂದುಗಳ್ ಬಿಡುತರ್ಪುದುಂ,

ಆ ರಮಣಿಯ ತನುಲತೆಯಿಂ ।
ವಾರಿಕಣಪ್ರಚಯದಿಂ ದುಕೂಳಾಂಚಳದಿಂ ॥
ವಾರಾಂಗನೆಯರ್ತೊಡೆದ
ರ್ನೀರಂಜಿಸುವಂತೆ ಮಣಿಶಲಾಕೆಯನಾಗಳ್ ॥೪೧॥

ನಗೆಗಣ್ಗೊಸೆ ವಿಳಾಸಮಂ ನಗೆಮೊಗಂ ಲಾವಣ್ಯಮಂ ನೀಳ್ದ ಸಾ
ವಗಿಸುತ್ತುಂ ಕಚಬಂಧಮಂ ಶಿಥಿಲನೀವೀಬಂಧಮಂ ಕಾಂಚಿಯೊ
ಳ್ತೆಗೆಯುತ್ತುಂ ಸ್ಮರಮಂತ್ರದೇವತೆಯವೋಲ್ಬಾಹಾಲತಾಂದೋಳನಂ
ಬಗೆಯಂ ಬಲ್ಸೆಳೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ ॥೪೨॥

ಅಂತು ಬಂದು ಚೆಂಬೊನ್ನ ಕನ್ನೆಮಾಡದ ಮೊಗಸಾಲೆಯೊಳಿಕ್ಕಿದ ಮುತ್ತಿನ ತ್ತರಿಗೆಯೊಳ್ಕುಳ್ಳಿರ್ಪುದುಂ ಮೇಳದ ಕೆಳದಿಯರ್ಮಂಗಳವಸದನಂಗೊಲಿಸಲವಸರಂಬಡೆದು ಚಿತ್ರಚೀನಾಂಬರಮಂ ನಿಜ್‌ವಿಡಿದುಡಿಸಿ ಕೆಂದಾವರೆಯನೆಳವಿಸಿ ಲಾವರಿಸಿದಂದಮಾಗೆ ಲಾಕ್ಷಾರಸದಿನಡಿಯೂಡಿಯುಂ, ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಳನೂಪುರಮಂ ತುಡಿಸಿಯು ಪುಳಿನವಳಯಮಂ ಪೊಂದಾವರೆಯ ಬಳ್ಳಿ ಬಳಸಿದಂತೆ ತಂವಳಯದೊಳ್ ಮಣಿಮೇಖಲೆಯಂ ತೊಡರ್ಚಿಯುಂ, ಮದನಮದರದನೀರ- ನೊಳ್ಕೀರ್ತಿಮುಖಮಂ ಕೀಲಿಸುವಂತ ಶತಪತ್ರಭಂಗಂ ತುಂಗಸ್ತನಾಭೋಗದೊಳ್ ಸಂಗಳಿಸಿಯುಂ, ಪೀವರಪಯೋಧರಮಂಡಳಕ್ಕೆ ಪರಿವೇಷಮಂ ಪಡೆವಂತೆ ಪಂಚರತ್ನದ ಬಣ್ಣ ಸರಮಂ ಕೊರಲೊಳಿಕ್ಕಿಯುಂ ಬಾಹುಲತೆಯ ಬಿಟಿಲಂತೆ ರತ್ನಕಾಂತಿ ಕನಲ್ವರಿವಿನೆಗಮಂ- ಗಮನಳವಡಿಸಿಯುಂ, ಸಿರಿಸದ ಬಾಸಿಗಮಂ ಭೃಂಗಮಾಳೆ ಬಳಸುವಂತೆ ನಳಿತೋಳೊಳ್ ಪಚ್ಚೆಯ ಪಿಂಡುಗಂಕಣಮನೇಜ್‌ಸಿಯುಂ, ನನೆಗಣೆಗೆ ಗಜಿಗಟ್ಟುವಂತಂಗುಳಿಯೊಳ್ ರತ್ನಮುದ್ರಿಕೆಯುಂ ಮುದ್ರಿಸಿಯುಂ, ಸ್ಮರವಶೀಕರಣಯಂತ್ರಮಂ ಬರೆವಂತೆ ಕಪೋಳತಳದೊಳ್ಮಕರಿಕಾಪತ್ರಮಂ ಬರೆದುಂ, ಪೂಸಮಸೆಯ ಪೂಗಣೆಗೆ ಪೊಗರಂ ಗಡೆವಂತೆ ನಗೆಗಣ್ಣಳೊಳಂಜನಮ ನಣ್ಕೆಗೆಯ್ದುಂ, ಕರ್ಣಾಂತವಿಶ್ರಾಂತ ವಿಲೋಚನದೊಳ್ಪಡಿಯಿಟ್ಟು ನೋಟ್ಟಂತೆ ಕಿವಿಯೊಳವತಂಸೋತ್ಪಳಮಂ ತೊಡರ್ಚಿಯುಂ,

ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ ಮೆಲ್ಲಮು
ಲ್ಲಗೆ ತಲೆವಿಕ್ಕಿ ಚಂದ್ರಕಿರಣಂಗಳನಾಗಳೆ ರಾಹು ನುಂಗಿ ಮ
ತ್ತುಗುಳ್ವುದೆಂಬಿನಂ ಮುಡಿಸಿ ಬಾಲೆಯ ಸೋರ್ಮುಡಿಯಂ ಲಲಾಟದೊ
ಳ್ಮೃಗಮದಬಿಂದುವಂ ಪಜಿಗೆ ಸುಣ್ಣಜಿಯಂ ಪಡೆವಂತೆ ತಿರ್ದಿದರ್ ॥೪೩॥

ಆಗಳಾಕೆಯ ಮಂಗಳವಸದನಮೆ ತನಗೆ ಬೀರವಸದನಮಾಗೆ,

ಬಾಲೆಯ ಕಡೆಗಣ್ನೋಟಮೆ ।
ಸಾಲದೆ ನನೆಗಣೆಗಳೇವುವೆಂದು ಮನೋಜಂ ॥
ಸೂಲಿಯ ನೊಸಲುರಿಗಣ್ಣಂ ।
ಪೀಲಿಯ ಕಣ್ಣಂಬನಾವನೆನಗಿದಿರೆಂಬಂ ॥೪೪॥

ಮನಸಿಜನೆನೆ ರತಿಯೆನೆ ಕ ।
ರ್ಬಿನ ಬಿಲ್ಲೆನೆ ಕುಸುಮಬಾಣಮೆನೆ ಕೋಕಿಳನಿ- ॥
ಸ್ವನಮೆನೆ ಮಧುಕರಝಂಕೃತ ।
ಮೆನೆ ಸೀತೆಯ ಪಸದನಕ್ಕೆ ಪರ್ಯಾಯಂಗಳ್ ॥೪೫॥

ಅಂತು ಕೈಗೆಯ್ದುದುಮಾ ಸಮಯದೊಳ್,

ಹರಿವಂಶನಿಯಮದಿಂ ಹಿತ ।
ಪುರೋಹಿತಂ ಶುಭಮುಹೂರ್ತದೊಳ್ಕನ್ಯಕೆಯಂ ॥
ತರವೇಳೆ ವೃದ್ಧಕಂಚುಕಿ ।
ವೆರಸು ಮನೋರಥಮೆನಿಪ್ಪ ರಥಮಂ ತಂದರ್ ॥೪೬

ಆಗಳಾ ಪುರೋಹಿತಾದೇಶದಿನನೇಕಮಂಗಳಾಸಕಮೊದವೆ ರಥಮನೇಱ,

ರಮಣಿಯರೆರಡುಂ ಕೆಲದೊಳ್ ।
ಚಮರರುಹಮನಿಕ್ಕೆ ಬೀಱ ಬೆಳ್ಗೊಡೆ ಬೇಱೊಂ ॥
ದಮೃತಾಂಶುವನಾಕ್ಷಣದೊಳ್ ।
ಹಿಮಾಂಶುಮುಖಿ ಮೆಱೆದಳೀಕ್ಷಣಾಕರ್ಷಣಮಮಂ ॥೪೭॥

ಅಗಳಾ ಸ್ಯಂದನಮಂ ಸುತ್ತಿ ಕುಂಜದಡಪದ ಡವಕೆಯು ಕನ್ನಡಿಯ ಪರಿಚಾರಿಕೆಯರುಮೊಡನಾಡಿಗಳಪ್ಪಯ್ನೂರ್ವರ್ಕನ್ಯೆಯರ್ಕಳುಂ ಮಂಗಳೋಪಕರಣದ್ರವ್ಯಂಗಳ ಪಿಡಿದು ನಡೆಯೆ,

ಮದನಪತಾಕೆ ಚುಂಬಿಸೆ ವಿಯನ್ಮುಖಮಂ ಸ್ಮರಚಾಪಟಂಕೃತಂ
ಪುದಿಯೆ ದಿಗಂತಮಂ ಕುಸುಮಸಾಯಕಸಾಯಕಮುರ್ಚೆ ರಾಜಲೋ
ಕದ ಮನಮಂ ಮನೋಜವಿಜಯಾಂಗನೆ ಜಾನಕಿ ಪೊಕ್ಕಳಾಸಭಾ
ಸದನಸುವರ್ಣಗೋಪುರಮನೇಱ ಹಿರಣ್ಮಯಮಂ ವರೂಥಮಂ ॥೪೮॥

ಕನ್ಯೆಯರಖಿಳಕಳಾಸಂ ।
ಪನ್ನೆಯರಯ್ನೂರ್ವರಲರ್ದ ತಾವರೆಗಳವೋಲ್ ॥
ತನ್ನೊಡವರೆ ಬಂದಳ್ ಸಿರಿ ।
ಸನ್ನಿದಮಾದಂತೆ ಸೀತೆ ಕನ್ಯಾರತ್ನಂ ॥೪೯॥

ಅಂತು ಬಂದು,

ಜನಕಜೆ ವಶ್ಯದೀಪಕಳಿಕಾಕೃತಿಯಿಂ ಪುಗೆ ತತ್ಸಭಾನಿಕೇ
ತನಕುಸುಮೋಪಹಾರಮಣಿರಂಗಮನಂಗಣಮಂ ನರೇಂದ್ರನಂ
ದನರ್ಗೆ ಮನೋವಿಕಾರದೊಡನಂಗವಿಕಾರಮದೇಂ ಪೊದಱ್ದುದೋ
ನನೆಕೊನೆಯೇಱುವಂತ ವನರಾಜಿ ಮಧು ಪ್ರಥಮಪ್ರವೇಶದೊಳ್ ॥೫೦॥

ಉದಯಿಸೆ ಶಶಿಕಳೆ ತೆರೆಮಸ ।
ಗಿದ ಪಾಲ್ಗಡಲಂತೆ ನೃಪಕುಮಾರಕದಂಬಂ ॥
ಸುದತಿ ಪುಗೆ ಸಭೆಯನೊಳಕೊಂ ।
ಡುದು ಮದನವಿಕಾರಚೇಷ್ಟೆಯಂ ಬಹುವಿಧಮಂ ॥೫೧॥

ನಲಕ್ಷ್ಮಿಯ ಪುಗಿಲೊಳ್ಕೋ ।
ಪಾಕರನಿಕರಮೊಡನೆಸಳ್ಕ ಸುಗುವಪೋಲ್ ॥
ನಕಾತ್ಮಜೆ ಪುಗೆ ಸಭೆಯಂ ।
ನಿಯಿಸಿದುದು ಮದನಚೇಷ್ಟೆ ರಾಜನ್ಯಕದೊಳ್ ॥೫೨॥

ಆಗಳಾಕೆಯ ಲಾವಣ್ಯಮದಿರಾರಸೇವನೆಯಿಂ ಕರಮೆ ಸೊಕ್ಕಿ,

ಗುಣಿಸೆ ನಖರುಚಿ ಪೂಮಾ ।
ಗಳಂ ಕಾರಿರುಳೊಳೊಗೆದ ತಾರಾವಳಿಯಂ ॥
ಗೆ ತೋರದುಱುಂಬಂ ಸಾ ।
ಗಿಸಿದನಡಿಗಡಿಗೆ ನೃಪಕುಮಾರಕನೊರ್ವಂ ॥೫೩॥

ರಭಾಗಂಬೆತ್ತಿರೆ ಪ ।
ರಾಗಮಣಿ ಪಾಣಿಪದ್ಮರಾಗದಿನೊರ್ವಂ ॥
ರನಾಥಸುತಂ ಮೆಱೆದಂ ।
ರೀಟಮಂ ತಿರ್ದುವಂತೆ ಭುಜಾಶಾಖೆಗಳಿಂ ॥೫೪॥

ರಾವಳಿಯಂ ತಳೆದ ನ ।
ತೋರಂಗದ ಭಂಗಿ ತನಗೆ ಪುದುವೆನಿಸಿದುದಂ ॥
ೀರುರಮನದೇಂ ಮೆಱೆದನೊ ।
ಾರಮನೋಸರಿಸುವಂತೆ ನೃಪಸುತನೊರ್ವಂ ॥೫೫॥

ಸಂಗಳಮಣಿಪೀಠಂ ವಿಜ ।
ಯಾಂಗನೆಗೆನೆ ಕೊರ್ವುವಡೆದುದಂ ಮತ್ತೊರ್ವಂ ॥
ಸಂಗಭುಜ ಶಿಖರಮಂ ರ ।
ಾಂಗದಮಂ ಸಾರ್ಚುವೊಂದು ನೆವದಿಂ ಮೆಱೆದಂ ॥೫೬॥

ೀವೆ ಬೆಡಂಗುವೆತ್ತ ಕಮಳಾಕರದೊಳ್ ರಮಣೀಯಮಾದ ಕೆಂ-
ಾವರೆವೂವಿನೊಳ್ ಸೆಣಸಿದತ್ತು ಕುಮಾರವಿಶಾಳವಕ್ಷದೊಳ್
ಾವಗಿಸುತ್ತುಮಿರ್ಪ ಪದದೊಳ್ಪೊಲಿದೊಪ್ಪುವ ತೋರಮುತ್ತಿನೆ-
ಕ್ಕಾವಳಿ ಸೂಸುವಂಶುಜಲದಿಂ ಬೆಳಗೆಂಪಳವಟ್ಟ ಕೆಂಪಳಂ ॥೫೭॥

ಆಗಳಾ ಸ್ವಯಂವರಮಧ್ಯಭೂಮಿಗೆ ಮಣಿಭೂಷಣಮೆನಿಸಿ ಮನಂಗೊಳಿಪ ಪಳಿಕಿನ ಜೌಪಳಿಗೆಯ ನೀಳ ಶಿಲಾಸ್ತಂಭಮಂ ಮಲಂಗಿ ಪೊನ್ನ ಪುತ್ತಳಿಗೆಯ ವಿಳಾಸಮನಸಕಱೆದು ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ, ತಾರಾವಳಿ ಬಳಸಿದಿಂದುಕಳೆಯಂತೆಯುಂ,

ವಿದ್ರುಮಲತೆ ಬಳಸಿದ ಲಾವಣ್ಯರಸಸಮುದ್ರವೇಲೆಯಂತೆಯುಂ, ಕನ್ಯಕಾಕದಂಬದ ಬಳ
ಬಗೆಗೊಳಿಸಿ ನಿಖಿಳಜನಮನಃಪೀಠದೊಳ್ಮನಸಿಜಂ ಪ್ರತಿಷ್ಠೆಗೆಯ್ದ ರತಿಯುಂ
ನಿರತಿಶಯಮಾಗಿರ್ಪುದುಂ,

ಸಕಳೇಂದುಮುಖಿಯನಾ ಕ ।
ನ್ನಿಕೆಯಂ ಕಣ್ಸೋಲ್ತು ನೋಡಿ ಮತ್ತೊರ್ವಂ ಕೌ- ॥
ತುಕದಿಂದೆಮೆಯಿಕ್ಕದೆ ರಾ ।
ಜಕುಮಾರಂ ಸುರಕುಮಾರನಂ ಗೆಲೆವಂದಂ ॥೫೮

ತರುಣಿಯ ಲಾವಣ್ಯರಸಾಂ ।
ಬುರಾಶಿಯೊಳ್ತೇಂಕೆ ತನ್ನ ಕಣ್ಣುಂ ಮನಮುಂ ॥
ಮರವಾನಸನಂತೊರ್ವಂ ।
ಸ್ಮರಸಮ್ಮೋಹನಶರಕ್ಕೆ ಗುಜಿಯಾಗಿರ್ದಂ ॥೫೯

ಅಳವಡಿಸುವಂತೆ ಮಣಿಕುಂ ।
ಡಳಮಂ ನಸು ಮುರಿದು ಜನಕಸುತೆಯ ಕಪೋಳ ॥
ಸ್ಥಳಮಂ ಮೃಗಮದಪತ್ರಾ ।
ವಳಿವಿಳಸಿತಮಂ ಮರುಳ್ದು ನೋಡಿದನೊರ್ವಂ ॥೬೦।

ತಳವೆಳಗಾದಂ ವನಿತಾ ।
ತಿಲಕದ ಪೆಱನೊಸಲ ರೋಚನಾತಿಳಕದ ಚೆ ।
ಲ್ವೆಳಕುಳಿಗೊಳೆ ಸಮ್ಮೋಹನ ।
ತಿಳಕದವೋಲ್ಮನಮನವನಿಪಾಲಕತಿಳಕಂ ॥೬೧।

ಬಾಳೆಯ ಸೋರ್ಮುಡಿ ಮನಸಿಜ ।
ಕಾಳೋರಗದಂತೆ ಮನದೊಳಾಕಂಪನಮಂ ॥
ಮೇಳಿಸೆ ಮತ್ತೊರ್ವಂ ಭೂ ।
ಪಾಳಂ ಪಾವಡರ್ದರಂತೆ ಬೆಱಗಾಗಿರ್ದಂ ॥೬೨।

ತನು ರೋಮಾಂಚಮನಪ್ಪುಕೆಯ್ಯೆ ನೃಪನೊರ್ವಂ ಕನ್ಯಕಾರೂಪದ
ರ್ಶನದಿಂ ತತ್ಪುಳಕಂಗಳಂ ಕಳವಿಪಂಚೀನಾದಮಂ ಕೇಳ್ದು ಭೋಂ
ಕನೆ ಚೆಯ್ವೆರ್ಚಿದುದೆಂದು ಬಂಚಿಸಿಯುಮೇಂ ಮೇಲ್ವಾಯ್ದುವಂ ಲೋಲಲೋ
ಚನಮಂ ತಾಂಗಿದನಿಲ್ಲ ಜಾನಕಿಯ ಸೌಂದರ್ಯಕ್ಕಿದಾಶ್ಚರ್ಯಮೇ ॥೬೩॥

ಪಲ್ಲವಪಾಟಳಾಧರೆಯ ಪೀನಪಯೋಧರಮಂಡಳಂಗಳಾ
ಪಲ್ಲಹರೀಪರಂಪರೆಯನೀಯೆ ಸ್ವಮುತ್ಸುಕಲೋಚನಪ್ರಭಾ

ಪಲ್ಲವದಿಂ ಮಕೂಲನವಪಲ್ಲವ ಶೋಭೆಯನಾಗಳೊರ್ವನಿ
ತ್ತಲ್ಲಿಯೆ ಕಣ್ಬೆಳಂಚಲೆಯ ಜಾನಕಿಯಂ ಮನಮೊಲ್ದು ನೋಡಿದಂ ॥೬೪॥

ಕೆಲರಾಗಳ್ ರುಜುವಿಂದಮರ್ಧರುಜುವಿಂದಂ ಸಾಚಿಯಿಂದಂ ಪಲ
ರ್ಕೆಲವುಂ ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ ಕ
ಣ್ಮಲರಂ ಚಿತ್ತಮನಿತ್ತು ಚಿತ್ರಿಸಿದವೋಲ್ನಿಷ್ಪಂದರಾಗಿರ್ಪುದುಂ
ಗೆಲೆವಂದತ್ತು ವಿಚಿತ್ರಚಿತ್ರಸಭೆಯಂ ಭೂಭೃತ್ಸಭಾಮಂಡಳಂ ॥೬೫॥

ಅನಿತಿಂದ್ರಿಯಮುಂ ವಿಷಯಮ ।
ನನಾಕುಳಂ ಬಿಟ್ಟು ದರ್ಶನೇಂದ್ರಿಯಮೊಂದ ॥
ಕ್ಕನುವಶಮಾದವೆವಲ್ ನೃಪ ।
ತನ್ಯಯರ್ಜಾನಕಿಯ ಮೇಲೆ ಕಣ್ಣಾಗಿರ್ದರ್ ॥೬೬॥

ಕರಣಂ ನಯನಮೆ ವಿಷಯಂ ।
ತರುಣಿಯೆ ಪೆಱತೇನುಮಿಲ್ಲೆನಲ್ ರಾಜತನು ॥
ಜರ ಕಣ್ಗಳೆಳಸಿ ಬಳಸಿದು ।
ವುರವಣೆಸಿದುವಟ್ಟಿ ಪತ್ತಿದುವು ಜಾನಕಿಯಂ ॥೬೭॥

ಅನಂತರಂ,

ಬಿಸರುಹನೇತ್ರೆಗೆ ಜಾನಕಿ ।
ಗೆ ಸುಟ್ಟಿ ತೋಱುತ್ತು ಮಱಿಪಿದಳ್ ಪರಿವಿಡಿಯಿಂ ॥
ಪೆಸರ್ಗೊಂಡು ವೃದ್ಧಕಂದುಂಕಿ ।
ಪೆಸರ ನೃಪಾತ್ಮಜರ ವಂಶವೀರ್ಯಶ್ರುತಮಂ ॥೬೮॥

ಅಂತಱಿಪುವುದುಂ,

ಕಡುಮಂದಮಪ್ಪ ಕಣ್ಣಿಮೆ ।
ಕುಡುವುರ್ವಂ ತುಳುಕೆ ನೋಡಿ ಮೊಗರಸಮೆಂಬಿಂ ॥
ಗಡಲೊಳ್ ಪೊಳೆವಳವಾಳೆಯ ।
ಬೆಡಂಗನೊಳಕೊಂಡವಕ್ಷಿಗಳ್ ಜಾನಕಿಯಾ ॥೬೯॥

ನನೆಯ ಸರಲ್ಗಳಂತೆ ನೆಱೆದಿಂಗಳ ತಣ್ಗದಿರಂತೆ ಕಂತುರಾ
ಜನ ಕರವಾಳಮಯ್ದೊಳಪಿನಂತೆ ನವೋತ್ಪಳದಾಮದಂತೆ ಪೂ
ವಿನ ಮಱೆಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತ ಲೋಲಲೋ
ಚನರುಚಿ ಸುತ್ತಿಮುತ್ತಿದುದಶೇಷನೃಪಾಳಸಭಾಂತರಾಳಮಂ ॥೭೦॥

ಅಂತು ನೋಡಿ,

ಅಱಗದೆ ಪೂತ ಚಂಪಕವಸಕ್ಕೆ ಸಮೇರುಮಹೀರುಹಕ್ಕೆ ಬಂ
ದೆಱಗುವ ಚಂಚರೀಕದವೊಲಾಕೆಯ ಕೇಕರಮನ್ಯರಾಜಕ
ಕ್ಕೆಱಗದೆ ರಾಘವಂಗೆಱಗೆ ಕಂಚುಳಿ ಕಣ್ಣಱಿದಾ ಲತಾಂಗಿಗ
ೞ್ಕೆಱಿಕೊಳಭಿವಣಿಸಲ್ಬಗೆವಳಾ ಧರಣೀಶಗುಣೈಕದೇಶಮಂ ॥೭೧।

ಪ್ರಾಕೃತನಲ್ಲರೀ ದಶರಥಾಗ್ರಸೂಭವನೇಕವಾಕ್ಯನಾ
ಶಾಕರಿಕರ್ಣಚಾಮರಯಶಂ ಚರಮಾಂಗನನಂತವೀರ್ಯನಿ
ಕ್ಷ್ವಾಕುಕುಳಾಮೃತಾರ್ಣವಸುಧಾರಕಿರಣಂ ರಣಮೇರು ಲೋಕಲುಂ
ಟಾಕನಿದಾಘತಾಪಹರವರ್ಷಣಮೇಘನುದಾತ್ತರಾಘವಂ ॥೭೨॥

ಕರಿಯಂ ಕಾಮಂ ಬಿಸಪಾಂ ।
ಡುರವರ್ಣಂ ರಾಮನಿದುವೆ ಭೇದಮಭೇದಮ
ವಿರತಿಶಯಮಪ್ಪ ರೂಪಿಂ ।
ವರನಾಗಲ್ ನಿನಗೆ ತಕ್ಕನೀ ರಘುರಾಮಂ ॥೭೩॥

ಎಂಬಿನಮಾ ಸಮಯದೊಳಾ ವಿದ್ಯಾಧರಮಹತ್ತರಂ ವಿಧಿಪೂರ್ವಕಮಾ ವಿಷಮಚಾಪನರ್ಚಿಸುವುದುಂ,

ರಸನಾಶಂಪಾಶತಂ ಸಂಚಳಿಸೆ ಪುದಿಯೆ ಫೂತ್ಕಾರಮಾಶಾಂತಮಂ ದ
ಳ್ಳಿಸೆ ವಹ್ನಿಜ್ವಾಳೆ ದೀರ್ಘಾನನಕುಹರಸಹಸ್ರಂಗಳಿಂ ಕಣ್ಗಳಿಂದೆ
ಣ್ದೆಸೆಗಂಗಾರಂಗಳೆತ್ತಂ ಕೆದಱೆ ಫಣಸಹಸ್ರಂಗಳಂ ಬಿರ್ಚಿ ಕಣ್ಗ
ರ್ವಿಸೆ ವಜ್ರಾವರ್ತ ಚಾಪಂ ಪಡೆದುದು ಭಯಮಂ ಕಾಳಕಾಳಾಹಿ ರೂಪಂ ॥೭೪॥

ಸಿಡಿಲಂತೆ ಮೊಳಗಿ ನೆಲನಂ ।
ಪೊಡೆಯುತ್ತುಂ ಪತ್ತು ದೆಸೆಗೆ ಮೋವಳಿಸುತ್ತುಂ ॥
ಪಡೆದುವಗುರ್ವಂಜವನೆದೆ ।
ಗಿಡೆ ವಜ್ರಾವರ್ತ ಸಾಗರಾವರ್ತಂಗಳ್ ॥೭೫॥

ಆಗಳವಱ ಮಸಕಮಂ ಕಂಡು ಭಯಂಗೊಂಡು ಖಚರಮಂಡಳಂ ಪ್ರಭಾಮಂಡಳಂಗೆ ಕಸ್ನೆ ಕೈಸಾರ್ದಳೆಂದು ಪೆಱಸಾರ್ದು ನೋಡುತ್ತಿರ್ಪುದುಂ,

ಈ ವಜ್ರಾವರ್ತಕೋದಂಡಮನವಯವದಿಂದೇಱಸಲ್ ಸಾಲ್ವ ದೋರ್ದಂ
ಡಾವಷ್ಟಂಭಪ್ರಚಂಡಂ ಜನಕಜೆಗೆ ವರಮ ಬರ್ಪುದೆಂಬೀ ವ್ಯವಸ್ಥಾ
ರಾವಂ ಕರ್ಣಾವತಂಸಂ ಪಸರಿಸೆ ನಿಜಪೀಠಂಗಳಿಂದೆೞ್ದುವಾಗಳ್
ತೀವುತ್ತಿರ್ಪನ್ನೆಗಂ ಭೂಷಣರುಚಿ ಕಕುಭಾನೀಕ ರಾಜಾಧಿಲೋಕಂ ॥೭೬॥

ಮನಸಿಜನುಂ ಚಂದ್ರಮನುಂ ।
ದಿನಕರನುಮನೇಕರೇಕೆ ನೆರೆದರೊ ಪೇೞಿಂ ॥
ಜಿನೆಗಂ ನೃಪತನಯರ್ವಿ ।
ಲ್ಲನೇಱಿಸಲ್ತಮ್ಮ ಬೆಳಗೆ ಬೆಳಗೆನೆ ಬಂದರ್ ॥೭೭॥

ಅಂತು ಬಂದವರ್ಗುರ್ವು ಪರ್ವೆ ವಿಗುರ್ವಿಸಿದ ಬಿಲ್ಗಳಂ ಕಂಡು ಭಯಂಗೊಂಡು,

ಉರಿಯಂ ಕಾಱುವ ಕೆಂಡಮಂ ಕಱಿವ ಬಿಲ್ಲುಮ ಕಂಡೆವಿಲ್ಲುಕ್ಕೆವಂ
ತರುಣೀರತ್ನಮನಿಟ್ಟುಕೊಳ್ವ ಸಮಕಟ್ಟೆಂಪಟ್ಟಿದಂ ಖೇಚರಂ
ಮರುಳಾದಂ ಜನಕಂ ವ್ಯವಸ್ಥೆಯನೊಡಂಬಟ್ಟಾರೊ ಕಲ್ಯಾಣ ತ
ತ್ಪರರೀ ಮಂಗಳಲಗ್ನದೊಳ್ಕುಳಿಕವಂಷ್ಟಾಲಗ್ನಮಂ ಸೈರಿಪರ್ ॥೭೮॥

ಅಹಿದರ್ಶನಮಲ್ತು ಶುಭಾ ।
ವಹಂ ವಿವಾಹಕ್ಕೆ ವಿಷಮಮೀ ಮಾರ್ಗಮಹಿ ॥
ಗ್ರಹಣಂ ಮುನ್ನಂ ಪಾಣಿ ।
ಗ್ರಹಣಂ ಬಱಿಯಮ ಗಡಿನ್ನಮಘಟಿತಮೊಳವೇ ॥೭೯॥

ಮಧುಪರ್ಕಮಲ್ತು ಮಂಗಳ ।
ವಿಧಾನದೊಳಗೊಂದುಮಲ್ತು ಪಾವಂ ಪಿಡಿವೀ ॥
ವಿಧಿ ಕನ್ಯಾಪರಿಣಯನ ।
ಪ್ರಧಾನಕಾರ್ಯಂಗಳಿನ್ನಮಘಟಿತಮೊಳವೇ ॥೮೦॥

ಕುಡುವೆಂ ಜಾನಕಿಯಮ ಪಿಡಿ ।
ದೊಡಜಗರಮನೆಂದು ಮುನ್ನಪೇೞ್ದೊಡೆಯಾಗಾ ॥
ರುಡಮಂ ಕಲ್ತು ವಿವಾಹ ।
ಕ್ಕೊಡರಿಸುವಂ ಬಱಿದೆ ಪಿಡಿವವಾವನೊ ಪಾವಂ ॥೮೧॥

ದೂರದೊಳಂಜದೀಕ್ಷಿಸುವ ಕಣ್ಗಲಿಗಳ್ ನೃಪರಾರುಮಿಲ್ಲೆನಲ್
ಸಾರೆವರಲ್ ಮನಂಗಿಡದ ಮೆಯ್ಗಲಿಯಾವನೊ ಬಾಹುವೀರ್ಯದಿಂ
ದಾರಿವನೆತ್ತಲಾರ್ಪರೆನಲೇಱಿಸುವುದ್ಧತವೃತ್ತಿ ನಾಡೆಯುಂ
ದೂರಮಿವಕ್ಕೆ ಬಿಲ್ಗೆಸರನಿಟ್ಟವನುರ್ವಿಗೆ ನಂಜನಿಟ್ಟವಂ ॥೮೨॥

ಎಂದರಸುಮಕ್ಕಳೆಲ್ಲಮಾ ಬಿಲ್ಲಂ ಕಂಡು ಬಲ್ಗರಂ ಪೊಡೆದಂತೆ ಪೆಡಂಮಗುಳೆ,

ದೇಶಾಧೀಶತನೂಭವರ್ಸೆಡೆವುದುಂ ಸಾಕೇಂತಸಿಂಹಾಸನಾ
ಧೀಶಂ ಕಂಡು ದರಸ್ಮಿತಂ ದಶರಥಂ ಭ್ರೂವಲ್ಲರೀಪಲ್ಲವಾ

ದೇಶಂ ನೋಡೆ ಮುಖಾಬ್ಜಮಂ ಸಭೆಯಿನೆೞ್ದಿಂ ತುಂಗವಂಶಂ ಸುರೇಂ
ದ್ರಾಶಾದಂತಿಬಳಂ ಜಿತಾಹಿತಬಳಂ ದುರ್ವಾರಬಾಹಾಬಳಂ ॥೮೩

ಅಂತು ತಳರ್ವುದುಂ,

ಜನನಯನಪ್ರತಿಬಿಂಬಂ ।
ತನುರುಚಿಯೊಳ್ಪೊಳೆಯೆ ನಡೆವ ನೆಯ್ದಿಲ್ಗೊಳನಂ ॥
ನೆನೆಯಿಸಿ ಬಂದನೊ ರಾಮಂ ।
ನೆನೆಯಿಸಿದನನುಕ್ಷಣಂ ಸಹಸ್ರೇಕ್ಷಣನಂ ॥೮೪

ಬಲಭದ್ರಂ ರಜತಾದ್ರಿ ಬರ್ಪ ತೆಱದಿಂ ಬಂದಂ ಧನುರ್ದರ್ಶನಾ-
ಕುಲರಂ ರಾಜತನುಜರಂ ಸ್ಮಿತಮುಖಂ ನೋಡುತ್ತಮುದ್ಭ್ರೂಲತಂ
ಕೆಲರುಂ ಮೂರ್ಛೆಗೆ ಸಂದರಂ ಕೆಲಬರಂ ಬೆಳ್ಕುತ್ತು ಬೆನ್ನಿತ್ತರಂ
ಕೆಲರಂ ಬೆಕ್ಕಸಮುತ್ತರಂ ಕೆಲಬರಂ ಶಂಕಾವಿಷಾತಂಕರಂ ॥೮೫

ಅಂತೆಯ್ದೆವರ್ಪುದುಂ,

ಪದನಖದೀಪ್ತಿ ಮಂಜರಿ ನಿಚೋಳಕನಂತಿರೆ ತನ್ನನಾವಗಂ
ಪುದಿಯಲೊಡಂ ವಿಗುರ್ವಣೆ ರಘೂದ್ವಹಸನ್ನಿಧಿಯಿಂದದೃಶ್ಯಮ
ಪ್ಪುದುಮಿಳಿದಾಯ್ತು ಚಾಪಲತೆ ರೋಹಣಶೈಲವಿಷಾಪಹಾರರ
ತ್ನದ ವಿಜಿತಾಂಶು ತಳ್ತಡರೆ ನಿರ್ವಿಷಮಾದ ಮಹಾವಿಷಾಹಿವೋಲ್ ॥೮೬

ಆ ವಿಷಮಕೋದಂಡಮನೇರಂಡಕಾಂಡಮಂ ಬಗೆದಂತೆ ಬಗೆದು,

ಪದುಳಂ ನಿಂದೆಡಗೈಯೊಳೊತ್ತೆ ರಘುಜಂ ಕೊಪ್ಪಂ ಪದಾಂಗುಷ್ಠಮೂ
ಬದೊಳಿಟ್ಟೇಱಿಸೆ ಕಾಲದಂಡನಿಭಮಂ ಕೋದಂಡಮಂ ಭೂತಳಂ
ಪದುಳಂ ನಿಂದುದೆ ಶೇಷಕಂಠಕಠಿನಾಸ್ಥಿಶ್ರೇಣಿ ನುರ್ಗಾಗದಿ
ರ್ದುದೆ ಕೂರ್ಮೋನ್ನತ ಖರ್ಪರಂ ಸುಗಿದು ಬೆನ್ನಂಪತ್ತದೇಂ ಮಾಣ್ದುದೇ ॥೮೭॥

ಇರ್ಮೆ ಭರಂಗೆಯ್ದನೆ ಗೊಲೆ ।
ಗೊರ್ಮೊದಲೆತ್ತಿದನುಗುರ್ವು ಮೆಯ್ವೆತ್ತುದನಾ ॥
ಕಾರ್ಮುಕಮಂ ರಘುವೀರನನ ।
ದೋರ್ದಂಡಳಶಕ್ತಿ ಮನುಜನಸಾಧಾರಣಮೇ ॥೮೮॥

ಪುಲಕಂ ಜಾನಕಿಗುತ್ಸವಂ ಜನಕರಾಜಂಗುಮ್ಮಳಂ ಖೇಚರಾ
ವಲಿಗುದ್ವೇಗಭರಂ ನರೇಂದ್ರ ಸುತಸಂದೋಹಕ್ಕೆ ಸಮ್ಮೋಹನಂ

ುನಾಶ್ರೇಣಿಗೆ ವಿಸ್ಮಯಂ ಪುರಜನಕ್ಕಾಕರ್ಷಣಂ ಲೋಚನಾ
ಿಗಾಯ್ತೇಱಿಸಿ ನೀವಿ ಜೇವೊಡೆಯೆ ವಜ್ರಾವರ್ತಮಂ ರಾಘವಂ ॥೮೯॥

ತದನಂತರಂ,

ುದಂ ಲೀಲೆಯಿನತ್ತೆ ಖೇಚರಬಲಂ ಕಿೞ್ತಿತ್ತಿ ಪಾಱಿತ್ತಸು
ುದಿಂದಾನತಮಾಗಿ ಕೊಪ್ಪು ಪಿರಿದುಂ ಲಜ್ಜಾನತಂ ರಾಜಲೋ
ುಣಂ ಬೆಕ್ಕಸಮುತ್ತುದೇಱಿಸುವುದುಂ ಕೋದಂಡಮಂ ರಾಮನ
ುದಿಂ ಮನ್ಮಥನಾಗಳೇಱಿಸದೆ ಮಾಱಿಚ್ಚಂ ಪುರಸ್ತ್ರೀಯರಂ ॥೯೦॥

ವತಂಸಮಾದುವಮರ ।
ವನಂಗಳ್ ಸಕಳಜನದ ಜಯ ಜಯ ನಿನದಂ ॥
ಿ ಶಬ್ದಂಗಿಡಿಸಿದುವು ।
ವಪಟಹಧ್ವನಿಗಳುಣ್ಮಿ ಪೂಣೆದುವಾಗಳ್ ॥೯೧॥

ತ್ತಿದುದು ಮಂಗಳಧ್ವಜ ।
ುತ್ತಿದುದು ಸಿತಾತಪತ್ರಮಾಗಸಮಂ ಪೂ ॥
ತ್ತಿದುದಾಶೀರ್ವಾದಂ ।
ುತ್ತಿನ ಸೇಸೇಗಳನಿಕ್ಕಿದರ್ಮಾನಿನಿಯರ್ ॥೯೨॥

ಆಗಳಾ ಬಳಿನ ದೋರ್ವಳಕ್ಕೆ ಕಂಚುಕಿ ರೋಮಾಚಕಂಚುಕಿತಶರೀರೆಯಾಗಿ
ಾನಕೀದೇವಿಯುಮನೋರಥಂಸಫಳಮಾಯ್ತೆಂದು ಪುಣ್ಯಾಹಸಮಯಮಖಿಳ
ಾಜಕುಳಶೇಖರನಂ ಕುಸುಮಶೇಖರಂ ಮಾಱ್ಪುದೆಂದು ಬಿನ್ನವಿಸೆ,

ಃವಡೆ ಹಂಸೆಗೀ ನಡೆಯ ಚೆಲ್ವೆನೆ ನೂಪುರದಿಂಚರಂ ಸ್ಮರಂ
ೀವಡೆದಂದಮಾಗೆ ಮೃದುಪಾದತಳಂಗಳ ಕೆಂಪು ಕೂಡೆ ಕೆಂ
ಾವರೆವೂಗಳಂ ಕೆದಱುವಂತಿರೆ ಕುಂತಳ ಸೌರಭಕ್ಕೆ ಭೃಂ
ಾವಳಿ ಮೇಲೆ ಪೀಲಿದೞಿಯಂತಿರೆ ಬಂದಳದೊಂದು ಲೀಲೆಯಿಂ ॥೯೩॥

ಲರ್ಗಣೆಯನಂಗಜಂಗೀ ।
ುಳೆಂದು ರತಿ ಬರ್ಪ ಮಾೞ್ಕೆಯಿಂ ಮಾಲೆಯನಾ ॥
ಲಿತಾಂಗಿ ಪಿಡಿದು ಕಣ್ಗಂ ।
ಲಕ್ಕಮಾ ದಾಶರಥಿಯ ಬಗೆಗಂ ಬಂದಳ್ ॥೯೪॥

ಅಂತು ಬಂದು,

ಮಾಲೆಯ ಮೇಲೆ ತುಂಬಿಗಳ ಮಾಲೆ ತೆಱಂಬೊಳೆದಾಡೆ ಬೇಱೆ ಪೂ-
ಮಾಲೆಯ ಲೀಲೆಯಂ ಕಿದಱೆ ಕೇಕರಮಾಲೆ ಶಿರೀಷಮಾಲೆಯಂ
ಸೋಲಿಸೆ ನೀಳ್ದ ಬಾಹುಲತೆ ತೋಳ ಮೊದಲ್ಮದನಾನುರಾಗಮಂ
ಸಾಲಿಡೆ ಸಾರ್ದು ಸೀತೆ ರಘುವಂಶನಮೇರುಗೆ ಮಾಲೆ ಸೂಡಿದಳ್ ॥೯

ತನುಸೋಂಕಿಂ ಮೈಗೆ ರೋಮಾಂಚಮನೊದವಿಸೆ ರಾಮಂಗೆ ವೈದೇಹಿ ನೀರೇ
ಜನಿಸರ್ಗಾಮೋದೆ ಗಂಧೋದಕಸವನಮನಿತ್ತಟ್ಟಿಱಿಂ ಬಾಹುಮೂಳಂ
ಸ್ತನಮೂಳಂ ನಾಭಿಮೂಳಂ ತ್ರಿಗುಣಿಸೆ ಸುಮನಃಶೇಖರಂ ಮಾಡಿ ಕಂದ
ರ್ಪನ ವಾಮೋಪಾಂತದೊಳ್ ರಂಜಿಸುವ ರತಿಯ ಸೌಂದರ್ಯಮಂ ಸೂಱೆಗೊಂಡಳ್ ॥೯

ಬಲದೇವಂಗೇವುದೆ ಬೆಂ ।
ಬಲಮಾತನೊಳಾದ ಮೋಹದಿಂ ಕೃಷ್ಣಂ ದೋ - ॥
ರ್ವಲದೃಪ್ತಂ ಸೆಣಸಿದರಂ ।
ಕೊಲಲುಂ ಗೆಲಲುಂ ಕಡಂಗಿ ಪಿಂತನೆ ಬಂದಂ ॥೯

ಆಕಾರಮಲ್ತು ವಜ್ರ ।
ಪ್ರಾಕಾರಮಿದೆನಿಸಿ ಲಕ್ಷ್ಮಣಂ ಬರೆ ಚಾಪಂ ॥
ವೈಕುರ್ವಣವಿಷಮಫಣೀಂ ।
ದ್ರಾಕೃತಿಯಂ ಬಿಟ್ಟು ಮಟ್ಟಮಿರ್ದತ್ತಾಗಳ್ ॥೯

ಗರುಡೋದ್ಗಾರ ಮಣಿಚ್ಛವಿ ।
ಗರುಡಧ್ವಜನೆನಿಪ ಕೃಷ್ಣನಿದಿರೊಳ್ಧನು ಥ ॥
ನ್ನುರಗಾಕಾರಮನುಪಸಂ ।
ಹರಿಸಿ ನಿಜಾಕೃತಿಯೆನಿಪ್ಪುದೊಂದಚ್ಚರಿಯೇ ॥೯೯

ಅಂತು ಬಂದು,

ನಗಧರನೆತ್ತನೇ ಧನುವನೇಱಿಸನೇ ನಗಸಾನುಕೂಟಮಂ
ಪಗೆವರನೇಱಿಸಲ್ನೆಱೆವಲಂಘ್ಯಬಲಂ ಬಲಗರ್ವದಿಂದಂ
ಬಗೆದನೆ ಪುರ್ವನೇಱಿಸುವ ಮಾಟ್ಕೆಯಿನಶ್ರಮದಿಂ ಪೊಡರ್ವು ಕೈ
ಮಿಗೆ ರಿಪುಮರ್ದನಂ ಧನುವನೆತ್ತಿದನೇಱಿಸಿದಂ ಜನಾರ್ದನಂ ॥೧೦೦

ಪರಾಭವಿಸಿದಂ ಗುಣಪ್ರಗುಣ ಚಂಡಕೋದಂಡದಿಂ
ಪರಿಸ್ಫುರಿತ ಪಂಚರತ್ನರುಚಿ ಸಾಗರಾವರ್ತದಿಂ
ವಿರೋಧಿಬಲಪೋತವೀರರಸಸಾಗರಾವರ್ತದಿಂ
ಸುರೇಂದ್ರಧನುಮೂಡಿದಂಬರಮನಂದು ಪೀತಾಂಬರಂ ॥೧೦೧

ುದಧಿ ಕಲಂಕಿದತ್ತು ದೆಸೆ ತಲ್ಲಣಿಸಿತ್ತಮರಾದ್ರಿ ಗಾಳಿಗೊ-
ತ್ತಿದ ಸೊಡರಂತೆ ಸಂಚಳಿಸಿದತ್ತು ನೆಲಂ ಮೊಳಗಿತ್ತು ದಿಗ್ಗಜಂ
ುದವುಡುಗಿತ್ತು ಖೇಚರಬಲಂ ಪೆಳಱಿತ್ತು ಕಱುತ್ತು ದಿವ್ಯಚಾ
ುವ ತಿರುವಾಯ್ಗೆ ದಿವ್ಯಶರಮಂ ತರ ದೋರ್ವಳಶಾಳಿ ಲಕ್ಷ್ಮಣಂ ॥೧೦೨॥

ರಕಮಳಂಗಳಂ ಮುಗಿದು ಲಕ್ಷ್ಮಣದೇವ ಶರಣ್ಯಮೆಂಬ ದೇ
ುರ ನುಡಿ ಪೊಣ್ಮೆ ದತ್ತರಲ ಪೆರ್ಮಱಿಗೊಂಡುದು ದೇವದುಂದುಭಿ
ಸ್ವರಮೊಗೆದತ್ತವಕ್ಕಗಿದು ಖೇಚರರಾಜಮಹತ್ತರಂ ಭಯಾ
ುರನೆಮೆಯಿಕ್ಕದೆಂಟನೆಯ ಕೇಶವನಂ ಬೆಱಗಾಗಿ ನೋಡಿದಂ ॥೧೦೩॥

ುದಟಂ ವಜ್ರಾವರ್ತ ।
ಕ್ಕೆ ದಿವ್ಯಮೆನಿಸಿದ ಹಳಾಯುಧಂ ಬೆರಸು ಬಳಂ ॥
ುದೆವೆರಸು ಸಾಗರಾವ ।
ರ್ತದಿವ್ಯಚಾಪಕ್ಕುಪೇಂದ್ರನಧಿಪತಿಯಾದಂ ॥೧೦೪॥

ಚಂದ್ರಾಸ್ಯೆಯರಂ ಮನದೊಳು ।
ಪೇಂದ್ರಂಗೀರೊಂಬದಿಂಬರಂ ನಿರ್ಜಿತದೆ ॥
ದೇಂದ್ರಗಣಿಕೆಯರನಂಕದ ।
ಚಂದ್ರಧ್ವನಿಜನಳ್ಕಿ ಕಪ್ಪವೀವವೊಲಿತ್ತಂ ॥೧೦೫॥

ುಗಳನೇಕಾರ್ಚನೆಗಳಿಂ ಧನುರ್ಯುಗಳಮಂ ಜನಕನರ್ಚಿಸುವುದುಂ,

ುನರಣ್ಯಸುತಂ ದಶರಥ ।
ಜನಪತಿ ಕರಿಘಟೆಯೊಳಶ್ವದಱಿದೊಳುಪೇಂದ್ರಂ ॥
ಜನಕತನೂಜೆಯುಮಂ ರಾ ।
ಮನುಮಂ ಮುಂದಿಟ್ಟು ಮಿಥಿಳೆಗಭಿಮುಖರಾದರ್ ॥೧೦೬॥

ಅಂತು ಸ್ವಯಂವರಶಾಲೆಯಂ ತಳರ್ವುದುಂ,

ುಟ್ಟಲೆಯಂ ಪಳಂಚಿ ಪುರಗೋಪುರಮಂ ಪರಿದೇಱಿ ಕೋಟೆಯಂ
ಮೆಟ್ಟಿ ಸುಧಾಗೃಹಾವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚೌ
ಪಟ್ಟಿಮನೆಯ್ದಿ ದೇವಗುಲದಾದಲೆಯಿಂ ಗಗನೋದರಕ್ಕೆ ಧೀಂ
ಕ್ಕಿದು ದುಂದುಭಿಸ್ವನಮನೇಱಿಸೆ ಘೋಂಕನೆ ಶಂಖನಿಸ್ವನಂ ॥೧೦೭॥

ಆಗಳಾ ಪುರಜನಂಗಳುತ್ತುಂಗಮಾಟಕೂಟಪ್ರಾಸದಂಗಳನೇಱಿ,

ತಲೆವಱಿದಾನೆ ಸುತ್ತಿ ಪಲವು ಬರೆ ತಳ್ತಿರೆ ಮೇಘಡಂಬರಂ
ಲಲಸೆಯರಿಕ್ಕೆ ಚಾಮರಮುನಿಕ್ಕೆಲದಾನೆಯ ಪುಷ್ಪಕಂಗಳೊ
ಳ್ಳಲಸಿ ಕುಳಾಚಳಾಕೃತಿಯನೇಱಿ ಗಜೇಂದ್ರಮನಿಂದ್ರನಂತೆ ಬ
ಪ್ಪಲಘುಪರಾಕ್ರಮುಂ ದಶರಥಂ ಪರಿಪೂರ್ಣಜಗನ್ಮನೋರಥಂ ॥೧೦೮॥

ವಸಥಿತರಂಗದಂತಿರೆ ತುರಂಗಬಲ ಬರೆ ವಾಜಿರಾಜಿ ವ-
ಲ್ಗನದಿನುರಸ್ಸ್ಥಲಂಬಿಡಿದು ಲಕ್ಷ್ಮಿಯ ಕೇಕರದಂತೆ ತೋರಮು-
ತ್ತಿನ ತಿಸರಂ ತೆಱಿಂಬೊಳೆಯೆ ಮಿಂಚಿನವೋಲ್ಮಣಿಕುಂಡಳಾಂಶುಗ-
ಳ್ತೊನೆಯೆ ಕದಂಪಿನೊಳ್ಮದನನಂತಿರೆ ಬರ್ಪವನಲ್ತೆ ಲಕ್ಷ್ಮಣಂ ॥೧೦೯॥

ತನುಸೋಂಕಿಂ ತನಗೀಯೆ ಹರ್ಷಭರಮಂ ಲಜ್ಜಾರಸಾಕುಂಚಿತಾ-
ನನವೈದೇಹಿ ತದೀಯ ಕುಂತಳಸಹಸ್ರಕ್ಕಿತ್ತು ತಿರ್ಯಗ್ವಿಳೋ-
ಕನಮಂ ಹೇಮವರೂಥದೊಳ್ನಿಲಿಸಿ ನೇತ್ರಾನಂದಮಂ ಮಾಳ್ಪ ರೂ-
ಪಿನಿ ಚೆಲ್ವಿಂ ಮದನಂಗೆ ಲಾಘವಮನಿತ್ತಾ ಬರ್ಪವಂ ರಾಘವಂ ॥೧೧೦॥

ಚಲನೀಳಾಚರರತ್ನಕೂಟಮೆನೆ ಕಾಲ್ಗೋದಾನೆಯಂ ದೋರ್ಭುಜಂ-
ಗಲತಾದಂಷ್ಟ್ರಿಕೆ ಕಣ್ಗಗುರ್ವಿಸುವಿನಂ ವಜ್ರಾಂಕುಶಂ ಮೌಕ್ತಿಕಾ-
ವಲಿ ವಕ್ಷಸ್ಸರಸೀಮೃಣಾಳಿಕೆ ಬೆಡಂಗಂ ಬೀಱಿ ಚಂದ್ರಾರ್ಕರಂ-
ಗೆಲೆವಂದಾ ಬರುತಿರ್ಪವರ್ಭರತಶತ್ರುಘ್ನರ್ಪುರೋಭಾಗದೊಳ್ ॥೧೧೧॥

ಎಂದು ಪುರಜನಪರಿಜನಂಗಳೋರೊರ್ವರೊಳ್ನುಡಿಯೆ ಪುರಮಂ ಪೊಕ್ಕು ಕರುಮಾಡದ ಮುಂದಳ ವಿವಾಹಮಂಟಪದ ಮುಂದೆ ವಾಹನಂಗಳನಿೞಿದು ಪುಣ್ಯಪುಣ್ಯಾಂಗನಾಜನದ ತಳಿವ ಸಜಳಧವಳ ಕಳಮಾಕ್ಷತಂಗಳಿಂದಳಕವಲ್ಲರಿಯುಂ ಕುಸುಮಿಸುತ್ತುಮೊಳಪುಗುವುದುಂ,

ಹರಿನೀಳಸ್ತಂಭಮಂ ಜಾಗದ ಪಡಲಿಗೆಯುಂ ತುಂಗಭೃಂಗಾರಮುಂ ನೆ-
ಮ್ಮಿರೆ ಭಾಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾ
ಜಿರಮಂ ಮುಕ್ತಾವಲೀರಂಗವಲಿ ಬಳಸೆ ಕರ್ಕೇತನದ್ವಾರಶಾಖಾಂ-
ತರಮಂ ರತ್ನಸ್ಫುರತ್ತೋರಣಮೆಳಸೆ ಬೆಡಂಗಾದುದುತ್ಸಾಹಗೇಹಂ ॥೧೧೨॥

ಸುರದಂಪತಿಗಳ ವಿದ್ಯಾ ।
ಧರದಂಪತಿಗಳ ನರೇಂದ್ರದಂಪತಿಗಳ ಕಿ- ॥
ನ್ನರದಂಪತಿಗಳ ವಿದ್ಧಂ ।
ವಿರಾಜಿಸಿತ್ತದಱ ಪೊಳೆವ ಪಳಿಕಿನ ಕೇರೊಳ್ ॥೧೧೩॥

ಪುರುಜಿನಚರಿತಂ ಭರತೇ ।
ಶ್ವರಚರಿತಂ ಸಕಳಚಕ್ರವರ್ತಿಯ ಚರಿತಂ ॥

ಹರಿವಂಶವೀರಪುರುಷರ ।
ಚರಿತಂ ಬರೆದಿರ್ದುವಲ್ಲಿ ಕೆಲಕೆಲವೆಡೆಯೊಳ್ ॥೧೧೪॥

ಆಮೋದಮುದಿತಮಧುಕರ ।
ದಾಮಕದೊಳ್ನೀಳರತ್ನದಾಮಂ ಮಲ್ಲೀ- ॥
ದಾಮಕದೊಳ್ಮೃಕ್ತಾಫಳ ।
ದಾಮಂ ತಡವಾದುವೊಡನೆ ಮಣಿಮಂಟಪದೊಳ್ ॥೧೧೫॥

ಆಲಂಬಿತಮಣಿಘಂಟಾ ।
ಜಾಲಕವೆಡೆಯೆಡೆಯೊಳೆಟಿಲೆಗಟ್ಟಿದ ಮುಕ್ತಾ- ॥
ಮಾಲಿಕೆಯಂ ನವವಿಚಕಿಲ ।
ಮಾಲಿಕೆಗೆತ್ತೆಳಸಿ ಸುಟಿವುವಳಿಕಳಭಂಗಳ್ ॥೧೧೬॥

ಮಂಗಳಗಾಯಿನಿಯರ ಗೀ ।
ತಂಗಳನುಪಹಾರಕುಸುಮಮಧುಪಾನವ್ಯಾ- ॥
ಸಂಗದೊಳಿರ್ದೆಳದುಂಬಿಗ ।
ಳಿಂಗೊರಲಿಮ್ಮಡಿಸಿದತ್ತು ರಾಜಾಂಗಳಣದೊಳ್ ॥೧೧೭॥

ಪಳಿಕಿನ ಕಂಭಂಗಳ್ಕ ।
ಣ್ಗೊಳಿಸುವ ಮಾಣಿಕದ ಸೊದರ್ಗಳಿಂ ನಾಡೆ ಮನಂ- ॥
ಗೊಳಿಸಿದುವು ಲಸಿತಭಸಿತೋ ।
ಜ್ಜ್ವಳಗಾತ್ರಂ ಸ್ಥಾಣು ಸೊಸಲ ಕಣ್ದೋಜೆದವೋಲ್ ॥೧೧೮॥

ಅರುಣಮಣಿ ಪೀಠರುಚಿಯಂ ।
ಪರಭಾಗಂಬಡೆದ ನೀಳರತ್ನಸ್ತಂಭಾ- ॥
ತರದಬಳಾಪ್ರತಿಬಿಂಬಂ ।
ಸಿರಿ ನೆರ್ಮಿದಳೆನಿಸಿದತ್ತು ಪೀತಾಂಬರಮಂ ॥೧೧೯॥

ಉಗುಳ್ವವುದಿಂದ್ರಜಾಲಪತಯಂ ನವರತ್ನವಿತಾನಮಾಡಿದ-
ತ್ತಗುರುವ ಧೂಪಧೂಮಲತೆ ತುಂಬಿಯ ಗೀತದ ಮೇಲೆ ಲಾಸ್ಯಮಂ
ಪಗಲಸಿರುಳ್ಗೆ ಮಾಣಿಕದ ದೀಪಿಗೆ ಕೈಸೆಜಿಗೊಟ್ಟುದುತ್ತತಾ-
ಕೆಗಳಸಿಲಂಗ ಮಾಡಿದುವು ಮಾರ್ಗಸಿರೋಧಮನಾನಿವಾಸದೊಳ್ ॥೧೨೦॥

ಆ ಮಂಟಪದ ಮಧ್ಯಪ್ರದೇಶದೊಳ್,

ಮರಕತ ಮಂಗಳ ವೇದಿಕೆ ।
ಧರಾಂಗನಾಕೇಶಬಂಧದಂತಿರೆ ಮುಕ್ತಾ- ॥
ವಿರಚಿತರಂಗವಲಿ ಮನೋ ।
ಹರಮಾದುದು ತೊಳಗಿ ಪೊಳೆವ ತಲೆದುಡುಗೆಯವೋಲ್ ॥೧೨೧॥

ಪಸುರ್ವರಲ ಜಗಲಿಯೊಳ್ ರಂ ।
ಜಿಸಿದುದು ಚೆಂಬೊನ್ನ ಪಟ್ಟವಣೆ ಪಸುರೆಲೆಯಿಂ ॥
ಮುಸುಕಿದ ತಾವರೆಗೊಳದೊ ।
ಳ್ಪಸುರ್ಗಟಿದು ಮರಲ್ದರಲ್ದ ಪೊಂದಾವರೆವೋಲ್ ॥೧೨೨॥

ಎಳಅಡಕೆಯ ಕೊನೆಯಿಂ ಮಾ ।
ತುಳುಂಗದಿಂ ನಾಳಿಕೇರಫಳದಿಂ ದ್ರಾಕ್ಷಾ- ॥
ಫಳದಿಂ ಕಾಂಚನಕದಳೀ ।
ಫಳದಿಂದೊಪ್ಪಿದುದು ವೇದಿಕಾಂತರ್ಭಾಗಂ ॥೧೨೩॥

ಬಿಸಸೂತ್ರತ್ರಿತಯಂ ಯವಾಂಕುರಕೃತಗ್ರೈವೇಯಕಂ ಪಲ್ಲವೋ-
ಲ್ಲಸಿತಾದರ್ಶಸುದರ್ಶನೀಯಮಮಳಸ್ರಕ್ಸುಂದರಂ ಪಂಚರ-
ತ್ನಸಮಸ್ತೌಷಧಿಗರ್ಭಮಕ್ಷತಯುತಂ ದೂರ್ವಾಂಚಿತಂ ಸರ್ವಧಾ-
ನ್ಯಸಮುತ್ತಂಭಿತ ಪೂರ್ಣಕುಂಭಮೆಸೆದತ್ತಾ ವೇದಿಕಾಮಧ್ಯದೊಳ್ ॥೧೨೪॥

ಅನುರೂಪಂ ಸ್ಫಟಿಕಾಬ್ಜದೊಳ್ದಧಿ ಸುವರ್ಣಕ್ರೌಂಚದೊಳ್ ರೋಚನಂ
ಘನಹಾರೀತಕಹಂಸಿಯೊಳ್ ಹರಿತದೌರ್ವಂ ರಾಜತದ್ರೋಣಿಯೊಳ್
ಘನಸಾರಂ ಹರಿನೀಳಶುಕ್ತಿಕೆಗಳೊಳ್ಕಸ್ತೂರಿ ಮಾಣಿಕ್ಯಭಾ-
ಜನದೊಳ್ಕುಂಕುಮಪಂಕಮೇಂ ಮೆಱೆದುದೋ ಮಾಂಗಲ್ಯ ಸಾಕಲ್ಯಮಂ ॥೧೨೫॥

ಮಿಸುಗುವ ಕೆಂದಳಿರೊಳ್ ದ್ವಿಗು ।
ಣಿಸೆ ಮೇಗೊಗೆವಂಶುಮಾಲೆ ವೇದಿಕೆಯೊಳ್ ರಂ- ॥
ಜಿಸುವೆಳನೇಸಱಿಂ ನೆನೆ ।
ಯಿಸುವ ಚತುಷ್ಕೋಣ ಶೋಣಮಣಿಕಳಸಂಗಳ್ ॥೧೨೬॥

ಆ ಸಕಳಮಂಗಳ ದ್ರವ್ಯಸೇವ್ಯ ಮಣಿವೇದಿಕಾಮಧ್ಯ ವಿಶಾಳಕಳಧೌತ ಪೀಠದೊಳ್
ರತಿಯುಂ ರತಿಪತಿಯುಮಿರ್ಪವೋಲ್ದಂಪತಿಗಳಿರ್ದರಲ್ಲಿ ಪೂರ್ವಭಾಗದೊಳ್ದಶರಥನಿಂದ್ರನಂದ
ದಿಂದುಪೇಂದ್ರ ಭರತ ಶತ್ರುಘ್ನ ಸಮನ್ವಿತಮನೇಕ ಮುಕುಟ ಬದ್ಧ ಪರಿವೃತನುಮಾಗಿರ್ದಂ
ಮತ್ತಮಪರ ಭಾಗದೊಳಪರಾಜಿತಾ ಮಹಾದೇವಿ ಸುಮಿತ್ರೆ ಸುಪ್ರಭೆ ಕೈಕೆವೆರಸು ಅನಂತಸಾಮಂ

ಸೀಮಂತಿನಿಯರಿಂ ಸುರಪುರಂಧ್ರಿಯರ್ವೆಳಸಿದಿಂದ್ರಾಣಿಯಂತೆ ಮಹಾಮಹಿಮೆವೆತ್ತಿರ್ದೆಳಿರ್ಪುದು ಮಿತ್ತಲ್,

ರನ್ನದ ಬಾಯಿನಕ್ಕೆ ಪಳವಂದವ ಚೆಂದದ ಸೀರೆಗೆನ್ನವ-
ರ್ತನ್ನವರೆನ್ನದಿತ್ತೊಸಗೆಯಿಂ ನೆಲದೊಳ್ವೊಜಗಾರುಮಿಲ್ಲಿನ-
ಲ್ಮನ್ನಿಸಿ ಮೈಮೆಯಂ ಮೆಱೆದಳಂದು ವಿದೇಹಿ ವಿವಾಹಗೇಹದೊ-
ಳ್ಪನ್ನಿದಮಾದ ಕಲ್ಪಲತೆಯೋ ಸುರಧೇನುವೊ ಪೇೞ್ಮೆಂಬಿನಂ ॥೧೨೭॥

ಅಂತಪಾರಪುಣ್ಯಪುಣ್ಯಾಂಗನಾ ಜನಕ್ಕೆ ಪಂಚರತ್ನದ ಬಾಯಿನಮನಿತ್ತು ಪಳಂಚಿಸುಂ-ಗುರದ ನೂಪುರದ ಸೂಲತೊಂಗಲದ ಸಂಕಲೆಯ ಪಿಂಡುಗಂಕಣದ ಕಳನಿನದಮತನುವ ಚಾಪಟಂಕಾರ ಶರಮೋಕ್ಷ ಹೂಂಕಾರದಂತೆ ಕಿವಿಸದ್ದುಂಗಿಡಿಸೆ ಕಡೆಗಣ್ಣ ಕಾಂತಿ ಕುಡುಮಿಂಚಿನ ಗೊಂಚಲಂತೆ ಸಂಚಳಿಸೆ ಪೆಂಡವಾಸದ ವಿಳಾಸಿನೀಜನಂಗಳನಂಗಜಂಗಮಲತೆಯುಂ ಸುತ್ತಿದೆಳಲತೆಗಳಂತೆ ವಿವಿಧೋಪಾಯನರತ್ನಪಟಲಿಕೆಗಳಂ ಪಿಡಿದೊಡನೆ ಬರೆ ಬಂದು,

ಕತ್ತುರಿಬೊಟ್ಟನಿಟ್ಟು ಬಿಡುಮುತ್ತಿನ ಸೇಸೆಯನಿಕ್ಕಿ ಮಾಲೆವೂ-
ವೆತ್ತಿ ವಿಚಿತ್ರವಸ್ತ್ರಮಣಿಭೂಷಣಮಂ ಮಣಿಭಾಜನಂಗಳಿಂ-
ದಿತ್ತು ವಿದೇಹಿ ಸಾರಘನಸಾರದ ರನ್ನದ ಬಾಯಿನಂಗಳಿಂ
ಚಿತ್ತವಿಕಾಸಮಂ ಪಡೆದಳಂದಪರಾಜಿತೆಗಂ ಸುಮಿತ್ರೆಗಂ ॥೧೨೮॥

ಆ ಸಮಯದೊಳ್ಜನಕನಭಿಜನ ಸನಾಭಿಜನ ಸಮನ್ವಿತಂ ಗಣಕಗಣ ಪುನಃಪುನರುಚ್ಚಾರಿತ ಪುಣ್ಯಾಹಪ್ರಶಸ್ತರವದೊಡನಗಣ್ಯ ಪುಣ್ಯ ಪುಣ್ಯಾಂಗನಾ ಜನದಾಶೀರ್ವಾದನಾದಮೊದವೆಯುಂ ಮಾಂಗಲ್ಯಗೀತ ಮಧುರಧ್ವನಿಗಳೊಡನೆ ಮಂಗಳಪಾಠಕರ ಪಠನಧ್ವನಿಗಳುಣ್ಮೆ ಪೊಣ್ಮೆಯುಂ ರಘುಕುಳ ರಾಜಭವನಮೆನಿಸಿ ರುಚಿ ಸುರಭಿ ಸಲಿಲಪೂರ್ಣ ಕಳಸಮನೆತ್ತಿ ಕೊಂಡು,

ಜಗತೀಜಂಗಮಕಲ್ಪವೃಕ್ಷಮಿದೆ ಕೈವಂದತ್ತೆನಲ್ಪಾಯಶಾ-
ಖೆಗಳೊಳ್ಪೊಂಗಳಸಂ ಮನಂಗೊಳಿಸೆ ಭೂಪಂ ತನ್ನ ಸಂತಾನ ವೃ-
ದ್ಧಿಗೆ ಪೊಯ್ನೀರೆಱೆದಂತೆ ಹರ್ಷಪುಳಕಂ ಕೈಗಣ್ಮೆ ಹರ್ಷಾಶ್ರು ಕೈ-
ಮಿಗೆ ಕೈನೀರೆಱೆದಂ ಪಳಂಚೆ ದೆಸೆಯುಂ ಮಾಂಗಲ್ಯ ತೂರ್ಯಸ್ವನಂ ॥೧೨೯॥

ಅಂತು ಪಾಣಿಗ್ರಹಣಂಗೆಯಿಸುವುದುಂ,

ತೆಂಕಣಗಾಳಿಯ ಸೋಂಕಿನೊ ।
ಳಂಕುರಿಸುವ ಚೂತಲತೆಯವೋಲ್ಕೆಂದಳಮಂ ॥
ಸೋಂಕೆ ಬಲಕರತಳಂ ಪುಳ ।
ಕಾಂಕುರಮೊದಪಿದುವು ಜಾನಕಿಯ ತನುಲತೆಯೊಳ್ ॥೧೩೦॥

ಅಪಮಾನಿಸಿದಂ ಬಾಳಾ ।
ತಪಮೆಳಸಿದ ಪುಂಡರೀಕಷಂಡದ ಸುಬಗಂ ॥
ತಪಳಾಕ್ಷಿಯ ಕೋಮಳಪಾ ।
ಣಿಪಲ್ಲವಸ್ಪರ್ಶಹರ್ಷದಿಂದ ರಘುರಾಮಂ ॥೧೩೧॥

ಅತಿಲಲಿತಾಕೃತಿಯಂ ದಂ ।
ಪತಿಯಂ ನೋಡಿದುದು ಪುರಜನಂ ನೋಡುವವೋ- ॥
ಲ್ಯತಮುಖಿನಂ ಶಚಿಯುಂ ರತಿ ।
ಪತಿಯಂ ರತಿಯಂ ಹಿಮಾಂಶುವಂ ರೋಹಿಣಿಯಂ ॥೧೩೨॥

ಅಂತು ನೆರೆದು ನೋಟ್ಪಾಗಳ್,

ಅನುವಿಸಿದುದು ರಜತಾಚಳ ।
ದನರ್ಘ್ಯಮಣಿ ನಿಕಟಕೂಟಮಂ ದಶರಥರಾ- ॥
ಮನ ಮಣಿಮಯಮಕುಟುಂ ಕಾ ।
ಮನ ಬಿಲ್ಲಂ ಬೇಱೆ ನಿಜದೀಧಿತಿಗಳ್ ॥೧೩೩॥

ಮರಕತಮಣಿಕುಂಡಳರ ।
ಶ್ಮಿರೇಖೆಯಿಂ ಗಂಡಮಂಡಳಂ ಸೇವಾಳಂ ॥
ಬೆರೆದ ಸಿತಕಮಳದಂತಿರೆ ।
ಕರಮೆಸೆದಿರ್ದಂ ನರೇಂದ್ರ ಚೂಡಾರತ್ನಂ ॥೧೩೪॥

ಜಯಲಕ್ಷ್ಮಿಯ ಮಣಿಪೀಠಂ ।
ಭಯಾನತಕ್ಷತ್ರ ವಜ್ರಪಂಜರಮಿದೆನಲ್ ॥
ನಯನೋತ್ಸವಮಂ ಪಡೆದುವು ।
ಜಯಧೀರನ ಬಾಹುಯುಗಳಮಂಗದಯುಗಳಂ ॥೧೩೫॥

ಉಭಯಪ್ರಕೋಷ್ಠ ಶಾಖಾ ।
ಸುಭಗಘನುಗು ಣಕಿ ಣಂಗಳುಂ ಮಣಿಮುದ್ರಾ ॥
ಪ್ರಭೆಯುಂ ಗೆಲೆವಂದುವು ಬಾ ।
ಹು ಭುಜಂಗನ ಕೊರಲ ಕಱೆಯ ಫಣಾಮಣಿರುಚಿಯಂ ॥೧೩೬॥

ಜಳಬುದ್ಬುದಮಾಳೆಗಳವಿ ।
ಚಳಂಗಳಿಂಗಡಲ ಮಡುವಿನೊಳ್ಪೊಳೆವವೊಲೇಂ ॥
ಪೊಳೆದುವೊ ನಿಸ್ತುಳಮುಕ್ತಾ ।
ವಳಿಗಳ್ ಹಳಧರವಿಶಾಲ ವಕ್ಷಸ್ಥಳದೊಳ್ ॥೧೩೭॥

ಪಿಂಗಿದುದಂಗಜಂಗೆ ಕಡುಗಾಡಿಯ ಗರ್ವಮಪೂರ್ವಸೃಷ್ಟಿ ಚೆ-
ಲ್ವಿಂಗಿನಿತೆಡ್ಡವಪ್ಪರೆ ಫಣೀಂದ್ರ ಸುರೇಂದ್ರಕುಮಾರರೆಂದು ಕ-
ಣ್ಗಂಗದೆ ಪತ್ತೆ ಚಿತ್ತದೊಡನಿಕ್ಷಿಸಿದತ್ತು ಪುರಾಂಗನಾಜನಂ
ಮಂಗಳಭೂಷಣ ಪ್ರಚಯದಿಂದಭಿರಾಮನೆನಿಪ್ಪ ರಾಮನಂ ॥೧೩೮॥

ರಾಜಕುಮಾರರಿರ್ಕೆ ಸುರರಾಜಕುಮಾರಕರೊಳ್ಮ ಸುಷ್ಪಕ-
ನ್ಯಾಜನಮಿರ್ಕೆ ಮಿಕ್ಕ ಸುರಕನ್ನೆಯರೊಳ್ದೊರೆಯಪ್ಪರಾರೊ ಪೇ-
ಟೀ ಜಿತಕಂತುಗೀ ಜಿತಮನೋಭವಕಾಂತೆಗೆನುತ್ತುಮಂಗನಾ-
ರಾಜಿ ನಿರೀಕ್ಷಿಸಿತ್ತು ರಘುನಂದನನಂ ಜನಕಾತ್ಮಜಾತೆಯಂ ॥೧೩೯॥

ತೊಡವುಗಳಾ ಸರೋಜದಳನೇತ್ರೆಯ ಮೆಯ್ವೆಳಗಿಂದುಪಾಶ್ರಯಂ-
ಬಡೆಮುವು ನೋಟ್ಪಿರುಮ್ಮಳಿಸುವಂತಿರೆ ರತ್ನದ ಭೂಷಣಂಗಳಿ-
ರ್ದೆಡೆಯ ವಿಳಾಸಮಂ ಮೆಱಸಿದಪ್ಪುವೆನಲ್ದೊಡವಾಕೆಗೊಪ್ಪಮಂ-
ಪಡೆವೆಡೆಗಲ್ಲಮಾ ವಧುಗೆ ಮಂಗಳಕಾರಣಮಲ್ತೆ ಭೂಷಣಂ ॥೧೪೦॥

ಎಂದು ಪುರಜನಂಗಳತಿ ಕುತೂಹಳದಿನವಳೋಕಿಸುತಿರ್ಪುದುಮಾ ವಿವಾಹಮಂಗಳ ಮಹೋತ್ಸವ ಮಹಾಮಹಿಮೆಯೊಳ್,

ಪೞರಾರಿಂತೀವರೆಂಬೀ ಜಗದ ಕಳಕಳಂ ಪೊಣ್ಮೆ ಸಾಮ್ರಾಜ್ಯ ಚಿಹ್ನಂ
ಪೊಱಗಾಗತ್ಯಂತ ವಸ್ತ್ರಾದಿಗಳನಖಿಳಲೋಕಕ್ಕೆ ಸಂಕಲ್ಪವರ್ಷಂ
ಕಱೆದತ್ತೆಂಬಂತೆ ಧಾತ್ರೀಪತಿ ಜನಕನುದಾತ್ತಂ ಮಹೋತ್ಸಾಹಚಿತ್ತಂ
ನೆಱೆದಿತ್ತಿಲ್ಲೆನ್ನ ದಾನಕ್ಕಖಿಳಜನಮೆನುತ್ತುಂ ಮೊಗಂ ನೋಡದಿತ್ತಂ ॥೧೪೧॥

ಅಂತು ಜನಕಂ ಬೀಯದ ಚಾಗದ ಪೆರ್ಮೆಯಂ ಮೆಱೆವುದುಂ ರಾಮಚಂದ್ರಂ ಚಂದ್ರೋದಯದ ಸಮುದ್ರದಂತೆ ಪೆರ್ಚುವಡೆದು,

ಪಡೆದಂ ಶಾಶ್ವತಲಕ್ಷ್ಮಿಯಂ ಪರಹಿತವ್ಯಾಪಾರಮಂ ಪಾಲಿಸ-
ಲ್ಪಡೆದಂ ಪನ್ನಗರಾಜ ದಿವ್ಯಧನುವಂ ಭೂಚಕ್ರಮಂ ರಕ್ಷಿಸಲ್
ಪಡೆದಂ ದರ್ಪಕರೂಪದರ್ಪಮನದಿರ್ಪಲ್ಮೂರ್ತಿಯಂ ಕೀರ್ತಿಯಂ
ಪಡೆದಂ ಕೀೞ್ಗೆನಿಸಲ್ಸುಧಾಜಳಧಿಯಂ ಸಾಹಿತ್ಯ ವಿದ್ಯಾಧರಂ ॥೧೪೨॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಸೀತಾಸ್ವಯಂವರ ವರ್ಣನಂ
ಪಂಚಮಾಶ್ವಾಸಂ



# ೬. ವನಪ್ರವೇಶನಿರೂಪಣ ವರ್ಣನಂ

ಶ್ರೀರಾಂ ವಿಶದಯಶಃ ।
ಶ್ರೀರಾಮಾರಮಣನರ್ಥಿಜನತಾಸುರಭೂ- ॥
ಜಾರಾಮಂ ಧರ್ಮೋದ್ಯಮ ।
ಧೌರೇಯನುದಾತ್ತ ಚಿತ್ತನಭಿನವಪಂಪಂ ॥೧॥

ಅಂತು ರಾಮಲಕ್ಷ್ಮಣರೊಳುದಿತೋದಿತಮಾದಗಣ್ಯಪುಣ್ಯಪ್ರಭಾವಮಂ ಕಂಡು,

ಸಿರಿಯುಂ ಮೈಮೆಯುಮಾದುದಗ್ರಜನೊಳಾಯ್ತಿಲ್ಲೆನ್ನೊಳೆಂಬೇವದಿಂ
ಭರತಂ ಲೋಭರತಂ ವಿಷಾದಭರತಂದ್ರೀಭೂತಚಿತ್ತಂ ತಪೋ-
ಭರತೃಷ್ಣಾಪರನಪ್ಪುದಂ ತಿಳಿದು ತದ್ವೃತ್ತಾಂತಮಂ ಕೈಗೆ ಮೋ-
ಹರಸಂ ಕೈಮಿಗೆ ಕಾದಲಂಗೆ ಪತಿಗಂದಿಂತೆಂದಳೇಕಾಂತದೊಳ್ ॥೨॥

ಭರತನ ವದನಾಂಭೋಜಂ ।
ಕೊರಗಿದುದು ಮನಸ್ಸರೋಜದೊಡನೆತ್ತಾನುಂ ॥
ಪರಿಣಯನೋತ್ಸವಂಚಿತಾ ।
ಭರಮಾತನ ಬಗೆಗೆವಂದುದಾಗಲೆವೇೞ್ಕುಂ ॥೩॥

ಕನಕಂಗಂ ಸುಪ್ರಭೆಗಂ ।
ಜನಿಯಿಸಿದ ವಿಳಾಸನೇತ್ರೆ ಕನಕಪ್ರಭೆಯಂ ॥
ಜನನಾಥ ಮದುವೆಮಾಡಾ ।
ತನನಿರದೆ ತೊಡರ್ಚು ಮೋಹಪಾಶದ ತೊಡರೊಳ್ ॥೪॥

ಎನೆ ಮನದೆಗೊಂಡು ಜನಕನುಮಂ ಬರಿಸಿ,

ಅನುಬಂಧಪರಂಪಂರೆಯಂ ।
ಜನಿಯಿಸಲೆಮಗರ್ಥಿಯಾದುದೀವುದು ನಿಜನಂ- ॥
ದನೆಯನನುರೂಪೆಯಂ ಮ ।
ತ್ತನಯಂಗೆನೆ ದಶರಥಂಗೆ ಕನಕಂ ನುಡಿದಂ ॥೫॥

ಮುನ್ನಮ ಭರತಂಗೀವೇ ।
ಕನ್ನೆಯನೆಂಬಱಿವು ಮನದೊಳಿರೆ ಮನದಱಿಪಂ ॥
ಬಿನ್ನವಿಸಲಿರ್ದೆನಾ ಬೆಸ ।
ನಂ ನಿಮ್ಮಡಿ ಬೆಸಸೆ ಬಯಕೆ ಕೂಡಿದುದೀಗಳ್ ॥೬॥

ಎಂದಂದಿನ ದಿನದೊಳೆ ಮೌಹೂರ್ತಿಕ ನಿರೂಪಿತ ಶುಭಮುಹೂರ್ತದೊಳ್,

ಇನಿವಿರಿದು ವಿಭವಮಾದುದೆ ।
ಜನಕತನೂಭವೆಯ ಮದುವೆಯೊಳಮೆಂಬಿನೆಗಂ ॥
ಕನಕಪ್ರಕಬೆಯಂ ಪದೆಪಿಂ ।
ಕನಕಂ ಭರತಂಗೆ ಮದುವೆಮಾಡಿದನಾಗಳ್ ॥೭॥

ಆ ವಿವಾಹವಿಭವದೆಸಕಕ್ಕಮವರ ಭುಜಬಳದ ಮಸಕಕ್ಕಂ ವಿದ್ಯಾಧರಮಹತ್ತರಂ ವಿಸ್ಮಿತಚಿತ್ತನಾಗಿ ಮಿಥಿಳೆಯಿಂರಥನೂಪುರಚಕ್ರವಾಳಪುರಕ್ಕೆ ಬಂದು ನಿಜಪತಿಯನಿಂದುಗತಿಯಂ ಕಂಡು,

ಗಣನೆಗಳುಂಬಮಾಗೆ ಮೊದಲಿಂ ತುದಿಯೆಯ್ದೆ ತಗುಳ್ದು ರಾಮಲ-
ಕ್ಷ್ಮಣರ ಮಹತ್ತ್ವಮಂ ಮಹಿಮೆಯಂ ನೆಱ ಬಣ್ಣಿಸೆ ಕೇಳ್ದು ಖೇಚರಾ-
ಗ್ರಣಿ ಕಿಱಿದಾಯ್ತು ನಮ್ಮ ದೆಸೆ ಕೇವಳರಲ್ಲರವರ್ದಿಟಕ್ಕೆ ಕಾ-
ರಣಪುರುಷರ್ ತ್ರಿಖಂಡಭರತೋರ್ವಿಗೆ ವಲ್ಲಭರಾಗದಿರ್ಪರೇ ॥೮॥

ಎಂದು ಬಗೆ ಬೆದಱೆ ವಿದ್ಯಾಧರಾಧಿರಾಜನುಷಸ್ಸಮಯದ ರಾಜಮಂಡಳದಂತೆ ನಿಸ್ತೇಜನಾಗಿರ್ಪುದುಮಾ ಖಚರವಲ್ಲಭ ತನೂಜಂ ಪ್ರಭಾಮಂಡಳಂ ಮನಃಕರಂಡಕದೊಳಾ ಕನ್ಯಾರತ್ನಮಂತಳೆದು,

ಆಯ್ದುಮಲರ್ಗಣೆಗಳಂ ಕಡಿ ।
ಕೆಯ್ದಿಸೆ ಮದನಂ ವಿಯೋಗಿ ಯೋಗಿಯ ತೆಱದಿಂ ॥
ದಯ್ದುಂ ವಿಷಯಸುಖಕ್ಕಂ ।
ಮೆಯ್ದೆಗೆದಾಕೆಯನೆ ಬಿಡದೆ ಜಾನಿಸುತಿರ್ದಂ ॥೯॥

ಅಂತು ಕನ್ಯಾಸಕ್ತಿಯಿಂ ಕನ್ಯಾಸಕ್ತನಾದಾದಿತ್ಯನ ತೆಱದಿಂ ಪ್ರಭಾಮಂಡಳಂ ಹತಪ್ರಭಾಮಂಡಳನಾಗಿ ವಸಂತಧ್ವಜನೆಂಬ ತನ್ನ ಸಹಚರಂಗೆ ಸೀತಾವಿರಹದಿಂದಾದ ತನ್ನ ಮನೋವಿಷಾದಮನಱಿಪಿ,

ಆ ರಮಣಿಯಧರಮಣಿಯ ಸು ।
ಧಾರಸದಿಂದಲ್ಲದೆನ್ನ ಮನಸಿಜತಾಪಂ ॥

ತೀರದು ತೀರ್ಚುವುದೆನ್ನ ಮ ।
ನೋರಥಮನದಕ್ಕೆ ನೀನೆ ಸಖ ಸಾರಥಿಯೈ ॥೧೦॥

ಎಂಬುದುಮಾತನ ಕೆಲದೊಳಿರ್ದ ಬೃಹತ್ಕೇತುವೆಂಬ ವಿದ್ಯಾಧರನಿಂತೆಂದಂ :

ಪೋದುವು ನಮ್ಮ ಬಿಲ್ಗಳೆರಡುಂ ಜನಕಾತ್ಮಜೆಗಗ್ನಿಸಾಕ್ಷಿಯಿಂ-
ಪಾದುದು ರಾಮನೊಳ್ಮದುವೆ ಬಿಲ್ದೆಱೆದತ್ತು ಬರ್ದುಂಕಿ ಪುಣ್ಯದಿಂ
ಪೋದ ಮಹತ್ತರಂ ಮಗುಟ್ವಿನಾಕೆಯ ಪಂಬಲೊಳಪ್ಪುದೇಂ ರಣಾ-
ಸ್ವಾದನ ಲಂಪಟರ್ನೆರೆದು ಕಾದುವಮಪ್ಪೊಡೆ ರಾಮಲಕ್ಷ್ಮಣರ್ ॥೧೧॥

ಎನಲೊಡಂ,

ಪುರ್ವಿನ ಗಂಟುಂ ಕಣ್ಣೊ ।
ಳ್ಪರ್ವಿದ ಕಿಸುಸೆರೆಗಳುಂ ಕಪೋಳಸ್ಥಳದೊ- ॥
ಳ್ಕೊರ್ವಿದ ಬೆಮರ್ವನಿಯುಂ ಕರ ।
ಮರ್ವಿಸೆ ಮುನಿಸಿಂ ಕುಮಾರನಂದಿಂತೆಂದಂ ॥೧೨॥

ಮಾನವರೆನ್ನಳಯ್ಯ ಕಲಿಗಳ್ ರಣಕೇಳಿಗೆ ಸಾಲ್ವರೆಂಬಿದಂ
ನೀನುಱೆ ರಾಮಲಕ್ಷ್ಮಣರನಶ್ರಮದಿಂ ಬೆದಱಟ್ಟಿ ತಂದಪೆಂ
ಜಾನಕಿಯಂ ಕುಳಾಗತಧನುರ್ಯುಗಳಂಗಳನೆಂದು ಕೇಱೆ ಪಂ-
ಚಾನನದಂತೆ ಗರ್ಜಿಸಿ ವಿಮಾನಮನೇಱೆದನಾ ವಿಯಚ್ಚರಂ ॥೧೩॥

ಕುಲಮದಮೊಂದು ರೂಪಮದಮೊಂದು ವಯೋಮದಮೊಂದು ತನ್ನದೋ-
ರ್ಬಲಮದಮೊಂದು ಜಾತಿಮದಮೊಂದು ಕಳಾಮದಮೊಂದು ದೇವತಾ-
ಬಲಮದಮೊಂದು ರಾಜ್ಯಮದಮೊಂದಿನಿಸಲ್ಲದೆ ಬೇಱೆ ರಾಗಮ-
ಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಳ ಮುಂದುಗಾಣ್ಬರೇ ॥೧೪॥

ಅದಱೆನಾ ಮದಾವಿಳಂ ಬಳನನಬಳನಂ ಬಗೆವಂತೆ ಬಗೆದು, ಕತಿಪಯ ಪರಜನಂ ಬೆರಸು ಗಗನಮಾರ್ಗದಿಂ ಪೋಗುತ್ತುಂ ದಿಗವಳೋಕನಂ ಗೆಯ್ದು, ತನ್ನ ಮುನ್ನಿನ ಜನ್ಮದೊಳ್ಕುಂಡಳ ಮಂಡಿತನಾಗಿರ್ದಂದಿನ ವಿದಗ್ಧನಗರಮಂ ಕಾಣಲೊಡಂ ಜಾತಿಸ್ಮರನಾಗಿ ಮೂರ್ಛೆಗೆ ಸಲ್ವುದುಮೊಡನೆ ವಿಯಚ್ಚರರಾತನಂ ರಥನೂಪುರಚಕ್ರವಾಳಪುರ- ಕ್ಕಿಂದುಗತಿಖಚರಚಕ್ರವರ್ತಿಯ ಕೆಲಕ್ಕೆ ತರ್ಪುದುಂ,

ಘನಸಾರಸಲಿಲಮಂ ಚಂ ।
ದನರಸಮಂ ತಳಿದು ಬೀಸೆ ಬಿಜ್ಜಣಿಗೆಯತ- ॥

ಣ್ಣನೆ ತೀಡುವೆಲರ ತೀಟದಿ ।
ನಿನಿಸಾನುಂ ತಿಳಿದು ಮೂರ್ಛೆಯಿಂದೆೞ್ಚಿತ್ತಂ ॥೧೫॥

ಆಗಳಾ ವಿಯಚ್ಚರಾಧಿಪತಿ ಕುಮಾರನ ಮುಖಾರವಿಂದಮಂ ನೋಡಿ,

ಜನಕಜೆಯಿಂ ನೂರ್ಮಡಿ ಮಿಗಿ ।
ಲೆನಿಪ್ಪ ಕಡುಗೆಲ್ವುವೆತ್ತ ಖೇಚರಕನ್ಯಾ- ॥
ಜನದೊಳ್ವಿವಾಹಮಂಗಳ ।
ಮನೊಡರ್ಚುವೆನಮ್ಮ ಬಿಸುಟುಂ ಮನಮುಮ್ಮಳಮಂ ॥೧೬॥

ಎಂಬುದುಂ ಪ್ರಭಾಮಂಡಳಂ ಕಿಂಚಿದುನ್ನಮಿತಕಂಧರನಿಂದುಗತಿಯ ವದನೇಂದುವಂ ನೋಡಿ ಮುಕುಳಿತಕರಕಮಳನೆನ್ನ ಮೂರ್ಛಾಪ್ರಪಂಚಕ್ಕಿದು ನಿಮಿತ್ತಮಲ್ಲಂ ಪೋದ ಭವದೊಳಾಂ ಪ್ರತಾಪಸಿಂಹದೇಶಾಧಿಪತಿಗೆ ಕುಂಡಳಮಂಡಿತನೆಂಬೆನಾಗಿ ತಂದೆಗವಿಧೇಯನಾಗಿ ಪೋಗಿ,

ಬಿಟ್ಟಜಿನನೆನಗೆ ಪಾಪದ ।
ಬಟ್ಟೆಯೆ ಪೆರ್ವಟ್ಟೆಯಾಗಿ ನಾಡಂ ಬೀಡಂ ॥
ಸುಟ್ಟಜಿದು ಕುಟ್ಟ ಕವರ್ದಾಂ ।
ಕಟ್ಟಾಳ್ತನದಿಂ ವಿದಗ್ಧನಗರದೊಳಿರ್ದೆಂ ॥೧೭॥

ಎನಗರಸಿ ಮಾಡಿದೆಂ ಕಪಿ ।
ಳನೆಂಬನಾಪುರದೊಳಿರ್ಪನೊರ್ವಂ ದ್ವಿಜನಾ- ॥
ತನ ಪೆಂಡತಿಯಂ ಮುದದಿಂ ।
ದಾನಾಡವ ಗೊಡ್ಡಮೊಂದುಮಿಲ್ಲೆಂಬಿನೆಗಂ ॥೧೮॥

ಅಂತಿರ್ಪುದುಂ,

ಅನರಣ್ಯನ ಪಡೆವಳ್ಳಂ ।
ಮುನಿದಿಜಿದೋಡಿಸಿದೊಡೋಡಿ ಪರಮಂಡಳದೊ- ॥
ಳ್ಜಿನಮುನಿಮುಖ್ಯಂ ಕುಡೆ ಪಡೆ ।
ದೆನಣುವ್ರತಮಂ ವಿನೇಯಜನಸಮ್ಮತಮಂ ॥೧೯॥

ಅಂತಾ ಮಾರ್ಗಮಂ ಪತ್ತಿ ಪತ್ತುವಿಡದೆ ನಡೆದು ಜೀವಿತಾವಧಿಯೊಳ್ದೇವಗತಿವಡೆದಾನುಮೆನ್ನ ದೇವಿಯುಮಾ ದೇವಲೋಕದಿಂ ಬಂದಿಲ್ಲಿ ಜನಕಮಹಾದೇವಿಯಪ್ಪ ವಿದೇಹಿಯ ಗರ್ಭದೊಳಮಳ್ಗಳಾಗಿ ಪುಟ್ಟುವುದುಮಾ ಸಮಯದೊಳೆನ್ನ ಮುನ್ನಿನ ಬಗೆವಸಪ್ಪ ಕಪಿಳಂ ದೇವಗತಿವಡೆದು ಪಿಡಿಮೊಯ್ದು ಕೊಲಲೊಡರ್ಚೆ ಕಾಣಲೊಡಂ ಕರುಣಿಸಿ ತನ್ನ

ಮಣಿಕುಂಡಳಮನೆನ್ನ ಕಿವಿಯೊಳ್ತೊಡರ್ಚಿ ಪರ್ಣಲಘುವಿದ್ಯೆಯಿಂ ನಿಮ್ಮ ತಳ್ಪತಳದೊಳಿರಿ
ಪೋಗೆ ದೇವರೆನ್ನಂ ಪಿರಯರಸಿಗೆ ದಯೆಗೆಯ್ಯೆ ಕೊಂಡಾಡಿ ನಡಪಿ ಯುವರಾಜಪದವಿಯ
ದಯೆಗೆಯ್ದಿರಾನುಮೆನ್ನ ಸೋದರಮೆಂದಱಿಯದೆ ಸೀತೆಗಾಟಿಸಿದೆನೆಂದು ಬಿನ್ನವಿಸೆ,

ಖಚರಪತಿ ವಿಸ್ಮಯಾಕುಳಿ ।
ತಚಿತ್ತನಜ್ಞಾನತಿಮಿರವಿಘಟನದೀಪ- ॥
ಪ್ರಚುರರುಚಿಯೆನಿಸೆ ಮಣಿಮಕು ।
ಟ ಚಂಕನತ್ಕಾಂತಿ ತಲೆಯನೇಂ ತೂಗಿದನೋ ॥೨೦

ಅಂತು ಬಗೆಯೊಳೊಗೆದ ವಿಸ್ಮಯಮೆ ತನಗೆ ವೈರಾಗ್ಯಹೇತುವಾಗೆ,

ದೊರೆಕೊಳ್ಳದೊಳ್ಳಿತಾದುದು ।
ತರುಣಿಯ ಸಂಬಂಧಮಿಾ ಸುತಂಗೆತ್ತಾನುಂ ॥
ದೊರೆಕೊಂಡೊಡೆನ್ನ ವಶಂ ।
ದುರಂತದುಷ್ಕೀರ್ತಿದಾವಶಿಖಿಗೊಳಗಕ್ಕುಂ ॥೨೧

ಉಪಕಾರಮನೊಡರಿಸುವಂ ।
ಗಪಕಾರಮನುಂಟುಮಾಳ್ಕುಮಪಕಾರಿಗೆ ತಾ- ॥
ನುಪಕಾರಮನೊಡರಿಸುಗಂ ।
ವಿಪರೀತಂ ಬಗೆದು ನೋಡೆ ಕರಣಗ್ರಾಮಂ ॥೨೨

ಪೋದುವು ಮತ್ತುಕಳಾಗತಧನುರ್ಯುಗಮೆನ್ನ ಮಹೋನ್ನತಿಕ್ಕೆ ಕೀ-
ೞಾದುದು ರಾಮಲಕ್ಷ್ಮಣರ ತೇಜಮಗುಂದಲೆಯಾದುದೆಂದು ನಿ-
ರ್ವೇದಮನಪ್ಪುಕೆಯ್ದು ಗಗನೇಚರಸಂಪದಮಂ ಪೊಗೞ್ತಿವೆ-
ತ್ತೀದೊರೆತಂ ಜರತ್ತೃಣಸಮಾನಮೆನಲ್ಬಗೆದಂ ವಿಯಚ್ಚರಂ ॥೨೩

ಅತು ವೈರಾಗ್ಯಪರಂ ನಿಜವಿಯಚ್ಚರಾಧಿರಾಜವಿಭವಮಂ ಪ್ರಭಾಮಂಡಳಂಗಿತ್ತಂದಿ-
ದಿವಸದೊಳ್ ಮಹೇಂದ್ರೋದ್ಯಾನಮೊಳಿರ್ದ ಸರ್ವಭೂತಹಿತ ಭಟ್ಟಾರಕ ಪದಪಯೋರು
ಸಮಕ್ಷದೊಳ್ದೀಕ್ಷೆಗೊಳ್ವುದುಂ,

ಇಂದುಗತಿಯಂತೆ ರಾಜ್ಯಮ ।
ನೊಂದಕ್ಕಂ ಬಾೞ್ತೆಗೆಯ್ಯದಾವನೊ ತೊಱೆದಂ ॥
ಮಂದರಧೈರ್ಯಂ ನೃಪನೆಂ ।
ದೊಂದೇತೆಜಮಮರಸಮಿತಿ ಪೊಗೞ್ದುತ್ತಾಗಳ್ ॥೨೪

ಅಂತು ವಿಯಚ್ಚರಾಧಿರಾಜಂ ಮುನಿರಾಜಪದವಿಯನಪ್ಪುಕೆಯ್ವುದುಮಿತ್ತಲ್ ಜನಕಂ ಸಕಲಸಾಮ್ರಾಜ್ಯ ಚಿಹ್ನ ಮುೞಿಯಲುೞಿದ ವಸ್ತುವಾಹನಾದಿಗಳಂ ಸೀತೆಗೆ ಬೞಿವೞಿಗೊಟ್ಟು ಅಯೋಧ್ಯೆಗೆ ಕೞಿಸುವುದುಂ ದಶರಥಂ ಕತಿಪಯ ಪ್ರಯಾಣಂಗಳಿಂ ವಿನೀತಾನಗರಮಂ ಪೊಕ್ಕಿರಲೊಂದು ದಿವಸಂ,

ಸುಕೃತಸುರದ್ರುಮವನಪಾ ।
ಳಕನೆಂಬಿನಮುಚಳವಿಚಕಿಳೋದ್ಗತಮಂ ತಂ- ॥
ದಕಲುಷಚಿತ್ತಂ ದಶರಥ ।
ಸಕಳೋರ್ವೀಶಂಗೆ ಋಷಿನಿವೇದಕನಿತ್ತಂ ॥೨೫॥

ಅಂತು ಸಮಯೋಚಿತ ಸುಮನೋದರ್ಶನಮನಿತ್ತು, 'ದೇವ, ನಮ್ಮ ಸರಯೂ ನದೀತೀರದ ಮಹೇಂದ್ರೋದ್ಯಾನದೊಳ್ಮನಃಪರ್ಯಯಜ್ಞಾನಿಗಳಪ್ಪ ಸರ್ವಭೂತಹಿತ-ಭಟ್ಟಾರಕರ್ಮಹಾಋಷಿಸಮುದಾಯಂ ಬೆರಸು ಯೋಗನಿಯೋಗದಿಂದಿರ್ದರೆ'ಂದು ಬಿನ್ನವಿಸೆ,

ನೊಸಲೊಳ್ಕರಪಲ್ಲವಪುಟ ।
ಮೆಸೆದಿರೆ ದಶರಥನೃಪಂ ಮುನೀಶ್ವರರಿರ್ದಾ ॥
ದೆಸೆಗೆ ಮೊಗಮಿತ್ತು ತನ್ನಿ ।
ರ್ದ ಸಿಂಹವಿಷ್ಟರದಿನೆೞ್ದು ವಿನಮಿತನಾದಂ ॥೨೬॥

ಆಗಿ ದಶರಥಂ ಪರಮಿತಪರಿಜನಂಬೆರಸು ಮುನೀಂದ್ರರಿರ್ದ ಮಹೇಂದ್ರೋದ್ಯಾನಕ್ಕೆವಂದು,

ದೀಪಕಳಾಪನಂ ತಳೆದು ಬಾಲಿಕೆಯರ್ವರೆ ಸುತ್ತಿ ಮುತ್ತಿ ತಾ-
ರಾಪತಿ ತಾರೆಗಳ್ವೆಸರು ಮಂದರಮಂ ಬಲಗೊಳ್ವ ಮಾೞ್ಕೆಯಿಂ
ಭೂಪತಿ ಸರ್ವಭೂತಹಿತ ದಿವ್ಯಮುನೀಂದ್ರರನಂದು ಬಾಲಚಂ-
ದ್ರಾಪರನಾಮಧೇಯರನದೇಂ ಬಲಗೊಂಡನೊ ಭಕ್ತಿಪೂರ್ವಕಂ ॥೨೭॥

ಅಂತು ಬಲಗೊಂಡಷ್ಟವಿಧಾರ್ಚನೆಯಿನರ್ಚಿಸಿ ಗುರುಭಕ್ತಿ ಪೂರ್ವಕದಿಂದ ವಂದಿಸುವುದುಂ,

ಮದನಫಣಿ ನಿರ್ವಿಷೀಕರ ।
ಣದಿವ್ಯಮಂತ್ರಸ್ವನಂ ಜರಾಮರಣಶಿಲಾ- ॥
ವಿದಳನಟಂಕಧ್ವನಿ ಪೊ ।
ಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿನಿನಾದಂ ॥೨೮॥

ಕ್ಷುಭಿತದಯಾರ್ಣವಘೂರ್ಣಿತ ।
ರಭಸಮೆನಲ್ಪರಸಿದತ್ತನಂತರಮಾ ಸ- ॥

ತ್ಸಭೆ ವಿನತಮಕುಟಮಣಿರುಚಿ।
ವಿಭಾಸಿಯಂ ನೃಪಪುರಸ್ಸರಂ ರಾಜಕಮಂ ॥೨೯

ಅನಂತರಂ ದಶರಥಂ ಸಮುಚಿತಾಸನದೊಳ್ ರಾಮಲಕ್ಷ್ಮಭರತಶತ್ರುಘ್ನರ್ವೆರ ಕುಳ್ಳಿರ್ದು ದೀಕ್ಷಿತನಾದಿಂದುಗತಿಯುಮಂ ಪರಿಮ್ಲಾನದೀನಾನನನಾಗಿ ತನ್ನ ನಿ ಸಮಕ್ಷದೊಳಿರ್ಪ ಪ್ರಭಾಮಂಡಳನುಮಂ ಕಂಡು ಮುನಿಮುಖ್ಯರಿಗೆ ಮುಕುಳಿತಾಂಜಳಿಪುಟನಾ

ಬಾಲಮೃಣಾಳಮಂ ಪಿಡಿದು ಕೀೞ್ವಿವೊಲಶ್ರಮದಿಂ ಮನೋಭವ-
ವ್ಯಾಲಗಜೇಂದ್ರದಂತಯುಗಳಂಗಳನೇಕೆಯೊ ಕಿೞ್ತನೇಕೆ ನಿ-
ರ್ಮೂಲಿಸಿದಂ ಭವಾಟವಿಯನೀಜಿನರೂಪಕುಠಾರದಿಂ ಪ್ರಮೋ-
ಧಾಲಯ ಪೇೞಿಮಿಾ ಖಚರಚಕ್ರಿಯೊಳಾದ ತಪಃಪ್ರಪಂಚಮಂ ॥೩೦

ಅಂತು ಬಿನ್ನವಿಸೆ,

ಶ್ರುತದೇವತಾಕಟಾಕ್ಷ।
ದ್ಯುತಿಪಸರಿಸಿ ಪರ್ವುವಂದದಿಂ ನಿಜದಂತ- ॥
ದ್ಯುತಿ ಪಸರಿಸೆ ಮಯೆಯಿಂ ಯತಿ।
ಪತಿ ನುಡಿದಂ ಮಧುರಮೃದುಗಭೀರಧ್ವನಿಯಿಂ ॥೩೧

ಈ ಖಚರಪ್ರಭು ಪ್ರಭಾಮಂಡಳನ ಪೋದ ಭವದೊಳಾದ ವೃತ್ತಾಂತಮುಮ ಭವದೊಳಾದ ಸೀತಾಪ್ರಪಂಚಮುಮಂ ತಿಳಿದುದುವೆ ನಿರ್ವೇಗವಾ ದೀಕ್ಷೆಗೊಂಡನೆಂಬುದುಮನಂತರಂ ಪ್ರಭಾಮಂಡಳಂ ವಿನಮಿತಶಿರಸ್ಸರೋಜನಾಗಿ,

ಇಂದುಗತಿ ಖಚರಪತಿ ಪಿರಿ।
ದೊಂದಟ್ಟಿಜೆನೆನಗೆ ಮಾೞ್ಪುದಂ ಬೆಸಸಿಂ ನೀ- ॥
ಮೆಂದು ಮುಕುಳಿತಕರಂ ಮುನಿ।
ವೃಂದಾರಕರಂ ಕುಮಾರಕಂ ಬೆಸಗೊಂಡಂ ॥೩೨

ಎಂದು ಬೆಸಗೊಳ್ವುದುಮವರಿತೆಂದು ಬೆಸಸಿದರ್ಧಾಮನಾಮಧೇಯಗ್ರಾಮದೊಳಿರ್ಪ ಧರಾಮರಂ ವಿಮುಂಚನೆಂಬನಾತನ ಕುಲವಧುವಸುಮತಿವೆಸರವರ್ಗತಿಭೂತಿಯೆಂ ತನಯನಾದಂ,

ಆತಂಗೆ ಸರಸೆಯೆಂಬಳ್।
ಪಾತಕಿ ಕುಲವನಿತೆಯೆನಿಸಿ ಕಯನೆಂಬ ಮಹಾ- ॥
ಪಾತಕನೊಳ್ಪುದುವಿರ್ದಳ್।
ಜಾತಿಯ ನೀತಿಯ ನೆಗೞ್ತೆ ಪೊಲಗಿಡುವಿನೆಗಂ ॥೩೩

ಆಯುರ್ದಶೆಯೞಿಗುಂ ನರ ।
ಕಾಯುಷ್ಯಂ ಕಟ್ಟುಗುಂ ಪರಾಭವಮಕ್ಕು ॥
ಶ್ರೀಯೞಿಗುಮೆನ್ನದನ್ಯ ।
ಪ್ರೇಯಸಿಯಂ ಸರಸೆಯಂ ಕಯಂ ಕಳ್ದುಯ್ದಂ ॥೩೪॥

ಅಂತಾಕೆಯಂ ಕಯಂ ಕಸವರಂಬೆರಸುಯ್ದುದುಮತಿಭೂತಿ ವಿಕಳನಾಗಿ,

ಸುಡು ಪೊಲ್ಲಳನೆನ್ನದೆ ತ ।
ನ್ನೊಡವೆಯ ಪೋಗಿಂಗಮವಳ ಪೋಗಿಂಗಂ ನಿ- ॥
ಗ್ಗಡಿ ಬೆನ್ನವಱಿಸಿ ಪೋದಂ ।
ಕಡುಮೋಹಿತರಾರುಮುಚಿತಮಂ ನೆನೆವಪರೇ ॥೩೫॥

ಮತ್ತಿತ್ತ ವಿಮುಂಚಿಯುಂ ದಾನಾರ್ಥಿಯಾಗಿ ಪೋಗಿ ಮುಗುಳ್ದು ಬಂದು ಮಗನ ವಾರ್ತೆಯಂ ಕೇಳ್ದು ತಾನುಂ ತನ್ನ ಪೆಂಡತಿಯುಂ ಸರಸೆಯ ತಾಯುಪ್ಪುರಿಯುಂ ಕಪ್ಪಡಮನುಟ್ಟತಿಭೂತಿಯನಱಸುತ್ತಂ ಬಂದು ಶಂಬರಮೆಂಬ ಪುರದೊಳ್ ಸರ್ವಮುನಿಗಳೆಂಬ ದಿವ್ಯಜ್ಞಾನಿಗಳ ಪಕ್ಕದೆ ಧರ್ಮಮಂ ಕೇಳ್ದು ವಿಮುಂಚಿ ತೊಱೆದನನುಮತಿಯುಮುರಿಯುಂ ಕನಕಶ್ರೀಕಂತಿಯರ ಪಕ್ಕದೆ ತೊಱೆದು ದೇವಗತಿವಡೆದು,

ಅಪವರ್ಗಲಕ್ಷ್ಮಿಯಂ ಕಂಡು ।
ಪರಮಜಿನಚರಣಸೇವೆಗರಿದಾದುದೆ ನಾ- ॥
ಕಪದಪ್ರಾಪ್ತಿಯನೊದವಿಸು ।
ವ ಪರ್ಮೆಯನೆ ದಿವದೊಳನಿಬರುಂ ಜನಿಯಿಸಿದರ್ ॥೩೬॥

ಮತ್ತಿತ್ತ ಸರಸೆ ದುರಾಚಾರದಿಂ ಕಾಲಮಂ ಕಳಿಪಿ ನರಕ ತಿರ್ಯಗ್ಗತಿಯೊಳ್ತಿರಿಯುತ್ತುಂ ಬಂದು ಬಳಾಹಕಮೆಂಬ ಬೆಟ್ಟದೊಳ್ಪುಲ್ಲೆಯಾಗಿ ಪುಟ್ಟಿ ಬೇಗೆಗಿರ್ಚಿನೊಳ್ಸತ್ತು ಚಂದ್ರಧ್ವಜನೆಂಬರಸನರಸಿ ಮನಸ್ಸಿಗೆ ಚಿತ್ತೋತ್ಸವೆಯೆಂಬ ಮಗಳಾದಳಲ್ಲದೆಯುಮತ್ತಲಾ ಕಯನುಂ,

ಮಕರಾಂಕದ್ವಿಪದಂತದಂಡದಳಿತಸ್ವಾಂತಂ ಪರಪ್ರೇಯಸೀ-
ವಿಕಳಂ ದುರ್ಗತಿಯೊಳ್ಕಯಂ ತಿರಿತರುತ್ತುಂ ಬಂದು ಮತ್ತಂ ಕ್ರಮೇ-
ಣಕನಾದನಂ ಕಟಿದಲ್ಲಿಯುಂ ಕಪಿಳನೆಂಬಂ ಧೂಮಕೇಶಂಗೆ ಧಾ-
ರಕನಾದಂ ಕಡೆಯೊಳ್ವಿಚಾರಿಸೆ ವಿಚಿತ್ರಂ ಕರ್ಮನಿರ್ಮಾಪಣಂ ॥೩೭॥

ಮತ್ತಿತ್ತಲತಿಭೂತಿಯುಂ ನರಕಾಯುಷ್ಯಾದಿ ಭವಾಟವಿಯೊಳ್ತೊಳಲುತ್ತುಂ ಬಂದು ತಾರಾಕ್ಷಮೆಂಬ ಹಂಸವನದೊಳ್ ಕಳಹಂಸನಾಗಿ ಜಿನಸ್ತವನಶ್ರವಣದಿಂದುಪಶಮಚಿತ್ತನಾಗಿ ಕಿನ್ನರಗತಿವಡೆದನಂತರಂ ಕುಂಡಳಮಂಡಿತನಾಗಿ ವಿದಗ್ಧನಗರದೊಳ್ ಕಪಿಳನ ಕಯ್ಯಿಂ

ಚಿತ್ರೋತ್ಸವೆಯನತಿಭೂತಿಯಾದಂದಿನನುಬಂಧ ಕಾರಣಮಾಗಿ ನೀಂ ಕಳೆದುಕೊಂಡೈ ಮುನ್ನ ಪೇ
ವಿಮುಂಚಿಯುಂ ಸುರಲೋಕದಿಂ ಬಂದು ಇಂದುಗತಿಯಾದನಾತನ ಪೆಂಡತಿಯಪ್ಪಂ
ದಿನನುಮತಿ ಪುಷ್ಪವತಿಯಾದಳದು ಕಾರಣದಿಂದಿವರ್ನಿನಗತಿ ಸ್ನೇಹಿತರಾದರಂದಿನ ಕಯಂ ನೀ
ಪುಟ್ಟಿಗಾದಳೆ ನಿನ್ನಂ ಕೊಂಡುಪೋದಂ ನೀನತಿಭೂತಿಯಾದಂದಿನುರಿಯೆಂಬ ನಿಮ್ಮ ತ್ರೆ
ದೇವಗತಿಯಿಂಬಂದು ಜನಕನ ಮಹಾದೇವಿ ವಿದೇಹಿಯಾಗಿ ನಿನಗಬ್ಬೆಯಾದಳೆಂದು
ಭಟ್ಟಾರಕರ್ಬೆಸಸುವುದುಂ,

ಅಱಿದಾತ್ಮೀಯಸುಹೃದ್ಭವಾತಂರಮನಾದ್ಯಂತಂ ಪ್ರಭಾಮಂಡಲಂ
ಬೆಱಗಾದಂ ರಘುರಾಮನುಂ ದಶರಥಕ್ಷೋಣೀಶನುಂ ಸಯ್ಪು ಕ-
ಣ್ದೆಱೆದಂತುತ್ಸುಕರಾದರುಣ್ಮೆ ಪುಳಕಂ ಕೈಗಣ್ಮೆ ಹರ್ಷಾಶ್ರು ಮೆ-
ಯ್ಮಱೆದಳ್ಜಾನಕಿ ಕೇಳ್ದು ಕೇಳ್ದು ತಲೆಯಂ ತೂಗಿತ್ತು ರಾಜನ್ಯಕಂ ॥೩೮॥

ಅಮೃತದ ಕಡಲೊಳ್ಮುಳುಗಿ ।
ತ್ತಮೃತಾಂಶುಮಯೂಖಲೇಖೆಯಂ ತರ್ಕಯ್ಸಿ- ॥
ತ್ತಮರ್ದಂ ಮುಕ್ಕುಳಿಸಿತ್ತೆನೆ ।
ಸಮನಿಸಿದುದು ರಾಜಸಭೆಗೆ ಹರ್ಷೋತ್ಕರ್ಷಂ ॥೩೯॥

ಅಲ್ಲಿಂ ಬೞಿಯಂ,

ಮಣಿಕುಂಡಳ ಕಿರಣಂಗಳ್ ।
ಸೆಣಸುವಿನಂ ನಖಮಯೂಖದೊಳ್ದಶರಥಧಾ- ॥
ರಿಣಿಪತಿಯ ಪದಪಯೋಜ ।
ಪ್ರಣಮನಮನೊಡರ್ಚಿದಂ ವಿಯಚ್ಚರತಿಳಕಂ ॥೪೦॥

ಅನಂತರಂ ರಾಮಲಕ್ಷ್ಮಣಭರತಶತ್ರುಘ್ನರೊಳ್ವಿನಯವೃತ್ತಿಯಂ ಮೆಱೆದು,

ಅನುಜೆ ನಿಜಾಗ್ರಜಪದಕೋ ।
ಕನದಕ್ಕಾನಂದಬಾಷ್ಪಮಧುಬಿಂದುವನಿ- ॥
ತ್ತನುನಯದಿನೆಱಗಿದಲ್ಲೀ ।
ತೆ ನಗುವಿನಂ ಭ್ರಮರಕಂ ಭ್ರಮದ್‌ಭ್ರಮರಕಮಂ ॥೪೧॥

ಅಂತು ವಿನಯಭರದಿನೆಱಗಿದನುಜೆಯಂ ಪ್ರಭಾಮಂಡಳನಖಂಡಿತ
ಪುಣ್ಯಭಾಗೆಯಾಗೆಂದು ಪರಸಿ ಪರಮಾನಂದಪರಂ ಪರೆಯನಪ್ಪುಕೆಯ್ವುದುಂ,

ಆ ದಿವ್ಯಜ್ಞಾನಿಯಿಂದಂ ತಿಳಿದು ಪದಪದಾರ್ಥಂಗಳಂ ಪೂರ್ವಜನ್ಮ -
ಪ್ರಾದುರ್ಭಾವಪ್ರಪಂಚಂಗಳನಧಿಕ ಮನೋರಾಗದಿಂ ತನ್ಮನಿಶ್ರೀ-

ಪಾದಾಂಭೋಜಂಗಳಂ ಪೂಜಿಸಿ ವಿನಯದೆ ಬೀೞ್ಕೊಂಡು ಭೇರೀನಿನಾದಂ
ರೋದಾಂತರ್ಭಾಗಮಂ ಜಕ್ಕುಲಿಸೆ ನೃಪತಿ ಸಾಕೇತಮಂ ಬಂದು ಪೊಕ್ಕಂ ॥೪೨॥

ಮಣಿಘಂಟಾಮಣಿಕಿಂಕಿಣೀಮಣಿವಿತಾನಸ್ವರ್ಣ ಲಂಭೂಷಭೂ-
ಷಣಮಂ ರತ್ನವಿಮಾನಮಂ ಭರತನುಂ ಶತ್ರುಘ್ನನುಂ ರಾಮಲ-
ಕ್ಷ್ಮಣರುಂ ತನ್ನೊಡನೇಱಿ ಸೋಂಕಿ ಬರೆ ಸೋತ್ಸಾಹಂ ಪರಿದ್ರತ್ನತೋ-
ರಣಶಾಖಾವಹಮಂ ನರೇಂದ್ರಗೃಹಮಂ ಪೊಕ್ಕಂ ಪ್ರಭಾಮಂಡಳಂ ॥೪೩॥

ಅಂತು ಪುಗುವುದುಂ ಕುಮಾರನಂ ಮಣಿಮಯಾಸನದೊಳಿರಿಸೆ ಮಧುಪರ್ಕಪೂರ್ವಕಮಪಾರಸಾರವಸ್ತ್ರಾಭರಣ ವಸ್ತುವಾಹನಂಗಳಿಂ ಪೂಜಿಸಿ ಬೞಿಯಂ ಜನಕಂಗೆ ಬೞಿಯನಟ್ಟುವುದುಂ ವಿದ್ಯಾಧರಮಹತ್ತರಂ ಪವನವೇಗನೆಂಬಂ ಮನಃಪವನವೇಗದಿಂ ಮಿಥಿಲೆಯನೆಯ್ದಿ ರಾಜಮಂದಿರಮಂ ಪೊಕ್ಕು,

ನಮಿತಂ ಖಚರಾನುಚರಂ ।
ಕ್ರಮದಿಂ ತಿಳಿವಂತು ತನಗೆ ತನಯನ ವೃತ್ತಾಂ- ॥
ತಮನಱಿಪೆ ಜನಕನತೆ ಸಂ ।
ಭ್ರಮಚಿತ್ತಂ ಪಡೆದು ಪಲವು ಸೂೞ್ಸಿಸಗೊಂಡಂ ॥೪೪॥

ಕೊಲಲೆಂದುಯ್ದು ನಿಶಾಚರಂ ಖಚರರಾಜಂಗೊಯ್ದು ಕೊಟ್ಟಂ ಗಡಂ
ಕುಲವಿಸ್ತಾರಕನೆನ್ನ ದಾರಕನೆನಾತಂ ಬಂದು ಸಾಕೇತದೊ-
ಳ್ನೆಲಸಿರ್ದಂ ಗಡ ಸೈಪು ಕಣ್ವೞಿಮುದೆಂದಾನಂದಬಾಷ್ಪಾಂಬು ಕ-
ಣ್ಮಲರಿಂ ಕೈಗಬೞಿವಾಗಿ ಪೊಣ್ಮೆ ಜನಕಂ ರೋಮಾಂಚಮಂ ತಾಳ್ದಿಂ ॥೪೫॥

ತನುಜಾಗಮನೋತ್ಸವಮಂ ।
ತನಗಱಿಪಿದ ಖೇಚರಂಗೆ ನಿಜರಾಜ್ಯಮನೀ- ॥
ವನಿತುವರಮಧಿಕರಾಗಂ ।
ಜನಿಯಿಸೆ ಜನಕಂ ನಿಜಾಂಗಚಿತ್ತಮನಿತ್ತಂ ॥೪೬॥

ಅನಂತರಂ,

ರವಿರಥಮನುತ್ಸವಧ್ವಜ ।
ನಿವಹಂ ತುಡುಕಿದುವು ಕದಱಿದುವು ಪೂವಲಿಗಳ್ ॥
ಕಿವಿಶಬ್ದಂಗೆಟ್ಟಿರೆ ಬ ।
ದ್ಧವಣಂ ಬಾಜಿಸಿದುವೊಡನೆ ಮಿಥಿಳಾಪುರದೊಳ್ ॥೪೭॥

ತನಯಮುಖೇಂದುಕುಡಂಳಮನೀಕ್ಷಿಸಲುತ್ಸುಕವೃತ್ತಿ ಚಿತ್ತದೊಳ್
ನನೆಕೊನೆವೋಗೆ ಸಜ್ಜನಸುಭಾಷಿತದೊಳ್ಪುದುವೊಕ್ಕು ಸೇಸೆಯಂ

ಮನಮೊಸೆದಾಂತು ಬಾಂಧವಜನಂ ಬೆರಸುತ್ಸವದಿಂ ವಿದೇಹಿಯುಂ
ಜನಕನುಮೇಱಿದರ್ಮಣಿವಿತಾನವಿರಾಜಿತಮಂ ವರೂಥಮಂ ॥೪೮॥

ಅಂತು ವರೂಥಾರೂಢರಾಗಿ ಕಿಱಿದುಬೇಗದಿನಯೋಧ್ಯೆಗೆ ಬಂದು ರಾಜಭವನಮಂ ಪೊಕ್ಕು ಜನಕನುಂ ವಿದೇಹಿಯುಂ ದಶರಥಂಗಮಪರಾಜಿತಾಮಹಾದೇವಿಗಂ ತುೞಿಲ್ಗೆಯ್ವುದುಂ ರಾಮಾದಿಗಳುಮವರ್ಗೆ ವಿನಮಿತರಾಗಿ ಪರಕೆಯಂ ಕೈಕೊಳ್ವುದುಂ ಜಾನಕಿಯುಂ ಜನನಿಜನಕರಂ ನಿಬಿಡಾಲಿಂಗನಂಗೆಯ್ದುವರ ಪದಪಯೋರುಹಕ್ಕೆಱಗೆ ತದನಂತರಂ ಪ್ರಭಾಮಂಡಳಂ ತಂದೆಯ ಪಾದಾರವಿಂದಮಂ ಮಣಿಕುಂಡಳಪ್ರಭಾಮಂಡಳಬಾಳಾತಪ- ದಿನರ್ಚಿಸುವುದುಂ ಜನಕಂ ದಿಕ್ಕರಿಕರಾನುಕಾರಿಗಳಪ್ಪ ತೋಳ್ಗಳಿಂ ತೆಗೆದು ತೞ್ಕೈಸಿ ಮಗನ ಮೊಗಮನಟ್ಟಿರ್ತು ನೋಡಿ ಕಲ್ಪತರು ಕೋರಕಿತಮಾದಂತೆ ಪುಳಕಮಂ ತಳೆದಾನಂದ ಬಾಷ್ಪಬಿಂದುಸಂದೋಹದಿಂ ನಂದನನ ಸಹಸ್ರಕುಂತಳಕಳಾಪಕ್ಕೆ ಬಿಡುಮುತ್ತಿನ ತಲೆದುಡುಗೆಯಂ ಪಡೆದು ಮೋಹರಸಸುಧಾ ಸಾರದೊಳವಗಾಹಮಿರ್ಪುದುಂ,

ಅಂಬಿರಿವಿಡೆ ಬೋಂಕೆನೆ ನಯ ।
ನಾಂಬುಗಳತಿವಿಷ್ವಳಂ ಪ್ರಭಾಮಂಡಳನಾ- ॥
ತ್ಮಾಂಬಿಕೆಯ ಪದಕ್ಕೆಱಗಿದ ।
ನಂಬುರುಹಕ್ಕೆಱಗಿದಳಿಗಳೆನಿಸೆ ಕುರುಳ್ಗಳ್ ॥೪೯॥

ಆಗಳಾ ವಿದೇಹಿ ಪರಿಷ್ವಂಗಳಸುಖಾನುಭವಮನಪ್ಪುಕೆಯ್ವುದುಂ,

ಮೊಲೆವಾಲಂಬಿರಿವಿಟ್ಟು ಸೂಸೆ ಮೊಲೆಯಿಂ ಬಾಷ್ಪಾಂಬು ಕೈಗಣ್ಮೆ ಕ-
ಣ್ಮಲರಿಂ ಮೈನವಿರ್ಗಳ್ಪೊದಱಿಪೊದವೆ ಮೆಯ್ಯಿಂ ಗದ್ಗದಂ ಕಂಠಕಂ-
ದಲದಿಂದುದ್ಗತಮಾಗೆ ಮಸ್ಪುಮಿಗೆ ನಾನಾ ಚೇಷ್ಟೆ ನಾನಾರಸಂ
ತಲೆದೋಱಿತ್ತು ವಿದೇಹಿಗಚ್ಚರಿ ಸುತವ್ಯಾಮೋಹಕೌತೂಹಲಂ ॥೫೦॥

ಉದಯಿಸಿದಾಗಳಾತನನಗಲ್ದಱಿಲಾತನ ಬಾಲಕೇಳಿಯಿಂ
ಪದೆದವಲೋಕಿಸಲ್ಪಡೆಯದುಮ್ಮಳವಾತನ ಸೋಂಕಿಲೊಳ್ಪೊದ-
ಱಿಪೊದವಿದ ಮೋಹಮಾತನ ಮುಖಾಬ್ಜವಿಳೋಕನಜಾತಕೌತುಕಂ
ಸುದತಿ ವಿದೇಹಿಗೇಂ ಪಡೆದುದೋ ರಸಸಂಕರಚಿತ್ರಚೇಷ್ಟೆಯಂ ॥೫೧॥

ತನಯನನಾಗಳಂತೆ ಪಡೆದಂತೆ ಮನೋಮುದಮಂ ವಿದೇಹಿಯುಂ
ಜನಕನುಮಪ್ಪುಕೆಯ್ಯೆ ರಘುವಂಶನಮೇರು ವಿಚಿತ್ರರತ್ನಮಂ-
ಡನವಸನಂಗಳಿಂದೊಸೆದು ಮನ್ನಿಸೆ ಹರ್ಷಮಳುಂಬಮಾಯ್ತು ಚಂ-
ದನರಸಮುಗ್ಗರಪ್ಪವರನಪ್ಪಿದುವಿಂದುಕರಂಗಳೆಂಬಿನಂ ॥೫೨॥

ಅಂತು ದಶರಥನಭ್ಯಾಗತಪ್ರತಿಪತ್ತಿಯಂ ಮಾಳ್ಪುದುಮನುದಿನಂ ಪ್ರಭಾಮಂಡಳಂ ರಾಮಲಕ್ಷ್ಮಣರೊಡನೆ ಕೂಡಿ ವಿವಿಧವಿನೋದಂಗಳಿಂ ದಿವಸಂಗಳೇನಕಮಾಗೆಯು ಮೇಕಕ್ಷಣದಂತೆ ನಿರಂತರೋತ್ಸವಮನೊದವಿಸೆ ಸುಖದಿನೊಂದು ತಿಂಗಳ್ವರ ಮಯೋಧ್ಯೆಯೊಳಿರ್ದು ಮಿಥಿಳೆಗೆವಂದು ಜನಕನ ರಾಜ್ಯಮಂ ತಮ್ಮ ಕಿಱಿಯತಮ್ಮನಪ್ಪ ಕನಕಂಗೆ ಕೊಟ್ಟು ಜನಕನುಂ ವಿದೇಹಿಯುಂ ಬೆರಸು ರಥನೂಪುರಚಕ್ರವಾಳಪುರಕ್ಕೆ ಪೋಗಿ ವಿದ್ಯಾಧರವಿಭೂತಿಯೊಳ್ ಸುಖದಿನಿರ್ದನನ್ನೆಗಮಿತ್ತಲ್,

ಉರ್ವರಾಧಿಪತಿ ಕಂಡನರ್ಚನಾ ।
ಪೂರ್ವಕಂ ದಶರಥಾವನೀಶ್ವರ ॥
ಸರ್ವಭೂತಹಿತನಾಮಧೇಯರಂ ।
ಸರ್ವಭೂತಹಿತ ಸಾಧುಮುಖ್ಯರಂ ॥೫೩॥

ಅಂತು ಕಂಡು ಗುರುಭಕ್ತಿಪೂರ್ವಕದಿಂ ವಂದಿಸಿ,

ಎನ್ನ ಭವಾಳಿಯಂ ದಯೆ ।
ಯಿಂ ನಿಮ್ಮಡಿ ಬೆಸಸಿಮೆಂದು ಕೈಮುಗಿದಿರೆ ಕಿಂ- ॥
ಚಿನ್ನಮಿತಕಂಧರಂ ಪದ ।
ಸನ್ನಿಧಿಯೊಳ್ದಶರಥಂಗೆ ಮುನಿವರನೆಂದಂ ॥೫೪॥

ಮೊದಲಿಲ್ಲೆನಿಪ್ಪ ಸಂಸಾ ।
ರದಲ್ಲಿ ಸುಖದುಃಖಮಂ ಚತುರ್ಗತಿಯೊಳ್ಮಾ- ॥
ಣದೆ ತಿರಿದು ಶುಭಾಶುಭಕ ।
ರ್ಮದ ಫಳಮಂ ನಗುತಮೞುತಮುಣುತುಂ ಬಂದೈ ॥೫೫॥

ಅಂತನಂತ ಭವಾಳಿಯಂ ತಿರಿತರುತ್ತುಮಿಾ ಭವಕ್ಕೆಂಟನೆಯ ಭವದೊಳೊರ್ಮೆ ಸೇನಾಪುರಮೆಂಬ ಪುರದೊಳ್,

ಮುನಿಚರ್ಯಾವಿಘ್ನದೊಳಂ ।
ಜಿನಧರ್ಮದ್ವೇಷಮತಿಯೊಳಂ ದುರ್ಗತಿಯೊ- ॥
ಳ್ಜನಿಯಿಸಿ ದುರಂತದುಃಖಮ ।
ನನುಭವಿಸಿದೆ ವಕ್ರಭಾವಮಟಲಿಸದಾರಂ ॥೫೬॥

ಅಂತೆಂತಾನುಂ ಸವಿಪಾಕನಿರ್ಜರೆಯಿಂ ದುಷ್ಕರ್ಮಫಳಮಂ ತವಿಸಿ ನಿಜದಿನನುಪಶಮಭಾವಮಂ ಪಡೆದುದಱ ಫಳದಿಂ ಚಂದ್ರಪುರದ ಚಂದ್ರನೆಂಬ ನರೇಂದ್ರಂಗೆಯುಮಾತಮನ ಮನೋಹಾರಿಣಿ ಧಾರಿಣಿಗಂ ಧಾರಣನೆಂಬ ಮಗನಾದೆ; ನಿನಗೆ

ಸುಧರ್ಮೆ ಪತ್ನಿಯಾಗೆ ಜಿನಧರ್ಮಮಂ ಪತ್ತುವಿಡದೆ ನಡೆದು ಚತುರ್ವಿಧದಾನಶೂರನಾಗಿ ಶರೀರಭಾರಮನಿಱಿಪಿ ಧಾತಕೀಷಂಡದ ಮೂಡಣ ಮಂದರದುತ್ತರಕುರುವಿನೊಳ್ಪುಟ್ಟಿ ಮೂಱು ಪಳಿತೋಪಮಂಬರಮಲ್ಲಿಯ ಸುಖಮನನುಭವಿಸಿ ತದನಂತರಂ ದೇವಗತಿವಡೆದು,

ಪೂಸದ ಸೌರಭಂ ತವದ ಮೈಸಿರಿ ಬಾಡದ ದಾಮಮುಟ್ಟೊಡಂ
ಮಾಸದ ಸೀರೆ ಧಾತುಮಳಮಿಲ್ಲಡೊದಲ್ಪರಿಪೂರ್ಣಯೌವನಂ
ಲೇಸೆನಿಸಿರ್ದ ರೂಪು ಶುಭಲಕ್ಷಣಮೆಂಬಿವನಪ್ಪುಕೆಯ್ದನಾ-
ಯಾಸದಿನೀಸಿದೈ ಸಗ್ಗದ ಬಾೞ್ಕೆಯೆರಟ್ಟಿಡಲ್ಗಳಂ ॥೫೭॥

ಮತ್ತಮಲ್ಲಿಂ ಬಂದು ಪುಷ್ಕಳಾವತೀ ವಿಷಯದ ಪುಂಡರೀಕಿಣೀಪುರಮನಾಳ್ವ ನಂದಿಘೋಷನರಪತಿಗಮಾತನರಸಿಯಪ್ಪ ವಸುಮತಿಗಂ ನಂದಿವರ್ಧನನೆಂಬ ನಂದನನಾದೆ ನಿನ್ನ ತಂದೆಯಪ್ಪ ನಂದಿಘೋಷನೊಂದು ದಿವಸಂ ಕ್ರೀಡಾವನಕ್ಕೆ ಪೋಗಿ ದಿವ್ಯ ಯೋಗಿಯಂ ಕಂಡು ಧರ್ಮಮಂ ಬೆಸಗೊಂಡು ಸಂಸಾರಶರೀರಭೋಗ ನಿರ್ವೇಗಪರನಾಗಿ ನಿನಗೆ ರಾಜ್ಯಮಂಕೊಟ್ಟು ಯಶೋಧರಭಟ್ಟಾರಕರ ಚರಣಮೂಲದೊಳ್ತಪಶ್ಚರಣನಿರತನಾಗಿ ಸಮಾಧಿಯಿಂ ವಿಗ್ರಹಮನುೞಿದು ಬೞಿಯಂ ನವಗ್ರೈವೇಯಕಮಧ್ಯ ನಾಯಕನಾದಂ, ನೀನೊಂದು ಪೂರ್ವಕೋಟಿಕಾಲಮರಸುಗೆಯ್ದು ಜಿನಧರ್ಮಮಂ ಪತ್ತುವಿಡದೆ ನಡೆದು ಕಡಯೊಳೈದನೆಯ ಕಲ್ಪದುಪಪಾತ ತಳ್ಪದೊಳ್ ದೇವನಾದೆ,

ಅಯ್ದುಂ ಕಲ್ಯಾಣಮನಿ ।
ತ್ತೆಯ್ದಿಪುದೈದನೆಯ ಗತಿಯನವಯವದಿಂ ತಾ- ॥
ನಯ್ದನೆಯ ನಾಕಲೋಕಮ ।
ನೆಯ್ದಿಪುದು ಜಿನೇಂದ್ರಸೇವೆಗಾವುದು ಗಹನಂ ॥೫೮॥

ಅಂತಲ್ಲಿಯ ಸುಖಮನನುಭವಿಸಿ ಬಂದು ಭರತದಪರವಿದೇಹದ ವಿಜಯಾರ್ಧದ ಶಿಶಿಪುರಮನಾಳ್ವ ರತ್ನಮಾಲಿಗಂ ವಿದ್ಯುಲ್ಲತಗಂ ಸೂರ್ಯಂಜಯನೆಂಬ ಮಗನಾದೆ. ನಿಜಜನಕನಪ್ಪ ರತ್ನಮಾಲಿ ಸಿಂಪಪುರಮನಾಳ್ವ ವಜ್ರಲೋಚನನೊಳ್ಕಾದಲೆಂದು ಬಲಸಹಿತಮಾಗಿ ಪೋಗುತ್ತಮಿರೆ,

ಮನದ ಮುನಿಸೆಂಬ ಕಟ್ತಿಲೆ ।
ಯನಲೆವ ಮಾಣಿಕ್ಯದೀಪಮೆನೆ ದಿವದಿಂದಾ- ॥
ತನ ಮುಂದಣ್ಗೆೞಿತಂದಂ ।
ದಿನಲಕ್ಷ್ಮಿಗೆ ತನ್ನ ದೇಹರುಚಿ ಕುಡೆ ಕೊರ್ವಂ ॥೫೯॥

ಅಂತು ಬಂದು,

ವಿಗ್ರಹದೊಳ್ನಿನಗಿನಿತೇ ।
ಕಾಗ್ರಹಮುೞಿ ಮುಳಿಸನೊಂದು ಕಥೆಯಂ ಕೇಳೇ- ॥
ಗಾಗ್ರಮನದಿಂದಮೆಂದು ಸ ।
ಮಗ್ರಾವಧಿ ಬೋಧನಮರನಂದಿಂತೆಂದಂ ॥೬೦॥

ಈ ಭರತದ ವಿಜಯಾರ್ಧಮ ।
ಹೀಭೃತ್ತಟತಿಳಕಮೆನಿಪ ಶಶಿಪುರಮೊಡೆಯಂ ॥
ಭೂಭುವನಪ್ರಥಿತಯಶಂನ ।
ಶ್ರೀಭೂತಿ ವಿಭೂತಿವಸರ ಸುತನಂ ಪಡೆದಂ ॥೬೧॥

ಉಪಮನ್ಯುಮೆಂಬವಂ ತನ ।
ಗೆ ಪುರೋಹಿತನಾಗೆ ಪಿರಿಯ ಸಿರಿಯಂ ಸುಖದಿಂ- ॥
ದುಪಭೋಗಿಸುತುಂ ತಾಂ ಬಂ ।
ದು ಪೊರ್ದಿದಂ ಕಮಳಗರ್ಭಯತಿಪತಿಪದಮಂ ॥೬೨॥

ಅಂತಾ ತಪೋನಿಧಿಯ ಸನ್ನಿಧಿಯೊಳ್ಮಧುಮಾಂಸನಿವೃತ್ತನಾಗಿ ವರ್ತಿಸುತ್ತಿರ್ಪುದುಂ, ಶ್ರೀವಿಭೂತಿಯಿಂ ತತ್ಪುರೋಹಿತನಪ್ಪುಪಮನ್ಯು ದುಷ್ಟಮತಿ ನಷ್ಟವ್ರತಂ ಮಾಡಿ ತಾನುಂ ಪಣಮರಣದಿಂ ವಾರಣಮಾಗಿ ಮತ್ತಂ ಮಾರಣಮನೆಯ್ದಿ, ಮುನ್ನ ತನ್ನ ಪತಿಯಪ್ಪ ಶ್ರೀಭೂತಿಯ ಮೋಹದಿಂದಾತನ ಸುತನಪ್ಪ ಸುಭೂತಿಗಂ ಯೋಜನಗಂಧಿಗಮರಿಂದಮನೆಂಬ ನಂದನನಾಗಿ ತಾನದೊಂದು ದಿವಸಂ ಕಮಳಗರ್ಭ ಮಹಾಋಷಿದರ್ಶನದಿಂ ಜಾತಿಸ್ಮರನಾಗಿ ಶತಾರಕಲ್ಪದೊಳನಲ್ಪಸುಖಮನನುಭವಿಸಿರ್ದನನ್ನೆಗಮಿತ್ತಲ್,

ಅಂದು ದುರಾಚಾರದ ಫಲ ।
ದಿಂದಂ ಶ್ರೀಭೂತಿ ಸತ್ತು ಪುಲ್ಲೆಯ ಬಸಿಱೊ- ॥
ಳ್ಬಂದಂ ಕಾಳ್ಕಿರ್ಚು ಸುಡ ।
ಲ್ಬೆಂದಂ ಮಂದಾರಮೆಂಬ ಗಹನಾಂತರದೊಳ್ ॥೬೩॥

ಅಂತು ಕಱಿದು ಕಾಂಭೋಜದೊಳ್ ಕಿಂಜಮನೆಂಬ ಕಿರಾತನಾಗಿ.

ಆಡಿದ ಕಾಡೊಲ್ ಜವನೆ ।
ಬ್ಬಾಡಿದುದೆನೆ ಕೊಂದು ತಿಂದು ಕೈಯುಂ ಕಾಲುಂ ॥
ಮೂಡಿದುವು ಪಾತಕಕ್ಕೆನೆ ।
ಕಾಡೊಡಮೆಯಿನಱಿದು ಶರ್ಕರಪ್ರಭೆಗಿೞಿದಂ ॥೬೪॥

ಅದನುಪಮನ್ಯುಚರನಪ್ಪ ದೇವನವಧಿಯಿಂ ದಱಿದಲ್ಲಿಗೆವಂದು ನಿನಗೆ ಧರ್ಮೋಪದೇಶಂಗೆಯ್ಯೆ ನೀನೀಗಳ್ ರತ್ನಮಾಲಿಯಾದೆ; ನಿನಗಿಂದು ಧರ್ಮೋಪದೇಶಂ-

ಗೆಯ್ದುವಾವೆಂದು ಪೇೞೆ ಕೇಳ್ದದುವೆ ನಿರ್ವೇಗಮಾಗೆ ಸೂರ್ಯಂಜಯನೆಂಬ ನಿಜತನೂಜನಂ ರಾಜ್ಯಮಂ ಕೈಕೊಳ್ಳದನಲಾತಂ ತಪೋರಾಜ್ಯಮಲ್ಲದೊಲ್ಲೆನೆಂದೊಡೆ, ತದಪತ್ಯನಪ್ಪ ಕಾಳನಂದಂಗೆ ರಾಜ್ಯಮಂ ಕೊಟ್ಟು ರತ್ನಮಾಲಿ ಸೂರ್ಯಂಜಯಂಬೆರಸು ತಿಳಕಸೌಂದರಮುನಿಪುಂಗವರ ಸಮಕ್ಷದೊಳ್ದೀಕ್ಷೆಗೊಂಡನೇಕಕಾಲ ತಪಂಗೆಯ್ದು ಮಹಾಶುಕ್ರಕಲ್ಪದುಪಪಾತತಳ್ಪದೊಳ್ಪುಟ್ಟಿ ಪದಿನಾಱು ಸಾಗರೋಪಮ ಕಾಲಮಲ್ಲಿಯೆ ಸುಖಮಮನುಭವಿಸಿ ಬಂದಂದಿನ ಸೂರ್ಯಂಜಯನೆ ನೀನೀಗಳ್ದಶರಥನಾದೆ; ನೀಂ ನಂದಿವರ್ಧನನಾದಂದಿನ ತಂದೆಯಪ್ಪ ನಂದಿಘೋಷರೆಂಬವರ್ತೋಱಿದು ನವಗ್ರೈವೇಯಕದೊಳ್ನಿಲಸಿ ಬಂದು ಸರ್ವಭೂತಹಿತಭಟ್ಟಾರಕರಾವಾದೆವು; ಶ್ರೀವಿಭೂತಿಯುಮುಪಮನ್ಯುವುಂ ನಿನ್ನ ಮೈದುನರಪ್ಪ ಜನಕನುಂ ಕನಕನುಮಾದರೆಂದು ಬೆಸಸೆ ದಶರಥಂ ವಿಸ್ಮಯಾಕ್ರಾಂತನಾಗಿ,

ಯತಿಪತಿ ಪೇೞೆ ಕೇಳ್ದು ಭವಸಂತತಿಯಂ ಬಗೆದಾವವಂ ಭವ-
ಸ್ಥಿತಿಯನನಾದಿಯಂ ಸುಕೃತ ದುಷ್ಕೃತ ಕರ್ಮವಿಪಾಕ ಸೌಖ್ಯದು
ಸ್ಥಿತಿಗಳನುಂದು ರಾಟಣದ ಗುಂಡಿಗೆಯಂತೆವೊಲಾದೆನೆಂದು ನಿ-
ರ್ವೃತಿಸುಖದತ್ತಲಾಟಿಸಿದನೇಂ ರಘುಸೂನು ಮಹಾನುಭಾವನೋ ॥೬೫॥

ಅವಚಱದಿನ್ನೆಗಂ ಸವಿದೆನಿಂದ್ರಿಯಸೌಖ್ಯಮನಗ್ರನಂದನಂ
ಕವಚಹರಂ ಜಿತಾಹಿತಬಲಂ ಬಲನನ್ನನಿರಲ್ಮಹಾಪರಾ-
ಭವಮದಱಿಂದಮಾವುದೆನಗೆಂದಿರದುತ್ತರಿಸಲ್ಕೊಡರ್ಚಿದಂ
ಭವಜಳರಾಶಿಯಂ ದಶರಥಂ ಜಿನರೂಪಬಹಿತ್ರಯಾತ್ರೆಯಿಂ ॥೬೬॥

ಪರಪೀಡಾಕರನೆಂತು ನೋಡುವೊಡವೃತ್ತೋಪಾರ್ಜನಂ ತದ್ದುರಾ-
ಚರಿತೋದೀರಿತದುಃಖತಿಕ್ತಫಳಸೇವಾಕಾಲದಂದೊರ್ವರುಂ
ನೆರವಿಲ್ಲಾ ಘನಸೇವೆಯಂದೆ ನೆರವಪ್ಪರ್ನಂಟರೆಂದಂದು ತಾಂ
ಮರುಳಕ್ಕುಂ ಪುರುಳಕ್ಕುಮೇ ಮಱೆದು ಹಾನಾದಾನವಿಜ್ಞಾನಮಂ ॥೬೭॥

ವನಿತಾಸಂಕುಳಮುಂ ಷಡಂಗಬಲಮುಂ ಭಂಡಾರಮುಂ ವಸ್ತುವಾ-
ಹನಮುಂ ತನ್ನೊಡವಪ್ಪುವಲ್ಲಮೊಡವಕ್ಕುಂ ಪುಣ್ಯಪಾಪಂಗಳೆಂ-
ಬೆನಿತುಂ ಭಾವಿಸೆ ತಾನೆ ತನ್ನ ದೆಸೆಯಿಂ ತನ್ನಂದಮಂ ಸಾಧಿಸ-
ಲ್ಮನಮಂ ತಾರದೆ ಬಾಹ್ಯಮಂ ಬಯಸುವಂತಜ್ಞೂನ್ಯನುಂ ಮಾನ್ಯನೇ ॥೬೮॥

ಆೞ್ವೆಣದೊಡಮೊಂದೆರಟ್ಟಿ ವಸಮೊಂದಾಗಿರ್ದವಂ ನಂಟನೆಂ-
ದುೞಿದಂದನ್ಯರನಾಸೆಗೆಯ್ದುಳವಳಿಂ ನಿರ್ವ್ಯಾಕುಳಂ ಪೊಲ್ಲಿವ-
ಳ್ಬೞಿಗುಂಜಳ್ ಭರತಾದಿಗಳ್ಬಲವು ಕಾಲಂ ತನ್ನೊಳೋತಿರ್ದವ-
ರ್ಕೞಿದಂದಾಕ್ಷಣದೊಳ್ಧರಾರಮಣಿ ಮತ್ತೊರ್ವಂಗೆ ಪುರ್ವಿಕ್ಕುವಳ್ ॥೬೯॥

ಮೃಗಭೂವಿಶ್ರುತಸಾಂದ್ರ ಚಂದನರಸಂಗಳ್ಚಂದನೋಶೀರವಾ-
ರಿಗಳುಂ ನರ್ತಿತಹೇಮಚಾಮರಚಳನ್ಮಂದಾನಿಳಂಗಳ್ವಿಳಾ-
ಸಗೃಹಂಗಳ್ಕಳಿಯಲ್ಕೆ ಸಾಲ್ವುವೆ ರಾಗದ್ವೇಷವೇಗಂಗಳಿಂ
ಬಗೆಯೊಳ್ಪರ್ಚಿದ ತಾಪಮಂ ಕಳೆವವೊಲ್ಜೈನಾಂಘ್ರಿಕಳ್ಪಾಂಘ್ರಿಪಂ ॥೭೦॥

ಎನಿತೆನಿತುಂ ಪುಂಜಿಸಿದೊಡ ।
ಮನಿತನಿತುಂ ಮಣಿಯಲಜ಼ಿಯದಣಿಯರಮುರಿಗುಂ ॥
ಧನದಿಂ ಲೋಭಾಗ್ನಿಯನಿಂ ।
ಧನಭಾರದಿನಾವನಗ್ನಿಯಂ ಸೈರಿಸುವಂ ॥೭೧॥

ಜನಕನನರಣ್ಯನಗ್ರಜ ।
ನನಂತರಥನೆಳೆಯನೊಂದು ತಿಂಗಳ ಕೂಸಿಂ ॥
ಗೆನಗಿತ್ತು ತೊಱೆದನೆನ್ನವೊ ।
ಲಿನವಂಶದೊಳಿಂತು ಮೋಹಮೂರ್ಛಿತರೊಳರೆ ॥೭೨॥

ಸಾವ ಪುಟ್ಟುವ ಭಯಮುಂ ಸಂತಾಪಂ ಸಪ್ತಧಾತುಜವಂ ದೇಹಸ್ಥಿತಿಯ-
ನಾವ ವಸ್ತುವನುಂಡೊಡಂ ತಣಿವಿಲ್ಲದ ಕಾಂಕ್ಷೆಯಂ ಬಗೆದು ತನ್ನೊ-
ಳೀವುದೀ ತೊಡರ್ಪನಗಿದೇಕೆಂದು ದಶರಥಂ ಭಾವಿಸಿ ಭಾವಿತಾತ್ಮನಂ
ಭಾವಿತಾತ್ಮನಂ ಪರಮಯೋಗೀಂದ್ರನಂ ಬೀೞ್ಕೊಂಡಯೋಧ್ಯೆಗೆ ಪೋದನಾಗಳ್ ॥೭೩॥

ಅಂತರಮನೆಯನಧಿರಾಜಂ ಪೊಕ್ಕು ನಿರ್ವರ್ತಿತನಿಯಮನಾಸ್ಥಾನಮಂಟಪ ಮಧ್ಯಸ್ಥಿತ ಸಿಂಹಾಸನದೊಳಿರ್ಪುದುಂ,

ನೆಲಸಿರೆ ರಾಜಮಂಡಳದ ಮಂಡಳಿಕರ್ಕಳ ದಂಡನಾಥಮಂ-
ಡಲಿಯ ನಿಯೋಗಿವರ್ಗದ ಪುರೋಹಿತವರ್ಗದ ಮಂತ್ರಿವರ್ಗಮು-
ಜ್ಜ್ವಲನವರತ್ನಭೂಷಣಕಿರೀಟಪಟುದ್ಯುತಿಯಿಂದದೇಂ ಪಳಂ-
ಚಲೆಮದೊ ರಾಜರಾಜಸಭೆ ಕುಂಭಜನೀಂಟದ ತೋಯರಾಶಿಯಂ ॥೭೪॥

ಗುರುಜನಮುಮಾಪ್ತಜನಮುಂ ।
ಪರಿಜನಮುಂ ಬಂಧು ಜನಮುಮಾಶ್ರಿತಜನಮುಂ ॥
ಪುರಜನಮುಂ ತಿಂತಿಣಿಯಾ ।
ಗಿರೆ ಸಭೆ ಪೋಲ್ತತ್ತು ರತ್ನಮೇಳಾಪಕಮಂ ॥೭೫॥

ಅಂತೋಲಗಂಗೊಟ್ಟು ದಶರಥಮಹೀನಾಥಂ ನಿಜತನೂಭವರಂ ಬರವೇೞ್ಟಿಟ್ಟುವುದುಂ ತದಾಜ್ಞೆಯಂ ತಲೆಯೊಳಾಂತು,

ಹಳಮುಸಲಾಯುಧರ್ ನಡೆವ ತಾರನಗೇಂದ್ರಮನೊಂದು ಕಾರ್ಮುಗಿ-
ಲ್ಪಳಸಿದವೋಲ್ವಿರಾಜಿಸೆ ವಿನೀಳಪಟಂ ನಡೆತಂದನೇಕ ಕುಂ-
ಡಳನುದಯಾರ್ಕಮಂಡಳಮನೇಳಿಸೆ ಶೇಷನಶೇಷಧಾತ್ರಿಯಂ
ತಳೆವಡೆಯೊಳ್ನಿರಂಬಡೆದವೋಲಿರೆ ದಕ್ಷಿಣವಾಮಬಾಹುಗಳ್ ॥೭೬॥

ಘನದೋರ್ದಂಡವಿಮಂಡಿತಂ ಘನಗದಾದಂಡಂ ಬೃಹತ್ಕಾಳದಂ-
ಡನಿಭಂ ಭೀಕರಮಾಗೆ ಪೀತವಸನಂ ಸಂಧ್ಯಾಂಬುದಕ್ಕೆಂದು ನೀ-
ಳನಗೇಂದ್ರಂ ನಡೆತರ್ಪ ಮಾಟ್ಕೆಯೊಳುಪೇಂದ್ರಂ ದುರ್ಜಯಂ ರಾಮಚಂ-
ದ್ರನ ಪಿಂದಂ ನಡೆತಂದನಾಯತ ಸಿತಾಂಭೋಜೇಕ್ಷಣಂ ಲಕ್ಷ್ಮಣಂ ॥೭೭॥

ಇದಿರ್ವರೆ ತತ್ಸಭಾಜನದ ಕಣ್ಮಲರಂ ಮನಮುಂ ಕೆಲಕ್ಕೆವಂ-
ದೊದವಿದ ಭಕ್ತಿಯಿಂದೆಱಗಿದಂ ಪಿತೃಪಾದಯುಗಕ್ಕೆ ರಾಘವಂ
ಪದನಖಚಂದ್ರಮಂಡಲಿಗೆ ಚಂದ್ರಿಕೆಯಂ ಕುಡೆ ದೇಹದೀಪ್ತಿ ಹಾ-
ರದ ನೆವದಿಂದಮೋಲಗಿಸೆ ತಾರಗೆಯಂ ನಿಜಕಂಠಕಂದಳಂ ॥೭೮॥

ಅನಂತರಂ ಲಕ್ಷ್ಮಣಭರತಶತ್ರುಘ್ನರ್ ಸರ್ವಾಂಗಪ್ರಣತರಪ್ಪುದುಮನಂತ ಸುಖಭೋಗಭಾಗಿಗಳಾಗಿಮೆಂದು ಪರಸಿ ಪರ್ಯಂಕಪಾರ್ಶ್ವದೊಳಿಕ್ಕಿದ ಮಣಿಮಯಾಸನ-ದೊಳ್ಕುಳ್ಳಿರೆ ದಶರಥಂ ರಾಮಚಂದ್ರನ ಮುಖಚಂದ್ರನ ನೋಡಿ,

ನಿಲ್ಮೆನುಡಿವೀವ ಕಾವ ಧರೆಯಿಂ ಪ್ರತಿಪಾಲಿಪ ಧರ್ಮವೀಥಿಯಿಂ
ತೊಲಗದ ಪೆರ್ಮೆಯಂ ತಳೆದ ಪೆರ್ಮಗನಂ ಭುವನಾಧಿಪತ್ಯದೊ-
ಳ್ನಿಲಿಸಿ ನಿಸರ್ಗ ದುರ್ಗಮೆನಿಸಿರ್ದಪವರ್ಗಪಥಕ್ಕೆ ದಾಳಿಯಿ-
ಟ್ಟಲಘುಪರಾಕ್ರಮಕ್ಕೆ ನೆಲೆಯಾಗದ ಪಾರ್ಥಿವನೇಂ ಕೃತಾರ್ಥನೇ ॥೭೯॥

ನೊಸಲೊಳ್ಕಣ್ಬಡೆದಂತೆ ಪುತ್ರ ಪಡೆದೆಂ ನಿನ್ನಂ ಸ್ಫುರತ್ತೇಜನಂ
ವಸುಧಾರಾಜ್ಯಮನೊಪ್ಪುಗೊಳ್ನಿಲಿಸು ನೀನೆನ್ನಂ ತಪೋರಾಜ್ಯದೊ-
ಳ್ಪಸುಗೂಸಿಂಗೆನಗಿತ್ತು ಮಜ್ಜನಕನೀ ಸಂಪತ್ತಿಯೊಳ್ಪೊಳ್ದು ಸಾ-
ಧಿಸಿದಂ ಸಜ್ಜನತಾಶರಣ್ಯನನರಣ್ಯಂ ಮೋಕ್ಷಸಂಪತ್ತಿಯಂ ॥೮೦॥

ಸುತ ನಮ್ಮನ್ವಯದೊಳ್ಪುರಾತನಜಗದ್ವಿಖ್ಯಾತಭೂನಾಥರೀ
ಸ್ಥಿತಿಯಂ ರಾಜ್ಯಸುಖಂಗಳೊಳ್ತಣಿದು ತತ್ತಾಭ್ಯಾಸವಿಶ್ರಾಂತಜೀ-
ವಿತರಾದರ್ಮಱಿದೀ ಕುಳಕ್ರಮಮನಾನಿಂತಿರ್ದು ಸನ್ಮಾರ್ಗಪ-
ದ್ಧತಿಯಂ ಹಾಸ್ಯರಸಪ್ರವಾಹಜಳದಿಂ ಪ್ರಕ್ಷಾಳಿತಂ ಮಾಟ್ಪೆನೇ ॥೮೧॥

ತಿಲಕಾಕಾರದಿನಿಕ್ಕೆ ನಿನ್ನ ನೊಸಲೊಳ್ಸಾಮ್ರಾಜ್ಯಪಟ್ಟಂ ಧರಾ-
ವಲಯಾಲಂಕೃತಮಕ್ಕೆ ನಿನ್ನ ಭುಜದಂಡಂ ನಿನ್ನ ಮೌಳಿ ಪ್ರಭಾ-

ವಲಿಯಂ ಚಿತ್ರಿತಮಕ್ಕೆ ಬೆಳ್ಗೊಡೆ ತಪಶ್ರೀಗಾಂ ಮನಂದಂದೆನೆ-
ನ್ನೊಲವಂ ಪಾಳಿಸು ಪಾಟಿಯಲ್ತು ಪಿತೃವಾಕ್ಯೋಲ್ಲಂಘನಂ ರಾಘವಾ ॥೮೨॥

ಕಿಡಿವಿಡೆ ಕರ್ಪರಂ ಸುಗಿದು ಮೈಪೆಗೆದಂ ಕಮಠಾಧಿಪಂ ಪಡ-
ಲ್ವಿಡೆ ಫಣಾಗಳ್ಫಣಿಪ್ರಭು ಮೊಗಂದಿರಿದಂ ದೆಸೆಯಾನೆ ಮಾರ್ಕೊರ-
ಲ್ವಡೆಯದೆ ತಳ್ಗಿ ಮುಳ್ಗಿದುವಿರ್ಕತಿಭಾರದೊಳಾವ ಸೇದೆಯಂ
ಕಿಡಿಸಿ ತನೂಜ ನೀಂ ತಳೆವುದೀ ನೆಲನಂ ನಿಜಬಾಹುದಂಡದೊಳ್ ॥೮೩॥

ಎಂಬುದಂ ರಾಮಚಂದ್ರಂ ಮುಕುಳಿತಕರಸರೋಜನಾಗಿ,

ಧರೆಯಂ ದ್ವಾದಶಚಕ್ರವರ್ತಿಗಳಿನಿತ್ತಲ್ಲೀಪ ನಿಮ್ಮಾ ಭುಜಾ-
ಪರಿಘಕ್ಕೊಪ್ಪಿಸಿ ಬೇಟ್ಪುದಂ ಪಡೆಮುವೆಂತಾನುಂ ದಿಶಾದಂತಿ ದಿ-
ಕ್ಕರಿಣೀಪೇಚಕ ಚುಂಬನೈಕಸುಖಮಂ ಶೇಷೋರಗಂ ಭೋಗಿನೀ-
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ॥೮೪॥

ಬಳವದರಾತಿ ಮಂಡಳಮನಂಡಲೆದುದ್ಧತಬಾಹುದಂಡದಿಂ-
ದಿಳೆಯನಿಳೇಶ ನೀಂ ತಳೆದುದಂ ರಣಬಾಲಕರೆಮ್ಮವಂದಿಗ-
ರ್ತಳೆವರೆ ವಿಶ್ವಲೋಕಮುಮನಶ್ರಮದಿಂ ಪ್ರಬಳಪ್ರಭಂಜನಂ
ತಳೆವವೊಲಶ್ರಮಂ ತಳೆಯಲಾರ್ಕುಮೆ ವೀಜನಮಂದಮಾರುತಂ ॥೮೫॥

ಎನೆ ದಶರಥಂ ತನಯನ ವಚನಮಂ ಮನದೆಗೊಂಡು,

ತನಯಂಗೊಪ್ಪಿಸಿ ರಾಜ್ಯಮಂ ನಿಯಮದಿಂ ನಿಲ್ವರ್ತಪೋರಾಜ್ಯದೊ-
ಳ್ಮನುವಂಶಕ್ಷಿತಿನಾಥರೀ ಸ್ಥಿತಿಗೆ ನಿನ್ನಂ ಪ್ರಾರ್ಥಿಸಲ್ವೇಡ ನಂ
ದನ ಸಂಕ್ರಂದನ ವಂದನೀಯ ಪದದೊಳ್ನಿಲ್ವೆಂ ತಪೋರಾಜ್ಯದೊ-
ಳ್ನಿನಗಸ್ಮದ್ವಚಮಂ ವಿಧೇಯಮವಜೆಂ ಕೈಕೊಳ್ಧರಾಭಾರಮಂ ॥೮೬॥

ಎಂದಿವು ಮೊದಲಾಗೆ ಪಲವು ತೆಱದಿಂ ಮಱುಮಾತಿಂಗೆಡೆಯಿಲ್ಲದಂತು ನುಡಿದೆಂತಾನುಂ ರಾಮನನೊಡಂಬಡಿಸಿ ರಾಜ್ಯಸ್ಥನಪ್ಪಂತು ಮಾಡೆ ತದನಂತರಂ ಭರತಂ ಮುಕುಳಿತ ಕರಸರೋಜನಾಗಿ,

ಒಡಲ ಶುಚಿತ್ವಮಂ ಗತಿಚತುಷ್ಟಯದೊಳ್ ದೊರೆಕೊಳ್ವನಿಷ್ಟಮಂ
ಕಿಡುವ ಸುಖಂಗಳಿಂ ತಣಿಯದಾಯಸಮಂ ತಿಳಿದಿರ್ದುಮೇನೊ ನಿ-
ಮ್ಮಡಿ ನಿಮಗಳ್ಕಿ ಬಿನ್ನಪಿಸಲಿನ್ನೆರವಂ ಸಡೆದಿರ್ದೆನಿನ್ನೆರಂ
ಬಡೆದೆನಿಳೇಶ ನಿಮ್ಮೊಡನೆ ಸಾಧಿಸುವೆಂ ಪರಮಾರ್ಥಸೌಖ್ಯಮಂ ॥೮೭॥

ಉಪಚಿತಸೌಖ್ಯಮೊಂದಧಿಕದುಃಖಸಮಾಗಮ ಜನ್ಮಭೂಮಿಯೊಂ-
ದಪಗತದೋಷಮೊಂದಖಿಳದೋಷಸಮನ್ವಿತಮೊಂದತಾಪಮೊಂ-
ದಪರಿಮಿತಾನುತಾಪಪರಮೊಂದದಱಿಂ ನಿಜಪಾದಕಲ್ಪಪಾ-
ದಪಪರಿಸೇವೆಗಂ ಜನಪಸಂಪದಸೇವೆಗಮಾವುದಂತರಂ ॥೮೮॥

ಎಂದು ತಱಿಸಂದು ಭರತಂ ಬಿನ್ನವಿಸೆ ತತ್ಸಭೆಯಿಸೊರ್ವನತಿತ್ವರಿತಗತಿಯಿಂ ಬಂದು ರಾಮಂಗೆ ರಾಜ್ಯಮನಿತ್ತು ದಶರಥಂ ಭರತಂಬೆರಸು ತಪೋವನಕ್ಕೆ ಪೋಪುದಂ ನಿವೇದಿಸೆ ಕೈಕೆ ವಿಕಳೆಯಾಗಿ,

ಧರೆಯಂ ರಾಮಂಗಿತ್ತಂ ।
ಗುರುವಾನಱಿಪಿಂದಮಿರ್ದೊಡೇನಕ್ಕುಂ ಕಿಂ- ॥
ಕರಭಾವಮೆಂಬ ಬಗೆಯಿಂ ।
ಭರತಂಗೊಡರಿಸಿದುದಕ್ಕುಮಿಾ ನಿರ್ವೇಗಂ ॥೮೯॥

ಅವನೀಶ್ವರರೊಡನೆ ತನೂ ।
ಭವಂ ತಪಂಬಟ್ಟೊಡಾಸೆಯಾರೆನಗೆಂದಾ ॥
ಯುವತಿ ಭಯಚಕಿತಚಿಂತಾ ।
ರ್ಣವಗರ್ತನಿಮಗ್ನೆ ಮಱಿದಳಿಮೆಯಿಕ್ಕುವುದಂ ॥೯೦॥

ತಕ್ಕಱಿದೆನಗೆ ಸಪತ್ನಿಯ ।
ರಿಕ್ಕುಂಗೂಟಿಂಗೆ ಬಯಸಿ ಪಾರ್ದಿರ್ಪ ವಿಷಾ- ॥
ದಕ್ಕೆ ಗಱಿಯಪ್ಪ ದುರ್ಯಶ ।
ಮಕ್ಕುಂ ತನಯುಂ ತಪಕ್ಕೆ ಪಕ್ಕಾಗಲೊಡಂ ॥೯೧॥

ಎಂದು ಪಲುಂಬಿ ಪಂಬಲಿಸುತ್ತುಮಾ ಸಮಯದೊಳ್,

ತನಗಿನಿಯನಿತ್ತ ಮೆಚ್ಚಂ ।
ನೆನೆದಳ್ಮಡಗಿಟ್ಟು ಮಱಿದ ಧನಮಂ ಬಡವಂ ॥
ನೆನೆವಂತೆ ಕಾಂತೆ ಚಿಂತಾ ।
ಘನಾಂಧಕಾರಪ್ರದೀಪರೂಪೋದ್ಗಮಮಂ ॥೯೨॥

ಅಂತು ನೆನೆದು ಮನದೊಳ್ಗುಡಿಗಟ್ಟಿ ಭರತನಂ ರಾಜ್ಯಮೋಹಲೋಹನಿಗಳದೊಳ್ತೊಡರ್ಚಲೆಂದೊಡರ್ಚಿ,

ಕನಕವಿಭೂಷಣಪ್ರಭೆ ತನುಪ್ರಭೆಯಂ ತನಿಗೊರ್ವುಗೊರ್ವೆ ಮೋ-
ಹನಮನೊಡರ್ಚಲೆಂದು ಗುಣಹಾನಿಗೆ ಬೆಚ್ಚದೆ ಧರ್ಮಹಾನಿಯಂ
ನೆನೆಯದೆ ಪಾತ್ರಸೇವೆ ವೃಥೆಯಾದುದೆಸಲ್ಮಳಿನಾಂತರಂಗೆ ಟ-
ಕ್ಕಿನ ಸೊದರಂತೆ ಕೈಕೆ ಪುಗುತಂದಳಿಳಾಧಿಪರಮ್ಯಹರ್ಮ್ಯಮಂ ॥೯೩॥

ಉದ್ವೇಗಭರಂ ಸಬೆಗೆ ಜ ।
ಗದ್ವಲ್ಲಭನಭಿಮತಕ್ಕೆ ವಿಘ್ನಮಪಾಯಂ ॥
ವಿದ್ವಜ್ಜನಕ್ಕೆ ಪಸುಗೆಗೆ ।
ವಿದ್ವೇಷಣವಿದ್ಯೆ ಬರ್ಪ ತೆಜದಿಂ ಬಂದಳ್ ॥೯೪॥

ಅನುಚಿತಮೆಂಬುದಂ ಬಗೆಗೆ ತಾರದೆ ದುರ್ಯಶಮಕ್ಕುಮೆಂಬುದಂ
ನೆನೆಯದೆ ಕೈಕೆ ದೇವರೆನಗೀವುದು ಬಯ್ಕೆಯ ಮೆಚ್ಚನೆಂಬುದಂ
ಮನುಕುಳದೊಳ್ತೊದಳ್ನುಡಿ ಪೊದಬ್ಗುಮೆ ಬೆಚ್ಚದೆ ಬೇಡಿಕೊಳಾತಪೋ-
ವನಗಮನಕ್ಕೆ ವಿಘ್ನಕರಮಲ್ಲಮದಂ ಮೃಗಶಾಬಲೋಚನೇ ॥೯೫॥

ಎನೆ ಮನದೆಗೊಂಡು,

ವದನಸುಧಾಂಶುಬಿಂಬದ ಕಳಂಕದ ಬಿತ್ತುಗಳಂತೆ ವಕ್ತ್ರಪ-
ದ್ಮದ ಮಧುಪಾನಮಂ ಸವಿದು ಸೊಕ್ಕಿದ ತುಂಬಿಗಳಂತೆ ನೀಳ್ದವಾ
ಸುದತಿ ಸಮಗ್ರ ನಗ್ರಜನಿಲ್ಪಬಿಗಂಜದೆ ಪಾಪಭೀರುವಾ-
ಗದೆ ಭರತಂಗೆ ರಾಜ್ಯಭರಮಂ ಕುಡವೇಟ್ಟಿ ಮಳೀಮಸೋಕ್ತಿಗಳ್ ॥೯೬॥

ದಶರಥಂ ಕೈಕೆ ಚತು ।
ರ್ದಶವರ್ಷಾವಧಿಯನವನಿಯಂ ಬೇಡೆ ಚತು- ॥
ರ್ದಶಭುವನಾವಧಿಯೆನೆ ದು ।
ರ್ಯಶಃಸ್ಫುಟಿತ್‌ಪಟಹನಾದಮೇನೊದವಿದುದೋ ॥೯೭॥

ಕನವನಿಪ ಕಾಳರಾತ್ರಿಯ ।
ದನಿಯಂತಾ ನೃಪನ ಕಿವಿಗೆ ದುಸ್ಸಹಮಾಯ್ತಾ ॥
ಬಾಲೆಯ ದನಿ ಕಿವಿಯುಗೆ ಘನ ।
ಮನಕ್ಕೆ ಪಡೆದತ್ತು ವೇದನಾಸ್ವಾದನಮಂ ॥೯೮॥

ದೋಲಾಯಮಾನಮನನ ।
ಸ್ತಾಲಾಪಂ ಗತಮನೋರಥಂ ದಶರಥನಾ ॥
ಬಾಲೆಯ ದನಿ ಕಿವಿಯುಗೆ ಘನ ।
ಮಾಲೆಯ ದನಿಗೇಳ್ದ ಹಂಸನಂತಳವಟಿದಂ ॥೯೯॥

ಎರಡಕ್ಕುಂ ನುಡಿ ಮೆಚ್ಚುಗೊಟ್ಟು ಕುಡವಂದೀ ಕೈಕೆಗಾನಿತ್ತೊಡಂ
ಧರೆಯಂ ಸ್ತ್ರೀಜಿತನಾಗಿ ಕೊಟ್ಟನವನೀಶಂ ರಾಮನಿರ್ದಂದದಿಂ
ಭರತಂಗೆಂದಪವಾದಮಕ್ಕುಮದಜಿಂದೇನೆಂಬೆನಾನೆಂದು ಮೂ-
ಗರವ್ಪೋಲ್ಮೋನದೊಳೊಂದಿ ಪಚ್ಚಬಗೆಯಿಂದುಮ್ಮಚ್ಚಮಂ ತಾಳ್ದಿದಂ ॥೧೦೦॥

ಅಂತು ದಶರಥನರನಾಥಂ ದಿವಸದವಸಾನದ ರಥಾಂಗದಂತೆ ಚಿಂತಾಕ್ರಾಂತನಾಗಿರ್ಪುದುಂ,

ಮಜ್ಜನನಿ ನೆಲನನೆನಗ ।
ಸ್ಮಜ್ಜನಕನನೆರೆದಳೆಂದು ಭರತಂ ನೊಂದಂ ॥
ಲಜ್ಜಾನತನಭಿಮಾನದ ।
ಪಜ್ಜೆಯನೇಂ ತಪ್ಪಿ ಮೆಟ್ಟಿಲಱಿಗುಮೆ ತಕ್ಕಂ ॥೧೦೧॥

ಇಷ್ಟಮೆನಗಲ್ತು ಪತಿಗಮ ।
ನಿಷ್ಟಂ ಭಾವಿಸಿದಳಿಲ್ಲ ತನಗಂ ದೃಷ್ಟಾ- ॥
ದೃಷ್ಟವಿರೋಧಂ ದುರ್ಣಯ ।
ಚೇಷ್ಟಿತಮಂ ಜನನಿ ಮುಗ್ಧಮತಿ ತಿಳಿದಪಳೇ ॥೧೦೨॥

ಎಂದು ಭರತಂ ವಿಷಾದಭರತಂದ್ರೀಭೂತನಾಗಿರ್ಪುದುಂ,

ನುಡಿದಳನಿಷ್ಟಮಂ ನುಡಿದಳನ್ನೆಯಮಂ ಪತಿಗಂ ವಿರುದ್ಧಮಂ
ನುಡಿದಳಸೇವ್ಯಮಂ ನುಡಿದಳನ್ವಯರಾಜ್ಯವಿನಾಶಹೇತುವಂ
ನುಡಿದಳೆನುತ್ತುಮಳ್ಕದೆ ನರೇಂದ್ರಸಭಾಜನಮಂದು ಕೈಕೆಯಂ
ನುಡಿದುದು ಮೆಚ್ಚಿದಂದದೊಳೆ ದೋಷಮೆ ದುರ್ಬಳಮಾಗದಿರ್ಕುಮೇ ॥೧೦೩॥

ಮನದಱಿಪಿಲ್ಲದಂಗನೆಯರೊರ್ವರುಮಿಲ್ಲೆನೆ ಕೈಕೆ ಬೇಡಿ ಮೇ-
ದಿನಿಯನದೇಕೆ ಮಾಡಿದಳೊ ಮುಗ್ಧೆ ಸಹೋದರರೊಳ್ವಿಭೇದಮಂ
ತನಗಪರಾಧಮಂ ದಶರಥಂಗೆ ವಿಷಾದಮನೀಗಳಾತ್ಮನಂ-
ದನನ ಮನಕ್ಕೆ ಖೇದಮನಿದೊಂದುಚಿತಾಚರಣಪ್ರಮಾದಮಂ ॥೧೦೪॥

ಇತರರಳವಲ್ಲದಪಾರಾ ।
ಜಿತಾಸುತಂಗಲ್ಲದೇಕೆ ದೇವಿ ಧರಿತ್ರೀ- ॥
ಪತಿಯಂ ವಸುಮತಿಯಂ ಜಡ ।
ಮತಿ ಬೇಡಿದಳೆಂದು ಕೆಲಬರೇಳಿಸಿ ನುಡಿದರ್ ॥೧೦೫॥

ಕೀರ್ತಿಸಿ ಧರೆ ತಲೆಗರೆವರೆ ।
ಮಾರ್ತಲೆ ರಾಘವನಮೋಘಶರಮುಂ ವಜ್ರಾ- ॥
ವರ್ತಮುಮಲ್ಲದೆ ರಕ್ಷಿಸ ।
ಲಾರ್ತಪುವೇ ನೆಲನನುೞಿದರಂಬುಂ ಬಿಲ್ಲುಂ ॥೧೦೬॥

ಗುಣಹಾನಿಗೆ ಬೆರ್ಚದೆ ಧಾ ।
ರಿಣಿಯಂ ಪ್ರಣಯದಿನಿಳೇಶನಿತ್ತೊಡಮೇಂ ಲ- ॥

ಕ್ಷ್ಮಣನೀಯಲೀಯನೆಂಬುದ ।
ನೆನೆಸಲೆ ಜಡಮತಿಗಳಾಗದಿರ್ಪರೆ ಪೆಂಡಿರ್ ॥೧೦೭॥

ಸುತಮೋಹದಿನೀ ವಧು ಪತಿ ।
ಹಿತಮಂ ಭಾವಿಸಿದಳಿಲ್ಲ ತನಗಮಣಂ ದು- ॥
ರ್ಗತಿಹೇತುವನತಿಮೋಹಂ ।
ಗತಿಗೆಡಿಸಿತ್ತೆಂಬ ನುಡಿಯದೇಂ ತಪ್ಪುಗುಮೇ ॥೧೦೮॥

ಮೋಘಮನಖಿಳಪರಿಗ್ರಹ ।
ದಾಘಮನೀ ಕೈಕೆ ಬೇಡೆ ಧರೆಯಂ ತೃಣದಿಂ ॥
ಲಾಘವಮೆನೆ ಬಗೆದೀಗುಂ ।
ರಾಘವನೌದಾರ್ಯತುಂಗನೀಯದುದುಂಟೇ ॥೧೦೯॥

ಭರತಂ ಲಜ್ಜಾನತಂ ತಾಯ್ವಿಕಳೆ ದಶರಥಂ ವಿಹ್ವಲಂ ಲಕ್ಷ್ಮಣಂ ಕೋ-
ಪರಸಾವೇಶಂ ಸಭಾಮಂಡಳಮಸಕೃದಸದ್ವಾಕ್ಯಮುಕ್ರೋಷ್ಟಮಂತಃ-
ಪುರಮಂತಶ್ಯೂನ್ಯಮಿಂತಿರ್ಪುದುಮುಪಚಿತಕಾರುಣ್ಯದೃಷ್ಟಿ ಪ್ರಭಾ ನಿ-
ರ್ಭರಪೂರಂ ಪಾರಿಜಾತಂ ಕಡಲ ನಡುವೆ ಕೈವಂದವೋಲ್ ರಾಮನಿರ್ದಂ ॥೧೧೦॥

ತಂದೆಯ ಸನ್ನಿ ನಿಲ್ವುದು ಮನೋರಥಮಪ್ಪುದು ತಾಯ್ಗೆ ರಾಜ್ಯದೊ-
ಳ್ನಿಂದಪನೆನ್ನ ತಮ್ಮನೊಸೆದಿತ್ತು ಕೃತಾರ್ಥನೆನಪ್ಪೆನೆನ್ನ ಸೈ-
ಪಿಂ ದೊರೆಕೊಂಡುದೀ ಪರಮಲಾಭಮೆನುತ್ತುಮುದಾತ್ತ ಚಿತ್ತನಾ-
ನಂದಮನಪ್ಪುಕೆಯ್ದು ಪುಳಕೋದ್ಗಮಮಂ ತಳೆದಂ ಹಳಾಯುಧಂ ॥೧೧೧॥

ಮಗನೆನಿಪಂಗೆ ಮಾತೃಪಿತೃಭಕ್ತಿಯೆ ಕೃತ್ಯಮಿಹತ್ರೆಗಂ ಪರ-
ತ್ರೆಗಮುಪಕಾರಿ ಬೇಜಿಪೆ ಪಜಿತಾವುದೊ ಚಾರುಚರಿತ್ರಮೆಂದು ಕೀ-
ರ್ತಿಗೆ ದೆಸೆ ಸಾಲದೆಂಬಿನೆಗಮರ್ಣವಮೇಖಳೆಯಂ ಧರಿತ್ರಿಯಂ
ಬಗೆಯನೆ ಬಾಜಿತ್ತಿಗೆಯ್ವನೆ ಜರತ್ತೃಣಲಾಘವಮೆಂದು ರಾಘವಂ ॥೧೧೨॥

ಅಸದನುಶಾಸನಂ ಸದವನಂ ನೃಪಲಕ್ಷಣಮೊಂದು ಬಾಹುಸಾ-
ಹಸಗುಣಮೊಂದು ದಾನಗುಣಮಾಯೆರಡುಂ ನಿಮಿರ್ವಂತು ಪೋಗಿ ಸಾ-
ಧಿಸುವೆನರಾತಿಮಂಡಳಮನೆನ್ನಜಂಗನಗಮ್ಮನಿತ್ತುಮಂ
ವಸುಧೆಯನೀವೆನೆಂದು ಮನದೊಳ್ಬಗೆಜಿಸಂದನುದಾತ್ತರಾಘವಂ ॥೧೧೩॥

ಅಂತು ನಿಶ್ಚೈಸಿ ಕೈಕೆಯ ಮುಖಕಮಳವಿಲೋಕನಂ ಗೈದು ಮುಕುಳಿತಕರಕಮಳನುಂ ವಿಕಸಿಹೃತ್ಕಮಳನುಮಾಗಿ,

ಪುಸಿ ಪೊಲಸಲ್ತು ನಾಲಗೆಗೆ ಪಂದೆತನಂ ಮೊಱೆಯಲ್ತು ಕೈಯ ಕೂ-
ರಸಿಗೆ ಕುಳಕ್ರಮಂ ರಘುಕಳಕ್ಕಿದು ದೇವಿಯರ್ಗೆನ್ನ ದೂಸಱಿಂ
ಪುಸಿನುಡಿಯಂ ಮದೀಯಜನಕಂ ನುಡಿದಂದು ಜನಾಪವಾದಮೆ-
ಣ್ದೆಸೆಗಮನರ್ಗಳಂ ಪಡೆಗುಮಾನದನೇಳಿಸೆ ದೈನ್ಯಮಾಗದೇ ॥೧೧೪॥

ಧರೆಯಂ ತಂದೆಯ ಸನ್ನಿಗಿತ್ತು ಧರೆಯಂ ಕೈಕೊಂಡೊಡೆನ್ನೊಳ್ಪು ಬೀ-
ಸರಮಕ್ಕುಂ ಬಗೆ ಕೊಡದಂದು ನಿಮಗಕ್ಕುಂ ಪ್ರಾರ್ಥನಾಭಂಗಮೀ-
ಯೆರಡುಂ ದುರ್ನಯಮೆನ್ನ ಕೀರ್ತಿಗೆ ಕಲುಂಬಂ ಮಾಡುಗುಂ ರಾಜ್ಯಮಂ
ಭರತಂಗಟ್ಟಿಱಿಸೊಳಿತ್ತೆ ನೆನ್ನ ನುಡಿಯಂ ನೀನಿಂತು ಸಂಬಂಬಿಕೇ ॥೧೧೫॥

ಎನಗೆ ಬೆಸಸಿದೊಡೆ ಸಾಲದೆ ।
ಜನನಿಯರೀ ಧರೆಯನೆನ್ನ ತಮ್ಮಂಗಾನೀ- ॥
ಯೆನೆ ಬೇಡವೇಟ್ಟುದೇ ಮ ।
ಜ್ಜನಕನನಿಲ್ಲಿವರಮಿಂತಿದಾವುದು ಗಹನಂ ॥೧೧೬॥

ಎಂದು ತಾಯ ಬಯಕೆಯಂ ತೀರ್ಚಿ,

ಜನಕಂ ರಾಜ್ಯಮನೀಯೆ ರಾಮನ ಮುಖಂ ಹರ್ಷಕ್ಕೆ ಪಕ್ಕಾದುದಿ-
ಲ್ಲನುಜಂಗಯ್ಯನ ನನ್ನಿಯಂ ಸಲಿಸಲೆಂದೀವಲ್ಲಿ ಹರ್ಷಕ್ಕೆ ತಾ-
ಯ್ವನೆ ತಾನಾದುದಿದಾವುದಚ್ಚರಿಯೊ ಪೇೞೀವಲ್ಲಿ ಸತ್ಪಾದ್ರದೊ-
ಳ್ಧನಮಂ ಪೋ ನಲಿವಂದದಿಂ ನಲಿವನೇ ಧನ್ಯಂ ಧನಪ್ರಾಪ್ತಿಯೊಳ್ ॥೧೧೭॥

ಎಂದು ತದನಂತರಮುದಾತ್ತ ರಾಘವಂ ತಂದೆಯ ಮುಖಾರವಿಂದಮಂ ನೋಡಿ,

ಎಡೆಗುಡದಿರ್ದೊಡಂ ಗಗನಮಂಡಳಮುರ್ವರೆ ತಾಳದಿರ್ದೊಡಂ
ಮಿಡುಕದೆ ಗಾಳಿ ಮೆಯ್ಗರೆದೊಡಂ ಮೞೆಗಲ್ಮೞೆಗಾಲದಂದವಣಂ
ತದೆದೊಡಮಗ್ನಿ ತೋಱದೊಡಮುಷ್ಣತೆಯಂ ರಘುವಂಶಜರ್ತೊದ-
ಳ್ನುಡಿದೊಡಮಾಪವಕ್ಕೆ ಸೆಡೆದಿರ್ದೊಡಮೆಂತು ಜಗಕ್ಕೆ ಜೀವನಂ ॥೧೧೮॥

ದೇವರೆನಗಿತ್ತೊಡಂ ವಸು ।
ಧಾವಳಯಮನಾಳ್ವರೆನ್ನ ತಮ್ಮಂದಿರೆ ಚಿಂ- ॥
ತಾವಿಷಯಮೇಕೆ ಭರತಂ ।
ಗೀವುದು ವಸುಮತಿಯನೆಮ್ಮೊಳೆಡೆಗಟ್ಟುಂಟೇ ॥೧೧೯॥

ಭರತಂ ತಪಕ್ಕೆ ನಡೆಗುಂ ।
ಧರೆಯೊಳ್ನಿಲಿಸದೊಡೆ ಸುತನಗಲ್ಕೆಯೊಳಕ್ಕುಂ ॥

ಮರಣಂ ಜನನಿಗೆ ನಿಮಗಂ ।
ದೊರೆಕೊಳ್ಗುಮದೃಷ್ಟ ಬಾಧೆವೆರಸಪವಾದಂ ॥೧೨೦॥

ಪ್ರಾಪ್ತಿಯನಸುಕಱಿಯಲುಮ ।
ಪ್ರಾಪ್ತಿಯನಾಗಿಸಲುಮಾಗದವಱಿಂ ದೋಷಾ- ॥
ವಾಪ್ತಿಯನೇಂ ನಿಮ್ಮನ್ನರ್ ।
ಸುಪ್ತರವೊಲ್ಮೋಹಮೂರ್ಛೆಯಂ ತಾಳ್ವವರೇ ॥೧೨೧॥

ಎಂತುಟು ಶುಭಾಶುಭೋದಯ ।
ಮಂತುಟನನುಭವಿಪರಾರುಮಿದನಱಿಯುತ್ತುಂ ॥
ಚಿಂತಾಜ್ವರಮಂ ಪರಿಯರ್ ।
ಸ್ವಾಂತದೊಳಿರಿಸುವುದೆ ದೇವ ಜಡಮತಿಗಳವೋಲ್ ॥೧೨೨॥

ಪಡೆಮಾತೇಂ ಸುತಮೋಹದಿಂ ದಶರಥಂ ಮಾತಾಡಿದ ತಪ್ಪನೆಂ-
ದೊಡೆ ದೇವರ್ಗಪವಾದಮಕ್ಕುಮೆನಗಂ ರಾಮಂ ಗಡಂ ಕೇಳ್ವುಮಾ-
ನುಡಿಯಂ ರಾಜ್ಯಮನಾಸೆಗೆಯ್ವನೆನೆ ದೈನ್ಯಂ ಬಕ್ಕುಮಿನ್ನಾಸೆಗೆ-
ಯ್ವೊಡೆ ನಿಮ್ಮಾಜ್ಞೆಗೆ ತಪ್ಪಿದೆಂ ಸಲಿಸಿಮೊರ್ಮಿಂಗೆನ್ನ ವಾಗ್ವೃತ್ತಿಯಂ ॥೧೨೩॥

ಪದಿನಾಲ್ಕುಂ ವರ್ಷಮಂ ತಾಯ್ತನಯನ ತಪಮಂ ಮಾಣಿಸಲ್ ರಾಜ್ಯಮಂ ಬೇ-
ಡಿದಳೊಳ್ಪಂ ಮಾಡಿದಳ್ಳೋದರವಿರಹಿತಮೇಬಾಳ್ಕೆ ಸಾಮ್ರಾಜ್ಯಸಂಪ-
ತ್ಪದಮಸ್ಮದ್ಬಾಹುವೀಯಪ್ರಕಟನಮೊಲವಿಂದನ್ನೆಗಂ ದಿಗ್ಜಯೋದ್ಯೋ-
ಗದನೀಗಳ್ಪೋಗಿ ಬರ್ಪೆಂ ಭರತನನೊಸಲೊಳ್ಕಿಲ್ಕೆ ಸಾಮ್ರಾಜ್ಯಪಟ್ಟಂ ॥೧೨೪॥

ಎಂದು ಬಿನ್ನವಿಸಿದ ರಾಘವನವೋಘವಾಕ್ಯಮಾಣಿಕ್ಯ ಕಿರಣದಿನಪಸಾರಿತ ಮೋಹಾಂಧಕಾರನಾಗಿ,

ಪರಮಶ್ರೀವಲ್ಲಭಂಗೀ ಚರಮತನುಗಿದೇವಾಳ್ಕೆ ಸಮ್ರಾಪ ರಾಜ್ಯಂ
ಪರಮಾಣುಪ್ರಾಯಮೆಂದಾ ತನಯನ ವಿನಯಕ್ಕಂ ನಯಕ್ಕಂ ಗುಣಕ್ಕಂ
ಚರಿತಕ್ಕಂ ಬೆಕ್ಕಸಂಬಟ್ಟಧಿಪತಿ ತಲೆಯಂ ತೂಗಿದಂ ಸೂಸುವನ್ನಂ
ಸುರಚಾಪಶ್ರೇಣಿಯಂ ಭಾಸುರಮಣಿಗಣ ನಾನಾಂಶುಕೂಟಂ ಕಿರೀಟಂ ॥೧೨೫॥

ಆ ಸಮಯದೊಳ್ಭರತಂ ದಶರಥಂಗೆ ಮುಕುಳಿತಾಂಜಲಿಪುಟನಿಂತೆಂದಂ :

ಜ್ಯಾಯನ ರಾಜ್ಯಮನಯ್ಯ ಕ ।
ನೀಯನಪೇಕ್ಷಿಸುವುದುಚಿತಮಲ್ತು ತಪೋರಾ- ॥

ಜ್ಯಾಯತ್ತಮೆನ್ನ ಚಿತ್ತಂ ।
ನ್ಯಾಯಾರ್ಜಿತಮಲ್ಲಮೆನಿಪ ಧನಮೇಭಂಡಂ ॥೧೨೬॥

ಹೇಯಮನಱಿದುಂ ರಾಜ್ಯಮ ।
ನೀಯಲಪೇಕ್ಷಿಸುವಿರೆನಗೆ ನೀವೊಲ್ಲದುದಂ ॥
ಶ್ರೇಯಸ್ಕರಮಲ್ಲದುದುಂ ।
ಹೇಯಮುಪಾದೇಯಮೆನಗದೆಂತಾದಪುದೋ ॥೧೨೭॥

ಎನ್ನೆವರಂ ವೈರಾಗ್ಯಂ ।
ತನ್ನೊಳ್ತಲೆದೋಱದನ್ನೆವರಮೊಲವಕ್ಕುಂ ॥
ತನ್ನಂ ತಾನಱಿದ ಬೞಿ ।
ಕ್ಕೆನ್ನಂಗಂ ವಿಷಯಸುಖದೊಳೊಲವಾದಪುದೇ ॥೧೨೮॥

ಎನೆ ದಶರಥಂ ಭರತನ ಪರಿಚ್ಛೇದಮಂ ಮನದೊಳ್ಮೆಚ್ಚಿ, ತನಯ, ನಿನಗಿದನ್ನೆವರಂ ಸಮಯಮಲ್ತು,

ಚರಮಪುರುಷಾರ್ಥಮಿರ್ದುದು ।
ಚರಮದೊಳನ್ನೆವರಮುೞಿದ ಪುರುಷಾರ್ಥಮೊಳಾ- ॥
ಚರಿಸುವುದು ತಕ್ಕುದದಱಿಂ ।
ಪರಿವಿಡಿಯಂ ತಪ್ಪಲಾರ್ಗಮೇಂ ಬಂದಪುದೇ ॥೧೨೯॥

ಅದಱಿಂ ನಿನಗೆ ನಿಜಾಗ್ರಜನ ವಚನಮೆ ವಿಧೇಯಮೆನೆ ಮಱುವಾತುಗುಡಲಱಿಯದೆ ಭರತನಿರೆ ರಾಘವನಿಂತೆಂದಂ :

ನನ್ನಿಗೆ ಬನ್ನಮಾದೊಡಯಶಂ ಪಿರಿದಪ್ಪುದು ತಂದೆಗೆಂಬಿದಂ
ನಿನ್ನ ವಿಯೋಗದಿಂ ಜನನಿಗಪ್ಪುದು ಜೀವವಿಯೋಗಮೆಂಬಿದಂ
ನಿನ್ನ ನೆಗೞ್ತೆಗಂ ಮಹಿಮೆಗಂ ಪಿತೃವಾಕ್ಯಮೆ ಕೃತ್ಯಮೆಂಬಿದಂ
ನಿನ್ನಲೆ ನೀಂ ವಿಚಾರಿಸುವುದೇಳಿಸಲಪ್ಪುದಿದಾಗದೆಂಬಿದಂ ॥೧೩೦॥

ಕ್ರಮಪರಿಪಾಳನಾರ್ಥಮೆನಗಿತ್ತನಿಳಾಧಿಪನಿತ್ತನೆನ್ನ ರಾ-
ಜ್ಯಮನಧಿರಾಜ ಶೀಲಪರಿಪಾಳನೆಗಾಂ ನಿನಗಿಟ್ಟೆನಿಂದದ-
ಕ್ರಮಮಣಮಲ್ತು ನೀಂ ತಳೆವುದೊರ್ಮನದಿಂ ಯುವರಾಜ ರಾಜ್ಯಭಾ-
ರಮನಧಿರಾಜವಾಕ್ಯಮೆನಗಂ ನಿನಗಂ ಕರಣೀಯಮಲ್ಲವೇ ॥೧೩೧॥

ಎಂದು ರಾಮನನುಜನಂ ರಾಜ್ಯದೊಳ್ನಿಲ್ವಂತೆಂತಾನುಮೊಡಂಬಡಿಸೆ ವಿಸ್ಮಯಂಬಟ್ಟು,

ಏಮೊರೆಯರ್ಮಹಾಪುರುಷರಾದ್ಯರಿಂ ಪಿಡಿದೊರ್ವರೊಳ್
ಕಾದಿದರೋಡಿದರ್ಮಡಿದರಲ್ಲದೆ ತಂದೆಯ ನನ್ನಿಗಿತ್ತರಾ-
ರ್ಮೇದಿನಿಯಂ ಜರತ್ತೃಣಮನೀವವೊಲೆಂದು ಕಡಂಗಿ ಬಣ್ಣಿಸಿ-
ತ್ತಾದರದಿಂ ಮಹೀಭುಜಸಭಾವಳಯಂ ಬಳಭದ್ರರಾಮನಂ ॥೧೩೨॥

ಉರ್ವೀನಾಥರನೇಕರುಂ ಮಡಗಿ ಭಂಡಾರಂಗಳಂ ಲೋಭದಿಂ
ಪೆರ್ವಾವಾಗಿ ಪಿಶಾಚರಾಗಿ ಪಲಕಾಲಂ ಕಾದುಕೊಂಡಿರ್ದರಾ-
ರುರ್ವೀಚಕ್ರಮನಿಂತು ಕೊಟ್ಟರನುಂಜಗೆಂದಾ ಸಭಾವಿಷ್ಟರೋ-
ರೊರ್ವರ್ಬಣ್ಣಿಸಿದರ್ಪರಾರ್ಥಗುಣಕಲ್ಪಾರಾಮನಂ ರಾಮನಂ ॥೧೩೩॥

ಕಾಗಿಣೆಗೆ ಮರಂ ಬೀೞ ।
ಲ್ಪೋಗಿರ್ಕುಂ ಕಡಲ ಕಡೆವರಂ ನಿಮಿರ್ದ ಮಹೀ- ॥
ಬಾಗಮನನುಜಂಗಿತ್ತಂ ।
ಜಾಗಿಗಳಾರ್ ಸೀರಪಾಣಿಯೊರೆಗಂ ದೊರೆಗಂ ॥೧೩೪॥

ಎಱಗುವುದೂರ್ಧ್ವಜ್ವಳನಮೆ ।
ತೆಱನೆನಿಸಿದ ದೀಪವರ್ತಿ ನಿಧಿಗಾ ನಿಧಿಯಂ ॥
ತೊಱೆದಂ ದಲೆಂದೊಡಾರ್ಪಿನ ।
ತಱಿಸಲವಂ ಕಂಡನೇಕಕುಂಡಲನೂಲವಿಂ ॥೧೩೫॥

ವಸುಮತಿಯಂ ಮೃತ್ಪಿಂಡ ।
ಕ್ಕೆ ಸಮಂಗಂಡಾರೊ ಕೊಟ್ಟು ತಂದೆಯ ಪೞಿಯಂ ॥
ಮಸುಳಿಸಿ ಹಲಿಯವೊಲೆಂಟು ।
ದೆಸೆವರೆಗಂ ವಿಶದಕೀರ್ತಿಯಂ ಪ್ರಕಟಿಸಿದರ್ ॥೧೩೬॥

ಏನಾನುಮನಿತ್ತು ಕೆಲ ।
ರ್ದಾನಗುಣಕ್ಕುಂತೆ ಬೆಸೆವರಯ್ಯನ ಸತ್ಯ- ॥
ಕ್ಕೇನಯ್ಯ ರಘುಜನಂತಂ ।
ಭೋಸಿಧಿವಳಯಿತಮನವನಿವಳಯಮನಿತ್ತಂ ॥೧೩೭॥

ಎಂದು ಪೊಗೞ್ವ ಸಭಾಜನಸ್ತವಕ್ಕಂ ಭರತಂ ಕ್ರಮಂದಪ್ಪಿ
ಸಾಕೇತಸಾಮ್ರಾಜ್ಯಮನೊಡಂಬಟ್ಟುದಕ್ಕಂ ಕಟ್ಟುಗಡೆದು,

ಅಡೆವೊತ್ತೆ ಕೋಪಶಿಖಿ ಕ ।
ಣ್ಕಡಿಯಂ ಕೆಂಡಮುಮನುಗುೞೆ ಪುರ್ವುರ್ಪಿಸಿ ಮೇ- ॥

ಗಡರ್ವ ಪೊಗೆಯಂತೆ ಕೃಷ್ಣಂ ।
ಕಡೆಗಾಲದೊಳೊಗೆದ ಧೂಮಕೇತುವೊಲಿರ್ದಂ ॥೧೩೮॥

ಅಂತು ಕೋಪರಸವಶಗತನಾಗಿ,

ಕಾರಾಗಾರಮೊಳಿಂಪ್ರನಂ ಸೆಱೆಯಿಡಲ್ಗೋತ್ರಾದ್ರಿಯಂ ಜಾಳಿಸಲ್
ತಾರಾಮಂಡಳಮಂ ನೆಲಕ್ಕೆ ನೆಲನಂ ವ್ಯೋಮಕ್ಕೆ ಪಕ್ಕಾಗಿಸಲ್
ಪಾರಾವಾರದ ನೀರನೀಂಟಲಖಿಳಾಶಾದಂತಿದಂತಂಗಳಂ
ಬೇರಿಂದಂ ಕೀಳಲಂತದಂ ಬಗೆದನೋ ರಕ್ತೇಕ್ಷಣಂ ಲಕ್ಷ್ಮಣಂ ॥೧೩೯॥

ಸೌಮಿತ್ರಿ ವಿಳಯನೀಳಮ ।
ಹಾಮೇಘಸ್ಕಂಧನಿಕಟವರ್ತಿತ ವಿದ್ಯು- ॥
ದ್ದಾಮಮಿದೆನೆ ದಂತಾಂಶು ।
ಸ್ತೋಮಂ ಪೊಳೆದುಳ್ಕೆ ಬೆಟ್ಟವೆಟ್ಟನೆ ನುಡಿದಂ ॥೧೪೦॥

ಭರತಾವನಿಯಂ ಕೊಟ್ಟಂ ।
ಭರತಂಗೆ ರಘುಪ್ರವೀರನಯ್ಯನ ನುಡಿಯಂ ॥
ಪರಿಪಾಲಿಸಲೆಂಗುಮೆ ಪೇ ।
ಟ್ಧರೆಯಂ ಬೆಳ್ಮಾಡಿಕೊಂಡರೆಂಗುಂ ಲೋಕಂ ॥೧೪೧॥

ಕ್ರಮಮನತಿಕ್ರಮಿಸಿ ಪರಾ ।
ಕ್ರಮಮಿಲ್ಲೆಂದಿಟಿಕೆಗೆಯ್ದು ಭರತಂಗಿತ್ತಂ ॥
ದಮಿತಾರಿ ದಶರಥಂ ರಾ ।
ಜ್ಯಮನೆಂಗುಂ ರಾಮನಿತ್ತನೆಂಗುಮೆ ಲೋಕಂ ॥೧೪೨॥

ನಮಗಕ್ಕುಂ ನಿಸ್ಸಹಾಯಂ ಬಹುವಿಧದಿನಪಾಯಂ ಸುಖೋಪಾಯಮಕ್ಕುಂ
ತಮಗೇಕಾಯತ್ತಮಕ್ಕುಂ ಪ್ರಜೆಪರಿಜನಮೆಂದಬ್ಬೆ ಕೌಟಿಲ್ಯದಿಂ ರಾ-
ಜ್ಯಮನೀರೇಟಬಿದ್ದಮಂ ಬೇಡಿದಳಜಿಯದೆ ನೀವಿತ್ತೊಡಂ ಮಿಕ್ಕರಂ ಮ-
ಮಟ್ಟಮಿಡಲ್ಪೇಟೀಗುಮೇ ರಾಘವ ಕೊಡೆನೆಟಿಲೊಳ್ಲಾಗರಾವರ್ತಚಾಪಂ ॥೧೪೩॥

ಎಂದು ಪೊಡೆವ ಸಿಡಲಂತೆ ಮಣಿಮಯಾಸನದಿನೆಟ್ಟು,

ರೋಮಾಂಚದೊಡನೆ ಸಭೆಗೆ ಮ ।
ನೋಮುದಮಪ್ಪಂತೆ ನುಡಿಯೆ ಲಕ್ಷ್ಮಣದೇವಂ ॥
ರಾಮಂ ಪರಾರ್ಥಚರಿತ ।
ಪ್ರೇಮಂ ಕಣ್ಣರ್ವಿ ಜರ್ವಿ ನೋಡಿದನಾಗಳ್ ॥೧೪೪॥

ಪಿರಿಯನ ಕಣ್ಣಾರ್ವಿಂಗೋ ।
ಸರಿಸಿಮುದಲ್ಲದೊಡೆ ಶಾರ್ಙ್ಗಪಾಣಿಯುಂ ಮುನಿಸುಂ ॥
ಹರನುರಿಗಣ್ಣುಂ ಲೋಕಮ ।
ನರಗಳಿಗೆಗೆ ಬೂದಿಮಾಟ್ಪುದೊಂದಚ್ಚರಿಯೇ ॥೧೪೫॥

ಪರಿಹರಿಸಿದನೊದವಿದ ಕೋ ।
ಪರಸಾವೇಶಮನುಪೇಂದ್ರನಣ್ಣನ ಚಿತ್ತಂ ॥
ಕೊರಗಿದಪುದೆಂದುದಾತ್ತಂ ।
ಪಿರಯಂಗಿಜ್ಛಾವಿಘಾತಮಂ ಮಾಡುವನೇ ॥೧೪೬॥

ದಾರುಣಭಾವಮನುಪಸಂ ।
ಹಾರಿಸಿ ಕಣ್ಣಱಿದು ಮಟ್ಟಮಣ್ಣನ ಕೆಲದೊಳ್ ॥
ವಾರಿಜನಾಭಂ ಗರುಡೋ ।
ದ್ಗಾರಿ ಹರಿನ್ಮಣಿಯ ಕೆಲದ ಫಣಿಯವೊಲಿರ್ದಂ ॥೧೪೭॥

ಅನಂತರಂ ದಶರಥಂಗೆ ರಾಮನಿಂತೆಂದ :

ಇರವೇಟ್ಟುಂ ಪೆಱಪಿಂಗಿ ಪಾಂಗಱಿಯದಾವಿಲ್ಲಿರ್ಪುದುಂ ಪತ್ತುಗುಂ
ಪರಿವಾರಂ ಗುಣಹಾನಿ ನೆಟ್ಟನೆನಗಕ್ಕುಂ ಮುನ್ನಮೆನ್ನಿತ್ತುದಂ
ಭರತಂ ಪೆತ್ತುದುಮಾಳಮಕ್ಕುಮಪವಾದಾತೋದ್ಯನಾದಂ ವಸುಂ-
ಧರೆ ನಿಲ್ವನ್ನೆವರಂ ದಿಶಾಕರಟ ಕರ್ಣಾಸ್ಫಾಳನಂ ಮಾಡುಗುಂ ॥೧೪೮॥

ತಲೆಯೊಳ್ನಿನ್ನಾಜ್ಞೆಯಂ ರನ್ನದ ತಲೆದೊಡವಂ ಪೊತ್ತು ಮೆಯ್ವೆತ್ತ ಬಾಹಾ-
ಬಲದಿಂ ಬೆಂಕೊಂಡಖಂಡಪ್ರಭಮಹಿತಳಮಂ ಸಾಧಿಪೆಂ ವಿದ್ವಿಷನ್ಮಂ-
ಡಲಮಂ ಬೀಱಿಕ್ಕೊಂಡೆನೆಂದಯ್ಯನ ಚರಣಯುಗಕ್ಕರ್ಘ್ಯಪಾದ್ಯಂಗಳಂ ನಿ-
ಸ್ತುಲಮೌಳೀಶೋಣಮುಕ್ತಾಫಳರುಚಿಜಲದಿಂ ರಾಮನುದ್ದಾಮನಿತ್ತಂ ॥೧೪೯॥

ಅಂತು ವಿನಯವಿನಮಿತನಾಗಿ ಸಭಯಿನೆಟ್ಟುವೋಗೆ

ಒಡನೆ ದಶರಥನ ಕಣ್ಗ ।
ಳ್ನಡೆದುವು ಕಣ್ಣೊಡನೆ ತಡೆದು ನಿಲ್ಲದೆ ಮನಮುಂ ॥
ನಡೆದುದದಱೊಡನೆ ನಿಡುಸು ।
ಯ್ನಡೆದುದು ಸುಯ್ಯೊಡನೆ ನೃಪತಿ ಮೂರ್ಛಿತನಾದಂ ॥೧೫೦॥

ಕಡೆಘಣ್ಣಿಂ ಕರ್ಣಮೂಲಕ್ಕೊಗೆದುಗುತರೆ ಬಾಷ್ಪಾಂಬುಗಳ್ಸುಯ್ಯ ಪೊಯ್ಲಿ-
ರ್ದೆಡೆಯೊಳ್ಸಂದೇಹಮಂ ಸಂಗಳಿಸೆ ಮಿಡುಕುದಾಣಂಗಳಲ್ಲಲ್ಲಿ ಸತ್ತ್ವಂ-

ಗಿಡೆ ಧೈರ್ಯಂಗೆಟ್ಟು ಸಂಸಾರಮನುಱಿದ ಮಹಾಸತ್ತ್ವನುಂ ಮೂರ್ಛೆವೋದಂ
ಗಡ ಜನ್ಮಾರಣ್ಯದೊಳ್ಮಿಕ್ಕರನಱಿಲಿಸದೇ ಮೋಹದಾವಾಗ್ನಿದಾಹಂ ॥೧೫೧॥

ಅಂತು ದಶರಥಂ ಮೂರ್ಛಿತನಪ್ಪುದುಂ,

ಪತಿ ಪುತ್ರಂ ಪೋಗೆ ಮೂರ್ಛಾಭರಪರವಶನಾಗಿರ್ಪುದುಂ ಕೈಕೆ ಲಜ್ಜಾ-
ನದೆ ಕಾಂಚೀರತ್ನಘಂಟಾರವದೊಡನಪವಾದಪ್ರಣಾದಂ ದಿಶಾಸಂ-
ತತಿಯಂ ತಳ್ಪೊಯ್ಯೆ ತಳ್ಪೊಯ್ದೆಮೆದುಱುಗಲನೊಟ್ಟೈಸಿ ಬಾಷ್ಪಾಂಬುಧಾರಾ-
ತತಿ ಮುಕ್ತಾಹಾರಮಂ ಪೆರ್ಮೊಲೆಗೆ ಕುಡೆ ತದಾಸ್ಥಾನದಿಂದೆೞ್ದು ಪೋದಳ್ ॥೧೫೨॥

ಅನಂತರಂ,

ಅನುಜಂ ಸಭೆಯಿನಗಲ್ದ ।
ಣ್ಣನ ಬೞಿಯಂ ಸಲ್ವ ಸಮಯದೊಳ್ಬೇಗಂ ಲೋ- ॥
ಚನದ ಬೞಿ ಸಲ್ವ ಮನಮಂ ।
ತನುವಿನ ಬೞಿ ಸಲ್ವನೆಱಲನಿನಿಸಿೞಿಕೆಯ್ದಂ ॥೧೫೩॥

ಪ್ರತ್ಯಂತದೇಶ ಭೂಭೃ ।
ತ್ಪತ್ಯದನೆೞ್ಬಟ್ಟ ಪುಗಿಸಿ ಕಾಂತಾರನಗೋ- ॥
ಪತ್ಯಕಮಂ ಕೌಸಲ್ಯಾ ।
ಪತ್ಯಂಗೋಲಗಿಪೆನವರ ಹರಿವಿಷ್ಟರಮಂ ॥೧೫೪॥

ಎಂದು ಮನದೊಳೆ ಮಂತಣಮಿರ್ದು ಸಭೆಯಿನೆೞ್ದು ಪೋಪುದುಂ,

ಕ್ರಮದೊಡೆಯಂಗೆ ತಂದೆ ಧರೆಯಿಂ ಕುಡಲೆಂದಿರೆ ದೈವಯೋಗದಿಂ
ಸಮನಿಸಿದತ್ತು ಪುಣ್ಯಪುರುಷಂಗಮರಣ್ಯನಿವಾಸಮೆಂದು ಖೇ-
ದಮನೊಳಕೊಂಡು ಗದ್ಗದಗಳಂ ನತದೀನಮುಖಂ ಪ್ರಳಾಪಸಂ-
ಭ್ರಮಮುದಿತಾಶ್ರು ಶೋಕರಸಭಾಜನಮಾದುದು ತತ್ಸಭಾಜನಂ ॥೧೫೫॥

ವಿಗತದಿಗಿಭವಾಶಾದೇಶಮಸ್ತಂಗತಾರ್ಕಂ ।
ಗಗನಪರಿಧಿ ಯಾತಪ್ರಾಣವಾತಂ ಶರೀರಂ ॥
ಸೊಗಯಿಸದವೊಲಾಗಳ್ ರಾಘವಂ ಪೋಗೆ ಕಣ್ಗಂ ।
ಬಗೆಗೆ ವಿಕಳೆಯಾದತ್ತಾ ಸಭಾಚಕ್ರವಾಳಂ ॥೧೫೬॥

ಅನ್ನೆಗಮಾ ವೃತ್ತಾಂತಮೆಲ್ಲಮಂ ಸುಮಿತ್ರೆ ಕೇಳ್ದಪರಾಜಿತೆಯಲ್ಲಿಗೆ ಬಂದು,

ಎರೆದಳ್ ಗಡ ಕೈಕೆ ವಸುಂ ।
ಧರೆಯಂ ಭರತಂಗೆ ರಾಮನಿತ್ತಂ ಗಡಿದೇಂ ॥

ದೊರೆಕೊಳ್ಗುಮೊ ಕರ್ಣಪರಂ ।
ಪರೆಯಿಂ ಕೇಳ್ದದನೆ ನಿಮಗೆ ಪೇಟಲ್ಬಂದೆಂ ॥೧೫೭॥

ಎಂಬುದುಮಪರಾಜಿತೆ ಚಕಿತಚಿತ್ತೆಯಾಗಿ,

ಎರೆವನ್ನಲೆ ಕೈಕೆ ವಸುಂ ।
ಧರೆಯಂ ತೃಣಮಾಗೆ ಬಗೆದು ಕುಡುವನ್ನನೆ ಮಂ- ॥
ದರಧೈರ್ಯಂ ರಾಮಂ ನುಡಿ ।
ದೊರೆಕೊಳ್ಗುಂ ದೈವಘಟನೆಯಿಂದಾಗದುದೇಂ ॥೧೫೮॥

ಎಂದವರ್ತಮ್ಮೊಳುಮ್ಮಳಿಸಿ ನುಡಿಯುತ್ತಿರ್ಪುದುಮಂ,

ಐರಾವಣಗಜಮುಂ ಜನ ।
ವಾರಣಮೊಂದಾಗಿ ಪುಗುವವೋಲ್ಬುಗುತಂದ- ॥
ರ್ಸೀರಗದಾಹಸ್ತರ್ಬಲ ।
ನಾರಾಯಣದೇವರಂತಪುರದರಮನೆಯಂ ॥೧೫೯॥

ಅಂತರಮನೆಯಂ ಪೊಕ್ಕು ಜನನೀಯುಗದ ಪದಪಯೋಜಕ್ಕೆ ಬಲನಾರಾಯಣರ್ವಿನತರಾಗಿ ಸಮುಚಿತಾಸನದೊಳ್ಕುಳ್ಳಿರ್ದು ಲಕ್ಷ್ಮಣದೇವಂ ರಾಮದೇವನ ಪರಾರ್ಥ ಚರಿತಾರ್ಥವೃತ್ತಿಯಂ ಬಿನ್ನವಿಸೆ ಕೇಳ್ದಪರಾಜಿತಾಮದೇವಿ ಶೋಕಾನಳ ದಂದಹ್ಯಮಾನಮಾನಸೆಯಪ್ಪದುಂ,

ಅನವರಬಾಷ್ಪಜಳಸೇ ।
ಚನದಿಂದಪರಾಜಿತಾಮಹಾದೇವಿಯ ಲೋ- ॥
ಚನಪುತ್ರಿಕೆ ಬಳಸಿರ್ದುದು ।
ವನಪಾಳಿಕೆಯಂತೆ ಮೋಹಮೂರ್ಛಾಲತೆಯಂ ॥೧೬೦॥

ಬಿದಿ ಬೆದಱಟ್ಟಿದಂ ಮಗನೆ ಮುನ್ನ ತವರ್ಮನೆ ನಾಮಶೇಷಮಾ-
ದುದು ಪತಿಯುಂ ತಪಕ್ಕೆ ನಡೆದಂ ಸುತ ನೀನುಮಗಲ್ದು ಪೋದೊಡಾ-
ವುದು ಗತಿ ಜೀವಿಪಂದಮೆನಗಾವುದು ಪೊರ್ದುವೆನಾರನೆಂದು ಗ-
ದ್ಗದಪದಮುಣ್ಮೆ ತಂದಳಪರಾಜಿತೆ ಕಣ್ಗೆ ಕದುಷ್ಣವಾರಿಯಂ ॥೧೬೧॥

ವನಚರ ವನಮೃಗ ವನಖಗ ।
ವನೇಭ ವನದಹನ ವನವಿಷಾಹಿಗಳಿನಪಾ- ॥
ಯನಿವಾಸಮಪ್ಪ ವನಮಂ ।
ತನೂಭವಂ ಪುಗುವೊಡೆಂತದಂ ಸೈರಿಸುವೆಂ ॥೧೬೨॥

ಅಗ್ರಸುತನಂ ಮಗ್ರಗು ।
ಣಾಗ್ರಣಿಯಂ ರಾಮನನ್ನನಂ ದಶರಥನಂ- ॥
ತುಗ್ರಾಟವಿವುಗಿಸುವ ಮದ ।
ನಗ್ರಹ ಪೀಡಿತರನಾರುಮಂ ಕಂಡಱಿಯೆಂ ॥೧೬೩॥

ಪರಿಹರಿಸಿ ಪಾಟಿಯಂ ಪಾ ।
ಪಿ ರಾಮನಂ  ಪುಗಿಸಿ ವಿಪಿನಮಂ ನಿಜಸುತನಂ ॥
ಕರುಮಾಡಂ ಪುಗಿಸಿದಪ ।
ಳ್ಕರುಣಂಗೆಟ್ಟಾಕೆ ಕೈಕೆ ಕಲ್ಲೆರ್ದೆಯಕ್ಕುಂ ॥೧೬೪॥

ಕೊಟ್ಟೊಡೆ ಜನಕಂ ಪಾಟಿಯ ।
ಬಟ್ಟೆಯನಸಕಟಿಮು ಪಿರಿಯನಿರೆ ತಾನುಮೊಡಂ - ॥
ಬಟ್ಟಂ ಗಡ ರಾಜ್ಯಕ್ಕೆನೆ ।
ಕೆಟ್ಟಟಿಪರ್  ಭರತನನ್ನರಾರ್ಮೇದಿನಿಯೊಳ್ ॥೧೬೫॥

ಅಸಮರ್ಥಸ್ವೀಕಾರಂ ।
ಪಸುಗೆಯೆ ನಿನಗೆಂದು ಬಿಡದೆ ಶತ್ರುಘ್ನಂ ಬಾ- ॥
ರಿಸದೆ ಭರತನೊಳೊಡಂಬ ।
ಟ್ಟು ಸ್ವೈರಿಸಿರ್ಪಿರವೆ ಪೇಟಿದೇ ಕೈತವಮಂ ॥೧೬೬॥

ಅನುಕೂಲಂ ಬಿದಿ ಕೈಕೆಗಕ್ರಮದಿನಿತ್ತಂ ರಾಜ್ಯಮಂ ರಾಮದೇ-
ವನದಂ ಲಕ್ಷ್ಮಣದೇವ ಮಿಾಱುವುದುಮಣ್ಣಂಗಕ್ಕುಮುದ್ವೇಗಮೆಂ-
ದೆನಸುಂ ಮಿಾಱದೆ ಮಾಣ್ದೆ ಮಾಣದೊಡೆ ವಿದ್ವಿಷ್ಟಾಂಗನಾಗರ್ಭಪಾ-
ತನಮೇನಾಗದೆ ನೀವಿ ಜೇವೊಡೆಯೆ ನೀನೀ ಸಾಗರಾವರ್ತಮಂ ॥೧೬೭॥

ಅರಸಂ ಪಾಟಿಗೆ ತಪ್ಪೆ ಪಾವಡರ್ದರಂತುನ್ಮಾದಮಾದಂತೆ ಮೆ-
ಯ್ಮರವಟ್ಟಂತೊಡಲಿಂದುಸಿರ್ತೊಲಗಿದಂತಾ ಸನ್ನಿಪಾತ ಜ್ವರಂ
ದೊರೆಕೊಂಡಂತವಿವೇಕದಿಂದಭಿಜನಂ ವಿದ್ವಜ್ಜನಂ ಮಂಡಳೇ-
ಶ್ವರಸೇನಾಪತಿಮಂತ್ರಿಮಂಡಳಮದಂ ಮಾರ್ಕೊಳ್ಳದಂತಿರ್ಕುಮೇ ॥೧೬೮॥

ಇದು ಚಿತ್ರದ ಸಭೆ ಮರಸ ।
ರ್ಪದ ಸಭೆ ತಿರ್ಯಜ್ಮನುಷ್ಯಸಭೆ ಪೆಱತೇನ- ॥
ಲ್ಲದೊಡೆ ಪೊಱಮಡಿಸಿ ಕಳೆವುದೆ ।
ಮದೀಯನಂದನನನಭಿಜನಾನಂದನನಂ ॥೧೬೯॥

ಎಂದೞಿವ ಅೞಿಲುಮೊದವೆ ಮಗನ ಮೊಗಮಂ ನೋಡಿ,

ಕ್ರಮಮಂ ನೋಡದೆ ನಂಟರಂ ತೊಱೆಗು ನಾಡಂ ಬಿಟ್ಟು ಸಪ್ತಾಂಗರಾ-
ಜ್ಯಮನೀಡಾಡಿ ಸಪತ್ನಮಂ ನಿಲಿಸಿ ಸಿಂಹಾಸಂದಿಯೊಳ್ತಾಯ್ಗೆ ದುಃ-
ಖಮನುತ್ಪಾದಿಸಿ ಪೋಪುದಾವುದು ನಯಂ ಪಿಂತಿರ್ಪುದಿಲ್ಲೊಯ್ಯುವೆ-
ಮ್ಮುಮನೆಂದಂಬಿಕೆ ಮೆಯ್ಯನೊಕ್ಕು ವಿಗಳದ್ಬಾಷ್ಪಾಂಬುವಿಂ ತೇಂಕಿದಳ್ ॥೧೭೦॥

ಅಂತು ಶೋಕವಿಕಳೆಯಾದ ಕೌಸಲ್ಯೆಗ ಲಕ್ಷ್ಮೀಧರನಧರಕಿಸಲಯದ ಮೇಲೆ ದಂತಕಾಂತಿಲತಾಂತಮಾಲೆ ಪಸರಿಸ ಮುಕುಳಿತಕರಸರೋಜನಾಗಿ,

ಕಲಿಯುಂ ದಾನಿಯುಮಿನ್ನರಾರ್ಮನುಕುಲರ್ಮುನ್ನಾದರೆಂಬನ್ನೆಗಂ
ನೆಲನುಂ ನೇಸಱುಮುಳ್ಳಿನಂ ನಿಲಿಸಿದಂ, ತಕ್ಕೂರ್ಮೆಯಂ ಪೆರ್ಮೆಯಂ
ಕುಲವಿಸ್ತಾರಕನೇಕಕುಂಡಳನದಕ್ಕಾನಂದಮಂ ತಾಳ್ದುದಾ
ಕುಲಮಂ ತಾಳ್ದುವುದೇ ಮದಗ್ರಜನೋಳಾದೀ ಪೌರುಷಂ ಜೋದ್ಯಮೇ ॥೧೭೧॥

ಚರಮಶರೀರನೆಯ್ದುವನೆ ಬಾಧೆಯನುತ್ತಮಸತ್ತ್ವಸಾರ್ಥದೊಳ್-
ಪೊರೆವನೆ ಪುಣ್ಯಮೂರ್ತಿಗೆಡಱುಂ ದೊರೆಕೊಳ್ಗುಮೆ ಮೂಱು ಲೋಕಮುಂ
ಧುರದೊಳನಂತವೀರ್ಯರ್ನೊಳಿದಿರ್ಪುಗುಮೇ ಒಗೆದೀ ವಿಷಾದಮಂ
ಪರಿಪರಿಸಿಂ ಬಳಪ್ರಬಳನಾದೆಸಗುಮ್ಮಳಮೇವುದಂಬಿಕೇ ॥೧೭೨॥

ಕೆಲದ ಬಲದಗರಸುಮಕ್ಕಳ ।
ನಲಂಘ್ಯಬಲರಂ ತಗುಳ್ದು ಕಳೆದೊಂದೆಡೆಯೊ- ॥
ಳ್ನೆಲೆವೀಡುಮಾಡಿ ನಿಮ್ಮಂ ।
ಬಲಭದ್ರಂ ತರಿಸದಿನಿಸನಂತರಿಸುವನೇ ॥೧೭೩॥

ಪಂಬಲಿಸಲ್ಕೆ ಬೇಡ ಪೞಿತೇಂ ಭವದೀಯಮೆನಿಪ್ಪ ದಿವ್ಯಪಾ-
ದಾಂಬುಜಸೇವೆಗೆಮ್ಮಳವಿಗಗ್ಗಳಮಲ್ಲದೊಡಂ ಸಮಸ್ತ ಲೋ-
ಕಾಂಬಿಕೆ ನಿಮ್ಮೊಳಾಟಿಸುವಸಕ್ಕೆ ಸುಮಿತ್ರೆಯೆ ಸಾಲ್ವಳಗ್ರಜಂ-
ಗಾಂ ಬೆಸಕೆಯ್ವೆನಿಂ ತೊಲಗಿಸಿಂ ಮನದೊಳ್ಳಿಮಗಾದ ಖೇದಮಂ ॥೧೭೪॥

ಎನಮು ಸೌಮಿತ್ರಿ ಬಿನ್ನವಿಸಿ ಮನದೊಳವಧಾರಿಸಿ ಕೌಸಲ್ಯೆ ವಿಗತಶೋಕಶಲ್ಯೆ ನಂದನನ ಮುಖಾರವಿಂದಮಂ ನೋಡಿ,

ಸುಚರಿತೆ ಸೀತೆ ನಿನ್ನೊಡನೆ ಬರ್ಪವಳಿರ್ಪವಳಲ್ಲದಿರ್ಪುದೇ
ಸುಚಿತಮು ಪೇೞ್ ಮಿಾಕೆಯೊಡನುಯ್ವುದನಲ್ ರಘುರಾಮನಂಬಿಕಾ-

ವಚನಮನಾತ್ಮ ಚಿತ್ತದೊಳೊಡಂಬಡುವೆತ್ತದನಂತೆ ಗೆಯ್ವೆನೆಂ-
ದಚಳಿತನಾನತಂ ಪದನಖಾಂಶುಗಳಿಂ ತಳಿದಂ ಲಲಾಮಮಂ ॥೧೭೫॥

ಅಂತು ರಾಮನಪರಾಜಿತಾಮಹಾದೇವಿಯ ಸುಮಿತ್ರಾದೇವಿಯ ಪದಪಲ್ಲವಂಗಳುಮನಾಶೀರ್ವಾದಪಾರಿಜಾತಸ್ತಬಕಂಗಳುಮನುತ್ತಂಸಾವತಂಸಂ ಮಾಟ್ಟುದುಮನಂತರಂ ಲಕ್ಷ್ಮಣಂ ಮಣಿಕಿರೀಟದಿಂ ತದೀಯಪದನಖಮಯೂಖಮಂ ಕೊರ್ವಿಸೆ ಸಾರ್ವಭೌಮನಾಗೆಂದು ಪರಿಸಿ,

ಶಯನಕ್ಲೇಶದೊಳನ್ನಪಾನಗಮನಾಯಾಸಂಗಳೊಳ್ನಿನ್ನ ಸೇ-
ದೆಯುಮಂ ನೋಡದತಿಪ್ರಯತ್ನಪರಿಚರ್ಯಾರಂಭದಿಂ ಪುತ್ರ ಸೀ-
ತೆಯುಮಂ ರಾಮನುಮಂ ಸಮಾಹಿತಮನಂ ಮಾಡೆಂದು ಸಂಪ್ರೀತಿಯಿಂ
ಪ್ರಿಯದಿಂ ಪ್ರಾರ್ಥಿಸಿದಳ್ಗುಣಪ್ರಿಯೆ ಸುಮಿತ್ರಾದೇವಿ ಸೌಮಿತ್ರನಂ ॥೧೭೬॥

ಗುಣಮಂ ನೋಡದರಣ್ಯಮಂ ಪುಗಿಸಿದಳ್ ರಾಜ್ಯಾರ್ಹನಂ ಪುತ್ರಕಾ
ರಣದಿಂ ಕೈಕೆ ಸುಮಿತ್ರೆ ರಾಮನೊಡವೋಗೆಂದಟ್ಟಿದಳ್ವಾಲಿಸ-
ಲ್ಗುಣಮಂ ಲಕ್ಷ್ಮಣನಂ ಜಗಂ ಪಟೆವಿನಂ ಬಾಪ್ಪೆಂಬಿನಂ ಕೇವಳಂ
ಗುಣಹೀನರ್ಗುಣವಂತರನ್ನೆಯಮನೊಳ್ಪಂ ಮಾಟ್ಟುದಾಶ್ಚರ್ಯಮೇ ॥೧೭೭॥

ಅಂತುರಾಮಲಕ್ಷ್ಮಣರಂಬಿಕೆಯರ ಚರಣಾರವಿಂದಮಂ ಬೀಟ್ಕೊಂಡರಮನೆಯಂ ಪೊಱಮಟ್ಟು ಪಾದಮಾರ್ಗದಿಂ ವಿಪಣಿಮಾರ್ಗದೊಳಗನೆ ವೈದೇಹಿವೆರಸು ಬರ್ಪಾ ಸಮಯದೊಳ್ಪೌವರೆಗೊಂಡು ನೆರೆದು ಪರಿತಂದು ನೋಟ್ಪಿ ಪುರಜನಂಗಳಲ್ಲಲ್ಲಿ ಕೆಲರಿಂತೆದಂರ್:

ಸಂಗಡದಿಂದ ಪುರಾಂಗನೆಯರಿಕ್ಕದೆ ಸೇಸೆಯನೇಕೆ ಶಂಖನಾ-
ದಂ ಗಗನಕ್ಕೆ ಲಂಘಿಸದೆ ಮಂಗಳತೂರ್ಯನಿನಾದಮುಣ್ಮದೆ-
ತ್ತಂ ಗುಡಿ ತೋರಣಂ ತುಱುಗಿ ಕಟ್ಟದೆ ಮಂಗಳಗೀತನಾದಮುಂ
ಮಂಗಳಪಾಠಕಧ್ವನಿಯುಮಿಲ್ಲದೆ ಭೂಪರಿದೆತ್ತ ಪೋದಪರ್ ॥೧೭೮॥

ಆನೆಯ ಮೇಲೆ ಬೆಳ್ಗೊಡೆಯನೆತ್ತಿಸಿ ಚಾಮರಮಿಕ್ಕೆ ಚಾರು ಚಂ-
ದ್ರಾನನೆಯರ್ಕಳಿಕ್ಕೆಲದ ಪೆರ್ವಿಡಿಯೊಳ್ನೆಲಸಿರ್ದು ಸುತ್ತಲಂ
ದಾನಗಜಂ ಘನಾಘನದವೋಲ್ಬರೆ ಬಾರದೆ ಪಾದಮಾರ್ಗದಿಂ
ಜಾನಕಿಯುಂ ಬಳಾಚ್ಯುತರುಮೇಳಿದರಂದದಿ ಬರ್ಪುದಾವುದೋ ॥೧೭೯॥

ಪೌರಸ್ತ್ರೀನಯನಪ್ರಭಾಸಹಚರಂ ಹಾರಾಂಶು ವಿಸ್ತೀರ್ಣವ-
ಕ್ಷೋರಂಗಸ್ಥಳಮೊಳ್ ರಸಾಭಿನಯಮಂ ತೋರ್ಪನ್ನೆಗಂ ವಾಜಿಯಂ

ಧಾರಾಪಂಚಕದೊಳ್ವಿಚಿತ್ರಲಯದಿಂ ತಾಮೇಱಿಬರ್ಪೀ ಮಹಾ-
ಧೀರರ್ಕಾಲ್ನಡೆಯೊಳ್ಕೃಪಾವಸಥದಿಂ ಬರ್ಪಂದಮಾವಂದಮೋ ||೧೮೦||

ಮಂಗಳರತ್ನವೇದಿಕೆಯೊಳೋಲಗಸಾಲೆಯೊಳಿಂದುಕಾಂತ ರಾ-
ಜಾಂಗಣದೊಳ್ಗೃಹೋಪವನಧೀರ್ಘಿಕೆಯೊಳ್ನೆಗೞ್ದವಿಳಾಸಗೇ-
ಹಂಗಳೊಳಂಚೆವಿಂಡಿನೊಡನಾಡುವ ಜಾನಕಿ ಪಾದಮಾರ್ಗದಿಂ-
ದಂಗಡಿವೀದಿಯೊಳ್ಪತಿಯ ಪಿಂದನೆ ಮೃಗರದೆತ್ತ ಪೋದಪಳ್ ||೧೮೧||

ಮತ್ತಮಲ್ಲಿ ಕೆಲರ್ನಯನಿಪುಣರುಂ ಕೆಲರ್ಕಲಾಕುಶಲರುಮುದಾತ್ತ ರಾಘವನಲ್ಲದೆ ಪದಪಲ್ಲವರಾಗದಿಂ ನಿಖಿಳಪರಿಜನ ಮನೋರಾಗಮನೊದವಿಸಲುಮವಾರ್ಯವೀರ್ಯ ದಿನಯೋಧ್ಯಾಸಿಂಹಾಸನಮಂ ಪದುಳಮಿರಿಸಲುಂ ಕಿಂಚಿದುನ್ನ ಮಿತ್ರಭ್ರೂಲತಾ ಚಳದಿಂ ನಿಖಿಳ ಭೂಚಕ್ರಮನೋರಥಮಂ ಸಫಳಂ ಮಾಡಲುಂ ಭುಜಪ್ರತಾಪದಿನುದ್ವೃತ್ತ ರಾಜಮಂಡಳಮಂ ಮಸುಳಿಸಲುಂ ನಿಷ್ಕೃಪಣಕೃಪಾಣಧಾರಾಜಳಧಿಯಿಂ ಶರಣಾಗತಕುಭೃತ್ಕುಳಮನೊಳಕೊಂಡು ಕಾಯಲುಂ ನಿಖಿಳದಿಕ್ಪಾಳಮಕುಟನಿಕಟನರ್ತಿತ ನಿಜಾಜ್ಞಾಮಾತ್ರದಿಂ ವರ್ಣಾಶ್ರಮ ಚರಿತ್ರಮನ-ವಿಶ್ರಾಂತಂ ಮಾಡಲುಂ ಸದುರ್ಜಯ ವಜ್ರಾವರ್ತ ಚಾಪಟಂಕಾರ ಶರ ಮೋಕ್ಷಹೂಂಕಾರದಿಂ ಲೋಕಲುಂಟಾಕ ವಿಗ್ರಹಮದವೀರಗ್ರಹೋಚ್ಚಾಟನಮನೊದವಿಸಲುಂ ಜಗತ್ಪವಿತ್ರಚಾರು-ಚರಿತ್ರದಿಂ ಮನುಸೂತ್ರಮಂ ವಿರಚಿಸಲುಂ ಸಹಜಸಾಹಿತ್ಯಕೌಮುದೀ ಕಲಾವಿಳಾಸನದಿಂ ವಿದ್ವಜ್ಜನಮನಃ ಕುಮುದಿನಿಯನಲರ್ಚಲುಂ ಪ್ರೇಮರಸಪುಷ್ಟ ದೃಷ್ಟಿಪಾತದಿನಭಿಜನಸನಾಭಿಜ-ನಮಂ ಕೃತಾರ್ಥಂ ಮಾಡಲುಂ ಪೆಜರ್ನಜೆಯರೆಂದು ಕೈಕೆಯ ಕೈತವಕ್ಕೆ ಕನಲ್ದೊನಲ್ದು ನುಡಿವ ನುಡಿಗಳನಾಲಿಸುತ್ತುಂ ದಿವಸದವಸಾನಸಮಯದೊಳ್ ಪುರದಪರಭಾಗದರಭಟ್ಟಾರಕರ ಬಸದಿಯ ಕನಕಪ್ರಾಕಾರಮಂಪೊಕ್ಕು,

ಲಲಿತಾಕಾರಮನೀಯೆ ನಾಡೆ ನಯನಕ್ಕಾನಂದಮಂ ಮಾಡುವಂ
ಬಲಗೊಳ್ವತ್ರಿತನೂಜನಂತೆ ಬಲಗೊಂಡಂ ಪಂಕಜಶ್ರೀಯನಂ-
ಡಲೆವನ್ನಂ ನಿಜಪಾದವಿನ್ಯಸನಸೌಂದರ್ಯಂ ಬುಧಪ್ರಸ್ತುತಂ
ಬಲಭದ್ರಂ ಜಿನನಾಥದಿವ್ಯಗೃಹಮಂ ಸಾಹಿತ್ಯವಿದ್ಯಾಧರಂ ||೧೮೨||

ಇದು ಪರಮಜಿನಮಯ ಕುಮುದಿನೀಶ್ವಚ್ಚಂದ್ರ ಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ವನಪ್ರವೇಶನಿರೂಪಣ ವರ್ಣನಂ
ಷಷ್ಠಾಶ್ವಾಸಂ



# ೭. ಶರದ್ವರ್ಣನಂ

ಶ್ರೀರಮಣಂ ಬಲಗೊಂಡಖಿ ।
ಳಾರಾಧ್ಯನ ರಾಜಭವನಮಂ ತನುರುಚಿ ನೀ- ॥
ಹಾರರುಚಿರುಚಿರಕೀರ್ತಿ ।
ಶ್ರೀರಮಣಂ ಪೆಂಪುವೆತ್ತನಭಿನವಪಂಪ ॥೧॥

ಅಂತು ಜಿನಭವನಮಂ ಪೊಕ್ಕು ಮುಕುಳಿತಕರಸರೋಜಮಂ ನೊಸಲ್ಗೆದಂದು,

ಒಡಲುಮನಾತ್ಮನುಮಂ ಬೇ ।
ರ್ಪಡಿಕುಮವೋರೊಂದಱೊಡನೆ ಪೊಕ್ಕಿರ್ದುವನೇಂ॥
ಪಡೆಮಾತರಭಟ್ಟಾರಕ ।
ರಡಿದಳಿರೊಳ್ಪೊಳೆವ ನಖರುಚಿಕ್ರಕಚಂಗಳ್ ॥೨॥

ಎಂದು ದರ್ಶನಸ್ತುತಿಗೆಯ್ದು ಜಿನಭವನಮಧ್ಯರಂಗಮಂ ರಾಮಲಕ್ಷ್ಮಣ ರಳಂಕರಿಸಿರ್ಪುದುಂ,

ಭವಬದ್ಧಕ್ರೋಧದಿಂ ಸಂಧಿಸಿ ಪೆಱಗೆ ತಮಂ ಸ್ಥಾನಮಂ ಬಿಟ್ಟು ತೇಜಂ
ತವೆ ಶೋಕಂ ಚಕ್ರವಾಕಕ್ಕೊಡರಿಸೆ ದಿವಸಕ್ರೀಯನೀಡಾಡಿ ಕೈಕೊಂ-
ಡವರೋಧಸ್ತ್ರೀಯರಂ ಪದ್ಮಿನಿಯರನೆನಸುಂ ನೋಡದುತ್ತಾನಪಾದಂ
ದಿವಸೇಂದ್ರಂ ಭೀತಿಯಿಂದಂಬರಮನುಟಿದು ವಾರಾಶಿಯಂ ಪೋಗಿ ಪೊಕ್ಕಂ ॥೩॥

ಸುಗಿದು ತಮಕ್ಕೆ ಬಿಟ್ಟು ಬಿಸುಪಂ ಪರಿವಾರಮೆನಿಪ್ಪ ಜಕ್ಕವ-
ಕ್ಕಿಗಳ ವಿಯೋಗಮಂ ನೆನೆಯದಬ್ಜಿನಿಯಂ ಕಡುಗೂರ್ಪ ನಲ್ಲಳಂ
ಬಗೆಯದೆ ಮಂಡಳಾಗ್ರರುಚಿದೋಱದೆ ಭೀತಿಯನೋಡಿ ಪೋಗಿ ತೊ-
ಟ್ಟನೆ ರವಿ ಸಾರ್ದನಸ್ತಗಿರಿಯಂ ಕ್ಷಣಿಕಂ ಸ್ಥಿರಸಾರನಪ್ಪನೇ ॥೪॥

ದಿನಪಂ ತನ್ನನಗಲ್ದು ಪೋಗೆ ಹರಿದಿಕ್ಕಾಂತಾನನಂ ಕಂದಿದ-
ತ್ತೆನೆ ಮರ್ವುರ್ವಿದುದಾತನೊಳ್ನೆರೆಯೆ ರಾಗಂ ಪಶ್ಚಿಮಾಶಾವಿಳಾ-
ಸಿನಿಗಾದತ್ತೆನೆ ಸಂಜೆ ರಂಜಿಸಿದುದೇನಾಶ್ಚರ್ಯಮೇ ತಾಳ್ದರಾ-
ರಿನಿಯಂ ತನ್ನನಗಲ್ದೊಡಂ ನೆರೆದೊಡಂ ನೀರಾಗಮಂ ರಾಗಮಂ ॥೫॥

ವಿರಹವ್ಯಾಕುಳಮಾಗೆ ಚಕ್ರಮಿಥುನಂ ಸಂಕೋಚಮಂ ತಾಳ್ದೆ ತಾ-
ಮರೆ ಕಾಮಾತುರರುಂ ರಜೋಧಿಕರುಮೇಂ ಖೇದಕ್ಕೆ ಪಕ್ಕಾಗದಿ-
ರ್ಪರೆ ದೋಷಾಂಧರೆನುತ್ತಮಂ ನಗುವವೋಲ್ಸೈಬ್ಬಿಲ್ಗೊಳಂ ಮಲ್ಮರ-
ಲ್ದರಲುತ್ತಿರ್ಪುದು ಚಂಚರೀಕನಿಕರವ್ಯಾಪಾರಝುಂಕಾರಿತಂ ॥೬॥

ಮಿನುಮಿನನೆ ತೋಱಿ ತಾರಗೆ ।
ಘನತರತಿಮಿರಾವಕಾಶಮಾಕಾಶಮದಂ ॥
ನೆನೆಯಿಸಿದುದೂ ಕಡಲೊಳ್ಳೀ ।
ರ್ಪನಿ ತನುವಂ ಪುದಿಯೆ ತೋರ್ಪ ಕೃಷ್ಣನ ತೇಜದಿಂ ॥೭॥

ಅಂತು ನೇಸರ್ಪಡುವುದುಮಾಸಮಯದೊಳುಮ್ಮಳಿಸಿ ತಮ್ಮಲ್ಲಿಗೆ ಬಂದ ಜನನಿಯರೊಳ್ವಿನಯಮಂ ನುಡಿದು ಸಂತೋಷಂಬಡಿಸಿ ಮಗುೞ್ದಿರಮನೆಗೆ ಕಱಿಪಿ ಜಿನಮಂದಿರಕ್ಕೆ ಬಂದು ನಿದ್ರಾಮುದ್ರಿತಲೋಚನರ್ನಡುವಿರುಳೆೞ್ದು ಪರಮಜಿನಪತಿಯಂ ಬೀೞ್ಕೊಂಡು ಬಿಲ್ಲುಮನಂಬುಮಂ ಕೊಂಡು ಸೀತೆ ನಡುವೆ ಬರೆ ಪೊೞಲ ನಡುವಣ ಕ್ಷುಲ್ಲಕದ್ವಾರದಿಂ ಪೊಱಮಟ್ಟು ದಕ್ಷಿಣಾಭಿಮುಖರಾಗಿ ಪಯಣಂಬೋಪುದುಮನಂತ ಸಾಮಂತ-ಸಂದೋಹಮವರ ಪಿಂತನೆ ಮಾರ್ಬಟ್ಟೆಯೊಳ್ಬರ್ಪರಂ ಬೆಸಗೊಳುತ್ತಂ ಬೇಗಮೆಯ್ದಂದು ದೂರೋತ್ಸಾರಿತವಿಚಿತ್ರ ಪತ್ರಾತಪತ್ರವಿವಿಧವಾಹನರ್ವಿನಯ ವಿನಮಿತರೆಂತಾನು-ಮೆಯ್ದಿವಂದೆವೆಂದು ಬಿನ್ನವಿಸ ಸೀತೆ ಸೇದೆವಡೆಯದಂತು ಮೆಲ್ಲಮೆಲ್ಲನೆ ನಡೆಯಿಸುತ್ತಿರ್ದವಲ್ಲದಿರೆ ಇನ್ನೆವರಂ ದೂರಂ ಪೋಪೆಮೆಂದವರೊಡನೆ ಮಾತಾಡುತ್ತಮೆಡೆಯೆಡೆಯ ನಗರಗ್ರಾಮಂಗಳಂ ನೋಡುತ್ತುಂ ಗಂಭೀರತರಂಗಿಣಿಯನೆಯ್ದುವಂದಲ್ಲಿ ನಿಂದು ಸಾಮಂತಾದಿಗಳನೆಂತಾನು-ಮೊಡಂಬಡಿಸಿ ನಿಲಿಸಿ ತೊಱೆಯಂ ಪಾಯ್ದು ಪೋಪುದುಂ ರಾಮಲಕ್ಷ್ಮಣರಗಲ್ಕೆಯಂ ಸೈರಿಸದೆ ಕೆಲಬರದುವೆ ನಿರ್ವೇಗ ಕಾರಣಮಾಗೆ ತನ್ನದೀತೀರದ ಜಿನಾಗಾರದೊಳಿರ್ದ ಶತಕೇತುಗಳೆಂಬ ಗಣಧರಸ್ವಾಮಿಗಳ ಸಮಕ್ಷದೊಳ್ದೀಕ್ಷೆಗೊಂಡಲ್ಲಿಯೆ ನಿಂದರ್ಕೆಲರ್ ವ್ರತವಿಶೇಷಂಗಳಂ ಕೈಕೊಂಡು ಸಾಕೇತಪುರಕ್ಕೆ ಬಂದರದೆಲ್ಲಮಂ ದಶರಥನಾಥಂ ಕೇಳ್ದು,

ಸೆಡೆದನೆ ತನ್ನ ಬಂಧುಗಳಗಲ್ಕೆಗೆ ಪುತ್ರಕಳತ್ರಮೋಹದೊ-
ಳ್ತೊಡರ್ದನೆ ಪಟ್ಟಬಂಧಮನೊಡರ್ಚಿದನೇ ಭರತಂಗೆ ರಾಘವಂ
ನಡೆಯೆ ಬನಕ್ಕದಂ ಮಱೆದುಮೇಂ ಪೆಸರ್ಗೊಂಡನೆ ದೀಕ್ಷೆಗೊಂಡನಾ-
ಗಡೆ ವಿಭು ಸರ್ವಭೂತಹಿತ ದಿವ್ಯಮುನೀಶ್ವರಪಾದಪದ್ಮದೊಳ್ ॥೮॥

ಅಂತು ದಶರಥಂ ದಶಧರ್ಮನಿರತನಪ್ಪುದುಂ ಭರತಂ ರಾಜ್ಯಸುಖನಿರತನಾದ-ನಾಗಳಪರಾಜಿತಾ ಮಹಾದೇವಿಯುದಾತ್ತ ರಾಘವನ ವನಪ್ರವೇಶಕ್ಲೇಶಾಯಾಸಮಂ ನೆನೆನೆನೆದವಿಶ್ರಾಂತವಿಗಳಿತಾಶ್ರುಸಲಿಲಕಲಿಲಕಪೋಳಗದ್ಗದಕಂಠೆಯಾಗಿ,

ಏನನಿದಂ ನೆನೆದೈ ಸುತ ।
ಕಾನನಮಂ ಪೋಗಿ ಪೊಕ್ಕು ಮಂಗಳಗೀತ- ॥
ಧ್ವಾನಮಿರೆ ಸಿಂಹಶರಭ ।
ಧ್ವಾನಮನಾಲಿಸು ಮಹಿಮೆಗರ್ತಿಗನಾದೈ ॥೯।

ಧವಳಚಮರರುಹ ಪವನಮ ।
ನವಮಾನಂಗೆಯ್ದು ಕಂದ ನಿಷ್ಠುರಚೀರೀ- ॥
ರವಮುಖರ ಹರ್ಷಕಾನನ ।
ಪವಮಾನನ ಸೋಂಕನಾಸೆಗೆಯ್ಯಲ್ಬಗೆದೈ ॥೧೦।

ವನಜಳಕೇಳಿಯಂ ಬಿಸುಟು ನಂದನ ನಿರ್ಝರ ಶೈಲಸಾನು ಸಂ-
ದನ ಜಳಕೇಳಿಯೊಳ್ತೊಡರ್ದು ವಾರವಧೂಜನ ಮುಗ್ಧಸಾಲಾಕಾ-
ನನಮಿರೆ ಸಾಲ ಕಾನನಮನೀಕ್ಷಿಸಲರ್ತಿಗನಾದೆ ದಿವ್ಯಭೋ-
ಜನಮಿರೆ ಕಂದ ಕಂದಫಲಮೂಲದಿನಾಱಿಸುವೈ ಕ್ಷುಧಾಗ್ನಿಯಂ ॥೧೧।

ಮುಡಿಯ ಪಯೋಧರಂಗಳ ನಿತಂಬದಳುಂಬಮೆನಿಪ್ಪ ಬಿಣ್ಪಿನಿಂ
ಗಡಣದಿನಂಚೆಯೊಳ್ ಜನಕಾತ್ಮಜೆಯಂ ರಘುವಂಶರಾಮ ನೀಂ
ನಡೆಸಿಸುವಂದಮಾವುದೊ ತನೂಜ ದುರಂತವನಾಂತರಾದೊಳ್ ॥೧೨॥

ನಡೆಯಂ ವನ್ಯಗಜಂಗಳ ।
ನಡೆಯೊಳ್ ಸೋಗೆಗಳ ಸೋಗೆಯೊಳ್ಸೋರ್ಮುಡಿಯಂ॥
ನುಡಿಯುಂ ಕೋಕಿಲರುತಿಯೊ ।
ಳ್ಪಡಿಯಿಡಲೊಡನುಯ್ವೆ ತನಯ ಜಡಕಾತ್ಮಜೆಯಂ ॥೧೩॥

ಎಂದತಿಪ್ರಳಾಪಂ ಗೆಯ್ಯೆ ಸುಮಿತ್ರೆಯುಮೊಡನೆ ಶೋಕಿಸೆ ಕೈಕೆ ಕೇಳ್ದು ತನಗಮತ್ಯಂತ
ಶೋಕಾವೇಗಮಾಗೆ,

ಪತಿ ದೀಕ್ಷೆಗೊಂಡನಪರಾ ।
ಜಿತೆಗಿನಿವಿರಿದಾಯ್ತು ದುಃಖಭಾರಂ ಧರೆಯಂ ॥
ಸುತನುಮಿೞಿಕೆಯ್ದನೀ ದು ।
ಷ್ಕೃತಮಂ ಸ್ತ್ರೀತ್ವದ ಜಡತ್ವದಿಂದೊಡರಿಸಿದೆಂ ॥೧೪॥

ಎಂದು ತನ್ನಂ ತಾನೆ ನಿಂದಿಸಿ ಭರತನಂ ಮಗನೆ ನಿನ್ನ ರಾಜ್ಯಂ ರಾಮಲಕ್ಷ್ಮಣರಿಲ್ಲ-
ದೊಪ್ಪಲಱಿಯದವರ ಜನನಿಯರವರ ವಿಯೋಗವಿಷಾದವೇಗದಿಂದ ವಿಗತಜೀವಿತೆ-
ಯರಪ್ಪರಮು ಕಾರಣದಿಂ ಬೇಗಮೆಯ್ದೆ ಪೋಗಿ ನಿಲಿಸಾನುಂ ನಿನ್ನ ಪಿಂದನೆ ಬಂದಪ್ಪೆ-

ನೆಂಬುದುಮಂತೆ ಗೆಯ್ವೆನೆಂದು ರಾಘವನಂ ಕಟಿಪಿ ಬಂದ ಸಾಮಂತರ್ ಸಹಿತಂ ತೊಱೆಯಂ ಪಾಯ್ದು ಪೋಗಿ ಮುಂದೆ ಕಱಂಗಿ ಕಟ್ಟಿಲಿಸಿದ ಕಾನನದ ಬಟ್ಟೆಯೊಳ್ಜಾನಕಿಯ ಗಮನಶ್ರಮಮನಾಱಿಸುತ್ತಿರ್ದ ರಘುವೀರನಂ ಮುಟ್ಟೆವಂದು ವಾಹನದಿನಿೞಿದು ಕಾಲಮೇಲೆ ಕವಿದು ಪಟ್ಟು,

ಪುದಿಯೆ ತಮಂ ಮನಮಂ ಮೋ ।
ಹದವಾಗ್ನಿಯ ಧೂಮದಂತೆ ಕರಣಬಲಪ್ರಾ - ॥
ಣದ ಚೇಷ್ಟೆಗೆಟ್ಟು ಭರತಂ ।
ಪದಾನತಂ ವಿಕಳನಾಗಿ ಮೂರ್ಛೆಗೆ ಸಂದಂ ॥೧೫॥

ಅಂತು ಮೂರ್ಛಿತನಾಗಿ ಕಿಱುವೇಗದಿನೆಂತಾನುಮೆಳ್ಚತ್ತು ಸೀತೆಗಂ ಲಕ್ಷ್ಮಣಂಗಂ ತುಱಿಲ್ಗೆಯ್ದು ನಿಟಿಳತಟಘಟಿತ ಮುಕುಳಿತಕರಸರೋಜಂ ರಾಮಚಂದ್ರನ ಮುಖಚಂದ್ರಮಂ ನೋಡಿ,

ಅಕ್ರಮದಿನಟಿಪಿ ವಸುಧಾ ।
ಚಕ್ರಮನಾನಾಸೆಗೆಯ್ಯೆ ದುರ್ಯಶಮಾಶಾ- ॥
ಚಕ್ರಾವಧಿಯಕ್ಕುಂ ದೋ ।
ರ್ವಿಕ್ರಮಧನ ನಿನ್ನ ಮನದೊಳವಧರಿಪುದಿದಂ ॥೧೬॥

ಅನಯಂ ಮನುಕುಳದೊಳ್ನಾ ।
ಭಿನರೇಂದ್ರನಿನಿತ್ತಲಾದುದಿಲ್ಲನ್ನಿಂದಂ ॥
ಜನಿಯಿಸಿದೊಡೆ ಕುಲದೂಷಕ ।
ನೆನಿಪ್ಪ ಪಾಪಕ್ಕೆ ಪಟಿಗೆ ಪಕ್ಕಾಗಿರೆನೇ ॥೧೭॥

ಅನಯದಿನಪ್ಪ ಸಂಪದದಿನಿಲ್ಲಮೆ ನಾಡೆಯುಮಿಂಬುವೆತ್ತುದೆಂ-
ತೆನೆ ಪಟಿವನ್ನರಿಲ್ಲ ಧನಮಿಲ್ಲವರಂ ದುರಿತಾನುಬಂಧಮಿ-
ಲ್ಲನಯದಿನಪ್ಪುವೀಯೆರಡುಮೆಂಬುದನೀನಱಿದೀವೆಮೆಂಬಿರಿಂ-
ತೆನಗಧಿರಾಜರಾಜ್ಯಮನಪೂಜ್ಯಮನಕ್ರಮದಿಂದೆ ಬಪ್ಪುದಂ ॥೧೮॥

ಎಂದು ಬಿನ್ನೈಸುವನ್ನೆಗಂ ಕೈಕೆ ನೂರ್ವರ್ಸಾಮಂತರೊಡನೆ ಬರೆ ಬರ್ಪಳಂ ಕಂಡು,

ಇದಿರೆಟ್ದು ಪರಿದು ಕೈಕೆಯ ।
ಪದಾಂಬುಜಕ್ಕೆಱಗೆ ರಾಘವಂ ಹರ್ಷದ ಭಾ- ॥
ರದಿನಾಸತಿಗುಮ್ಮಳಮಾ ।
ದುದು ಮನದೊಳ್ನೆಸೆದು ತನ್ನ ಗೆಯ್ದನ್ನೆಯಮಂ ॥೧೯॥



ಶರದ್ವರ್ಣನಂ

ಸ್ಥಾನಚ್ಯುತಿ ಮಾಡಿದಳೆಂ ।
ಬೀ ನೋವಿಲ್ಲೇಕಕುಂಡಳಂ ಕೈಕೆಗೆ ಪಾ- ॥
ದಾನತನಾದಂ ಸುಗುಣಂ ।
ಮಾನಕಷಾಯಕ್ಕೆ ತಕ್ಕನೆಡೆಗೊಟ್ಟಪನೇ ॥೨೦।

ಅಂತು ವಿನಯವಿನಮಿತನಾಗಿರ್ದ ಮಗನನಂ ತೆಗೆದು ತಟ್ಟೈಸಿ ಪಲತೆಱದಿ
ಪ್ರಳಾಪಂಗೆಯ್ದವಿವೇಕದಿನೆನ್ನ ಗೆಯ್ದ ದುರ್ವಿಳಸಿತಕ್ಕೆ ಸೈರಿಸಿ ಮಗನೆ ರಾಜ್ಯಮಂ ಕೈಕೊಳ್ವುದು
ನಿನ್ನ ತಮ್ಮಂದಿರ್ನಿನಗೆ ಬೆಸಕೈದು ಬಾಟ್ವರಿದನುದಾಸೀನಂಗೆಯ್ಯದೆ ಮಗುೞ
ಬಿಜಯಂಗೆಯ್ಯೆಂಬುದುಮಂಬಿಕೆಗೆ ಮುಕುಳಿತಕರಾಂಬುಜಂ ರಾಮನಿಂತೆಂದಂ :

ಅಕಳಂಕಚರಿತ್ರಂ ಕ್ಷ ।
ತ್ರಕುಳೋದ್ಗತರೆರಡುನುಸಿದೊರ್ಡೈಹಿಕಮಾಮು- ॥
ತ್ರಿಕಮಟಿಗುಂ ಕೇವಳಮಂ ।
ಬಿಕೆ ಪಾತಕಮನೃತದಿಂದಮಗ್ಗಳಮುಂಟೇ ॥೨೧।

ಎಂದು ಮತ್ತಮಯ್ಯನ ನನ್ನಿಗೆ ಬನ್ನಮಂ ಪಡೆದು ನಿಮ್ಮೊಳಾದವಿನಯಮನತಿಕ್ರಮಿಸಿ ತಮ್ಮ
ಕೈಯ ರಾಜ್ಯಮಂ ಕೊಂಡೊಡೆನ್ನ ನುಡಿ ಕಿಳ್ತಡಮಕ್ಕುಮಿನ್ನು ಮಗುೞ ನುಡಿಯದಿರಿಮೆಂದು
ಭರತನುಮನಾಂ ಕುಡಲ್ಪಡೆದರಾಜ್ಯಂ ನಿನಗಕ್ರಮಮಣಮಲ್ತು ವಕ್ರಂ ಬಂದೊಡಮ್ಮಾಜ್ಞೆ
ತಪ್ಪಿದೆಯೆಂದು ನಿಲೆ ನುಡಿದು,

ಬಂಹಿಮವನ್ಮಹಿಮಂ ನಿಜ ।
ಸಿಂಹಕಟೀತಟವಿಳಾಸಪರ್ಯಂಕತಳಂ ॥
ಸಿಂಹಾಸನಮೆನೆ ಭರತಂ ।
ಗೇಂ ಹಲಿ ಸಾಮ್ರಾಜ್ಯಪಟ್ಟಮಂ ಕಟ್ಟಿದನೊ ॥೨೨।

ಅಂತು ನಿಜವದಾನ್ಯತಾಗುಣವಿಶುದ್ಧ ಸಿದ್ಧ ರಸಪ್ರವಾಹಕ್ಕೆ ಸೇತುಗಟ್ಟುವಂತೆ ಕಟ್ಟ
ವಿನಯಮಂ ಮುಂದಿಟ್ಟು,

ಈಕ್ಷಿಸುನ್ನೆಗಂ ಭುವನವಲ್ಲಭ ಪದಾರವಿಂದಮಂ
ರಕ್ಷಿಸುವೆಂ ಧರಾವಳಯಮಂ ಭವದಾಜ್ಞೆಗೆ ಬೆರ್ಚಿ ಮನ್ಮವ-
ಸ್ಸಾಕ್ಷಿಕಮಾಪಪೇಕ್ಷಿಸುವನೆನಲ್ತು ಪಭೋಗಮನೆಂದು ಪೂಣ್ದನೇ-
ನಕ್ಷತಧೈರ್ಯನೋ ಭರತನೊಲ್ವನೆ ಲೋಭರತಪ್ರಪಂಚಮಂ ॥೨೩।

ಎಂದು ಪ್ರತಿಜ್ಞಾರೂಢನಾದ ಭರತನುಮಂ ಜನನಿಯುಮನುಚಿತಪ್ರತಿಪತ್ತಿಯಿಂ ಮನ್ನಿಸಿ ಪೋಟ
ಕಟಿಸಿ ರಾಮ ಲಕ್ಷ್ಮಣರ್ಸೀತಾಸಮೇತಂ ಪಯಣಂಬೋಪುದಮಿತ್ತ ಭರತ
ಕೈಕೆವೆರಸಯೋಧ್ಯೆಯಂ ಪೊಕ್ಕು,

ಅಮಳ್ವೆತ್ತಂತೆ ಸಮಾನಮಾಗೆ ಭರತಂ ಕೊಂಡಾಡಿದಂ ಕ್ಷತ್ರಧ-
ರ್ಮಮುಮಂ ಧರ್ಮಮುಮಂ ಧರಾವಳಯಮಂ ವಿಕ್ರಾಂತದಿಂದ ತಾಳ್ದಿ ಸಂ-
ಯಮಮಂ ರಕ್ಷಣಸತ್ತ್ವದಿಂ ತಳೆದು ದಾನಂ ಪೂಜೆ ಶೀಲೋಪವಾ-
ಸಮನತ್ಯುನ್ನತರಾದ ರಾಜತನಯರ್ತನ್ನನ್ನರಾರೆಂಬಿನಂ ॥೨೪॥

ಅಂತು ಭರತಂ ರಾಜ್ಯಸುಖವಿಮುಖರನಸುಗೆಯ್ಯುತ್ತಿರ್ಪಿನಮಿತ್ತಲ್,

ಆತಪತಾಪಮಂ ತಳಿರ ಸತ್ತಿಗೆಯಿಂದೆ ತೃಷಾವಿಷಾದಮಂ
ಶೀತಳತೋಯದಿಂದೆ ಪಸಿವಂ ಪರಿಪಕ್ವಫಳಂಗಳಿಂದೆ ನಿ-
ದ್ರಾತುರವೇಗಮಂ ಲತೆಯ ಮಂಟಪದಿಂದೆ ಪಥಶ್ರಮಾಂಬುವಂ
ಸೀತೆಗೆ ತೂಳ್ದಿದಂ ಕದಳಿಕಾದಳವೀಜನದಿಂದೆ ರಾಘವಂ ॥೨೫॥

ವನಕೇಳೀ ಗಮನಕ್ಕೆ ದೀಪಕಳಿಕಾದೀಪ್ತಿಪ್ರತಾನಕ್ಕೆ ವೀ-
ಜನವಾತಕ್ಕೆ ಬಟಿಲ್ವ ಸೀತೆ ಗಮನಾಯಾಸಕ್ಕೆ ಚಂಡಾಂಶು ತಾ-
ಪನಿರೋಧಕ್ಕೆ ಸಮಗ್ರವಾತಪತಿಗೇನುಂ ಬೇವಸಂ ಬಟ್ಟಳಿ-
ಲ್ಲಿನಿಯಂ ತನ್ನೊಡನುಯ್ವುಪಂ ರಘುಜನೆಂಬೀ ರಾಗದುದ್ರೇಕದಿಂ ॥೨೬॥

ವರಲೊತ್ತೆ ಸೈರಿಸುತ್ತುಂ ।
ಗುರುಜಘನಭರಂಗಳಿಂ ತಡಂ ಮಟ್ಟುತ್ತುಂ ॥
ಚರಣಕಮಳಂಗಳಂ ಸಂ ।
ವರಿಸುತ್ತುಂ ಸೀತೆ ಸೆಡೆದು ಮೆಲ್ಲನೆ ನಡೆದಳ್ ॥೨೭॥

ಒಗೆದ ಕುಚಂಗಳಿಂ ತೊಲಗೆ ಮೇಲುದನೋರಡಿಗೊರ್ಮೆ ಸೀತೆ ಸಾ-
ವಗಿಸುವ ಕೈತಮುಂ ವದನಚಂದ್ರಸುಧಾರಸಬಿಂದುವೆಂಬಿನಂ
ನೆಗೆವ ಪರಿಶ್ರಮಾಂಬುಕಣಮುಂ ನಸುಬಂಬಲ ಬಾಡಿದಂಗಮುಂ
ತ್ರಿಗುಣಿಸೆ ರಾಗಮಂ ಮಗುಟ್ದು ವೀಕ್ಷಿಸುತುಂ ನಡೆದಂ ರಘೂದ್ವಹಂ ॥೨೮॥

ಕ್ರಮದಂ ಪರ್ಯಂತ ನಾನಾಜನಪದನಗರಗ್ರಾಮಪುಣ್ಯಾಶಮ್ರಂ-
ತಮೆ ಬೀಡಪ್ಪಂತು ಸೌಮಿತ್ರಿಯ ಸಮುಚಿತಪರ್ಯಪ್ತಿಯಿಂ ಪಿಂಗೆ ಯಾತ್ರಾ-
ಶ್ರಮವೇಗಂ ಪಾರಿಯಾತ್ರಾವನಿಯ ನಿಕಟಮಂ ರಾಘವಂ ಜಾನಕೀಸ್ಮೇ-
ರಮುಖಾಬ್ಜಾಲೋಕನಂ ಲೋಚನಸುಖಮುಖಪಾಥೇಯಮಾಗೆಯ್ದೆ ಬಂದಂ ॥೨೯॥

ಅಂತೆಯ್ದೆವರ್ಪುದುಂ,

ಫಳಭಾರಾಕ್ರಾಂತಸಾರ್ವರ್ತುಕನಿಕಟವನಂ ಮೇಖಲಾಕೀರ್ಣವಲ್ಲೀ-
ನಿಳಯಂ ಗಂಧೇಗಂಧೋತ್ಕಟಮವಿರಳಸಾನುಸ್ಥಳೀಪದ್ಮನೀಳೋ-

ತ್ಪಳಷಂಡಂ ಕೂಟಕೋಟಿಸ್ಫುರಿತಮಣಿಮಯೂಖಾವಳೀಚಿತ್ರವಾಸಾ-
ವಳಯಂ ಕಣ್ಗಂ ಮನಕ್ಕಂ ಪಡೆದುದು ಪದೆಪಂ ಚಿತ್ರಕೂಟಾಚಳೇಂದ್ರಂ ॥೩೦॥

ಫಣಿಲೋಕಂ ಪಾದಪೀಠಂ ತನಗೆನೆ ರೆಸೆಯಂ ಮೆಟ್ಟಿ ಮತ್ತಿತ್ತ ತಾರಾ-
ಗಣಮಂ ತಳ್ಪೊಯ್ದು ಪೇರರ್ವಿಗಳಿನಸದಳಂ ಕಣ್ಗೆ ಚೆಲ್ವಾಗಿ ನಾನಾ-
ಮಣಿಕೂಟಂ ಚಿತ್ರಕೂಟಂ ಸೊಗಯಿಸೆ ಪದೆಪಿಂ ಸೀತೆಯುಂ ರಾಮನುಂ ಲ-
ಕ್ಷ್ಮಣನುಂ ನೋಡುತ್ತಮುತ್ಕಂಟಕಿತತನುಗಳಾ ಶೈಳಮಂ ಪಾಂಟಿ ಪೋದರ್ ॥೩೧॥

ಅಂತವರ್ಚಿತ್ರ ಕೂಟಾಚಳೇಂದ್ರಮಂ ಬಲದೊಳಿಕ್ಕಿ ಪೋಗಿ ತದನಂತರಮವಂತೀ-ವಿಷಯದೊಳಗನೆ ಬರುತ್ತುಮದೊಂದು ವಟವಿಟ ಪಿಚ್ಛಾಯಾಚ್ಛಾದಿತಮಪ್ಪ ತಣ್ಬುೞಲ ನುಣ್ಬಸಲೆಯೊಳ್ವಿಶ್ರಮಿಸಿ ಶ್ರಮಮನಾಱಿಸುತ್ತುಂ,

ಫಲಭರಿತಂಗಳನೀ ಕೆ ।
ಯ್ವೊಲಂಗಳಂ ಕಾವರಿಲ್ಲ ನಿರ್ಜಂತುಕಮೀ- ॥
ನೆಲನೆನಿತುಂ ಬೇಡರ ಮೇ ।
ಣ್ಕೆಲದರಸರ ಬಾಧೆಯಿಂದೆ ಪಾೞಾಯ್ತಕ್ಕುಂ ॥೩೨॥

ಎಂದು ನುಡಿಯುತ್ತಿರ್ಪಿನಮೊರ್ವಂ ಮಾರ್ಬಟ್ಟೆಯೊಳ್ಬರುತ್ತುಮವರಂ ಕಟ್ಟಿದಿರೊಳೆ ಕಂಡೆಱಗಿ ಪೊಡೆವಟ್ಟು ಮರವಟ್ಟಿರ್ಪುದುಂ ಲಕ್ಷ್ಮಣನವನನಂಜದಿರೆಂದು ನಯಮಂ ನುಡಿದು ನಾಡೇಕೆ ಪಾೞಾದುದೆನೆ ಮುಕುಳಿತಾಂಜಳಿಪುಟನಿಂತೆಂದಂ:

ಇದವಂತಿವಿಷಯಮೀವಿಷ ।
ಯದತೊಳುಂಟುಜ್ಜಯಿನಿ ಯೆಂಬಪೊೞಲದನಾಳ್ವಂ॥
ಮದವದರಿಕರಟಿ ಮಸ್ತಕ ।
ವಿದಾರಿ ಸಿಂಹೋದರಂ ಪರಾಕ್ರಮಸಿಂಹಂ ॥೩೩॥

ಆತಂ ತನ್ನ ಸಾಮಂತನಪ್ಪ ವಜ್ರಕರ್ಣಂ ತನಗೆ ಕೈತವದಿಂದೆಱಗುವುದಂ ಕರ್ಣಪರಂಪರೆಯಿಂ ಸಿಂಹೋದರಂ ಕೇಳ್ದು ಕಡುಮುಳಿದು,

ಸಕಲಜ್ಞಂ ಪೊಱಗಾಗೆ ಕೈಮುಗಿಯೆನೆಂಬೀ ಪೂಣ್ಕೆಯಿಂ ರತ್ನಮು-
ದ್ರಿಕೆಯೊಳ್ಕೀಲಿಸೆ ಜೈನಬಿಂಬಮನಿದೇನುದ್ವೃತ್ತನೋ ನಿಮ್ನ ಮ-
ಸ್ತಕನಪ್ಪಂ ಗಡ ವಜ್ರಕರ್ಣನೆನಗಂ ಕೌಟಿಲ್ಯದಿಂದೆಂದು ಮಾ-
ನಕಷಾಯಾತುರನಾತನಿರ್ದ ಪುರಮಂ ಸಿಂಹೋದರಂ ಮುತ್ತಿದಂ ॥೩೪॥

ಅವಱಿಂದಾತನೊಳಾದ ಭೀತಿಯಿನೀ ವಿಷಯಮಿನಿತುಂ ಪಾೞಾದುದಾ ದಶಪುರಮುಮೀ ದೆಸೆಯದಿಲ್ಲಿಗನತಿದೂರಮೆಂದು ಬಿನ್ನವಿಸಿ ಬಿೞ್ಕೊಂಡು ಪೋಪುದುಂ,

ಪ್ರತಮಂ ಪಾಲಿಸಿದಂ ಮಹಾಪುರುಷನೆಂಬೀ ಸಂತಸಂಗೆಟ್ಟು ದು-
ರ್ಮತಿ ಸಿಂಹೋದರನಪ್ರಮತ್ತಚರಿತಂಗಾವಜ್ರಕರ್ಣಂಗೆ ದು-
ಸ್ಥಿತಿಯಂ ಮಾಡುವೆನೆಂದು ಬಂದು ಪುರಮಂ ಮುತ್ತಿರ್ದಪಂ ತನ್ನ ದೋ-
ರ್ದ್ಧತನಂ ಬಾರಿಸವೇಟ್ಟುದಲ್ಲದೊಡುಪೇಕ್ಷಾ ದೋಷಮೇನಾಗದೇ ॥೩೫॥

ಕದನೋದ್ಯೋಗದಿನಾಳ್ವನೆತ್ತಿ ಬರೆಯುಂ ಬೆಳ್ಕುತ್ತು ಬೆನ್ನಿತ್ತನಿ-
ಲ್ಲ ವೃಥಾತ್ಮಂವಳಿದಂ ಪಲರ್ಪೊಗಳ್ವಿಸಂ ನಿಃಶಂಕೆಯಿಂ ಪೂಣ್ಕೆದ-
ಪ್ಪಿದನಿಲ್ಲೈಹಿಕಲೋಭಮಂ ಬಗೆದನಿಲ್ಲೇವೇಟ್ಟೆ ಸದ್ವೃಷ್ಟಿಗ-
ಲ್ಲದಸದ್ವೃಷ್ಟಿಗೆ ವಜ್ರಕರ್ಣನೆ ವಲಂ ಕೈಯಂ ನೊಸಲ್ಗೊಯ್ಯದಂ ॥೩೬॥

ಎನುತ್ತವರಲ್ಲಿಂ ತಳರ್ದು ದಶಪುರಮನೆಯ್ದುವರ್ಪುದುಂ,

ಪರಿಯ ಬಳನ ನಡುವೆ ಸೀತ ಪೊಳೆಯೆ ಚಲವಿಲೋಚನಂ
ಕರಿಯ ಬಿಳಿಯ ಮುಗಿಲ ನಡುವೆ ಪೊಳೆವ ಮಿಂಚಿನಂದದಿಂ
ಬರೆ ಕಡಂಗಿ ವಜ್ರಕರ್ಣನವರನಾತ್ಮರಾಜಮಂ-
ದಿರದ ಪೊನ್ನ ಮಾಡದಿದಿರ ನೆಲೆಯೊಳಿರ್ದು ನೋಡಿದಂ ॥೩೭॥

ಅತಿಲಲಿತಗಮನಮಬ್ಜಾ ।
ಕೃತಿ ನಯನಮನೂನವಕ್ಷಮಾಜಾನು ವಿಳಂ- ॥
ಬಿತಬಾಹುಯುಗಳಮಪ್ಪಾ ।
ಕೃತಮಿಾ ಸೌಂದರ್ಯಮಿನ್ನರಂ ಕಂಡಱಿಯೆಂ ॥೩೮॥

ಕಾರಣಪುರುಷರಿವರ್ಸಾ ।
ಧಾರಣರಲ್ಲರ್ ತೃಣೀಕೃತತ್ರಿಭುವನರೇ- ॥
ಕಾವಣವೇಟ್ಟಿಂದರೊ ಬಲ ।
ನಾರಾಯಣರಪ್ಪರಿನ್ನರುಱಿದರುಮೊಳರೇ ॥೩೯॥

ಎಂದು ನೀಡುಂ ಭಾವಿಸಿ ವಿಸ್ಮಯಸ್ಫಾರಿತವಿಳೋಚನನಾಗಿ ನೋಡುತ್ತಿರ್ಪುದುಮಪರ್ವರ-ಮುತ್ತರಗೋಪುರದ ಜಿನೇಂದ್ರಾಲಯಮನೈದೆವಂದು ಮೂಱು ಸೂಟ್ಟಿಲವಂದು ಜಗತ್ತ್ರಯಪ್ರಭುವಿಂಗಭಿಮುಖರಾಗಿ,

ಜಯ ಜಿತವೃಜಿನ ಜಿನೇಶ್ವರ ।
ದಯಾನದೀ ಪುಳಿನರಾಜಹಂಸ ಭರಾಂಭೋ- ॥
ಧಿಯ ತಡಿಯನೈದಿಸೆನ್ನಂ ।
ನಯನಿಕ್ಷೇಪ ಪ್ರಮಾಣ ಪಾತ್ರದಿನರ್ಪಾ ॥೪೦॥



ಶರದ್ವರ್ಣನಂ

ನೇವಾಳಮೆಂದು ಕೆಲಬ ।
ರ್ಪಾವಂ ಪಿಡಿವಂತೆ ದೇವ ನೀನಲ್ಲದರಂ ॥
ದೇವರಿವರೆಂದು ಪಿಡದಿ ।
ನ್ನೇವಿಧಿವಟ್ಟಪರೊ ಮೋಹಮೂರ್ಛೆಯಿನರ್ಹಾ ॥೪೧॥

ನಿನಗೆ ರಸಮೊಂದೆ ಶಾಂತಮೆ ।
ಜಿನೇಂದ್ರ ಮನಮಾ ರಸಾಂಬುನಿಧಿಯೊಳಗವಗಾ- ॥
ಹನಮಿರ್ದು ಮಿಕ್ಕ ರಸಮಂ ।
ಕನಸಿನೊಳಂ ನೆನೆಯದಂತು ಮಾಡೆನಗರ್ಹಾ ॥೪೨॥

ಮಣಿಭೂಷಣಭರದಿಂ ತನು ।
ಕಿಣಮಪ್ಪುದದೇಕೆ ನಿನ್ನ ನಿರ್ಮಳಗುಣಭೂ- ॥
ಷಣಮಂ ದಯೆಗೆಯ್ ಪಡೆವೆಂ ।
ಪ್ರಣಯಮನಪವರ್ಗಲಕ್ಷ್ಮಿಗದಱಿಂದರ್ಹಾ ॥೪೩॥

ಸಿಂಗದ ಮಾರ್ದನಿ ಮದಮಾ ।
ತಂಗಮನಳಱಿಸುವವೋಲ್ನಿಜ ಪ್ರತಿಬಿಂಬಂ ॥
ಪಿಂಗದೆ ಮನದೊಳ್ನಿಂದಿರೆ ।
ಪಿಂಗಿಸುವುದು ಜನನಮರಣದುಃಖಮನರ್ಹಾ ॥೪೪॥

ಮೆಚ್ಚೆಗಡ ಮುಳಿಯೆ ಗಡ ಬಗೆ ।
ಬೆಚ್ಚಿರೆ ಬೇಱಾಗೆ ನಿನ್ನ ಪದದೊಳ್ಮನುಜಂ- ॥
ಗುಚ್ಚಗತಿ ನೀಚಗತಿವಡೆ ।
ವಚ್ಚರಿ ಕಣ್ದೆಱೆವ ತೆಱನನಱಿಪೆನಗರ್ಹಾ ॥೪೫॥

ಜ್ಯಾಯಂಗೆ ನೀನೆ ವಲಮಾ ।
ದೇಯಂ ನೀನಲ್ಲದನ್ಯವಸ್ತುಗಳೆಲ್ಲಂ ॥
ಹೇಯಂಗಳೆಂಬ ತತ್ತ್ವೋ ।
ಪಾಯಮನೆಮಗೀವುದೇವೆವುಱಿದುವನರ್ಹಾ ॥೪೬॥

ನಿತ್ಯಸುಖಮಾತ್ಮರೂಪಮ ।
ನಿತ್ಯಸುಖಂ ಮೋಹರೂಪಮೆಂಬ ವಿವೇಕಂ ॥
ಸತ್ಯಸ್ವರೂಪಮವಱಿೊಳ ।
ಗತ್ಯಂತಾನುಭವವಿಭವಮಕ್ಕೆಮಗರ್ಹಾ ॥೪೭॥

ಎಂದು ದರ್ಶನಸ್ತುತಿಗೆಯ್ದು ಜಿನಮುಖದರ್ಶನಚಿತ್ತನಾಗಿ ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗೊಳಲರ್ದ ತಾವರೆಯ ತನಿಗಂಪಂ ತಟ್ಟಿಕ್ಕಿಸಿ ತೀಡುವ ತಣ್ಣಾಳಿಯ ಸೋಂಕಿಂ ಗಮನಪರಿಶ್ರಮಮನಾಱಿಸುತ್ತಿರ್ಪುದುಮಾಗಳಲ್ಲಿಗೆ ವಜ್ರಕರ್ಣನಟ್ಟಿದ ಬಲ್ಮಾನಿಸರ್ಬೋನಮಂ ತಂದು ಮಾರ್ವಲಂ ಬಳಸಿ ಬಿಟ್ಟಿರ್ದ ದೂಸಱಿನೆಮ್ಮರಸಂ ತಾಂ ಬರಲುಂ ನಿಮ್ಮಂ  ಬರಿಸಲುಮಱಿದೆಮ್ಮನಟ್ಟಿದನೆಂದು ಬಿನ್ನವಿಸಿ ಮಣಿಭಾಜನಂಗಳೊಳ -ರ್ಘ್ಯಪಾದ್ಯಮಂ ಕೊಟ್ಟಭ್ಯಾಗತಪ್ರತಿಪತ್ತಿಯಂ ಗೆಯ್ವು ದುಮವರಭ್ಯವಪ್ಪತಿಯಂ ನಿರ್ವರ್ತಿಸಿ ಕೈಘಟ್ಟಿಯಂ ತಾಂಬೂಳಮುಮಂ ಕೊಂಡು ಬಂದ ಮಾನಸರಂ ವಿಸರ್ಜಿಸಿ ದಾಶರಥಿ ಸೌಮಿತ್ರಿಯ ಮೊಗಮಂ ನೋಡಿ,

ಅನಿಮಿತ್ತಂ ವಜ್ರಕರ್ಣಂ ನಮಗೆ ವಿನಯಮಂ ಮಾಡಿದಂ ಮಾನ್ಯನಾತಂ-
ಗನುದಾತ್ತಂ ಮತ್ತಚಿತ್ತಂ ಮುಳಿದು ಬಳಸಿ ಸಿಂಹೋದರಂ ಕಾದಲೆಂದಿ-
ರ್ದನದಂ ನೀಂ ಬಾರಿಸೆಂಬೀ ನುಡಿ ಕಿವಿವುಗೆ ಸೌಮಿತ್ರಿ ದಿವ್ಯಾಸ್ತ್ರಬಾಣಾ-
ಸನಮಂ ಕೈವಾರ್ದನಿಲ್ಲಂತಕನ ಬೆಸದೆ ಕಾಳಾಹಿ ಬರ್ಪಂತೆ ಬಂದಂ ॥೪೮॥

ಅಂತು ಬಂದರಮನೆಯ ಬಾಗಿಲೊಳ್ನಿಂದು ಪಡಿಯಱನೊಡನೆ ಸಿಂಹೋದರನ ಸಬೆಯಂ ಪೊಕ್ಕು,

ಎಱಗುವುದಂತಿರ್ಕೆಮ ಕಾ ।
ಯ್ದೆಱಗುವ ಸಿಡಿಲಂತೆ ಘನರವಂ ಕೈಮಿಗೆ ನಾ- ॥
ಡೆಱೆಯಂ ಭರತಂ ಬೆಸಸಿದ ।
ತೆಱನಂ ಕೇಳೆಂದು ಪೀತವಸನಂ ನುಡಿದಂ ॥೪೯॥

ಜಿನಪತಿಗಲ್ಲದೆ ಪೊಡೆವಡೆ ।
ನೆನೆ ದೋಷಿಯೆ ವಜ್ರಕರ್ಣನುಱಿವುದು ಮುನಿಸಂ ॥
ವಿನಮದಮರೇಂದ್ರನೆನಿಸಿದ ।
ಜಿನೇಂದ್ರನೊಳ್ನಿನಗೆ ಗಂಡಮಚ್ಚರಮುಂಟೇ ॥೫೦॥

ಅಪ್ರತಿಕಂಗೆಱಗದ ವೀ ।
ರವ್ರತಮಂ ಕೇಳ್ದು ಹರ್ಷಮಂ ತಾಳ್ದನಿ- ॥
ನ್ನಬ್ರಹ್ಮಣ್ಯಂ ವರ್ಯಜ ।
ನವ್ರೀಡಾಕರಮದಂ ವಿಚಾರಿಸವೇಡಾ ॥೫೧॥

ಸುತ್ತುಱಿವುದು ಮನ್ನಿಸು ಭೂ ।
ಪೋತ್ತಮನಾಜ್ಞೆಯನವಜ್ಞೆಗೆಯ್ಯೆ ಕೊಡೆನೆಬಿ- ॥
ಲ್ನೆತ್ತಿಗೆ ಗೆಂಟಕ್ಕುಮಿದಂ ।
ಮತ್ತೆ ನಿಸಿದರುಚಿತಮಲ್ತು ಗುಣವಿದ್ವೇಷಂ ॥೫೨॥

ಎನೆ ಸಿಂಹೋದರಂ ಘನರವಕ್ಕೆ ಸಿಡಿಲ್ವ ಸಿಂಹದಂತೆ ಮುಳಿದು,

ಶ್ರೇಯಮನೆನಗಱಿಪಲುಪಾ।
ಧ್ಯಾಯನೆ ತನಗಱಿವನಱಿಯನಪ್ಪೊಡೆ ಭರತಂ॥
ಜ್ಯಾಯನ ರಾಜ್ಯಮನಯ್ಯ ಕ।
ನೀಯಂ ಕೈಕೊಂಡ ತೊಂಡು ತನಗಾವುಚಿತಂ ॥೫೩॥

ಅಣ್ಣನ ಮಾತಂ ಮನ್ನಿಸಿ।
ಕಣ್ಣಱಿದೋಸರಿಸಿದಂ ಜನಾರ್ದನನಿದಿರೊ-॥
ಳ್ತಣ್ಣನೆ ಹರಿಪೀಠದೊಳಿ।
ರ್ಪಣ್ಣನೆ ತಾಂ ತನ್ನ ಬೀರಮೆನ್ನಱಿಯದುದೇ ॥೫೪॥

ಎನ್ನಾಳೆನಗೆಱಗದೊಡವ।
ನಂ ನಿಯಮಿಸುವೆಡೆಗೆ ತಾನುಮೆನಗರಸನೆ ಬಂ-॥
ದೆನ್ನಂ ನಿಯಮಿಸುಗೆಮ ತ।
ನ್ನೆನ್ನಳವಂ ಸಮರ ಮುಖದೊಳಱಿಯಲ್ಕಕ್ಕುಂ ॥೫೫॥

ಎನೆ ಮಂದಸ್ಮಿತಮುಖನಾಗಿ,

ಅಧಿರಾಜಂ ಬರೆಗಂ ಕದ।
ನಧುರೀಣಂ ಗಂಡನಾವನೆನೆ ಕೇಳ್ದು ಘನ-॥
ಪ್ರಧನರತಂ ಸಿಂಹೋದರ।
ನಧೋಕ್ಷಜಂಗೊಱಿಯನುರ್ಚಿದಂ ಕೂರಸಿಯಂ ॥೫೬॥

ಆಗಳದಂ ಕಂಡು ಕಡುಮುಳಿದು,

ಕಡಿತಲೆಯಂ ತೂಗುತ್ತುಂ।
ಕಡಿತಲೆಕಾಱರ್ಕಡಂಗಿ ಬರೆ ಬಱುಗೆಯ್ಯೊ-॥
ಳ್ತುಡುಕಿ ಪಿಡಿದೊತ್ತಿ ಮಸಕದಿ।
ನೆಡೆಮಡಗದೆ ಶಿಲೆಯೊಳಸಗವೊಯ್ಲಂ ಪೊಯ್ದಂ ॥೫೭॥

ಒರ್ವರಿನೊರ್ವರಂ ಮುಱಿಯೆ ಮೋದಿದನೊರ್ವರಿನೊರ್ವರಂ ಭುಜಾ-
ಗರ್ವದಿನೋವದಿಟ್ಟನಱಿಯಟ್ಟಿ ಸಿಡಿಲ್ವೊಡೆವಂತೆ ಪೊಯ್ದನೋ-
ರೊರ್ವರಿನೋರ್ವರೊರ್ವರನಗುರ್ವಿಸೆ ಸೌಳನೆ ಸೀಳ್ದನಿಂತಿದೇಂ
ಮಾರ್ವಳಮಂ ಪಡಲ್ವಡಿಪಳುರ್ಕೆಗೆ ನಿರ್ದಯನೋ ಜನಾರ್ದನಂ ॥೫೮॥

ಅದಂ ಕಂಡು ಸಿಂಹೋದರಂ ಸಿಗ್ಗಾಗಿ ಸಿಂಹದಂತೆ ಮೇಲ್ವಾಯ್ವುದುಂ,

ಬಾಳಂ ವಂಚಿಸಿ ಪಿಡಿದಂ ।
ಬಾಳಕನಂ ಪಿಡಿವ ಮಾಱ್ಕೆಯಿಂದವನಂ ಬ- ॥
ಲ್ಲಾಳನೆಱೆದುಯ್ದನಾವನೊ ।
ಕಾಳೆಗದೊಳ್ ಲಕ್ಷ್ಮಣಂಗೆ ಕೂರ್ಪಂ ತೋರ್ಪಂ ॥೫೯॥

ಆಗಳಾ ಕಳಕಳಕ್ಕೆ ಮುನ್ನೀರೆ ಮೇರೆವಪ್ಪಿದಂತೆ ಬೆಂದಗುಳ್ದು ಬರ್ಪ ಮಾರ್ಪಡೆಗೆ ಕಡೆಗಾಲದ ಕೃತಾಂತನಂತೆ ಪೆಡಂ ಮಗುಱೆ,

ಕೂರಾಳಿಂ ಕೂರಾಳಂ ।
ತೇರಿಂ ತೇರಂ ಕಡಂಗಿ ಹಯದಿಂ ಹಯಮಂ ॥
ವಾರಣದಿಂ ವಾರಣಮಂ ।
ನಾರಾಯಣನಿಟ್ಟು ತವಿಸಿದಂ ಮಾರ್ಬಳಮಂ ॥೬೦॥

ಏನುಜದಾಂಪುದುಂ ಜವನವೋಲ್ತವೆ ಕೊಂದನೊ ವೈರಿಸೇನೆಯಂ
ಮಾನವನಂದಮಲ್ಲಮಿದು ದಾನವನಂದಮೆನಲ್ಪ್ರಹಪ್ಪಳಂ
ಮಾನವರಿಂ ಹಯಪ್ರತತಿಯಿಂ ಹಯದಿಂ ರಥಮಂ ರಥಂಗಳಿಂ
ದಾನೆಯಿಟ್ಟು ಕೈಗೆ ದೊರೆಕೊಂಡುದೆ ಕೈದುವೆನಲ್ಜನಾರ್ದನಂ ॥೬೧॥

ಅಂತಗುರ್ವುಮದ್ಭುತಮುಮಾಗೆ,

ಚಕಿತಾರಾಚಿತತುರ್ಬಲಂ ಬಲಯುತಂ ದೋಸ್ತಂಭದೊಳ್ಸಾಲಭಂ-
ಜಿಕೆವೋಲ್ ರಂಜಿಸೆ ವೀರಲಕ್ಷ್ಮಿ ರಘುವೀರಂ ಲಕ್ಷ್ಮಣಂ ರಾಷ್ಟ್ರಕಂ-
ಟಕನಂ ಬಾಟ್ಟಿಲೆಗೊಂಡನುಯ್ದನಿಭಮಂ ಪಂಚಾನನಂ ಹಸ್ತಿಮ-
ಸ್ತಕಮಸ್ತಿಷ್ಕರಸಾನುರಕ್ತರಸನಂ ಮಾರ್ಕೊಂಡು ಕೊಂಡುಯ್ವವೋಲ್ ॥೬೨॥

ಆಗಳಾ ಸಮಯದೊಳ್ಪರಿಜನಂ ಬೆರಸು ಕರುಮಾಡದೆರಡನೆಯ ನೆಲೆಯೊಳಿರ್ದ ವಜ್ರಕರ್ಣಂ ಕರ್ಣಾಂತವಿಸ್ಫಾರಿತ ವಿಲೋಚನನಿದೇನೆಂದು ನೋಡುತ್ತುಮಿರೆ,

ಗಣನಾತೀತಾನ್ಯಸೇನಾಗಣಮನಿತುಮನೇಕಾಂಗದೊಳ್ ಶೂನ್ಯಹಸ್ತಂ
ರಣದೊಳ್ಸೀಳ್ದೊಟ್ಟಿ ಸಿಂಹೋದರನನುಜಿದೆ ಕೊಂಡುಯ್ದನುದ್ದಂಡನೀತಂ
ಗಣೆಯಾವಂ ಗಂಡನೆಂದಾ ಪುರಜನಮನಿತುಂ ವಿಸ್ಮಯತ್ವಕ್ಷ್ಮವಿಕ್ಷೇ-
ಪಣಮೆಯ್ತಂದೀಕ್ಷಿಸಿತ್ತುತ್ಸುಕಸರಭಸಯಾನಂ ಗತಾನ್ಯಾವಧಾನಂ ॥೬೩॥

ಆ ಸಮಯದೊಳ್,



ಶರದ್ವರ್ಣನಂ

ಅವಿರಗಳದಶ್ರುಜಳ ।
ಪ್ಲವಧೌತಕಪೋಳತಳಮವಂತೀಜಶ್ವರನಂ ॥
ತವುರಂ ಪರಿಪಾಳಿಪುದೆ ।
ಮ್ಮವಸಂತಮನೆಂದು ಬಂದು ಕಾಲ್ಗೆಱಗುವುದುಂ ॥೬೪॥

ಮಲೆದಿರ್ದಂ ಗಡ ವಜ್ರಕರ್ಣನೊಳದಂ ನೀಂ ಬಾರಿಸೆಂದಟ್ಟಿದಂ
ಕೊಲಲೆಂದಟ್ಟಿದನಿಲ್ಲ ರಾಮನಧಿರಾಜಂ ಚಿಂತೆವೇಡಂತಱಿಂ
ದೆಲೆ ಸಿಂಹೋದರಮಾನಿನೀಜನೆ ಶೋಕೋದ್ರೇಕಮಂ ಮಾಣಿಮಂ-
ಜದಿರೆಂದು ಘನದುಂದುಭಿಧ್ವನಿಗಳೊಂದಾದಂತೆ ಲಕ್ಷ್ಮೀಧರಂ ॥೬೫॥

ಅಂತವರ ಮನದ ಖೇದಮಂ ಕಳೆದು ಸಿಂಹೋದರನನೆೞದುಯ್ವುದುಮನಿವರ್ ಬಳಾಚ್ಯುತರೆಂದು,

ಅತಿಬಳನಪ್ಪ ಲಕ್ಷ್ಮಣಕುಮಾರನ ವೀರರಸಪ್ರವಾಹಿನೀ-
ಪತಿತಮಹಾಮಹೀರುಹಮೆನಲ್ನತನಾದನವಂತಿವಲ್ಲಭಂ
ಹತಸುಮನೋವಿಳಾಸನಪಸಾರಿತ ಮೂಳಬಳಂ ನಿರಸ್ತವಿ
ಶ್ರುತನಯನಸ್ತ ಸಾರಸವಿಚಾರನಿಳೇಶ್ವರ ಪಾಲಮೂಲದೊಳ್ ॥೬೬॥

ಆಗಳುದಾತ್ತರಾಘವಂ,

ಮನದೊಳೆ ಮೆಚ್ಚಿ ಲಕ್ಷ್ಮಣನ ದೋರ್ವಲಗರ್ವಮನಾನತಂಗೆ ಸಂ-
ಮನದೊಳೆ ಭೀತಿಯಂ ಕಳೆದು ವಿಗ್ರಹದಾಗ್ರಹಮಿರ್ಕೆ ವಜ್ರಕ-
ರ್ಣನೊಳನುಬಂಧಮಂ ಮುಗುೞ ಮಾಟ್ಟುದು ನೀನೆನೆ ಜಾನಕೀಪ್ರಿಯಂ
ವಿನಮಿತಮಸ್ತಕಂ ಮುಗಿದ ಕೈವೆರಸೆಂದನವಂತಿವಲ್ಲಭಂ ॥೬೭॥

ದೇವ ಚಮ್ಮವಾವುಗೆಗಳಂ ಪಿಡಿದೆಂಬುದನಿಂಬುಕೆಯ್ವ ಸ-
ದ್ಭಾವಮೆ ಸಾಲ್ಗುಮೊಲ್ಲೆನುೞದೇನುಮನೀ ಬೆಸನಂ ನರೇಂದ್ರ ನೀ-
ನೀವುದುಪೇಕ್ಷೆಗೆಯ್ವುದುಮಪೇಕ್ಷಿಸುವೆಂ ಫಳಮೂಳವಲ್ಕಲ-
ಪ್ರಾವರಣಾದ್ರಿಕುಂಜನವಾಸಪವಿತ್ರತಪಶ್ಚರಿತ್ರಮಂ ॥೬೮॥

ಎಂದು ಬಿನ್ನವಿಸುತ್ತಿರ್ಪಿನಮಿತ್ತಲ್,

ಬಱುಗೆಯ್ಯೊಳೊಂದೆ ಮೆಯ್ಯೊ ।
ಳ್ಮಱುವಕ್ಕಮನಿಕ್ಕಿ ಗೆಲ್ದು ಸಿಂಹೋದರನಂ ॥
ಸೆಱಗೊಂಡುಯ್ದಂ ಕೃಷ್ಣನೆ ।
ಪೆಱಂಗೆ ಕೇಳ್ಬಾಹುವೀರ್ಯಮಿನಿತಾದಪುದೇ ॥೬೯॥

ಎಂದು ಮನದೊಳ್ನಿಶ್ಚಯಿಸಿ ಪರಿವೃತಕತಿಪಯಪರಿಜನಂ ವಜ್ರಕರ್ಣಂ ವಜ್ರಕುಂಡಳಮರೀಚಿ ಪಗಲ ಸಿರಿಗೆ ಕಣ್ದೆಱವಿ ಮಾಡೆ ದೂರೋತ್ಸಾರಿತವಿಚಿತ್ರಾ ವಿವಿಧವಾಹನಂ ಬಸದಿಯಂ ಬಲಗೊಂಡು ದರ್ಶನಸ್ತುತಿಗೆಯ್ದುಮತಿಸಂಭ್ರಮದಿಂ ಬಂದು ಮಣಿಮಕುಟ ಲೇಖೆ ಪಸರಿಸೆ ದೀಪವರ್ತಿ ನಿಧಿಗೆಱಗುವಂತೆಱಗುವುದುಂ,

ಬಳವದ್ವೈರಿಗಳಲ್ಲಿ ಮುನ್ನೆಟಿದುಕೊಂಡಂತಿರ್ದುವಂ ರಾಮಕೋ-
ಮಳಪಾದದ್ವಿತಯಂ ನತಂಗೆ ಪಡೆದತ್ತತ್ಯುನ್ನತಾಂಗುಷ್ಠದಿಂ
ಬೆಳಗುತ್ತಿರ್ಪ ನಖಂಗಳಿಂ ತಳದ ಕೆಂಪಿಂ ವಜ್ರಕರ್ಣಂಗೆ ನಿ-
ಶ್ಚಳಮಪ್ಪಂತಿರೆ ಬೇಗಮುನ್ನತಿಯನುದ್ಯತ್ತೇಜಮಂ ರಾಗಮಂ ||೭೦||

ಕೊಟ್ಟುದು ರಾಗಮಂ ತಳಮುದಂಶುಗಳಿಂ ನಖಪಙ್ತಿ ಪಟ್ಟಮಂ
ಕಟ್ಟಿದುದುನ್ನತಾಂಗುಳಿ ಸಮುನ್ನತಿಯಂ ಚರಣಾನತಂಗೆ ಮುಂ-
ದಿಟದು ವಜ್ರಕರ್ಣವಸುಧಾರಮಣೀರಮಣಂಗೆ ತೊಟ್ಟಿನ-
ಲ್ಪುಟ್ಟಿಸಿದತ್ತು ಮೈನವಿರ್ಗಳಂ ರಘುವೀರವಚಸ್ಸುಧಾರಸಂ ||೭೧||

ತದನಂತರಂ,

ಎಱಗದೊಡೆ ನೀಚವೃತ್ತಿಯ ।
ನೆಱಗಿದೊಡುನ್ನತಿಯನೀವ ವಿಪರೀತಗುಣ- ॥
ಕ್ಕೆಱೆವೆಟ್ಟೆನಿಸಿದುಪೇಂದ್ರಂ ।
ಗೆಱಗಿದನಾದರದೆ ವಜ್ರಕರ್ಣನರೇಂದ್ರಂ ||೭೨||

ಅಂತು ವಿನತನಾಗಿ,

ಮನಮಂ ಕಾರುಣ್ಯರಸಂ ।
ತನುವಂ ರಾಘವನ ಧವಳರುಚಿ ಪುದಿಯೆ ಸುಧಾ- ॥
ವನನಿಧಿಯೊಳ್ಮುಳುಗಿದವೋ ।
ಲನುರಕ್ತಂ ಮುಂದೆ ಮುಗಿದ ಕೈವೆರಸಿರ್ದಂ ||೭೩||

ಅಂತು ಸಮುಚಿತಪ್ರದೇಶದೊಳಿರ್ಪುದುಮಾಸಮಯದೊಳ್,

ಭಂಗಿ ಮನಸಿಜನ ಗಾಡಿಗೆ ।
ಭಂಗಮನೊಡರಿಸೆ ಕಿರೀಟಕಿರಣಂ ನಭಮಂ ॥
ರಂಗಿಸೆ ಕಿಱಿದಾನುಂ ಚತು ।
ರಂಗಬಲಂಬೆರಸು ವಿದ್ಯುದಂಗಂ ಬಂದಂ ||೭೪||

ಅಂತು ಬಂದು,

ಶ್ರೀಮುಖದರ್ಶನಮೊಡರಿಸೆ ।
ರೋಮಾಂಚದಿನೆಱಗೆ ವಿದ್ಯುದಂಗಂ ಮುನ್ನಂ ॥
ಕಾಮದ್ವಿಷಂಗೆ ಬಱಿಯಂ ।
ರಾಮಂಗಂ ಲಕ್ಷ್ಮಣಂಗಮಾಸತನಾದಂ ॥೭೫॥

ಅಂತು ವಿನತನಾಗಿ ವಜ್ರಕರ್ಣನ ಕೆಲದೊಳ್ಕುಳ್ಳಿರ್ಪುದುಂ ಲಕ್ಷ್ಮಣಕುಮಾರನೀತನಾರ್ಗೆನೆ ವಿದ್ಯುದಂಗನೆಂಬಂ ಕುಂಡಳ ಪುರದುಜ್ಜಯಿನಿಗೆ ಪರದುವೋಗಿ ಕಾಮಲತೆವೆಸರ ಪೆಂಡವಾಸದ ವಿಳಾಸಿನಿಗೆ ವಲ್ಲಭನಾಗಿರ್ದಾಕೆಯತ್ತಣಿಂ ಸಿಂಹೋದರನೆನಗೆ ರತ್ನತ್ರಯಾರಾಧಕಂಗಲ್ಲದೆ ಪೆಱಂಗೆಱಗೆನೆಂದುದಕ್ಕೆ ಕಡುಮುಳಿದು ಕೊಲಲೆಂದು ಬಱಿಯನಟ್ಟಿದುದು ಕೇಳ್ದುದೆ ಪೊಱ್ಮಾಗೆ ದಶಪುರಕ್ಕೆ ಬರುತ್ತುಮಿದಿರೊಳೆನ್ನಂ ಕಂಡೆನಗೀ ವೃತ್ತಕಮಂ ಪೇಳ್ದು ಪೋಗಲೀಯದೆ ಮಗುಳ್ದು ಬಂದು ನಿನ್ನಾದುದನಪ್ಪೆನೆಂದು ಕದನಸಹಾಯನಾಗಿರ್ದನಕಾರಣ ಬಂಧುವೀತನೆಂದು ಬಿನ್ನವಿಸೆ ತದನಂತರಂ ವಜ್ರಕರ್ಣನ ಮೊಗಮಂ ನೋಡಿ ರಾಘವ ದೇವಂ ನಿಜವ್ರತಪರಿಫಾಳನಪರಿಣಾಮಕ್ಕೆ ಮೆಚ್ಚಿದೆಂ ಮೆಚ್ಚಿದುದಂ ಬೇಡಿಕೊಳ್ಳೆನೆ ಮಹಾಪ್ರಸಾದಮೆಂದಿಂತೆಂದಂ:

ಪ್ರಾಣೋಪಕಾರಮಂ ಕ ।
ಲ್ಯಾಣಮನೆನಗಿತ್ತು ದೇವ ತಣಿಯದ ನಿಮ್ಮಾ ॥
ತ್ರಾಣಪ್ರವೀಣಪರಮ ।
ಪ್ರಾಣಿಹಿತಾಚರಣಮಿತರಸಾಧಾರಣಮೆ ॥೭೬॥

ಅಣುವಿಂ ಕಿಱಿದಾದುದು ಧಾ ।
ರಿಣಿ ದೇವರ ಬಗೆಗೆ ದೇವ ನಿಜಸತ್ತ್ವಗುಣಂ ॥
ಫಣಿಪತಿಗಮರಿದು ಮನುಜಂ ।
ಗಣನಾರ್ಹನೆ ಪೊಗೞಲೊಂದು ನಾಲಗೆಯ ಜಡಂ ॥೭೭॥

ದೇವರ ಬರವೆನಗಾದುದು ।
ದೇವರ ಬರವೆನ್ನ ಸಯ್ಪಿನಿಂ ದೇವ ಭವ- ॥
ತ್ಸೇವೆ ದೊರೆಕೊಂಡುದೆನಗಿ ।
ನ್ನಾವುದುಮರಿದುಂಟೆ ಬೇಡಿ ಪಡೆವನಿತುವರಂ ॥೭೮॥

ಅದಱಿಂ ದೇವರ್ಸಿಂಹೋದರಂಗೆ ಕಾರುಣ್ಯಂಗೆಯ್ವುದೆಂದು ಬಿನ್ನವಿಸೆ ಲಕ್ಷ್ಮೀಧರನವರ್ಕೆ ಮೆಚ್ಚಿ,

ಕಡೆದಡೆ ಪಾಲ್ಗಡಲ್ವಿಧವಸ್ತುವನೀಯದೆ ತೇಯೆ ಚಂದನಂ
ಕುಡದೆ ಸುಗಂಧಮಂ ಪಿೞಿಯೆ ಕಬ್ಬಿನಿದಾಗದೆ ಕಾಸೆ ಕಾಂಚನಂ

ಪಡೆಯದೆ ಕಾಂತಿಯಂ ನಿಜದಿನೊಳ್ಳಿದಪ್ಪರೆನಿತ್ತು ಬಾಧವ-
ಟ್ಟೊಪಮುಪಕಾರಮಂ ಪೆಱರ್ಗೆ ಮಾಡದೆ ಬಾಧೆಯನೇಕೆ ಮಾಡುವರ್ ||೭೯||

ಇಱಿಯಲ್ಕೆ ಬಗೆದು ಸಿಂಹೋ ।
ದರನಿರೆಯುಂ ವಜ್ರಕರ್ಣನೊಳ್ಪನೆ ಬಗೆದಂ ॥
ಪರಪೀಡಾಕರಣದೊಳೇಂ ।
ಪರೋಪಕಾರಪ್ರಿಯಂಗೆ ಬಗೆ ಬಂದಪುದೇ ||೮೦||

ಎಂದು ನುಡಿದನಂತರಂ ದಾಮೋದರಂ ಸಿಂಹೋದರಂಗಂ ವಜ್ರಕರ್ಣಂಗಂ ಪರಸ್ಪರ ಕರಗ್ರಹಣದಿಂ ಮನದ ಕಲ್ಮಷಮಂ ಕಳೆದು ನಾಡುಮಂ ಬೀಡುಮಂ ಪಚ್ಚುಗೊಟ್ಟು,

ನುಡಿ ಕಿತ್ತಡವೆನಿಸದೆ ನೇ ।
ರ್ಪಡುಗಿಡದೆ ನರೇಂದ್ರನಾಜ್ಞೆಯಿಂದಿರ್ಪುದಿದಂ ॥
ಕಡೆಗಣಿಸೆ ಬಱಿಕ್ಕಣ್ಣನ ।
ತುಡುವ ಶಿಳೀಮುಖದೊಳುಂಟೆ ದಾಕ್ಷಿಣ್ಯಮುಖಂ ||೮೧||

ಎಂದು ನಿಯಮಿಸುವುದುಂ ವಜ್ರಕರ್ಣಂ ಪೂರ್ಣಮನೋರಥಂ ದಾಶರಥಿಯಂ ದೇವರೆನ್ನ ಮನೆಗೆ ಬಿಜಯಂಗೆಯ್ವುದೆಂದುಯ್ವ ಸಮಯಯೊಳ್,

ತುಱುಗಿದುವು ತೋರಣಂ ಕೈ ।
ನಿಱಿದುವು ಗುಡಿ ಕಿವುಡುಗೊಳ್ವಿನಂ ದಿಕ್ಕರಿಗಳ್ ॥
ಪಱೆ ಮೊಳಗಿದುವುನ್ನತಿ ಕ ।
ಣ್ದೆ ಱಿದಂತೆ ಪೊಲಾದುದುತ್ಸವಂ ದಶಪುರದೊಳ್ ||೮೨||

ಆ ಸಮಯದೊಳ್ ಸುಟ್ಟಿ ತೋಱಿ,

ವನಿತಾರತ್ನಂ ದಲಾ ಕೋಮಳೆ ಜನಕಜೆ, ರಾಮಂ ದಲಾ ಬರ್ಪ ನೀಹಾ-
ರನಗೇಂದ್ರಪ್ರಾಂಶುಸಿಂಹೋದರಕದನಮದೋದ್ರೇಕರೌದ್ರಗ್ರಹೋಚ್ಚಾ-
ಟನ ಮುದ್ರಾಮಂತ್ರಕಂ ಲಕ್ಷ್ಮಣನೆ ದಲೆನುತುಂ ಬೇಗನೆಯ್ತಂದು ಪೌರಾಂ-
ಗನೆಯರ್ಕಣ್ಣಾರ್ಪಿನಂ ನೋಡಿದರಲರ್ಗಣೆಯಂತಾಗೆ ನೇತ್ರತ್ರಿಭಂಗಂ ||೮೩||

ಅಂತು ಪೌರಜನದ ಮನದೊಡನೆ ಪುರಮುಮನರಮನೆಯುಮಂ ಪೊಕ್ಕು, ಮಣಿಮಂಟಪದೊಳಿಕ್ಕಿದ ಮಣಿಮಯಾಸನಮನಳಂಕರಿಸಿ ರಾಮಲಕ್ಷ್ಮಣರಿರ್ಪುದುಮಭಿಜನ-ಸನಾಭಿಜನಸಹಿತಮಾನತನನರ್ಘ್ಯಮಣಿಭಾಜನದಿನರ್ಘ್ಯಮಂ ಕೊಟ್ಟು ಸಿಂಹೋದರನುಮ-ನೊಡನೆಯರಸುಕಮಕ್ಕಳುಮಂ ವಿಚಿತ್ರವಸ್ತ್ರಾಭರಣಂಗಳಿಂದರ್ಚಿಸಿ ಮಜ್ಜನಭೋಜನಾದಿ-ಸತ್ಕಾರಮನಂದಿನ ದಿನದೊಳ್ಮಿಱಿದು ಮಱುಗಿವಸಂ ಶುಭಮುಹೂರ್ತದೊಳ್,

ತನ್ನ ತನುಜೆಯರನೆಣ್ಬ ।
ರ್ಕನ್ನೆಯರಂ ವಜ್ರಕರ್ಣನುಟಿದರನಿತ್ತಂ ॥
ಬೆನ್ನೆಯರನವನಿಪಾಳಂ ।
ಮುನ್ನೂರ್ವರನಲ್ಲಿ ಮದುವೆನಿಂದನುಪೇಂದ್ರ ॥೮೪॥

ಅಂತು ದಶಪುರದೊಳ್ಕೆಲವು ದಿವಸಮಿರ್ಪಿನಂ,

ನೀರಸಮಾಗೆ ಬಳ್ಳಿಗಿಡುಪೆರ್ಮರಗಳ್ಖರಯಂತ್ರಜಾಳದಿಂ
ಭೂರಸಮೆಲ್ಲಮಂ ತೆಗೆಯೆ ಭಾನು ದವಾನಳಧೂಪದೂಸರಿಂ
ಕಾರಿರುಳಂತೆ ಕಟ್ಟಿ ದೆಸೆ ಬಂದುದು ಬೇಸಗೆಗಾಲಮಸ್ತ ಕಾ-
ಸಾರಮಸಾರಮಸ್ತಮಿತಮಾರುತನುದ್ಗತಚೀರಿಕಾರುತಂ ॥೮೫॥

ಕರೆದುವು ಸೀರುಡುಗಳ್ಬೆ ।
ರ್ಮರಗಾಡೆಲೆಯಿಕ್ಕಿ ಕಟಿಲೆ ಬಿಟ್ಟುವು ತೊಱಿಗಳ್ ॥
ಪರಿಗೆಟ್ಟುವು ಬೆಳ್ವಯಲೊ ।
ಳ್ಸರಳಿಸಿದುವು ಮರುಮರೀಚಿಕಾವಾಹಂಗಳ್ ॥೮೬॥

ಸಾರಂಗಿಡೆ ಪಾರ್ಥಿವಪರಿ ।
ವಾರಂ ದೆಸೆಗೆಟ್ಟು ಪೋಪವೋಲ್ಪೋದುವು ನಿ- ॥
ಸ್ಸಾರಸರೋಜಾಕರದಿಂ ।
ಸಾರಸಕಳಹಂಸ ಚಕ್ರವಾಕಕುಟುಂಬಂ ॥೮೭॥

ಪರಿವಾರಮೆನಿಪ ಬಹುಜಳ ।
ಚರಮರಣದೊಳಾದ ಖೇದದಿಂದೆದೆಯೊಡೆದಂ-॥
ತಿರೆ ಕೂಡೆ ಬೀಡೆವರಿದುವು ।
ನಿರಂತರೋತ್ತಪನತಾಪದಿಂ ಪೆರ್ಗೆಱಿಗಳ್ ॥೮೮॥

ಉರಿವರಿವ ಬಿಸಿಲ್ಬುಡೆ ಸೀ ।
ಕರಿವೋದುವಿವೆನಿಸಿ ತುಂಬಿಯಂ ಕೋಗಿಲೆಯುಂ ॥
ಮರಗಳೆಲೆವಱಿಗಳೊಳ್ಮೆ ।
ಯ್ಗರೆದುವು ಪಡುನೇಸಱಪ್ಪಿನಂ ಬೇಸಗೆಯೊಳ್ ॥೮೯॥

ಪಿಡಿದಿರ್ದಂ ನಲ್ಮೆಯಿಂದೀಕೆಯುಮೆನಗೆ ಕರಂ ನಲ್ಲಳೆಂಬೀ ವಿವೇಕಂ
ಗಿಡೆ ಜನ್ಮಾವಾಸಮಂ ಪೀಡಿಸಿ ನಳಿನಿಗೆ ನಿಷ್ಕಾರಣಂ ಕಾಯ್ದು ನೋವಂ
ಪಡೆದಂ ಚಂಡಪ್ರಭಂ ವಾರುಣಿಯನನುದಿಂ ಸೇವಿಸುತ್ತಿರ್ದ ರಾಗ-
ಕ್ಕೆಡೆಗೊಟ್ಟುನ್ಮಾರ್ಗದೊಳ್ವರ್ತಿಸುವ ಕುವಳದ್ರೋಹನೇಗೆಯ್ದು ತೋಱಂ ॥೯೦॥

ವಿಕಾರಮಿನಿಸಿಲ್ಲೆನಲ್ ನೆಱೆದ ಬಾಹ್ಯಸಾಮಗ್ರಿಯಿಂ-
ದಕಾರ್ಯಪರನಾಗೆಯುಂ ಪರಮಯೋಗಿಯಿಪ್ಪಂದದಿಂ-
ದಕಂಪಿತ ಶರೀರನಿರ್ಪುದು ಜಡಾಶಯೋಪಾಂತದೊಳ್
ಬಕಂ ದರನಿಮೀಳಿತಾಂಬಕನಶೇಷದೋಷಾಶಯಂ ||೯೧||

ಭುವನಜನಪ್ರಸನ್ನಕಮಳಾಕರ ನಿನ್ನ ಜೀವನಂ
ತವುತರೆ ತೀವ್ರ ಕಾಲವಶದಿಂದಮ ನೀರಸಮಾಯ್ತು ನೀರಜಂ
ಕುಳವಯಮಪ್ಪುಕೆಯ್ದುದು ವಿಷಾದಮನಂಚೆಗೆ ಖೇದಮಾಯ್ತು ಪೋ-
ದುವು ಪೊಣರ್ವಕ್ಕಿಗಳ್ವಿಕಳಮಾದುವು ಮೀನಕುಳೀರಕೋಟಿಗಳ್ ||೯೨||

ಮೃಗಕುಳಮಾಸೆಗೆಯ್ಯೆ ಮೃಗತೃಷ್ಣಿಕೆಯಂ ಜಳಮೆಂದು ತೃಷ್ಣೆಯಿಂ
ಪಗಲಿಱಿವನ್ನೆಗಂ ಪರಿದು ಗಂಟಲುರಂಬರಮಾಱೆ ಬೆಂದೊವ-
ಲ್ತೆಗಳಿಗೆವೀೞೆ ಬಾಯ್ಗೆ ಕರುಷಂ ಬರೆ ನಾಲಗೆ ಕಿಱ್ತು ಸಟ್ಟೆ ದಿ-
ಟ್ಟಿಗಲೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿನಾರೊ ಬೇಯದರ್ ||೯೩||

ದಿನಕರತೀವ್ರ ತಾಪಮುರಿಯೆಣ್ಣೆಪೊಲಳ್ವೆ ಶರೀರತಾಪದಿಂ
ವನರುಹಷಂಡಮಂ ತುರಿಪದಿಂದೊಳಪೊಕ್ಕು ಕಡಂಗಿ ಕಿೞ್ತಿದಂ
ಮುನಿಸಿನಳುರ್ಕೆಯಂ ಪಗೆಯ ನಂಟರೊಳಂ ಕಡುಕೆಯ್ದು ತೋರ್ಪವೋ-
ಲ್ವನಗಜಮೊಟ್ಟಿಕೊಂಡುದು ಮೃಣಾಳಿಕೆಯಂ ನಿಜಮೂರ್ಧಪಿಂಡದೊಳ್ ||೯೪||

ತಪನಾತಪದಿಂ ತೇಷ್ಟಾ ।
ಕ್ಷಪಣೆಯನೊಳಕೊಂಡು ಕೋೞ್ಮಿಗಂ ಬೆಳ್ಮಿಗಮಾ- ॥
ತ್ಮಪುರೋಭಾಗದೊಳಿರ್ದೊಡ ।
ಮುಪಶಮಿಸಿದುದೊಳ್ಪನೀಗುಮಾತಪಯೋಗಂ ||೯೫||

ಉದಬಿಂದುಗೆತ್ತು ಕಿರಿಸಾ ।
ನುದೇಶದೊಳ್ಕಾಯ್ದು ಬಿದಿರ ಪೊಸಮುತ್ತಂ ನುಂ- ॥
ಗಿದ ಸೋಗೆವಿಂಡಱಿಂ ಮಱು ।
ಗಿದುದಂದೆರ್ದೆ ಬೇಯೆ ಕೆಂಡಮಂ ನುಂಗಿದವೋಲ್ ||೯೬||

ರವಿಕಾಂತೋಪಲವಹ್ನಿಯಿಂದಡವಿಗಳ್ಭಸ್ಮಾವಶೇಷಂಗಳಾ-
ದುವರಲ್ಪೋದುವು ಬೆಟ್ಟುಗಳ್ನವನದೀಸ್ರೋಣೀಜಳಂ ಕಾಸಿದೆ-
ಣ್ಣೆವೊಲುರ್ವೆಱ್ದುವು ಮೂಷೆಯಿಟ್ಟ ತೆಱದಿಂ ಗ್ರಾವಸ್ಥಳಂ ಲೋಹಮಾ-
ದುವು ರೇಣುಸ್ಥಳಿ ಕಾಱುಮಿಱ್ದುವು ನಿದಾಘದ್ರಾಘಿಮೋದ್ರೇಕದಿಂ ||೯೭||

ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕಿನಂ
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮೆಂ-
ದು ಹವಿರ್ಭಾಗಮನೊಲ್ಲದಿಂದುಕಳೆಯಂ ಕೊಳ್ವರ್ ಮೃಡಂ ಪಾರ್ವತೀ-
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ ॥೯೮॥

ಅಂತತಿಪ್ರಬಳಮಾದ ನಿದಾಘಸಮಯದೊಳ್,

ದಿನಮಂ ಕೆಲವಂ ದಶರಥ ।
ತನಯರ್ದಶಪುರದೊಳಿರ್ದು ಪೋಗಲೊಡಂ ನೊಂ- ॥
ದನದಕ್ಕೆ ವಜ್ರಕರ್ಣಂ ।
ವಿನೀತರುತ್ತಮರಗಲ್ಕೆಯಂ ಸೈರಿಪರೇ ॥೯೯॥

ಅಂತು ಸೀತಾಸಮೇತಂ ರಾಮಲಕ್ಷ್ಮಣರ್ದಕ್ಷಿಣಾಭಿಮುಖರಾಗಿ ಬಲ್ಲಡವಿಯ ಬಟ್ಟೆವಿಡಿದು ನಡೆವಡೆಯೊಳ್,

ರಾಘವನೆನ್ನಂ ತೃಣದಿಂ ।
ಲಾಘವಮೆನೆ ಬಗೆದನೆಂಬ ಮನಮುಮ್ಮಳದಿಂ ॥
ದಾಘಮನೊಳಕೊಂಡಂತೆ ನಿ ।
ದಾಘದ ಮುಂಬಗಲೆ ತಳೆದುದಿಳೆ ಕಡುಗಾಯ್ಪಂ ॥೧೦೦॥

ಇನಕುಳಸಾಮ್ರಾಜ್ಯಶ್ರೀ ।
ತನಗಲ್ಲದೆ ತಾಳ್ದಲರಿದದಂ ರಾಮಂ ತ- ॥
ನ್ನನುಜಂಗೊಪ್ಪಿಸಿ ಬಂದೊಡೆ ।
ಕನಲ್ದವೋಲ್ಚಂಡಭಾನು ಬಿಸುಪಂ ತಳೆದಂ ॥೧೦೧॥

ಇಳೆಯಂ ತಾಳ್ದಿದ ಸತ್ತ್ವದಿಂದಮೆನಗಂ ಬಲ್ಲಾಳ್ಗೆಂಬೇವದಿಂ
ಬಳನಾರಾಯಣರಂ ನಿಸರ್ಗಚಪಳಂ ದಾವಾಗ್ನಿಧೂಮಧ್ವಜಂ
ಝಳಮಂ ಮೇಲೆ ಕಡಂಗಿ ಪೊಯ್ದು ಮುನಿಸಿಂದೇನಾನುಮಂ ಕೀಱಿ ಚಾ-
ವಳಿಪಂತಾದುದು ಜೀರ್ಣಪರ್ಣಪರುಷಪ್ರಧ್ವಾನದಿಂ ಮಾರುತಂ ॥೧೦೨॥

ಕಡುವಿಸಿಲುರ್ಚೆ ಕೋಮಲಲತಾತನು ಬಂಬಲ ಬಾಡೆ ನಾಡೆ ನೀ-
ರಡಿಸಿ ಬಟಿಲ್ಲು ಬರ್ಪ ಪದದೊಳ್ಜನಕಾತ್ಮಜೆ ಮುನ್ನೆ ಬಿಟ್ಟು ಬಂ-
ದೊಡೆ ಬಿಡಮುರ್ವರಾರಮಣಿ ಬೆನ್ನನೆ ಬಂದಪಳೆಂಬ ಶಂಕೆಯಂ
ಪಡೆದು ರಘೂದ್ವಹಂಗೆ ಪಡೆದಳ್ಗಮನಶ್ರಮಖಿನ್ನೆ ಖೇದಮಂ ॥೧೦೩॥

ಅಂತೆಂತಾನುಮೆಯ್ದುವಂದುಜ್ಜಯಿನಿಯ ಪಡುವಣ ಪೆರ್ವೞಿಯುಮಂ ಕೞಿದು ಪೋಗಿ ಕುರುವಕಮೆಂಬ ಪೊೞಲನೆಯ್ದಿ ವಿಟಪಿಚ್ಛಾಯೆಯೊಳ್ ಸೀತೆ ಸೇದೆವಟ್ಟಿರ್ಪುದುಂ ಜಲಾನ್ವೇಷಣನಿಮಿತ್ತಂ ಲಕ್ಷ್ಮಣಂ ಬರುತ್ತುಮಿರೆ,

ವನಮೊಂದಿರ್ದುದು ಮುಂದೆ ಕಂಡು ವನಮುಗ್ರಾಕಾರದಿಂದಲ್ಲಿ ತ-
ದ್ವನಲಕ್ಷ್ಮೀಮುಖದಂತೆ ನೀರಜವನಂ ಚೆಲ್ವಾಯ್ತದಂ ಕಾದು ಯೌ-
ವನದೃಪ್ತರ್ಕಲರಿರ್ದರಲ್ಲಿಗೆ ದಳನ್ನೀಳಾತಸೀಚಂಕನ-
ತ್ತನು ತೋಯಾಹರಣಾರ್ಥಿ ಬಂದನಭಯಂ ಸೌಮಿತ್ರಿಶತ್ರುಂಜಯಂ ॥೧೦೪॥

ಆಗಳಲ್ಲಿ,

ಪರಪುಷ್ಪದಂತೆ ಪುಗಲೆಂ ।
ಬರ ಮಾತಂ ಮೀಱಿ ಲಕ್ಷ್ಮಣಂ ಪೊಕ್ಕು ಸರೋ- ॥
ವರಮಂ ಮೊಗೆದಂ ಜಳಮಂ ।
ಸರೋಜವಿಸ್ತೀರ್ಣ ಪರ್ಣ ಪುಟಿಕಾಹಸ್ತಂ ॥೧೦೫॥

ಅಂತು ನೀರಂ ಮೊಗೆದು ಪೂಗೊಳದಿಂ ಪೊಱಮಡುವುದುಮಾಸಮಯದೊಳ್ ಪಿಡಿಯನೇಱಿ ಕಾಮನ ಕೈಪಿಡಿಯಂತೆ ಬರುತ್ತುಂ ಕಣ್ಬೊಲದೊಳ್ತನ್ನಂ ಕಂಡು ಕಣ್ಬೇಟಂಗೊಂಡು ಕೂರಂಕುಸದ ಪೊಳೆಪಿನೊಡನೆ ಪಾಲೊಳ್ತೊಳೆವ ಕುಡುಮಿಂಚಿನಂತೆ ಪೊಳೆದು ಸೋಲದಿಂದೆಳಸಿ ಸುೞಿವ ಕಡೆಗಣ್ಣ ನೋಟದಿಂದ ಮಾಟದ ಗಂಡವರಿಜೆಂದಱಿದೀಗಳಿವಳೀ ವೇಷಮನಿದೇಕೆ ತಾಳ್ದಿದಳೆಂದಱಿಯದವಸರಂಗೊಟ್ಟಿರೆ ಮುಟ್ಟೆವಂದು,

ಮನದೊಡನೆಕ್ಕೆಯಿಂ ಪರಿಯೆ ಕಣ್ಣಿಡೆ ನೋಡಿ ಮೃಗಾಕ್ಷಿ ವಾರಿಜಾ-
ಕ್ಷನ ಕಡುಗಾಡಿಯಂ ಪುರುಷವೇಷದ ರಾಜತನೂಜೆ ಕಂತು ಮೋ-
ಹನಶರಮುರ್ಚೆ ಘರ್ಮಜಳಕುಟ್ಮಳಮುಂ ಪುಳಕೋದ್ಗಮಂಗಳುಂ
ತನುಲತೆಯೊಳ್ಪೊದೞ್ದೊದವೆ ತಾಳ್ದಿದಳುತ್ಕಳಿಕಾವಿಳಾಸಮಂ ॥೧೦೬॥

ಅಂತುಕಂತುಶರಮುರ್ಚೆ ಬೆರ್ಚಿ ಶರಣ್ಗೆವರ್ಪಂತೆ ವಾಹನದಿನಿೞಿದು ಬಂದೀತನಾ-ದೇಶಪುರುಷನೆಂದು ನಿಶ್ಚಯಿಸಿ ಬೀಡಿಂಗೆ ಬಿಜಯಂಗೆಯ್ಯೆಂದು ಕೈಯಂ ಪಿಡಿದೊಡಗೊಂಡು ಪೋಗಿ ಹಂಸತೂಲತಲ್ಪದೊಳ್ಕುಳ್ಳಿರಿಸಿ ನೀಮಾರ್ಗೇನಿಮಿತ್ತಮಿಲ್ಲಿಗೆ ಬಂದಿರೆಂಬುದುಂ ಲಕ್ಷ್ಮಣನೆಂದನೆಮ್ಮ ವೃತ್ತಾಂತಮಂ ಬೞಿಕ್ಕೆ ತಿಳಿಯೆ ಪೇೞಲಕ್ಕುಮೀಗಳೆಮ್ಮತ್ತಿಗೆ ನೀರಡಿಸಿ ಬೞಲ್ದಿರ್ದೊಡೆಮ್ಮಣ್ಣನ ಬೆಸದಿಂ ಜಳಾಶ್ರಮನಱಿಸಿಬಂದೆನದಱಿನಿದವಸರಮಲ್ಲೆಂಬುದುಮಾ ಬೆಸಕ್ಕಾನೆ ಸಾಲ್ವೆನೆಂದು ತಣ್ಣರಗದ ನೀರ್ವೆರಸು ಕೆಲದೊಳಿರ್ದ ಕೆಳದಿಯರನಟ್ಟುವುದುಮಾಕೆಗಳ ವರಿರ್ದಲ್ಲಿಗೆ ಪೋಗಿ ಹೈಮಸಲಿಲದಿಂದ ಶ್ರಮಮನಾಱಿಸಿ ಮುಂದಿಟ್ಟೊಡಗೊಂಡು ಬಂದು

ಮಜ್ಜನಭೋಜನಾದಿ ಸತ್ಕಾರಮಂ ಮೆಱೆವುದುಮಾ ಕನ್ನೆಯ ಜನನಿಯಪ್ಪ ಪೃಥ್ವೀಮತಿ ಮಹಾದೇವಿ ಪರಿಜನಮಂ ಪೋಗಲ್ವೇೞ್ದು ಕಟ್ಟೇಕಾಂತಂ ಮಾೞ್ಪುದುಂ ಜನನಿಯ ಕಣ್ಣಱಿದು ಕನ್ನೆ ತನ್ನ ಮುನ್ನ ತೊಟ್ಟ ಗಂಡವಚ್ಚಮಂ ಕಳೆದು ಕಟಕಟಿಸೂತ್ರವಿಚಿತ್ರಾಭರಣದಿ-ವ್ಯವಸ್ತ್ರದಿನಳಂಕರಸಿ,

ರೂಪಪರಾವರ್ತನವಿ ।
ದ್ಯಾಪರಿಣತಿಯಿಂದಮತನು ರತಿಯಾದವೊಲಾ ॥
ರೂಪವತಿ ಪುರುಷವೇಷಂ ।
ಪೋಪುದುಮರ್ಚಿಸಿದ ಕೈದುವಿರ್ಪಂತಿರ್ದಳ್ ॥೧೦೭॥

ಕ್ರಮವಿಕ್ಷೇಪದಿನಂಚೆಗೆ ।
ಸಮನಿಸೆ ದೈನ್ಯಂ ಲತಾಂಗಿ ಸೀತೆಗೆ ಚೆಲ್ವಿಂ ॥
ಸಮಮಧಿಕಮೆಂಬ ಕೌತುಕ ।
ಮಮರ್ದಿರೆ ನಡೆತಂದು ಪಾರ್ಶ್ವದೊಳ್ಕುಳ್ಳಿರ್ದಳ್ ॥೧೦೮॥

ಅಂತು ಸೀತೆಯ ಸಮೀಪದೊಳ್ಕುಳ್ಳಿರ್ಪುದುಮಾಸಮಯದೊಳ್,

ಆ ನಗೆಗಣ್ಗಳಾನಿಮಿರ್ದ ಪುರ್ಬುಗಳಾ ನಳಿತೋಳ್ಗಳಾ ಸರೋ-
ಜಾನನಮಾ ಮದಾಳಿಕುಳಕುಂತಳಮಾ ಕಳಹಂಸಯಾನಮಾ-
ಪೀನಕುಚಂಗಳಾಕ್ಷಣದೊಳೀಕ್ಷಣಮಂ ಸೆಱೆಗೆಯ್ಯೆ ಲಕ್ಷ್ಮಣಂ
ಮಾನಿನಿಗಿತ್ತು ತನ್ನ ಮನಮಂ ಮರವಾನಸನಂತೆ ತೋಱಿದಂ ॥೧೦೯॥

ಆ ಸಮಯದೊಳ್ದಾಶರಥಿ ಪುರುಷವೇಷಮೀಕನ್ನೆಗೇಕಾರಣಮಾದುದೆನೆ ಜಗಜ್ಜನಕಂಗೆ ಕೈಗಳಂ ಮುಗಿದು ಈ ಕುರವಕಮೆಂಬ ಪುರಮನಾಳ್ವಂ ವಾಲಖಿಲ್ಯನೆಂಬನೆಮ್ಮರಸನಾತನ ಮೇಲೆ ವಿಂಧ್ಯಾಟವಿಯೊಳಿರ್ಪನವಂಧ್ಯಕೋಪಂ ರೌದ್ರಭೂತಿಯೆಂಬ ಮ್ಲೇಚ್ಛರಾಜನಸಂಖ್ಯಾತ-ಕಿರಾತಬಲಂ ಬೆರಸೆತ್ತಿಬಂದು ನಾಡುಂ ಬೀಡುಮನಿಱಿದು ಸೂಱೆಗೊಂಡೆಮ್ಮರಸನಂ ಸೆಱೆವಿಡಿದುಯ್ವುದನವಂತೀವಲ್ಲಭಂ ಸಿಂಹೋದರಂ ಕೇಳ್ದೆಮ್ಮರಸನಪುತ್ರಿಕನೆಂದು ತಾನೀ ದೇಶಮಂ ಸ್ವೀಕರಿಸಲ್ಪಗೆದೊಡೆಮ್ಮ ಮಂತ್ರಿ ವಾಲಖಿಲ್ಯನರಸಿ ಗರ್ಭಿಣಿಯೆಂದು ಬಿನ್ನವಿಸುವುದುಮದನಾತನವಧಾರಿಸಿ ಸಂತೋಷಂಬಟ್ಟು ಗರ್ಭದ ಕೂಸು ಗಂಡುಗೂಸಾ ದೊಡಾತನೀ ನೆಲಕ್ಕೊಡೆಯನೆಂದೊಡಂಬಡುವುದುಮಾತನುಂ ಕೆಲವು ದಿವಸದಿನೀಕೆಯಂ ಪಡೆಯೆ ಮಂತ್ರಿಮುಖ್ಯನರಸಿ ಮಗಂ ಬಡೆದವಳೊಂದೊಸಗೆಯಂ ಮಾಡಿ ಕಲ್ಯಾಣಮಾಲನೆಂದು ಪೆಸರನಿಟ್ಟು ನಡುಪುತ್ತಿರ್ಪಿನಮೊಂದು ದಿವಸಮವಧಿಜ್ಞಾನಿಗಳಂ ಕಂಡು ವಾಲಖಿಲ್ಯಂಗೆ ಬಂಧನಮೋಕ್ಷಮಾರಿಂದಮಕ್ಕುಮೆಂದು ಬೆಸಗೊಳ್ವುದುಮವರಿಂತೆಂದರ್ :

ಅಳವಡೆ ಕೊಂಡ ಗಂಡವರಿಜಂ ಬಗೆಗೊಂಡಿರೆ ನೋಡಿ ನೋಡಿದಾ-
ಗಳೆ ವಧುವೆಂದು ನಿಶ್ಚಯಿಸಿ ಕೈವಿಡಿದಾತನೆ ನಿಮ್ಮ ಖೇದಮಂ
ಕಳೆದು ನಿರಾಕುಳಂ ಬಿಡಿಸುಗುಂ ಸೆಱೆಯಂ ಪೆಱತೇನೊ ಕಾಣ್ಬರಾ
ಬಳಯುತನಂ ಪುರೋಪವನಷಂಡಸಮೀಪಸರೋಜಷಂಡದೊಳ್ ॥೧೧೦॥

ಎಂದಱಿಪುವುದುಮಲ್ಲಿಂದಿತ್ತಲೀ ಕೊಳಕ್ಕೆ ಕಾಪಂ ಪೇೞ್ದಲ್ಲಿಯೆ ಬೀಡಾಗಿರ್ದೆವೆಮ್ಮ ಪುಣ್ಯೋದಯದಿಂ ನೀಮುಮಿಲ್ಲಿಗೆ ಬಿಜಯಂಗೆಯ್ದಿರೆಂದು ಶೋಕಗದ್ಗದಕಂಠೆ ಕಣ್ಣನೀರಂ ಸುರಿಯೆ ಸೀತೆ ಸಂತೈಸೆ ಲಕ್ಷ್ಮಣಂ ಜಾನಕಿಗೆ ಕೈಗಳಂ ಮುಗಿದು,

ಈಕೆಯ ತಾಯ್ಗುಪಶಮಿಸುಗೆ ।
ಶೋಕಂ ರಾಘವನ ಕಣೆಗೆ ಮಣಿಗುಂ ರಣದೊಳ್ ॥
ಲೋಕತ್ರಯಮೆನೆ ಶಬರಪ ।
ತಾಕಿನಿ ಪೆಱತೆಗೆಯದಱ್ ಬಿಲ್ದೆಗವಪುದೇ ॥೧೧೧॥

ಅನ್ನೆವರಮಿಾ ತನೂದರಿ ।
ಮುನ್ನಿನ ತೆಱದಿಂದಮಿರ್ಕೆ ಬೇಡರ ಪಡೆಯಂ ॥
ಬೆನ್ನಟ್ಟಿ ಬಿಡಿಸಿ ಸೆಱೆಯಂ ।
ಕನ್ನೆಯನಾಂ ಮದುವೆನಿಲ್ವೆನೆಂದನುಪೇಂದ್ರಂ ॥೧೧೨॥

ಎಂದು ನುಡಿದವರನೊಡಂಬಡಿಸಿ ನಡುವಿರುಳೆೞ್ದು ಪೋಗಿ ಮೇಖಳಾಂತರಂಗಿಣಿಯನುತ್ತರಿಸಿ ತರದಿನೆಡೆಯೆಡೆಯ ನಾಡುಗಳಂ ಕೞಿದು ಪೋಗೆಪೋಗೆ,

ತರಳಲತಾಲಾಸ್ಯನಟಂ ।
ಪರಿಣೇರೋಮಂಥಮಂಥರಂ ಲವಲೀಮ- ॥
ರ್ಮರಮುಖರಂ ಕರಿಕರಶೀ ।
ಕಶೀತಳಮೆಸಗಿದತ್ತರಣ್ಯಸಮೀರಂ ॥೧೧೩॥

ತಾಂಗಿದುದು ಗಾಳಿಯಂ ದೆಸೆ ।
ಯಂ ಗವಸಣೆಸಿದುದು ಮೇಗೆ ಮೊಗದಾಗಸಮಂ ॥
ನುಂಗಿದುದೆನೆ ತಟ್ಟಿಲಿಸಿ ಕ ।
ಱಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ ॥೧೧೪॥

ಅಂತಗುರ್ವುವೆತ್ತ ವಿಪಿನಮಂ ಪುಗುವಾಗಳ್,

ತೊಂಡಿನೊಳೆಮ್ಮ ಪೇರಡವಿಯಂ ಪುಗುತಂದಪರೆಂದು ಲುಬ್ಧಕ-
ರ್ತಂಡದೆ ಸುತ್ತೆ ಮುತ್ತೆ ಗೊಲೆಗೊತ್ತಿದನೇ ಧನುವಂ ಸರಲ್ಗಳಂ

ಕೊಂಡನೆ ದಿವ್ಯಬಾಣಧಿಯಿನಸ್ಖಳಿತಂ ನಸುನಕ್ಕು ತನ್ನ ಕೋ-
ದಂಡಕೃತಾಂತದಡದೊಳೆ ಮೋದಿದನೋಡಿಸಿದಂ ಜನಾರ್ದನಂ ॥೧೧೫॥

ಅಂತು ತಮ್ಮ ಕೈಯ ಬಿಲ್ಗಳಂ ಬೀಱಿಪೊಯ್ಯೆ ಬೆಗಡುಗೊಂಡೋಡಿ ಪೋಗಿ ತಮ್ಮಾಳ್ದಂಗಳವಿಗೞಿದಳವನಱಿಯೆ ಪೇೞ್ವುದುಮಾತನತಿಪ್ರಬಳಕಿರಾತ ಬಳಸಮೇತಂ ಮೇಲೆತ್ತಿ ಬಪ್ಪುದುಮದಂ ಕಂಡು ಕಡುಮುಳಿದು ಸೌಮಿತ್ರಿ ಲಯಸಮಯದ ಕಾಳರಾತ್ರಿಯಂತೆ ಸಾಗರಾವರ್ತವುಂ ಜೇವೊಡೆಯೆ ಸಾಗರಾವರ್ತ ಗಂಭಿರಘೋಷದಂತೆ ಚಾಪಟಂಕಾರಘೋಷಮೊದವೆ ಕೇಳ್ದು ರೌದ್ರಭೂತಿ ಸಾಮಾನ್ಯಪುರುಷರಲ್ಲರಿವರ್ಕಾರಣ-ಪುರುಷರೆಂದು ಭಯಚಕಿತಚಿತ್ತನಾಗಿ,

ಆಗ್ರಹಮೊಪ್ಪದು ತನಗೆ ಸ ।
ಮಗ್ರರೊಳನಿವಾರ್ಯವೀರ್ಯರಚಳಿತಧೈರ್ಯ- ॥
ರ್ವಿಗ್ರಹಮನುೞಿವೆನಿವರೊಳ ।
ನುಗ್ರಹಮಂ ಪಡೆವೆನೆಂದು ರಥದಿಂದಿೞಿದಂ ॥೧೧೬॥

ಅಂತಳವಿಗೞಿದು ರಥದಿನಿೞಿದು ಬೇಗಂ ಬಂದು ಬಳಾಚ್ಯುತರ ಮುಂದೆ ನಿಂದು ಕೈಗಳಂ ಮುಗಿದು ಮುನ್ನಮೆನ್ನಱಿಯಮೆಯಿನಿನ್ನೆವರಮನ್ನೆಯಮನಾಚರಿಸಿದೆನಿನ್ನಿಮ್ಮ ಬೆಸಸಿದಂದೊಳೆ ನೆಗೞ್ವೆನೆಂದು ಸರ್ವಾಂಗಪ್ರಣತನಾಗಿರ್ಪುದುಂ ಲಕ್ಷ್ಮಣಕುಮಾರನಂಜದಿರೆಂದಭಯ ವಚನದಿನವನ ಮನದ ಭಯುವುಂ ಕಳೆದುಂ ಬೞಿಯಂ ನೀಂ ಸೆಱೆವಿಡಿದಿರ್ದ ವಾಲಖಿಲ್ಯನಂ ತಡೆಯದೊಡಗೊಂಡುಬಾಯೆಂಬುದುಂ ಮಹಾಪ್ರಸಾದಮೆಂದಾಕ್ಷಣದೊಳ್ ಪೋಗಿ ತರ್ಪುದುಮಾತನತಿತ್ವರಿತಗತಿಯಿಂ ಬಂದು,

ಬಲನಾರಾಯಣದೇಹದೀಪ್ತಿ ತನುವಂ ತೞ್ಕೈಸೆ ಪಾದಾನತಂ
ಪಲಕಾಲಂ ಸೆಱೆಪೋಗಿ ಬೇಡರೊಡನೊಂದಾಗಿರ್ದ ತದ್ದೋಷಪಂ-
ಕಿಲತಾಕ್ಷಾಳನತತ್ಪರಂ ಸುರಸರಿತ್ಕಲ್ಲೋಲಮಂ ಯಾಮುನಾ-
ಜಲಮಂ ಪೊಕ್ಕಘಮರ್ಷಣಂ ಮುಳುಗಿದಂತಿರ್ದಂ ಪುರೋಭಾಗದೊಳ್ ॥೧೧೭॥

ಅಂತು ವಿನತನಾಗಿ ರಾಮಪ್ರೇಮವಚನದಮೃತವರ್ಷಣದಿಂ ಹರ್ಷಮಂ ತಾಳ್ದಿ ಮುಕುಳಿತಾಂಜಳಿಪುಟಂ ಮುಂದೆ ನಿಂದಿಂತೆಂದಂ:

ಅಪರಿಮಿತಸೈನಿಕಂ ಸಿಂ ।
ಹಪರಾಕ್ರಮನೆತ್ತಿ ಬಂದು ಸಿಂಹೋದರನೆ- ॥
ನ್ನಪರಾಭವಮಂ ಪಿಂಗಿಸ ।
ದೆ ಪಿಂಗಿದಂ ರೌದ್ರಭೂತಿಗಿದಿರಾಂಪವರಾರ್ ॥೧೧೮॥

ದ್ಯುಮಣಿಗೆ ಕೞ್ತಲೆ ಶರಭ ।
ಕ್ಕೆ ಮೃಗೇಂದ್ರಂ ಸೆಡೆವ ಮಾೞ್ಕೆಯಿಂ ಸೆಡೆದನಿವಂ॥
ನಿಮಗೆ ಸಮರಕ್ಕೆ ಮಿಕ್ಕರ ।
ಸುಮಕ್ಕಳಂ ರೌದ್ರಭೂತಿ ಲೆಕ್ಕಂಗೊಳ್ಳಂ ॥೧೧೯॥

ಜ್ಯಾತಾಡನ ಟಂಕಾರದೆ ।
ಭೀತಿಯನೀತಂಗೆ ಪಡೆದು ಪುರ್ವಿನ ಜರ್ವಿಂ ॥
ಪೋತಗೆವರೆ ನೀವಲ್ಲದ ।
ರೀತನ ಕೇಯೆಂಬ ಜವನ ಬಾಯಿಂದೆನ್ನಂ ॥೧೨೦॥

ನಿಮ್ಮಿಂದಾದುದು ಬಂದಮೋಕ್ಷಮೆನಗೀಗಳ್ ವೃತ್ತಿಯೊಳಾ ಜಾತಿಯೊಳ್
ನಿಮ್ಮಿಂ ನಿಂದೆನಪಾರದುಃಖಭರಮಂ ನಿಮ್ಮಿಂದೆ ಮುನ್ನೀಗಿದೆಂ
ನಿಮ್ಮಂ ಕಂಡು ಕೃತಾರ್ಥನಾದೆನೆಡೆಯೊಳ್ಮನ್ನಾದರಿನ್ನಪ್ಪವರ್
ನಿಮ್ಮಿಂದಂ ಪೆಱರಾರುದಾತ್ತಚರಿತರ್ದುರ್ವಾರಬಾಹಾಬಳರ್ ॥೧೨೧॥

ಎಂದು ಬಿನ್ನವಿಸಿ ನೀಮೆನ್ನ ಪುರಾಕೃತಮೆ ರೂಪುಗೊಂಡು ಬಂದಿರೇನಿಮಿತ್ತಮೆನಗಿನಿವಿರಿದುಪಕಾರಮನೊಡರ್ಚಿದಿರೆಂಬುದುಂ ಲಕ್ಷ್ಮಣನದೆಲ್ಲಮಂ ನಿನ್ನ ಪೊೞಲ್ಗೆ ಪೋಗಲೊಡಂ ನೀನೆ ತಿಳಿದಪ್ಪೆಯೆಂದು ರೌದ್ರಭೂತಿಯಂ ನೋಡಿ ವಾಲಖಿಲ್ಯನಂ ಮುಂದಿಟ್ಟು ಪೊೞಲಂ ಪುಗಿಸಿ ನೀನೀತನ ಪೇೞ್ದುದಂ ಗೆಯ್ದು ಸುಖಮಿರಲ್ಲದೊಡೆ ಮುಳಿವೆನೆಂದು ನಿಯಮಿಸಿ ಕೞಿಪುವುದುಂ ರೌದ್ರಭೂತಿ ಮಹಾವಿಭೂತಿಯಿಂ ಪೊೞಲಂ ಪುಗಿಸೆ ವಾಲಖಿಲ್ಯಂ ರಾಮಲಕ್ಷ್ಮಣರ ಸಾಹಸಮಂ ಸನಾಭಿಜನ ಪರಿಜನಪುರಜನಕ್ಕೆ ಸಹಸ್ರಮುಖದಿಂ ಸ್ತುತಿಯಿಸುವುದುಂ ಶುಭಮುಹೂರ್ತದೊಳ್ ಲಕ್ಷ್ಮಣಕುಮಾರಂಗೆ ನಿಜಕನ್ಯೆಯೊಳ್ ಮಹೋತ್ಸಾಹದಿಂ ವಿವಾಹಮನೊಡರ್ಚಿ ಸುಖದಿನರಸುಗೆಯ್ಯುತ್ತಿರ್ದನನ್ನೆಗಮಿತ್ತ ರಾಮಲಕ್ಷ್ಮಣರ್ ದಕ್ಷಿಣಾಭಿಮುಖರಾಗಿ ವಿಪಿನದೊಳಗನೆ ನಡೆಯ ನಡೆಯೆ,

ಭ್ರಮಿತಾಷ್ಟಾಪದಮುಗ್ರಖಡ್ಗಿ ಮೃಗಸಂಭನ್ನಂ ಜರದ್ವಂದಶೂ-
ಕಮುಖಶ್ವಾಸವಿಷಾಗ್ನಿದಗ್ಧವಿಪಿನಂ ಮತ್ತೇಭವಿಕ್ರೀಡಿತಂ
ತಮದೊಡ್ಡಂಬಿನೆಗಂ ಕಱಂಗಿ ನಭಮಂ ನುಂಗಿತ್ತು ಪಾಪರ್ದ್ಧಿಸಂ-
ಭ್ರಮಕೋಳಾಹಳಲುಬ್ಧಕಂ ಕಲುಷಿತಾಂತಸ್ಸಿಂಧು ವಿಂಧ್ಯಾಚಳಂ ॥೧೨೨॥

ನೆಲನಿಲ್ಲಿಂದಿತ್ತಲಿಲ್ಲೆಂಬಿನಮಿನಿತೆ ದಿಶಾಘಾಟಮೆಂಬನ್ನೆಗಂ ಕ-
ೞ್ತಲೆ ಚಂದ್ರಾದಿತ್ಯತೇಜಕ್ಕದಿರದಿದಿರನೊಡ್ಡಿರ್ದುದೆಂಬನ್ನೆಗಂ ಕ-
ೞ್ತಲಿಸುತ್ತಿರ್ದತ್ತು ಕಾಡಾನೆಯ ಕಡುಪುಗಳಿಂ ಸಿಂಹಸಂಘಾತದಿಂ ಪೆ-
ರ್ವುಲಿಪಿಂಡಿಂ ಕಣ್ಣಗುರ್ವಂ ಪಡೆದು ಕುಲನಗಸ್ಪರ್ಧಿ ವಿಂಧ್ಯಾಚಳೇಂದ್ರಂ ॥೧೨೩॥



ಶರದ್ವರ್ಣನಂ

ಆ ನಗೋಪತ್ಯಕದೊಳ್,

ಮಳಯರುರುಹಗಂಧಿ ಮೃಗಮದ ।
ತಿಳಕೆ ತಮಾಳಪ್ರವಾಳಕುಂತಲೆ ಪುಳಿನ- ॥
ಸ್ಥಳವಿಪುಳಜಘನೆ ಮದಗಜ ।
ವಿಳಾಸವತಿ ವನಲತಾಂಗಿ ಕಣ್ಗೆಸೆದಿರ್ದಳ್ ॥೧೨೪॥

ಆ ವಿಂಧ್ಯನಗಮಂ ದಾಂಟಿ ಪೋಗಿ ತಾಪಿಯೆಂಬ ತೊಱೆಯಂ ಪಾಯ್ದು ರುಣ್ಮೆಯೆಂಬಗ್ರಹಾರಮಂ ಪೊಕ್ಕದೊಂದು ಗೃಹಮಂ ಪುಗುವುದುಮಾಗಳಾ ಗೃಹದ ವಿಪ್ರವಧು,

ಆದೇಯ ರೂಪಮಂ ಕಂ ।
ಡಾದರಿಸಿದಳೇೞಲಿಕ್ಕಿದಳ್ಶೀತೆಗೆ ಶೀ- ॥
ತೋದಕದಿಂ ಗಮನಶ್ರಮ ।
ಖೇದಮನಾಱಿಸಿದಳೇನವಳ್ ಶುಭಮತಿಯೋ ॥೧೨೫॥

ಅನ್ನೆಗಮಾಕೆಯ ಭರ್ತಾರಂ ನಿಜಮಂದಿರಕ್ಕೆ ಬಂದವರಂ ಕಂಡಿವರನೇಕೆ ಪುಗಲಿತ್ತೆಯೆಂದರ್ಘ್ಯಪಾದ್ಯಪಾನೀಯಪಲಾಶ ಕಾಂಡಕುಶಕುಸುಮಹಸ್ತನಪ್ರಶಸ್ತಂ ಕೆಡೆನುಡಿಯೆ,

ಕಪಿಲನ ಕೈಪೆವಾತು ಕಿವಿಗೈತರನ ಜಾನಕಿ ಪೋಗಿ ಬಿಚ್ಚತಂ
ವಿಪಿನದೊಳಿರ್ಪಮಿಾಗೃಹದೊಳಿರ್ಪುದಱಿಂದೆನೆ ಕೇಳ್ದು ಲಕ್ಷ್ಮಣಂ
ಕುಪಿತಮನಂ ಕಟಾಕ್ಷಿಸುವುದುಂ ದಿವಿಜನೀತನವಧ್ಯನಲ್ತೆ ಸೈ-
ರಿಪುದನುಜಾತ ನೀಂ ಮುಳಿಯಲಕ್ಕುಮೆ ದುರ್ಬಳರೇನನೆಂದೊಡಂ ॥೧೨೬॥

ಎಂದು ರಘುವೀರನಲ್ಲಿಂ ಪೊಱಮಟ್ಟು ಪೊಱವೊಟಲಂ ಪೆಱಗಿಕ್ಕಿ ಪೆರ್ವಟ್ಟೆವಿಡಿದು ನಡೆಯುತ್ತುಂ,

ಮೂಲ ಸಟಾಳಿಯಿಂದಮುರಗಾಲಯಮಂ ಬಹುಶಾಖೆಯಿಂದಮಿಂ-
ದ್ರಾಲಯಮಂ ಪಳಂಚಿ ಹಿಮಮಂ ಸೆಱಗೆಯ್ದು ತಮಕ್ಕೆ ಕೊಂಬುಗೊ-
ಟ್ಟಾಲಮನಗ್ರಪಲ್ಲವಕರಾಗ್ರನಿರುದ್ಧಮರುತ್ತರಂಗಿಣೀ-
ಕೂಲಮನೈದಿದರ್ವಿಜಿತ ಚಂಡಮರೀಚಿ ಮರೀಚಿ ಜಾಲಮಂ ॥೧೨೭॥

ಅಂತೆಯ್ದೆವರ್ಪುದುಮಾ ವಟನಿವಾಸಿಯಪ್ಪಿಭಕರ್ಣದೇವನವರ ಪುಣ್ಯಪ್ರಭಾವಕ್ಕೆ ಬೆರ್ಚಿ ಬೆಗಡುಗೊಂಡೋಡಿ ಪೋಗಿ ವಿಂಧ್ಯಾಟವಿಯೊಳಿರ್ಪ ಯಕ್ಷರಾಜಂ ಕ್ರೀಡಾಪೂತನೆಂಬಂಗೆ ಚಂಡಕೋದಂಡಧರರಿರ್ವರೆನ್ನ ವಾಸಮಂ ಕೈಕೊಂಡೊಡವರ ದೇಹದೀಪ್ತಿಗಲ್ಲಿ ನಿಲಲಳ್ಕಿ ಬೆಳ್ಕುತ್ತುಂ ನಿಮಗಱಿಪಲ್ಬಂದನೆನೆಂಬುಮಾತನವಧಿಯಿನವರೀಕಾಲದ ಬಲದೇವವಾಸುದೇವ-ರೆಂಬುದುಮನವರ ಬಂದ ತೆಱನುಮನಱಿದವರಿಗೆ ಸತ್ಕಾರಮನೊಡರ್ಚಲೆಂದು ಬಂದು,

ಕ್ರೀಡಾಪೂತಂ ಪುರಮಂ ।
ಮಾಡಿದನಳಕಾಪುರಕ್ಕಮಮರಾವತಿಗಂ ॥
ನಾಡೆಯುಮಧಿಕಮೆನಲ್ಮಣಿ ।
ನೀಡಾಪ್ರಾಕಾರ ಗೋಪುರಾಟ್ಟಾಳಕಮಂ ॥೧೨೮॥

ಪುರದ ಬಹಿಃಪುರದಂತ: ।
ಪುರದರಮನೆಯವನಿಪತಿಯ ಮಾಡದ ಹಯಮಂ- ॥
ದಿರದಾನೆಸಾಲೆಯೊಂದಂ ।
ಬರೆಯಲ್ಕಂಡರಿಸಲರಿದು ಮಾಂಡವ್ಯಂಗಂ ॥೧೨೯॥

ಮಱಿಗಾಲಂ ಬರೆಯುಂ ಪೆ ।
ರ್ಮಱುವಿನೊಳಂ ಯಕ್ಷವಿಕ್ರಿಯಾಜನಿತಮದೇಂ ॥
ಪೊಱಲಾದುದೊ ರಘುವೀರನ ।
ಪಱಿಗಱಿದ ಪೊಗೞ್ತೆವೆತ್ತ ಪುಣ್ಯೋದಯದಿಂ ॥೧೩೦॥

ಅಂತಪೂರ್ವಮೆನೆ ಪುರಮಂ ವಿಗುರ್ವಿಸಿ,

ಕಿಂಕುರ್ವಾಣಪ್ರವಣರರೆಬರ್ ಬರ್ಪಿನಂ ಕಾದು ತನ್ನಂ
ಬಿಂಕಂ ಪೊಂಕಂಗಿಡಿಸಿ ನನೆವಿಲ್ಲಾತನಂ ತೊಟ್ಟ ದಿವ್ಯಾ-
ಳಂಕಾರಂಗಳ್ನಯನಸುಖಮಂ ನೀಡೆ ಬಂದರ್ಘ್ಯಮಂ ಯ-
ಕ್ಷಂ ಕೊಟ್ಟಂ ರಾಘವನ ಚರಣಕ್ಕಿನ್ನರಾರ್ಘನ್ಯಜನ್ಮರ್ ॥೧೩೧॥

ಅಂತರ್ಘ್ಯಮಂ ಕೊಟ್ಟು ಕೈಗಳಂ ಮುಗಿದು,

ಆಸನ್ನಂ ಮಱಿಗಾಲಮೆನ್ನ ಪುರದೊಳ್ನೀಮನ್ನೆಗಂ ದಿಗ್ಜಯ-
ವ್ಯಾಸಂಗಾರ್ಥಿಗಳಾಗದಿರ್ದು ಚರಿತಾರ್ಥ ಮಾಳ್ಪುದೆನ್ನಂ ಪರಾ-
ರ್ಥಾಸೀನಂ ನಿಜವೃತ್ತಮೆಂದು ನುಡಿದೆಂತಾನುಂ ಪ್ರಿಯಪ್ರಾರ್ಥನಾ-
ವ್ಯಾಸಂಗಾರ್ಥಿ ನರೇಂದ್ರನಂ ನಿಲಿಸಿದಂ ಯಕ್ಷಂ ಪರಾರ್ಥಪ್ರಿಯಂ ॥೧೩೨॥

ಅಂತೆಂತಾನುಂ ನಿಲಿಸಿ ತನ್ನ ವಿಗುರ್ವಿಸಿದ ಪುರಕ್ಕೊಯ್ದು,

ಅರಮನೆಯೊಳ್ಬಹುವಿಧ ಪರಿ ।
ಕರಪೂರ್ಣದೊಳಿರಿಸಿ ಮಾಡಿದಂ ಯಕ್ಷಂ ದಿ- ॥
ಕ್ಕರಿಕರ್ಣಕುಹರಮಂ ಪಟ ।
ಪರವಂ ತಳ್ಜೊಯ್ಯೆ ರಘುಸುತಗಂಭಿಷವಮಂ ॥೧೩೩॥

ಅಂತು ರಾಜ್ಯಾಭಿಷೇಕಂಗೆಯ್ದು,

ಬೇಡದೆ ಬೇಟ್ಪಿನಿತುಮನೆಡ ।
ಮಾಡದೆ ಪದನಱಿದು ತೀರ್ಚೆ ಪರಿಯಪ್ಪಿಯಲಂ ॥
ಪೋಡದೆ ರಾಮಂಗೊಳ್ಪಂ ।
ಮಾಡಿದನುಚಿತೋಪಚಾರದಕ್ಷಂ ಯಕ್ಷಂ ॥೧೩೪

ಮತ್ತಿತ್ತಲಾ ಕಪಿಲನೆಂದಿನಂದದಿನಾವಿಪಿನದಳ್ತೊೞಲುತ್ತುಂ,

ಎನಗಾಡುಂಬೊಲನೀ ಕಾ ।
ನನಮಿದಱೊಳಗಿನ್ನೆವರೆಗಮಾಂ ಕಾಣೆಂ ಲೋ- ॥
ಚನಹೃದಯಹಾರಿ ಪುರಮೊಂ ।
ದನಿದೇಂ ಕಂಡೆಂ ದಲೆಂದು ವಿಸ್ಮಿತನಾದಂ ॥೧೩೫।

ಆ ಸಮಯದೊಳ್ಸಮಯಾಭಿಧಾನಯಕ್ಷಿ ಪ್ರತ್ಯಕ್ಷವಾಗಿ ಪುರೋಭಾಗಕ್ಕೆ ಬರೆ ಕಪಿಲನಬ
ಪೇೞೀ ಪುರಕ್ಕೆ ಪೆಸರಾವುದಿದಕ್ಕಧಿಪತಿಗಳಾರೆಂಬುದುಂ,

ರಾಜಪುರಮೆಂಬುದಿದು ರಘು ।
ರಾಮಂ ಪುರದೊಡೆಯನಖಿಲವಸುಧೆಗೆ ಕಲ್ಪಾ- ॥
ರಾಮಮೆನೆ ಕೊಟ್ಟಪಂ ವಸು ।
ಧಾಮರ ನೀಂ ಪೋಗಿ ಬೇಡಿಕೊಳ್ಳಸವರಮಂ ॥೧೩೬।

ಎನೆ ಕಪಿಳಂ ವಿಷಣ್ಣನಪ್ಪುದಱಿಂ ದೇವತೆಗೆ ಕೈಗಳಂ ಮುಗಿದು,

ಎನಗವನೀಶದರ್ಶನದುಪಾಯಮನಂಬಿಕೆ ಪೇೞಿಮೆಂಬುದುಂ
ಜಿನಗೃಹಮಿರ್ದುದೀಪುರದ ಪೂರ್ವವಿಭಾಗದೊಳಿರ್ದರಲ್ಲಿ ಸ-
ನ್ಮುನಿಪರುಪಾಸಕರ್ಕ್ರಮದಿನಲ್ಲಿ ದೃಢವ್ರತನಾಗಿ ಪೋದೊಡಾ
ಮುನಿವರನಾಜ್ಞೆಗಡ್ಡಯಿಸರಲ್ಲಿಯ ಕಾಪಿನ ಯಕ್ಷರಾಕ್ಷಸರ್ ॥೧೩೭।

ಎಂಬುದುಮಾ ಯಕ್ಷಿ ಬೆಸಸಿದಂದದೊಳಾ ಬಸದಿಗೆ ಬಂದು ಜಿನಮುನಿಯಂ ಕಂಡು ಧರ್ಮಮಂ
ಬೆಸಗೊಂಡು ಲಘುಕರ್ಮಿಯಪ್ಪುದಱಿಂ ದರ್ಶನವಿಶುದ್ಧನಮಣುವ್ರತಧಾರಿಯುಮಾಗಿ
ಋಷಿನಿವೇದಕರೊಡನೆ ಗಂಧೋದಕಮನುಯ್ದು ಕೊಟ್ಟು ರಘುವೀರಂಗಿಚ್ಛಾಕಾರಪೂರ್ವಕದಿಂ
ಸರ್ವಾಂಗಪ್ರಣತನಾಗಿ ಕಾಣ್ಬುದುಮಾತಂ ವ್ರತಕ್ಕೆ ಬಂದುದಕ್ಕೆ ಮೆಚ್ಚಿ ಮೆಚ್ಚುಗೊಟ್ಟು ಕೞಿಪಿ,

ಎಱಗದೆ ಬಾೞ್ತಿಗೆಟ್ಟೆಡೆಗೆ ಪೊಂಮೞೆಯಂ ಧರೆಗಾವ ಕಾಲಮುಂ
ಕಱೆದು ಪರಾರ್ಥವೃತ್ತಿಯೊಳೆ ಪಾವನಮಾಗಿರೆ ತನ್ನ ಜೀವನಂ

ತೊಱೆದು ಕಳಂಕಪಂಕಿಳತೆಯಂ ಮಱಿಗಾಲದ ಸೊಂಪನೇಳಿಸ-
ಲ್ಕೆಱೆದನುಬಂಧಮಂ ಮೆಱೆದನಚ್ಚರಿ ಲಾಂಗಲಪಾಣಿ ಸೀತೆಯೊಳ್ ॥೧೩೮॥

ಅಂತು ರಾಮಲಕ್ಷ್ಮಣರಾ ಯಕ್ಷೋಪಚಾರದಿಂ ಸಮಾಹಿತಮನಸ್ಕರಲ್ಲಿರ್ಪುದುಂ,

ಮುಗುಳ ತೊಡಂಬೆ ಗಂಟೊಡೆಯ ಮೊಲ್ಲೆಗೆ ಬೆಳ್ಸಲಿವುಟ್ಟೆ ಪುಟ್ಟೆ ಕೇ-
ದಗೆಗಳ ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮಂ-
ಬೆಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸವುಟ್ಟೆ ಬೆಟ್ಟವೇ-
ಸಗೆಯ ಬಿಸಿಲ್ಗೆ ಶೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಳಂ ॥೧೩೯॥

ಪರಿತಾಪಂಗಿಡೆ ಪುಳಕಾಂ ।
ಕುರಮೊದವೆ ಲತಾಂಗದೊಳ್ನವೀಲೋಚನೆಗು- ॥
ರ್ವರೆಗಾನಂದಾಶ್ರುಗಳು ।
ಬ್ಬರಮಾದುವು ಪಶ್ಚಿಮಾನಿಳಂ ಸೋಂಕಲೊಡಂ ॥೧೪೦॥

ಪಸುರ್ಗವಿಲನಾದ ನೀಪದ ।
ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರ- ॥
ಪ್ರಸವಮುಮಂ ಸೊಟ್ಲೊಱೊ ।
ಳ್ಪಸವಟ್ಟಂದದೊಳೆ ಮುದುಱೆ ಮುತ್ತಿದುವಳಿಗಳ್ ॥೧೪೧॥

ಅಂತು ಘನಸಮಯಪ್ರವೇಶಮಖಿಳ ಜನಮನೋವಿಕಾಸಕ್ಕವಕಾಶಮಾಗೆ,

ಅಪರಾಂಭೋರಾಶಿವೇಳಾವನಮಮರಪುರೋದ್ಯಾನಮಂ ನೋಡಬೇೞ್ತಿಂ-
ದಪುದೋ ನೀಲಾಚಳಂಗಳ್ಕುಲಪರಿಭವಮಂ ಪಿಂಗಿಸಲ್ನಾಕಲೋಕಾ-
ಧಿಪನೊಳ್ಮೇಲೆತ್ತಿ ಕಾವಲ್ಸೆರೆದುವೊ ಬಡಬಾಭೀತಿಯಿಂ ಮೇಣ್ಯರಣ್ಬೊ-
ಕ್ಕಪುದೋ ನೀರಾಕರಂ ವ್ಯೋಮಮನೆನೆ ನೆಗೆದತ್ತಂದು ನೀಳಾಭ್ರಜಾಳಂ ॥೧೪೨॥

ಪಡುವಣ ಕಡಲಿಂದೊಗೆದುದು ।
ವಡವಾಗ್ನಿಯ ಪೊಗೆ ಪೊದಱ್ದು ಕಿಡಿವೆರಸೆನಲೇಂ ॥
ಕುಡುಮಿಂಚುವೆರಸು ಗಗನನ ।
ನಡರ್ದುದು ನೀರಂಧ್ರನೀಳಜಲದನಿವಹಂ ॥೧೪೩॥

ಪೊತ್ತುವ ವಡವಾಗ್ನಿಯ ಪೊಗೆ ।
ಸುತ್ತಿದೊಡುಮ್ಮಳಿಸಿ ಕರ್ಗಿ ಪಡುವಣ ಕಡಲೊ- ॥
ಳ್ಪೆತ್ತರಸದೆ ನೆಗೆದುವು ಜಲ ।
ಮತ್ತದ್ವಿಪಘಟೆಗಳೆನಿಸಿದುವು ಘನಘಟೆಗಳ್ ॥೧೪೪॥

ಇದಮೋಘಂ ಮೇಘಕಾಲಂ ಬರೆ ಗಗನಗೃಹದ್ವಾರದೊಳ್ತೋರಣಂ ಗ-
ಟ್ಟಿದುದೋ ಮೇಣ್ಪಂಚರತ್ನಾವಳಿವಿಳಸಿತಮಂ ಕಂಠಿಕಾಮಾಲೆಯಂ ಕ-
ಟ್ಟಿದಳೋ ದಿಗ್ದೇವಿ ಮೇಣ್ ರನ್ನದ ಪೊರಜೆ ನವಾಂಭೋದಮಾದ್ಯದ್ಗಜಕ್ಕಿ-
ಕ್ಕಿದುದೋ ಪೇೞಿಂಬಿನಂ ಕಣ್ಗೆಸೆದುದು ಶಬಳಚ್ಛಾಯೆಯಿಂ ಶಕ್ರಚಾಪಂ ||೧೪೫||

ಅನಂತರಂ,

ವಸುಧಾವಲ್ಲಭೆ ಮೇಘಕಾಲವಿಟನೊಳ್ಸಂಭೋಗಮಂ ಮಾಡೆ ಬ-
ಣ್ಣಸರಂ ಪೋರ್ಕುಳಿಯಿಂದಲೇಂ ಪರಿದು ಸೂಸಿತ್ತಲ್ಲದಿಂದೆತ್ತಣಿಂ
ಪೊಸಮುತ್ತುಂ ಕಿಸುಗಲ್ಗಳುಂ ಕೆದಱೆ ಕಣ್ಗಿಂಬಾದುವೆಂಬಂತದೇ
ನೆಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರ ಗೋಪಂಗಳುಂ ||೧೪೬||

ತೀಡುವ ಪಶ್ಚಿಮಾನಿಳನ ತೀಟದೊಳುತ್ಕಟಮಾಗೆ ರಾಗಮಿ
ರ್ಪೋಡಿದ ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ-
ನೀಡಿ ವಿಯತ್ತಳಕ್ಕಗಿದು ಕಾರಮುಗಿಲ್ದನಿಯಂ ಮನಂ ಕುಳಿ-
ರ್ಕೋಡುವಿನಂ ಕರ್ದುಂಕಿ ನಲಿವಾಡಿದುವಾಡಿದುವಂದು ಚಾತಕಂ ||೧೪೭||

ರಾಗದ ಬಳ್ಳಿ ಚಾದಗೆಗೆ ಕಾಂಚನಸಂಚಳಲಾಸ್ಯಜರ್ಝರಂ
ಸೋಗೆನವಿಲ್ಗೆ ಮೇಖಳೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ-
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ಕಭೋ-
ಭಾಗದೊಳಂದು ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆಯಂ ||೧೪೮||

ಬಿಡೆ ಕೆಮ್ಮನೆ ಗರ್ಜಿಪ ತ ।
ಕ್ಕಿಡೆ ತಗದೆಡೆಯೆನ್ನದೆಱಗುವಸ್ಥಿರಮಪ್ಪಾ ॥
ಜಡನಚಿರಪ್ರಭೆ ನಿಷಮಿದೊ ।
ಳಡಂಗುಗುಂ ಬೆಳಗದೆಂತುಮದು ಸತ್ಪಥಮಂ ||೧೪೯||

ಘನಗರ್ಭಾಶಾವಧೂಪುಂಸವನದೆಸೆವ ತೂರ್ಯಸ್ವನಂ ಚೂಳಿಕಾವ-
ರ್ಧನಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ ವಿದೂರಾ-
ವನಿಯೊಳ್ವೈಢೂರ್ಯರತ್ನಂ ಜನಿಯಿಸೆ ನೆಗಟ್ದಾನಂದಭೇರೀರವಂ ತಾ-
ನೆನೆ ರೋದೋಬಾಗಧೊಳ್ಘೂರ್ಣಿಸಿದುದಭಿನವಾಂಭೋದಗಂಭೀರನಾದಂ ||೧೫೦||

ಘನನಿನದಭಯಂಕರಮಂ ।
ಜನಿಯಿಸೆ ನೆನೆಯಿಸಿದರಂದು ಕಳಹಂಸಕುಟುಂ- ॥
ಬಿನಿಯಂ ಪ್ರಿಯವಿರಹಾಳಂ ।
ಬಿನಿಯಂ ಮೃದುವೆನಿಪ ಮನದೊಳಂ ಗಮನದೊಳಂ ||೧೫೧||

ಉಗುಳುತ್ತುಂ ಸಿಡಿಲೆಂಬ ತೋರಕಿಡಿಯಂ ಕಾಲುೞ್ ಭೂಭಾಗದೊ-
ಳ್ಗಗನಾಭೋಗಮನೆಯ್ದಿ ನೀಳ್ದ ಘನವೇಣೀಬಂಧಮಂ ಬಿರ್ಚಿ ಮಿಂ-
ಚುಗಳೆಂಬುಳ್ಕುವ ದಾಡೆಗಳ್ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ-
ಸಗೆಯಂ ಬೆರ್ಚಿಸಿ ಗರ್ಜಿಸುತ್ತಲೊಗೆದಂ ಕಾರೆಂಬ ಕಾಳಾಸುರಂ ||೧೫೨||

ಮದಮದಿರಾಪ್ರಮತ್ತಜನತಾಶಯದಂತೆ ಜಡಾಶಯಂ ಕಲಂ-
ಕಿದುದು ಮನೋಜದೀಪಕಳಿಕಾನನದಂತಿರೆ ಕಾನನಂ ಕಱಿಂ-
ಗಿದುದು ವಿರೋಧಿವಾಹಿನಿಗಳಂತಿರೆ ವಾಹಿನಿಗಳ್ಗಡಂಗಿ ಮಿಾ-
ಱಿದುವನುಕೂಲಮಾರ್ಗಮನದೇಂ ಮೞೆಗಾಲಮಳುಂಬಮಾದುದೋ ||೧೫೩||

ನವವಿಧಮಪ್ಪ ಕಣ್ಪೊಳೆಪು ರಂಜಿಸೆ ಸಂಚಳಿತಾಂಗಹಾರದಿಂ
ವಿವಿಧ ಘನಸ್ವನಕ್ಕೆ ನವಿಲಾಡೆ ಘನಾಘನಲಕ್ಷ್ಮಿ ಕೇತಕೀ-
ಧವಳ ಕಟಾಕ್ಷೆ ಕಂಡು ರಸಮಗ್ನತೆಯಿಂ ಪುಳಕಾಂಕುರಂಗಳ-
ತ್ಯವಿರಳಮಾಗೆ ಕೊಟ್ಟಳಚಿರಪ್ರಭೆಯೆಂಬ ಸುವರ್ಣಮಾಲೆಯಂ ||೧೫೪||

ಇಂದೊವರೆನಿಸಿದ ತನಿರಸ ।
ದಿಂದೊದವಿದ ನೀಳಪಾಟಳಚ್ಛವಿಯಿಂ ಸು- ||
ಣ್ಪಂದೆಸೆವರನೇಱಿಲ ಪ ।
ಣ್ಣಂದರಗಿಣಿಯಾಮ್ರದೊಲವನೇಂ ತೊಲಗಿಸಿತೋ ||೧೫೫||

ಕಾಕಂದಂ ಫಳಹೀನಮಾದ ಪದದೊಳ್ಜಂಬೂಫಳಾಸ್ವಾದನ-
ಸ್ವೀಕಾರೋತ್ಸವದಿಂದದಂ ಮಱೆದ ಕೀರಂ ಪ್ರೌಢಿಯಂ ತಾಳ್ದಿದ-
ತ್ತೇಕಗ್ರಾಹಿ ಕನಲ್ದು ಚೂತಕಳಿಕಾ ಸ್ವಾದವ್ಯವಚ್ಛೇದದಿಂ
ಮೂಕೀಭಾವವಮನಪ್ಪುಕೆಯ್ದುದು ವಿವೇಕವ್ಯಾಕುಳಂ ಕೋಕಿಳಂ ||೧೫೬||

ಪಸುರ್ವುಲ್ಲಂ ಮೇದು ಬಂದೊಂದೆಡೆಯೊಳಮೊಡಲಿಂಬಿಲ್ಲೆನಲ್ಕೊರ್ವಿ ಕೆಚ್ಚ-
ಲ್ಬುಸಿವನ್ನಂ ಬೀಗಿ ಪಾಲಂಬಿಱಿವಿಡೆ ಮೊಲೆಯಿಂ ವತ್ಸಪೀತಾವಶೇಷಂ
ಪೊಸಗಾರೊಳ್ಗಾರಲೊಳ್ಕಣ್ಣರೆ ಮುಗಿದಿರೆ ಸೃಕ್ವಂಗಳಿಂ ಸೂಸೆ ಫೇನ-
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ||೧೫೭||

ಸುರಿವ ಮೞೆಗಳ್ಗೆ ಗಿರಿಕಂ ।
ದರದೊಳ್ಮಡಗಿಟ್ಟು ತಮ್ಮ ಶಾಬಕದಂಬ- ||
ಕ್ಕರೆಗರ್ಚಿ ಹರಿತದೂರ್ವಾಂ ।
ಕುರಮಂ ಕೊಂಡುಯ್ದುದಂದು ಹರಿಣೀಯೂಥಂ ||೧೫೮||



ಶರದ್ವರ್ಣನಂ

ಭೋರೆಂದೆಱಗುವ ಜಳಧರ ।
ಧಾರಾಪುಷ್ಕದಿನಾತ್ಮ ಕರಪುಷ್ಕರಮಂ ॥
ಪೂರಿಸಿ ಸಿಂಪಿಣಿಯಂ ಕಾಲಂ ।
ತಾರದೊಳಾಡಿದುವು ಕರಿಗಳುಂ ಕರಿಣಿಗಳುಂ ॥೧೫೯॥

ಮಾರಂ ವಿರಹಿಗೊಡರ್ಚಿದ ।
ಮಾರಣ ಹೋಮಾಗ್ನಿಧೂಮಪಟಲಂಗಳವೋ ॥
ಲ್ಕಾರ ಮುಗಿಲ್ನೆಗೆದುವು ರತಿ ।
ನೀರೆಱೆದೋವಿದ ತಮಾಲಷಂಡಗಳವೋಲ್ ॥೧೬೦॥

ಪೋಗಿಂ ಪೋಗಿಂ ಮೊಲ್ಲೆಯ ।
ಪೂಗಣೆದೊಟ್ಟಂ ಮನೋಭವಂ ಬಿರಯಿಗಳೊಂ- ॥
ದಾಗಿರಿಮೆಂದೊದಱುವವೋ ।
ಲ್ಪೋಗೆಗಳಂ ಕೆದಱಿ ಸೋಗೆ ಕೇಕಿದುವಾಗಳ್ ॥೧೬೧॥

ಓವದೆ ಕುಡುಮಿಂಚಿನ ಕೈ ।
ದೀವಿಗೆವಿಡಿದಱಸಿ ಮನ್ಮಥಂ ಬಿರಯಿಗಳಂ ॥
ತೀವಿ ನೆಱೆ ತೆಗೆದು ಕೀದಗೆ ।
ವೂವಿನ ಕೊನೆಗಱಿಯ ಸಲಗಿನಂಬಿನೊಳೆಚ್ಚಂ ॥೧೬೨॥

ಎಲ್ಲದೆ ಬಿಸತಂತುಪ ಜ್ಯಾ ।
ವಲ್ಲರಿಯಂ ಕುಸುಮ ಬಾಣಮಂ ಕಬ್ಬಿನ ಬ- ॥
ಲ್ವಿಲ್ಲಂ ಕಾಮಂ ಕಾಮನ ।
ಬಿಲ್ಲೊಳೆ ವಿರಹಿಗಳನಟ್ಟಿ ಮೋದುವನೀಗಳ್ ॥೧೬೩॥

ಅಂತತಿ ಪ್ರಬಳಮಾದ ಘನಸಮಯಮತಿಕ್ರಮಿಸೆ ಮೊಲ್ಲೆಯ ಪೂಗುಡಿ ಪಲ್ಲಟಿಸೆಯುಂ ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ ಚಾದಗೆ ನವೋದಬಿಂದುಭಕ್ಷಣವ್ರತಮನುಜ್ಜೈಸೆಯುಂ ಸೋಗೆನವಿಲಪಿಂಡು ತಾಂಡವಕ್ಕಲಸೆಯುಂ ಹಂಸಮಂಡಳಂ ಮೃಣಾಳಕಾಂಡಮಂ ಸವಿದು ಸೊಕ್ಕೆಯುಂ ಗಿರಿದರಿವನಕ್ಕೆ ನಿರ್ಝರ ಬೞಿಯಟ್ಟೆಯುಮತಿ ಪ್ರಕಾಶಮಾದ ಶರತ್ಪ್ರವೇಶದೊಳ್,

ಪರೆಯಿಕ್ಕಿ ಪೋದುವಚಿರಾಂ ।
ಶುರಸನ ಘನಕಾಳ ವಿಷಧರಂಗಳ್ಗಗನೋ- ॥
ದರಗಪ್ಪುಪದೊಳೆನಲ್ತರ ।
ತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್ ॥೧೬೪॥

ಇರುಳಿಂದುವಿನೊಡವೋಗದೆ ।
ಶರದದ ಬೆಳ್ದಿಂಗಳಹಿಮಕರಕರತಪ್ತಂ ॥
ತೆರಳೆ ಕೆನೆಗಟ್ಟವಂತಿರೆ ।
ಪೊರೆವೊರೆಗೊಂಡಿರೆ ಮುಗಿಲ್ಪಗಿಲ್ತುವು ನಭದೊಳ್ ॥೧೬೫॥

ಒವದೆ ಮೀನಮೇಷ ವೃಷಭಾದಿಗಳಂ ಕ್ರಮದಿಂ ದಿನಾಧಿಪಂ
ಸೇವಿಸೆ ಮತ್ತೆ ಕನ್ಯೆಯೊಡಗೂಡಲೊಡಂ ಕಿಡೆ ತನ್ನ ತೇಜಮಿ-
ನ್ನಾವುದು ಕಜ್ಜಮೆಂದು ತೊಲೆಯಂ ಜನರಂಜನೆಗೇಜ್ ರಾಗಮಂ
ಭೂವಳಯಕ್ಕೆ ಬೀಜ್‌ವನಿದೇಂ ಪ್ರಭುಮಾಡಿದ ಮಾಯೆಯಲ್ಲದೆ ॥೧೬೬॥

ಇಂಗಡಲೊಳಗೋಲಾಡುವ ।
ಮೀಂಗಳ ಬಳಗಂಗಳೆಂಬಿನಂ ಶರದದ ಬೆ- ॥
ಳ್ದಿಂಗಳೊಳಾಡಿದುವು ಚಕೋ ।
ರಂಗಳ್ಚಂದ್ರಾಂಶುಪೂರ್ಣಚಂಚುಪುಟಂಗಳ್ ॥೧೬೭॥

ಬಳಸಿ ಸುಟಿದಾಡಿ ಕಾಲ್ಪಿಡಿ ।
ದೆಳಸಿ ಕಳಾಳಾಪಮೊದವೆ ಜನನಿಯ ಮೊಲೆವಾ- ॥
ಲ್ಗಳನುಂಬ ಶಿಶುವಿನಂತಿರೆ ।
ಕಳವೆಯ ಪಾಲ್ದೆನೆಯ ಪಾಲನುಂಡುವು ಗಿಳಿಗಳ್ ॥೧೬೮॥

ದೂರದೊಳೀಕ್ಷಿಸಿ ತುಂಗಾ ।
ಕಾರದೊಳೊಂದಿದ ಋಜುತ್ವಮಂ ಪದೆದೆಳಸಿ- ॥
ತ್ತಾರಯ್ದು ನೋಡದಂತ ।
ಸ್ಸಾರತೆಯಂ ಕಾಶಕಣಿಶಮಂ ಶುಕಶಾಬಂ ॥೧೬೯॥

ಆ ಶರತ್ಸಮಯದೊಳ್,

ತನಗತ್ಯುತ್ಸಾಹದಿಂ ಯಕ್ಷನ ನೆಗಳ್ಚುಚಿತಾಚಾರಮುಂ ಬೇಳ್ಪುದಂ ಸ-
ಮ್ಮನದಿಂದಂ ಮಾಳ್ಪ ಸಂಪ್ರೀತಿಯನನುನಯದಿಂ ಹರ್ಷಮಂ ಮಾಡೆ ಸಾಹಿ-
ತ್ಯನಟೀಶೈಲೂಷನಸ್ಫೂರ್ಜಿತ ಶುಭಚರಿತಂ ಸಜ್ಜನಾಧಾರನಿರ್ದಂ
ಮ್ಯನದೀಫೇನಪ್ರತಾನಪ್ರಥಿತಪೃಥುಯಶಂ ಭಾರತೀಕರ್ಣಪೂರಂ ॥೧೭೦॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರ ಮುನೀಂದ್ರ ಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಶರದ್ವರ್ಣನಂ ಸಪ್ತಮಾಶ್ವಾಸಂ



## ೮. ಚಾರಣಯುಗಲದರ್ಶನ ವರ್ಣನಂ

ಶ್ರೀನಿಳಯನಿಷ್ಟವಿಷಯಸು ।
ಖಾನುಭವಂ ಬಡೆದು ದೇವನಿರ್ಮಿತನೆನಿಸಿ- ॥
ರ್ದಾ ನಗರಿಯೊಳಪ್ರಾಕೃತ ।
ಮಾನಧನಂ ಸುಖದಿನಿರ್ದನಭಿನವಪಂಪಂ ॥೧॥

ಆ ಶರತ್ಸಮಯಸಮನಂತರಂ ಗಮನೋತ್ಸುಕನಾದ ರಾಮಂಗಮೂಲ್ಯಮುಕ್ತಾದಾಮಮುಮಂ ಲಕ್ಷ್ಮಣಂಗೆ ಮಣಿ ಕುಂಡಳಮುಮಂ ಸೀತಾದೇವಿಗೆ ಚೂಡಾಮಣಿಯುಮಂ ವೀಣಾರತ್ನಮುಮನೋಲಗಿಸಿ, ವಿಷಮಮಾದೆಡೆಗೆನ್ನಂ ನೆನೆವುದೆಂದು ವಿನಯಮಂ ನುಡಿದು ಕಿಱಿದೆಡೆಯಂ ಕಟಿಪಿ ಬೀೞ್ಕೊಂಡು ಬಂದು ಯಕ್ಷಂ ವೈಕುರ್ವಣಪುರಮನದೃಶ್ಯಂ ಮಾಡಿ ನಿಜ ನಿವಾಸಕ್ಕೆ ಪೋದನಿತ್ತ ರಾಮಲಕ್ಷ್ಮಣರ್ನಿಜವಯಣದಿಂ ವಿಜಯಾಪುರದ ಬಹಿರೋದ್ಯಾನಮನೆಯ್ದಿ ಬರ್ಪ ಸಮಯದೊಳ್,

ಮುನ್ನಿನ ಕಾಯ್ಪುಗೆಟ್ಟು ದಶದಿಙ್ಮುಖದಿಂ ಪೆಱಮೆಟ್ಟಿ ರಶ್ಮಿಗ-
ಳ್ತನ್ನೊಳಡಂಗೆ ಚಂಡಕಿರಣಂ ವರುಣಾನಿಯ ಕೈಯ ಕೆಂಬರ-
ಳ್ಗನ್ನಡಿಯಂತೆ ದಿಟ್ಟಗಳವಟ್ಟಿರೆ ಪೊರ್ದಿದನಬ್ಜಷಂಡಸಂ-
ಛನ್ನಮನುತ್ಕಹಂಸಮಧುರಸ್ವನಮಂ ಬನಮಂ ರಘೂದ್ವಹಂ ॥೨॥

ಅಂತತಿಶಯಮಪ್ಪ ವನವಿಳಾಸಮಂ ಸೀತೆಗೆ ತೋಱುತ್ತುಂ ಬಂದೊಂದು ತಿಳಿಗೊಳನ ತಡಿಯ ತಮಾಳಲತಾಗೃಹದೊಳ್ವಿಶ್ರಮಿಸಿರ್ಪುದುಂ,

ಲತೆವನೆಯೊಳಗಣ ತಣ್ಬುಳಿ ।
ಲ ತಾಣದೊಳ್ಕುಸುಮದೆಸಳ ಪಸೆಯಂ ಸೀತಾ- ॥
ಪತಿಗೆ ಸಮೆದಂ ಸುಮಿತ್ರಾ ।
ಸುತಂ ಸಹೋದರರೊಳಿಂತತಿಸ್ನೇಹಿತರಾರ್ ॥೩॥

ಸೌಮಿತ್ರಿಯ ನಿರತಿಶಯ ।
ಪ್ರೇಮಮನದನಂತುಟಂತುಟೆಂಬಂತುಟೆ ನಿ- ॥

ದ್ರಾಮುದ್ರಿತಲೋಚನನಿರೆ ।
ರಾಮಂ ರಕ್ಷಾನಿಮಿತ್ತಮೆೞ್ಚತ್ತಿರ್ದಂ ॥೪॥

ಅಂತನತಿಮೂರಮಪುವಿದೊಂದು ಮಾಕಂದನಂದನದ ಪೊದಱೊಳುಪೇಂದ್ರ-ನಿಷ್ಠುರ್ವಿದುಮಿತ್ತಲಾಪುರಾಧಿಪತಿಯಪ್ಪ ಪೃಥ್ವೀಧರಮಹಾರಾಜಂಗಮಾತನ ಮಹಾದೇವಿಯಪ್ಪ ಇಂದ್ರಾಣಿಗಂ ಪುಟ್ಟಿದ ವನಮಾಲೆಯೆಂಬ ಬಾಲೆ,

ಗಂಡರ್ಚೆನ್ನಿಗರನ್ನರಿಲ್ಲ ಕಲಿ ಬಿಲ್ಲಾಳನ್ನರಿಲ್ಲೆಂದು ಮುಂ-
ಕಂಡರ್ಬಣ್ಣಿಸೆ ಕೇಳ್ದುಕೇಳ್ದು ಕಿವಿವೇಟಂಗೊಂಡು ಲಕ್ಷ್ಮೀಧರಂ
ಗಂಡಂ ಪೋ ಪೋಱೆಯಲ್ಲರನ್ಯರೆನಗೆಂಬೀ ಪೂಣ್ಕೆಯಿಂ ಕನ್ನೆ ಕೈ-
ಕೊಂಡಳ್ಗಾಡಿಯನೆಯ್ದೆ ನೋಡಿದವರಾರಾತಂಗೆ ಕಣ್ಸೋಲದರ್ ॥೫॥

ಅಂತಾಕೆಯ ಬಗೆಯೊಳೊಡಂಬಟ್ಟಂತೆ ವನಮಾಲೆಯ ಮಾತಾಪಿತೃಗಳ್ ಲಕ್ಷ್ಮಣಂಗೆ ಕುಡುವೆವೆಂದು ನಿಶ್ಚಯಂಗೆಯ್ದಿರ್ದು ದಶರಥಂ ತಪಂಬಟ್ಟುದುಮಂ ರಾಮಲಕ್ಷ್ಮಣರ್ ಪೞುವಟ್ಟುದುಮಂ ಚರವಚನದಿನಱಿದಿಂದ್ರಪುರಮನಾಳ್ವ ಸೌಂದರಕುಮಾರಂಗೆ ತನ್ನಂ ಕುಡಲೆಂದಿರ್ಪುದುಮದಂ ಕೇಳ್ದು ವನದೇವತೆಯನರ್ಚಿಸುವೆನೆಂಬ ನೆವದಿಂದುಪವಾಸಮಿರ್ದು ಕತಿಪಯ ಪರಿಜನಂಬೆರಸು ಮಹಾವಿಭೂತಿಯಿಂ ಬನದೊಳಗೆ ಲಕ್ಷ್ಮಣನಿರ್ದ ದೆಸೆಗೆ ಪುಣ್ಯಪ್ರೇರಣೆಯಿಂ ಪೋಗಿ ದೇವತೆಯನರ್ಚಿಸಿ ಜಾಗರಮಿರ್ದೆಲ್ಲರುಂ ನಿದ್ರಾವಶಗತರಾಗೆ ನಿರ್ವೇಗಪರೆ ಶಯ್ಯಾತಳದಿನೆೞ್ದು,

ತನುಗಂಧಂ ಬನಮೆಲ್ಲಮಂ ಬಳಸೆ ನೇತ್ರಜ್ಯೋತ್ಸ್ನೆಯುಂ ರತ್ನಮಂ-
ಡನಬಾಲಾತಪಮುಂ ತಮಕ್ಕೆ ತವಿಲಂ ತರ್ಪನ್ನಮೇೞ್ತರ್ಪಳಂ
ವನಲಕ್ಷ್ಮೀವಧುವೋ ಸುರಪ್ರಮದೆಯೋ ವಿದ್ಯಾಧರಸ್ತ್ರೀಯೊ ಪೇ-
ೞೆನುತುಂ ಕಣ್ಣೆಮೆಯಿಕ್ಕದೀಕ್ಷಿಸಿದನಾ ಸ್ತ್ರೀರತ್ನಮಂ ಲಕ್ಷ್ಮಣಂ ॥೬॥

ಅಂತು ನೀಡುಂ ಭಾವಿಸಿ ನೋಡಿ,

ಬನಮೆತ್ತಲ್ಬಾಲೆಯೆತ್ತಲ್ನಡುವಿರುಳೊಡನಿಲ್ಲೊರ್ವರುಂ ಭೀತಿಗೆಟ್ಟಾ-
ವ ನಿಮಿತ್ತಂ ಬಂದಳೆಂಬೀ ತೞಿನನಱಿವೆನಾನೆಂದು ಲಕ್ಷ್ಮೀಧರಂ ಬೆ-
ನ್ನನೆ ಪೋದಂ ಪೊಕ್ಕಳಾ ಕನ್ನೆಯುಮವನಿತಳಾಲಿಂಗಿತಾನೇಕಶಾಖಾ-
ಜನಿತಧ್ವಾಂತಾಂತರಾಳಪ್ರಬಳವಟಮನೇಗೆಯ್ಯುದ್ವೇಗವೇಗಂ ॥೭॥

ಅಂತಾ ಮರದಡಿಯೊಳಾಕೆ ನಿಂದು "ರಾಮನನುಜನಪ್ಪ ಲಕ್ಷ್ಮಣಕುಮಾರನೆತ್ತಾನುಮೀ ಬನಕ್ಕೆ ವಿನೋದದಿಂ ಬಂದನಪ್ಪೊಡೆ, ವಟನಿವಾಸಿನಿಯರಪ್ಪ ದೇವತೆಯರಾರಾನುಮುಳ್ಳೊಡೆ, 'ಲಕ್ಷ್ಮಣಕುಮಾರ, ನಿನಗಲ್ಲದೆ ವನಮಾಲೆ ವಧುವಾಗೆನೆಂದು ಸೇಲ್ದು ಸತ್ತಳೆಂಬುದಂ ಮಱೆಯದಱಿಪುವುದೆಂ" ದು ಕರುಣವಾಗೆ ನುಡಿದು,



ಚಾರಣ ಯುಗಲದರ್ಶನ ವರ್ಣನಂ

ಮೃತಿಗಿನಿಸಪ್ಪೊಡಂ ಬಗೆಯದೀ ಭರದೊಳ್ದೊರೆಕೊಂಡುದಿಲ್ಲದು-
ಷ್ಕೃತದೊದವಿಂ ಮನಃಪ್ರಿಯಕರಗ್ರಹಣಂ ಮಱುಮೆಯ್ಯೊಳಾದೊಡಂ
ಪತಿಯೆನಗಕ್ಕೆ ಲಕ್ಷ್ಮಣನೆನುತ್ತುಮವಳ್ಕೊರಲೊಳ್ತೊಡರ್ಚಿದಳ್
ಲತೆಯನದೇವೊಗಟ್ವುದೆರಡಿಲ್ಲದ ನಲ್ಮೆಯನಾ ಲತಾಂಗಿಯ ॥೮॥

ಅನಂತರಂ,

ಬೇಗಂ ಬಂದಾವಧು ನೇ ।
ಲ್ವಾಗಳ್ನೀನಱಿಸುವಾತನಾನುಱ್ ಮರಣೋ- ॥
ದ್ಯೋಗಮನೆಂದು ಘನಧ್ವನಿ ।
ಸೋಗೆಯಂ ಕಿವಿಸಾರ್ದುದೆನಿಸಿ ಕೃಷ್ಣಂ ನುಡಿದಂ ॥೯॥

ಅಂತು ನುಡಿದು,

ವನಮಾಲಾಮಂಡನನಾ ।
ವನಮಾಲೆಯನಕ್ಕಱಿಂದೆ ತೞ್ಕೈಸಿದನ- ॥
ಬ್ಜಿನಿಯಂ ಕರಂಗಳಿಂದ ।
ಬ್ಜಿನೀಪ್ರಿಯಂ ಚಂಡಭಾನು ತೞ್ಕೈಸುವವೋಲ್ ॥೧೦॥

ಅಂತು ನೇಲ್ವಾಕೆಯಂ ತೞ್ಕೈಸಿ ನೆಗಪಿ,

ಓಪಳ ಕೊರಲೊಳ್ಕೋದ ಲ ।
ತಾಪಾಶಮನಂಬುಜೋದರಂ ಕಳೆದು ಸಮು- ॥
ದ್ದೀಪಿತರಾಗಂ ಮೋಹಲ ।
ತಾಪಾಶಮನೊಡನೆ ತನ್ನ ಕೊರಲೊಳ್ಕೋದಂ ॥೧೧॥

ಆಗಳತಿಸಂಭ್ರಮಮನಪ್ಪುಕೆಯ್ದು,

ಹರಿನೀಳಚ್ಛವಿ ಪುಂಡರೀಕನಯನಂ ವಿಸ್ತೀರ್ಣವಕ್ಷಸ್ಥಳಂ
ಪರಿವೃತ್ತಾಯತಬಾಹು ಪೀವರನಿತಂಬಂ ಗಂಡರೊಳ್ನೀಱನೆಂ-
ಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು ಕಣ್ಣಾರ್ವಿನಂ
ಹರಿಯಂ ನೋಡಿದಳಾಕೆ ತನ್ನ ಕಡೆಗಣ್ಣಳ್ಬೀಱೆ ಬೆಳ್ದಿಂಗಳಂ ॥೧೨॥

ಬೆಮರ್ವನಿ ಕೈಮಿಗೆ ಲಜ್ಜಾ ।
ನಮಿತಾನನೆ ನಿಮಿರ್ದ ಸುಯ್ಗಳೊಡನೆ ಕಟಾಕ್ಷಂ ॥
ನಿಮಿರ್ದೆಸೆಯೆ ನೋಡಿದಳ್ಗಂ ।
ಭ್ರಮದಿಂ ವನಮಾಲೆ ಬಾಲೆ ಪೀತಾಂಬರನಂ ॥೧೩॥

ಆ ಸಮಯದೊಳ್ ಲಕ್ಷ್ಮಣಕುಮಾರನುಮಾಕೆಯಂ ನೋಡದಂತೆ ನೋಡಿ,

ಪಲ್ಲಟಿಸದೆ ಕಣ್ಗಳ್ಗಿಂ ।
ದಲ್ಲಿಯೆ ನಿಲೆ ತಮ್ಮೊಳಳಸಿ ನೋಡುವ ಪದದೊಳ್ ॥
ಫುಲ್ಲಶರಂ ಕೆಳವಾಡಿಯ ।
ಬಿಲ್ಲಂ ತಿರ್ದೆಸಗದರಲ ಸರಲಂ ಸುರಿದಂ ॥೧೪॥

ನಡುವಿರುಳಾರುಮಿಲ್ಲದೆಡೆಯೊಳ್ಕೊರಲೊಳ್ವಧು ಕೋದು ಬಳ್ಳಿಯಂ
ಮಡಿಯಲೊಡರ್ಚೆ ಲಕ್ಷ್ಮಣನಿಮಿತ್ತದಿನಾಕೆಯ ದೆಯ್ವದೊಂದೊಡಂ-
ಬಡಿಕೆಯಿನಾಗಳಾಯಿರುಳೊಳಲ್ಲಿಗೆ ತಾಂ ಪೞುವಟ್ಟುಬಂದು ಕೈ-
ಪಿಡಿದೊಡೆ ಸಾವು ಮಾಣ್ಬುದೆನೆ ಸಾಯದರಂ ಕೊಲಲಾರುಮಾರ್ಪರೇ ॥೧೫॥

ಅನಂತರಮಾ ಕಾಂತೆವೆರಸು ಲಕ್ಷ್ಮಣಂ ನಿಜಾಗ್ರಜನಿರ್ದ ಲತಾಗೃಹಕ್ಕೆ ಪೋಪುದುಮಿತ್ತಲ್ವನಮಾಲೆಯ ಕೆಳದಿಯರುಮಾಕೆಯಂ ಶಯ್ಯಾತಳದೊಳ್ಕಾಣದೆ ಬೆಗಡುಗೊಂಡಾ ವನದೊಳ್ತೊೞಲ್ದಱಸುತ್ತುಂ ಬಂದಲ್ಲಿರ್ದಾಕೆಯುಂ ಕಂಡಲ್ಲಿರ್ದ ಮಹಾನುಭಾವರಂ ರಾಮಲಕ್ಷ್ಮಣರೆಂದಱಿದು ಮೃಗಾಪಿನವರ್ಪರಿತಂದು ನನಗಱಿಪುವದುಂ ಪೃಥ್ವೀಧರಂ ಪೊೞಲೊಳಪ್ಪಶೋಭೆಯುಂ ಮಾಡಿಸಿ ಚತುರಂಗಬಲಂಬೆರಸು ಬೇಗಮಿದಿರ್ವೋಗಿ ರಾಜಭವನಕುಯ್ದಭ್ಯಾಗತ ಪ್ರತಿಪತ್ತಿಯಿಂ ಮನ್ನಿಸಿ ಶುಭದಿನ ಮುಹೂರ್ತದೊಳ್,

ಉತ್ತಮ ಕನ್ಯಾರತ್ನಮ ।
ನಿತ್ತಂ ಪೃಥ್ವೀಧರಂ ನರೇಂದ್ರೋತ್ತಮನ- ॥
ತ್ಯುತ್ತಮವರನೆನಿಸಿದ ಪುರು ।
ಷೋತ್ತಮದೇವಂಗೆ ಕೂಸುಗೊಡಲಾರ್ಪಡೆವರ್ ॥೧೬॥

ಅಂತು ವನಮಾಲೆಗಂ ಚಕ್ರಪಾಣಿಗಂ ಪಾಣಿಗ್ರಹಣಮಪ್ಪುದುಮಾ-ಸಮಯದೊಳೊರ್ವಂ ನಂದ್ಯಾವರ್ತಪುರಮನಾಳ್ವತಿವೀರ್ಯನ ದೂತಂ ಬಂದು ದೂರಾನತಮಸ್ತಕಂ ಸಮಸ್ತರಾಜಲೋಕಮನೇಕಾಕ್ಷೌಹಿಣೀಬಲಂಬೆರಸು ತಮ್ಮೊಳ್ಕೂಡಿ ಭರತನ ಮೇಲೆ ನಡೆಯಲೆಮ್ಮರಸಂ ನಿಮಗೆ ಬೞಿಯನಟ್ಟಿದ ರಾಜಾದೇಶಮೆಂದು ಪೃಥ್ವೀಧರಂಗೆ ಬಿನ್ನವಿಸೆ ಲಕ್ಷ್ಮೀಧರಂ ಕೇಳ್ದು,

ಮುಳಿಸೆಂಬ ವಿಷದ ಬಳ್ಳಿಯ ।
ತಳಿರೆನೆ ಪೊಳೆವಧರಮಣಿಯ ಮೇಲೆ ಮುಗುಳ್ಚ-॥
ಜ್ಜಳಿಪಂತೆ ಮುಗುಳ್ನಗೆ ಪ ।
ಜ್ಜಳಿಸುಪಿನಂ ಚಕ್ರಿ ನೋಡಿ ದೂತನ ಮೊಗಮಂ ॥೧೭॥

ಭರತನುದ್ಯೋಗಮೇನೆಂಬುದುಮಾತನೆಂದನತಿವೀರ್ಯವಲ್ಲಭನಟ್ಟಿದ ದೂತಂ ವಿನೀತಾಪುರಮಂ ಪೊಕ್ಕು ಭರತನಂ ಕಂಡು ನಿಮ್ಮನೆಮ್ಮರಸಂ ತನಗಾಳಾಗಿ ಸುಖದಿನಿರ್ಪುದೆಂದು ಬೆಸಸಿಯಟ್ಟಿದನಿದು ನಿಮಗುಱುವ ಕಜ್ಜಮೆಂತೆನೆ :

ಬಗೆಯದೆ ಕಾಳೆಗಕ್ಕೆ ಬಗೆದರ್ಪೊಡೆ ನಿಮ್ಮಳವಲ್ಲಮಂಕದಾ-
ನೆಗೆ ತುರಗಕ್ಕೆ ತೇರ್ಗೆ ಪವಣಿಲ್ಲ ಪದಾತಿಗೆ ಮೇರೆಯಿಲ್ಲದಂ
ಬಗೆದುಱಿದಿರ್ಪ ಗಾಂಪನುೞಿದಾಳ್ವಿಸಗೆಯ್ವುದು ಬಾಳ್ವಿ ಬಟ್ಟೆಯಂ
ಬಗೆವುದು ಕೀಱಿ ಮೀಱುವವರಾರತಿವೀರ್ಯನ ಬಾಹುವೀರ್ಯಮಂ ॥೧೮॥

ಎಂದು ಗಜಱಿ ಗರ್ಜಿಸಿದ ದೂತನ ಮಾತಿಂಗೆ ಶತ್ರುಘ್ನಂ ಮುಳಿದು,

ಕನಸಿನೊಳಪ್ಪೊಡಂ ಭಯದ ಲೋಭದ ಮಾತು ಮನುಪ್ರಸೂತರೊ-
ಳ್ಜನಿಯಿಸದಲ್ಪವೀರ್ಯನತಿವೀರ್ಯವೆಸರ್ತನಗೇವುದಾಹವ-
ಕ್ಕೆನಗಿದಿರಾಗಿ ನಿಲ್ವನಿತು ದೋರ್ವಳಮುಳ್ಳೊಡೆ ತಂದು ಕಾದಿಸಾ-
ತನನೆಲೆ ದೂತ ಬಿಲ್ವಿಡಿಯಲೀವೆನೆ ಪುಲ್ವಿಡಿವಂತು ಮಾಡುವೆಂ ॥೧೯॥

ಎಂದೊದಱಿ ದೂತನಂ ಪರಿಭವಿಸಿ ಕಳೆದು,

ಭರತನೊಳತಿವೀರ್ಯಂ ಸಂ ।
ಗರಕ್ಕೆ ಮೇಲೆತ್ತಿ ಬಂದನೆಂಬಪವಾದಂ ॥
ಪರೆದಂದು ರಘುಕುಳಕ್ಕದೆ ।
ಪರಾಭವಂ ಪರಿಭವಕ್ಕೆ ಕೋಡೆರಡೊಳವೇ ॥೨೦॥

ಎಂದು ಮನದೊಳ್ನಿಶ್ಚಯಿಸಿ ಭರತಂ ಶತ್ರುಘ್ನಂಬೆರಸು ಚತುರಂಗಬಲಸಹಿತನಾಗಿ ನಂದ್ಯಾವರ್ತಪುರಕ್ಕೆತ್ತುವುದುಮಾಸಮಯದೊಳ್ಮಿಥಿಳೆಯನಾಳ್ವ ಕನಕನುಮುಜ್ಜಯಿನಿಯನಾಳ್ವ ಸಿಂಹೋದನುಮಸಂಖ್ಯಾತಬಲಂ ಬೆರಸು ತಮ್ಮೊಳ್ಕೂಡೆ ಬಂದರಿತ್ತ ಪರಿಭವವೆತ್ತು ಬಂದ ಚರವಚನಮತಿವೀರ್ಯಂ ಕೇಳ್ದು ಘನಗರ್ಜನೆಯಿಂ ಕೇಳ್ದ ಸಿಹಂನಂತೆ ಮುಳಿದು ಭರತಂಗಿದಿರೆತ್ತಿ ನಡೆಯಲೊಡರಿಸಿದ ವಾರ್ತೆಯಂ ವಾಯುಗತಿವೆಸರ ದೂತನಱಿಪೆ ಪೃಥ್ವೀಧರಂ ದೂತನಂ ಮನ್ನಿಸಿ ಕೞಿಂಪಿ ರಾಘವನ ಮೊಗಮಂ ನೋಡಿ ಕಾಳೆಗಮನಾಂ ಪೋಗಿ ಮಾಣಿಸುವೆನೆಂಬುದುಂ ಲಕ್ಷ್ಮಣನವಕ್ಕಾನೆ ಸಾಲ್ವೆನೆಂದು ಮನಃಪವನಜವಮನುಳ್ಳ ವಾಜಿಗಳಂ ಪೂಡಿದ ರಥಮಂ ತರಿಸಿ ಮೂವರುಮೇಱಿ ಪೋಗಿ ನಂದ್ಯಾವರ್ತನಗರದ ಪೊಱವೊಳಲೊಳ್ಬೀಡಂ ಬಿಟ್ಟಿರ್ದ ಸಮಯದೊಳ್,

ಅತಿವೀರ್ಯನ ಶೌರ್ಯಮನ ।
ಪ್ರತಿಹತಮಂ ಭರತನಾರ್ಕುಮಾಜಿಂ ಗೆಲಲು - ॥

ದ್ಧತನಂ ಮುನ್ನಮೆ ರಣದೊಳ್ ।
ಹತಪ್ರಭಂ ಮಾಡಿ ಗೆಲ್ವ ಬಗೆಯಂ ಬಗೆಯಿಂ ॥೨೦॥

ಎನೆ ಜನಕಜೆಗೆ ಮುಕುಳಿತಕರಸರೋಜನಾಗಿ,

ಜನನಿ ಬೞಱುಗೈಯೊಳವನಂ ।
ಮನೆದೊತ್ತಿಂ ಪಿಡಿದು ತರ್ಪ ತೆಱದಿಂ ತಂದ- ॥
ಣ್ಣನ ಕಾಲ್ಗೆಱಗಿಸುವೆಂಬ ಬಗೆ ।
ಗನಿತುವರಮದಾವ ಗಹನಮೆಂದನುಪೇಂದ್ರಂ ॥೨೧॥

ಎನೆ ರಾಘವಂ ಕೇಳ್ದು ಭರತಂಗತಿವೀರ್ಯನಂ ನಿಯಮಿಸುವುದಾವ ಘನಮೆನೆ ಲಕ್ಷ್ಮಣನೆತ್ತಾನುಂ ಭರತಂ ಸೋಲ್ತನಪ್ಪೊಡೆ ನಮಗೆ ಕುಲಪರಿಭವಮಕ್ಕುಮೆಂಬುದುಂ ರಾಮನೆಂದನಿಂದಿಂಗೆ ಮೂಱನೆಯ ದಿವಸದಂದು ಶತ್ರುಘ್ನಂ ನಂದ್ಯಾವರ್ತಪುರಕ್ಕೆ ಪರಿಯಿಟ್ಟು ಪಲಬರರಸುಮಕ್ಕಳಂ ಕೊಂದು ಪೊಱವೊೞಲೊಳಿರ್ದೇೞ್ನೂಱಾನೆಯುಮಂ ಕೆಲವು ಕುದುರೆಯುಮಂ ಪಿಡಿದುಯ್ದನೆಂದು ಪೇೞ್ದುದುಂ ಮಱುದಿವಸಂ ಪುರಮಂ ಪೊಕ್ಕೊಂದು ಜಿನಮಂದಿರದೊಳಾಯುಧಸಮೇತಂ ಸೀತೆಯುಮಂ ರಘುವೀರನುಮನಿರಿಸಿ ಬಂದು,

ಅದಟನತಿಪ್ರಚಂಡಬಳನೆನ್ನದೆ ದುರ್ಧರದೋಸ್ಸಹಾಯದಿಂ
ಕದನಧುರೀಣನೊಲ್ಲದೆ ಧನುರ್ಲತೆಯಂ ನಿಜದಿವ್ಯಬಾಣಮಂ
ಗದೆಯನದೇನುದಾತ್ತನೊ ಜನಾರ್ದನನೊರ್ವನೆ ಪಾಶದಂಡವಿ-
ಲ್ಲದ ಜವನಂತೆ ನಿಂದನತಿವೀರ್ಯನ ರಾಜಗೃಹೋಪಕಂಠದೊಳ್ ॥೨೩॥

ಆಗಳಬ್ಜೋದರನಿದಿರ್ಗೆ ಬಂದಾಗಮವೃತ್ತಾಂತಮನಱಿದು,

ಪಡಿಯಱನೊರ್ವನ ಬಂದಾ ।
ಗಡೆ ಭರತನ ದೂತನಿರ್ದಪಂ ಬಾಗಿಲೊಳೆಂ- ॥
ದೊಡೆ ಬರವೇೞೆಂದಂ ಬೞಿ ।
ಸಿಡಿಲಂ ಬೞಿಯಟ್ಟ ಬರಿಸುವಂತತಿವೀರ್ಯಂ ॥೨೪॥

ಅನಂತರಂ ಬಂದು,

ಎಱಗದೆ ವಜ್ರಸ್ತಂಭದ ।
ತೆಱದಿಂದಿರೆ ಮುಳಿದು ಕಣ್ಣಕಿಸುಸೆರೆಯಿಂ ಕ- ॥
ಣ್ದೆಱೆಯೆ ನಡೆ ನೋಡಿ ಬಂದುದ ।
ನೞಿಪೆನೆ ದುಂದುಭಿ ಗಭೀರನಾದದೆ ನುಡಿದಂ ॥೨೫॥



ಚಾರಣ ಯುಗಲದರ್ಶನ ವರ್ಣನಂ

ಎತ್ತಿ ಬರುತ್ತಲಿರ್ದನಿದಿರಾಂಪವರಾರ್ಭರತೇಶ್ವರಂಗೆ ಭೂ-
ಪೋತ್ತಮನಾಜ್ಞೆಯಂ ತಲೆಯೊಳಾಂತು ಪದಾನತನಾಗಿ ಕಪ್ಪಮಂ
ತೆತ್ತುೞಿ ಗಂಡುಗೆಯ್ಯದಿಱಿವಿಟ್ಟಗೆ ಜಟ್ಟಿಗನಾಗಿ ಬಾೞ್ವುದ-
ತ್ಯುತ್ತಮಪಕ್ಷಮಾಂತೊಡಪವರ್ತಿಸುಗುಂ ಕ್ಷಣದಿಂ ನಿಷೇಕಮಂ ॥೧೬।

ಆಳಾಗಿ ಬರ್ದುಂಕದೆ ಬ ।
ಲ್ಲಾಳಾಗಿ ಬರ್ದುಂಕಲೊಡರಿಪೊಡೆ ಭರತನ ಕೂ- ॥
ರ್ವಾಳ ನಸುಮಸೆಗೆ ಬಾಳಮ್ಮು ।
ಣಾಳಂ ರಿಪುನೃಪರ ಕಂಠನಾಳಂ ಧುರದೊಳ್ ॥೧೭॥

ಎಂಬುದುಂ ಕಡುಮುಳಿದು,

ಸಿಡಿಲ ದನಿಗೇಳ್ದ ಸಿಂಪಂ ।
ಸಿಡಿಲ್ದು ನೆಗೆವಂತೆ ಗಜಱಿ ಗರ್ಜಿಸಿ ಬಾಳಂ ॥
ಜಡಿದೆಯ್ದಿ ಪೊಯ್ವ ಕೈಯಂ ।
ಪಿಡಿದಾತನ ಬೀರಸಿರಿಯುಮಂ ಕೈ ವಿಡಿದಂ ॥೧೮॥

ಮುಂಗೈಯಂ ಪಿಡಿದೊತ್ತಿ ಕೈಯ ಕರವಾಳ್ಬೀೞ್ವಿರ್ಪಿನಂ ವಕ್ತ್ರರಂ-
ಧ್ರಂಗಳ್ಕಾಱುವಿನಂ ಕದುಷ್ಣರುಧಿರಾಂಭಃಪೂರಮಂ ಪೊಯ್ದು ಪೊ-
ಯ್ದಂಗೈಯಿಂ ಮೊಗಮಂ ಮುಸುಂಬಿ ಬಿಱುಬಿದ್ದಂಬೋಗೆ ವೀರಂಗೆ ದೋ-
ರ್ಭಂಗಂ ಮಾಡಿದನೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ ॥೧೯॥

ಅಂತು ಪರಿಭವಿಸಿ,

ಭರತನೊಳಿದಿರ್ಚಿ ಕಾದುವ ।
ಭರವಸದಿಂ ಬಂದ ಕಲಿಗಳಿರ್ದೆಡೆಯಿಂ ಸಂ- ॥
ಚರಿಸಿದೊಡೆ ಮೆಟ್ಟಿ ಕೀೞ್ವಿಂ ।
ಶಿರಮಂ ಕೀೞ್ವಂತೆ ವನ್ಯಗಜಮಂಬುಜಮಂ ॥೨೦॥

ಎಂದು ಗಜಱಿ ಗರ್ಜಿಸುವುದುಮತಿವೀರ್ಯನೊಳ್ಪೂಡಿ ಭರತನೊಳ್ಕಾದಲೆಂದು ಬಂದನ್ಯರಾಜನ್ಯಕದೊಳ್ ವಿಜಯನಿವನಜೇಯನೆಂದು ಮನಂಗುಂದೆಯುಂ ಶಾರ್ದೂಲಂ ಶಾರ್ದೂಲನಂ ಕಂಡ ತೋಳನಂತೊಳಸೋರ್ದು ಸಮರಮುಖವಿಮುಖ ನಾಗೆಯುಂ, ಮೃಗಧ್ವಜಂ ಮೃಗಧ್ವಜನೆನಿಸೆಯುಂ, ರಣೋರ್ಮಿ ಭಯರಸೋರ್ಮಿಯಂ ನೂರ್ಮಡಿಸೆಯುಂ, ಕಲಭಂ ಕುಸುಮಿತ ಚಂಪಕಾನೋಕಹಮಂ ಕಂಡಳಿಕಲಭದಂತೆ ಮೊಗಂದಿರಿಪೆಯುಂ, ಕೇಸರಿ ಕೇಸರಿಯುಂ ಕಂಡ ಕಾಡಾನೆಯಂತೋಸರಿಸೆಯುಂ, ವಜ್ರಧರನಧರನಾಗೆಯುಂ, ಭದ್ರಂ ಭದ್ರಗಜದ

ಕಣ್ಮುಟ್ಟಿನೊಳಿರ್ದ ಫಣೆಯಂತೆ ಮಣೆಯೆಯುಂ, ಸುಭದ್ರನಭದ್ರ ನೆನಿಸಿಯುಂ, ಸಂದನಂ ರಣರಸಾಸ್ವಾದನಾನಂದಮನುೞಿಯೆಯುಂ, ಅವಾರ್ಯವೀರ್ಯಂ ಶೌರ್ಯಂಗಿಡೆಯುಂ, ಮಾರಿದತ್ತನುದಾತ್ತನೆನಿಸೆಯುಂ, ಲಂಬೋಷ್ಠಂ ರಕ್ಷ ರಕ್ಷ ರವಮುಕ್ತ್ರೋಷ್ಠನಾಗೆಯುಂ, ಪ್ರೋಷ್ಠಿಲಂ ಪ್ರತಿಷ್ಠೆಗಿಡೆಯುಂ, ಮತ್ತಂ ಪೆಱರುಮಱಿಕೆಯ ನರೇಂದ್ರನಂದನರ್ ಪಂದೆಯಂ ಪಾವಡರ್ದಂತೆ ಮೈಮಿಡುಕದಿರೆಯುಂ,

ಅತಿವೀರ್ಯಂ ಹತವೀರ್ಯನಾದನವನಂ ಕೊಂದುಯ್ಯುವೆಂ ದೋಷದೂ-
ಷಿತನಂ ದೋರ್ವಲಮುಳ್ಳರುಳ್ಕೊಡನಗಟ್ಟಂ ಬರ್ಪುದೆಂದಭ್ರಗ-
ರ್ಜಿತಮೆಂಬಂತಿರೆ ಗರ್ಜಿಸುತ್ತುಮೆೞೆದುಯ್ದಂ ಲಕ್ಷ್ಮಣಂ ಹಸ್ತಪಾ-
ದತಳೋದ್ಘಟ್ಟನದಿಂ ಪಡಲ್ವಡಿಸುತುಂ ಮಾಱಾಂತಸಾಮಂತರಂ ॥೩೧॥

ಕಡುಕೆಯ್ದಂ ಭರತಂಗಿವಂ ಗಡ ರಣಕ್ರೀಡಾರಸಕ್ಕಱ್ತಿಗಂ
ಗಡ ಸಾಕೇತಪುರಾಧಿರಾಜಪದಮಂ ಕೈಕೊಳ್ವೆನೆಂದೆತ್ತುವಂ
ಗಡ ದುರ್ಲೀಖಮನಟ್ಟುವಂ ಗಡೆನುತುಂ ಜೋಡಾಡಿ ಪುಲ್ಗೋಡನಂ
ಪಿಡಿದುಯ್ವಂತೆವೊಲುಯ್ದನಪ್ರತಿಹತಂ ಸೌಮಿತ್ರಿ ಶತ್ರುಂಜಯಂ ॥೩೨॥

ಅಂತತಿವೀರ್ಯನನೆೞೆದು ತಂದೊಪ್ಪಿಸುವುದುಂ,

ಏವೇೞ್ವಿಂ ಬಲನಿಂ ಕೃಪಾಳು ಪೆಱರಾರಾ ದ್ರೋಹನಂ ಕಂಡು ರೋ-
ಷಾವೇಶಂ ತನಗಾದುದೇ ಭರತನಂ ಶತ್ರುಘ್ನನಂ ಕಂಡು ನಂ-
ದ್ಯಾವರ್ತಕ್ಕಧಿರಾಜನಾಗಿ ಸುಖದಿಂ ನೀನಿರ್ಪುದೆಂದಂ ಪರಾ-
ರ್ಥಾವಷ್ಟಂಭಮನಪ್ಪುಕೆಯ್ದವರ್ಗೆ ಮೈತ್ರೀಭಾವಮಾಶ್ಚರ್ಯಮೇ ॥೩೩॥

ಅರಸುತನದಱ್ತಿ ಪಿಂಗಿದು ।
ದು ರಾಜ್ಯಮಂ ನಿಮ್ಮ ಮೆಚ್ಚಿದವರ್ಗೀವುದಿದಂ ॥
ಪರಿಹರಿಸಿದೆನಾನಿನ್ನಂ ।
ದು ರಾಮಲಕ್ಷ್ಮಣರನಾ ನೃಪಂ ಕ್ಷಮೆಗೊಂಡಂ ॥೩೪॥

ಅಂತು ನಿಶ್ಶಲ್ಯನಾಗಿ ಶ್ರುತಧಾರಣಭಟ್ಟಾರಕರ ಪಾದಪಯೋಜಪಾರ್ಶ್ವದೊಳ್,

ಬೆರ್ಚಿಸೆ ತನ್ನಂ ಕೃಷ್ಣಂ ।
ಬೆರ್ಚಿಸಿದಂ ಕೃಷ್ಣತನಯನಂ ಜಿನರೂಪಿಂ ॥
ಕೆರ್ಚೀಱಿದ ವೈರಾಗ್ಯದ ।
ಪೆರ್ಚಿಂ ಮುಯ್ಯಂ ಮರುಳ್ಚುವಂತತಿವೀರ್ಯಂ ॥೩೫॥

ಚಾರಣ ಯುಗಲದರ್ಶನ ವರ್ಣನಂ

ನಿಜಭುಜವೀರ್ಯಹಾನಿಗೆ ತಪಂಬಡೆ ತಂದೆ ಮಗಂಗೆ ರಾಜ್ಯಮಂ
ವಿಜಯರಥಂಗೆ ರಾಮನೊಸೆದೀವುದುಮಾತನ ತಂಗೆಯೊಳ್ಜಗ-
ದ್ವಿಜಯಿಗೆ ಲಕ್ಷ್ಮಣಂಗೆ ತರಿಮಾಲೆಯೊಳಾಯ್ತು ವಿವಾಹಮುತ್ಸವ-
ಧ್ವಜಮಣಿತೋರಣಂ ತುಱುಗೆ ಘೂರ್ಣಿಸೆ ಮಂಗಳತೂರ್ಯನಿಸ್ವನಂ ॥೩೬॥

ಆ ವಿವಾಹಾನಂತರಂ ನಂದ್ಯಾವರ್ತನಗರಮನಗಲ್ದು ನಿಜ್ಜವಯಂಗಳಿಂ ಕ್ಷೇಮಾಂಜಳಿಪುರಕ್ಕೆ ಬಂದಾ ಪೊೞಲ ಪೊಱ ವೊೞಲ ಮನೋಹರೋದ್ಯಾನದೊಳಾ ದಾಶರಥಿಯುಂ ವೈದೇಹಿಯುಂ ವಿಶ್ರಮಿಸಿರ್ಪುದುಂ, ತತ್ಪುರ ನಿರೀಕ್ಷಣನಿಮಿತ್ತಂ ಲಕ್ಷ್ಮಣಂ ರಾಜವೀಥಿಯೊಳೆ ಬರೆ ಪಲರುಮೊಂದೆಡೆಯೊಳಿರ್ದು ಜಿತಪದ್ಮೆಯ ಪಡೆಮಾತಂ ನುಡಿಯುತ್ತಿರೆ ಕೇಳ್ದು ಲಕ್ಷ್ಮಣಂಜಿತಪದ್ಮೆಯೆಂಬಳಾರ್ಗೆಂಬುದುಮಾತನ ಸಮುದ್ರಘೋಷಮನಜನಿಸುವ ಗಂಭೀರಸ್ವರದೊಳಂ ಭದ್ರಾಕಾರದೊಳಮೀತಂ ಕಾರಣ ಪುರುಷನಾಗಲೆವೇೞ್ಕುಮೆಂದು ನಿಶ್ಚಯಿಸಿ ಪುರಾಣಪುರುಷನೊರ್ವನಿಂತೆಂದಂ:

ಜನಪತಿ ಶತ್ರುಂದಮನಾ ।
ತನರಸಿ ಕನಕಾಖ್ಯೆ ತತ್ತನೂಜೆ ಸರೋಜಾ- ॥
ನನೆ ಮಸೆದ ಕುಸುಮಸಾಯಕ ।
ಮೆನಿಪಳ್ಜಿತಪದ್ಮೆ ಪೆಸರೊಳಂ ರೂಪಿನೊಳಂ ॥೩೭॥

ಆ ಕನ್ಯಾರತ್ನಂ ಪುಟ್ಟಲೊಡನತ್ತ ಶಸ್ತ್ರಶಾಲೆಯೊಳೊಂದು ಶಕ್ತಿ ಪುಟ್ಟಿದುದಾ ಸಮಯದೊಳೊಂದಾಕಾಶವಚನಮಿಂತೆಂದುದೀ ದೇವತಾಧಿಷ್ಠಿತಮಪ್ಪ ಶಕ್ತಿಯಿಂ ಶತ್ರುಂದಮನಿಡುವುದುಮದಂ ಬಂಚಿಸಿ ಪಿಡಿದ ಮಹಾಸತ್ತ್ವನೀ ರಮಣಿಗಂ ದಕ್ಷಿಣ ಭರತದ ಧರಣೀರಮಣಿಗಂ ರಮಣನಕ್ಕುಮೆಂಬಾ ದೇವತಾದೇಶಮಂ ಕೇಳ್ದಾ ತೆಱದಿನಲ್ಲದೆ ಕಲ್ಯಾಣೋತ್ಸವಮಂ ಮಾಡೆನೆಂದಿರೆ ಕನ್ಯಾಲೋಭದಿನನೇಕರಾಜಸುತರ್ಬಂದೀ ಶಕ್ತಿ ಪ್ರಹಾರದಿಂ ಯಮಾಗಾರಮನೆಯ್ದಿದರೆಂದು ಪೇೞೆ ಲಕ್ಷ್ಮಣಂ ಕೇಳ್ದದಂ ಗಮನಂಗೆಯ್ದಾತನರಮನೆಯ ಬಾಗಿಲ್ಗೆ ಬಂದು ಪಾರ್ಥಿವಪುತ್ರನೊರ್ವಂ ಕನ್ಯಾರ್ಥಿ ಬಂದನೆಂದು ನಿಮ್ಮರಸಂಗಱಪೆಂದು ಪಡಿಯಱನನಟ್ಟುವುದುಮವಂ ಬಂದು ಬಿನ್ನವಿಸೆ ಬರವೇೞೆಂಬುದುಂ,

ಸಿರಿಯ ಹರಿನೀಳವೇದಿಯ ।
ನುರಸ್ಥಳಂ ಬೀರಸಿರಿಯ ಮರಕತಮಣಿವಿ- ॥
ಷ್ಟರಮಂ ಭುಜದ್ವಯಂ ಪೋ ।
ಲ್ತಿರೆ ಪೊಕ್ಕಂ ರಾಜಸಭೆಯನಭಯನುಪೇಂದ್ರಂ ॥೩೮॥

ಅಂತಂಜನದಿಕ್ಕುಂಜರದಂತೆ ಬರುತ್ತಿರ್ಪುದುಂ,

ತನು ಶುಭಲಕ್ಷಣಕ್ಕೆ ತವರಾಮುದು ನೀಜಿನೆ ಕಂತುರಾಜನೀ-
ತನ ತೆಜಿದಿಂದಮೀತನೆ ಪೊಡರ್ಪಿನ ಶಕ್ತಿಗೆ ದರ್ಪಭಂಗಮಂ
ಜನಿಯಿಸಿಲಾರ್ಪನೆನ್ನ ಸುತೆಗೀತನೆ ವಲ್ಲಭನಕ್ಕುಮೆಂದು ಕ-
ಣ್ಮನದೊಡನೆಕ್ಕೆಯಿಂ ಪರಿಯೆ ನೋಡಿದನಾ ನೃಪನಬ್ಜನಾಭನಂ ||೬೯||

ಅಂತು ಬಂದಾತನ ಕೆಲದೊಳಿರ್ದ ಕನ್ಯಾರತ್ನಕ್ಕೆ ಮನಮೆಜಿಗೆಯುಮಾತಂಗೆಜಿಗದೆ ತನಗಿಕ್ಕಿದ ಮಣಿಮಯಾಸನದೊಳ್ಕುಳ್ಳಿರ್ಪುದುಂ ಕುಮಾರನ ನಿರುಪಮಾಕಾರಮಂ ನೋಡಿ ಕನ್ಯೆ ಕಣ್ಸೇಟಂಗೊಂಡು,

ಜಿತಪದ್ಮೆ ಕಂತುಶರಪೀ ।
ಡಿತಚೇತಃಪದ್ಮೆ ಜನಕಶಸ್ತ್ರಾಹತಿಯಿಂ ॥
ಹತನಾದೊಡೀತನೀತನ ।
ಗತಿ ಗತಿಯೆನಗೆಂದು ಚಿತ್ತದೊಳ್ತಜಿಸಂದಳ್ ||೭೦||

ಆ ಸಮಯದೊಳ್ ಶತ್ರುಂದಮಂ ಸೌಮಿತ್ರಿಗಿಂತೆಂದಂ : ನಿನ್ನ ಸಕಳಭುವನಾದೇಯಮಪ್ಪ ರೂಪಂ ನೋಡಿ ಮೊಗಂ ನೋಡದವಮೋಘಶಕ್ತಿಯಿನಿಡಲೆನಗೆ ಬಗೆ ಬಂದಪುದಿಲ್ಲಮೀ ಕನ್ನೆಯಾಸೆಯನುಜಿದು ಮಗುಟ್ಟಿ ಬಿಜಯಂಗೆಯ್ವುದೆನೆ,

ನಿನ್ನಿಡುವ ಶಕ್ತಿಯಳವುಮ ।
ನೆನ್ನಳವುಮನೀಗಳಿಂತೆ ತೋರ್ಪೆಂ ಬೇಗಂ ॥
ತನ್ನಿಮೆನೆ ದೃಷ್ಟಿವಿಷಫಣಿ ।
ಸನ್ನಿಭಮಂ ಶಸ್ತ್ರಶಾಲೆಯಿಂದಂ ತಂದರ್ ||೭೧||

ಅಂತು ತಂದು ವಿವಿಧಾರ್ಚನೆಯಿನರ್ಚಿಸಿ ಮಂತ್ರಪೂತಂ ಮಾಡಿ ಶಸ್ತ್ರಮಂ ಪಿಡಿದು ಸಮಾಹಿತಮತಿಯಾಗಂಪನತಿದೂರದೊಳಿರಿಸಿ ಸರ್ವಶಕ್ತಿಯಿನಿಡುವುದುಂ,

ಕಡೆಗಾಲದ ಸಿಡಿಲಂತಿರೆ ।
ಕಿಡಿಯಂ ಕಾಜುತ್ತೆ ಕೀಜಿ ಬರೆ ಬಂಚಿಸಿ ತ- ॥
ನ್ನೆಡಗೈಯಿಂ ಶಕ್ತಿ ಬಲಂ ।
ಗಿಡೆ ಪಿಡಿದಿಟ್ಟವನ ಶಕ್ತಿಯಂ ತಲೆವಿಡಿದಂ ||೭೨||

ಆ ಸಮಯದೊಳ್,

ಪೂಮಟಿಗಳ್ ಕಜಿದುವು ಕುಸು ।
ಮಾಮೋದಂ ಬಳಸೆ ಸಕಳ ದಿಗವನಿವಳಯ- ॥
ವ್ಯೋಮಾಂತರಮಂ ಸುರಭೇ ।
ರೀಮಂದ್ರಧ್ವಾನಘನರವಂ ಪುದಿವಿನೆಗಂ ||೭೩||

ಪರಿಕಿಸವೇೞ್ಬುದೆ ಲಕ್ಷ್ಮೀ ।
ಧರನಳವನವಾರ್ಯವೀಯನಾತಂಗೀ ದು- ॥
ರ್ಧರಶಕ್ತಿಗ್ರಹಣಮದಾ ।
ವರಿದಾಯ್ತೆಂದಮರಸಮಿತಿ ಪೊಗೞ್ದಿತ್ತಾಗಳ್ ॥೪೪॥

ಅಂತು ಪೊಗೞ್ದ ದಿವ್ಯಧ್ವನಿಯಿಂ ಲಕ್ಷ್ಮಣನೆಂದಱಿದು,

ಕ್ಷಮಿಯಿಸುವುದೆನ್ನ ಗೆಯ್ದಱಿ ।
ಯಮೆಗೊರ್ಮಿಂಗೆಂದು ಚಕಿತಚಿತ್ತಂ ಶತ್ರುಂ- ॥
ದಮನಾಗಳ್ಸೌಮಿತ್ರಿ ।
ಕ್ರಮಕ್ಕೆ ವಿಕ್ರಮಮನುೞಿದು ವಿನಮಿತನಾದಂ ॥೪೫॥

ಅನಂತರಂ ವಿಚಿತ್ರವಸ್ತ್ರಾಭರಣದಿನರ್ಚಿಸಿ, ಬಹಿರುದ್ಯಾನದೊಳುದಾತ್ತರಾಘವನಿರ್ದುದಂ ಲಕ್ಷ್ಮಣಂ ಪೇೞೆ ಕೇಳ್ದು ಕಿಱಿದಾನುಂ ಬಲಂಬೆರಸು ಪಾದಮಾರ್ಗದಿಂ ರಾಮಸ್ವಾಮಿಯಲ್ಲಿಗೆ ಬಂದುಪಾಯನಪುರಸ್ಸರಂ ಸರ್ವಾಂಗಪ್ರಣತನಾಗಿ ಸೀತಾದೇವಿಗಂ ತುೞಿಲ್ಗೆಯ್ದು ವಂದನಮಾಳಾಮನೋಹರಮುಂ ಧ್ವಜರಾಜಿವಿರಾಜಿತಮುಂ ಮಂಗಳಾನಕಧ್ವಾನಚರಿತಭುವನಾಂತರಾಳಮು ಮುಪಹಾರಕುಸುಮಮತ್ತ ಮಧುಕರಝುಂಕಾರಮುಖರಮುಮಪ್ಪ ಪುರುಮನಮನೆಯುಮನಿತಿವಿಭೂತಿಯಿಂ ಪುಗಿಸಿ ಸಮಯೋಚಿತವಿವಿಧೋಪಚಾರಪರಿಚರ್ಯಚಾತುರ್ಯಮಂ ಮೆಱೆದು ಶುಭದಿನಮುಹೂರ್ತದೊಳ್,

ಪರಿಣಯನಮಾಗೆ ಪದ್ಮೋ ।
ದರಂಗೆ ಜಿತಪದ್ಮೆಯೊಡನೆ ಮಂಗಳಗೀತ- ॥
ಸ್ವರದೊಡನೆ ಮಂಗಳಾನಕ ।
ವಿರುತಿ ಪಳಂಚಿದುದು ಗಗನದಿಗವನಿ ತಳಮಂ ॥೪೬॥

ಅಂತಲ್ಲಿ ಕತಿಪಯದಿನಮಿರ್ದಾ ಮೂವರುಂ ಪೂರ್ವಾಭಿಮುಖದೆ ಪಯಣಂಬೋಗಿ ವಂಶಸ್ಥಳಮೆಂಬ ಪೊೞಲನೆಯ್ದಿ ತತ್ಸಮೀಪದ ವಂಶಸ್ಥಳಮೆಂಬ ಗಿರಿದರ ದೇಶಮಂ ದಿವಸದವಸಾನದ ಸಮಯದೊಳೆಯ್ದಿ ದೆಸೆಗೆಟ್ಟೋಡುವ ಪೌರಜನಮಂ ಕಂಡಿದೇ ಕಾರಣಮೋಡಿದಪುದೆಂದು ಬೆಸಗೊಳ್ವುದುಮವರಿಂದಿಂಗೆ ಮೂಱುದಿನಂ ಮೊದಲ್ಗೊಂಡು ರಾತ್ರಿಸಮಯದೊಳ್ ಶಿಖರಿಶಿಖರದೊಳತಿಭಯಂಕರಮುಮತ್ಯದ್ಭುತಮುಮಾಗೆ ಪಲವು ಸಿಡಿಲ ದನಿಗಳೊಂದಾದಂತವಶ್ರುತಮಪ್ಪುದೊಂದು ರೌದ್ರ ಧ್ವನಿಯಂ ಕೇಳ್ದಂಜೆ ಪೊೞಲೆಲ್ಲಂ ಯಥಾಯಥಮಾಗೋಡಿದಪ್ಪುದೆಂಬುದುಮಾ ಧ್ವನಿಗೆಯ್ವರಾರೆಂಬುದನಾರಯ್ವ ಮೆಂದಾ ನಗಮನೇಱಿ ನೋೞ್ಪಾಗಳಲ್ಲಿ ಚತುರ್ಮುಖಪ್ರತಿಮಾಯೋಗದೊಳ್ನಿಂದು ಶುಭಧ್ಯಾನಮನಪ್ಪುಕೆಯ್ದು ಮಹರ್ಷಿಯರಂ ಕಂಡೆಯ್ದೆವರ್ಪುದುಮವರಂ ಸುತ್ತಿಸುಯ್ಯುತ್ತಿರ್ದ

ವಿಷಮವಿಷೋರಗಂಗಳುಮಾಪಾದಮಸ್ತಕಂಬರ ಮೆಡೆವಱಿಯದೆ ಮುಸುಱಿರ್ದ ವಿಷಮ ವೃಶ್ಚಿಕಂಗಳುಂ ರಾಮಲಕ್ಷ್ಮಣರ ಪ್ರಭಾವದಿನದೃಶ್ಯಮಪ್ಪುದುಮಾ ಪರ್ವತದ ಸುಗಂಧಪುಷ್ಪಂಗಳಿನವರನರ್ಚಿಸುತ್ತುಮಿರೆ ನೇಸರ್ಪಡುವುದುಮತಿರೌದ್ರಮಪ್ಪ ಭೂತಬೇತಾಳಸಮೂಹಮುಮನತಿ ಭಯಂಕರಮಾಗೆ ಗರ್ಜಿಸುವ ಸಿಂಹಶರಭಶಾರ್ದೂಲಂಗಳುಮನತ್ಯದ್ಭುತಮಾಗೆ ಮಿಂಚು ಮೊೞಗುವೆರಸು ಸುರಿವ ಬಿಸುತನೆತ್ತರ ಮೞೆಯುಮಂ ವಿಗುರ್ವಿಸೆ,

ಪರಮಜಿನಮುನಿಗೆ ಯೋಗಾಂ ।
ತರಾಯಮಮರೋಪಸರ್ಗದಿಂದಕ್ಕುಮೆ ನಿ- ॥
ಷ್ಠುರ ಮಾತರಿಶ್ವಹತಿಯಿಂ ।
ತರು ಸಂಚಳಿಪಂತೆ ಮೇರು ಸಂಚಳಿಸುಗುಮೇ ॥೪೭॥

ಅಂತಾ ಮುನಿಗೆ ಮಹೋಪಸರ್ಗಮಂ ಮಾಡ್ಪ ದೇವನ ಮಹಾರೌದ್ರಾನುಭಾವಮಂ ಕಿಡಿಸಲೆಂದು ತಮ್ಮ ದೈವತಾಧಿಷ್ಠಿತಧನುರ್ಯುಗಳಮನೇಱಿಸಿ,

ಕಿಡೆದುದೊ ಮಂದರಂ ಧರೆಗೆ ಬಿೞ್ದುದೊ ಭಾನುರಥಂ ನಭಸ್ಥಳಂ
ನಡುಗಿದುದೋ ಧರಿತ್ರಿ ಮೊೞಗಿತ್ತೊ ಮಹಾಪ್ರಳಯಾನಲಾರ್ಚಿಯಿಂ-
ದೊಡೆದುದೊ ವಜ್ರವೇದಿಕೆಯೆನಲ್ನಭಮಂ ಪುದಿದತ್ತು ನೀವಿ ಜೇ-
ವೊಡೆಯೆ ಬಳಾಚ್ಯುತರ್ ತ್ರಿಭುವನೈಕಭಯಂ ಕೃತಚಾಪಟಂಕೃತಂ ॥೪೮॥

ಆ ರೌದ್ರಧ್ವನಿ ಕರ್ಣಲಗ್ನಮಾಗೆ ಭಗ್ನಾಶಯನಗ್ನಿಪ್ರಭಂ ಹತಪ್ರಭನಾಗಿ ವಿಭಂಗಜ್ಞಾನದಿಂದವರೆಂಟನೆಯ ಬಲದೇವ ವಾಸುದೇವರೆಂದಱಿದು ನಿಜಜ್ಯೋತಿರ್ಲೋಕಮನೊಳಪೊಕ್ಕನಿತ್ತಲ್,

ತ್ರಿದಶೋಪಸರ್ಗಮಂ ಬಗೆ ।
ಯದೆ ಕುಳನಗದಂತೆ ದೇಶಭೂಷಣಮುನಿಪರ್ ॥
ಸದಮಳಶುಕ್ಲಧ್ಯಾನದೊ ।
ಳುದಾತ್ತರಿರೆ ಘಾತಿಗಾಯ್ತು ಕದಳೀಘಾತಂ ॥೪೯॥

ಅಂತು ವಿಗತಘಾತಿಚತುಷ್ಟಯದಿನನಂತಜ್ಞಾನಾದಿ ನವ ಕೇವಲ ಲಬ್ಧಿವಡೆವುದುಂ,

ದುಂದುಭಿನಿನಾದಮುಖರಂ ।
ಮಂದಾರನಮೇರುವಿಕಚಕುಸುಮಾಸಾರಂ ॥
ಸಂದಿಸೆ ಕೇವಲಿ ಪೂಜೆಗೆ ।
ಬಂದತ್ತು ಚತುರ್ನಿಕಾಯದೇವನಿಕಾಯಂ ॥೫೦॥

ಅಂತು ಬಂದು ಪೂಜಿಸುವುದುಮನಂತರಮುದಾತ್ತ ರಾಘವಂ ಮುಕುಳಿತಾಂಜಳಿಪುಟಂ ನಿಮಗುಪಸರ್ಗಮಾದ ಮಾರ್ಗಮಂ ಬೆಸಸಿಮೆನೆ, ದೇಶಭೂಷಣ

ಕೇವಳಿಗಳಿಂತೆಂದು ಬೆಸಸಿದರ್ : ಪದ್ಮನಗರಮನಾಳ್ವ ವಿಜಯಪರ್ವತ ಕ್ಷಿತಿಪತಿಯ ಚರನಮೃತಸ್ವರನೆಂಬನಾತನ ಕುಲಾಂಗನೆಗೆ ತನಯರುದಿತನುಮನುದಿತನುಮೆಂಬರಾದರಾಕೆಯೊಡನಾ ಪುರದ ವಸುಭೂತಿವೆಸರಧರಾಮರಂ ಮಱಿವಾಱುತ್ತಿರಲುಪಭೋಗರಾಗವೇಗದಿಂ ವಿವೇಕವಿಕಳೆಯಾಗಿ ಮುಂದಱಿಯದೊಂದು ದಿವಸಂ ತನ್ನ ವರನಮೃತಸ್ವರನಿರೆ ನಮಗೆ ಮೆಚ್ಚಿದಂತೆ ಬಾೞಲ್ಬಾರದೆಂಬುದುಮಾ ಪಾಣ್ಬನಮೃತಸ್ವರನಂ ದುರಿತಭೀರುವಾಗದಾರುಮಱಿಯದಂತೆ ಕೊಲ್ವುದುಂ,

ಅಪವಾದಕ್ಕಗಿಯದೆ ನರ ।
ಕಪಾತಮಂ ಬಗೆಯದಾ ಮಹಾಪಾತಕಿ ಮು- ॥
ನ್ನುಪಪತಿಯಿಂ ಪತಿಯಂ ಕೊಲಿ ।
ಸಿ ಪುತ್ರವಧೆಗಂ ಬೞಿಕ್ಕೆ ಬಗೆಯಂ ತಂದಳ್ ॥೫೧॥

ಸ್ವೈರಿಣಿ ಬಗೆಬಂದಾಗಳೆ ।
ಮಾರಕ್ರೀಡೆಯನೊಡರ್ಚಲೆಂದುಪಪತಿಯಂ ॥
ದಾರಕನಂ ಕೊಲವೇೞ್ದಳ ।
ದಾರುಣಕರ್ಮಕ್ಕೆ ಕಾಮುಕರ್ಪೇಸುವರೇ ॥೫೨॥

ಅಂತು ಪೇೞ್ವುದುಮಾ ಮಾತನಾಕೆಯ ಸೊಸೆ ಕೇಳ್ದು ತನ್ನ ಪುರುಷನಪ್ಪುದಿತಂಗೆ ಪೇೞೆ ವಸುಭೂತಿಯ ಪೆಂಡತಿಯಪ್ಪ ರತಿಕಾರಿಣೆಯುಮೀರ್ಷೆಯಿಂದದನೆ ಪಿಸುಣ್ಬೇೞೆ ಕೇಳ್ದುದಿತನುಮನುದಿತನುಂ ವಿದಿತವೃತ್ತಾಂತರಾಗಿ ವಸುಭೂತಿಗುಪಾಯದಿನಪಾಯಮಂ ಮಾೞ್ಪುದುಮವಂ ಸತ್ತು ಶಾರ್ದೂಲಾಸ್ಯಮೆಂಬ ಮಹಾಗಹನದೊಳ್ಕಾಳಜಂಘನೆಂಬ ಶಬರನಾಗಿ ಪುಟ್ಟಿದನೆಂದು ಪೇೞ್ದು ಮತ್ತಮಿಂತೆಂದು ಬೆಸಸಿದರಾ ಪದ್ಮಪುರದುದ್ಯಾನವನದೊಳ್ಸುಮತಿವರ್ಧನರೆಂಬಾಚಾರ್ಯರ್ ಬಂದಿರ್ದರೆಂದು ಋಷಿನಿವೇದಕನಱಿಪೆ ವಿಜಯ ಪರ್ವತಮಹಾರಾಜಂ ಪೂಜೆವೆರಸು ಬಂದರ್ಚಿಸಿ ಪೊಡೆವಟ್ಟು ಕುಳ್ಳಿರ್ದು ಧರ್ಮಮಂ ಕೇಳ್ದು ವೈರಾಗ್ಯಪರನಾಗಿ ದೀಕ್ಷೆಗೊಳ್ವಂದೊಡನೆ ಸಹೋದರರಪ್ಪುದಿತನುಮನುದಿತನುಂ ದೀಕ್ಷೆಗೊಂಡು ತೀರ್ಥವಂದನಾರ್ಥಂ ಸಮ್ಮೇದಶೈಳಕ್ಕೆ ಪೋಗುತ್ತಿರ್ಪ ಸಮಯದೊಳಾ ಮುನಿಯುಗಳಮಂ ಕಂಡು ಭವಬದ್ಧಕ್ರಮದಿಂ ಕಾಳಜಂಘಂ ಕೊಲಲತಿ ಜಂಘಾಲನಾಗಿ ಮುಟ್ಟೆವರ್ಪುದುಮವರವನ ದುಷ್ಟಚೇಷ್ಟೆಯನಱಿದು,

ಉಪಸರ್ಗಂ ಪಱಿಪಡುವಿನ ।
ಮುಪಘನಮಾ ಹಾರಮೆಂಬಿವಂ ತೊಱೆದು ಸಮಂ- ॥
ತುಪಶಾಂತರ್ಕೈಯಿಕ್ಕಿರೆ ।
ಕೃಪಾಳು ತತ್ಪ್ರತಿಮರಾತ್ಮನಂ ಬಾರಿಸಿದಂ ॥೫೩॥

ಅಂತು ಬೆಸಸೆ,

ಅನಿತು ದಯಾಪರತೆ ಕಿರಾ ।
ತನಾಯಕಂದಾಗುವ ಕಾರಣದಿನದಂ ॥
ಮುನಿಮುಖ್ಯ ಬೆಸಸಿಮೆನೆ ದಿ ।
ವ್ಯನಾದದಿಂ ದಿವ್ಯಯೋಗಿಯವರ್ಗಿಂತೆಂದಂ ॥೫೪॥

ಯಕ್ಷನಾಮಗ್ರಾಮವಾಸಿಗಳುಮೇಕೋದರರ್ ಸರೂಪನುಂ ಕರುಷನುಮೆಂಬ-ರಲ್ಲಿಗೊರ್ವಂ ವ್ಯಾಧನೊಂದು ಪಕ್ಕಿಯಂ ಪಿಡಿದು ತರೆ ಕರುಣಿಸಿ ಬೇಡಂಗೆ ಬೆಲೆಯಂ ಕೊಟ್ಟು ಬಿಡಿಸಿದಾ ಪಕ್ಷಿಯುಮುಪಶಮಕ್ಕೆ ಪಕ್ಕುಗೊಟ್ಟಿಸುವಂ ಬಿಟ್ಟು ಬೇಡವಟ್ಟಂಗೊಡೆಯನಾದುದಾ ಸರೂಪನುಂ ಕರುಷನುಂ ಕಱಮುದಿತನುಮನುದಿತನುಮಾಗಿ ಪುಟ್ಟಿದರಾ ಕಿರಾತನುಂ ಮುನ್ನಿನುಪಕಾರಂ ಕಾರಣಮಾಗೆ ಕೊಲಲೀಯದೆ ನಿಯಮಿಸಿದನೆಂದು ಬೆಸಸಿ ಮತ್ತಮಿಂತೆಂದರ್:

ಸದಮಳಚರಿತಂ ತಮ್ಮಿಂ ।
ದುದತೋದಿತಮಾದುದೆನಿಸಿ ಸಂನ್ಯಸನದೆ ಸ- ॥
ತ್ತುದಿತಾನುದಿತಮುನೀಶ್ವರ ।
ರುದಾತ್ತರುತ್ಕೃಷ್ಟದೇವಗತಿಯಿಂ ಪಡೆದರ್ ॥೫೫॥

ಮತ್ತಿತ್ತಲವರ್ಗಪಾಯಮಂ ಬಗೆದ ಬೇಡಂ ವಿಗತಾಸು ದುರಂತದುರ್ಗತಿ-ಯೊಳೊತ್ತಬಲ್ತಿತ್ತಾನುಂ ಮನುಷ್ಯಗತಿವೆತ್ತು ತಾಪಸನಾಗಿ ಸತ್ತಾತಂ ಜ್ಯೋತಿರ್ಲೋಕದೊಳಗ್ನಿ-ಕೇತುವೆಂಬ ದೇವನಾದನಿತ್ತ ಭರತಕ್ಷೇತ್ರದರಿಷ್ಟಪುರಮನಾಳ್ವ ಪ್ರಿಯವ್ರತ ಮಹೀಭುಜಂಗೆ ಪದ್ಮಾವತಿಯುಂ ಕನಕಾಭೆಯುಮೆಂಬಿರ್ವರರಸಿಯರಾದಲ್ಲಿ ಪದ್ಮಾವತಿಗೆ ಮುನ್ನಮಮರ-ಗತಿವಡೆದುದಿತಾನುದಿತರಿರ್ವರುಂ ಬಂದು ರತ್ನರಥ ವಿಚಿತ್ರರಥರೆಂಬತನಯರಾದ-ರಾಜ್ಯೋತಿಷ್ಕನಲ್ಲಿಂ ಬಂದು ಕನಕಾಭೆಗೆ ತನೂಭವನನುಂದರನೆಂಬನಾದನಾ ಪ್ರಿಯವ್ರತನುಂ ತನ್ನ ಮಕ್ಕಳಿಗರಸುತನಮಂ ಕೊಟ್ಟು ತೊಱದಾಱುದಿವಸಂ ಸಂನ್ಯಸನಂಗೆಯ್ದು ಸಮಾಧಿ ಮರಣದಿಂ ಸ್ವರ್ಗಕ್ಕೆ ಪೋದನಿತ್ತಲರಸುಮಗನೊರ್ವಂ ನಿಜತನೂಭವೆಯಂ ಶ್ರೀಪ್ರಭೆಯಂ ರತ್ನರಥಂಗೆ ಮದುವೆ ಮಾಱ್ಪೆನೆಂದಿರ್ಪುದುಮಾಕೆಯನನುಂದರಂ ತನಗೆ ಬೇಡಿ ಪಡೆಯದೆ ಕೂಸುಗುಡದಾತನ ಮೇಲಿತ್ತಿ ಬರ್ಪುದುಂ ರತ್ನರಥನುಂ ಚಿತ್ರ ರಥನುಂ ಕೇಳ್ದು ಮುಳಿದು ದಾಱಯಿಟ್ಟು ಸುತ್ತುಮುತ್ತಿ,

ಪಿಡಿದು ಪರಿಭವಿಸಿ ಕೊಲ್ಲದೆ ।
ಕಡಂಗಿ ಪೊಱಮಡಿಸಿ ಕಳೆದು ನಾಡಿಂ ದೈನ್ಯಂ ॥



ಚಾರಣ ಯುಗಲದರ್ಶನ ವರ್ಣನಂ

ಬಡಿಸಿದೊಡನುಂದರಂ ಬ ।
ಲ್ವಿಡಿದೇವದಿನುಗ್ರಕೋಪಿ ತಾಪಸನಾದಂ ॥೫೬॥

ಇತ್ತಲಾ ರತ್ನರಥವಿಚಿತ್ರರಥರ್ ಚಿರಕಾಲಮರಸುಗೆಯ್ಯುತ್ತಿರ್ದು ವೈರಾಗ್ಯದಿಂ ತೊಱೆದು ತಪಂಗೈದು ಶರೀರಭಾರಮ ನಿೞಿಸಿ ನಾಕಲೋಕಮನನುಭವಿಸಿ ಬಂದು ಸಿದ್ಧಾರ್ಥನಗರಮನಾಳ್ವ ಕ್ಷೇಮಂಕರನರೇಂದ್ರಂಗಂ ವಿಮಲಾ ದೇವಿಗಂ ದೇಶ ಭೂಷಣಕುಲಭೂಷಣರೆಂಬ ತನಯರಾಗಿರ್ಪುದುಂ ನಮ್ಮ ತಂದೆ ವಿದ್ಯಾಭ್ಯಾಸನಿಮಿತ್ತಂ ಮತ್ತೊಂದು ಪುರದೊಳಿರಿಸೆ ಸಕಲವಿದ್ಯೆಗಳುಮಂ ಸಾಗರಘೋಷರೆಂಬುಪಾಧ್ಯಾಯರ್ ಕಲಿಸೆ ಕಲ್ತು ಗುರುಗೃಹಾಗಮನ-ಪೂಜಾನಂತರಂ ಮಹಾವಿಭೂತಿಯಿನೆಮ್ಮ ಪುರಮಂ ಪುಗುವ ಸಮಯದೊಳ್ಕೈಗೆಯ್ದು ಕುರುಮಾಡದ ಮೇಗಿರ್ದ ಕನ್ನೆಯಂ ಕಂಡೆಮಗೆ ಪರಿಣಯಕ್ಕೆ ತಂದರಸುಮಗಳೆಂದು ಬಗೆದು ಬಯಸಿ ನೋಡುತ್ತುಮರಮನೆಯಂ ಪೊಕ್ಕೆಮ್ಮೊಡವುಟ್ಟಿದಳೆಂದಱಿದು ಪೊಲ್ಲದಂ ಬಗೆದೆವೆಂದಮವೆ ನಿರ್ವೇಗ ನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣಋದ್ಧಿವಡೆದು ಪೋಗಲೊಡಮೆಮಗೆ ಮೂಱುಂ ಜನ್ಮದೊಳಂ ಜನಕನಾದ ನಿರತಿಶಯಪ್ರೇಮಾನುಬಂಧದಿಂ ಕ್ಷೇಮಂಕರಮಹಾಜನೆಮ್ಮಗಲ್ಕೆಗೆ ಸೈರಿಸಲಾರದೆ ಆಹಾರಶರೀರನಿವೃತ್ತಿಗೆಯ್ದು ಮುಡಿಪಿ ಗರುಡಾಧಿಪತನಾಗಿ ಮಹಾಲೋಚನಾಭಿಧಾನಮಂ ಪಡೆದೀಗಳೆಮ್ಮ ಕೇವಳಪ್ರಾಪ್ತಿಯನಱಿದು ಪೂಜಿಸಲ್ಬಂದನೆಂದು ಬೆಸಸಿ,

ತಾಪಸರೂಪಂ ವಿಗತಾ ।
ಳಾಪಂ ಮುಂಪೇೞ್ದನುಂದರಂ ಕೌಮುದಿಯೆಂ- ॥
ಬಾಪುರದೊಳಗಲದಿರ್ಪಂ ।
ಕೌಪೀನಧರಂ ಜಟಾಧರಂ ದಂಡಧರಂ ॥೫೭॥

ಆ ಪುರಪತಿ ಪೊಗೞ್ವುದುಮಾ ।
ತಾಪಸನಂ ಮದನವೇಗೆ ತತ್ಪತಿಗೆ ಮರು- ॥
ಚ್ಚಾಪದೊಳಮಧಿಪ ಮಿಥ್ಯಾ ।
ರೂ ಪದೊಳಂ ಮಾಡದಿರ್ಗುಣಾರೋಪಣಮಂ ॥೫೮॥

ಎನೆ ಸುಮುಖಂ ವಿಮುಖನಾಗೆ,

ಕೆಮ್ಮನುಮ್ಮಳಿಸಿ ಕೋಪಿಸದಿರ್ಮಾಣ್ ।
ನಿಮ್ಮನುಜ್ಜಿದೊರೆಕೊಂಡೊಡೆ ಸಾಲ್ಗುಂ ॥
ನಿಮ್ಮ ನೆಚ್ಚಿನ ತಪೋಧನನಂ ತಂ ।
ದೆಮ್ಮ ಕಾಲ್ಗೆಱಗುವಂತಿರೆ ಮಾೞ್ಪೆಂ ॥೫೯॥

ಎಂದೊಡಂಬಡಿಸಿ ನಿಜತನೂಜೆಯನೇಕಾಂತಕ್ಕೆ ಕರೆದು ತಾಪಸನ ತಪಮಂ ಕಿಡಿಸುವುಪಾಯಮಂ ಕಲಿಸಿ ಕಟಿಪುವುದುಂ,

ಜನನಿಯ ಬೆಸದಿಂ ತಮ್ಮೋ ।
ಹನವಿದ್ಯೆಯೆ ಮೂರ್ತಿಗೊಂಡು ಬರ್ಪಂತೆವೊಲಾ ॥
ಮುನಿಯಿರ್ದೆಡೆಗೊರ್ವಳೆ ಪೂ ।
ವಿನ ಪೊಟ್ಟಿಱಿಸೂಳಾರುಮಿಲ್ಲದೆಡೆಯೊಳ್ಬಂದಳ್ ॥೬೦॥

ಆ ಸಮಯದೊಳ್ಸೂಕ್ತಮಂ ಜಪಿಯಿಸಿರ್ದಾಕೆಯ ಕಾಲ ಪಳಂಚಿನುಂಗುರದಿಂ -ಚರಮತನು ಚಾಪಟಂಕಾರದಂತೆ ಕಿವಿಯಂ ಪಳಂಚಿ ಜಪಮಂ ಮಱೆದು ಕಣ್ಣಂ ತೆಱೆದು ನೋಡಿಜಘನಸ್ತನಾದ್ಯವಯವಂಗಳ ಭಂಗಿ ತಪೋಭಂಗಮಂ ಮಾಡೆ,

ಸ್ಮರರಾಗಂ ಮನದೊಳ್ಬೇ ।
ರ್ವರಿವಿನೆಗಂ ಬ್ರಹ್ಮಚರ್ಯನಿಷ್ಠಾಗರಿಮಂ ॥
ಕರಗುವಿನಮೆಳಸೆ ಕಣ್ಗಳ್ ।
ವರಾಕಭಿಕ್ಷಾಕನಾಕೆಗಂದಿಂತೆದಂ ॥೬೧॥

ನೀನೀ ಸಂಜೆಯೊಳಂಜದೆ ನೆರಮಿಲ್ಲದೆ ಬಂದ ಬರಮಾವುದೆಂಬುದಮೆಮ್ಮಬ್ಬೆನೆವ-ಮಿಲ್ಲದೆನಗೆ ಮುನಿದು ನುಡಿಯೆ ಬಂದು ನಿಮ್ಮಂ ಕಂಡು ಸಂತೋಷದಂತಮನೆಯ್ದಿದೇನೆನಗೆ ನಿಮ್ಮ ದೀಕ್ಷೆಯಂ ಕುಡುವುದೆನೆ ದಿಟಮೆಂದು ಬಗೆದಾವುದು ಗಹನಮಾಗಳೆ ಕೈಕೊಳ್ಳೆಂಬುದುಂ ನಾಂ ಕೊಡಗೂಸಪ್ಪೆನದುಕಾರಣದಿನೆಮ್ಮ ತಾಯಲ್ಲಿಗೆ ಪೋಗಿ ಬೇಡಿಮೆನೆ ಪೆತ್ತ ಮಗಳನೆಮಗೆ ಕುಡಲಱಿಯರೆಂಬುದಮಾನರಸಿ ನಡಪಿದ ಕೊಡಗೂಸೆನೆನ್ನಂ ಕುಡುವರೆಂಬುದುಂ ತಾಪಸಂ ಮದನಸಂತಾಪನಶರಪಾತಕ್ಕೆ ಸುಗಿದು ಕೈಪಿಡಿಯಲಡಹರಿಸುವದುಂ ನೀವೇಕೆ ತುರಿಪಂಗೆಯ್ವಿರೆಮ್ಮರಸಿಯರ ಪ್ರಾರ್ಥಿಸಿ ಪೊಡೆವಟ್ಟು ಬೇಡಿಕೊಂಡು ವಿಧಿಪೂರ್ವಕದಿಂದ ಮದುವೆನಿಲ್ವುದೆಂದೊಡಂಬಡೆ ನುಡಿದೊಡಗೊಂಡು ಪೋಪಮಂ,

ಕನ್ನೆಯ ಬೞಿಸಂದಿನನೆಂ ।
ಬನ್ನಂ ಮನಸಿಜನ ಪೂವಿನಂಬಿನ ಮೊನೆಯೊಳ್ ॥
ಕನ್ನೆಯ ಬೞಿಸಂದಂ ಮುನಿ ।
ತಪಸ್ತೇಜದೆಸಕಮೊಲಸೋರ್ವಿನೆಗಂ ॥೬೨॥

ಅಂತು ರಾತ್ರಿಯ ಸಮಯದೊಳ್ ರಾಜಪುತ್ರಿಯ ಬೞಿವಿಡಿದು ರಾಜಸದನಮಂ ಪೊಕ್ಕು ಮದನವೇಗೆಗೆ ಕೈಮುಗಿದು ನಿಮ್ಮ ನಡಪಿದ ಮಗಳಪ್ಪ ನಾಗದತ್ತೆಯನೆಮಗಿತ್ತು ಕನ್ಯಾದಾನಫಳಮಂ ಪಡೆವುದೆಂದು ಸರ್ವಾಂಗಪ್ರಣತನಾಗಿರ್ಪುದುಮಾ ಸಮಯದೊಳರಸನರಸಿಯಲ್ಲಿಗೆ ಬಂದು ಗೊರವನಿರವಂ ಕಂಡು ಕಡುಮುಳಿದು ಪಲತೆಱದಿಂ ಪರಿಭವಿಸಿ ಪೂಜಿಮಡಿಸಿ ಕಳಿಯೆ,



ಚಾರಣ ಯುಗಲದರ್ಶನ ವರ್ಣನಂ

ಪರಿಭವಮಮಂ ಪೊರ್ದಿದ ದು ।
ಷ್ಪರಿಣತಿಯಿಂ ಕಳಿಪಿ ಕಾಲಮಂ ದುರ್ಗತಿಯೊ- ॥
ಳ್ತಿರಿತಂದು ಮನುಜಗತಿಯೊ ।
ಳ್ದುರಂತದುಷ್ಕರ್ಮಫಳಮನನುಭವಿಸುತ್ತುಂ ॥೬೩॥

ಮತ್ತಂ ತಾಪಸರೂಪಮಂ ತಳೆದು ಕಾಯಕ್ಲೇಶದಿಂ ಜ್ಯೋತಿರ್ಲೋಕದೊಳಗ್ನಿ
ಕೇತುವೆಂಬ ದೇವನಾದನಿತ್ತಮನಂತವೀರ್ಯಕೇವಲಿಗಳ ಪೂಜೆಗೆ ಬಂದ ದೇವಸಭೆಯೊಳೊರ್ವ
ಮುನಿ ಸುವ್ರತಭಟ್ಟಾರಕರ ತೀರ್ಥಸಂತಾನದೊಳೆ ನಿಮ್ಮಂತೆ ಕೇವಲಿಗಳಾ
ಧರ್ಮೋಪದೇಶಂಗೆಯ್ವರಾರೆಂದು ಬೆಸಗೊಳ್ವುದುಂ,

ಜಲಜಲಿಸೆ ದಶನಕಿರಣಾ ।
ವಳಿ ಮದುಮಧುರಪ್ರಣಾದದಿಂ ಕೇವಲಿ ಕೇ- ॥
ವಲಲಬ್ಧಿ ದೇಶಭೂಷಣ ।
ಕುಲಭೂಷಣ ದಿವ್ಯಮುನಿಯುಗಕ್ಕಕ್ಕುಮೆನಲ್ ॥೬೪॥

ಅದನಾ ಸಭೆಯೊಳಿರ್ದಗ್ನಿಪ್ರಭದೇವಂ ಬಂದು ಕೇಳ್ದಿಮ್ಮೊಳಾದ ಜನ್ಮಾಂತರವೈರಮ
ವಿಭಂಗಜ್ಞಾನದಿನಱಿದೀಗಳಿಮಗೆ ಯೋಗವಿಘ್ನೋದ್ಯೋಗದೊಳಿರ್ದು ನೀಂ ಪುಣ್ಯಪುರುಷನು
ಚರಮದೇಹಧಾರಿಯುಮಪ್ಪುದನಱಿದೀತಂ ನಿನ್ನ ಮುಳಿಸಿಂಗೆ ಭೀತನಾಗಿ ಮುನ್ನಿನ ತನ್ನ
ಮುಳಿಸನುೞಿದುಪಶಾಂತಸ್ವಾಂತನೀ ಸಭೆಗೆ ಬಂದನೆಂದು ರಾಘವಂಗೆ ಬೆಸಸುವುದುಮದೆಲ್ಲಮ
ಗರುಡಾಧಿಪನುಂ ಕೇಳ್ದು ಸಂತೋಷದಂತಮನೆಯ್ದಿ,

ಮತ್ತನಯೋಪಸರ್ಗಮನದಿರ್ಪಿದ ನಿನ್ನ ಗುಣಪ್ರತಿಷ್ಠೆ ಲೋ-
ಕೋತ್ತಮಮಾಯ್ತು ನಿನ್ನ ಸಮಯಪ್ರತಿಪಾಳನಶೀಲಶಕ್ತಿಸಂ-
ಪತ್ತಿಗೆ ಮೆಚ್ಚಿದೆಂ ನೆನೆವುದುಂ ನೆನೆದಾಗಳೆ ಬರ್ಪೆನೆಂದು ಮೆ-
ಚ್ಚಿತ್ತನದೇನಮಾನುಷಮೊ ರಾಘವಸಂಚಿತಪುಣ್ಯ ಸಂಚಯಂ ॥೬೫॥

ನರನಾಥಂಗಿತ್ತು ತನ್ನಂ ನೆನೆದ ಸಮಯದೊಳ್ಬರ್ಪೆನಾನೆಂದು ಮುನ್ನಂ
ಚರಿತಾರ್ಥಂ ಭಕ್ತಿಭಾರಾನತಮಣಿಮಕುಟಂ ಹರ್ಷಬಾಷ್ಪಾಂಬುವರ್ಷಂ
ಗರುಡಂ ಬೀೞ್ಕೊಂಡು ತತ್ಕೇವಲಿಯ ಪದಪಯೋಜಂಗಳಂ ತನ್ನ ತೊಟ್ಟಾ-
ಭರಣಪ್ರದ್ಯೋತಿಯಿಂದಸ್ಖಲಿತಮೆನೆ ನಭಂ ತನ್ನ ಲೋಕಕ್ಕೆ ಪೋದಂ ॥೬೬॥

ಭೂವಂದ್ಯ ದೇಶಭೂಷಣ ।
ಕೇವಳಿಗಳ ಸಮವಸೃತಿ ವಿಹಾರಿಸಿದುದು ಭ- ॥

ವ್ಯಾವಳಿಗಳನಾರ್ಯಾಖಿಂ ।
ಡಾವನಿಯೊಳ್ತಣಿಪಲೆಂದು ಧರ್ಮಾಮೃತದಿಂ ॥೬೭॥

ತದನಂತರಂ ವಂಶಸ್ಥಳಪುರಮನಾಳ್ವ ಸುಪ್ರಭನರೇಂದ್ರಂ ಬಂದು ರಾಮಲಕ್ಷ್ಮಣರಂ ಪೂಜಿಸಿ ವಂಶಸ್ಥಳನಗೋಪರಿಮತಳ ದೊಳ್ವಿಶ್ರಮಿಸಿರ್ಪುದುಂ ಚೈತ್ಯಭವನಂಗಳಂ ಬಹುಪ್ರಾಕಾರಪ್ರಾಸಾದಪಙ್ತಿಗಳಿನೇಕಾಂತಕಮನೀಯಮಪ್ಪಂತು ಪೊಟಿಲಂ ಮಾಡಿ ಕೆಲವು ದಿವಸಮವರನಾ ಪೊಟಿಲೊಳಿರಿಸಿ ಬೆಸಕೆಯ್ಯುತ್ತಿರೆ ವಂಶಸ್ಥಳಗಿರಿಗೆ ರಾಮಗಿರಿಯೆಂಬ ಪೆಸರಾಯ್ತುವರಲ್ಲಿಂ ತಳರ್ದು ತೆಂಕಮೊಗದೆ ನಿಚ್ಚವಯಣಂಗಳಿಂ ಪೆರ್ವಟುವಂ ಪೊಕ್ಕು ಕರ್ಣರವೆಯೆಂಬ ತೊಱೆಯಂ ಪಾಯ್ದದಱ ತೆಂಕಣತಡಿಯೊಳೊಂದು ರಮ್ಯಪ್ರದೇಶ-ದೊಳ್ವಿಶ್ರಮಿಸಿರ್ಪುದುಮಲ್ಲಿಗೆ ಸುಗುಪ್ತಿಗುಪ್ತರೆಂಬ ಗಗನಚಾರಣಯುಗಳಂ ಗಗನತಳದಿನವ-ನೀತಳಕ್ಕವತರಿಸಿ ಮಾಸೋಪವಾಸಪಾರಣೆಯೊಳ್ಕಾಂತಾರ ಚರ್ಯಾಮಾರ್ಗದಿಂ ಬರ್ಪವರಂ ದೂರಾಂತರದೊಳ್ಕಂಡು,

ದೆಸೆಯನಂ ಭೂಷಾಂಶುಗಳಳಿತ್ರಿಸೆ ಪದತಳಮಾತ್ಮೀಯಶೋಣಾಂಶುವಿಂದ-
ರ್ಚ್ಚಿಸೆ ಧಾತ್ರೀ ದೇವಿಯಂ ಸಂಭ್ರಮರಸವಶನೇೞ್ತಿಂದು ಸದ್ಭಕ್ತಿಯಿಂ ವಂ-
ದಿಸಿ ರಾಗೋತ್ಕಂಠನುಚ್ಚಾಸನದೊಳಿರಿಸಿ ದಿವ್ಯಾರ್ಚನಾದ್ರವ್ಯದಿಂದ-
ರ್ಚಿಸಿದಂ ಸಾಹಿತ್ಯವಿದ್ಯಾಧರನಮಲಯಶಂ ಭಾರತೀಕರ್ಣಪೂರಂ ॥೬೮॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಚಾರಣಯುಗಲದರ್ಶನ ವರ್ಣನಂ
ಅಷ್ಟಮಾಶ್ವಾಸಂ



## ೯. ಸೀತಾಹರಣ ವರ್ಣನಂ

ಶ್ರೀಪದವನೀವ ಮುಕ್ತಿ ।
ಶ್ರೀಪದಮಂ ಪರಮಭಕ್ತಿಯಿಂದರ್ಚಿಸಿ ಪು- ॥
ಣ್ಯೋಪಾರ್ಜನಮಂ ತಳೆದನಿ ।
ಳಾಪೂಜಿತ ಚಾರುಚರಿತನಭಿವಪಂಪಂ ॥೧॥

ಅಂತರ್ಚಿಸಿ ವಿಧಿಪೂರ್ವಕದಿಂ ನಿರವದ್ಯಾಹಾರಮಂ ಕುಡುವುದುಮವರ್ ಸಂಯಮಸಂರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಕೈಗೆತ್ತಿಕೊಂಡಕ್ಷಯ ದಾನಮೆಂಬುದುಂ,

ಏನೆಸೆದುದೊ ರೈವೃಷ್ಟಿ ಹಿ ।
ಮಾನಿಳನಳಮಿಳಿತ ಕುಸುಮವರ್ಷಂ ಸುರಭೇ- ॥
ರೀನಾದಂ ದಿವಿಜರಹೋ ।
ದಾನಶ್ರುತಿ ನೆಗೞ್ದೆ ನೆಗೞ್ದಿ ಪಂಚಾಶ್ಚರ್ಯಂ ॥೨॥

ಆಗಳವರ ತಪಸ್ಸಾಮರ್ಥ್ಯಕ್ಕೆ ರಾಮಾದಿಗಳ್ ರೋಮಾಂಚಕಂಚುಕಿತರಾಗಿ ಧರ್ಮಕಥಾಶ್ರವಣಪ್ರಸಂಗದೊಳಿರ್ಪುದುಮವರಿದಿರೊಳಿರ್ದ ವಿಶಾಳಶಾಳದ್ರುಮಶಾಖಾರೂಢನಾಗಿರ್ದು,

ಪೋದ ಭವಪ್ರಪಂಚದಱಿತಂ ಮುನಿದರ್ಶನಮಾತ್ರದಿಂ ಮನ-
ಕ್ಕಾದೊಡೆ ಪಾಪಸಂಚಯಮನಿನ್ನಪವರ್ತಿಪೆನೆಂದು ಬಂದು ಪಾ-
ದೋದಕದೊಳ್ಪೊರಳ್ದು ಕನಕಪ್ರಭೆವೆತ್ತು ಪದೋಪಕಂಠಲ-
ಗ್ನೋದರಮಸ್ತಕಂ ವಿನತಮಿರ್ದುದು ಪರ್ಮಪಶಾಂತ ಚೇತಸಂ ॥೩॥

ಅದಂ ಕಂಡ ರಾಘವನವರ ತಪಸ್ಸಮೃದ್ಧಿಯಿಂ ಸೀತೆಗಂ ಸೌಮಿತ್ರಿಗಮಭಿವರ್ಣಿಸಿ- ಮುನಿಗೆ ಮುಗಿದ ಕೈವೆರಸು ಹಿತಾಹಿತವಿವೇಕವಿಕಳಮುಂ ವಿಜಾತಿಯುಮಪ್ಪ ವಿಹಗಮುಪಶಮಕ್ಕೆ ಬಂದ ಕಾರಣಮೇನೆಂಬುದುಂ ಚಾರಣರಿಂತೆಂದು ಬೆಸಸಿದರೀ ಮಹಾಗಹನಂ ಮುನ್ನೇಕಕರ್ಣಕುಂಡಳಪುರಪ್ರಮುಖನಿಖಿಳಗ್ರಾಮ ವಿಕೀರ್ಣಮದನಾಳ್ವಂ ದಂಡಕನಾತನ

ಪೆಂಡತಿ ದುರ್ಮನಸ್ಕೆ ಮುಸ್ಕರಿ ಸಮಯಮಂ ಪಿಡಿದಿರ್ದಳಾ ದಂಡಕನುಮೊರ್ಮೆ ಪುರಬಹಿಃಪುರದೊಳ್ಕಲ್ನೆಲೆ ನಿಂದ ಮಹಾಋಷಿಯರಂ ನೋಡುತ್ತುಂ ಪೋಗಿ ಬೇಂಟೆವಡೆಯದೆ ಬಂದವಿವೇಕಿಯುಪ್ಪುದಱಿಂದವರ ಕೊರಲೊಳೊಂದು ಸತ್ತ ಪಾವಂ ಸುತ್ತಿ ಪೋದೊಡವರುಪಸರ್ಗಂ ಪಿಂಗುವಿನಂ ಕೈಯೆತ್ತೆವೆಂದಿರೆ, ಮತ್ತೊಂದು ದಿವಸಮಾ ದೆಸೆಯನೆ ಮೃಗರಯಾನಿಮಿತ್ತಂ ದಂಡಕಂ ಪೋಗುತ್ತಿರಲೊರ್ವನವರ ಕೊರಲೊಳಿರ್ದ ಕಾಳೋರಗನ ಕಳೇವರಮಂ ಕಳೆವುದಂ ಕಂಡಱಿಯದಂತಿದೇನೆಂದು ಬೆಸಗೊಳ್ವುದುಂ,

ಆರೆಂದುಮಱಿಯೆನೊರ್ವಂ ।
ಕ್ರೂರಾತ್ಮಂ ದಿವ್ಯಮುನಿಗಿದಂ ಮಾಡಿ ದುರಾ- ॥
ಚಾರಂ ನರಕಾಯುಷ್ಯ ।
ಕ್ಕಾರಂಭಿಗನಾದನೆಂದು ಬೆಱ್ಕಱೆ ನುಡಿದಂ ॥೪॥

ದಂಡಕನಾ ನುಡಿಗೆ ಭಯಂ ।
ಗೊಂಡಂ ಯತಿಪತಿಯ ಧೈರ್ಯಮಂ ಕಂಡು ಗುಣಂ- ॥
ಗೊಂಡಂ ಪದಾನತಂ ಕ್ಷಮೆ ।
ಗೊಂಡಂ ಭವ್ಯಂಗೆ ಸಹಜಮುಪಶಮಭಾವಂ ॥೫॥

ಕ್ಷಮಿಯಿಸುವುದೆನ್ನ ಕೆಯ್ದಱ ।
ಯಮೆಗೆಂದೆಱಗಲ್ಕೆ ದಂಡಕಂ ಮುನಿ ನುಡಿದಂ ॥
ಕ್ಷಮಿಯಿಸುವುದೆ ಮುಖ್ಯಂ ಸಂ ।
ಯಮಕ್ಕೆ ನಿಶ್ಶಲ್ಯನಲ್ಲದಂ ಸಂಯಮಿಯೇ ॥೬॥

ಎಡವಿದ ಕಲ್ಗೆ ತಾಗಿದ ಮರಕ್ಕನಿಸಂ ಮುನಿಸಂ ಮನಕ್ಕೆ ತ-
ರ್ಪೊಡೆ ತರಲಪ್ಪುದನ್ಯರೊಳಮನ್ಯಭವಂಗಳೊಳಾರ್ತ ರೌದ್ರದಿಂ-
ದೊಡರಿಸಿದಾತ್ಮ ಕರ್ಮಫಳಮಂ ತವಿಪಲ್ಲಿ ಸಹಾಯವೃತ್ತಿಯಂ
ಪಡೆವ ಸುಹೃಜ್ಜನಕ್ಕೆ ಮುನಿಪಂ ಮುನಿದಂದು ಕೃತಘ್ನನಲ್ಲನೇ ॥೭॥

ಎಂದಹಿಂಸಾರೂಪಮಪ್ಪ ಧರ್ಮಮನುಪದೇಶಂಗೆಯ್ಯೆ ದಂಡಕನದಂ ಕೈಕೊಂಡು ಕ್ರಮದೊಳೆ ನಡೆಯುತ್ತುಮಿರೆ,

ಅರಸಿಯುಮಮಾತ್ಯನುಂ ಪಾ ।
ಪರತರ್ಮಧಮಧ್ಯಮಾಂಸಸೇವಾಸಕ್ತ- ॥
ರ್ನಿರವದ್ಯಮನರಸನ ಸ ।
ಚ್ಚರಿತ್ರಮಂ ಕಿಡಿಸುಮಂತು ಮಂತಣಮಿರ್ದರ್ ॥೮॥

ಅಂತು ತಮಗಪಾಯಮನೊಡರ್ಚುವುಪಾಯಮಂ ಚರ್ಚಿಸಿ,

ಕಳವಂ ಮಿಥ್ಯೆಯನೇಱಿಸಿ ।
ಕಳತ್ರದೊಳ್ಪೊಲ್ಲಕೆಯ್ದರೆಂದಿಲ್ಲದುದಂ ॥
ಗಱಿಪಿದೊಡೆ ದಂಡಕಂ ಕಡು ।
ಮುಳಿದು ಋಷಿಯರ್ಗೆ ಮಾಯೆ ಮೋಹಿಸದಾರಂ ॥೯॥

ಪಱೆಗಂಜದೆ ಕರ್ಣೇಜಪ ।
ರಱೆನುಡಿ ದಿಟಮೆಂದು ಡಂಗುರಂ ಬಡಿಯಿಸಿ ಕಾ- ॥
ಪಱೆಯೆ ಪೊಱಮಡಿಸಿ ಕಳೆದಂ ।
ಪೊೞಲಿಂದವಿಚಾರಿ ಜೈನಮುನಿಸಂಕುಳಮಂ ॥೧೦॥

ಅಂತು ಋಷಿರೂಪನೂರಂ ಪೊಕ್ಕೊಡೆ ಕೊಲ್ವೆನೆಂದಾಣೆಯಿಟ್ಟು ಕಳೆವುದುಂ,

ಅಱಿಯದೆ ಪೊೞಲಂ ಪುಗೆ ಕೆಲ ।
ರಱುಗಲಿ ಋಷಿಯರ್ಗೆ ಮುಳಿದು ತನ್ನಾಜ್ಞೆಗೆ ಬೆ- ॥
ಟ್ಟುಱಿರೆಂದು ಕೊಂದು ಪಾತಕಿ ।
ತೆಱೆದಂ ಪುಗಲೆಂದು ನಿರಯದರರೀಪುಟಮಂ ॥೧೧॥

ಅಂತು ಋಷಿವಧೆಗೆಯ್ದುತ್ಕಟ ಪಾಪಮಂ ಸದ್ಯಃಪೀಡಿತರೂಪಮಂ ದಂಡಕನುಪಾರ್ಜಿಸುವುದುಮಿತ್ತ ಮತ್ತೊಂದು ದಿವಸಮಾಪುರಕ್ಕೆ ಮಹಾತಪೋಧನರೇಕ ವಿಹಾರಿಗಳ್ಬರುತ್ತುಮಿರೆ, ಮಾರ್ವಟ್ಟೆಯೊಳೊರ್ವಂ ಕಂಡು ಮಗುಱೆ ಬಿಜಯಂಗೆಯ್ಯೆ ಮೆನೆ ಕಾರಣಮೇನೆಂಬುದುಮಿಾ ಪೊೞಲನಾಳ್ವ ನೃಪಂ ನಿಷ್ಕೃಪಂ ನಿಷ್ಕಾರಣಮನೇಕ ಋಷಿಯರಂ ಘಾತಿಸಿದನೆಂಬುದುಮಾ ನುಡಿಯೊಳೊಗೆದ ಕರುಣಾರಸಮೆ ಕಲುಷಕಿಂಪಾಕಬೀಜಮನಂಕುರಿತಂ ಮಾಡೆ,

ಅರಸಾಂ ಬಾರಿಪರೆನ್ನನಾರೆನಗೆ ಚಾತುರ್ದಂತಮುಂಟೆನ್ನ ದೋಃ-
ಪರಿಘಂ ದುರ್ಧರಮೆಂದು ಸಾಧುಜನಮಂ ನಿಷ್ಕಾರಣಂ ಕೊಂದನೇ
ದುರಿತಕ್ಕಂಜನೆ ದುರ್ಯಶಕ್ಕಗಿಯನೇ ಪೇೞೆಂದು ಕಣ್ಕೆಂಕನಾ-
ಗಿರೆ ಪುರ್ವುರ್ವಿ ಪೊದಟ್ಟುದಾ ಮುನಿಗೆ ಸರ್ವಗ್ರಾಹಿ ಕೋಪಾನಳಂ ॥೧೨॥

ಅರಸರಸಿಯರನೂರಂ ।
ಪರಿಜನಮಂ ನಾಡನಡವಿಯಂ ಬೆಟ್ಟೊಳಗಾ- ॥
ಗಿರೆ ಮುನಿ ತೇಜೋವೃದ್ಧಿಯಿ ।
ನುರುಪಿದನಣಕಕ್ಕೆ ಸವಣನುಂ ಸೈರಿಪನೇ ॥೧೩॥

ಸಕಳತ್ರಂ ಕ್ಷಣಮಾತ್ರದಿಂ ವಿಳಯವಹ್ನಿಜ್ವಾಲೆಯೊಳ್ಸುಟ್ಟು ದಂ-
ಡಕನಂ ನಂದಿಮದಿಲ್ಲ ಪೇೞೆ ಪೆಸರಿಲ್ಲೆಂಬನ್ನೆಗಂ ವಂಶರಾ-
ಜಕಮಂ ವಾಮಭುಜಾಗ್ರದೊಳ್ಮುನಿಯ ತೇಜೋವೃದ್ಧಿಯಿಂದಾದ ಪಾ-
ವಕನಾಸ್ವಾದಿಸಿದತ್ತಿದೇವಿರಿದೊ ಪೇೞಾಪಾತಕಂಗೆಂಬಿನಂ ॥೧೪॥

ಸುಡುವುದು ಕಿಚ್ಚಲ್ಲದೆ ಗತಿ ।
ಗಿಡಿಸದು ಕೋಪಾಗ್ನಿ ಸುಟ್ಟುವೊಡಲಂ ಗತಿಯಂ ॥
ಕಿಡಿಸಿದುದಾಯತಿಗೆನಲೇಂ ।
ಪಡೆಮಾತಱಿವುಳ್ಳನುೞಿಯದಿರ್ಪನೆ ಮುನಿಸಂ ॥೧೫॥

ಅಂತು ಸಾಧುಸಂಘವಧೆಗೆಯ್ದಿದ ವಧುವುಮಮಾತ್ಯನುಂ ವಧಕನಪ್ಪ ದಂಡಕಮನುಂ ಕ್ರೋಧಕ್ಕೆ ಸಂದ ತಪೋಧನನುಮಧೋಗತಿಗೆ ಸಂದರಾ ದಂಡಕಂ ನರಕದಂಡನೆಗೊಳಗಾಗಿ ಬೞಿಯಂ ದುರ್ಗತಿಗಳೊಳ್ತೊೞಲ್ದೀಗಳ್ಪರ್ದಾಗಿರ್ದನೆನೆ ಕೇಳ್ದದರ್ಕೆ ಖಗಂ ಖೇದಿಸೆ, ನೀಂ ಮುನ್ನಮಱಿಯದೆ ನರಕಾದಿದುಃಖಮನನುಭವಿಸಿದೆ, ನೀನೀಗಳೆಮ್ಮ ಕಂಡ ದೂಸಱಿಂ ಕರ್ಮಬಂಧಂ ಶಿಥಿಳಮಾದುದೆಂದವಱ ಮನೋವಿಷಾದಮಂ ಕಳೆದದರ್ಕೆ ಲಬ್ಧಿ ದೊರೆಕೊಂಡುದನಱಿದು ದರ್ಶನಪೂರ್ವಕಮಣುವ್ರತಮಂ ಕೊಟ್ಟು ರಾಮಲಕ್ಷ್ಮಣರುಮಂ ಸೀತೆಯುಮಂ ಪರಸಿ ಗಗನಚಾರಣರ್ಪೋಪುದುಂ,

ಎನಗಿದು ಕಂದನೆಂದು ಗಳಕಂದಳದೊಳ್ಚರಣದ್ವಯಂಗಳೊ-
ಳ್ಜನಕಜೆ ಕಂಠಿವಳಯಮಂ ಮಣಿನೂಪುರಮಂ ತೊಡರ್ಚೆ ಮಂ-
ಡನದ ಮಯೂಖಲೇಖೆ ಜಡೆಗೊಂಡು ಕವಲ್ತು ಮಡಲ್ತಲರ್ಚೆ ದ-
ಗ್ವನರುಪಮಂ ಜಟಾಯುವೆಸರಾದದರ್ಕೆ ರಘುಪ್ರವೀರನಿಂ ॥೧೬॥

ಅಂತು ರಾಮಲಕ್ಷ್ಮಣರ್ ಸುಗುಪ್ತಿಗುಪ್ತಗಗನಚಾರಣರ ತಪಸ್ಸಾಮರ್ಥ್ಯ ದರ್ಶನದಿಂ ಕೃತಾರ್ಥರಾಗಿ ಮೂಱು ದಿವಸಂ ದಂಡಕಾರಣ್ಯದೊಳಗನೆ ದಕ್ಷಿಣಾಭಿಮುಖದೆ ನಡೆದು ಚಳವೀಚೀಸಂಚಯಮಂ ಕ್ರೌಂಚನದಿಯನುತ್ತರಿಸಿ ಸರತ್ತಟವನಲತಾಗೃಹದೊಳ್ಸೀತೆ ಬೞಲ್ದಳೆಂದು ವಿಶ್ರಮಿಸಿ ಸುಖಮಿರ್ಪುದುಮಾ ನದಿಯ ಸಮೀಪದ ಸರ್ವರತ್ನಗರ್ಭಮಪ್ಪ ದಂಡಗಿರಿಯ ಗುಹಾಗೇಹದೊಳೊಂದು ಯೋಜನದೆಂಟನೆಯ ಭಾಗಂ ಖಾತಮಾದಲ್ಲಿ ಪಾತಾಳ ಲಂಕೆಯೆಂಬ ಪುರಮಿರ್ಪುದದನಾಳ್ವಂ ಖರನೆಂಬನಾತನರಸಿ ರಾವಣನಂ ತಂಗೆ ಚಂದ್ರನಖಿಯೆಂಬಳವರ್ಗೆ ಶಂಭುಕನುಂ ಸೌಂದರನುಮೆಂಬರ್ತನಯರಾದಲ್ಲಿ, ಪಿರಿಯ ಮಗಂ ಶಂಭುಕಂ ಪನ್ನೆರಡು ವರ್ಷಂ ಮೊದಲ್ಗೊಂಡು ಸೂರ್ಯಹಾಸಾಸಿಯಂ ಸಾಧಿಸುತ್ತಿರ್ಪುದುಮಾತಂಗಾ ಬಾಳನಿತ್ತು ಪಿಸಕೆಯ್ಯಲೆಂದು ಬಂದಯಕ್ಷಾಮರಸಹಸ್ರಮಾ ಖಡ್ಗ ರತ್ನಮನವನಿರ್ದ ಬಿದಿರ ಪೊದಱ

ಮೊದಲೊಳಿರಿಸಿ ನಮೇರುಮಂದಾರಪಾರಿಜಾತ ಸುಮನೋಮಂಜರಿಯಿನರ್ಚಿ-ಸುತ್ತಿರ್ಪುದುಮಿತ್ತ ಲಕ್ಷ್ಮಣಂ ವನವಿಳಾಸಿನೀನಿರೀಕ್ಷಣಕುತೂಹಲನಾಗಿ,

ಸುೞಿವೆಡೆಗೆ ಖಡ್ಗಸಿದ್ಧಿಗೆ ।
ಪಱಿಯಟ್ಟಿದ ಪುಣ್ಯದೇವತಾದೂತನವೋ- ॥
ಲ್ಲುಱಿಗಾಳಿಯೊಡನೆ ಹರ್ಷದ ।
ಮೞಿ ಬರೆ ಬಂದತ್ತದೊಂದು ದಿವ್ಯಾಮೋದಂ ॥೧೭।

ಇದು ಮನುಜಲೋಕವನಕುಸು ।
ಮದ ಸೌರಭಮಲ್ತು ದಿವಿಜಲೋಕದ ಮಂದಾ- ॥
ರದ ಕುಸುಮಸೌರಭಂ ಬಂ ।
ದುದೆತ್ತಣಿಂದೆಂದು ಲಕ್ಷ್ಮಣಂ ಬೞಿಸಂದಂ ॥೧೮।

ತನಿಗಂಪಿನ ಬೞಿವೞಿಯಿನೆ ।
ಜನಾರ್ದನಂ ಭ್ರಮರದಂತೆ ಸುಮನೋರಾಗಂ ॥
ಜನಿಯಿಸೆ ತಮಾಳಪಲ್ಲವೆ ।
ತನುರುಚಿ ಪರ್ವಿದಿರ ಪೊದಱಿನಂದ್ಯೈತಂದಂ ॥೧೯।

ಸ್ಥಳರಕ್ತಕಮಳಮಂ ಕೋ ।
ಮಳಪದತಳಪದ್ಮರಾಗರುಚಿಯಿಂ ವಂಶ- ॥
ಸ್ಥಳಮಂ ತನುಪ್ರಭಾಮಂ ।
ಡಳದಿಂದೆಂಟನೆಯ ಕೇಶವಂ ದ್ವಿಗುಣಿಸಿದಂ ॥೨೦॥

ಅಂತು ಬಂದು ಬಿದಿರ ಪೊದಱ ಮೊದಲೊಳಮರತು ಸುಮನೋಮಾಲೆಯೊಳಮನರ್ಘರತ್ನಮಾಲೆಯೊಳಮರ್ಚಿಸಿರ್ದ ಸೂರ್ಯಹಾಸಾಸಿಗೆ ಕೈಯಂ ನೀಡುವುದುಂ,

ಜಯಲಕ್ಷ್ಮಿಯ ನಯನೋತ್ಪಳ ।
ಮಯೂಖಮೆನೆ ತಾನೆ ಬಂದು ಕರಕಿಸಲಯಕಾಂ- ॥
ತಿಯಿನೇಂ ರಾಗಂ ಬೆತ್ತುದೊ ।
ಜಯಾಸಿ ಪೊಗರಿೞಿಸೆ ಕಿಸುರ ಮಸಿಯಕ್ಕರಮಂ ॥೨೧॥

ಕಾಳಾಹಿಯೆನಿಪ ಕೃಷ್ಣನ ।
ತೋಳ್ಗೊಳೆ ನಿಃಶ್ವಾಸಧೂಮಲೇಖಾಕೃತಿಯಿಂ ॥
ಬಾಳಾಯತಮಿರೆ ಜಡಿದಂ ।
ಬಾಳೊಡನಲ್ಲಾಡೆ ನೆಟಿಲ ನೆವದಿಂ ದಿನಪಂ ॥೨೨॥

ಅಂತು ಜಡಿದು ಕರವಾಳ ಕೂರ್ಪಂ ನೋಡಲೆಂದು,

ಬಾಯ್ದಾರೆ ನಿಲೆ ಕುಮಾರಂ ।
ಪೊಯ್ದೊಡೆ ಕೈಯಳವಿ ವೈರಿವಂಶಂಗಳ ನೆ- ॥
ಲ್ಲೆಯ್ದಿಲ ಕಾವಿನ ಪೊದೆಯಂ ।
ಪೊಯ್ದಂತೊರ್ಮೊದಲೆ ಪಱಿದುವಾ ವಂಶವನಂ ॥೨೩॥

ಆ ವಂಶವನದೊಡನೆ,

ತಲೆ ಪಱಿದು ಪಾಱಿ ಪಾಱುವ ।
ತಲೆವರಮೆಡೆವಱಿಯದಟ್ಟೆಯಿಂ ಪೊಣ್ಮು ವಸ್ರ- ॥
ಗ್ಜಲಧಾರೆ ನಾಳಮೆನೆ ಪಂ ।
ದಲೆ ಪೋಲ್ತುದು ನಭದೊಳಲರ್ದ ಪೊಂದಾವರೆಯಂ ॥೨೪॥

ಆಗಳದಂ ಕಂಡು ನಿರಪರಾಧನಂ ಕೊಂದೆನೆಂದು ಮನದೊಳ್ ಕಟ್ಟುಗಡೆದು,

ವೇಧಸ್ಸಂಕಲ್ಪಂ ದು ।
ರ್ಬೋಧಮಿದಂ ನಿಟ್ಟೆಯಿಂ ನಿರೋಧಿಸಿ ತನುವಂ ॥
ಸಾಧಿಸಿದೊಡೀ ಕೃಪಾಣಮೆ ।
ಬಾಧಾಕರಮಾಯ್ತುಜಾ ಕೃಪಾಣೀಯದವೋಲ್ ॥೨೫॥

ಎಂದು ಕಾರುಣ್ಯಪರನಾಗಿರ್ಪುದುಂ ತತ್ಕೌಕ್ಷೇಯಕಮಂ ರಕ್ಷಿಸುವ ಯಕ್ಷಾಮರಸಹಸ್ರಮಿನ್ನೆಮಗೆ ನೀನೆ ಪತಿಯೆಂದು ಪೊಡೆವಟ್ಟು ಪೂಜಿಸಿ ಪೋಪುದುಂ ನಿಜಾಗ್ರಜನ ಸಮೀಪಕ್ಕೆ ಬಂದು ಕರವಾಳವೃತ್ತಾಂತಮಂ ವಿದಿತಂ ಮಾಡೆ,

ಜಳರುಹನಾಭಂ ಕಣ್ಣೊ ।
ಳ್ಪೊಳೆದುಳ್ಕುವ ಸೂರ್ಯಹಾಸಮಂ ಕುಡೆ ಕೈಯೊಳ್ ॥
ಹಳಧರನ ದೇಹರುಚಿ ಮೂ ।
ವಳಸುವುದುಂ ಚಂದ್ರಹಾಸಮೆನಿಸಿತ್ತಾಗಳ್ ॥೨೬॥

ಅನ್ನೆಗಮಿತ್ತಲ್

ವಿವಿಧಾರ್ಚನೆವೆರಸು ತನೂ ।
ಭವನಿಂದು ಕೃಪಾಣಸಿದ್ಧಿವಡೆದಪನೆಂಬು- ॥
ತ್ಸವದಿಂದುಳ್ಕಾಪಾತಮ ।
ನವಳಂಗಪ್ರಭೆಯಿನಿೞಿಪಿ ನಭದಿಂದಿಂೞಿದಳ್ ॥೨೭॥

ಅಂತು ನಭದಿಂದಿೞಿದು,

ತನಯುನ ತಲೆಯೊಂದೆಸೆಯೊ ।
ಳ್ತನುವೊಂದೆಸೆಯೊಳ್ಸಿಡಿಲ್ದು ಕೆಡೆದಿರೆ ಕಂಡಾ- ॥
ವನಿತೆ ಭಯರಸದಿನೆರ್ದೆ ಪೌ ।
ವನೆ ಪಾಱಿ ವಿಷಾದವಹ್ನಿಗಿಂಧನಮಾದಳ್ ॥೨೮॥

ಖರನಂದನನಂ ದಶಕಂ ।
ಧರನಳಿಯನನೆನ್ನ ಶಂಭುಕುವರನನಾರ್ಕೊಂ- ॥
ದರೆನುತ್ತೆ ಮೋದಿಕೊಂಡ ।
ಳ್ಕರದಿಂದಡಿಗಡಿಗೆ ಚಂದ್ರನಖಿ ತೆಳ್ವಸಿಱಂ ॥೨೯॥

ಬಱಿ ಬಱಿ ಬತ್ತೆ ಬಾಯ್ಬಿರಲ ಬಾಸುಟಿ ಪದ್ಧತಿ ಮಧ್ಯದೊಳಗಂ-
ಡಿಱಿದಿರೆ ಕಣ್ಣನೀರ್ಗಳ ಪೊನಲ್ಕರೆಗಣ್ಮೆ ಕಪೋಳದೊಳ್ಬಯ-
ಲ್ದೊಡಱಿಯನೊಡರ್ಚೆ ಚಂದ್ರನಖಿ ಶೋಕರಸಾಕುಳೆ ಮೂರ್ಛೆವೋಗಿ ಮೈ
ಯಱಿಯಳೆ ಚಿತ್ರಮಲ್ತು ನಿಜ ಪುತ್ರವಿಯೋಗಮನಾರೊ ಸೈರಿಪರ್ ॥೩೦॥

ಅನಂತರಮೆಂತಾನುಂ ಮೂರ್ಛೆಯಿಂದೆಟ್ಟುತ್ತು,

ತನ್ನಂ ದಂಡಿಸಿ ಬಾಳಂ ।
ಪನ್ನೆರಡಬ್ದಕ್ಕೆ ಪಡೆದ ಬಾಳಕಂ ಕೊಂ- ॥
ದೆನ್ನೊಳಿಡಱಿದನ ಬೇರೊಳ್ ।
ಬೆನ್ನೀರಂ ಪೊಯ್ವೆನೆಂದು ಬೇಗದಿನೆಟ್ದಿಳ್ ॥೩೧॥

ಒಡನೊಡನೆ ಶೋಕರಸಮುಂ ।
ಕಡುಮುಳಿಸುಂ ತಿಣ್ಣಮಾಗೆ ಖೇಚರಿ ಮೊಟಗಂ ॥
ಸಿಡಿಲಂ ಕೆದಱುವ ಕಲ್ಪದ ।
ಕಡೆಗಾಲದ ಕೆಂಡವಟಿೆಯ ಮುಗಿಲವೊಲಿರ್ದಳ್ ॥೩೨॥

ರೋದನದಿಂ ಸುತನ ಶಿರ ।
ಶ್ಛೇದನದಟಿಲಾಜಿದಾಱುಗುಂ ರಿಪುರುಧಿರಾ- ॥
ಸ್ವಾದನದಿನೆಂದು ವಿಳಯೋ ।
ತ್ಪಾದನಭೈರವಿಯ ಮಸಕಮಂ ಕೈಕೊಂಡಳ್ ॥೩೩॥

ಅಂತು ಮುಳಿದೆಟ್ದು ಪಜ್ಜೆವಿಡಿದು ನಡೆದು ರಾಮಲಕ್ಷ್ಮಣರಂ ಕಂಡು,

ಬಗೆವವರಾರಿದಂ ಖಚರಕಾಮಿನಿ ಪುತ್ರವಿಯೋಗವೇಗಮಂ
ಬಗೆಯದೆ ಕಂದನಂ ಬಱಿದೆ ಕೊಂದವನಂ ಕೊಲಲೆಂದು ಪೂಣ್ದುದಂ

ಬಗೆಯದೆ ನೋಡಿ ಲಕ್ಷ್ಮಣನ ಗಾಡಿಗೆ ಕೂರ್ತೊಡಗೂಡುವಾಸೆಯಂ
ಬಗೆವಳಿವಂತೆ ವಲ್ ಬಗೆವರೇ ವಿಷಯಾತುರಮತ್ತಚೇತಸರ್ ॥೩೪॥

ಅಂತು ಕಂತುಸಂತಾಪದನಾವರ್ತನಪರಿವರ್ತನಂ ಬಂದು,

ರೂಪಪರಾವರ್ತನ ವಿ ।
ದ್ಯಾಪರಿಣತಿಯಿಂ ವಿಯಚ್ಚರಾಂಗನೆ ಕನ್ಯಾ- ॥
ರೂಪಮನೇಂ ತಳೆದಳೊ ತಾ ।
ರಾಪತಿ ತಾರುಣ್ಯ ಲಕ್ಷ್ಮಿಯಂ ತಾಳ್ದಿದವೋಲ್ ॥೩೫॥

ನನೆಗಣೆಯಧಿದೇವತೆಯಂ ।
ಬಿನೆಗಂ ಸಾರ್ತಂದು ಕೃತಕ ಶೋಕರಸಾಲಂ ॥
ಬೆನಿ ನೆಯ್ದಿಲೆಸಳೊಳಮರ್ದಿನ ।
ಪನಿ ಬಂದಪುದೆನಿಸಿ ಕಣ್ಣನೀರಂ ತಂದಳ್ ॥೩೬॥

ಆ ರಮಣಿ ಕೃತಕಶೋಕಾ ।
ಸಾರದ ಪೊನಲೊಳಗೆ ಬೆಂಡು ನೆಗೆದಿರ್ದುಮದೇಂ ॥
ರಾರಾಜಿಸಲಾರ್ತಳೊ ತಿಳಿ ।
ನೀರೊಳಗಣ ಚಂದ್ರಕಳೆಯ ನೆಟಿಲೆಂಬಿನೆಗಂ ॥೩೭॥

ಅಂತು ಶೋಕಿಸುವಳಂ ಕಂಡು,

ತನಗೆ ಕರುಣಾರಸಂ ಸಂ ।
ಜನಿಯಿಸೆ ಸಾರಣ್ಗೆ ಕರೆದು ಕುಳ್ಳಿರಿಸಿ ಲತಾ- ॥
ತನು ಕಣ್ಬನಿಯಂ ತೊಡೆದ ।
ಳ್ಜನಕಾತ್ಮಜೆ ಕನ್ನೆ ಕಪಟಿಯೆಂದೆತ್ತಱಿವಳ್ ॥೩೮॥

ಆಗಳಾ ಕನ್ನೆಯಂ ಕರುಣಾರಸಪ್ರಸನ್ನದೃಷ್ಟಿಯಿಂ ರಾಘವಂ ನೋಡಿ,

ಬಿಸಿಲುಂ ಬೆಳ್ದಿಂಗಳುಂ ಗಾಳಿಯುಮೊಳಪುಗದತ್ಯುಗ್ರಸತ್ವಂಗಳಿಂದ-
ರ್ವಿಸುವೀ ದುರ್ವಾರಕಾಂತಾರಮನಬಲೆಯೆ ನಿಶ್ಯಂಕೆಯಿಂದೆಂತು ಪೊಕ್ಕೌ
ಬಿಸವಂದಂ ಕನ್ನೆ ನಿನ್ನಂದಮನೆನಗಱಿಪೆಂದಾಜಿರಂಗ ಪ್ರಚಂಡಂ
ಬೆಸಗೊಂಡಂ ಬೀಱಿ ದಂತದ್ಯುತಿ ಶರದದ ಬೆಳ್ದಿಂಗಳಂ ರಾಮಚಂದ್ರಂ ॥೩೯॥

ಅಂತು ಬೆಸಗೊಳ್ವುದುಂ ಮುಕುಳೀಕೃತಾಂಜಳಿಪುಟೆ ಕೃತಕಿ ಕೃತಾಂತನೆನ್ನ ಪಿತೃಮಾತೆಗಳನೊರ್ಮೊದಲೆ ಮುಱಿದುಯ್ಯೆ ನಿಸ್ಸಹಾಯವೃತ್ತಿಯಿಂ ನಿತ್ತರಿಸಲಾಱದಾನುಮೆನ್ನಂ

ಪರಿಚ್ಛೇದಿಸಿ ಪಱುವಂ ಪೊಕ್ಕು ಸಾವೆನೆಂದು ಬರುತ್ತುಂ ನಿಮ್ಮನೆನ್ನ ಪುಣ್ಯೋದಯದಿಃ ಕಂಡೆನಿರ್ವಲೊಳೊರ್ವರೆನ್ನಂ ಗಂಧರ್ವವಿವಾಹವಿಧಿಯಿಂ ಕೈಕೊಳ್ವುದೆನೆ ಜನಕಜ ರಾಮಲಕ್ಷ್ಮಣನ ಮೊಗಮಂ ನೋಡಿ ಮುಗುಳ್ನಗೆ ನಗುವುದುಮದರ್ಕೆ ಸಿಗ್ಗಾಗಿ,

ಮಗನಱಿದಱಿಲಂ ಪಾತಕಿ ।
ಬಗೆಯದೆ ಪರಪುರುಷಸೇವೆಗೞಿಪುವ ಬಗೆಯಂ ॥
ಬಗೆದಾ ಬಗೆ ಕೂಡದೊಡು ।
ಬ್ಬೆಗಮಿರ್ಮಡಿಸಿತ್ತು ಖಚರವಧುಗಾಕ್ಷಣದೊಳ್ ॥೪೦॥

ಅಂತು ಮನದೊಳುಮ್ಮಳಿಸಿ

ಅವಳಿವರ್ಗೆ ತಕ್ಕುದಂ ಮಾ ।
ಡುವೆನೆಂದಾಗ್ರಹದಿನವರ ಕಣ್ಪೊಲನಂ ದಾಂ- ॥
ಟುವಿನಂ ನಡೆದು ತಟಲ್ಲತೆ ।
ಯವೊಲಾಕಾಶಕ್ಕೆ ನೆಗೆದು ಪಾಱಿದಳಾಗಳ್ ॥೪೧॥

ಅಂತು ಮನೋವೇಗದಿಂ ಪೋಗಿ ಪೊೞಲುಮನರಮನೆಯುಮಂ ಪೊಕ್ಕು,

ಪರೆದ ಕಚಮುಂ ಕಣ್ಣಂ ಕೈಗಣ್ಮುವಶ್ರುಜಲಂಗಳುಂ
ಬೆರಸು ಬಸಿಱಿಂ ತಿಣ್ಣಂ ಮೋದುತ್ತುಮಾತ್ಮಜ ಶೋಕದಿಂ
ಖರನ ಚರಣೋಪಾಂತಕ್ಷೋಣೀಪ್ರದೇಶದೊಳಾ ತನೂ-
ದರಿ ತನುವನಂದೊಕ್ಕಳ ಹಾಹಾರವಂ ನೆಗಳ್ವಿನ್ನೆಗಂ ॥೪೨॥

ಅಂತು ಶೋಕವಿಕಳೆಯಾದ ಚಂದ್ರನಖಿಯಂ ಕಂಡು ಖರನಿದೇನೆಂದು ಬೆಸಗೊಳ್ವುದುಂ,

ಬಗೆಗಿಂದುಮ್ಮಳಮಾಗೆ ತಲ್ಲಣಿಸಿ ಬಾಳಂ ಸಾಧಿಸುತ್ತಿರ್ದ ಪೆ-
ರ್ಮಗನಂ ನೋಡುವೆನೆಂದು ಪೋಗಿ ತಲೆ ಬೇಱಾಗಟ್ಟೆ ಬೇಱಾಗೆ ಧಾ-
ತ್ರಿಗೆ ಬಿೞ್ದಿರ್ದೊರ್ದೆ ಕಂಡು ಭೋಂಕನೆರ್ದೆ ಬಾಳಂ ಬೀಸಿದಂತಾಗೆ ಮೂ-
ರ್ಛೆಗೆ ಸಂದೆಂ ಸುಡೆ ಸುತ್ತಿ ಶೋಕದಹನಜ್ವಾಳಾಸಹಸ್ರಂಗಳಿಂ ॥೪೩॥

ಅಂತು ಮೂರ್ಛೆವೋಗಿ ಕಿಱಿದಾನಂ ಬೇಗದಿಂ.

ಚೇತರಿಸಿ ತನಯನಂ ಕೊಂ ।
ದಾತನ ಬೞಿವಿಡಿದು ಪೋಗಿ ಬಾಳಂ ಕೊಳಲೆಂ- ॥
ದಾತನ ಮೇಲ್ವಾಯ್ದೊಡೆ ಪಡೆ ।
ಮಾತೇಂ ಪರಿಭವಿಸಿ ಕಳೆದನುದ್ಧತನೆನ್ನಂ ॥೪೪॥

ನಿನಗೆ ಸತಿಯಾಗಿಯುಂ ತ್ರಿಭು ।
ವನದೊಡೆಯ ದಶಾಸ್ಯನೊಡನೆ ಪುಟ್ಟಿಯುಮಾದ- ॥
ತ್ತೆನಗೆ ಪರಿಭವಮೆನಲ್ಕುಂ ।
ನ್ನಿನ ಜನ್ಮದ ಕರ್ಮಬಂಧಮಂ ಕಱಿವ ವರಾರ್ ॥೪೫॥

ಕವಚಂದೊಟ್ಟು ಶರಾಸನಂಬಿಡಿದು ತೂಣೀರಂಗಳಂ ತಾಳ್ದಿ ಮಾ-
ಱುವರಾರೆಮ್ಮುಮನೆಂಬ ದೋರ್ವಳದಗುರ್ವಿಂದಿರ್ಪರಾನಂದದಿಂ
ದ ಪರಿರ್ವಮನುಜರ್ತನೂಭವನುಮಂ ಕೊಂದೆನ್ನನಾದಂ ಪರಾ-
ಭವಮಂ ಪೊರ್ದಿಸಿ ನಿರ್ದಯರ್ಬಗೆಯದಿರ್ದರ್ದಂಡಕಾರಣ್ಯದೊಳ್ ॥೪೬॥

ಎನಲೊಡಂ ಶ್ರವಣವಿವರದೊಳ್ತಪ್ತಾಯಸ ರಸ ಮಂ ಪೊಯ್ದಂತೆ ದಾರಕವಿದಾರಣಮುಂ ದಾರಪರಾಭವಮುಂ ತಸಗಲಱ ನದ ವಱಲನೊದವಿಸೆ,

ಬೀಜದಿನೊಗೆವ ವಿಷಾಂಕುರ ।
ದೋಜೆಯೆನಲ್ಪರನ ಶೋಕಬೀಜದಿನೊಗೆದು- ॥
ತ್ತೇಜಿಸಿದುದು ಕೋಪಾಗ್ನಿಶಿ ।
ಖಾಜಾಳಂ ಕೆದಱಿ ಕಿಡಿಯುಮಂ ಕೆಂಡಮುಮಂ ॥೪೭॥

ಇವೆ ಕೋಪಾನಳಧೂಮಲೇಖೆ ಪುರ್ವುರ್ವೆಟ್ಟು ಜರ್ವಲ್ತಗು-
ಳ್ದುವು ಕಣ್ಗಳ್ಪೊಱ ಪಾಯ್ದು ಕೋಪಶಿಖಿ ಪೊಣ್ಮೆ ತ್ತೆಂಬಿನಂ ಕೆಂಕನಾ-
ದುವು ಕೋಪಾನಳತಾಪದಿಂ ರಣರಸಂ ದಳ್ಳೆಂದು ಕಾಯ್ದುಕ್ಕುವೆ-
ಣ್ಣೆವೊಲಾಗಳ್ ಬೆಮರ್ಗಳ್ಕಪೋತತಳದೊಳ್ತಳ್ಪೊಯ್ದುವಾ ದೈತ್ಯನಾ ॥೪೮॥

ಅಂತು ರೋಷಗ್ರಗಾಹವೇಶಮನಪ್ಪುಕೆಯ್ದು,

ತಡೆವುದು ಪಾಟಿಯೆ ಸುತನಂ ।
ಮಡಿಸಿದನಂ ಸತಿಗೆ ಭಂಗಮಂ ಮಾಡಿದನಂ ॥
ಕಡಿಕೆಯ್ದು ಕಾದಿ ರಣದೊ ।
ಳ್ಪಿಡತಲೆಯಂ ಮೆಟ್ಟಿ ಕಿಟ್ಟುಕೊಳ್ವೆಂ ತಲೆಯಂ ॥೪೯॥

ಅನಿಮಿಷರುಂ ದಾನವರುಂ ।
ಮೊನೆಗನಗಿದಿರಲ್ಲರೆಂದೊಡಿದಿರಾಂಪವರೇ ॥
ಮನುಜರವಂದಿರನಾನೊ ।
ರ್ವನೆ ದೆಸೆವಲಿಗೆಯ್ವೆನೆಂದು ಬಿಡೆ ಗರ್ಜಿಸಿದಂ ॥೫೦॥

ಅಂತು ಗರ್ಜಿಸಿ ಕರವಾಳ್ಗೆ ಕೈಯನೀಡುವುದುಂ ಮಂತ್ರಿಮಂಡಳಮದಂ ಮಾರ್ಕೊಂಡು,

ಸಾಧಾರಣರಲ್ಲರ್ವಿದ್ಯಾಧರವಲ್ಲಭ
ವಿಚಾರಿಸವರುನ್ನತಿಯಂ ॥
ಸಾಧಿಸದೆ ಸೂರ್ಯಹಾಸಂ ।
ಸಾಧನೆವೋಯ್ತೆಂದೊಡೇನವರ್ಮಾನವರೇ ॥೫೧॥

ಅದಱಿನವರನೇಳಿಸದೆ ಸಕಳಸಾಮಂತರಂ ಬರಿಸಿ ಸಮರಸನ್ನದ್ಧನಾಗಿ ನಡೆವುದೆ ನಯಮದೆಂತೆನೆ, ಸಕಳಚಕ್ರವರ್ತಿಗಳುಂ ಮನುಷ್ಯರಾಗಿಯುಮೇಕಾಂಗದೊಳಜೇಯರೆಂಬುದು ಸರ್ವಜನಪ್ರಸಿದ್ಧಮೆಂದು ಬಿನ್ನವಿಸೆ ಮನದೆಗೊಂಡಾ ಸ್ವರೂಪಮಂ ದಶ ಕಂಧರಂಗೆ ಬಿನ್ನಪಂಗೆಯ್ದಟ್ಟಿ ಸಮಸ್ತ ಸಾಮಗ್ರಿಸಹಿತನಾಗಿ,

ಕನಕಾಚಳಚೂಳಿಕೆಯಿಂ ।
ಕನಲ್ದು ಗರ್ಜಿಸುತುಮೆಟ್ದಿ ಸಿಂಹದವೋಲ್ಕಾಂ- ॥
ಚನಪೀಠದಿಂ ಖರಂ ಕಂ ।
ಗನೆ ಕನಲ್ದು ತ್ತಂಸಕಿರಣಕೇಸರನೆಟ್ದಿಂ ॥೫೨॥

ಪದಿನಾಲ್ಸಾಸಿರ ನಾಯಕ ।
ರುಪಂಶುಮಣಿಮಕುಟಕಿರಣಮೊಡನಂಬರಮಂ ॥
ಪುದಿವಿನಮೊಡನೆಟ್ದಿರ್ ಬಿಂ ।
ಜದಡವಿಯಂ ಬೇಗೆ ಬಳಸಿದತ್ತೆಂಬಿನೆಗಂ ॥೫೩॥

ಅಂತನಂತ ಖಚರ ಸಾಮಂತಸೇನೆವೆರಸು ಖರದೂಷಣರ್ಗಾಳಿಗಿದಿರಂ ನಡೆವ ಮುಗಿಲೊಡ್ಡಿನಂತೆ ಗಗನವೀಥಿವಿಡಿದು ನಡೆದು ರಾಮಲಕ್ಷ್ಮಣರನಱಿಸಿ ಬರ್ಪ ಸಮಯದೊಳ್ಸಮುದ್ರಘೋಷಮನಜನಿಸುವ ಪಟುಪಟಹ ಶಂಖಕಹಳಾರವಮಂ ಭೋಂಕನೆ ಕೇಳ್ದಿದೇನೆಂದು ಸೀತೆ ಬೆರ್ಚಿ ಬಾರಿಸಿ,

ದೊರೆಕೊಂಡ ಬಾಳ ಕೂರ್ಪಂ ।
ಪರಿಕಿಸಲೆಂದಿಱಿಯೆ ಲಕ್ಷ್ಮಣಂ ವಂಶವನಾಂ- ॥
ತರಿತನೆನಿಸಿರ್ದ ಸತ್ತನ ।
ಪರಿಗ್ರಹಂ ಕಾಳೆಗಕ್ಕೆ ಬಂದಪುದಕ್ಕುಂ ॥೫೪॥

ಎಂದು ಮನದೊಳವಧಾರಿಸಿ,

ಗಗನಚರಪ್ರಚಂಡಬಳಮೆತ್ತಿ ಬರುತ್ತಿರೆ ಕಾಳೆಗಕ್ಕದಂ
ಬಗೆವನೆ ಜಾನಕೀಮುಖಸರೋರುಹದೊಳ್ನೆಲಸಿರ್ದ ದೃಷ್ಟಿಯಂ
ತೆಗೆವನೆ ಕಾಳದಂಡಮುಮನೇಳಿಪ ತನ್ನ ಶರಾಸನಕ್ಕೆ ಮೆ-
ಲ್ಲನೆ ಕರಶಾಖೆಯಂ ರಘುತನುಭವನುಯ್ದನಿದೇನುದಾತ್ತನೋ ॥೫೫॥

ಅಂತು ದಾಶರಥಿ ಶರಾಸನಕ್ಕೆ ಕೆಯ್ಯುನುಯ್ಯಲ್ ಲಕ್ಷ್ಮಣನಿಂತೆಂದು :

ದೇವಂ ಬಿಲ್ವಿಡಿವಂತೆ ಬಲ್ವಡೆಯೆ ವಜ್ರಾವರ್ತ ಚಾಪಕ್ಕೆ ಮೇ-
ಣ್ದೇವೇಂದ್ರಂ ಧರಣೇಂದ್ರನಲ್ಲದುೞಿದರ್ಬಿಲ್ಲೊಯ್ದು ನಿಲ್ವನ್ನರಾ-
ರ್ದೇವರ್ಕಾವೊಡಮೆನ್ನ ಕೂರ್ಗಣೆಗಳಿಂ ಮೆಯ್ವೆರ್ಚಿ ಮೇಲೆತ್ತಿ ಬಂ-
ದೀ ವಿದ್ಯಾಧರಸೈನ್ಯಮಂ ನಿಮಿಷದಿಂ ಪರ್ದಿಂಗೆ ಬಿರ್ದಿಕ್ಕುವೆಂ ॥೫೬॥

ಎಂದು ಬೆಸನಂಬಡೆದು ಮದೀಯಮಾತೆಯಂ ಸೀತಾದೇವಿಯನಪಾಯ ಬಹುಳಮಪ್ಪ ಗಹನದೊಳಗಲದಿರ್ಪುದೆತ್ತಾನು ಮೆನಗೆ ಧುರಂ ದುರ್ಧರಮಾಗೆ ಸಿಂಹನಾದಂ ಗೆಯ್ಯೆ ಬರ್ಪುದೆಂದು ವಿನಯವಚನಮಂ ನುಡಿದು ವಿನಯವಿನಮಿತನಗ್ರಜನಂ ಬೀೞ್ಕೊಂಡು,

ಕವಚಮನಾಳಿಸಿ ಪೆಗಲೊ ।
ಳ್ತವಮೊಣೆಯಂ ಬಿಗಿದು ಬಿಲ್ಲನೇಱಿಸಿ ಟಂಕಾ ॥
ರವಗುರ್ವುವಡೆಯೆ ಜೇವೊಡೆ ।
ದು ವಿಯಚ್ಚರಸೇನೆಗದಿರದಿದಿರಂ ನಡೆದಂ ॥೫೭॥

ಪೊಕ್ಕಿಸೆ ಮಾರ್ಗಣೆಯಿಂ ಮಱು ।
ವಕ್ಕದ ನಾಯಕರನಾಜಿಯೊಳ್ಕಂಡಿನಿಸುಂ ॥
ತಕ್ಕೞಿದನೆ ಬಗೆಯೊಳ್ಬ ।
ಳ್ವಕ್ಕಿಯ ಪಿಂಡಿಂಗವಂದಿರಂ ಸರಿಗಂಡಂ ॥೫೮॥

ಉರ್ವರೆಯೊಳಿರ್ದಖಂಡಿತ ।
ದೋರ್ವಳನಂಬಿಕ್ಕೆ ನಭದೊಳಿರ್ದನಿಬರುಮೋ- ॥
ರೊರ್ವರುಮಿಸೆ ಮಂಜಿನ ಮೞಿ ।
ಪರ್ವತಮುಂ ಪರ್ವಿದಂತೆ ಕವಿದುವು ಕಣೆಗಳ್ ॥೫೯॥

ಗಗನಮೆಡೆ ನೆಱಿಯದಂತಿರ ।
ಗಗನೇಚರಸೈನ್ಯಮಿಸುವ ಪೊಸಮಸೆಯ ಸರ- ॥
ಲ್ನಗಧರನ ಮೇಲೆ ಪಾಯ್ದುವು ।
ಸೆಗಟ್ವಿಗ್ನಿಮುಖಕ್ಕೆ ಪಾಯ್ವ ಶಲಭಂಗಳವೋಲ್ ॥೬೦॥

ಎಡೆಯುಡುಗದೆ ಖಚರರ ಬಿ ।
ಲ್ವಿಡೆ ಕಡುಕೆಯ್ದಿಸುವ ಕಣೆಗಳರ್ಕನ ತೇಜಂ ॥
ಕಿಡೆ ಹರಿಯ ಮೇಲೆ ಸುರಿದುವು ।
ಬಡಬಾಗ್ನಿಯ ಮೇಲೆ ಸುರಿವ ಸರಿವೞಿಗಳವೋಲ್ ॥೬೧॥

ತಱಿದೊಟ್ಟಿ ಸೂರ್ಯಹಾಸದೆ ।
ಮಱುವಕ್ಕದ ಪುದಿದು ಪೆಣೆದ ಶರಪಂಜರದಿಂ॥
ಪೊಱಮಟ್ಟು ಬಿದಿರಪೊದಱಿಂ ।
ಪೊಱಮಟ್ಟ ಮೃಗೇಂದ್ರನಂತಿರಿರ್ದನುಪೇಂದ್ರಂ ॥೬೨॥

ಅಂತು ಪೊಱಮಟ್ಟು ಪರಿವೇಷಂಗೊಂಡ ಚಂಡಕಿರಣನಂತೆ ಕುಂಡಳಿತ ಕೋದಂಡನಾಗಿ,

ತೋಡುಂ ಬೀಡುಂ ಕಾಣ್ಬುದು ।
ನಾಡೆಯುಮರಿದೆನಿಸಿ ಕೃಷ್ಣನಾರ್ದಿಸೆ ದೆಸೆಗೆ- ॥
ಟ್ಟೋಡಿದುದಲ್ಲಾಡಿದುದ ।
ಳ್ಳಾಡಿದುದೊರ್ಮೊದಲೆ ಖರನ ಬಲಮೆನಿತನಿತುಂ ॥೬೩॥

ಪತ್ತಿ ಜವನಂತೆ ರಿಪುಬಲ ।
ಪತ್ತಿಯನಿಸೆ ಲಕ್ಷ್ಮಣಂ ವಿಯಚ್ಚರಸೈನ್ಯಂ ॥
ಸತ್ತುದು ಪುಣ್ಬೆತ್ತುದು ಬೆ ।
ನ್ನಿತ್ತುದು ಪೂಣ್ದಱಿವುದರಿದು ಗರುಡಧ್ವಜದೊಳ್ ॥೬೪॥

ಇವೆ ದೃಷ್ಟಿವಿಷಾಹಿಗಳೀ ।
ಕವಿತರ್ಪುವೆ ಜವನ ಬೆಸದಿನೆನೆ ನಿಮಿಷಕ್ಕೇಂ ॥
ತವೆ ಪೀರ್ದುವೊ ಖಚರಪ್ರಾ ।
ಣವಾಯುಮಂ ಕೃಷ್ಣನೆಚ್ಚ ನಾರಾಚಂಗಳ್ ॥೬೫॥

ಇರ್ಮೆಯ್ಯಾಗ್ಗಣ್ಬೆನಮಾಂತರ ।
ನೊರ್ಮೊದಲೊಳೆ ಗಣೆಗಳುರ್ಚಿ ಪೆಣನಂ ಬಿತ್ತಲ್ ॥
ಕಾರ್ಮುಂಚಿದನಂತೆ ನೆತ್ತರ ।
ಪೆರ್ಮೞಿ ಕಱಿದತ್ತು ಪೇಂದ್ರನಿಸೆ ಧುರಧರೆಯೊಳ್ ॥೬೬॥

ಆವೆಡೆಯುಂ ನಟ್ಟುವು ಬಾ ।
ಣಾವಳಿ ನಟ್ಟೆಡೆಯೆ ತಮಗೆ ನೆಱನೆನೆ ಕೆಡೆದರ್ ॥
ಭೂವಯಕ್ಕೆ ವಿಯಚ್ಚರ ।
ರಾವುದೊ ಲಕ್ಷ್ಮಣನ ಕಣೆಗೆ ಮಣಿಯದ ಸೈನ್ಯಂ ॥೬೭॥

ಆರೇಸಾಡಿದರಾವ ದಿಙ್ಮುಖದಿನೀ ಕೂರಂಬುಗಳ್ಬಂದುವೆಂ-
ದಾರುಂ ಕಾಣ್ಬವರಿಲ್ಲ ನಟ್ಟುದನೆ ಕಾಣ್ಬರ್ಮಾಯದಂಬಲ್ಲದಂ-

ದಾರಾನುಂ ಪೊಱಗಾಗರೇ ಕಣೆಯ ಕೋೞ್ಗಂಬಂತು ತನ್ನಂಬು ಸಂ-
ಹಾರಂ ಮಾಡೆ ವಿಪಕ್ಷ ಸೈನಿಕಮನಂಭೋಜಾಕ್ಷನೇಸಾಡಿದಂ ||೭೮||

ಮೊನೆಯಂಬಲ್ಲವು ನಂಡಿನಂಬುಗಳೆನಲ್ತೂಱಂಬು ಮಾಱಾಂತರಂ
ಮನದಿಂ ಬೇಗದಿನುರ್ಚೆ ಬೋಗೆ ಪೆಣನಂ ಸಾಲಿಟ್ಟವೋಲಾಗೆ ಮೇ-
ದಿನಿಯೊಳ್ಖೇಚರಸೇನೆ ಬೀೞೆ ಬಯಲಾದತ್ತಾಗಸಂ ಕೃಷ್ಣನಂ-
ಬಿನ ಕೃಷ್ಣಾಹಿಯ ಕೋೞ್ಗೆ ಬೆರ್ಚದಿದಿರೊಳ್ಮೈಸಾರ್ಚೆ ಬಾೞ್ವನ್ನರಾರ್ ||೭೯||

ಸಿಡಿಲ ಕಡುಗಾಯ್ಪು ಸಿಂಹದ ।
ಪೊಡರ್ಪು ಭೈರವನ ಬಲ್ಪು ಮಾರಿಯ ಮಸಕಂ ॥
ಕಡೆಗಾಲದ ಜವನೆಟ್ಟಿರ ।
ಮೊಡರಿಸೆ ಲಕ್ಷ್ಮಣನಡುರ್ತು ಕಾಮುತ್ತಿರ್ದಂ ||೮೦||

ಅನ್ನೆಗಮಿತ್ತ ರಾವಣಂ ಖರದೂಷಣರಟ್ಟಿದ ಸುದ್ದಿಯಂ ಕೇಳ್ದು ಶಂಬುಕನ ಸಾವಂಗಳಿಲ್ದು ಕಡು ಮುಳಿದು,

ಬೆದಱಿಸಿದತ್ತು ಕಾರಿರುಳನುರ್ವಿದ ಪುರ್ವಿನ ಗಂಟಿನೊಳ್ಕಱಿಂ-
ಗಿದ ಮೊಗಮಂಜಿಸಿತ್ತು ಕಿಸುಸಂಜೆಯನಾಸುರಮಾಗೆ ಕೆಂಪುವೇ-
ಱಿದ ಬಿಡುಗಣ್ಣ ಬಣ್ಣಮಱೆಯಟ್ಟಿದುದಳ್ಕಱಿ ಕಣ್ಣೊಳುಳ್ಕುವು-
ಳ್ಕಿದ ತೆಱಿನಂ ಸಕಂಪಮಧರಂ ದಶಕಂಧರಚಕ್ರವರ್ತಿಯಾ ||೮೧||

ಇಂತು ಸಂವರ್ತಸಮಯದ ಸಮುದ್ರದಂತೆ ಕದಡಿ,

ನಿಯಮದಿನಿರ್ದನಂ ನಿರಪರಾಧನನನ್ನೆಯದಿಂದಮೆನ್ನ ತಂ-
ಗೆಯ ಮಗನಂ ವಿದಾರಿಸಿದನಂ ತಱಿದಾತನ ಮೆಯ್ಯ ರಕ್ತವಾ-
ರಿಯನೆಱೆದಾಱಿಪೆಂ ಖರನ ಶೋಕಕೃಶಾನುವನೆಂದು ಕಾಯ್ದುದು-
ರ್ಜಯನಸುರಾಧಿಪಂ ಜಡಿದನಾಸುರಮಂ ನಿಜಚಂದ್ರಹಾಸಮಂ ||೮೨||

ಅಂತು ಜಡಿದು,

ಒದವಿದ ಕೋಪವಹ್ನಿಯುರಿಯುಂ ಪೊಗೆಯುಂ ನೆಗೆವಂತೆ ಪದ್ಮರಾ-
ಗದ ಹರಿನೀಳದುನ್ಮುಖವಿಭೂಷಣರಶ್ಮಿ ಪಗಂಡುಗೊಳ್ಪಿನಂ
ಕದನಮದೋದ್ಧತಂ ಖಚರನಾಯಕರಂ ಬರವೇೞ್ದು ಸಿಂಹಪೀ-
ಠದಿನರದೆೞ್ದಸಸ್ತಮಿತಪುಣ್ಯದಶಾನನನಾ ದಶಾನನಂ ||೮೩||

ಅಂತು ಸಿಂಹಾಸನದಿನೆೞ್ದು,

ಸೆಡೆಯೆ ಹಿಮಪ್ರಭಂ ನಿಜಯಶಃಪ್ರಭೆಯಿಂದಿನನಂಶುಮಾಲೆ ಕೀ-
ಳ್ಪಡೆ ಬಲಗೈಯ ಬಾಳಪೊಳೆಪಿಂ ಕಡುಗಟ್ಟಿಲೆ ದೇಹದೀಪ್ತಿಯಿಂ-
ದೊಡರಿಸೆ ರಾಹು ತನ್ನ ಹರಿನೀಳವಿಮಾನಮನೇಱುವಂತಿರಾ-
ಗಡೆ ಕಡುಕೈದು ಪುಷ್ಪಕವಿಮಾನಮನೇಱಿದನಿಂದ್ರವಿದ್ವಿಷಂ ॥೭೪॥

ಅನಂತರಂ,

ಪ್ರತಿಕೂಲಾನಿಳನಿಂ ಪತಾಕೆ ಮಗುಟ್ಟಿಂಬಂತಾಗೆ ಕೈಸನ್ನೆಯಿಂ
ಶ್ರುತಿಯಂ ಸಾರ್ತರೆ ಪೋಪುದಲ್ಲ ನಯಮೆಂಬಂತಾಗೆ ಘಂಟಾ ಟಣ-
ತ್ಕೃತಿ ಸಾರ್ತಂದುದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘಸಂ-
ಹತಿಯಿದಲ್ಲುಗೆ ಮುತ್ತು ಪುಷ್ಪಕವಿಮಾನಂ ದಂಡಕಾರಣ್ಯಮಂ ॥೭೫॥

ಆ ಸಮಯದೊಳ್ದಶಾಸ್ಯನೊಂದು ತಣ್ಬುೞಿಲ ತಾಳದೊಳ್ಬಱಿಸಿಲ್ಪಿಡಿವಿಡಿದು ಪೊಳೆವ ಕುಡಮಿಂಚಿನಂತೆ ಬಲಭದ್ರನ ಕೆಲದೊಳಿರ್ದ ಸೀತೆಯಂ ಕಂಡು,

ಬಲೆ ದೃಷ್ಟಿಗೆ ವಜ್ರದ ಸಂ ।
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕ- ॥
ಣ್ಬೊಲದೊಳಗೆ ಪದ್ಮಪತ್ರದ ।
ಜಲಬಿಂದುವಿನಂತೆ ಚಕಿತಮಾದುದು ಚಿತ್ತಂ ॥೭೬॥

ಎನಗಾಳೋಕನಮಾತ್ರದಿ ।
ನನುರಾಗಮನಿತ್ತು ತಮ್ಮ ನೀಳಚ್ಛವಿಯಿಂ ॥
ಮನಮಂ ಋಜುಮಾಡಿದುವೀ
ವನಿತೆಯ ಕೊಂಕಿದ ಕುರುಳ್ಗಳಿದು ಬಿಸವಂದಂ ॥೭೭॥

ಮೃಗಲೋಚನಂಗಳಿರ್ದುವು ।
ಮೃಗಮೆಲ್ಲಿರ್ದಪುದು ವಟಫಳಂ ವಟಮೆಲ್ಲೀ ॥
ಪಗಲೆಸೆವುದಿಂದುವೆತ್ತಣಿ ।
ನೊಗೆದುದೊ ಪೇೞಿಂದು ನೋಡಿದಂ ನಗೆಮೊಗಮಂ ॥೭೮॥

ತಳತಳಿಸಿ ಪೊಳೆಯೆ ಸೀತೆಯ ।
ಚಳನಯನಂ ಖಚರಚಕ್ರವರ್ತಿಯ ಚಿತ್ತಂ ॥
ಪೊಳದೊಳಗೆಳವಾಳೆ ತೆಱಿಂ ।
ಬೊಳದಂತೆ ಕೊಂಕಿ ಕದಡಿದತ್ತಾಕ್ಷಣದೊಳ್ ॥೭೯॥

ಸಿರಿಸದ ಬಾಸಿಗದೊಳ್ನಲಿ ।
ವರಿದಾಡುವ ತುಂಬಿಯಂತೆ ಪಾಣ್ಬಣ ಕಣ್ಗ- ॥
ಳ್ವರಿಮಱಿಯಾಡಿದುವು ತನೂ ।
ದರಿಯತನು ವ ಪಾಶಮೆನಿಪ ದೋರ್ವಲ್ಲರಿಯೊಳ್ ॥೮೦॥

ಸುೞಿಗೊಂಡ ನಾಭಿಕೂಪದ ।
ಸುೞಿಯಿಂ ಪೊಱಮಡದೆ ಸುೞಿವ ನಯನಂಗಳ ಬೆಂ- ॥
ಪೞಿವಿಡಿದು ಪರಿದು ಸುೞಿದುದು ।
ಸುೞಿಯೊಳಗಣ ಪಱುಗೋಲಂತೆ ಪಾತಕನ ಮನಂ ॥೮೧॥

ಹಾರಮರೀಚಿಮಂಜರಿ ಸುಧಾರಸಧಾರೆ ಸುಧಾಂಶು ಲೇಖೆ ಕ-
ರ್ಪೂರಶಲಾಕೆ ನೇತ್ರಸುಖದಾಯಕಮೀ ದೊರೆತಲ್ಲವೀಕೆ ಶೃಂ-
ಗಾರಸಮುದ್ರಮಂ ಕಡೆಯೆ ಪೃದ್ಭವಸುದ್ಭವೆಯಾದಳೆಂದು ಕ-
ಣ್ಣಾರೆ ದಶಾಸ್ಯನೀಕ್ಷಿಸಿದನೀಕ್ಷಿಸಿ ಕಣ್ಣಱಿದಾರೆ ಮನ್ಮಥಂ ॥೮೨॥

ಪಲರುಂ ವಿದ್ಯಾಧರ ಸ್ತ್ರೀಯರುಮಮರಿಯರುಂ ಮಾನವಸ್ತ್ರೀಯರುಂತಂ ತ-
ಮ್ಮೊಲವಿಂ ಮೇಲ್ವಾಯ್ದೊಡಂ ಮುಂಬಗೆಯದ ಸುಬಗೇನಾದುದೆಂದುದ್ಧತಂ ಮೂ-
ದಲಿಸುತ್ತುಂ ರೂಪಿನೊಳ್ಮಚ್ಚರಿಸುವನೆನಗೆಂದಂಬನಂಬಟ್ಟುವನ್ನಂ
ಪಲಗಾಲಕ್ಕೇಸುವೆತ್ತಂ ದಶಮುಖನೆನುತುಂ ಮನ್ಮಥಂ ಮಾಣದೆಚ್ಚಂ ॥೮೩॥

ಸ್ವಾಂತಂ ಪಂಚೇಷುವಿಂ ಜಂತಗೆವುಗಿಲವೊಲಪ್ಪಂತು ಕಂದರ್ಪನೆಚ್ಚೆ-
ಚ್ಚೆಂತುಂ ಕೈವಾಱಿದಟ್ಟಾಸುರಮೆನೆ ಮುಳಿದೆಚ್ಚಿಟ್ಟ ಕೋದಂಡದಿಂ ಪಾ-
ಯ್ದೆಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ
ಕಾಂತಾರತ್ನಕ್ಕೆ ವೈದೇಹಿಗೆ ಮಕುಟತಟದ್ರತ್ನದಿಂದರ್ಘ್ಯಮಿತ್ತಂ ॥೮೪॥

ನಡೆ ನಡುಗೋಲ್ವರಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ
ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇ-
ರ್ಪಡುಗಿಡೆ ಸತ್ಯಶೌಚಗುಣಸಂಪದವೇಳಿದನಾದನೆನ್ನರುಂ
ಕಿಡಿ ಮಸಿಯಾದವೋಲ್ವಿಷಯಲೋಭದಿನೇಳಿದರಾಗದಿರ್ಪರೇ ॥೮೫॥

ವಿಹಿತಾಚಾರಮನಸ್ವಯಾಗತಗುಣಪ್ರಖ್ಯಾತಿಯಂ ದುಷ್ಟನಿ-
ಗ್ರಹಶಿಷ್ಟಪ್ರತಿಪಾಳನ ಕ್ಷಮತೆಯಂ ಕೈಗಾಯದನ್ಯಾಂಗನಾ-
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ-
ವಹಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ ॥೮೬॥

ಅಂತು ಮನವೆಳದುವರಿಯೆ,

ಮದಕರಿಯ ದಾನಲೇಖೆಗೆ ।
ಪದೆವ ಮಧುವ್ರತದ ಮಾಟ್ಕೆಯಿಂ ದಶವದನಂ ॥
ಪದೆದಂ ರಘುವೀರನ ಪಾ ।
ರ್ಶ್ವದ ಸುದತಿಗೆ ವಿಷಯಿ ತನ್ನ ಕೇಡಂ ನೋಡಂ ॥೮೭॥

ಅವಿವೇಕಿ ದಶಮುಖಂ ದೃ ।
ಷ್ಟಿ ವಿಷಾಹಿಯ ಪಣೆಯ ಮಣಿಶಲಾಕೆಗೆ ಕೈನೀ- ॥
ಡುವ ಗಾಂಪನಂತೆ ರಘುವೀ ।
ರವಧೂ ಜನಕಜೆಗೆ ಮನದೊಳಟಿ'ಪಂ ತಂದಂ ॥೮೮॥

ಪರವಧುಗಾಸೆಗೆಯ್ವಧಿಕಪಾತಕಮೊಂದು ರಘುಪ್ರವೀರನೊ-
ಳ್ದುರದೊಳಿದಿರ್ಚದೋಸರಿಸಿ ವಂಚಿಸಿ ಸೀತೆಯನುಯ್ವ ಭೀತಿಯೊಂ-
ದೆರಡಜಿಕೊಳಂ ಜಸಂ ಮಸುಳೆ ತನ್ನವಳೋಕಿನಿಯಂ ದಶಾನನಂ
ಬರಿಸಿದನಾತ್ಮಸತ್ವಗುಣಹಾನಿಯೆ ಸೂಚಿಸದೆ ವಿನಾಶಮಂ ॥೮೯॥

ಅಂತು ನೆನೆಯಲೊಡಮವಳೋಕಿನೀ ವಿದ್ಯೆ ಮನದೊಡನೆ ಬಂದು ಬೆಸನಾವುದೆನೆ ದಶಮುಖನಿವರಾರ್ಗೆಂಬುದುಮಯೋಧ್ಯಾಸಿಂಹಾಸನಾಧಿಪತಿಯುಮಿಕ್ಷ್ವಾಕುವಂಶಭವನುಮಪ್ಪನರಣ್ಯತನೂಭವಂ ದಶರಥನರನಾಥಂ ತದಪತ್ಯರವರೀ ಕಾಲದ ಬಲದೇವ ವಾಸುದೇವರ್ದೇವತಾಧಿಷ್ಠಿತಂಗಳಪ್ಪ ವಜ್ರಾವರ್ತ ಚಾಪರತ್ನಂಗಳನಯತ್ನದಿಂ ಪಡೆದ ರಾಮಲಕ್ಷ್ಮಣರೆಂಬ ಮಹಾಬಳ ಪರಾಕ್ರಮರೀಕೆ ರಾಮನ ಮಹಾದೇವಿ ಮಿಥಿಳಾಪುರವರೇಶ್ವರನಪ್ಪ ಹರಿವಂಶದ ಜನಕತನೂಭವೆ ರಥ ನೂಪುರ ಚಕ್ರವಾಳಪುರಮನಾಳ್ವ ಚಂಡಬಳಪರಾಕ್ರಮನಪ್ಪ ಪ್ರಭಾಮಂಡಳನ ತಂಗೆ ಸೀತಾದೇವಿಯೆಂಬುದುಮಾಕೆಯನೀತನಿಂದ ಗಲ್ಚುವುಪಾಯಮಾವುದೆನೆ ದೇವತೆ ಚಕಿತಚಿತ್ತೆಯಾಗಿ,

ಆರಯ್ಯೆ ವಿರೋಧಂ ಸಾ ।
ಧಾರಣ ಪುರುಷರೊಳಮುಚಿತಮಲ್ತಧಿಕಬಲ- ॥
ರ್ಕಾರಣಪುರುಷರಿವರ್ನಿ ।
ಷ್ಕಾರಣಮಿವರೊಳ್ವಿರೋಧಮಂ ಮಾಡುವುದೇ ॥೯೦॥

ಕಾವ ಬೆಸಂ ನಿನ್ನದು ಸಕ ।
ಳಾವನಿಯೊಳಧರ್ಮನಿರತರಂ ನಿಯಮಿಸಿ ನೀ- ॥
ನೀ ವಿಷಯಕ್ಕೆಜಿಗುವುದಂ ।
ಕಾವರೆ ಕಣಗೊಂಡರೆಂಬ ನುಡಿಗೆಡೆಯಕ್ಕುಂ ॥೯೧॥

ಅನ್ನೆಯದಿಂ ನಡೆವವರಂ ।
ನೀಂ ನಿಯಮಿಸುವೈ ದಶಾಸ್ಯ ಪೆಱನಾವಂ ನಿ- ॥
ನ್ನನಂ ನಿಯಮಿಸುವಂ ಮುನ್ನೀ ।
ರ್ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ ॥೯೨॥

ಪದಿನಾಲ್ಸಾಸಿರ ಮುಖ್ಯನಾಯಕರಸಂಖ್ಯಾತಂ ಬಲಂ ಖೇದದಿಂ-
ದಿದಿರಾದರ್ಖರದೂಷಣರ್ಬಗೆದನಿಲ್ಲತ್ತಲ್ಭಂಗೆಯ್ದು ಕಾ-
ದಿದಪಂ ಲಕ್ಷ್ಮಣನಿತ್ತಲೀಕೆಯೊಡನೀತಂ ವೀತಶಂಕಂ ವಿನೋ-
ದದೊಳಿರ್ದಂ ರಘುವೀರ ನಿನ್ನವರೊಳಂ-ವಿದ್ವೇಷಣಂ ದೂಷಣಂ ॥೯೩॥

ಎಂದು ತೆಱಿಯೆ ನುಡಿಯೆ ಮುಳಿದು,

ಮದನಯಶಃಪಟಹ ಧ್ವನಿ ।
ಪುದಿಯೆ ವಿಯಚ್ಚರನ ಕರ್ಣಮಂ ಹೃದಯಕ್ಕೆ- ॥
ಯ್ದಿದುದಿಲ್ಲ ದಿವ್ಯವಚನಂ ।
ಬಿದಿಯಂ ಮೀಱುಗುಮೆ ಪೆಱರ ಪೇೞ್ದುಪದೇಶಂ ॥೯೪॥

ಆನೊಂದಂ ಬೆಸಗೊಂಡೊಡೆ ।
ನೀನೊಂದನದೇಕೆ ಪೇೞ್ದೆ ಪೇೞ್ದುದ ನೇಗೊ- ॥
ಳ್ಳೇನೆಂದು ಕೀಱಿ ನುಡಿವೈ ।
ಮಾನವರಾಂತಪರೆ ಮರುಳೆ ಲಂಕಾಪತಿಯಂ ॥೯೫॥

ಎಂಬುದುಂ ವಿದ್ಯಾದೇವತೆ ಕನಲ್ದು,

ಜನಕಜೆಯನುಯ್ಯೆ ದಶರಥ ।
ತನೂಜರಿಂ ಮರಣಮಾಗಲೆಂದಿರ್ದಪುದೀ- ॥
ತನ ಕೈಯಳವಲ್ತು ಪುರಾ ।
ತನಕರ್ಮಾಯತ್ತಮಲ್ತೆ ದೇಹಿಗಳೆಸಕಂ ॥೯೬॥

ಗೆಲಲೆನಗೆ ರಿಪುಬಲಂ ಬ ।
ಲ್ವಲಮಾದೊಡ ಸಿಂಹನಾದಮಂ ಮಾೞ್ಪೆಂ ಬೆಂ- ॥
ಬಲವಾಗಿ ಬರ್ಪುದೆಂದೀ ।
ಬಲದೇವಂಗಱಿಸಿ ವಾಸುದೇವಂ ಪೋದಂ ॥೯೭॥

ಎಂದು ರಾವಣಂಗೆ ಪೇೞ್ವುದುಮವಂ ರಣಕ್ಷೋಣಿಗೆ ಪೋಗಿ ಲಕ್ಷ್ಮಣಂ ಕೇಳದಂತು ವೈಕುರ್ವಣಶಕ್ತಿಯಿಂ ಸಿಂಹನಾದವಂ ಗೆಯ್ಯೆಂಬುದಂ ಅಂತೆ ಗೆಯ್ವೆನೆಂದು ವಿದ್ಯಾದೇವತೆ ಪೋಗಿ ಸಿಂಹನಾದಂಗೆಯ್ವುದುಮಾಧ್ವನಿಯಂ ಕೇಳ್ದು,

ಧುರದೊಳ್ದುರ್ಜಯನಾರ್ಗಮೆನ್ನನುಜನೆಂಬೀ ನಿಶ್ಚಯಂ ಗೆಟ್ಟು ಸಿಂ-
ಹರವಂ ತೋಱಿದನಾಹವಂ ವಿಷಮಮೆಂಬೀ ವಿಸ್ಮಯಂ ಚಿತ್ತದೊ-
ಳ್ದೊರೆಕೊಂಡತ್ತು ರಘೂದ್ವಹಂಗಮುೞಿದಂದೆಂತಕ್ಕುಮೋ ಜಾನಕೀ-
ಹರಣಂ ಕರ್ಮವಿಪಾಕಮಾರ ಬಗೆಗಂ ವೈಕಲ್ಯಮಂ ತಾರದೇ ॥೯೮॥

ಕಾಪಂ ಪೇೞ್ದು ಜಟಾಯುವ ।
ನೋಪಳನಿರವೇೞ್ದು ವೈರಿ ಬರಮಂ ತವಿಸ- ॥
ಲ್ಪೋಪಂತಿರೆ ದಂಡಧರಂ ।
ಚಾಪಧರಂ ಬಳನವಂಧ್ಯಕೋಪಂ ಪೋದಂ ॥೯೯॥

ಅನ್ನೆಗಮಿತ್ತಲ್

ಅೞಿಪಿ ಪರವಧುಗಧೋಗತಿ ।
ಗಿೞಿವುದನಭಿನಯಿಸುವಂತೆ ಸೀತೆಯ ಸಾರ- ॥
ಣ್ಗೆೞಿದಂ ನಭದಿಂ ಖಚರಂ ।
ಪೞಿಗಂ ಪಾಪಕ್ಕಮಂಜಡದವರೇಗೆಯ್ಯರ್ ॥೧೦೦॥

ದೋಷಿ ಪಿಡಿವಂತೆ ದಿವ್ಯದ ।
ಕಾಸಿದ ಕುಳುವಂ ಕಡಂಗಿ ಕಾಳೋರಗನಂ ॥
ಕೂಸು ಪಿಡಿವಂತೆ ಪಿಡಿದಂ ।
ಸಾಸಿಗನವಿವೇಕಿ ಸೀತೆಯಂ ದಶಕಂಠಂ ॥೧೦೧॥

ಅಂತು ಪಿಡಿದು ನಿಜವಿಮಾನದೊಳಿಟ್ಟು,

ದಶಮುಖನುನ್ಮುಖನೞಿಪಿಂ ।
ಶಶಿಮುಖಿಯಂ ಜನಕಸುತೆಯನಾವರಿಸೆ ಚತು- ॥
ರ್ದಶಭುವನಮನಪವಾದಂ ।
ಶಶಿಕಳೆಯಂ ಸೈಂಹಿಕೇಯನುಯ್ವಂತುಯ್ದಂ ॥೧೦೨॥

ಆಗಳದಂ ಕಂಡು ಜಾತಿಸ್ಮರನಪ್ಪ ಜಟಾಯು ಕೋಪಾನಳವಿಸ್ಫುಲಿಂಗದಂತಾರಕ್ತಂಗಳಾದ ಕಣ್ಗಳಿಂ ನುಂಗುವಂತೆ ನೋಡಿ,

ಪತಿ ಕಾಪುವೇೞ್ದು ಪೋದಂ ।
ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು- ॥
ದ್ಧತನಂ ಮದೀಯತುಂಡಾ ।
ಹತಿಯಿಂ ಶತಖಂಡಮಾಗೆ ಮಾೞ್ಪೆನೆನುತ್ತಂ ॥೧೦೩॥

ಖರನಖರಂಗಳಿಂ ನಿಶಿತ ಚಂಚುಗಳಿಂದಿಱಿಯಲ್ಕರುತ್ತು ಸಾ-
ರ್ತರೆ ನಸುನಕ್ಕು ಪೊಯ್ಯೆ ಕರದಿಂ ಗಮನೋತ್ಸುಕನಿಂದ್ರವೈರಿ ತ-
ನ್ನೆರಡುಮೆಱಂಕೆಗಳ್ಮುಱಿದಿಳಾತದೊಳ್ಕೆಡೆದತ್ತು ವಜ್ರದಿಂ
ಸುರಪತಿ ಪೊಯ್ಯೆ ಬೆಟ್ಟು ಕೆಡೆವಂತೆ ಜಟಾಯು ನಭೋವಿಭಾಗದಿಂ ॥೧೦೪॥

ಪಕ್ಕಿಮೊದಲಾಗಿ ಪತಿಕಾ ।
ರ್ಯಕ್ಕನುವಶಮಾಗಿ ತಾಗಿ ರಾವಣನೊಳಡು- ॥
ರ್ತಕ್ಕತುಳಮಿಱಿದುದೆಂದೊಡೆ ।
ತಕ್ಕಂ ಪತಿಕಾರ್ಯದೊಡೆಯನೋಸರಿಸುವುದೇ ॥೧೦೫॥

ಭೂಮಿಗೆ ಬಿೞ್ದಱಂಕೆ ಮುಱಿದಿರ್ದ ವಿಪತ್ತಿಗೆ ನೊಂದುದಿಲ್ಲಣಂ
ರಾಮನಗಲ್ಕೆಯೊಳ್ಜನನಿಗೇದೊರೆತಕ್ಕುಮೊ ದುಃಖವೇಗಮೆಂ-
ಬೀ ಮನದುಮ್ಮಳಂ ತನಗೆ ತಿಣ್ಣಮೆನಲ್ತೊಱದಂತದ ಖಗ-
ಗ್ರಾಮಣಿ ಚಿತ್ತದೊಳ್ತಳೆದುಚಿತಪಂಚಪದಾಕ್ಷರಂಗಳುಂ ॥೧೦೬॥

ಅಂತು ಬಿೞ್ದು ಜಟಾಯು ಕಂಠಗತವಾಯುವಾಗೆ ದಶಕಂಠನುಯ್ವ ಸಮಯದೊಳ್,

ಸಿಂಗಱದಕ್ಕೆಗೆ ಬಿೞ್ದ ಹರಿಣಾಂಗನೆವೋಲೆರ್ದೆಗೆಟ್ಟು ರಾಮಚಂ-
ದ್ರಾಂ ನೀಳ್ದ ಕಣ್ಮಲರ್ಗಳಿಂದುಗೆ ಕಣ್ಬನಿಗಳ್ಮಡಲ್ತ ಪ-
ಕ್ಷ್ಮಂಗಳನೊತ್ತಿ ಕಾರಮುಗಿಲಿಂದುತರ್ಪ ನವೋದಬಿಂದು ಜಾ-
ಲಂಗಳೆನಲ್ಬೆಮರ್ತಳೆನಸುಂ ತನುವಲ್ಲಿ ಮುಗುಳ್ತುಂದೆಂಬಿನಂ ॥೧೦೭॥

ಮನಮೆಳದಾಗ ಮನ್ಯುಮಿಗೆ ತಳ್ತೆಮೆಯಿಂ ಕರೆಗಣ್ಮೆ ಸೂಸೆ ಕ-
ಣ್ಬನಿ ಗಳಕಂದಳಂ ಬಿಗಿಯೆ ಗದ್ಗದನಿಸ್ವನಮುಣ್ಮೆ ಹಾರವಂ
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟೆರ್ದೆಗೆಟ್ಟೞಿ ಪೊಣ್ಮೆದತ್ತು ಮಾ-
ರ್ದನಿ ದೆಸೊಯೊಳ್ದಿಗಂಗನೆಯರುಂ ಬಿಡದಂದೊಡನಟ್ಟಿ ಮಾೞ್ಕೆಯಿಂ ॥೧೦೮॥

ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕಮಾ -
ತಂಕಮೊಡರ್ಚೆ ಪುಷ್ಪಕವಿವಿಮಾನದ ರತ್ನವಿಚಿತ್ರ ಪುತ್ರಿಕಾ-
ಸಂಕುಳಮಟ್ಟೊಡಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವಾಗಳಾ
ಲಂಕೆಯ ಸೂಡನುನ್ನತಿಯ ಕೇಡನವಂಗೆ ನಿವೇದಿಪಂತೆವೋಲ್ ॥೧೦೯॥

ಸ್ತನಮಂಡಳಕ್ಕೆ ಪೊಸಮು ।
ತ್ತಿನ ಹಾರಮನಿತ್ತು ತೋರ ಕಣ್ಬನಿಯಿಂ ಲೋ- ॥
ಚನಯುಗಳಮರುಣಮಣಿ ಮಂ ।
ಡನಮಂ ಕಿವಿಗಿತ್ತುವರುಣ ರುಚಿ ಮಂಜರಿಯಿಂ ॥೧೧೦॥

ಬಲೆಗೊಳಗಾದ ಸೋಗೆನವಿಲಂತೆ ಭಯಾಕುಳೆ ತನ್ನ ಚಿತ್ತದೊ-
ಳ್ನೆಲಸಿದ ರಾಮನಂ ಬಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನ-
ಕ್ಕಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ನಸು ಮುಚ್ಚಿಪೋಗಿ ತ-
ಣ್ಣೆಲರಲೆಪಿಂದೆ ಮುಚ್ಚಿದಿಳಿಳ್ಮಗುಟುಂ ಪೊಱಪೊಣ್ಮೆ ಹಾರವಂ ॥೧೧೧॥

ನೇಸಱ ಸಾರೆ ನಿಬ್ಬರಿಸುವುತ್ಪಳಮಾಳೆಯೆನಿಪ್ಪ ದೃಷ್ಟಿವಿ-
ನ್ಯಾಸಮನೊಯ್ಯನೋಸರಿಸಿ ನಮ್ರಶಿರೋಧರೆ ಸೀತೆ ಲೋಕಸಂ-
ತ್ರಾಸಿಯ ರೂಪು ಪಾದನಖದರ್ಪಣದೊಳ್ಪಲವಾಗಿ ತೋಱೆ ಕಂ-
ಡಾಸತಿ ಬೆರ್ಚಿಮುಚ್ಚಿದಳೆರಟ್ಟಿರದಿಂ ತರಳೇಕ್ಷಣಂಗಳಂ ॥೧೧೨॥

ಕ್ರೂರಾತ್ಮಂ ವಂಚಕನವಿ ।
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ ॥
ಹಾ ರಾಮಾ ಹಾ ರಾಮಾ ।
ಬಾರಿಪರಾರೆಂದು ಸೀತೆ ಶೋಕಂಗೆಯ್ದಳ್ ॥೧೧೩॥

ಅಂತು ಶೋಕಂಗೆಯ್ವ ಸೀತೆಯುಂ ದಶಾಸ್ಯನನಂತವೀರ್ಯ ಕೇವಲಿಗಳ ಚರಣೋಪಾಂತದೊಳ್ಕೈಕೊಂಡ ಪರಾಂಗನಾವಿರತಿವ್ರತದ ಭಂಗಮಂ ಬಗೆಯದುಯ್ದಪನನ್ನೆಗಮಿತ್ತಲ್,

ದೇವೇಂದ್ರನ ವಜ್ರಮನೆ ।
ನ್ನೀ ವಜ್ರಾವರ್ತಚಾಪಮಂ ಮಿಱುವನಿ- ॥
ನ್ನಾವನೆನುತ್ತುಂ ಸಂಗ್ರಾ ।
ಮಾವನಿಗನುಜನ ಕೆಲಕ್ಕೆ ರಾಮಂ ಬಂದಂ ॥೧೧೪॥

ಅಂತು ಬರ್ಪುದುಂ ಲಕ್ಷ್ಮಣನಿಪಾಯು ಬಹುಳಮಪ್ಪ ಗಹನದೊಳ್ದೇವ ಸೀತಾದೇವಿಯನಗಲ್ದೇಕೆ ವಿಜಯಂಗೆಯ್ದಿರೆಂಬುದುಂ ನಿನ್ನ ಸಿಂಹನಾದಮಂ ಕೇಳ್ದು ಬಂದೆನೆನೆ ಭವದೀಯಪ್ರಭಾವದಿನೆನಗೆ ಬಲ್ವಲನಪ್ಪ ಬವರಮಿಲ್ಲಿಲ್ಲಿದಾವನಾನುಮೊರ್ವ ಮಾಯಾವಿಯಿಂದಮಕ್ಕುಮದುಕಾರಣದಿಂ ಬೇಗಂ ಬಿಜಯಂಗೆಯ್ವುದಾನೀ ಬವರಮಂ ತೀರ್ಚಿ ನಿಮ್ಮ ಬೆನ್ನನೆ ಬಂದಪ್ಪೆನೆಂದು ಬಿನ್ನವಿಸೆ,

ತೋಱಿದನಿಲ್ಲ ಸಿಂಹರವಮಂ ಗಡ ಲಕ್ಷ್ಮಣನೆನ್ನ ಚಿತ್ತದೊ-
ಳ್ತೋಱಿಮುದಿಲ್ಲ ಬಿಟ್ಟು ಬರಲಾಗದು ಸೀತೆಯನೆಂಬ ನಿರ್ಣಯಂ
ಬೇಱೆ ಕಷಂಗಿ ಕೆತ್ತಿದಪುದೆನ್ನೆಡಗಣ್ದಡವಿಲ್ಲದಚ್ಚಿಗಂ
ತೋಱಿದೆ ಮಾಣದಿಂತಿದೆನುತುಂ ಮಗುಟ್ದಿಂ ಮನುವಂಶಮಂಡನಂ ॥೧೧೫॥

ಅಂತು ಮಗುಱ್ದು ಬಂದು ಮುನ್ನಮಿರ್ದ ಲತಾಭವನದೊಳ್ ಸೋವಲ್ಲಭೆಯಂ ಕಾಣದೆ ಶಿಖೀಮುಖಕ್ಕೆವಂದ ಪಾದರಸದಂತೆ ನಿಜನಿಸರ್ಗಧೈರ್ಯಗುಣಮದೃಶ್ಯಮಾಗೆ,

ಹಾ ಹಾ ಜನಕಸುತೇ ವೈ ।
ದೇಹೀ ವೈದೇಹಿಯೆಂದು ಪುದಿದಿರೆ ಮನಮಂ ॥
ಮೋಹತಮಮಂ ದೀಪಂ ವಾ ।
ತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ ॥೧೧೬॥

ಅಂತು ಮೂರ್ಛೆವೋಗಿ ಕಿಱಿದಾನುಂ ಬೇಗದಿಂ,

ನಸುಬಿಸುಪೇಱಿ ಮೈ ಮಗುೞಿ ಕೆತ್ತುವ ತಾಣಮೆ ಕೆತ್ತೆ ಮಂದಮಾ-
ದುಸಿರ್ಗಳೆ ನಾಸಿಕಾಮುಕುಳದಿಂದಿನಿಸುಂ ಪೊಱಪೊಣ್ಮೆ ತಳ್ತು ಸಂ-
ದಿಸಿದೆಮೆ ಬಿರ್ಚೆ ಕಣ್ಮಲರ್ಗಳುಳ್ಕಲರುತ್ತಿರೆ ಜಾನಕೀ ಎನು-
ತ್ತುಸಿರ್ದುಸಿರ್ದೆೞ್ದನಾ ರಘುಕುಳಾಂಬರಚಂಡಮರೀಚಿ ಮೂರ್ಛೆಯಿಂ ॥೧೧೭॥

ಅಂತು ಮೂರ್ಛೆಯಿಂದೆೞ್ದಿತ್ತು ಸುತ್ತಲುಂ ತೊೞಲ್ದಱಸುತ್ತುಮಡವಿಯೊಳಗನೆ ಬರ್ಪಾಗಳೊಂದೆಡೆಯೊಳಸುವಿಯೋಗ ಸಂಕಟದಿಂ ಸರಂಗೆಯ್ವ ಜಟಾಯುವಂ ಕಂಡು ಸೀತಾಪಹರಣಮಿದರ್ಕೆ ಮರಣ ನಿಮಿತ್ತಮಾದುದೆಂದುಬ್ಬೆಗಂ ಬಟ್ಟು ಸಂಸಾರ ವಿಷಮ ವಿಷಾಪಹಾರವುಂ ಪಂಚನಮಸ್ಕಾರಮುಸದರ್ಕೆ ಪೇೞ್ದುಮರಗತಿಯನೈದಿಸಿ ವೈದೇಹಿಯನಾವನಾಂತರಾಳದೊಳೆಲ್ಲಿಯುಮಱಸಿ ಕಾಣದೆ,

ಕಳಹಂಸಾಲಸಮಾನೆಯಂ ಮೃಗಮದಾಮೋದಾಸ್ಯನಿಶ್ವಾಸೆಯಂ
ತಳಿರೇ ತಾವರೆಯೇ ಮದಾಳಿಕುಳಮೇ ಕನ್ನೈದಿಲೇ ಮತ್ತಕೋ-
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ-
ತಳೆಯಂ ಕೈರವನೇತ್ರೆಯಂ ಪಿಕನಿನಾದಖ್ಯಾತೆಯಂ ಸೀತೆಯಂ ॥೧೧೮॥

ಮಳಯಜಗಂಧ ಬಂಧುರಸರೋರುಹಮಂ ದರಹಾಸಚಂದ್ರಿಕಾ-
ವಿಳಸಿತ ಚಂದ್ರಮಂಡಳಮನಾ ರಮಣೀರಮಣೀಯ ಲೋಚನೋ-
ತ್ಪಳಸಹಜಪ್ರಸನ್ನಕಮಳಾಕರಮಂ ಸ್ಮರರಾಜರಾಜ್ಯಮಂ-
ಗಳಮಣಿದರ್ಪಣೋಪಮಮನೋಪಳ ವಕ್ತ್ರಮನೆಲ್ಲಿ ಕಾಣ್ಬೆನೋ ॥೧೧೯॥

ಕಳರುತಿ ಮತ್ತ ಕೋಕಿಳಮನೀಕ್ಷಣಮುತ್ಪಳಮಂ ವಿನೀಳಕುಂ-
ತಳಮಳಿಮಾಲೆಯಂ ಕಚಭರಂ ನವಿಲಂ ನಡೆ ಹಂಸೆಯಂ ತಳಂ
ತಳಿರ್ಗಳನಾನನಂ ಕಮಳಮಂ ನಳಿತೋಳ್ಲತೆಯಂ ಲತಾಂತಕೋ-
ಮಲೆ ಮಱೆಗೊಂಡು ಪೈಗರೆದು ಕಾಡುವ ಕಾರಣಮೇನೊ ಜಾನಕೀ ॥೧೨೦॥

ಮತ್ತಮಾಮದಗಜಗಮನೆ ವನ್ಯಗಜಬೃಂಹಿತಕ್ಕೆ ತಲ್ಲಣಿಸಿ ತನ್ನಂ ತಱ್ಕೈಸಿದ ಸಲ್ಲಕೀನಿಕುಂಜಮುಮನಾ ಚಕೋರ ಲೋಚನೆ ವಿಲೋಚನ ಚಂದ್ರಿಕೆಯಿನೊಸರ್ವ ಚಂದ್ರಕಾಂತದ ಶಯ್ಯಾತಳದ ತಳಿರ್ವಾಸನುದಾಸೀನಂಗೆಯ್ದು ಸಮೆದ ಬಯಲ್ದಾವರೆ ಯೆಸಳ ಪಸೆಯಿನೆಸೆವ ತಮಾಳವನಮಾಲೆಯುಮನಾ ಹೇಮತಾಮರಸಮುಖಿಯ ಮುಖಸಮೀರ ಸೌರಭಕ್ಕೆಳಸಿ ಬಳಸುವಳಿ ಮಾಲೆಗೆ ಸುಗಿದು ಸುಯ್ಲನೋಸರಿಸಿದ ಸಪ್ತಚ್ಛದಷಂಡಮುಮನಾ ಪೃಥುನಿತಂಬಿ ನಿತಂಬ ಭರಪರಿಸ್ಖಳಿತಪದವನ್ಯಾಸದಿಂದಂಚೆಯಂ ಪಳಂಚಲೆದ ತಣ್ಬುೞಿಲ ತಾಣಮುಮನಾ ಲಾವಣ್ಯರಸತರಂಗಿಣಿ ತಾವರೆಯ ತಳಿರೆಲೆಯ ಪತ್ರಭಂಘದಿನುತ್ತುಂಗಪಯೋಧರಮಂ ಪಸದನಂಗೊಳಿಸಿದ ತಿಳಿಗೊಳದ ತಡಿಯುಮನಾ ಮದಾಳಿಪಟಳಕುಟಿಳಕುಂತಳೆ ಚೆನ್ನೆಯ್ದಿಲೆಸಳ ಚಿನ್ನಪೂಗಳಿಂ ತನ್ನ ತೋರಗುರುಳನಲಂಕರಿಸಿದ ಕಾಸಾರತೀರಮುಮನಾ ಸುವರ್ಣಕೇತಕೀ ಸುಗಂಧಿ ಸಹಜಸೌರಭದಿಂ ಮೃಗನಾಭಿಯನಭಿನಯಿಸಿದ ಲವಂಗ ವೀಥಿಯುಮನಾ ಶಿರೀಷದಾಮಕೋಮಳೆ ಸುಮನೋವಿಭೂಷಣವಿನೋದದಿಂ ಬಿರಿಮುಗುಳನಾಯ್ದ ವನತರುಲತಾವಿತಾನಮುಮನಾ ಸಂಕಲ್ಪಜನ್ಮಜಂಗಮಲತಾಂಗಿ ಸಂಭೋಗಲೋಭ -ದಿನಡಂಗುಱುಚಾಡಿ ಕಾಡಿದ ಚಂದನಲತಾ ಮಂದಿರಮುಮನಾ ಕನಕಕದಳೀದಳಶ್ಯಾಮೆ ಕದಳೀದಳವ್ಯಜನದ ತಣ್ಗಾಳಿಯಿನನಂಗಕೇಳೀಪರಿಶ್ರಮಮನಾಱಿಸಿದ ಸಂಪಗೆಯ ಜೊಂಪಮುಮಂ ವಿಯೋಗ ಶೋಕಾಕುಳಿತಚಿತ್ತನವಳೋಕಿಸುತ್ತುನಂ,

ಎನಿತಾನುಂ ತೆಱದಿಂ ಪಲುಂಬಿ ಪಲವಾಡುತ್ತುಂ ಮನಸ್ತಾಪದಿಂ
ತನು ಸಂತಾಪಮನಪ್ಪುಕೆಯ್ಯೆ ಬೞಲುತ್ತುಂ ಕಂತುಸಂತಾಪದಿಂ-
ದೊನಲುತ್ತುಂ ಕನಲುತ್ತುಮಂದವಿರಳಪ್ರಸ್ಯಂದಿ ಬಾಷ್ಪೋದಕಾ-
ನನನಾ ಕಾನನದೊಳ್ತೊೞಲ್ದು ರಘುರಾಮಂ ಸೇದೆವಟ್ಟಿರ್ಪುದುಂ ॥೧೨೧॥

ಅನ್ನೆಗಮಿತ್ತಲ್,

ಎರಡುಂ ತೋಳ್ನೆರವೊಂದೆ ಬಿಲ್ನೆರವಸಂಖ್ಯಾತಂ ದ್ವಿಷತ್ಸೇನೆ ಖೇ-
ಚರರಂ ಭೂಚರನೊಂದೆ ಮೆಯ್ಯೊಲೆ ಕೊಲುತ್ತಿರ್ದಪ್ಪನಿನ್ನಾತನಂ
ಶರಣಾಗೆಂದು ಕುಲಕ್ರಮಾಗತದೊಳಸ್ಮದ್ವೃತ್ತಿಯೊಳ್ನಿಲ್ವನೀ-
ಶರಣಾಯಾತಶರಣ್ಯನಿಂದೆನಗೆ ಕೈಸಾರ್ಗುಂ ಮನೋವಾಂಛಿತಂ ॥೧೨೨॥

ಎಂದು ತಱಿಸಂದು ಸಂಗ್ರಾಮಭೂಮಿಗೆವಂದು,

ದೇವ ಭವಚ್ಚರಣಾಂಬುಜ ।
ಸೇವೆಯೆ ಶರಣೆಂದು ಬಂದೆನೇರ್ಬೆಸನಂ ನೀ- ॥
ನೀವುದೆನೆಗೆಂದು ಲಕ್ಷ್ಮಣ ।
ದೇವಂಗೊಲ್ಲಗಲಿ ವಿರಾಧಿತಂ ನತನಾದಂ ॥೧೨೩॥

ಅಂತು ಬೆಸನಂ ಬೇಡಿಕೊಂಡು ಬಿಲ್ಗೊಂಡು ನೆಲಮುಕ್ಕಿನಂತೆ ಸಭಕ್ಕೆ ನೆಗೆದು ಖರನಂ ಸೆರಗಿಲ್ಲದೆ ಮುಟ್ಟೆವಂದು ಮದೀಯ ಜನಕನಂ ಕೊಂದಿಂದುವರಂ ಪಾತಾಳಲಂಕೆಯಂ ಪೊಱಮಡದೆ ಬರ್ದುಂಕಿದೆ, ಪಲಕಾಲಕ್ಕೆಂತಾನುಂ ಬಯಲಬವರಕ್ಕೊಳಗಾದೆ, ನೀನಿನ್ನೆತ್ತವೋಪೆಯೆಂದು ಮೂದಲಿಸಿ ಕಾದುತ್ತುಮಿರೆ,

ಮೊರೆಯುತ್ತುಂ ಪರಿಯುತ್ತುಮಿರ್ದ ರುಧಿರಸ್ರೋತಂಗಳಿಂ ಸುತ್ತಲುಂ
ಪೊರಳುತ್ತುಂ ನರಲುತ್ತುಮಿರ್ದ ಭಟರಿಂ ಪಿಟ್ಟಾದ ಪೀಱಾದ ಸಿಂ-
ಧುರದಿಂದ ತಱ್ಗಿದ ಮುಱ್ಗಿದನ್ಯರಥದಿಂ ಕಣ್ಗಂ ಮನಕ್ಕಂ ಭಯಂ-
ಕರಮಾದಾಜಿಯೊಳಟ್ಟಿ ತಿಂಬ ಜವನೆಂಬಂತಿರ್ದನಬ್ಜೋದರಂ ॥೧೨೪॥

ಆ ಸಮಯದೊಳ್ ಲಕ್ಷ್ಮಣಂ ನೋಡಿ ವಿರಾಧಿತನಂ ಲೆಕ್ಕಂಗೊಳ್ಳದೆ ಮಾಮಸಕಂಗೊಡು,

ಪೆಂಡತಿಯಂ ಪರಾಭವಿಸಿದಂ ಸುತನಂ ವಧೆಗೆಯ್ದನೆನ್ನೊಳಂ
ಗಂಡಗುಣಕ್ಕೆ ಮಚ್ಚರಿಸಿ ಮಾರ್ಮಲೆದಿರ್ದಪನೆಂದು ಬಿಟ್ಟ ಕ-
ಣ್ಕೆಂಡದ ತಂಡಮಂ ಕೆದಱಿ ಕೋಪದಿನಂದುರಿದೆಬ್ಬಿ ಕೊಂಡು ಕೋ-
ದಂಡಮನಣ್ಮೆನುತ್ತೊವಱಿಂದಂ ಗಗನೇಚರ ಶೇಖರಂ ಖರಂ ॥೧೨೫॥

ಕವಚಂ ಮಿಂಚಂ ಕಣ್ಣು।ಳ್ಕುವ ಸಿಡಿಲಂ ಚಾಪಟಂಕೃತಂ ಮೊೞಗಂ ಬೀ- ॥
ಱುವಿನಂ ಕಱೆದಂ ಖರನ ।
ಸ್ತ್ರವರ್ಷಮಂ ನೀಳಘನವಿಶಾಳಾಪಘನಂ ॥೧೨೬॥

ಆಗಳಾತನಿಸುವ ನಿಶಿತವಿಶಿಖಂಗಳಂ ಮಂಡಳಾಗ್ರದಿಂ ಖಂಡಿಸಿ,

ಮೊನೆಯೊಳ್ಭೈರವನಂತಗುರ್ವುವಡೆದಂ ರಾಮಾನುಜಂ ಬೀಱಿ ಬಿ-
ಚ್ಚನೆ ಬಿಟ್ಟಕ್ಷಿಯುಗಂ ತೃತೀಯನಯನಕ್ಕಾಕ್ಷೇಪಮಂ ಕೃಷ್ಣಸ-
ರ್ಪನಗುರ್ವಂ ತಿರುವಾಯೊಳಿಟ್ಟ ವಿಶಿಖಂ ಕೀಱ್ಮಾಡೆ ಕಾಳಾಗ್ನಿ ರು-
ದ್ರನ ಗಂಟಿಕ್ಕಿದ ಪುರ್ವನಂಡಲೆಯೆ ಕೋದಂಡಂ ಭುಜಾದಂಡದೊಳ್ ॥೧೨೭॥

ಉಡಿಯೆಚ್ಚಂ ಧನುವಂ ಸಿಡಿಲ್ವಿನೆಗಮೆಚ್ಚಂ ಕೇತುವಂ ಸೂತನಂ
ಮಡಿಯೆಚ್ಚಂ ಕಡಿಖಂಡಮಾಗೆ ಮುಱಿಯೆಚ್ಚಂ ತೇರನಶ್ವಂಗಳಂ
ಕೆಡೆಯೆಚ್ಚಂ ಬೞಿಯಂ ಖರಂ ಮುಳಿದು ಕೊಂಡುಗ್ರಾಸಿಯಂ ಮೇಲೆ ಪಾ-
ಯ್ದೊಡೆ ಪೊಯ್ದಂ ತಲೆ ಪಾಱಿ ಬೀೞೆ ರಘುವೀರಂ ಸೂರ್ಯಹಾಸಾಸಿಯಿಂ ॥೧೨೮॥

ಸೌಮಿತ್ರಿಯ ಕೋಪಾಗ್ನಿಶಿ।
ಖಾಮಾಲೆಗೆ ಸುಗಿದು ಖರನ ವಿಜಯಶ್ರೀ ಸಂ- ॥

ಗ್ರಾಮದೊಳಾಶ್ರಯಿಸಿದಳಾ ।
ರಾಮಾನುಜ ಭುಜಕೃಪಾಣ ಧಾರಾಗ್ರಹಮಂ ॥೧೨೯॥

ಅನಂತರಂ,

ಅಗ್ರಜನ ಮರಣದುಃಖದೊ ।
ಳಾಗ್ರಹದಿಂದ ಮೇಲೆವಾಯ್ದು ದೂಷಣನಂ ವೀ- ॥
ರಾಗ್ರೇಸರನಸಿಯಿಂದ ।
ಗ್ರಗ್ರಾಸಂ ಮಾಡಿದಂ ಜವಂಗಾಹವದೊಳ್ ॥೧೩೦॥

ಆ ಸಮಯದೊಳ್

ಸಮನಿಸಿದತ್ತು ಜಯಶ್ರೀ ।
ರಮಣಿಗೆ ಪರಿಣಯನಮಪ್ಪುದುಂ ಲಕ್ಷ್ಮಣನೊ- ॥
ಳ್ಸುಮನೋವರ್ಷಸಮನ್ವಿತ ।
ಮಮರಾನಕನಿನದಮಮರ ಜಯಜಯ ನಿನದಂ ॥೧೩೧॥

ಅಂತು ಗೆಲ್ಲಂಗೊಂಡು ಕೈದುವಿಕ್ಕಿ ಶರಣೆಂದು ಬಂದ ವಿರೋಧಿವಾಹಿನಿಯಂ ವಿರಾಧಿತಂಗೆ ಬೆಸಕೆಯ್ದು ಬಾಬ್ದಂತು ಮಮರಸವರ ಪೂರ್ವವೃತ್ತಿಯೊಳ್ನಿಲಿಸುವಂತು ನಿಯಮಿಸಿ ಬರುತ್ತುಂ,

ಮದಜಳಧಾರೆಯಿಲ್ಲದ ದಿಶಾಗಜದಂತೆ ಸುಧಾಂಶುಲೇಖೆಯಿ-
ಲ್ಲದ ನಭದಂತೆ ಕಲ್ಪಲತೆಯಿಲ್ಲದ ನಂದನದಂತೆ ವೇಳೆಯಿ-
ಲ್ಲದ ಕಡಲಂತೆ ಕೇಸರಿಣಿಯಿಲ್ಲದ ಕೇಸರಿಯಂತೆ ಸೀತೆಯಿಂ-
ಲ್ಲದೆ ರಘುವಂಶರಾಮನಿರೆ ನೋಡಿದನಾಕುಳನಾಗಿ ಲಕ್ಷ್ಮಣಂ ॥೧೩೨॥

ಅಂತು ಮನದೊಳಳ್ಕಾಡುತ್ತುಮೆಯ್ದೆವಂದು ಚರಣಾರವಿಂದರಜೋಲಲಾಮ- ಲಕ್ಷಿತಲಲಾಟನಪ್ಪುದುಮತಿವಿಷಮರಣ ರಂಗದೊಳವ್ರಣಕಾಯನುಮಜೇಯನುಮೆನಿಸಿ ಜಯಶ್ರೀಯೊಳೊಡಗೂಡಿದುದರ್ಕೆ ಮನದೊಳೆ ಮೆಚ್ಚಿ ಮುಹುರ್ಮುಹುರಾಶೀರ್ವಾದ- ಮುಖರಮುಖನಾದ ರಾಮದೇವನಂ ಲಕ್ಷ್ಮಣಂ ಮದಂಬಿಕೆಯಂ ಕಂಡೆನಿಲ್ಲೆತ್ತಲಿರ್ದಳೆಂಬು- ದುಮಾಂ ನಿನ್ನಲ್ಲಿಗೆ ಬಂದ ಪಿಂದೆ ಸಿಂಹಶರಭಾದಿ ರೌದ್ರ ವನಚರಂಗಳುಯ್ದವೆಂದಜಿ'ಯೆ- ನಾವನಾನುಮೊರ್ವಂ ಮಾಯಾವಿ ಕಳ್ದುಯ್ದನೆಂದಜಿ'ಯೆನಿನ್ನೆವರಮರಣ್ಯದೊಳ್ತೊಟಿಲ್ಲ ಜಿಸಿಯೆಲ್ಲಿಯುಂ ಕಂಡೆನಿಲ್ಲೆಂದು ನೊಂದು ನುಡಿವುದುಮದರ್ಕೆ ಲಕ್ಷ್ಮಣಂ ವಿಷಣ್ಣ ಹೃದಯನುದ್ದೀಪಿತ ಕೋಪಶಿಖಿ ಶಿಖಾಕಳಾಪನಿಂತೆಂದು :

ಧಾರಿಣಿಯಂ ಮಗುೞ್ಚಿ ಕುಲಪರ್ವತಮಂ ನೆಲೆಯಿಂ ತೆರಳ್ಚಿ ನಿ-
ರ್ನೀರಮನಲ್ತುಳುಂಕಿ ಲವಣಾರ್ಣವಮಂ ದಿವಮಂ ನೆಲಕ್ಕೆ ತಂ-
ದಾರಿದಿರಾದೊಡಂ ಜವನ ಬಾರಿಗೆ ಸೋವತಮಾಗೆ ಮಾೞ್ಪಿನಿ-
ನ್ನಾರೊ ಮದೀಶ ಜಾನಕಿಯುಯ್ದವರಿಂ ಪೂಜಿಗೆಲ್ಲಿ ಬಯ್ತಪರ್ ॥೧೩೩॥

ಎಂದೊದಱ್ ನುಡಿವನ್ನೆಗಮಿದಿರಾಗಿ ಬರ್ಪ ಬಳಮನೇಕಕುಂಡಳಂ ಬಲಮೆನೆ ಲಕ್ಷ್ಮೀಧರನಿದು ವಿರಾಧಿತನೆಂಬ ವಿಧ್ಯಾಧರಂ ಘುರಮೊಳೆನಗೆ ಕದನಸಹಾಯನಾಗಿ ಪಾೞಿಯಂ ಪಾಳಿಸಿದನೀಗಳ್ ದೇವ ನಿಜಚರಣ ಸೇವಾಸಕ್ತಚಿತ್ತನಾಗಿ ಬರುತ್ತಿರ್ದಪನೆಂದಱಿಪುವನ್ನೆ- ಗಮೆಯ್ದೆವಂದು ರಾಘವಪದಪ್ರಾಂತದೇಶದೊಳ್ಮೆಯ್ಯಿಕ್ಕಿ ನಿಜವೃತ್ತ ಕಮನಿಂತೆಂದು ಬಿನ್ನವಿಸಿದನತಿಪ್ರಚಂಡನಪ್ಪ ನಿಜಾನುಜಭುಜಾದಂಡಮಂಡಳಾಗ್ರಧಾರಾಪತಿ- ಯಿಂದಮರಕಾಮಿನೀಪರ್ಯಂ ಶೇಖರನಾದ ಖರಂ ಪಾತಾಳಲಂಕಾಪತಿಯಪ್ಪ ಮದೀಯ ಜನಕನಂ ಚಂದ್ರೋದರ ವಿಯಚ್ಚರೇಂದ್ರನನುಪಾಂಶು ಪಥೆಗೆಯ್ದುದುಮೆಮ್ಮ ಪರಿಜನವೋಡಿ ಪೋಗಿದುರ್ದಮುಮಪ್ಪೀ ವನದುರ್ಗಪ್ರದೇಶದೊಳಾವಾಸಮಂ ಮಾಡಿಕೊಂಡಿರ್ಪುದುಂ ವಿರಾಧಿತ ನಾಮಧೇಯನಪ್ಪಾನುಮಿಲ್ಲಿಯೆ ಬೆಳೆದು ಕೆಲವು ಕಾಲದಿಂ ಸಾಧಿತಸಕಲವಿದ್ಯನಾಗಿ ಪಗೆಯಂ ಸಾಧಿಸುವುಪಾಯಮಾವುದೆಂದುಮ್ಮಳಿಸುತ್ತಿರ್ದೊಂದು ದಿವಸಮೊರ್ವರಂ ದಿವ್ಯಜ್ಞಾನಿಗಳಂ ಕಂಡೆಮ್ಮ ಪೂರ್ವವೃತ್ತಿ ನಿಲ್ವುದಕ್ಕುಮಾಗದೆಂಬುದುಮದಂ ಬೆಸಸಿಮೆನಲಲವರಿಂತೆಂದರ್:

ಸಂಶಯಮೇಂ ನಿಲ್ವೈ ನಿಜ ।
ವಂಶಾಗತಮಪ್ಪ ರಾಜ್ಯದೊಳ್ಕರವಾಳಿಂ ॥
ವಂಶಚ್ಛೇದಮುಮಂ ಖರ ।
ವಂಶಚ್ಛೇದಮುಮನೊಡನೆ ಪಡೆದತಿಬಳನಿಂ ॥೧೩೪॥

ಎಂದು ಬೆಸಸುವುದುಮಾನಂ ।
ದಿಂದಿತ್ತಲ್ನಿಮ್ಮ ಬರ್ಪುದಂ ಪಾರ್ದಿರೆ ನೀ- ॥
ಮಿಂದೆನ್ನ ಪುಣ್ಯದಿಂದೇ ।
ಟ್ಟಿಂದಿರ್ತಿರ್ತಂದುದೆನ್ನ ಪಗೆಯುಂ ಬಗೆಯುಂ ॥೧೩೫॥

ಅಳ್ಕಿಸನನೆನಗೆ ದೇವರ್ ।
ವೇೞ್ಪುದು ಕಾರುಣ್ಯದೃಷ್ಟಿಯಿಂದೆನ್ನಂ ಕೈ- ॥
ಕೊಳ್ವುದು ಬಿನ್ನಪಮಂ ಬಗ ।
ಗೊಳ್ವುದು ಚರಿತಾರ್ಥನಾಗೆ ಮಾಡುವುದೆನ್ನಂ ॥೧೩೬॥

ಎಂದು ಬಿನ್ನವಿಸಿ ರಾಮದೇವನ ಚರಣಸೇವಾಲಾಭದಿನಮೃತಸೇವೆವಡೆದಂತೆ ಪರಿತೃಪ್ತನಾದ

ವಿರಾಧಿತಂಗೆ ಲಕ್ಷ್ಮೀಧರನೆಂದನೆಮ್ಮಣ್ಣನೆನ್ನ ಕದನಕೇಳೀಕುತೂಹಳವಿಳೋಕನೆನ್ನಲ್ಲಿಗೆ ಬಂದ ಪಿಂದೆ ಜಗನ್ಮಾತೆಯಂ ಸೀತಾದೇವಿಯನಾವನಾನೊರ್ವಂ ಮಾಯಾವಿ ಕಳ್ದುಯ್ದೀ ಕಾನನದೊಳಿರ್ದಪನಾದೆಸೆಗಗ್ರಜಂ ವ್ಯಗ್ರನಾಗಿರ್ದನದಱಿನಲ್ಲಿಗೆ ತಕ್ಕ ಪುರುಷರನಱಿಸಲಟ್ಟುವುದನೆ ವಿರಾಧಿತಂ ಕಟ್ಟುಗಡೆದು ಕಾರ್ಯಧುರಂಧರರಪ್ಪ ವಿದ್ಯಾಧರರಂ ಬೆಸಸುವುದುಂ,

ಲತಿಕಾಕುಂಜಂಗಳೊಳ್ಭೂವಿವರಕುಹರದೊಳ್ಘೋರಕಾಂತಾರದೊಳ್ಪ-
ರ್ವತಸಾನೂದ್ಯಾನದೊಳ್ನಿರ್ಝರಸರಿದುಪಕಂಠಂಗಳೊಳ್ವಾರಕಾಸಾ-
ರತಟೀದೇಶಂಗಳೊಳ್ಬೂಗೊಳದ ತಡಿಗಳೊಳ್ದಂಡಕಾರಣ್ಯದೊಳ್ಕೂ-
ಡೆ ತೊಟಿಲ್ದರ್ಕಂಡರಿಲ್ಲಂಬಿಕೆಯನಱಿಸಿ ವಿದ್ಯಾಧರಾಧೀಶಮುಖ್ಯರ್ ॥೧೩೭॥

ಅಂತವರ್ಮನೋವೇಗದಿಂ ಪೋಗಿಬಂದು ಜಾತಸ್ವರೂಪಮಂ ಬಿನ್ನವಿಸೆ ಖಿನ್ನನಾಗಿರ್ದ ರಾಮದೇವಂಗೆ ವಿರಾಧಿತನಿಂತೆಂದಂ: ಮತ್ಕುಳಾಗತಮುಂ ನಿಸರ್ಗದುರ್ಗಮುಮಪ್ಪ ಪಾತಾಳಲಂಕಾಪುರದೊಳಿರ್ದು ಸೀತಾದೇವಿಯ ಪಿರಿಯಣ್ಣನಂ ಪ್ರಭಾಮಂಡಳನಂ ಬರಿಸಿ ಬಟಿಕ್ಕೆ ತಕ್ಕುದಂ ನೆಗಟಿಲಕ್ಕುಮದರ್ಕಾನೆ ಸಾಲ್ವೆನಲ್ಲಿಗೆ ಬಿಜಯಂಗೆಯ್ವುದೆಂದು ರಾಮಲಕ್ಷ್ಮಣರಂ ರಥಮನೇಱಿಸಿಕೊಂಡು ಚತುರಂಗಬಳಸಹಿತಮಳಂಕಾರೋದಯಮಪ್ಪ ಪಾತಾಳಲಂಕಾ -ಪುರಮಂ ಪುಗುವ ಸಮಯದೊಳ್,

ಪುರಮಂ ಪುಗಲೀಯದೆ ಸೌಂ ।
ದರನೆಂಬ ಖರತನೂಭವಂ ತನ್ನ ಬಲಂ ॥
ಬೆರಸಡ್ಡಂಬರೆ ಮೆಯ್ಗಲಿ ।
ವಿರಾಧಿತಂ ಜವನಮಸಕಮಂ ಕೈಕೊಂಡಂ ॥೧೩೮॥

ದೆಸೆ ಮಸುಳೆ ಭಾನುಬಿಂಬಂ ।
ಮಸುಳೆ ವಿರಾಧಿತನ ಚಾಪವಿಳಯಾಂಬುದದಿಂ ॥
ಪಸರಿಸೆ ಸೌಂದರನೊಳ್ಬಯ ।
ರಸವರ್ಷ ಪೆರ್ಚಿ ಪೆರ್ಚಿದುದು ಶರವರ್ಷಂ ॥೧೩೯॥

ಖರದೂಷಣರವೊಲಂತಕ ।
ಪುರಮಂ ಪುಗಲಂತು ಸೌಂದರಂ ಗಾಂಪನೆ ಬೆ- ॥
ಳ್ಪರಳಿಗೆ ಗಱಿ ಮೂಡಿದವೋ ।
ಲ್ಭರವಶದಿಂ ಪೊಕ್ಕನೋಡಿ ಲಂಕಾಪುರಮಂ ॥೧೪೦॥

ಅಂತವನನವಯವದೊಳೋಡಿಸಿ ಮಹಾವಿಭೂತಿಯಿಂ ಪುರಮಂ ಪೊಕ್ಕರನ್ನೆಗಮಿತ್ತಲ -ಸುರನಾಗಸದೊಳ್ ಮನೋವೇಗದಿಂ ಪೋಗುತ್ತುಮಿರೆ,

ಖೇದಂ ಕೈಗಟಿವಾಗೆ ದಿಗ್ವಿವರಮಂ ಹಾಹಾರವಂ ತೀವೆ ಬಾ-
ಷ್ಪೋದಸ್ವೇದ ಜಲಂಗಳಿಂ ಕರಗಿ ನೀರಾಗುರ್ಕುವಂತಾಗೆ ಮೈ
ಮೋದುತ್ತುಂ ಬಸಿಱಿಂ ಪರಾಗನೆಯನೆನ್ನಂ ಕಳ್ದುಕೊಂಡೀ ಖಳಂ
ಪೋದಪ್ಪಂ ಶರಣಪ್ಪುದಾರ್ಪರೆನುತುಂ ವೈದೇಹಿ ಪುಯ್ಯಲ್ಚಿದಳ್ ॥೧೪೧॥

ಭವನಾವಾಸನಿವಾಸಿಗಳ್ಸಕಳವಾನವ್ಯಂತರಾವಾಸಸಂ-
ಭವರತ್ಯುಗ್ರನವಗ್ರಹಾದಿವಿಷಮಜ್ಯೋತಿಷ್ಕರಿಂದ್ರಾದಿಕ-
ಲ್ಪವಿಮಾನಸ್ಥಿತರೀ ದುರಾಚರಿತನಂ ಮಾರ್ಕೊಳ್ಳುದಸ್ಮಾಂಗನಾ-
ವಿವರಂ ದಾಶರಥಿಪ್ರಿಯಪ್ರಮದೆಯಂ ಕಳ್ದುಯ್ದಪಂ ಸೀತೆಯಂ ॥೧೪೨॥

ಧರಣೀರಕ್ಷಣದಕ್ಷದಕ್ಷಿಣಭುಜನಂ ಲಕ್ಷ್ಮೀಧರಂ ಮೈದುನಂ
ಹರಿವಂಶಂ ಜನಕಂ ಮದೀಯಜನಕಂ ವೀರಂ ಪ್ರಭಾಮಂಡಳಂ
ಪಿರಿಯಣ್ಣಂ ರಘುರಾಮನಂಗನೆಯನೆನ್ನಂ ಸೀತೆಯಂ ಪಾತಕಂ
ದೊರೆಗೆಟ್ಟುಯ್ದುಪನೇವೆನೆಂದು ಸತಿ ಹಾಹಾಕ್ರಂದನಂ ಮಾಡಿದಳ್ ॥೧೪೩॥

ಅಂತು ಮುಹುರ್ಮುಹುರುದೀರಿತರವಮನರ್ಕಜಟಯ ಮಗನಪ್ಪ ರತ್ನಜಟ ಕೇಳ್ದು,

ಸತಿ ಪುಯ್ಯಲ್ಚಿದಪಳ್ ರಘೂದ್ವಹಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ
ಶ್ರುತಿ ಕೈಕೊಂಡುದು ಕೇಳ್ದೊಡಂ ತೆವಳಿಗಂಡಂದೆನ್ನ ವಿಖ್ಯಾತಿ ದೂ-
ಷಿತಮಕ್ಕುಂ ಸೆಱೆಗೊಂಡನಂ ಕದನದೊಳ್ಪಿಂಕೊಂಡು ಬಾಹಾಬಳೋ-
ನ್ನತಿಯಿಂ ಬೀೞುವೆನೆಂದು ಘೂರ್ಮಿಸಿದನೇಂ ಗಂಡಂ ಪರಿಚ್ಛೇದಿಯೊ ॥೧೪೪॥

ಅಂತು ಪರಿಚ್ಛೇದಿಸಿ ರತ್ನಜಟ ಬದ್ಧಭ್ರುಕುಟ ದಶಾನನವಿಮಾನಕ್ಕಡ್ಡಂ ಬಂದು,

ಪರಿಪರಿಸಿ ಪಾಟಿಯಂ ಭೂ ।
ಚರ ಖೇಚರಚಕ್ರವರ್ತಿ ರಾವಣ ನೀನೀ- ॥
ಪರವಧುಟಿಪುವುದುಮಿಪಂ ।
ಪರಮಟಿಗುಂ ನಿನ್ನ ಮಹಿಮೆಗಿದು ನಡೆವಳಿಯೇ ॥೧೪೫॥

ಎಂದು ಮರ್ಮೋದ್ಘಾಟನಂಗೆಯ್ದು,

ಮೂದಲಿಸೆ ಮುಟ್ಟೆವರ್ಪುದು ।
ಮಾದಾನವನರ್ಕಜಟಿಯನಣ್ಪಂಗವನೊ- ॥
ಳ್ಕಾದದೆ ಕರುಣೆಸಿ ವಿದ್ಯಾ ।
ಚ್ಛೇದಂ ಗೆಯ್ದಂ ನಿರಂಕುಶ ದಶಕಂಠಂ ॥೧೪೬॥

ಎಂದು ವಿದ್ಯಾಚ್ಛೇದಂ ಗೆಯ್ವುದುಂ,

ಅಂಬರದಿನಾತ್ಮವಿದ್ಯಾ ।
ಡಂಬರಮಸ್ತಮಿಸೆ ಟ್ಟಿ ಮೂರ್ಛಾಪನ್ನಂ ॥
ಕಂಬುದ್ವೀಪದೊಳಳವಟಿ ।
ದಂಬರಚರನೆಱಕೆ ಮುಱಿದ ಪಕ್ಕಿವೊಲಿರ್ದಂ ॥೧೪೭॥

ಅನ್ನೆಗಮಿತ್ತ ದಶಮುಖಂ ಲಂಕೆಗಭಿಮುಖನನಾಗಿ ಪೋಗುತ್ತುಂ,

ಬಗೆ ಸಂಭೋಗಸುಖಕ್ಕೆ ಕಾತರಿಸೆ ಕಣ್ಗಳ್ಕೀಱಿ ಸರ್ವಾಂಗಮಂ
ತೆಗೆದಾಲಿಂಗಿಸೆ ಮಾತುಗಳ್ಮದನರಾಗೋನ್ಮಾದಮಂ ಬೀಱಿ ಬಾ-
ಹುಗಳಾಲಿಂಗನಲಾಲಸಂಗಳೆನೆ ಧೈರ್ಯಂಗೆಟ್ಟು ಮೇಲ್ವಾಯ್ವ ಚೇ-
ಷ್ಟೆಗೆ ಪೌಲಸ್ತ್ಯನುಮೊತ್ತುಗೊಟ್ಟನೆನಲಾರಂ ದರ್ಪಕಂ ದಂಡಿಸಂ ॥೧೪೮॥

ಆಗಳವನಱಿಪಿನಱಿಗೆಯ್ತಕ್ಕೆ ಸೀತೆ ಸೈರಿಸದೆ ನೀನೆನ್ನಂ ಸೋಂಕಿದೊಡೆ ನಾಲಗೆಗಿಱಿ ಸಾವೆನೆಂದು ಪರಿಚ್ಛೇದಿಸಿ ನುಡಿಯೆ ದಾಸ್ಯನೋಸರಿಸಿ ಮಹಾಸತಿಯ ಶೀಲದಳವನಱಿಯ-ನಪ್ಪುದಱಿನನಂತವೀರ್ಯ ಕೇವಳಿಗಳಿತ್ತ ವಿರತಿವ್ರತಪರಿಪಾಳನವೆನಗರಿದಾದುದೆನೆ ನಿಸರ್ಗರಾಗಿಗಳಪ್ಪ ಪೆಂಡಿರ ಪರಿಣಾಮಮೆಲ್ಲಿವರಂ ನಡೆದಪ್ಪುದೀಕೆಯನಾವ ತೆಱದೊಳಮೊಡಂ-ಬಡಿಸುವುದಾವಗಹನಮೆಂದು ತನ್ನಂ ತಾನೆ ಸಂತಯಿಸುತ್ತುಂ ಪೋಪ ಸಮಯದೊಳ್,

ಅನುವರದೊಳ್ಪಲಾಯನಪರರ್ಗಱಿ ಸೋಂಕದೆ ಹಸ್ತಮಂ ಪ್ರಹ-
ಸ್ತನುಮತಿವೇಗದಿಂದ ಬರುತುಮಾಗಸದೊಳ್ದಶಕಂಠನಂ ವಿಳೋ-
ಚನಪಥವರ್ತಿಯಂ ಜಯಜಯಧ್ವನಿ ಕೆಯ್ಮಿಗೆ ಮುಟ್ಟೆವಂದವ-
ರ್ವಿನಮಿತ ಮಸ್ತಕರ್ಮುಕುಳಿತಾಂಜಳಿಗಳ್ಪೊಡೆವಟ್ಟು ಪೋಪುದುಂ ॥೧೪೯॥

ಆಗಳದಂ ಸೀತೆ ಕಂಡೀತನೆ ರಾವಣನೆಂದಱಿದು,

ಅನಶನಮಂ ಕೈಕೊಂಡು ।
ಳ್ಮನದೊಳ್ಪತಿ ಪತಿಯ ಕುಶಲವಾರ್ತೆರ್ಯಯನಾಂ ಕೇ- ॥
ಳ್ವಿನಮುಣ್ಣೆನೆಂದು ನೃಪಮಾ ।
ನಿನಿಯರ್ಸಜ್ಜನಿಕೆಗಿಂತು ನೋಂತರುಮೊಳರೇ ॥೧೫೦॥

ಅಂತು ರಾವಣಂ ಲಂಕೆಯುನೆಯ್ದೆವಂದು ಗೀರ್ವಾಣರಮಣವೆಂಬ ನಿಜವಿನೋದವನಮಂ ಪುಗುವಾಗಳ್,

ಪುಗದಿರ್ವವನಮಂ ಪೊಕ್ಕೀ ।
ಮೃಗಾಕ್ಷಿಯಂ ಮಡಗೆ ರಾಮದೂತನಿನೆಮಗ - ॥

ಚ್ಚಿಗಮಕ್ಕುಮೆಂದು ಕೈಸ ।
ನ್ನೆಗೆಯ್ವುವೊಲ್ತಳಿರ ತೊಂಗಲಲುಗಿದುವಲರಿಂ ॥೧೫೧॥

ಅಂತಾ ಬನಮಂ ಪೊಕ್ಕಲ್ಲಿಯ ವಿಚಿತ್ರಮಣಿಮಯ ಗೇಹದೊಳ್ವೈದೇಹಿಯನಿರಿಸಿ ತಾನುಂ ತನ್ನರಮನೆಯ ಕರುಮಾಡ ದೊಳ್ಪೊಕ್ಕಿರ್ಪುದುಮಾ ಸಮಯದೊಳ್ ಖರದೂಷಣರ ಮರಣವಾರ್ತೆಯಂ ಚಂದ್ರನಖಿ ಚರವಚನದಿಂ ಕೇಳ್ದು,

ಸುತನಂ ಕೊಂದವನಂ ಕೊ ।
ಲ್ವ ತಕ್ಕನಿಂ ಪೋಗಿ ನಿಜಪರಿಗ್ರಹಸಹಿತಂ ॥
ಪತಿಯುಂ ಮೈದುನನುಂ ಪರಿ ।
ಹೃತಜೀವಿತರಾಗೆ ಶೋಕವಿಹ್ವಳೆಯಾದಳ್ ॥೧೫೨॥

ಅವಿರಳ ಪಾರಿಹಾರ್ಯರುತಿ ಶೋಕರುತಿ ಪ್ರತಿಬದ್ಧಮಾಗೆ ಪ-
ಲ್ಲವಪರಿಶಾಖೆ ಪಾಣಿತಳದಿಂದ ಬಸಿಱಂ ಬಿಡೆ ಮೋದಿಕೊಳ್ವುದುಂ
ತ್ರಿವಳಿಗಳನ್ನವಾಗೆ ಬೆರಲಚ್ಚಿಱಿದಂತಿರೆ ಕಣ್ಣ ನೀರ್ವೊನ-
ಲ್ಕವಿತರೆ ಬಂದು ಚಂದ್ರನಖಿ ಪೊರ್ದಿದಳಗ್ರಜಪಾದಮೂಲಮಂ ॥೧೫೩॥

ಅಂತು ಚಂದ್ರನಖಿ ನಿಖಿಳಾಂತಃಪುರಮುಂ ಮಂಡೋದರಿಯುಂ ಬೆರಸು ಶೋಕಂಗೆಯ್ವುದುಮಾಕೆಗೆ ಸಂಸಾರ ಸ್ವರೂಪಮಂ ತಿಳಿಸಿ ಖರದೂಷಣರಂ ಕೊಂದವನನಮೋಘಂ ಕೊಲ್ವೆನೆಂದಟ್ಟೆಯಂ ಬಾರಿಸಿ ಭಗವದರ್ಹದ್ಭವನಂಗೊಳ್ಮಹಾ-ಪೂಜೆಗಳಂ ಮಾಡಿಸಿ ರಾಜಭವನಕ್ಕೆ ಬಂದು ಶಯ್ಯಾಸದನಮಂ ಪೊಕ್ಕು,

ತಡೆವುದು ತಕ್ಕುದಲ್ತು ಖರದೂಷಣರಂ ಕಡುಕೆಯ್ದು ಕೊಂದನಂ
ಮಡಿಪುವೆನೆಂಬ ತಕ್ಕಱಿದು ಸೀತೆಯನೆತೆಱದಿಂದಮೆಂತೊಡಂ-
ಬಡಿಸುವೆನೆಂತು ಮೇಳಿಸುವೆನೆಂತು ಮದೀಯಮನೋಜ ತಾಪಮಂ
ಕಿಡಿಸುವೆನೆಂದು ಪಂಬಲಿಸಿದಂ ಪಲವಂ ಮನದೊಳ್ದಶಾನನಂ ॥೧೫೪॥

ಏತಱ ಸೋಂಕುಮಾವುದಱ ಗಾಡಿಯುಮೊಂದಱ ಕಂಪುಮೆನ್ನರೊ-
ಳ್ಮಾತುಮದೆಂತುಟಪ್ಪ ರಸಮುಂ ತನಗೆಂತುಮಸಹ್ಯಮಾಗೆ ಹೃ-
ಜ್ಜಾತನ ಮಾಯೆ ಮೋಹಿಸುವುದುಂ ಬಗೆಯಂ ವಿಗತಾನ್ಯಚಿಂತನಂ
ಸೀತೆಯುಂ ಚಿಂತೆಯಿಂ ದಶಮುಖಂ ಮರವಾಸನಂತೆ ತೋಱಿದಂ ॥೧೫೫॥

ಅಂತು ಚಿಂತಾಕ್ರಾಂತನಾದ ಮನೋವಲ್ಲಭನಂ ಮಂಡೋದರಿ ಕಂಡು,

ಖರನ ವಿಪತ್ತಿಯೊಳ್ವಿಕಳನಾದನೆ ಗೆತ್ತಿನಿತೇಕೆ ಪೆಂಡಿರಂ-
ತಿರೆ ಬಹುಶೋಕಮಿಾ ತೆಱದಿನಿರ್ದೊಡೆ ಗಂಡಗುಣಕ್ಕೆ ನಾಡೆಯುಂ

ಪರಿಭವಮೆಂದಲೆತ್ತಲಱಿವಳ್ ಗಗನೇಚರ ಚಕ್ರಿ ಜಾನಕೀ-
ವಿರಹಕೃಶಾನುಂ ಸುತ್ತಿ ಸುಡೆ ಚಿತ್ತಮನಾಕುಳನಾದನೆಂಬುದಂ ॥೧೫೬॥

ಎನೆ ದಶಗ್ರೀವನೆನ್ನ ಬೇವಸಕ್ಕಿದು ನಿಮಿತ್ತಮಲ್ತು ನಿನಗೆನ್ನ ತೆಱನನಱಿಯಲಾಗದೆಂದು,

ಬೆಂಡಾಗೆ ಮನಂ ಮೌನಂ ।
ಗೊಂಡಿರೆ ವಲ್ಲಭನ ಮನವನಱಿವಾಗ್ರಹದಿಂ ॥
ಮಂಡೋದರಿ ಮಾಣದೆ ಬೆಸ ।
ಗೊಂಡಳ್ಕೌತುಕಮಿದೇಂ ನಿಮಿತ್ತಮೆನುತ್ತುಂ ॥೧೫೭॥

ಅಂತು ಬೆಸಗೊಳ್ವುದುಂ ಮಱುವಾತುಗುಡದೆ ಲಜ್ಜಾರಸನಿಮಗ್ನಾನನಂ ದಶಾನನನಿರೆ,

ಗಂಡುಡೆಯಟ್ಟು ಕೈದುವಿಡಿದುಮ್ಮಳಮಂ ನಿನಗುಂಟುಮಾಟ್ಪ ಬ-
ಲ್ಗಂಡಿನ ದೇವದಾನವವಿಯಚ್ಚರರೊರ್ವರುಮಿಲ್ಲ ನಿನ್ನ ದೋ-
ರ್ಮಂಡಳವೀ ತ್ರಿಖಂಡಮುಮನಾಕ್ರಮಿಸಿತ್ತಿದು ಪುಷ್ಪಕಾಂಡಕೋ-
ದಂಡನ ಗೊಡ್ಡ ಮುರ್ಚಿರುವೆ ತೋಱಿವೆಯಾತನೆ ಪೂವಿನಂಬುಗಳ್ ॥೧೫೮॥

ಸ್ಮರಂ ಮೆಚ್ಚದ ನಿನ್ನೀ ।
ಪರಿಜಂ ಕಡೆಗಣಿಸಿ ನಿನಗಮಿನಿತಚ್ಚಿಗಮಂ ॥
ತರಲಾರ್ತನಿಱಿ ಲೆಪ್ಪದ ।
ಬರಪದ ಕಂಡರಣೆವೆಸದ ಪೆಣ್ಣಕ್ಕುಮವಳ್ ॥೧೫೯॥

ಎಂದು ಮನಮನಱಿದು ತೆಱಿಯೆ ನುಡಿಯೆ ಮನದೇಗೊಂಡು ಮಂಡೋದರಿಯ ಮೊಗಮಂ ನೋಡಿ,

ಅಱಿವುವ ವಾರ್ತೆಯಲ್ಲ ನಿನಗೆನ್ನ ಸೆಗಟ್ಟಿಯ ವಾರ್ತೆ ನೀನೆ ಮು-
ನ್ನಱಿದ ಬಳಿಕ್ಕಿದಂ ನಿನಗೆ ವಂಚಿಸಲಾಗದು ತಂದೆನಿಂದು ಮುಂ-
ದಱಿಯದೆ ಸೀತೆಯಂ ಮದನನಾಕೆಯ ದೂಸಱಿನೆನ್ನನೆಚ್ಚಪಂ
ನೆಱಿಗೊಳಿ ಪೂವಿನಂಬಲಗಿನಂಬುಗಳೆಂಬಿನಮಂಬುಜಾನನೇ ॥೧೬೦॥

ಎಂದು ಮತ್ತಮಿಂತೆಂದನಿಂದು ಪುಷ್ಪಕವಿಮಾನದೊಳ್ಜಾನಕಿಯನುಱಿವಿಡಿದು ಬರುತ್ತುಮಾಕೆಯ ಪಟಿಗಟಿದ ಗಾಡಿಯಂ ನೋಡಿ ಮನದೊಲೆನಗಟಿಪು ಕೈಗಟಿವಾಗೆ ಸೈರಿಸದೆ ಪೊರ್ದಲ್ವಾರ ನೀನೆನ್ನ ಪೊರ್ದಿದೊಡೆ ನಾಲಗೆಗಿಟ್ಟು ಸಾವೆನೆಂದು ಜಡಿದು ನುಡಿಯೆ ಸೆಡೆದು ಲಂಕೆಗೆ ತಂದು ಗೀರ್ವಾಣ ರಮಣೋದ್ಯಾನದೊಳಿರಿಸಿ ಬಂದೆನಾ ಕುಂದ ದಳಧವಳ ಲೋಚನೆಯ ಲಾವಣ್ಯಸುಧಾಸೇವೆ ಸಮನಿಸದಿರೆ ಸಾವು ಸಮನಿಸುಗುಮೆನೆ ದಶಾಸ್ಯನ ದಶಾವಸ್ಥೆಯಂ ಕಂಡು ಮಂಡೋದರಿ ಭಯಗೊಂಡು,

ಅಚಿರಪ್ರಭೆಯಂ ಪೆಂಡಿರ ।
ಶುಚಿತ್ವಮುಂ ಕ್ಷಣದಿನಗ್ಗಳಂ ನಿಲ್ಕುಮೆ ಪೇೞ್ ॥
ಖಚರೇಂದ್ರ ನಿಜಾಕೃತಿ ಚಿ ।
ತ್ರಚಮತ್ಕೃತಿ ಕಂಡಿದರ್ಕೆ ಸೋಲದರೊಳರೇ ॥೧೬೧॥

ಎಂದು ಸಂತೋಷಂಬಡೆ ನುಡಿದಾಕೆಯುನೊಡಂಬಡಿಸಲಾನೆ ಸಾಲ್ವೆನೆಂದು ಸಮಸ್ತಾಂತಃಪುರಸೀಮಂತಿನಿಯರ್ವೆರಸು ಸೀತೆಯ ಸಮೀಪಕ್ಕೆವಂದು,

ವನಿತೆಯರ ನಯನರುಚಿಯುಂ ।
ತನುರುಚಿಯುಂ ರತ್ನಭೂಷಣಂಗಳ ರುಚಿಯುಂ ॥
ದಿನಲಕ್ಷ್ಮಿಗೆ ಕೊರ್ವುರ್ವಿದು ।
ದೆಸೆ ಮಂಡೋದರಿ ವಿಳಾಸದಿಂ ಕುಳ್ಳಿರ್ದಳ್ ॥೧೬೨॥

ಅನಿಬರರಸಿಯರ ರೂಪುಂ ।
ಮನಕ್ಕೆ ಸೊಗಯಿಸಿದುದಿಲ್ಲ ಸೀತೆಯ ಕೆಲದೊಳ್ ॥
ದಿನಲಕ್ಷ್ಮಿಯ ಕೆಲದೊಳ್ ಲೋ ।
ಚನಸುಖಮಂ ಪಡೆಯದಂತೆ ತಾರಾವಿಭವಂ ॥೧೬೩॥

ಅನಂತರಮಾ ಖಚರಕಾಂತೆ ಜಾನಕಿಯ ಮುಖಸರೋಜಮಂ ನೋಡಿ,

ಪಂಕಜಸಂಭವಂ ನಿನಗೆ ಪಾಸಟಿಯಲ್ಲದ ರಾಘವಂಗೆ ನಿ-
ಸ್ಸಂ ಕುಡೆ ಕಂಡು ಸೈರಿಸದೆ ಚಿತ್ತಭವಂ ದಶಕಂಧರಂಗೆ ಕೊ-
ಟ್ಟಂ ಕಡುನೀಱೆ ನಿನ್ನನನುರೂಪವರಂಗೂಡಗೂಡಿ ಲೀಲೆಯಿಂ
ಲಂಕೆಯನಾಳ್ದು ತಾಳ್ದರಸಿಪಟ್ಟಮನಾತ್ಮ ಲಲಾಟಪಟ್ಟದೊಳ್ ॥೧೬೪॥

ಈ ನವಯೌವನೋದಯಮನೀ ನಯನೋತ್ಸವಮಪ್ಪ ರೂಪಿನು-
ದ್ಭಾನಿಯನೀ ತನುಚ್ಛವಿಯನೇವೊಗೞ್ವುದೊ ಸೋಲ್ತು ಬಂದೊಡಂ
ಮೇನಕೆ ಬಾಱ್ತೆಗಯ್ಯದ ದಶಾನನನುಂ ಬಸದಾರ್ದನೆಂದೊಡಾ-
ರ್ಜಾನಕಿ ನಿನ್ನವೋಲುಟೆದ ಮಾನಿನಿಯರ್ಕಡುಗಾಡಿಕಾರ್ತಿಯರ್ ॥೧೬೫॥

ಪದವಿಲ್ಲಂ ನನೆಯಂಬಿನ ।
ಪೊದೆಯುಂ ಪಿಡಿದಿರದ ಪದದೊಳಾರ್ನೋಡಿದೊಡಂ ॥
ಮದನಂಗಂ ಮಾನಿನಿ ದಶ ।
ವದನಂಗಂ ರೂಪಭೇದಮೇನಾದಪುದೋ ॥೧೬೬॥

ಇಸುವೆಸಗೆಯ್ದು ಖೇಚರಪುರಂಧ್ರಿಯರಂ ಭರತತ್ರಿಖಂಡದೊ-
ಳ್ಪಸರಿಸು ನಿನ್ನ ಗೋಸಣೆಯನಾಣೆಯನೀ ಖಚರೇಂದ್ರವಕ್ಷದೊ-
ಳ್ವಸಿಯಿಸು ಲಕ್ಷ್ಮಿವೋಲ್ ವಿಜಯಲಕ್ಷ್ಮಿವೋಲೀತನ ತೋಳ ತಟ್ಟಿನೊ-
ಳ್ಪೊಸಯಿಸು ನಲ್ಮೆಯಂ ದಿವಸಲಕ್ಷ್ಮಿಯನೇಕೆಯೊ ಬಂಜೆಮಾಡುವೌ ॥೧೬೭॥

ಜನಕಜೆ ನಿನ್ನ ಪೀವರಪಯೋಧರಮಂಡಳಮಂ ಮನೋಜರಾ-
ಜನ ವಿಜಯಾಭಿಷೇಕಸವನೋತ್ಸವ ಪೂರ್ಣಸುವರ್ಣಕುಂಭಮಂ
ನೆನೆಯಿಸುವಂತು ಮಾಡು ಖಚರೇಂದ್ರನ ಕಾತರದೃಷ್ಟಿಪಾತಚಂ
ದನಘನಸಾರಕರ್ದಮ ವಿಲೇಪನದಿಂ ಕರಪಲ್ಲವಂಗಳಿಂ ॥೧೬೮॥

ಎನೆ ಜನಕಜೆ ಮಂಡೋದರಿಗೆ ಮನದೊಳ್ಗನಲ್ದು,

ಇದು ಮತ್ತೋನ್ಮತ್ತಜಲ್ಪಂ ಕುಲವಧುವರ ಮಾತಲ್ತು ನಿಮ್ಮಂದಿಗರ್ವಂ-
ಶದ ಕೇಡಂ ನೋಡದೊಳ್ಪಂ ಬಗೆಯದೆ ಪಟಿಗಂ ಪಾತಕಕ್ಕಂ ಭಯಂಗೊ-
ಳ್ಳದೆ ಪೇಟಿರ್ ಪೊಲ್ಲಮಾತಂ ನುಡಿಯಲಿದು ಮನಂ ನೋಟ್ಟಿ ಸಂಕಲ್ಪಜಲ್ಪಂ
ಮದಧೀಶಂ ರಾಮಚಂದ್ರಂ ಪೊಱಗೆನೆ ಪೆಱತೇ ಮಾತೊ ಜಾತಾನುಜಾತರ್ ॥೧೬೯॥

ತನಗೆ ಪತಿವ್ರತಮಿಲ್ಲದ ।
ವನಿತೆ ಕುಲಸ್ತ್ರೀಯೆ ಭಿನ್ನಭಾಜನಮಿಂತ- ॥
ಪ್ಪನುಚಿತಮಂ ಹರಿವಂಶದ ।
ವನಿತೆಯರೊಳ್ನುಡಿಯಲಕ್ಕುಮೇ ನಿಮ್ಮನ್ನರ್ ॥೧೭೦॥

ಎಂದು ಮಂಡೋದರಿಯಂ ಬಿಡೆನುಡಿವುದುಮಾ ಸಮಯದೊಳ್,

ಜಡಿಯುತ್ತುಂ ಚಂದ್ರಹಾಸಾಸಿಯನೆಳಸೆ ತದಾಸ್ಥಾನಮಂ ದಿವ್ಯಗಂಧಂ
ಕುಡಿಮಿಂಚಂ ಬೀಱಿ ವಜ್ರಾಭರಣಕಿರಣಮಿಂದ್ರಂಗೆ ಸೌಂದರ್ಯದಿಂ ನೂ-
ರ್ಮಡಿ ಮೇಲೆಂಬನ್ನೆಗಂ ಭೋಂಕನೆ ಜನಕಸುತಾಳೋಕನೋತ್ಕಂಠಚಿತ್ತಂ
ನಡೆತಂದಂ ದಾನವೇಂದ್ರಂ ಸುರತರುಸುಮನೋಮಂಜರೀಕರ್ಣಪೂರಂ ॥೧೭೧॥

ಅಂತು ಬರಲೊಡಂ,

ಪರಿನೀರೊಳಗಣ ನೆೞಲಂ ।
ತಿರೆ ತನ್ನಂ ನೋಡಿ ನಡುಗೆ ಜಾನಕಿ ದಶಕಂ- ॥
ಧರನಂಜಲೆನುತಮಂತಃ ।
ಪುರಮಂ ಕಣ್ಣನ್ನೆಯಿಂದಮಲ್ಲಿಂ ಕಳೆದಂ ॥೧೭೨॥

ಅನಂತರಂ ಜಾನಕೀವದನವಿನ್ಯಸ್ತವಿಳೋಚನಂ ಕಮಲಿನಿಯನೆಳಸುವ ಹಿಮಕರ ಕಿರಣದಂತೆ ದಂತಕಾಂತಿ ಪಸರಿಸೆ ಪೌಲಸ್ತ್ಯನಿಂತೆಂದಂ :

ನೂಪುರಮಂ ಪದಕ್ಕೆ ಮಣಿಮೇಖಲೆಯಂ ಜಘನಕ್ಕೆ ಕುಂಕುಮಾ-
ಲೇಪನಮಂ ಕುಚಕ್ಕೆ ಪಸುರ್ಗಂಕಣಮಂ ನಳಿತೋಳ್ಗೆ ಪತ್ರಲೇ-
ಖಾಪರಿಶಾಖೆಯಂನಿಜಕಪೋಳತಳಕ್ಕೆ ಕುಡಲ್ಕೆ ನೋಜ ಸಂ-
ತಾಪನತಪ್ತಮಾತುರಿಸಿದಪ್ಪುದು ಮನ್ಮನಮಂಬುಜಾನನೇ ||೧೭೩||

ಆನೆಯ ಮೇಲೆ ಬೆಳ್ಗೊಡೆಯ ತಣ್ಣೆಳಲೊಳ್ನಲಸಿರ್ದಲೇ ಸರೋ-
ಜಾನನೆ ಪೆಂಡವಾಸದ ವಿಳಾಸಿನಿಯರ್ವರೆ ನಿನ್ನ ಸುತ್ತಲುಂ
ಜಾನಕಿ ನೋಡ ನಿನ್ನ ನಗೆಗಣ್ಣ[illegible]ುನಪ್ಪುಕೆಯ್ಯೆ ಲಂ-
ಕಾನಗಲೀಬಹಿಃಪುರನಮೇರುವಿ[illegible]ಸವನಂಗಳೀಬಿಮಂ ||೧೭೪||

ಕುಲನದಿಯಂ ಕುಲಾದ್ರಿಶಿಖರಂಗಳ ದಿವ್ಯಸರೋವರಂಗಳಂ
ಮಲಯಗಿರೀಂದ್ರಸಾನುವನಮಂ ಲವಣಾರ್ಣವ ವಜ್ರವೇದಿಕಾ-
ವಿಲಸನಮಮಂ ವಿಲೋಚನಪಥಾತಿಥಿ ಮಾಡು ವಿಯದ್ವಿಳಾಸಿನೀ-
ತಿಲಕಮೆನಿಪ್ಪ ಪುಷ್ಪಕವಿಮಾನಮನೇರ್ದೊಡನೋಜು ಜಾನಕೀ ||೧೭೫||

ಎನ್ನೊಳ್ಪೋರ್ದುಡಿದಿಂದ್ರಸಿಂಧುರದ ಕೋಡಿಂದಾದ ಪಲ್ಯಂಕದೊ-
ಳ್ಮನ್ನಂ ಪದ್ಮಜನಂಚೆಯಂ ತಱಿದು ತುಪ್ಪುಟಿಗ್ಗೊಂಡು ದಿಕ್ಪಾಳಕ-
ರ್ಬೆನ್ನಿತ್ತಿಕ್ಕಿದ ಚೇಲದಿಂ ಸಮೆದ ಕೇಳೀತಲ್ಪದೊಳ್ನಿದ್ರೆಗೆ-
ಯ್ದಿನ್ನಂ ನಿದ್ರೆಯಿನೆಟ್ಟುಜ್ವನ್ನಮಮರೀಮಾಂಗಲ್ಯಗೀತಸ್ವನಂ ||೧೭೬||

ಅಸಿರತ್ನಂ ಚಕ್ರರತ್ನಂ ನವನಿಧಿ ಪಲವುಂ ವಿದ್ಯೆ ಕೈಸಾರ್ದುವುಳ್ಳಂ-
ಜಿಸಿದೆಂ ದಿಕ್ಪಾಲರಂ ಕಟ್ಟಿದೆನುಜದಿದಿರಿಟ್ಟಿಂದ್ರನಂ ಲೀಲೆಯಂ ಚಾ-
ಳಿಸಿದೆಂ ಕೈಲಾಸಮಂ ದಕ್ಷಿಣಭರತ ಧರಾಚಕ್ರಮಂ ಚಕ್ರದಿಂ ಸಾ-
ಧಿಸಿದೆಂ ಪೌಲಸ್ತ್ಯನಂ ಮಿಾಜುವರೆ ಸಮರದೊಳ್ಮಾನವರ್ಮಾನನೇತ್ರೇ ||೧೭೭||

ಕಾಡಂ ಕೂಡೆ ತೊಟಲ್ಚಿ ಕಾಡೊಡಮೆಯಿಂ ಭೋಗೋಪಭೋಗಂಗಳೊ-
ಳ್ನೀಡುಂ ತೃಪ್ತಿಯನೀವ ರಾಘವನೊಳೇಂ ವೈದೇಹಿ ವಿದ್ಯಾಧರ-
ಕ್ರೀಡಾಸದ್ಮದೊಳಂಗೆ ಹಾರಿ ವಸನಾದಿದ್ರವ್ಯದಿಂ ಮನ್ಮಥ-
ಕ್ರೀಡಾಸೌಖ್ಯಮನಪ್ಪುಕೆಯ್ದು ಮೆಱೆ ನೀಂ ನಾನಾವಿನೋದಂಗಳಂ ||೧೭೮||

ಎಂದು ಪರನಿಂದಾಪರನುಮಾತ್ಮಸ್ತವನತತ್ಪರನುಮಾಗಿ,

ಅನುನಯಶತಂಗಳಿಂ ನುಡಿ ।
ದನುವಶೆ ಮಾಡಲ್ವಿಯಚ್ಚರೇಂದ್ರನುಮೇನಾ- ॥
ರ್ತನೆ ಜನಕಜೆಯಂ ಗಗನಮ ।
ನನುಲೇಪಂಗೆಯ್ದೊಡಲ್ಲಿ ಮಸಿ ಪತ್ತುಗುಮೇ ॥೧೭೯

ಸಿರಿಯಂ ಮೆಯ್ಸಿರಿಯಂ ಮೆಱೆ ।
ದು ರಾವಣಂ ಸತಿಯನೆಱಗಿಸಲ್ಲಾಲ್ತನ್ ಪೊ- ॥
ನ್ನೊರೆಗನ್ಯದೀಪಮೆಱಪಂ ।
ತಿರೆ ಮಾಣಿಕ್ಯಪ್ರದೀಪಮೇನೆಱಗುಗುಮೇ ॥೧೮೦॥

ಆ ದುರಾತ್ಮನ ದುರುಕ್ತಿಗೆ ಜನಕಸುತೆ ಕಡುಮುಳಿದುಂ ಮುನಿಸಂ ಮೊಗಕ್ಕೆ ತಾರದೆ,

ನುಡಿಯಲ್ತಕ್ಕುದೆ ಪಾಱಿದಪ್ಪಿ ಪಱಗಂ ಪಾಪಕ್ಕಮುಳ್ಳಕ್ಕದೀ
ನುಡಿಯಂ ಚೀಃ ಪರದಾರಮನ್ಯಶಯನಸ್ಥಾನಂ ಪೆಱರ್ಮಿಂದ ನೀ-
ರ್ಮುಡಿದುತ್ಪುಲ್ಲಕದಂಬಕಂ ತೊಡೆದ ಕಾಶ್ಮೀರಾಂಗಹಾರಾದಿಕಂ
ಮಡಗೂಟ್ಬೀಱುಡೆ ಬಾಯ ತಂಬುಲಮಿವಸ್ಪೃಶ್ಯಂಗಳೇನಲ್ಲಮೇ ॥೧೮೧॥

ಗುಣಹಾನಿಯಿಂದಧೋಗತಿ ।
ಗುಣದಿಂ ಸ್ವರ್ಗಾಪವರ್ಗಸುಖಮಪ್ಪುದೆನ- ॥
ಲ್ಗುಣಹೀನನ ಸಿರಿಯಿಂದಂ ।
ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ ॥೧೮೨॥

ಅಱುನೀರಾಗಿರೆ ತಾಯ್ಮಳಲ್ವರೆಗಮಿಾ ವಾರಾಶಿಯಂ ತುಳ್ಕಲುಂ
ತಿಱಿಕಲ್ಲಾಡಲುಮೀ ತ್ರಿಕೂಟಗಿರಿಯಂ ತತ್ಸೌರ್ಯಹಾಸಾಸಿಯಿಂ-
ದಿಱಿ ದಳ್ಳಾಡಿಸಲುಂ ದ್ವಿಷನ್ನೃಪರನೇಕಾಕ್ಷೌಹಿಣೀಸೇನೆಯಂ
ನೆಱೆವಂ ದೋರ್ವಳದೃಪ್ತನಪ್ರತಿಹತಂ ರಾಮಾನುಜಂ ಲಕ್ಷ್ಮಣಂ ॥೧೮೩॥

ರಾಮನನಂತವೀರ್ಯನಿದಿರೊಳ್ಭುವನತ್ರಯಮಾಂತೊಡಂ ನೃಪ-
ಗ್ರಾಮಣಿ ದೋಸ್ಸಹಾಯದೊಳೆ ಗೆಲ್ವನಮೋಘನುದಾತ್ತ ರಾಘವೋ-
ದ್ದಾಮಶಿಳೀಮುಖಂ ರಣದೊಳನ್ಯಸಹಾಯಮನಾಸೆಗೆಯ್ವ ಶಂ-
ಕಾಮಯ ಪೀಡ್ಯಮಾನರಥಿರಾಜನೊಳೆಕ್ಕತುಳಕ್ಕೆ ಬರ್ಪರೇ ॥೧೮೪॥

ಆಹವದೋಹಳಂ ಮಸುಳೆ ಮತ್ಪತಿಯಿಂದಮಗಲ್ಚಿ ತಂದೆ ವೈ-
ದೇಹಿಯನೆನ್ನನುಕ್ಕೆವದಿನಲ್ಲದೊಡೇಂ ದಶಕಂಠ ರಾಮಬಾ-
ಣಾಪತಿಯಿಂ ನಭಂಬರೆಗಮುಂಬಿಱವಿಟ್ಟು ಮಡಲ್ತು ವಿದ್ವಿಷ-
ಲ್ಲೋಹಿತದಿಂದಕಾಂಡಲಯಕಾಳದ ಸಂಜೆಮುಗಿಲ್ಗಳಾಗವೇ ॥೧೮೫॥

ಎಂದು ಮಱುಮಾತಿಂಗೆಡೆಯಿಲ್ಲದಂತು,

ಬಿಡೆನುಡಿಯೆ ಸೀತೆ ಮುಳಿಸಿನ ।
ಪಡೆಮಾಂತಿಕ್ಕೆ ರಾವಣಂಗೊಲವು ಪದಿ- ॥
ರ್ಮಡಿಸಿತ್ತಪ್ರಾಪ್ತಿ ರಸಂ ।
ಬಡೆಗುಂ ವೈಷಯಿಸಕಸುಖದೊಳಿದು ವಿಸ್ಮಯಮೇ ॥೧೮೬॥

ಅಂತು ದಶಮುಖನಾ ಕಂಬುಕಂಠೆಯ ಕನಲ್ದೊನಲ್ದು ನುಡಿವ ವಕ್ರವಚಮೆ ಕಳಕಂಠಿಯ ಪುಗಿಲೆಂಬ ವಕ್ರವಚನದಂತೆ ತನಗೆ ಮದನರಾಗಹೇತುವಾಗೆ,

ನಯದಿಂದಮಿಾ ಸರೋರುಹ ।
ನಯನೆಯನಳವಡಿಸಲಾರ್ತೆನಿಲ್ಲಳವಡಿಪೆಂ ॥
ಭಯದಿಂದಮೆಂದು ವಿದ್ಯಾ ।
ದಯಿತಂ ನೆನೆದಂ ವಿಕುರ್ವಣಾವೈಭವಮಂ ॥೧೮೭॥

ಆ ಸಮಯದೊಳ್,

ರಾಗಾವಿಳರಾಪದ್ಗತ ।
ರಾಗದರಾರೆಂದು ದಶಮುಖಂಗಱಿಪುವವೋ- ॥
ಲಾಗಸದಿನಪರಸಂಧ್ಯಾ ।
ರಾಗಾವಿಳನರ್ಕನಪರವಾರಿಧಿಗಿೞಿದಂ ॥೧೮೮॥

ಅಂತು ನೇಸಱ್ಪಡಲೊಡಂ,

ತೋರವೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತತಿ-
ಕ್ರೂರಮೃಗಂಗಳವ್ವಳಿಸಿ ಗರ್ಜಿಸಿ ನುಂಗಲೊಡರ್ಚುವಂತು ಘೋ-
ರ್ಘೋರನೆ ರಕ್ತವೃಷ್ಟಿ ಕಱೆವಂತು ಸಿಡಿಲ್ಪೊಡೆವಂತು ಸುತ್ತಲುಂ
ವಾರಿಧಿ ಮೇರೆದಪ್ಪಿ ಕವಿವಂತು ಬಿಗುರ್ವಿಸಿದಂ ದಶಾನನಂ ॥೧೮೯॥

ಅಂತಗುರ್ವಿಸುವುದುಂ,

ಬಗೆಯೊಳ್ಚಿನಪದಂ ನಾ ।
ಲಗೆಯೊಳ್ಪಂಚಪದಮುಗಲದಿರ ರನ್ನದ ದೀ- ॥
ವಿಗೆ ಪುರುಷಪವನಪತಿಯಂ ।
ಬಗೆಯದವೋಲ್ಸಿತೆ ಬಗೆದಳಿಲ್ಲುಪಪತಿಯಂ ॥೧೯೦॥

ಆ ಸಮಯದೊಳ್ಪವಿತ್ರಮಂಡಳಮುದಯಾಚಳಶಿಖಂಡಮಾಣಿಕ್ಯಮಂಡನಮೆನಿಸೆ ವಿಭೀಷಣಪ್ರಮುಖ ಮುಖ್ಯ ಪುರುಷಪೌಲಸ್ತ್ಯನ ಕೆಲಕ್ಕೆವಂದು ಖರದೂಷಣರ

ಮರಣಶೋಕವಿಷಣ್ಣ ಮನರಾಗಿರ್ಪುದುಮನ್ನೆಗಮಿತ್ತ ಕನ್ನೆವಾಡದ ಮಱಿಯೊಳಿರ್ದ ಸೀತೆ ಶೋಕಂಗೈವ ಸರಮಂ ಕೇಳ್ದು ವಿಭೀಷಣಂ ಪುರುಷವಿರಹದಿನತಿಪ್ರಳಾಪಂಗೆಯ್ವರಾರೆಂಬುದುಮಾ ಮಾತಂ ಕೇಳ್ದು ಸೀತೆಯಿಂತೆಂದಳ್ :

ತನಗಿದಿರಾದ ಮಾರ್ಬಲಮನೊರ್ವನೆ ಲಕ್ಷ್ಮಣನಾಂತು ಕಾದೆ ತ-
ಮ್ಮನ ರಣಮಂ ನಿರೀಕ್ಷಿಸಲಪೇಕ್ಷಿಸಿ ಪೋಗೆ ಪರೋಕ್ಷದೊಳ್ದಶಾ-
ನನನೆಱಿತಂದನಾ ಜನಕನಂದನೆಯಂ ರಘುವೀರನಪ್ಪ ರಾ-
ಮನ ವಧು ಸೀತೆಯೆಂ ಪತಿವಿಯೋಗಕೃಶಾನು ಸುಡಲ್ಕೆ ಬೆಂದಪೆಂ ॥೯೧॥

ಎನೆ ವಿಭೀಷಣಂ ನೈಮಿತ್ತಿಕಾದೇಶಮಮಂ ನೆನೆದು ಭಯಚಕಿತಚಿತ್ತನಾಗಿ,

ಪರಪರಿಗ್ರಹೀತೆಗೆಟಿಪಂ ।
ಪರೆ ಪುರುಷಂ ಪುರುಷಧರ್ಮಮಟಿಗುಂ ಪಱಿಗುಂ ॥
ಧರೆ ದುರ್ಗತಿ ಸಮನಿಸುಗುಂ ।
ಪರಿಹರಿಸಲ್ಕದಱಿನಾರುಮಿಾ ದುರ್ಣಯಮಂ ॥೯೨॥

ಎಂದುಬಿನ್ನವಿಸೆ ಮಾರೀಚನುಮದನೆ ನುಡಿಯೆ,

ಸ್ತ್ರೀರತ್ನಕ್ಕಾನಿರೆ ಪೆಱ ।
ರಾರೊಡೆಯರಿಾಱುವನ್ನರಾರೆನ್ನೀದು- ॥
ರ್ವಾರ ಭುಜಬಳಮನೆಂದವಿ ।
ಚಾರಿ ದಶಗ್ರೀವನವರನೇಳಿಸಿ ನುಡಿದಂ ॥೯೩॥

ಅಂತು ನುಡಿದು ದಾನವಂ ತ್ರಿಜಗದ್ಭೂಷಣದಾನಜಮನೇಱಿ ಜಾನಕಿಯಂ ಪುಷ್ಪಕವಿಮಾನಮನೇಱಿಸಿ ನಿಖಿಳ ಸಾಮಂತಸೇನೆ ಮುಂತೆ ಪರಿಯೆ ಪುರಶ್ರೀಯ ವಿಳಾಸಮಂ ತನಗೆ ತೋರ್ಪುದುಂ,

ಜಾನಕಿ ಜೀವಿತೇಶ್ವರನಗಲ್ಕೆಯೊಳಗ್ಗಳಮಾದ ಖೇದದಿಂ-
ದೇನುಮಸಹ್ಯಮಾಗೆ ಪುರಮಂ ಪುರಗೋಪುರಮಂ ಬಹಿಃಪುರೋ-
ದ್ಯಾನಮನೀಕ್ಷಿಸಲ್ಬಗೆ ವಿರೂಕ್ಷಿಸೆ ಕನ್ನಡಿಸಲ್ಕೆ ಪಾರ್ದಳ-
ಬ್ಜಾನನೆ ದುಃಖಿತೇ ಮನಸಿ ಸರ್ವಮಸಹ್ಯಮೆನಿಪ್ಪ ವಾಕ್ಯಮಂ ॥೯೪॥

ಅಂತು ರಾಮಸೀಮಂತಿನಿಯಂ ಪ್ರಮದಮದಿರಾಪ್ರಮತ್ತಂ ಪ್ರಮದವನದೊಳ್ನೆಱ-ಗೆಯ್ದು ವಿರಹವಿಕಳನಾಗಿರ್ಪುದುಮಾತನ ಕೇಡಂ ವಿಭೀಷಣಂ ಕಂಡು ಭಯಂಗೊಡು ಮಂತಣಮಿರ್ದ ಸಮಯದೊಳ್ಸಂಭಿನ್ನವಸರ ಮಂತ್ರಿಮುಖ್ಯಂ ದಿಗ್ಗಜದ ನಿಗ್ಗವಮನುಡಿದಂತೆ ವಿಯಚ್ಚರಪತಿಯ ನಚ್ಚಿನ ಖರದೂಷಣರಂ ಕೊಂದು ತದಪತ್ಯನಪ್ಪ ಸೌಂದರನಂ

ಪಾತಾಳಲಂಕೆಯಿಂ ಸೋದು ಕಳೆದು ತದ್ವಿರೋಧಿಯಪ್ಪ ವಿರಾಧಿತನನನ್ವಯಾಗತ-ರಾಜ್ಯಲಕ್ಷ್ಮಿಯೊಳ್ನಿಲಿಸಿ ರಾಮಲಕ್ಷ್ಮಣರ್ವೈದೇಹಿಯ ಪೋದ ದೆಸೆಯನಜ಼ಿಯಮಸಿಕನಿರ್ದ-ರಲ್ಲದೆಯುಂ ವಿಗ್ರಹಸಮಗ್ರನಪ್ಪ ಸುಗ್ರೀವಂ ಸಮ್ಮೊಳಾದನುಬಂಧದೊಳ್ ಶಿಥಿಳನಾಗಿರ್ಕುಮಾತನೊಳನುಬಂಧಮುಳ್ಳೊದಜ಼ಿಂ ಹನುಮನುಮೆಮಗಲ್ಲನೆಂಬುದುಮಾ ನುಡಿಗೆ ದಶಮುಖಂ ಪರಿಹಾಸ ಮುಖರಮುಖನಾಗಿ,

ಕಡಲೊಳಗೊಂದರಟ್ಟಿಳಕಣಂ ಪವನಾಹತಿಯಿಂ ವಿನಷ್ಟಮಾ-
ದೊಡೆ ಜಳರಾಶಿ ಕುಂದುಗುಮೆ ಮೇರೆಗೆ ದೂರಮೆನಿಪ್ಪ ನಮ್ಮ ಪೆ-
ರ್ವಡೆ ಖರದೂಷಣರ್ಕಟಿ಼ಯೆ ಕುಂದುಗುಮೇ ಕಪಿಚಿಪ್ನರಿಲ್ಲದೇಂ
ಕಿಡುವುದೊ ಭೂಚರರ್ಧುರದೊಳಾಂಪರೆ ಖೇಚರಚಕ್ರವರ್ತಿಯಂ ॥೧೯೫॥

ಎಂಬುದುಮಾ ನುಡಿಯನವಕರ್ಣಿಸಿ ನಿಶಿತಪ್ರಜ್ಞನುಮನಾಗತಜ್ಞನುಮಪ್ಪ ಸಹಸ್ರಮತಿ ವಿದ್ಯಾಬಲದೊಳಂ ಷಡಂಗಬಲದೊಳಮತ್ಯಧಿಕನಪ್ಪಶ್ವಗ್ರೀವ ಖೇಚರನಂ ಭೂಚರಂ ತ್ರಿಪಿಷ್ಟನಶ್ರಮದೊಳೆ ಕೊಂದಂ ಭೂಚರರಸಂಖ್ಯಾತ ಖೇಚರರಂ ದಾನಸನ್ಮಾನಗಳಿಂದೆಮಗೆ ಮಾಣ್ಬುದು, ಲಂಕೆಗಭೇದ್ಯಮಾಗೆ ವಿದ್ಯಾಪ್ರಾಕಾರಮಂ ಮಾಣ್ಬುದಿಂತು ಬಲಿದಿರ್ಪುದುಂ ವೈದೇಹಿಯ ವಿರಹದಿಂ ರಾಮಂ ವಿಗತ ದೇಹನಕ್ಕುಮಂತಾಗೆ ಲಕ್ಷ್ಮಣಂಗಂ ಪ್ರಾಣಪರಿತ್ಯಾಗಮಕ್ಕು-ಮೆಂದುನಿಶ್ಚಯಿಸಿನುಡಿಯೆ ವಿಭೀಷಣನಾ ಪ್ರಕಾರದಿಂ ಪ್ರಯತ್ನಪರನಾಗಿರ್ಪುದುಮಿತ್ತಲ್,

ಖರದೂಷಣರಿಂ ಪಗೆಯುಂ ।
ಪರಿಭವಮುಂ ತೀರ್ಗುಮವರ್ಗೆ ಪೇೞ್ವೆನೆನುತ್ತುಂ ॥
ಬರುತುಂ ಕಾನದೊಳ್ವಾ ।
ನರಚಿಷ್ನಂ ಕಂಡನೊಂದು ರಣಮಂಡಳಮಂ ॥೧೯೬॥

ಚತುರಂಗಸೇನೆಯಂ ಜವ ।
ನತಿಕಾಂಕ್ಷೆಯೊಳುಂಡು ಕಾಜ಼ಿದಂತಿರ್ದ ರಣ- ॥
ಕ್ಷಿತಿತಳಮಂ ಕಂಡರಿ ನಿಜ ।
ಸತಿಯ ವಿಯೋಗಾರ್ತತೇಜಸಂ ಸುಗ್ರೀವಂ ॥೧೯೭॥

ಕಂಡಿದೇನೆಂದು ಬೆಸಗೊಳ್ವುದುಮದನಜ಼ಿವನೊರ್ವನಿಂತೆಂದಂ: ಬಳಾಚ್ಯುತರ್ ಬಂದು,

ಶಂಬುಕನಂ ಕೊಂದಸಿರ ।
ತ್ನಂಬಡೆದರ್ಚಂದ್ರನಖಿಯ ಪುಯ್ಯಲ್ಗತ್ಯಾ- ॥
ಡಂಬರದಿನೆತ್ತಿ ಬಂದುದ ।
ನಂಬರಚರಬಲಮನೊಂದೆ ಮೆಯ್ಯೊಳೆ ಕೊಂದರ್ ॥೧೯೮॥

ಖರದೂಷಣರಂ ಕೊಂದ ।
ವಿರಾಧಿತಂಗಮನ ಪೂರ್ವವೃತ್ತಿಯನಿತ್ತ- ॥
ಸೆರಗಿಲ್ಲದವರ್ಕಾರಣ ।
ಪುರುಷಪ್ರಾತಾಳ ಲಂಕೆಯೊಳ್ಬಂದಿರ್ದರ್ ॥೧೯೯॥

ಅನುಜಂ ಲಕ್ಷ್ಮಣನಗ್ರಜ ।
ನನಂತಬಳನಪ್ಪ ರಾಮಚಂದ್ರಂ ಸಕಳಾ- ॥
ವನಿಪತಿ ತತ್ಪದಸೇವೆಯಿ ।
ನನಾಕುಳಂ ತೀರ್ಗುಮಾರ ಪಗೆಯುಂ ಬಗೆಯುಂ ॥೨೦೦॥

ಗರಳಗ್ರೀವನಹೀಂದ್ರನಿಂದು ಮೃಗಲಕ್ಷ್ಮಂ ಶಂಕರಂ ನೀಳಕಂ-
ಧರನೆಂದೇಳಿಸೆ ತನ್ನ ನಿರ್ಮಳಯಶಂ ದಿಕ್ಕಾಮಿನೀಮೌಕ್ತಿಕಾ-
ಭರಣಂ ಕಾಯಲುಮಿಾಯಲುಂ ನೆಱೆವ ಪುಣ್ಯಾತ್ಮಂ ಪರಾರ್ಥಪ್ರಿಯಂ
ಪುರುಷಾರ್ಥಾಯತನೈಕರತ್ನಕಳಶಂ ಸಾಹಿತ್ಯವಿದ್ಯಾಧರಂ ॥೨೦೧॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಸೀತಾಹರಣ ವರ್ಣನಂ
ನವಮಾಶ್ವಾಸಂ



# ೧೦. ದಶವದನವಂಶ ವರ್ಣನಂ

ಶ್ರೀಲಲನಾಸ್ತನಭರನಿಬಿ ।
ಡಾಲಿಂಗನಕುಂಕುಮಾಂಕಿತೋರಸ್ಸ್ಥಳನು- ॥
ರ್ವೀಲೋಕಮಂಡನಂ ಮಹಿ ।
ಮಾಲಂಬನ ಚಾರುಚರಿತನಭಿನವಪಂಪಂ ॥೧॥

ಎನೆ ಮನದೆಗೊಂಡು ಸುಗ್ರೀವನಾ । ಮಹಾನುಭಾವರಪ್ಪ ರಾಮಲಕ್ಷ್ಮಣರಿಂದೆನ್ನ ಪಗೆಯುಂ ಬಗೆಯುಂ ತೀರ್ಗುಮೆಂದು ನಿಶ್ಚಯಂ ಗೆಯ್ದು ನಿಜಾಗಮನಮಂ ವಿದಿತಂ ಮಾಳ್ಪಂತು ಮುಂದೆ ವಿರಾಧಿತನಲ್ಲಿಗೆ ದೂತನಂ ಕಳಿಪಿ,

ಬಲಸಹಿತಂ ಸುಗ್ರೀವಂ ।
ಬಲನಾರಾಯಣರ ಬಲದೊಳಭಿಮತಮಂ ತೀ- ॥
ರ್ಚಲೊಡರ್ಚಿ ವಿಯನ್ಮುಖಮಂ ।
ಬಲಿಮುಖ ಜಯವೈಜಯಂತಿ ಚುಂಬಿಸೆ ಬಂದಂ ॥೨॥

ಅಂತು ಬಂದು ಪುರಮಂ ಪುಗುವ ಸಮಯದೊಳ್ ಲಕ್ಷ್ಮಣನೀತನಾರ್ಗೆನೆ ವಿರಾಧಿತನಿಂತೆಂದಂ: ಕಿಷ್ಕಿಂಧನಗರಾಧಿನಾಥನುಂ ಕಪಿಧ್ವಜ ಕುಲಧ್ವಜನುಂ ಸೂರ್ಯಜಯತನೂಜನುಂ ಬಾಲಿಭಟ್ಟಾರಕರಿಂ ಸೇರ್ಗಿಟಿ'ಯನುಮಂಗದನ ಜನಕನುಮಪ್ಪ ಸುಗ್ರೀವಂ ನಿಮ್ಮ ನೋಲಗಿಸಲ್ಬಂದನೆಂದು ಬಿನ್ನವಿಸುವನ್ನೆಗಂ,

ಅವಿಚಳಿತಧೈರ್ಯನುತ್ತುಂ ।
ಗವಂಶನಪ್ರತಿಮಸಹಜಸತ್ತ್ವಂ ಕಪಿಕೇ- ॥
ತುವುದಾತ್ತಂ ಬಂದಂ ನಡೆ ।
ವ ವರ್ಷಧರಶೈಳಮೆಂಬಿನಂ ಸುಗ್ರೀವಂ ॥೩॥

ಅಂತು ಬಂದು ರಾಮಲಕ್ಷ್ಮಣರ ಚರಣಕಮಲಕ್ಕೆಱಗಿ ತನಗೆಱಗಿದ ವಿರಾಧಿತನಂ ಪರಸಿ ಪಿಯಮಿತಾಸನದೊಳಿರ್ಪುದುಮುದಾತ್ತರಾಘವಂ,

ಕುಶಲಮೆ ನಿಮಗೆನೆ ನಿಜಪದ ।
ಕುಶೇಶಯಕ್ಕೆಱಗುವನಿತು ಸೃಪಾಯ್ತೆನಗಿಂ ॥
ಕುಶಲಮೆ ನರೇಂದ್ರ ಪೆಱರಿಂ ।
ಕುಶಲಂ ದ್ವಿಪ ದುಪಹತಂಗೆ ಸಮನಿಸಿದಪುದೇ ||೪||

ಎಂಬುದುಮನಂತರಂ ಲಕ್ಷ್ಮೀಧರನಿವರೇನಿಮಿತ್ತಂ ಬಂದರೆಂಬುದಂ ಜಾಂಬವಂ ಮುಕುಳಿತಕತಸರೋಜನಿಂತೆಂದಂ :

ಸುಗ್ರೀವನ ಕುಲವಧು ಕಂ ।
ಬುಗ್ರೀವೆ ಸುತಾರೆಯೆಂಬಳಾ ಸತಿಯೊಳ್ತೊ- ॥
ಟ್ಟಾಗ್ರಪದಿಂದರಮನೆಯಂ ।
ಸುಗ್ರೀವನ ರೂಪುಗೊಂಡು ಖಳನೊಳಪೊಕ್ಕಂ ||೫||

ಒಳಗಣ ಪೊಱಗಣ ಕಾಪಿನ ।
ಕುಳವೃದ್ಧರುವಂಗರಕ್ಕರುಂ ಪಡಿಯಱವುಂ ॥
ಖಳನಂ ಸುಗ್ರೀವನೆ ಗೆ ।
ತ್ತೊಳಪುಗಲಿತ್ತರ್ವಿಚಿತ್ರಮವನ ಚರಿತ್ರಂ ||೬||

ಒಂದಚ್ಚೆನೊಲೊತ್ತಿದ ತೆಱ ।
ದಿಂದಿರ್ದೊಡಮವನ ಕೈತಮಂ ಕಂಡು ಲತಾ- ॥
ಸುಂದರಿ ಮಾಯಾವಿಯ ರೂ ।
ಪೆಂದಱಿದಳ್ಸತಿಯ ಸೃಪನದನೇವೊಗಳ್ವೆಂ ||೭||

ಎಱೆಯನ ಕುಱಿಪುಗಳಂ ತ ।
ನ್ನಱಿವನ್ನವನವನ ನನುವಿನೊಳ್ಕಾಣದಿವಂ ॥
ಪೆಱನೆಂದಱಿದವನೆರ್ದೆ ಪಡಿ ।
ದೆಱೆವಿನಮೋವರಿಯ ಪಡಿಯನಾ ಸತಿ ಕೆತ್ತಳ್ ||೮||

ಹರಿಣಾಕ್ಷಿ ಸೆಜ್ಜೆವನೆಯೋ ।
ವರಿಯೊಳ್ಮೆಯ್ಗರೆಯೆ ಬಗೆಯೊಳೊಗೆದುಮ್ಮಳದಿಂ ॥
ದೆರೆದಪ್ಪಲ್ಪಡೆಯದೆ ಖಳ ।
ನೆರೆದಪ್ಪಿದ ದಂದಶೂಕನಂದದಿನಿರ್ದಂ ||೯||

ಆ ಸಮಯದೊಳುದ್ಯಾನದಿ ।
ನೀ ಸುಗ್ರೀವಂ ಸ್ವಕೀಯಭವನಕ್ಕೇಱ್ತಂ- ॥

ದಾ ಸುಗ್ರೀವಂ ಗೊಡ್ಡ ।
ಕ್ಕಾಸುರಮನೆ ಮಸಗಿ ಕಾವಲುದ್ಯತನಾದಂ ॥೧೦॥

ಅವನುಂ ಬವರಕ್ಕೊಡರಿಸಿ ।
ದವಸರದೊಳ್ದಿಟದ ಪುಸಿಯ ಸುಗ್ರೀವನ ಭೇ- ॥
ದವನಱಿಯದೆ ಬಾರಿಸಿದ ।
ರ್ಬವರಮನಾಪ್ತಪ್ರಧಾನಸೇನಾಮುಖ್ಯರ್ ॥೧೧॥

ಮೂವತ್ತಕ್ಷೌಹಿಣಿ ಸಹಿ ।
ತಾವಧುವಂ ಕಾದು ವಾಲಿದೇವಸುತಂ ರಾ- ॥
ಜಾವಸಥದೊಳಿರ್ದಂ ಶೌ ।
ರ್ಯಾವಸಥಂ ಚಂದ್ರರಶ್ಮಿ ದೋರ್ಬಳದೃಪ್ತಂ ॥೧೨॥

ಆ ಕ್ಷಣದೊಳೇಳಕ್ಷೌಹಿಣೀಬಲಂಬೆರಸಂಗದಕುಮಾರಂ ಮಾಯಸುಗ್ರೀವನಂ ತಂದೆಯೆಂಬ ಸಂದೆಗದಿಂ ಸ್ವೀಕರಿಸಿ ನಳನುಮನಿತೆಬಲಂ ಬೆರಸು ಸುಗ್ರೀವನಂ ಪೊಱಪೊಱಲೊಳ್ಸೆಱಗೆಯ್ದಿರೆಂದು ನಿಯಮಿಸಿ ಬೇಱವೇಱ ಬಲಿದಿರ್ಪುದುಮಿಾ ಸುಗ್ರೀವಂ ಹನುಮನಲ್ಲಿಗೆ ಪೋಗಿ ನಿಜವೃತ್ತಾಂತಮಂ ನಿವೇದಿಸುವುದುಂ,

ಹನುಮ ಮಾಯಾಸುಗ್ರೀ ।
ವನನಿಕ್ಕುವೆನೆಂದು ಬಂದು ಭಾವಿಸಿ ಸುಗ್ರೀ- ॥
ವನದಾವನನೆಂದುಮಱಯದೆ ।
ಮುನಿದಿಱಯದೆ ಮಗುೞ್ದು ಪೋದೊಡೇೞನಾದಂ ॥೧೩॥

ಅಂತಾತಂಪೋಪುದುಮಿಾ ಸುಗ್ರೀವಂ ನಿಮ್ಮ ದೋರ್ಬಲದಗುರ್ವುಮನವ್ಯವಹಿತಪರಹಿತವ್ಯಸನಮುಮಂ ಕೇಳ್ದು ಸುತಾರಾವಿರಹದಿಂ ಚಂಡಕಿರಣಮನಾಸೆಗೆಯ್ವಿರುಳ ಚಕ್ರವಾಕದಂತೆ ನಿಮ್ಮ ಚರಣಮ ಶರಣೆಂದು ಬಂದನೆಂಬುದಮುದಾತ್ತ ರಾಘವಂಲಕ್ಷ್ಮಣನ ಮೊಗಮಂ ನೋಡಿ,

ಎಮ್ಮೊಂದಿಗನೀತನ ಮನ ।
ದುಮ್ಮಳಮಂ ಕಳೆವುದೆಂದು ಕಾರುಣ್ಯಪರಂ ॥
ತಮ್ಮಂಗೆ ನುಡಿದನರ್ಥಿಗ ।
ಳಂ ಮನ್ನಿಸುವಟ್ಟೆ ರಾಘವಂಗೆ ನಿಸರ್ಗಂ ॥೧೪॥

ಈ ದೊರೆಯನುಮಂ ಕಾಡಿದ ।
ನಾ ದೊರೆಯಂ ಹನುಮನಳ್ಕಿ ಕಾದದೆ ನೆವದಿಂ ॥

ಪೋದನವನಧಿಕನೆನ್ನದೆ ।
ಕಾದಿ ಕೊಲಲ್ಬಗೆದನೇನುದಾತ್ತನೊ ರಘುಜಂ ॥೧೫॥

ಎನೆ ರಾಮಾನುಗ್ರಹಕ್ಕೆ ಸುಗ್ರೀವಂ ಸಮಾಹಿತಚಿತ್ತನಾಗಿ ವಿರಾಧಿತನ ಮೊಗಮಂ ನೋಡಿ

ವಿರಹವ್ಯಾಕುಳರಂತೆ ದೇವರುಸಿರ್ದೀ ವೃತ್ತಾಂತಮೇನೆಂದ ವಾ-
ನರಚಿಹ್ನಂಗೆ ವಿರಾಧಿತಂ ತಿಳಿಪಿದಂ ಕಾಂತಾರದೊಳ್ಜಾನಕೀ-
ಹರಣಂ ವಂಚನೆಯಿಂದಮಾದ ತೆಱಿನಂ ಸಂಗ್ರಾಮಮಾದಂದಮಂ
ಖರನುಂ ದೂಷಣನುಂ ಜನಾರ್ದನನ ಕೆಯ್ಯೊಳ್ಕಾದಿ ಸತ್ತಂದಮಂ ॥೧೬॥

ಆರುಯ್ದರೆಂದುಮಱಿಯದೆ ।
ನಾರಾಯಣನಿರ್ದನಱಿದೊಡುಯ್ದನ ಕರುಳಿಂ ॥
ವೀರಶ್ರೀಗೆ ಭುಜಾಸಿಯ ।
ಧಾರಗೃಹದಲ್ಲಿ ತೋರಣಂಗಟ್ಟದಿರಂ ॥೧೭॥

ಎನೆ ಸುಗ್ರೀವನವಸರಂ ಬಡೆದು ಸಪ್ತದಿವಸಕ್ಕೆ ದೇವಿಯ ಸುದ್ದಿಯುಂ ತರ್ಪೆನೆಂದತಿಪ್ರತಿಜ್ಞೆಗೆಯ್ದು ಬಿನ್ನವಿಸೆ ಮೆಚ್ಚಿ ನಿಚ್ಚವಯಣದಿಂ ಬಲನುಮಚ್ಯುತನುಂ ವಿರಾಧಿತನ ಬಲಂಬೆರಸು ಕಿಷ್ಕಿಂಧಪುರಮನೈದಿ ದೂತನನ್ನುವುದು ಮಾತಂ ಯಮದೂತನಂತೆ ಬಂದು ಸಾಹಸಗತಿಯಂ ಕಂಡು,

ದೇವರ್ಕಾಪೊಡಮಿದೆ ನಿನ್ನ ಪಗೆಯಂ ಸುಗ್ರೀವ ಕೊಂದೀವನೆಂ-
ದಾವೀರಾಗ್ರಣಿ ವಿಗ್ರಹವ್ಯಸನದಿಂದೇಟ್ಟಿಂದನಿಂ ಪ್ರಾಣಮಂ
ಕಾವುದ್ಯೋಗಮಿದೊಂದೆ ಮತ್ಪತಿಯ ಪಾದಾಂಭೋಜಮಂ ಬಂದು ಕಾ-
ಣ್ಜೀವಾಕರ್ಷಣವಿದ್ಯೆಯಂ ಮೆಱಿಯದನ್ನಂ ರಾಮರೌದ್ರೇಷುಗಳ್ ॥೧೮॥

ಎಂದು ಗಜಱಿ ಗರ್ಜಿಸಿದ ದೂತನ ಮಾತಿಂಗೆ ಮುಳಿದು ಮುಳಿಸಂ ಮೊಗಕ್ಕೆ ತಾರದೆ,

ಸೆರಗಂ ಬೆರಗಂ ಬಗೆಯದೆ ।
ಪುರಮಂ ಪೊಱಮಟ್ಟು ಕೃತಕಸುಗ್ರೀವಂ ಕೇ- ॥
ಸರಿಯಂತೆ ಗರ್ಜಿಸುತ್ತುಂ ।
ನಿರಂಕುಶಂ ಮುಟ್ಟೆವಂದನಿದಿರೊಡ್ಡಣಮಂ ॥೧೯॥

ಆಜಿಗಿದಿರೆತ್ತಿ ಬರೆ ಮಾ ।
ಯಾ ಜೀವಿಯನಂದು ಕಂಡು ವಾನರಚಿಹ್ನಂ ॥
ಸ್ತ್ರೀಜ ಕೋಪಾನಳನು ।
ತ್ತೇಜಿಸೆ ಕಾಳ್ಕಿರ್ಚು ನೆಗೆದ ನಗದಂತಿರ್ದಂ ॥೨೦॥

ಆಕ್ಷಣದೊಳ್ಪರಸ್ಪರ ನಿರೀಕ್ಷಣದಿಂ ಮುನಿಸುಣ್ಮೆ ಪೊಣ್ಮೆ ರ-
ಕ್ತೇಕ್ಷಣರಾತ್ಮ ಶಕ್ತಿಗೆ ಶರೀರಬಲಕ್ಕನುರೂಪಮಪ್ಪುವಂ
ಲಕ್ಷಣಯುಕ್ತಮಪ್ಪ ಗದೆಯಂ ತಳೆದಿರ್ವರುಮಿರ್ವಲಂ ಬಿಗು-
ರ್ತೀಕ್ಷಿಸೆ ಮಿಾಱಿದರ್ವಿಕಟ ಶೃಂಗಸಮಗ್ರ ಕುಳಾಚಳಂಗಳಂ ॥೨೦॥

ಅಂತು ಗದಾಯುದ್ಧ ಸನ್ನದ್ಧರ್ಪಂಚವಿಧಸ್ಥಾನಕದೊಳಷ್ಟವಿಧಚಾರಣೆಯೊಳತಿ-
ಚಟುಳರಾಗಿ,

ನಡೆವ ನಡೆ ಪೊಯ್ವ ಗದೆಯಂ ।
ಬಿಡೆ ಬೀಸುವ ಪೊಯ್ಲನೊಡನೆ ಕಟ್ಟುವ ಕಮಪುಂ ॥
ಕಡುವಿನ್ನಣಮುಂ ತಮಗಳ ।
ವಡೆ ತಾಗಿದರಿಳೆಯೊಳಾಗಸಂ ತಾಗುವೋಲ್ ॥೨೧॥

ಉರವಣೆಯಿಂ ಬಾಹ್ಯಾಭ್ಯಂ ।
ತರಂಗಳಂ ವಾಮದಕ್ಷಿಣಂಗಳನಱಿದೊ- ॥
ರ್ವರನೊರ್ವರ್ಪೊಯ್ಯೆ ಗದಾ ।
ಪರಿಹರಣಂ ಪಡೆದುದಿರ್ವಲಕ್ಕಂ ಭಯಮಂ ॥೨೨॥

ಭರದಿಂ ಪೊಯ್ವುದುಮೋರೊ ।
ರ್ವರ ಗದೆಯೊಳ್ಗದೆ ಪಳಂಚಿ ಕಿಡಿ ಸೂಸೆ ರಣಾ- ॥
ಜಿರದೊಳಕಾಂಡದ ಕೆಂಡದ ।
ಸರಿ ಸುರಿವವೊಲಾದುದವರದೇನತಿಬಳರೋ ॥೨೩॥

ಓರನ್ನರ್ತಮ್ಮೊಳಗಾ ।
ಕಾರದಿನಿನಿತಲ್ತು ಸತ್ವದಿಂ ಸಾಹಸದಿಂ- ॥
ದೋರನ್ನರ್ಬಿನ್ನಣದಿಂ ।
ಬೀರದಿನೋರನ್ನರನ್ನೃತ ಖುತ ಸುಗ್ರೀವರ್ ॥೨೪॥

ಆ ಸಮಯದೊಳ್ ಸಂವರ್ತಸಮಯದ ಕೃತಾಂತನಂತೆ ಮಾಮಸಕಂ ಮುಸಗಿ,

ಬೀಸುತ್ತುಂ ಕಾಲದಂಡಪ್ರತಿಮಘನಗದಾದಂಡಮಂ ಕಣ್ಗಳಿಂದಂ
ಸೂಸುತ್ತುಂ ಕೆಂಡಮಂ ಮೇಳಿಸೆ ಜಯವಧು ತನ್ನಚ್ಚದೋರ್ದಂಡಮಂ ಸಂ-
ತ್ರಾಸಂ ಸೇನಾದ್ವಯಕ್ಕಂ ಸಮನಿಸೆ ತೆಱಪಂ ಪಾರ್ದು ಸುಗ್ರೀವನಂ ಮಾ-
ಯಾ ಸುಗ್ರೀವಂ ಗದಾದಂಡದಿನಡಸಿ ಸಿಡಿಲ್ಪೊಯ್ವವೋಲ್ಕಾಯ್ದು ಪೊಯ್ದಂ ॥೨೫॥

ಅಂತು ಬಸವೞಿದು ಬೀೞಿ ಪೊಯ್ದು ಮೂರ್ಛೆವೋದನಂ ಗತಪ್ರಾಣನಾದನೆಗೆತ್ತು ಮಾಯಾವಿ ಮಗುೞಿ ಪೋಪುದುಂ ಜಾಂಬವಾದಿಗಳ ಮಾಳ್ಪ ಶಿಶಿರೋಪಚಾರದಿಂದೆಂತಾನು-ಮೆೞ್ಚತ್ತ ಸುಗ್ರೀವನ ಮೊಗಮನುದಾತ್ತ ರಾಘವಂ ನೋಡಿ,

ತನು ಪರಿಭಾವಿಸೆ ನಿನಗಂ ।
ತನಗಂ ಸಾದೃಶ್ಯಮಾದಡಕ್ಕುಮಪಾಯಂ ॥
ನಿನಗೆಂದು ಬೆರ್ಚಿದೆಂ ತೀ ।
ರ್ಚನೆ ಮೊನೆಯೊಳ್ನಾಳೆ ನಿನ್ನ ಪಗೆಯಂ ಬಗೆಯಂ ॥೨೭॥

ಎಂದು ನುಡಿದು ಮಱುದಿವಸಂ ರಣಭೂಮಿಗೆ ಬಂದು ಮಾಯಸುಗ್ರೀವನಂ ಕಂಡು,

ಕಡುಮುಳಿಸಿಂ ಕಟ್ಟಿದಿರೊ ।
ಳ್ನಡೆವೆಡೆಯೊಳ್ ರಾಮನಾತಂ ಲಕ್ಷ್ಮಣನಿಂ ॥
ಪಿಡಿಯಿಸಿದಂ ಮೊನೆಯೊಳ್ಮಾ ।
ರ್ಪಡಡೆಗಂಡೊಡೆ ಸೆಡೆವ ಗಂಡನೇ ಸುಗ್ರೀವಂ ॥೨೮॥

ಆ ಸಮಯದೊಳ್,

ಮೊನೊಯೊಳ್ಮಾಱಾಂತ ಚಾತುರ್ಬಲಮನಳಱಿ ಬೆಂಕೊಂಡು ಮಾರ್ಕೊಂಡು ಸುಗ್ರೀ-
ವನನಾವಂ ಕಾವೊಡಂ ಕೊಂದಪೆನೆನಗಿದಿರಾರೆಂದು ಮೆಯ್ವೆರ್ಚಿದುದ್ವೃ-
ತ್ತನನಿತ್ತಿತ್ತಂ ಮಗುಳ್ಪೋಗದಿರೆನೆ ರಘುಜಂ ಕೇಳ್ದು ಪೊಯ್ವೆತ್ತ ಪಂಚಾ-
ನನದಂತೆಯ್ತಂದನಾ ಸಾಹಸಗತಿವರೆಗಂ ಕಂಡರೊಳ್ಗಂಡನಾವಂ ॥೨೯॥

ಅಂತೆಯ್ದೆವರ್ಪುದುಂ,

ಆ ರಾಮನಿದಿರೊಳಾ ವಿ ।
ದ್ಯಾರೂಪಂ ಪಿಂಗಿ ಪೋಗೆ ಸಾಹಸಗತಿ ತ- ॥
ಪ್ತಾರಕ್ತಾಯಸಪಿಂಡಂ ।
ನೀರೊಳಗಟ್ಟಿಂತೆ ತನ್ನ ತೇಜಂಗೆಟ್ಟಂ ॥೩೦॥

ಪರಿಹರಿಸಿ ಪೋಗೆ ಮಾಯಾ ।
ಸ್ವರೂಪಮಳವಱಿದನಿಲ್ಲ ಖೇಚರಪತಿ ಭೀ- ॥
ಕರರೂಪಂ ನಿಜದಿಂದಂ ।
ಪೆರೆಯಿಕ್ಕಿದ ಕೃಷ್ಣಸರ್ಪನಿರ್ಪಂತಿರ್ದಂ ॥೩೧॥

ಆಗಳಂಗದಂ ನಿಜಬಳಸಹಿತಂ ಸುಗ್ರೀವನಂ ಬಂದು ಕೂಡೆ ಲಕ್ಷ್ಮಣದೇವನೆಲವೊ ಸುಗ್ರೀವನಂ ಶರಣ್ಬೊಕ್ಕು ಜೀವಿಸೆನೆ ಮುನಿದು ಸಾಹಸಗತಿ ರಘುವೀರನಂ ಮುಟ್ಟೆವಂದು,

ಎಂದು ಪೆಱಗಿಕ್ಕಿ ಪಗೆಯಂ ।
ಮುಂತಾದಂತಣ್ಮೆ ನುತ್ತುಮಿಸೆ ನಗೆ ರಾಮಂ ॥
ದಂತಾಂಶು ನಿಮಿರ್ದುವವನಸು ।
ವಂ ತೆಗೆಯಲ್ಕಿಮಿರ್ದ ಕಾಲಪಾಶಂಗಳವೋಲ್ ॥೩೨॥

ಅಂತು ನಸುನಕ್ಕು,

ತೆಗೆವಂಬಂ ದೊಣೆಯಿಂ ತೊಡರ್ಚೆ ತಿರುವಾಯೊಳ್ಕರ್ಣಮೂಲಂಬರಂ
ತೆಗೆದೇಸಾಡೆ ಬಲಂ ಜಿತಾಹಿತಬಲಂ ತನ್ನಾಯಕಂ ದೈವಿಕಂ
ತೆಗೆದತ್ತಾತನ ತೋಳಲಿರ್ದ ವಿಜಯಶ್ರೀಕಾಂತೆಯಂ ಪ್ರಾಣವಾ-
ಯುಗಳಂ ಮೈದೆಗೆವಂತು ವಾನರಪತಾಕಸ್ವಾಂತಚಿಂತಾಜ್ವರಂ ॥೩೩॥

ಅಂತು ಸಾಹಸಗತಿ ಗತಪ್ರಾಣನಾಗೆ,

ನೋಡಿದೊಡೋಡಿ ಪೋಯ್ತವನ ನಚ್ಚಿನ ವಿದ್ಯೆ ರಘುಪ್ರವೀರನೇ-
ಸಾಡಿದೊಡೊಂದೆ ಬಾಣಮವನಂ ನಡೆ ನೋಡಿ ನೆಲಕ್ಕೆ ಸೋವತಂ
ಮಾಡಿದುದೆಂದು ತೂಗಿ ತಲೆಯಂ ಪೊಗಟ್ದಂ ತನಗಿಷ್ಟಸಿದ್ಧಿಯಂ
ಮಾಡಿದ ದೃಷ್ಟಿಪಾತ ಶರಪಾತ ಚಮತ್ಕೃತಿಯಂ ಕಪಿಧ್ವಜಂ ॥೩೪॥

ಆಗಳಖಿಳ ಜಯಜಯಧ್ವಾನಮೊದವೆ ರಾಘವನಮೋಘಶರಾಸನಮಂ ಪೂಜಿಸಿ ಕರಸರೋಜಮಂ ಮುಗಿದು,

ದೇವರ್ಬಿಜಯಂ ಗೆಯ್ದು ಮ ।
ದಾವಸಥಕ್ಕೆನಗೆ ರಾಗಮಂ ಕೇಸಡಿ ಕೆಂ- ॥
ದಾವರೆವೂವಿಂದೀವುದು ।
ಸೇವಾಪದವಿಯೊಲೆ ನಿಲಿಪುದೆನ್ನನ್ವಯಮಂ ॥೩೫॥

ಎಂದು ಬಿನ್ನವಿಸಿ ಕಪಿಧ್ವಜಂ ರಘುಕುಲಧ್ವಜರಪ್ಪ ರಾಮಲಕ್ಷ್ಮಣರಂ ಮುಂದಿಟ್ಟು ವಂದನಮಾಲಾ ಮನೋಹರಮಂ ಕಿಷ್ಕಿಂಧಪುರಮಂ ಪುಗುವ ಸಮಯದೊಳ್,

ಆ ಮುಕ್ತಾಫಲಕಾಂತಿಯೊಳ್ ಸೆಣಸುವಂಗಚ್ಛಾಯೆಯಿಂ ರಾಜಿಪಂ
ರಾಮಂ ಲಕ್ಷ್ಮಣನಾ ಹರಿನ್ಮಣಿಮಯೂಖಶ್ಯಾಮನೆಂದೀಕ್ಷಣ-
ಪ್ರೇಮಂ ಕೈಮಿಗೆ ಸೋಲ್ತು ಕಾಮಿನಿಯರಂ ಸಂಮೋಹನಾಸ್ತ್ರಂಗಳಿಂ
ಕಾಮಂ ಕರ್ಬಿನ ಬಿಲ್ಲೊಳೆಚ್ಚು ಮೆಱೆದಂ ಚಾಪಾಗಮಪ್ರೌಢಿಯಂ ॥೩೬॥

ಅಂತು ಪುರಮಂ ಪೊಕ್ಕರಮನೆಗೆ ಬಿಜಯಂಗೆಯ್ದು ಕರುಮಾಡದ ಮುಂದಣ ಮಣಿಮಂಟಪದೊಳಿಕ್ಕಿದ ಮಣಿಮಯಾಸನಮನಲಂಕರಿಸಿ ರಾಮಲಕ್ಷ್ಮಣರಿರ್ದುದು ಸುಗ್ರೀವಂ

ಮಧುಪರ್ಕಪೂರ್ವಕಮಪೂರ್ವ ವಸ್ತು ವಾಹನಂಗಳನೋಲಗಿಸಿ,

ಪರಿಭವಭಾರಮಂ ಕಳೆದು ಬಾಂಧವಪುತ್ರಕಲತ್ರಮಿತ್ರರೊ-
ಳ್ನೆರಪಿ ಮದನ್ವ್ಯಾಗತಪದಸ್ಥಿತಿಯಂ ದಯಗೆಯ್ದೆ ದೇವ ದೇ-
ವರ ದಯೆಗೆನ್ನ ವಂಶಮನಿತುಂ  ಬೆರಸಾಳ್ವಿಸಗೆಯ್ದು ಬಾಳ್ವಿನಿ-
ನ್ನೆರಡನಮೋಘಮಾಂ ನುಡಿದೊಡುನ್ನತ ರಾಮ ಕೃತಘ್ನನಲ್ಲನೇ ॥೩೭॥

ಎಂದುರಾಘವನ ಪದಪಯೋಜಸೇವಾಪರಮಲಾಭಮಂ ಪಡೆದು,

ದಿನನಾಥಂಗಲ್ಲದೆ ಪ ।
ದ್ಮಿನಿಗಳ್ಮೊಗಮಿಾಯದಂತೆ ನಿನಗಲ್ಲದೆ ಸ- ॥
ಜ್ಜನವಾಗೆವೆಂದು ರಘುನಂ ।
ದನ ಕನ್ಯಾವ್ರತದೊಳೆನ್ನ ತನುಜೆಯರಿರ್ದರ್ ॥೩೮॥

ಎಂದು ಶುಭದಿನಮುಹೂರ್ತದೊಳುತ್ಸವಾನಕ ಧ್ವಾನಮೊದವೆ,

ವನಧಿಗೆ ಕುಲಾಚಲಂ ವಾ ।
ಹಿನಿಗಳನೀವಂತೆ ಮಿಾನನಯನದ ನಿಜನಂ- ॥
ದನೆಯರನಿತ್ತಂ ರಘುನಂ ।
ದನಂಗೆ ರಾಜೀವಮುಖಿಯರಂ ಸುಗ್ರೀವಂ ॥೩೯॥

ಅಂತುಪನ್ನಿರ್ವರ್ ಖೇಚರಕನ್ನೆಯರಂ ಮದುವೆನಿಂದು,

ನಸುಸೋಂಕಿಂ ಬಾಲೆಯರಂ ।
ಬಸದಾಗಿಸಿ ನೆನೆದು ಸೀತೆಯಂ ರಾಮಂ ದೂ- ॥
ರಿಸಿದಂ ಚಂದ್ರಿಕೆಯಂ ಸೇ ।
ವಿಸಿದ ಚಕೋರಕ್ಕೆ ಬಾಳ್ತೆಯೇ ತುಹಿನಕಣಂ ॥೪೦॥

ತನುಲತೆಯುಂ ಮರಾಳಗತಿಯುಂ ಪಿಕನಿಸ್ವಸಮುಂ ವಿಯಚ್ಚರಾಂ-
ಗನಯೆರ ಲೋಚನೋತ್ಪಲಮುಮನನಹೇಮಸರೋಜಮುಂ ಘನ-
ಸ್ತನಯುಗಕೋಕಮುಂ ಬಗೆಗೆ ಮಾಡದೆ ಖೇದಮನೇಕೆ ಮಾಡುಗುಂ
ಜನಕಸುತಾವಿಯೋಗವಿಧುರಂಗೆ ರಘುಪ್ರವರಂಗೆ ರಾಗಮಂ ॥೪೧॥

ಜನಕತನೂಜೆಯ ಘನಕುಚ ।
ಘನಕುಚ ಘನಜಘನ ಭಾರದಿಂ ಬಳ್ಕುವ ರಾ- ॥
ಮನ ಚಿತ್ತಮಿತರವನಿತಾ ।
ಜನದತ್ತಡಿಯೆತ್ತದಿರವಿದೇನಚ್ಚರಿಯೇ ॥೪೨॥

ಅನುರಾಗಂ ಖಚರಿಯರಿಂ ।
ಜನಿಯಿಸದಿರೆ ಜನಕರಾಜಸುತೆಯಂ ರಾಮಂ ॥
ನೆನೆದಂ ರಾಗೋತ್ಕಂಠಂ ।
ನೆನೆವಂತಿರೆ ಚೂತಕಳಿಕೆಯಂ ಕಳಕಂಠಂ ॥೪೩॥

ಅಂಬರಚರನುಂ ತಾರಾ ।
ಬಿಂಬಾಧರಮಧುರಮಧುವನಾಸ್ವಾದಿಸಿ ಚಿ- ॥
ತ್ತಂ ಬೆಂದು ನೆಗೆಯೆ ರಾಗರ ।
ಸಾಂಬುಧಿಯೊಳಗಟ್ಟು ಮೂಡಿ ಮುಳುಗುತ್ತಿರ್ಕುಂ ॥೪೪॥

ಅನುರಕ್ತಂ ನಲ್ಲಳನೆಳ ।
ಸಿ ನಿರ್ದಯಾಲಿಂಗನೋನ್ಮುಖಂ ಸಮರತಸಂ-
ಜನಿತಸುಖಂ ದಿನಮುಖದ
ಜ್ಝಿನಿಗೆಳಸಿದ ಮಧುಕರಂಗೆ ಕಿಂಕರನಾದಂ ॥೪೫॥

ಅಂತಿಷ್ಟವಿಷಯ ಸಂತುಷ್ಟನಾಗಿ

ಹಿಮಕಿರಣಂ ಸಂಧ್ಯಾರಾ ।
ಗಮನುಟಿಳಿವಂತಾಗಳಂತೆ ಸುಗ್ರೀವಂ ರಾ- ॥
ಗಮನಪುಟಿದು ರಘುಜನುಪಕಾ ।
ರಮನಾತ್ಮೀಯ ಪ್ರತಿಜ್ಞೆಯಂ ಸ್ಮರಿಯಿಸಿದಂ ॥೪೬॥

ಕೃತಮಱಿಯದನೆಂಬೀ ದು ।
ಶ್ಶ್ರುತಿ ಪರೆಗುಮಸತ್ಯದೋಷಮಕ್ಕುಂ ಮುಳಿಗುಂ ॥
ಪ್ರತಿಪನ್ನಿಕೆ ಕಿಡೆ ದಶರಥ ।
ಸುತನಾ ವಿಭು ಮುಳಿವವಂಗೆ ಜವನುಂ ಮುಳಿಗುಂ ॥೪೭॥

ಅಂತು ಮನದೊಳೆ ಮಂತಣಮಿರ್ದು,

ಚಂಡಬಳಂ ಬಳಾಚ್ಯುತರ ಸೀತೆಯ ಸುದ್ದಿಯನಟ್ಟಿ ಮುಂಪ್ರಭಾ-
ಮಂಡಳನಲ್ಲಿಗಂಬಿಕೆಯ ಸುದ್ದಿಗೆ ಸಾಧಿತವಿಶ್ವವಿದ್ಯರಂ
ತಂಡದಿನಟ್ಟಿ ಗುಪ್ತಚರರಂ ಕೆಲರಂ ತಱಿಸಂದು ತಾನುಮಾ-
ಖಂಡಳದಿಙ್ಮುಖಂ ಕತಿಪಯಾನುಚರಂ ತಳರ್ದುಂ ವಿಯಚ್ಚರಂ ॥೪೮॥

ಅಂತು ಗದಾಯುಧಫಳಾಯುಧರಂ ಬೀಟಿಕ್ಕೊಂಡು ಮನಃಪವನವೇಗದಿಂ ಪೋಗುತ್ತುಮಿರೆ,

ಅನುಕೂಳಮಾರುತಾಂದೋ ।
ಳನದಿಂ ಕೈಸನ್ನೆಗೆಯ್ವವೋಲ್ ಗಿರಿಶಿಖರಾ- ॥
ವನಿಯೊಳ್ಮಿಳ್ಳಿಸಿದುದು ಕೇ ।
ತನಪಲ್ಲವಮೊಂದಶೋಕಪಲ್ಲವಶೋಣಂ ॥೪೯॥

ನಗಸಾನುತಳಂ ಮನುಜ ।
ರ್ಗಗೋಚರಂ ಕಟ್ಟೆ ಗುಡಿಯನಾರಿರ್ದಪರ- ॥
ಲ್ಲಿಗೆ ಪೋಗಿ ನೋೞ್ಪೆನೆಂಬೀ ।
ಬಗೆಯಿಂ ಸುಗ್ರೀವನೆಯ್ದೆವರ್ಪವಸರದೊಳ್ ॥೫೦॥

ಬಲಿಮುಖಚೇತನನಂ ಚಕಿ ।
ತಲೋಚನಂ ರತ್ನಜಟಿ ನಿಜಪ್ರಾಣಭಯಾ- ॥
ಕುಲಚಿತ್ತಂ ಪೌಲಸ್ತ್ಯಂ ।
ಕೊಲಲಟ್ಟಿದ ತೀಕ್ಷ್ಣಪುರುಷನೆಂದೀಕ್ಷಿಸಿದಂ ॥೫೧॥

ಆಗಳಾತನಂ ಸುಗ್ರೀವನೆಯ್ದೆವಂದು ನಿನಗಿನಿವಿರಿದು ದುಸ್ತರಮೇಕಾದುದೆಂದು ಬೆಸಗೊಂಡೊಡದಿಂ ಸವಿಸ್ತರಮಱಿಯೆ ಪೇೞೆ ಕೇಳ್ದು,

ವಾನರಚಿಹ್ನಂ ತನ್ನಭಿ ।
ಮಾನಂ ನಿಂದತ್ತು ಪೂಣ್ಕೆ ಸಂದತ್ತೆನಗಂ- ॥
ದೇವೆಸೆದನೊ ದಶವದನಂ ।
ಜಾನಕಿಯಂ ಲಂಕೆಗುಯ್ದನೆಂದಱಿಪಲೊಡಂ ॥೫೨॥

ಅಂತು ಸಂತೋಷದಂತಮನೈದಿ,

ಇಡಿದಿರೆ ಸೀತಾವಿರಹದ ।
ಕಡುಗಟ್ಟಿಲೆ ದಾಶರಥಿಯ ಮಾನಸದೊಳದಂ ॥
ಕಿಡಿಸುವ ಬಗೆಯಿಂ ರತ್ನದ ।
ಸೊಡರಂ ರತ್ನಜಟಿಯಂ ತಂದು ॥೫೨॥

ಅಂತು ತಂದು ಕಾಣಿಸುವುದುಂ,

ನಿಟಿಲತಟಘಟಿತಕರಸಂ ।
ಪುಟಂ ಪಟನ್ಮಣಿಕಿರೀಟರುಚಿಮಂಜರಿಯಿಂ ॥
ಜಟಿಲಿತಮೆನೆ ಪದಪೀಠೀ ।
ತಟಂ ನರೇಂದ್ರಂಗೆ ರತ್ನಜಟಿ ನತನಾದಂ ॥೫೪॥

ಅನಂತರಂ ಜನಾರ್ದನನೀತನಾರ್ಗನೆ ಸುಗ್ರೀವನಿಂದೆಂದಂ :

ಅರ್ಕಜಟಿವೆಸರ ಖಚರಕು ।
ಳಾರ್ಕನ ಸುತನಪ್ಪ ರತ್ನಜಟಿ ರಣಕೇಳೀ- ॥
ಕರ್ಕಶನಾತ್ಮಾಂಬಿಕೆಯನ ।
ವರ್ಕೈತವದುಯ್ವರೆಂದು ಬಿನ್ನವಿಸಿದಪಂ ॥೫೫॥

ಎಂಬುದುಮದಂ ಕೇಳ್ದು,

ಬಿದಿ ಕಣ್ಣಿಟ್ಟವನಾವನಾವನಸುವಂ ಕಾಲಂ ಕಟಿಲ್ಚಲ್ಕಡಂ-
ಗಿದನಾವಂ ಯಮಪಾಶದೊಳ್ತೊಡರ್ದನಾವಂ ದೇವಿಯಂ ಮುಂದುಗಾ-
ಣದೆ ಕಳ್ದುಯ್ದವನೆಂದು ರತ್ನಜಟಿಯಂ ರೋಷಗ್ರಹಾವೇಶಗ-
ದ್ಗದಕಂಠಂ ಬೆಸಗೊಂಡನುತ್ತರಲಿತಾಂಭೋಜೇಕ್ಷಣಂ ಲಕ್ಷ್ಮಣಂ ॥೫೬॥

ಎಂದು ಬೆಸಗೊಳ್ವುದುಂ ರತ್ನಜಟಿ ಕೈಗಳಂ ಮುಗಿದು,

ಸ್ವೈರದಿನಾಂ ಪೋಗುತ್ತಿರೆ ।
ತಾರಾಪಥದೊಳ್ಪಳಂಚಿದುದು ಕಿವಿಯಂ ಹಾ- ॥
ಹಾರವಮುರಿಯೆಣ್ಣೆಯವೋ ।
ಲ್ದೂರಿಸೆಬಗೆಬಗೆಯೊಳೊಗೆಯೆ ಕಾರಣ್ಯರಸಂ ॥೫೭॥

ಕಾಮಾಂಧಂ ಕಳ್ದು ಕೊಂಡುಯ್ದಪನಿದುವೆ ಪದಂ ತೋರ್ಪುದಾರ್ಪುಳ್ಳವರ್ಸಂ-
ಗ್ರಾಮಾವಷ್ಟಂಭಮಂ ಹಾ ಜನಕ ಹಾ ಲಕ್ಷ್ಮಣಾ ಲಕ್ಷ್ಮಣಾ ಹಾ
ರಾಮಾ ರಾಮಾಯೆನುತ್ತುಂ ಜನಕಜೆ ಬಸಿಱಂ ಮೋದಿ ಪುಯ್ಯಲ್ಚೆ ಕೇಳ್ದಾ
ನಾಮಕ್ಕಾನೆಯ್ದಿದೆಂ ರಾಣನೊಳಿಱಿವ ತಕ್ಕಿಂದಮಣ್ಮಾಣ್ಮೆನುತ್ತುಂ ॥೫೮॥

ಅಂದತು ಮೊದಲಿಸಿ ಮುಟ್ಟೆವರ್ಪುದುಂ ಮದೀಯ ಜನಕನೊಳಾದನುಬಂಧಂ ಕಾರಣಮಾಗೆನ್ನೊಳಿಱಿಯದೆ ವಿದ್ಯಾಚ್ಛೇದಂಗೆಯ್ದು ಸೀತೆಯಂ ರಾವಣಂ ಲಂಕೆಗುಯ್ದನೆಂದು ಬಿನ್ನವಿಸೆ,

ರಾವಣನುಯ್ದಂ ಸೀತಾ ।
ದೇವಿಯನೆನೆ ಕೇಳ್ದು ಮನದೊಳುಮ್ಮಳಿಸಿದನಿ- ॥
ಲ್ಲಾ ವಾರ್ತೆವೇೞ್ದವಂಗೆ ಮ ।
ಹೀವಲ್ಲಭನಿತ್ತನಾತನಭಿವಾಂಛಿತಮಂ ॥೫೯॥

ಮೆಱೆದಂ ಸೀತಾಸುದ್ದಿಯ ।
ನಱಿಪಿದ ಖೇಚರನನನ್ವಯಾಗತಪದದೊ- ॥

ಳ್ನಿಱಿಸಿ ಭುಜಬಲದ ಮೆಚ್ಚಿನ ।
ನೆಱನಂ ರಾಘವನ ಮಹಿಮೆಗಿದು ಕೌತುಕಮೇ ॥೬೦॥

ಅಂತು ರತ್ನಜಟಿಯ ಸಪತ್ನನಂ ಪೊಱಮಡಿಸಿ ಕಳೆದು ದೇವೋಪನೀತಕ್ಕರಸು ಮಾಡಿ ಕಿಷ್ಕಿಂಧಪುರಕ್ಕೆ ಬಂದು,

ನಳನೀಳಾಂಗದ ಜಾಂಬವಪ್ರಮುಖಸೇನಾನಾಥರುಂ ಮಂತ್ರಿಮಂ-
ಡಳಮಂ ಬಂಧುಜನಂಗಳುಂ ಬೆರಸು ಸುಗ್ರೀವಂ ನಿಜಾಸ್ಥಾನಮಂ-
ಡಳದೊಳ್ಕಿಂಕರೆ ಭಾವದಿಂದಿರೆ ಮೃಗೇಂದ್ರೋತ್ತುಂಗ ಪೀಠಂಗಳೊ-
ಳ್ಬಳನಾರಾಯಣರಿರ್ದರಪ್ರತಿಹತರ್ಚಂದ್ರಾರ್ಕರಿರ್ಪಂದದಿಂ ॥೬೧॥

ಆ ಸಮಯದೊಳ್ಸೌಮಿತ್ರಿ ಸುಗ್ರೀವಮಂ ನೋಡಿ,

ಅರಸಿಯ ಸುದ್ದಿಗೇಳ್ದುಸಿರದಿರ್ಪುದು ತಕ್ಕುದೆ ಪಾರದೆನ್ನ ತೋ-
ಳ್ನೆರವಲಮಂ ವಿರೋಧಿಬಲಮಂ ತವೆ ಕೊಲ್ವೊಡೆ ನಾನೆ ಸಾಲ್ವೆನೀ
ಶರಧಿಯ ತಾಯ್ಮ ಳಲ್ವರೆಗಮಾನಿಸೆ ಬತ್ತದೆ ಲಂಕೆಗೆತ್ತದಿಂ
ತಿರೆ ಸೆರಗೆಂದನೇನದಟನೋ ರಣಲಂಪಟನೋ ಜನಾರ್ದನಂ ॥೬೨॥

ಲೆಂಕೆಯನೊಕ್ಕಲಿಕ್ಕುವವೊಲಟ್ಟುಱಿ ಲಂಕೆಯನೊಕ್ಕಲಿಕ್ಕಿ ಕೀ-
ಟ್ಟೆಂ ಕಡುಪಿಂ ತ್ರಿಕೂಟಗಿರಿಯಂ ದಶಕಂಠನ ಕಂಠನಾಳಮಂ
ಛೋಂಕೆನಲೆಚ್ಚು ಪಾಯ್ವ ಬಿಸುನೆತ್ತರಸೇಕದಿನೆನ್ನ ತೋಳ ತೀ-
ನಂ ಕಳೆವೆಂ ವಿಳಂಬಿಸಿದೊಡೆನ್ನ ನೆಗೞ್ತೆಗೆ ಬನ್ನಮಾಗದೇ ॥೬೩॥

ಎಂದು ತಱಿಸಂದು ಲಕ್ಷ್ಮಣಂ ನುಡಿಯೆ ತದನಂತರಂ,

ಕಿಸುಸಂಜೆವೆರೆದ ಚಂದ್ರಿಕೆ ।
ಪಸರಿಸಿದಪುದೆನಿಸಿ ರಾಮಚಂದ್ರಂ ಸಭೆಯೊ- ॥
ಳ್ಪಸರಿಸೆ ನಯನಪ್ರಭೆ ರಂ ।
ಜಿಸೆ ಜಾಂಬೂನದನ ವದನಮಂ ವೀಕ್ಷಿಸಿದಂ ॥೬೪॥

ಅಂತು ನೋಡಿ,

ಜೈನಾಗಮಕೋವಿದನಂ ಜಾಂ ।
ಬೂನದನಂ ಮಧುರನಿನದನಂ ಬೆಸಗೊಂಡಂ ॥
ದಾನವನ ವಂಶಮಂ ಲಂ ।
ಕಾನಗರಿಯ ತೆಱನನತ್ಯುದಾತ್ತಂ ರಘುಜಂ ॥೬೫॥

ಅಂತು ಬಲಗೊಳ್ವುದುಂ ಮುಕುಳಿತಾಂಜಲಿಪುಟನಾಗಿ,

ವಿಪುಳಮತಿ ಸಕಲವಿದ್ಯಾ ।
ನಿಪುಣಂ ಗಣಧರನಿರೂಪಿತಕ್ರಮದಿಂ ದೈ- ॥
ತ್ಯಪತಿಪ್ರಪಂಚಮಂ ಶ್ರವ ।
ಣ ಪಥಾತಿಥಿ ಮಾಡಲಾತನುದ್ಯುತನಾದಂ ॥೬೬॥

ಶ್ರವಣಕ್ಕಮರ್ದಿನ ಸರಿ ಸುರಿ ।
ವವೊಲಾಗೆ ವಚೋವಿಳಾಸಮಾ ಸಭೆಗತ್ಯು- ॥
ತ್ಸವಮಂ ಕುಡೆ ನೇರ್ಪಡೆ ಬಿ ।
ನ್ನವಿಸಿದನಾವರಿಸೆ ದಂತರುಚಿ ತತ್ಸಭೆಯಂ ॥೬೭॥

ಅದೆಂತೆದೊಡೆ : ದೇವ, ಜಗತ್ತಿತಯನಾಥನಪ್ಪ ಪುರುಪರಮೇಶ್ವರನ ಧರ್ಮತೀರ್ಥಪ್ರವರ್ತನಾನಂತರಂ,

ಪಲಕಾಲಂ ಪೋಪುದುಮಾ ।
ಕುಲದೊಳ್ಕೀಯೂರದಂತೆ ರಂಜಿಸೆ ದೋರ್ಮಂ- ॥
ಡಲದೊಳ್ತಳೆದಂ ಭೂಮಮಂ ।
ಡಲ ಮಂ ತ್ರಿದಶಂಜಯಂ ಜಯಶ್ರೀರಮಣಂ ॥೬೮॥

ಕಡುನೀಱಿ ಕಳಾವಿಭವಂ ।
ಬಡೆದಾ ಭೂಭುಜನೊಳಗ್ರಮಹಿಷೀಪದಮಂ ॥
ಪಡೆದು ಗುಣಾಬ್ಧಿಗೆ ಪೆರ್ಚಿಂ ।
ಪಡೆದಸಿಯಳ್ ಚಂದ್ರಲೇಖೆವೆಸರಂ ಪಡೆದಳ್ ॥೬೯॥

ಜಿತಶತ್ರು ವಿಜಯಸಾಗರ ।
ಸುತರ್ಕಳಂ ಚಂದ್ರಲೇಖೆ ಚಂದ್ರಾದಿತ್ಯ- ॥
ಪ್ರತಿಮರನ್ಯೆಂದ್ರಿಯ ವೋಲ ।
ಪ್ರತಿಮಪ್ರಭರಂ ಪ್ರಸಿದ್ಧರಂ ವಧು ಪಡೆದಳ್ ॥೭೦॥

ಆ ಸುತರ್ಕಳ್ಗನುಕ್ರಮದಿಂ ಪೌದನಪುರಪರಮೇಶ್ವರನಪ್ಪ,

ಭುಜಸಖಿನಾನಂದ ಮಹೀ ।
ಭುಜಂಗಮಂಭೋಜಮಾಲೆಗಂ ಪುಟ್ಟಿದವ- ॥
ರ್ವಿಜಯೆಸುಮಂಗಳೆಯೆಂಬ ।
ರ್ವಿಜಿತಾಮರಕನ್ಯೆಯರ್ಕಳರಸಿಯರಾದರ್ ॥೭೧॥

ಆ ತ್ರಿದಶಂಜಯಮಹೀಭುಜಂ ಪಲಕಾಲಮರಸುಗೆಯ್ದು ವಿಷಯವೈರಾಗ್ಯಪರನಾಗಿ,

ನಿಜಪುತ್ರಂ ಜಿತಶತ್ರುಗಪ್ರತಿಮಮಂ ಸಾಮ್ರಾಜ್ಯಮಂ ಕೊಟ್ಟು ಭೂ-
ಭುಜರತ್ನಂ ತ್ರಿದಶಂಜಯಂ ತಳೆದಿಳಾಪೂಜ್ಯಂ ತಪೋರಾಜ್ಯಮಂ
ನಿಜಕರ್ಮಾರಿಗಳಂ ಕುಬೇರಗಿರಿಯೊಳ್ಬೆಂಕೊಂಡು ಮುಕ್ತ್ಯಂಗನಾ-
ಭುಜಪಾಶಕ್ಕೊಳಗಾಗಿ ಪೀರ್ದನೊಲವಿಂ ತದ್ವಕ್ತ್ರಪೀಯೂಷಮಂ ॥೭೨॥

ಮತ್ತಿತ್ತಲ್ಜಿತಶತ್ರುವೆಂಬ ಪೆಸರಾಯ್ತನ್ವಥಮೆಂಬನ್ನಮು-
ದ್ವೃತ್ತಾರಾತಿಗಳಂ ಭಯಂಗೊಳಿಸಿ ಕಪ್ಪಂಗೊಂಡು ಕೈಯಾಂತವ-
ರ್ಗಿತ್ತಂ ಬೇಱ್ಪುದನಿತ್ತು ಮಾಣ್ದನೆ ಭುಜೋತ್ಖಾತಾಸಿ ಧಾರಾಂಬುವಿಂ-
ದಿತ್ತಂ ಶ್ರೀವಧುಗಂ ಜಯಪ್ರಮದೆಗಂ ವಾರ್ಮಾನುಷೀಜನ್ಮಮಂ ॥೭೩॥

ವಿಜಿಗೀಷುವೆನಿಸಿದಾ ಭೂ ।
ಭುಜವಲ್ಲಭೆ ಮೇರುಮೇಖಳಾಲಕ್ಷ್ಮಿ ಮರು- ॥
ತ್ತುಜಮಂ ಪಡೆದುದೊ ಪೇೞೆನೆ ।
ವಿಜಯಾಂಬಿಕೆ ಪಡೆದಳಜಿತಭಟ್ಟಾರಕರಂ ॥೭೪॥

ಆ ವನಿತಾನುಜೆ ರೂಪಕ ।
ಳಾವಿಭವಖ್ಯಾತೆ ವಿಜಯಸಾಗರನ ಮಹಾ- ॥
ದೇವಿ ಸುಮಂಗಳೆ ಪೆತ್ತಳಿ ।
ಳಾವಲ್ಲಭನಪ್ಪ ಸಗರಚಕ್ರೇಶ್ವರನಂ ॥೭೫॥

ಜಿನಪತಿಯನೊರ್ವಳೊರ್ವ ।
ಳ್ಜನಪತಿಯಂ ಪಡೆದಳೆಂದೊಡಾರ್ದೊರೆ ವಿಜಯಾಂ- ॥
ಗನೆಗೆ ಸಮಂಗಳೆಗೆ ವೃಥಾ ।
ಸ್ತನಭರಮಂ ಪೊತ್ತು ಕುಸಿವ ರಾಜಾಂಗನೆಯರ್ ॥೭೬॥

ಚತುರದಧಿಮೇಖಳಾಲಂ ।
ಕೃತಸುಧೆಯನಾಳ್ದು ಪಡೆದು ಸುತರಿನ್ನರಸಾ- ॥
ಜಿತಶತ್ರು ವಿಜಯಸಾಗರ ।
ರತರ್ಕ್ಯಭುಜವೀರ್ಯರರಸುಗೆಯ್ಯುತ್ತಿರ್ದರ್ ॥೭೭॥

ಆ ಕಾಲದೊಳಜಿತನಾಥತೀರ್ಥಾವತಾರಮಖಿಲ ಪುಣ್ಯ ದಶಾವತಾರಮಾಮದಂದು ವಿಜಯಾರ್ಧದ ರಥನೂಪುರ ಚಕ್ರವಾಳಪುರದ ಪೂರ್ಣಘನವಿಯಚ್ಚರಂಗೆ

ತೋಯದವಾಹನನೆಂಬ ತನೂಜನಾದನತ್ತಲುತ್ತರ ಶ್ರೇಣಿಯೊಳಂಬರತಿಲಕಮೆಂಬ ಪುರದ ಸುಲೋಚನಂಗೆ ಸಹಸ್ರಲೋಚನನಿಂ ಕಿಱಿಯಳುತ್ಪಲನೇತ್ರೆಯೆಂಬ ತನುಜೆಯಾದಳಾಕೆಯಂ ಪೂರ್ಣಘನಂ ತೋಯದವಾಹನಂಗೆ ಬೇಡಿಯಟ್ಟಿದೊಡೆ ಚಕ್ರವರ್ತಿಯೂ ಸಗರಂಗಗ್ರಮಹಿಷಿಯಕ್ಕುಮೆಂದು ನೈಮಿತ್ತಿಕಾದೇಶದಿಂ ಕುಡಲೊಲ್ಲದಿರೆ ಕಡುಮುಳಿದು ಪೂರ್ಣಘನಂ ಲಯಸಮಯದ ಘನಘನದಂತೆತ್ತಿ ಬಂದಂಬರತಿಲಕಮಂ ಮುತ್ತೆ ಪುತ್ರನಂ ಪುತ್ರಿಯುಮನ ವಿದ್ಯೆಯಿಂ ಪತತ್ರಿ ಮಾಡಿ ಪೊಱಮಟ್ಟು ಕಾದಿ ಸೂಲೋಚನನಮರೀ ವಿಲೋಚನಾತಿಥಿಯಪ್ಪುದಂ ಪೂರ್ಣಘನನಂಬರತಿಳಕಮಂ ಪೊಕ್ಕು ಕನ್ನೆಯನಱಸಿ ಕಾಣದೆ ತನ್ನ ಪೊೞಲ್ಗೆ ಪೋದನಿತ್ತಲಾ ಸಹಸ್ರರೋಜನನುಮುತ್ಪಲನೇತ್ರೆಯುಂ ಶರಭಾಟವಿಯಂ ಪೊಕ್ಕು ವೇತ್ರಾವತೀತೀರದೊಳಿರ್ದರನ್ನೆಗಂ ಸಗರನಂ ದುಷ್ಟಾಶ್ವಮೇಱಿದು ತಂದಾ ಪೞುವಿನೊಳಿೞಿಪಿ ಪೋಗೆ ತೊೞಲುತ್ತುಂ ಬಂದು,

ಮೃಗರಾಜಂಗಗಿದೊಡುವಾನೆಗಡುಹಂ ಮತ್ತದ್ವಿಪಂಗೆತ್ತು ಕಾ-
ರ್ಮುಗಿಲೊಳ್ಪೋರ್ವ ಗಜಂಗಳಂ ಶರಭಮಂ ಬೆಂಕೊಳ್ವ ಭೇರುಂಡವ-
ಕ್ಕಿಗಳಂ ನೋಡಿದ ಸೋಟದಾಸಱುಗಿವನ್ನಂ ಕಂಡನಾಸನ್ನದೊ-
ಳ್ಸಗರಂ ಕನ್ನೆಯುಮಂದಗಗ್ರಜನುಮಂ ವೇತ್ರಾವತೀ ತೀರದೊಲ್ ॥೭೮॥

ನವಶಶೀಲೇಖೆಯುಂ ನವದಿನೇಶನುಮಿಲ್ಲಿಗೆ ರಾಹುಗಳ್ಕಿ ಬಂ-
ದುವೊ ದಿಟಮೆಂದು ಸಂದೆಗದಿನಿರ್ದರುಮಂ ನಡೆ ನೋಟ್ಪಿ ಭೂಭೂಜ-
ಪ್ರವರಣ ಚಿತ್ತಮಂ ಸೆಱೆಗೆ ತಂದುವು ಸೋಲಿಪ ತಮ್ಮ ಲೀಲೆಯಿಂ
ಕುವಲಯಮಾಲೆಯಂ ನಗುವ ಬಾಲೆಯ ಲೋಲವಿಲೋಸಾಂಶುಗಳ್ ॥೭೯॥

ಅಲೆಯದೆಲರ್ದಿನೇಶಕಿರಣಂ ಪುಗದೆಂಬಿನೆಗಂ ಕಱಂಗಿ ಕ-
ಟ್ಟಿಲಿಸುವ ಕಾನನಾಂತರದೊಳಂಗಜ ಜಂಗಮದೀಪಮಾಲೆವೋ-
ಲ್ಜಲಜಲಿಸುತ್ತುಮಿರ್ಪ ಖಚರೇಶ್ವರಕನ್ಯೆಯನಾಗಳೆಯ್ದಿದಂ
ತೊಲಗದೆ ದಿಟ್ಟ ನಟ್ಟುನಿಲೆ ಕಣ್ಬೊಳಪಿಂದಮರ್ದಪ್ಪಿಕೊಳ್ಪವೋಲ್ ॥೮೦॥

ಕಿಡಿಸಿದನೇಕೆ ತಾವರೆಯನೀ ಮೊಗಮಂ ನೆಯ್ದಿಲಂ
ಕಿಡಿಸಿದನೀ ತೆಱಂಬೊಳೆವ ಕಣ್ಮಲರಂ ಪಡೆದೇಕೆ ತುಂಬಿಯಂ
ಕಿಡಿಸಿದನೀ ವಿನೀಲಕುಟಿಲಾಲಕಮಂ ಬಡೆದೇಕೆ ಪದ್ಮಜಂ
ಕಿಡಿಸಿದನೀಕೆಯಂ ಪಡೆದು ಜಂಗಮಕಲ್ಪಲತಾವಿಲಾಸಮಂ ॥೮೧॥

ಎಂದು ನೀಡುಂ ಭಾವಿಸಿ ನೋಡುತ್ತುಮಿರೆ,

ಎಳಲತೆಯನುಱಿದು ತಾವರೆ ।
ಗೆಳಸುವ ಮಱಿದುಂಬಿಯಂದದಿಂದೆಱಗಿದುದಾ ॥

ಚಳನಯನೆಯ ತನುಲತೆಯಿಂ ।
ತಳರ್ದರಸನ ಕಣ್ ಕುಮಾರಮುಖಸರಸಿಜದೊಳ್ ॥೮೨॥

ಅಂತು ನೋಡಿ,

ಬಾಲೆ ಶಿರೀಷಮಾಲೆಯವೊಲೀಕೆ ಕರಂ ಸುಕುಮಾರೆ ನೀಂ ಕರಂ
ಬಾಲನೆ ಕಾನನಂ ಮನುಜಖೇಚರಗೋಚರಮಲ್ತು ಋಕ್ಷಶಾ-
ರ್ದೂಲ ಮದೇಭ ಸಿಂಹ ಶರಭಾಕುಲಮಿಲ್ಲಿಗೆವರ್ಪ ದುಷ್ಕೃತೋ-
ನ್ಮೀಲನಮಾವ ಕಾರಣದಿನಾದುದದಂ ತಿಳಿಪೆಂದನಾ ನೃಪಂ ॥೮೩॥

ಅಂತು ಬೆಸಗೊಳ್ವುದುಂ ಸಹಸ್ರಲೋಚನಂ ನಿಜವೃತ್ತಾಂತಮಂ ತಿಳಿಪಿ,

ಈ ನಿನ್ನಾಕೃತಿ ನಿನ್ನ ದುಂದುಭಿಗಭೀರಧ್ವಾನಮಿಾ ನಿನ್ನ ನೇ-
ತ್ರಾನಂದೋದಯ ಭದ್ರಲಕ್ಷಣಗುಣಂ ಪೇೞ್ದಪ್ಪುವೀತಂ ಧರಿ-
ತ್ರೀನಾಥಂ ಪೆಱನಲ್ಲನೆಂಬಿನಿತನೀ ಭೀಮಾಟವೀದುರ್ಗಮ-
ಸ್ಥಾನಂಬೊಕ್ಕು ತೊೞಲ್ವುದಂ ಬೆಸಸಿದಂ ಲೋಕೈಕರಕ್ಷಾಮಣಿ ॥೮೪॥

ಎಂಬುದುಮಾನಯೋಧ್ಯಾಪತಿಯೆಂ ಸಗರನೆಂಬೆನೆಂದು ತನ್ನ ಬಂದ ತೆಱನನಱಿಯೆ ತಿಳಿಪೆ ಸಹಸ್ರಲೋಚನಂ ವಿಸ್ಮಯಸ್ತಿಮಿತಲೋಚನನಾಗಿ,

ಪಗೆ ತೀರ್ವುದು ಬಗೆ ತೀರ್ವುದು ।
ಸಗರನನಾಶ್ರಯಿಸಿಮೆಂದು ಪಿತೃಬೆಸಸಿದನ- ॥
ಚ್ಚಿಗಮಾಯ್ತು ನಿಮಗಮೆಂದು ।
ಬ್ಬೆಗಮುಬ್ಬರಮಾಗೆ ಖಚರತನಯಂ ನುಡಿದಂ ॥೮೫॥

ಆ ನುಡಿಯನವಧಾರಿಸಿ,

ಖೇದಂ ಮಾಣ್ಗೆ ಶುಭೋದಯಂ ಸಮನಿಕುಂ ಸಂಸಾರಿಗಳ್ಗಿಂತಿದೇ-
ನಾದಂ ಚೋದ್ಯಮೆ ನಚ್ಚಿ ನಿಮ್ಮ ಜನಕಂ ಪೇೞ್ದಿಂತುಟಂ ಮಾೞ್ಪಿನಾ
ಹ್ಲಾದಂಬೆತ್ತಿರಿಮೆಂದು ಸಾವರಿಸಿ ಮುನ್ನಂ ತನ್ನನೊಟ್ಟಯ್ಸಿ ಬಂ-
ದಾ ದುಷ್ಟಾಶ್ವದ ಪಜ್ಜೆಗೊಂಡು ನಡೆದಂ ಪಿಂದಿಕ್ಕಿ ಕಾಂತಾರಮಂ ॥೮೬॥

ಅಂತು ಬರುತಿರ್ಪಿನಂ,

ಕರೆವಂತಾದುದು ಹಸ್ತ್ಯ ।
ಶ್ವರಥ ಪದಾತಿಗಳ ಕಳಕಳಂ ಧರೆ ನಿಂದಾ ॥
ಧರಣೀಶನಿರ್ದ ದೆಸೆಯಂ ।
ನಿರೀಕ್ಷಿಪಂತಾದುದೊಗೆದ ಧೂಳೀಜಾಳಂ ॥೮೭॥

ಅಂತು ನಿಜಜಾತುರ್ಬಲಂ ಬಂದು ಕೂಡುವುದುಂ ವಿಜಯವಾರಣಮಣಿಸಾರಿಕೆಯೊಳ್ ಸಹಸ್ರಲೋಚನನುಮುತ್ಪಲ ನೇತ್ರೆಯುಮುಭಯಪಾರ್ಶ್ವಮನಳಂಕರಿಸಿ ಬರೆ,

ಪುರವನಿತಾಜನಂ ಕುಡುವ ಪೂವಿನ ಮಾಲೆಯುಮಂ ಪುರಾಂಗನಾ-
ತರಳಕಟಾಕ್ಷಮಾಲೆಯುಮನಾಂತು ದುಕೂಲಪಟೀ ಪತಾಕೆಯಿಂ
ಮರಕತರತ್ನತೋರಣದಿನೊಪ್ಪುವುದಂ ಪುಗುತಂದನುತ್ಸವಾ-
ಕರಮನಯೋಧ್ಯೆಯಂ ದಿವಿಜನಾಯಕನಂತೆ ಧರಾಧಿನಾಯಕಂ ॥೮೮॥

ಅಂತು ಪುರಮಂ ಪೊಕ್ಕುತ್ಪಲನೇತ್ರೆಯಂ ಮದುವೆನಿಂದು,

ನಿಜವಕ್ಷದೊಳಾ ವಧುವಂ ।
ಭುಜದೊಳ್ಭೂವಧುವನಿರಿಸಿ ಷಟ್ಖಂಡಮಹೀ- ॥
ಭುಜಪೂಜ್ಯನಮಳಕೀರ್ತಿ ।
ಧ್ವಜಮಂ ದಿಗ್ದಂತಿದಂತದೊಳ್ತೆತ್ತಿಸಿದಂ ॥೮೯॥

ಪರಚಕ್ರ ಕಾಲಚಕ್ರಂ ।
ನಿರಸ್ತದಿನಕರಸಹಸ್ರಕರಚಕ್ರಂ ಭಾ- ॥
ಸುರಚಕ್ರರತ್ನಮೊಗೆದುದು ।
ಧರಣೀವಲ್ಲಭನ ಶಸ್ತ್ರಶಾಲೋದರದೊಳ್ ॥೯೦॥

ಬಲವಾಱುಂ ನವನಿಧಿಯುಂ ।
ಪಲವುಂ ಚಿಹ್ನಂಗಳುಂ ಚತುರ್ದಶರತ್ನಾ- ॥
ವಲಿಯುಂ ಜನಿಯಿಸೆ ಸಗರಂ ।
ನೆಲನಂ ಷಟ್ಖಂಡ ಭರತಮಂ ಸಾಧಿಸಿದಂ ॥೯೧॥

ಅನತು ಸಿದ್ಧ ದಿಗ್ವಿಜಯಂ ವಿದ್ಯಾಧರಲೋಕಮಂ ತನಗೆ ಕುಡೆ ಸಹಸ್ರಲೋಚನಂ ನಿಜಜನಕನಂ ಕೊಂದವನಂ ಕೊಂದಲ್ಲದೆ ಮಾಣೆನೆಂದಸಂಖ್ಯಾತ ಬಲಂ ಬೆರಸು ಬಂದು ರಥನೂಪುರಚಕ್ರವಾಳಪುರಮಂ ಮೂವಳಸಾಗಿ ಮುತ್ತೆ ಸಹಸ್ರಲೋಚನಂ ಸಮರಸಾಧ್ಯನಲ್ಲೆಂದು ತಱಿಸಂದು ಪೂರ್ಣಘನಂ ನಿಜತನೂಜನಪ್ಪ ತೋಯದವಾಹನನಂ ವಿದ್ಯೆಯಿಂ ಹಂಸನಂ ಮಾಡಿ ಕಳಿಪಿ ಮಹಾಯುದ್ಧಂಗೆಯ್ದು ಕಱಿಯೆ ಸಹಸ್ರಲೋಚನಂ ತೋಯದವಾಹನನ ಬೞಿಯಂ ಗಳಿವೞಿಯ ಪಾವಿನಂತೆ ತಗುಳುತ್ತುಂ ಬಂದು,

ಅಟ್ಟುವನ ಮುಳಿಸುಮೋಡುವ ।
ನಿಟ್ಟಳಮೆನಿಸಿರ್ದಭಯಮುಮೊರ್ಮೊದಲೊಳ್ಪಿ- ॥
ಮ್ಮೆಟ್ಟಿದುವುಬಗೆಯೊಳಚ್ಚರಿ ।
ಪುಟ್ಟುವಿನಂ ಸಮವಸರಣಮಂ ಮುಟ್ಟಲೊಡಂ ॥೯೨॥

ಅಂತಪಗತಕಲುಷರಿರ್ವರುಂ ಭಗವದಜಿತ ಭಟ್ಟಾರಕರ ಸಮವಸರಣ ಭೂಮಿಯಂ ಪೊಕ್ಕು ವಸ್ತುಸ್ತವ ಗುಣಸ್ತವ ರೂಪಸ್ತವನಾನಂತರಂ ಮಾನವ ಸಭಾಸದನಾಗಿರ್ದ ಸಗರಚಕ್ರವರ್ತಿಯ ಸಮೀಪವರ್ತಿಗಳಾಗೆ ಗಣಧರಮುಖ ಕಮಳದತ್ತಲೋಚನಂ ಸಹಸ್ರಲೋಚನಂ,

ಶ್ರೇಯೋನಿಧಿ ಮತ್ಪಿತೃಗಂ ।
ತೋಯದವಾಹನನ ಪಿತೃಗಮಿಾ ಮುಳಿಸೀ ಜ- ॥
ನ್ಮಾಯತ್ತಮೊಮೇಣ್ ಪೂರ್ವಭ ।
ವಾಯುತ್ತಮೊ ನೆಱಿಯೆ ಬೆಸಸಿಮೆನಗಾ ತೆಱಿನಂ ॥೯೩॥

ಎನೆ ಗಣಧರಾರ್ಚಾರಿಂತೆಂದು ಬೆಸಸಿದರೀ ಭರತಾರ್ಯಾಖಂಡ ಷಡರ್ತುಕಮೆಂಬ ಪುರದ ಪರದಂ ಭಾವನೆಂಬಂ ತನ್ನ ಹರಿಸಾದಸನೆಂಬ ತನಯಂಗೆ ನಾಲ್ಕು ಕೋಟಿ ಕಸವರಮಂ ಕೊಟ್ಟು ಪರದುವೋಪುದಂ ಹರಿದಾಸನಾಧನಮಂ ದುರ್ವ್ಯಸನದಿಂ ಕಿಡಿಸಿ ನಿಜಭವನದಿಂ ರಾಜಭವನಕ್ಕೆ ಕನ್ನಮಂ ಸವೆದು ತದುಪಾರ್ಜನಮೆ ಜೀವನಮಾಗಿರ್ದನನ್ನೆಗಮನವ ತಂದೆಯಪ್ಪ ಬಾವನಸನೂನ ಧನಮಂ ಪಡೆದು ರಾದ್ರಿಸಮಯದೊಳ್ ಮನೆಗೆ ಬಂದು ಮಗನ ವಾರ್ತೆಯಂ ಕೇಳ್ದು ಮಗುಟ್ಚಿ ತರಲೆಂದು ಕನ್ನಮಂ ಪುಗುವ ಸಮಯದೊಳ್ ಹರಿದಾಸಂ ತನ್ನಂ ಕೊಲಲೆಂದಲಸನಟ್ಟಿದ ತೀಷ್ಣಪುರುಷಂ ಬಂದನೆಂದು ಕೈದುಗೆಯ್ದು ತಮ್ಮೊಲಿಱಿದು ಸತ್ತು ಪರಸ್ಪರ ವಿರೋಧಿಗಳಪ್ಪತಿರ್ಯಗ್ಜಾತಿಗಳಾಗಿ ತಮ್ಮೊಳೋರೊರ್ವರಂ ಕೊಂದು ತಿಂದು ದುಃಖಪರಂಪರೆಯನೈದಿ ಪೆಱತೊಂದು ಜನ್ಮದೊಳ್ಪೂರ್ವವಿದೇಹದ ಪುಂಡರೀಕಿಣೀ ಪುರದೊಳುತ್ತರನುಮನುತ್ತರನುಮೆಂಬ ಸಹೋದರರಾಗಿ ತಪಂಗೆಯ್ದು ಶತಾಕರಲ್ಪದೊಳ್ಪುಟ್ಟಿ ಬಂದೀಗಳ್ ಭಾವನಂ ಪೂರ್ಣಘನನಾದಂ ಹರಿದಾಸಂ ಸುಲೋಚನಾನನಂದಿನ ವಿರೋಧಂ ಕಾರಣಮಾಗೆ ಸುಲೋಚನಂ ಪೂರ್ಣಘನನ ಕೈಯೊಲ್ ಸತ್ತನೆಂದು ತಿಳಿಪಿ,

ಪೊಲೆ ಮುಳಿಸೆಂಬುದಾ ಮುಳಿಸು ಪುಟ್ಟಿದ ಪೊಟ್ಟಱಿಕೊಳಾವನಾದೊಡಂ
ಪೊಲೆಯನೆ ಪಾಪಹೇತು ಮುಳಿಸಲ್ಲದೆ ಪೇೞ್ಪೆಱತುಂಟೆ ಕೋಪದಿಂ
ಕೊಲೆ ದೊರೆಕೊಳ್ಗುಮಾ ಕೊಲೆಯೆ ಪಾತಕಮೆಂಬುದು ಪುಣ್ಯಮೆಂಬುದಾ-
ಕೊಲೆಪೊಲೆ ಪೊರ್ದದಿರ್ಪಿರವೆ ನೀಮದಱಿಂ ತೊಱಿಯಿಂ ವಿರೋಧಮಂ ॥೯೪॥

ಎಂದು ತಿಳಿಪಿ ತದನಂತರಂ,

ಒಲವೆನಗಿನಿತೇಕೆ ಸಹ ।
ಸ್ರಲೋಚನನೊಳಾದುದೆಂದು ಬೆಸಗೊಂಡಂ ಚ- ॥
ಕ್ರಿಲಲಾಮಂ ಸಗರಂ ಭವ ।
ಜಲನಿಧಿತಾರಕರನಜಿತಭಟ್ಟಾರಕರಂ ॥೯೫॥

ಅಂತು ಬೆಸಗೊಳ್ವುದುಮಶೇಷ ಭಾಷಾತ್ಮಕಮಪ್ಪ ದಿವ್ಯಭಾಷೆಯೊಳಿಂತೆಂದು ಬೆಸಸಿದರೀ ಭರತವಿಷಯದ ಪದ್ಮಪುರದೊಳಾರಂಭಿಕನೆಂಬನೊರ್ವಂ ವಿಪ್ರನಾತಂಗೆ ಬಲಿಶಿಖಿಗಳೆಂಬಿರ್ವರಂತೇವಾಸಿಗಳಾದರವರ್ವಿದ್ಯಾಮತ್ಸರಮೆ ತಮಗೆ ವೈರಕಾರಣಮಾಗೆ ವರ್ತಿಸುತ್ತಿರ್ದು ಮತ್ತೊಂದು ದೆವಸಂ ಧೇನು ವಿಕ್ರಿಯಾನಿಮಿತ್ತ ಮೋರೊರ್ವರನೊರ್ವರಿಱಿದು ಸತ್ತು,

ಕಲುಷಮತಿ ಶಬರನಾದಂ ।
ಬಲಿ ಶಿಖಿಯುಂ ವೃಷಭನಾಗೆ ಶಬರಂ ತನ್ನಂ ॥
ಕೊಲೆ ಮುಷಕನಾದಂ ಕಟಿ ।
ದು ಲುಬ್ಧಕಂ ಬದ್ಧರೋಷದಿಂ ಜೆಕ್ಕಾದಂ ॥೯೬॥

ಅಂತು ಪರಸ್ಪರೋಪಘಾತ ಪರಿಣತಿಯಿಂ,

ಅನುಭವಿಸಿ ಪಲವು ಕಾಲಮ ।
ನನಂತ ಭವದೊಳ್ದುರಂತದುಷ್ಕೃತಫಲಮಂ ॥
ಜಿನದೇವ ದಿತಂಗಾದ ।
ರ್ತನೂಜರವರೊರ್ಮೆ ವಾರಣಾಸೀಪುರದೊಳ್ ॥೯೭॥

ಅನಂತರ ವ್ಯಂತರಗತಿಯೊಳ್ ಸುರೂಪಸುಂದರವೆಸರಂ ಪಡೆದಲ್ಲಿಂ ಬಂದು ಹೇಮಪುರದೊಳ್ಕುಲಧರ ಪುಷ್ಯಭೂತಿಗಳೆಂಬರಾಗಿ ಜನಿಯಿಸಿ ಜಾಯಾ ನಿಮಿತ್ತಂ ವೈರವೈರಸ್ಯ ಮನಸ್ಕರಾಗಿರ್ದೊರ್ಮೆ ಪುಣ್ಯಪಶದಿನಗಣ್ಯ ಪುಣ್ಯಧನರಂ ತಪೋಧನರಂ ಕಂಡುಪಶಾಂತರಾಗಿ ತೊಱೆದು ಸತ್ತು ಸನತ್ಕುಮಾರ ಕಲ್ಪದುಪಪಾತಕಲ್ಪ ದೊಳ್ಪುಟ್ಟಿ ನಾಕಲೋಕಸುಖಮನನುಭವಿಸಿ ಬಂದು ಧಾತಕೀಷಂಡದಪರವಿದೇಹದ ವಿಜಯಾವತೀ ವಿಷಯದೊಳರಿಂಜಯ ಪುರದೊಳೊಡಹುಟ್ಟಿದ ಕ್ರೂರಧರನುಮುಮುರ ಧರನುಮೆಂಬರಾದರಾ ಪುರಮನಾಳ್ವ ಸಹಸ್ರಶೀರ್ಷನೊಂದು ದೆವಸಮಾನೆವೇಂಟೆಯುಂ ಪೋಗಿಯುಡವಿಯುಂ ಪೊಕ್ಕು ಪರಸ್ಪರರೋಪದ್ರವಕಾರಿಗಳಪ್ಪ ರೌದ್ರಮೃಗಂಗಳುಪಶಮ ಭಾವದಿಂದಿರೆ ಕರತೌಕುಕಂಬಟ್ಟು ತೊಱಲ್ತರುತುಮಲ್ಲಿ ವಿನಯಂಧರ ಕೇವಲಿಗಳಂ ಕಂಡು ತಚ್ಚರಣ ಸಮಕ್ಷದೊಳ್ದೀಕ್ಷೆಯಂ ಕೊಂಡು ಮೋಕ್ಷಕ್ಕೆ ಪೋದನಿತ್ತಲಾ ಕ್ರೂರಧನನುಮುಮುಸಧರನುಮಾ ಕೇವಲಿಗಳ ಪಾದಪಾರ್ಶ್ವದೊಳ್ತಪಂಗೆಯ್ದು ಶರೀರಮಂ ತೊರೆದು ಶತಾರಕಲ್ಪದೊಳನಲ್ಪಸುಖಮನನುಭವಿಸಿ ಬಲಿಯುಂ ಶಿಖಿಯುಂ ಸಹಸ್ರಲೋಚನನುಂ ತೋಯದವಾಹನನುಮಾದರೆಂದ ಬೆಸಸಿ,

ಪರಿಷಜ್ಜನಹೃತ್ಕೈರವ ।
ಮರಲ್ವಿನಂ ದಿವ್ಯವಚನ ಪರಿಪೂರ್ಣಸುಧಾ- ॥

ಕರರುಚಿ ಪಸರಿಸೆ ಮತ್ತಂ ।
ನರೇಶ್ವರಂಗಜಿತ ತೀರ್ಥಕರರಿಂತೆಂದರ್ ॥೯೮॥

ಅಂದಿನಾರಂಭಿಕಂ ಋಷಿಯರ್ಗಾಹಾರದಾನಮಂ ಕೊಟ್ಟು ಭೋಗಭೂಮಿಯೊಳ್ಪುಟ್ಟಿ ಬಱೆಯಂ ದಿವಕ್ಕೆ ಸಂದು ದಿವ್ಯಸುಖಮನನುಭವಿಸಿ ಬಂದು ಧಾತಕೀಷಂಡದ ಪರವಿದೇಹದ ವಿಜಯಾವತೀವಿಷಯದೊಳ್ ಚಕ್ರಪುರದ ಹರಿವರ್ಮಂಗಂ ಗಾಂಧಾರಿಗಂ ಧೃತ ಕೀರ್ತಿವೆಸರ ಸುತನಾಗಿ ತಪಂಗೆಯ್ದು ಕಱೆದು ಸ್ವರ್ಗದೊಳ್ಪುಟ್ಟಿ ಬಂದು ಪೂರ್ವವಿದೇಹದ ರತ್ನ ಸಂಚಯ ಪುರಮನಾಳ್ವಭಯಘೋಷಂಗಂ ಚಂದ್ರಾಣೆಗ ಪಯೋಬಲನೆಂಬ ಪುತ್ರನಾಗಿ ಪವಿತ್ರ ಚಾರಿತ್ರನಪಗತಪ್ರಾಣಂ ಪ್ರಾಣತ ಪ್ರಾಪ್ತನಾಗಿ ಮಗುೞೆ ಬಂದು ಪೃಥ್ವೀಧರ ಪುರಮನಾಳ್ವ ಜಯಂಧರಂಗಂ ವಿಜಯೆಗಂ ವಿಜಯಕೀರ್ತಿವೆಸರ ಮಗನಾಗಿ ರಾಜ್ಯಂಗೆಯ್ದು ಜನಕಸೂರಿಪಾರ್ಶ್ವದೊಳ್  ಪರಿವ್ರಾಜಕನಾಗಿ ಸಮಾಧಿವೆತ್ತನುತ್ತರೆಗೆ ಪೋಗಿ ಬಂದು ನೀನೀಗಳೆರಡನೆಯ ಚಕ್ರವರ್ತಿ ಸಗರನಾದೆ ನಿನಗಾರಂಭಿಕನಾದಂದಿನನುಬಂಧಂ ಕಾರಣಮಾಗೆ ಸಹಸ್ರಲೋಚನನೊಳತಿ ಪ್ರೀತಿ ಸಮನಿಸಿದುದೆಂದು ಬೆಸಸೆ,

ಜಿನವಚನಮನಾಲಿಸಿ ಭೀ ।
ಮನೆಂಬ ರಾಕ್ಷಸಕುಳಾಧಿಪಂ ತೋಯದವಾ- ॥
ಹನನ ಪುರಾತನ ಜನ್ಮದ ।
ಜನಕಂ ಪ್ರೇಮಾನುಬಂಧದಿಂದಿಂತೆಂದಂ ॥೯೯॥

ಮಗನೆ ವಿಜಯಾರ್ಧನಗದೊ ।
ಳ್ಪಗೆವತಿಪ್ರಬಳರವರ ನಡುವಿರೆ ನಿನಗ- ॥
ಬ್ಬೆಗಮಕ್ಕುಂ ಪಾವಿನೊಳಂ ।
ಪಗೆಯೊಳಮೊಂದಾಗಿ ಜೀವಿಸಲ್ಬಂದಪುದೇ ॥೧೦೦॥

ಪಲವುಂ ದ್ವೀಪಂಗಳ್ಕ ।
ಣ್ಮಲರಂ ಸೆಱೆಗೆಯ್ದು ಕಿನ್ನರಾದ್ಯಷ್ಟಮರು- ॥
ತ್ಕುಲನಿಲಯಂಗಳ್ದಕ್ಷಿಣ ।
ಜಲಧಿಯೊಲಿರ್ಪುವು ನಿಕಾಮಕಮನೀಯಂಗಳ್ ॥೧೦೧॥

ಆ ದ್ವೀಪಂಗಳೊಳಗೆ ರಾಕ್ಷಸದ್ವೀಪಮೆಂಬುದು ಸಪ್ತಶತಯೋಜನಪ್ರಮಿತವದಱ ನಡುವೆ,

ಕನಕಪ್ರಾಕಾರವೇಷ್ಟಿಂ  ಬಳಸಿರೆ ವಿಳಸದ್ಗೋಪುರಾಟ್ಟಾಳಕಂ ನಂ-
ದನವೇಷ್ಟಿಂ ಲೋಚನಾನಂದಮನೊಡರಿಸೆ ಸಾರ್ವರ್ತುಕಂ ರಂಜಿಕುಂ ಯೋ-

ಜನಮೊಂಬತ್ತುದ್ದಮೈವತ್ತಗಲಮೆನೆ ಶಿರೋಭೂಷಣಾಕಾರಮುದ್ಯ-
ಜ್ಜಿನಗೇಹಂ ಸುತ್ತಲುಂ ತಳ್ತಿರೆ ವಿಕಟಪಟದ್ರತ್ನಕೂಟಂ ತ್ರಿಕೂಟಂ ||೧೦೨||

ಆ ತ್ರಿಕೂಟಾಚಲದ ಶಿಖರಮಂಡದೊಳಗೆ,

ತ್ರಿಂಶದ್ಯೋಜನ ವಿಸ್ತಾ ।
ರಂ ಶರದಂಬುಧರಧವಳಹಾರಂ ಮಣಿಹ- ||
ಮರ್ಯಾಂಶುಸ್ಥಗಿತವಿಯಚ್ಚ ।
ಕ್ರಂ ಶೋಭಾಜನ್ಮಭೂಮಿ ಲಂಕಾನಗರಂ ||೧೦೩||

ಆ ನಿರಾಂತಕಮಪ್ಪ ಲಂಕೆಯೊಳ್ಸುಖದಿನರಸುಗೆಯ್ಯೆಂದು ಭೀಮರಾಕ್ಷಸಂ ಭವಾಂತರ ಸ್ನೇಹದಿಂ ತೋಯದವಾಹನನಂ ತನ್ನ ಪೊಜಲ್ಗುಯ್ದು ರಾಜ್ಯಾಭಿಷೇಕಂಗೆಯ್ದು ಪಟ್ಟಮಂ ಕಟ್ಟಿ ರಾಕ್ಷಸ ವಿದ್ಯೆ ಮೊದಲಾದ ಪಲವುಂ ವಿದ್ಯೆಗಳುಮಂ ನವಮುಖಾಭರಣ-ಪ್ರಮುಖಾನೇಕದಿವ್ಯಾಭರಣಂಗಳುಮಂ ನವನಿಧಿವೆರಸು ಪಾತಾಳಲಂಕೆಯುಮನಿತ್ತು ನಿನಗೆ ರಾಕ್ಷಸಕುಲಮೆ ಕುಲಮಕ್ಕುಮೆಂದು ನಿಯಮಿಸಿ ನಿಜಪರಿಗ್ರಹಸಹಿತಂ ದ್ವೀಪಾಂತರಕ್ಕೆ ಪೋದನಿತ್ತ ತೋಯದವಾಹನಂ ನಿಜಪರಿಜನಮಂ ಬರಿಸಿ ಲಂಕೆಯೊಳರಸುಗೆಯ್ಯುತ್ತುಂ ವಿಜಯಾರ್ಧದ ಕಿನ್ನರ ಪುರಮನಾಳ್ವ ರತಿಮಯೂಖಂಗಮನುಮತಿಗಂ ಪುಟ್ಟಿದ ಸುಪ್ರಭೆಯಂ ಮದುವೆನಿಂದು ಕೆಲವು ಕಾಲದಿಂ ವೈರಾಗ್ಯಪರನಾಗಿ ನಿಜಾಗ್ರತನಯನಪ್ಪ ಮಹಾರಾಕ್ಷಸಂಗೆ ರಾಜ್ಯಮನಿತ್ತು ದೀಕ್ಷೆಗೊಂಡು ಮೋಕ್ಷಕ್ಕೆ ಪೋಪುದುಮಿತ್ತಲ್,

ರಕ್ಷಿಸಿ ವಸುಮತಿಯಂ ಪರ ।
ಪಕ್ಷಮನಾಕ್ರಮಿಸಿ ವಿಭವದೊಳ್ತನಗೆ ಸಹ- ||
ಸ್ರಾಕ್ಷಂ ಸಮನೆನಿಸಿ ಮಹಾ ।
ರಾಕ್ಷಸನಧಿರಾಜನೆನಿಸಿ ಲಂಕೆಯೊಳಿರ್ದಂ ||೧೦೪||

ಆತಂಗೆ ತನಯರಮರರಾಕ್ಷಸನುಂ ಭಾನುರಾಕ್ಷಸನುಮೆಂಬರಾದರಾ ಮಹಾರಾಕ್ಷಸನೊಂದು ದಿವಸಂ ಕ್ರೀಡಾವನಕ್ಕೆ ಬಂದಮಂದ ಮಕರಂದ ಲೋಭದಿಂದಿರುಳ್ಮುಗಿದ ಕಮಲಕೋಶದಿಂದ ಪೊಱಮೞಲಱಿಯದುಸಿರ್ಪಿಂಗಿದ ಭ್ರಮರನಂ ಕಂಡು,

ಮರಣಮನೆಯ್ದಿದುದೀಷ ।
ಟ್ಕರಣಂ ಘ್ರಾಣೇಂದ್ರಿಯಕ್ಕೆ ಸೋಲ್ತಿನಲ್ಲೈದುಂ ||
ಕರಣದನುಸರಣಮಿಂ ಸಂ ।
ಸರಣವಿಪತ್ಕರಣಮಪ್ಪುದೊಂದಚ್ಚರಿಯೇ ||೧೦೫||

ಎಂದು ಸಂಸಾರವೈರಾಗ್ಯ ಪರನವಧಿಬೋಧರಂ ಶ್ರುತಚಾರಣರಂ ಕಂಡು ನಿಜವಿಭವಕಾರಣಮಂ ಬೆಸಗೊಳ್ವುದುಮವರಿಂತೆಂದು ಬೆಸಸಿದರ್ : ಪೌದನ ಪುರಾಧಿಪಂ ಕನಕರಥಂ ಜಿನಪೂಜೆಯಂ ಮಾಡೆ ನೋಡಿ ನಲಿದು ನರ್ತಿಸಿ ತತ್ಫಲದಿಂ ಕಡೊಯೊಳಪರವಿದೇಹದ ಕಾಂಚನಪುರದೊಳ್ ಯಕ್ಷನಾಗಿ ಸಾಧುಸಂಘಕ್ಕೆ ಸಮನಿಸಿದುಪಸರ್ಗಮನಪಹರಿಸಿ ತಟಿಲ್ಲಂಘನೆಂಬ ಖೇಚರಂಗಂ ಶ್ರೀಪ್ರಭೆಗಮುದಿತನೆಂಬ ಮಗನಾಗಿ ವೈರಾಗ್ಯದಿಂ ತೊಱೆದು ಜಿನಚರಣಂದನಾನಂದದಿಂ ಬಂದ ಕ್ರಮನೆಂಬ ವಿದ್ಯಾಧರನ ವಿಭೂತಿಯಂ ನೋಡಿ ಮನಮೆಳಸಿ ನಿದಾನಂ ಗೆಯ್ದು ಜೀವಿತಾವಸಾನದೊಳೀಶಾನ ಕಲ್ಪಕ್ಕೆ ಪೋಗಿ ಬಂದು ಮಹಾರಾಕ್ಷಸನಾದೊಡೀ ಮಹಾಮಹಿಮೆ ನಿನಗಾದುದೆಂದು ಪೇೞೆ ಕೇಳ್ದು ನಿಜತನೂಜನಪ್ಪಮರರಾಕ್ಷಸಂಗೆ ಲಂಕೆಯಂ ಕೊಟ್ಟು ವಿದ್ಯೆಗಳಂ ವಿಸರ್ಜಿಸಿ ತಪಂಗೆಯ್ದು ಸ್ವರ್ಗಪ್ರಾಪ್ತನಾದನಿತ್ತಲ್,

ಕರವಾಳಕೂರ್ಪಿನಿಂದಮ ।
ರರಾಕ್ಷಸಂ ಕೂರ್ಪುಗಿಡಸಿ ತನೆಗೆಡಱುವ ಖೇ - ।
ಚರವಲ್ಲಭರಂ ಲಂಕಾ ।
ಪುರದೊಳ್ನಿಶ್ಯಂಕನರಸುಗೆಯ್ಯುತಿದ್ದಂ ॥೧೦೬॥

ಆ ವಿಪಕ್ಷರಾಕ್ಷಸನೆನಿಪ್ಪಮರರರಾಕ್ಷಸಂಗತಂ ತದನುಜನಪ್ಪ ಭಾನುರಾಕ್ಷಸಂಗಂ ಪ್ರತ್ಯೇಕದಿಂ ಪದಿಂಬರ್ತನಯರಪ್ಪುದುಮುಮರನೋರೊಂದಮ ಪೊಟಿಲ್ಗರಸುಮಾ ನಿಸರ್ಗವೈರಾಗ್ಯದಿಂದ ತೊಱೆದಿರ್ವರುಂ ನಿರ್ವಾಣಕ್ಕೆ ಸಂದರಂದಿಂ ಬೞಿಯುಮಾ ಸಂತಾನದೊಳನೇಕರರಸುಗಳತಿ ಕ್ರಾಂತರಪ್ಪುದಂ,

ಘನರುತಿಗೆ ರಾಜಹಂಸಂ ।
ಮನಮೞಿವಂತನ್ಯರಾಜಕಂ ಬೆಚ್ಚುವಿನಂ ॥
ಘನತೇಜಃಪ್ರಭನಾಳ್ದಂ ।
ಗನಪ್ರಭಂ ಪ್ರಥಿತ ಕೀರ್ತಿ ಲಂಕಾಪುರಮಂ ॥೧೦೭॥

ತದಪತ್ಯಂ,

ಧವಳಚ್ಛತ್ರಚ್ಛಾಯೆಯಿ ।
ನವನೀಚಕ್ರಕ್ಕೆ ಚಂಡಕರತಾಪಂ ಸಂ- ॥
ಭವಿಸದೆನೆ ತನ್ನ ಜಸದಿಂ
ಧವಳಿಸಿದಂ ಧವಳಕೀರ್ತಿ ದಿಗ್ಭಿತ್ತಿಗಳಂ ॥೧೦೮॥

ಅಂತಾತಂ ಲಂಕೆಯನಾಳುತ್ತುಮಿರೆ ಮತ್ತಿತ್ತ ವಿಜಯಾರ್ಧಗಿರಿಯ ದಕ್ಷಿಣ ಶ್ರೇಣಿಯ ಮೇಘಪುರದ ವಿಯಚ್ಚರೇಂದ್ರ ನತೀಂದ್ರನೆಂಬಂ ನಿಜತನೂಜಂ ಶ್ರೀಕಂಠಕುಮಾರನಿಂ ಕಿಱಿಯಳ್ ದೇವಿಲೆಯಂ ರತ್ನಪುರದ ಪೂರ್ವೋತ್ತರನ ಮಗಂಪುಷ್ಪೋತ್ತರಂಗೆ ಬೇಡೆ ಕುಡದೆ,

ದೇವಿಲೆಯಂ ಲಾವಣ್ಯರ ।
ಸಾವಿಲೆಯಂ ಧವಳಕೀರ್ತಿಗುತ್ಸವತೂರ್ಯಾ- ॥
ರಾವಂ ಗಗನನೋದರಮಂ ।
ತೀವುವಿನಂ ಚಂದ್ರಮುಖಿಯನಿತ್ತನತೀಂದ್ರಂ ॥೧೦೯॥

ಆತನತನೂಭವಂ ಶ್ರೀಕಂಠನೊರ್ಮೆ ಮಂದರಕಂದರಕ್ಕೆ ಜಿನವಂದನಾನಿಮಿತ್ತಂ ಪೋಗಿ ರತ್ನಪುರದ ಮೇಗನೆ ಮೇಘಪುರಕ್ಕೆ ಬರ್ಪ ಸಮಯದೊಳ್ಪುಷ್ಪೋತ್ತರನ ತಂಗೆ ಪದ್ಮೋತ್ತರೆ ಚೆಂಬೊನ್ನ ಕನ್ನಮಾಡದೊಳ್ ಸುಸ್ವರದಿಂ ಪಾಡುತ್ತಿರ್ಪುದುಂ,

ಜಿತಭೃಂಗೀಝುಂಕೃತಂ ನಿರ್ಜಿತಮದನಧನು ರ್ಜ್ಯಾಲತಾಟಂಕೃತಂ ತ-
ರ್ಜಿತತವೀಣಾಶಂಜಿತಂ ರಂಜಿತರತಿರಮಣೀ ರತ್ನಕಾಂಚೀಪ್ರಣಾದಂ
ಶ್ರುತಿಯಂ ತಟ್ಟೈಸೆ ರೋಮೋದ್ಗತಿಯೊಡನೆ ಗತಿಸ್ತಂಭಮಂ ಖೇಚರಾಧೀ-
ಶತನೂಜಂಗಿತ್ತುದಾ ಕನ್ನಿಕೆಯ ಮಧುರಸಪ್ತಸ್ವರೋತ್ತಾನ ಗಾನಂ ॥೧೧೦॥

ಸ್ಮರಮಂತ್ರದೇವತಾನೂ ।
ಪುರರವಮೆನೆ ಕಿವಿಯನೈದೆ ಕಳಕಂಠರವಂ ॥
ಬರುತುಂ ಶ್ರೀಕಂಠಂ ರಾ ।
ಗರಸೋತ್ಕಂಠಂ ಪ್ರತಿಷ್ಠೆಯೊಳ್ಪಾಪಟಿದಂ ॥೧೧೧॥

ಅಂತಾತಂ ಗೋರಿಯ ಮೃಗದಂತೆಳಸಿ ಬರ್ಪುದುಂ,

ನೋಡಲೊಡಮಾ ಕುಮಾರನ ।
ಗಾಡಿಗೆ ಕಣ್ಸೋಲ್ತ ಕನ್ನೆಯಂ ಮನಸಿಜನೇ- ॥
ಸಾಡಿದನೆಡೆವಡೆದೆನೆ ಪರ ।
ಪೀಡಾಪರರೇಕೆ ಬಾಧೆಬಡಿಸವೆ ಮಾಣ್ಬರ್ ॥೧೧೨॥

ಅಂತು ಪಶವಾದ ಕನ್ನೆಯುನಶಂಕಿತಂ ಲಂಕೆಗುಯ್ದು ಧವಳಕೀರ್ತಿಯ ಕೆಲದೊಳಿರ್ಪುದುಮದಂ ಪುಷ್ಪೋತ್ತರನಱಿದು,

ಎರೆದೊಡೆ ಕನ್ನೆಯಂ ಕುಡದೆ ಮುನ್ನೆನಗೆನ್ನನುಜಾತೆಯಂ ಕುಳಾ-
ಚರಣಮನೇನುಮಂ ಬಗೆಯದೆನ್ನುಮನೇಳಿಸಿಕೊಂಡುಪೋದನೆಂ-
ದೆರಡಱೊಳಂ ಮನಕ್ಕೆ ಮುನಿಸಿರ್ಮಡಿ ದಳ್ಳಿಸೆ ಲಂಕೆಗೆತ್ತಿದಂ
ಧರೆ ಕಿಱಿದೀವರೂಥಿನಿಗೆನಲ್ಪಿಲಯಾಂತಕನಂತೆ ಖೇಚರಂ ॥೧೧೩॥

ಅಂತು ಮೇಲೆತ್ತಿ ಬರ್ಪುದುಂ ಧವಳಕೀರ್ತಿ ನಯಾನುವರ್ತಿ ಮುನ್ನಂ ಸಾಮಮನೊಡರ್ಚಿಮೆಂದು ಮಹತ್ತರರಂ ಪುಷ್ಪೋತ್ತರನಲ್ಲಿಗಟ್ಟುವುದುಮವರ್ ಬಂದು ಕಂಡುಪಾಯನಪುರಸ್ಸರಮಿಂತೆಂದರ್ :

ಅನುರೂಪಂ ಕನ್ನೆಗೀತಂ ಕುಲಭುಜಬಲವಿದ್ಯಾಬಲಖ್ಯಾತನೀತಂ
ಗೆ ನಿರಾಲೋಚಂ ಕುಡಲ್ವೇಳ್ಪುದು ಯುವತಿಯನ್ಯೋನ್ಯಸಂಪ್ರೀತಿಯಿಂದಾ-
ಯ್ತನುಬಂಧಂ ರಾಗದಿಂದಿನ್ನಿವರ್ಗೆ ಮದುವೆಯಂ ಮಾಳ್ಪುದೆಂಡಟ್ಟಿದಂನೀ-
ಮ್ಮನುಜನ್ಮಂ ನಿಮ್ಮ ನಣ್ಪಂ ಬಯಸಿ ಪದೆಪಿನಿಂದೆಮ್ಮ ವಿದ್ಯಾಧರೇಂದ್ರಂ ॥೧೧೪॥

ಎನೆ ಮನದೆಗೊಂಡು ನಿರುತ್ತರಂ ಪುಷ್ಪೋತ್ತರನೊಡಂಬಟ್ಟು ಮಗುಟೆ ಪೋಪುದುಂ ಶುಭದಿನಮುಹೂರ್ತದೊಳ್ ಪದ್ಮೋತ್ತರೆಯಂ ಶ್ರೀಕಂಠಗೆ ಮದುವೆಯಂ ಮಾಡಿ ಮತ್ತೊಂದು ದಿನಂ ಶ್ರೀಕಂಠನಂ ನಿನಗೆ ವಿಜಯಾರ್ಧಮಹೀಧರದೊಳಹಿತರೊಳೊಡಗೂಡಿರ್ಪುದುನೀತಿ-ಯಲ್ಲದಱಿನನೇಕದ್ವೀಪ ಮುಖ್ಯಮಪ್ಪ ವಾನರದ್ವೀಪದೊಳೆನ್ನ ಸಮೀಪದೊಳಿರ್ಪುದೆನೆ ಮನದೆಗೊಂಡು ತದ್ವೀಪ ನಿರೀಕ್ಷಣ ನಿಮಿತ್ತಂ ಬರುತ್ತುಮೊಂದೆಡೆಯೊಳ್ವಾನರಂಗಳಂ ಶ್ರೀಕಂಠಂ ಕಂಡವಂ ತರಿಸಿಕೊಂಡು ಕಿಷ್ಕಿಂಧಗಿರಿಯ ಮೇಲೆ ಪದಿನಾಲ್ಕು ಯೋಜನವಿಸ್ತಾರದ ಪೊಟಿಲಂ ಮಾಡಿ ಕಿಷಿಂಧಪುರಮೆಂದು ಪೆಸರಿಟ್ಟಾ ಪುರದೊಳ್ಪಲಕಾಲಂ ರಾಜ್ಯಂಗೆಯುತ್ತಿರ್ದೊಂದು ದಿವಸಂ ನಂದೀಶ್ವರ ಪೂಜೆಗಚ್ಯುತೇಂದ್ರನೊಡನೆ ಪೋಗುತ್ತುಂ ಮಾನುಷೋತ್ತರದ್ವೀಪದಿಂದತ್ತ ಮನುಷ್ಯರ್ಗೆ ಸಲವಿಲ್ಲಪ್ಪುದಱಿಂ ನಿಜವಿಮಾನಂ ಪೋಗದಿರೆ ಮಗುಟ್ದು ಬಂದದುವೆ ನಿರ್ವೇಗಮಾಗೆ ತನ್ನ ಮಗಂ ವಜ್ರಕಂಠಂಗೆ ರಾಜ್ಯಮಂ ಕೊಟ್ಟು ತಪಂಬಟ್ಟು,

ನಾಕಾನೋಕಹ ಸುಮನ ।
ಶ್ರೀಕಂಠಾಭರಣಮಾಗೆ ಗಗನಶ್ರೀಗಾ ॥
ಶ್ರೀಕಂಠಯೋಗಿ ಮುಕ್ತಿ ।
ಶ್ರೀಕಂಠಾಭರಣಮಾದನನವಧಿಬೋಧಂ ॥೧೧೫॥

ತತ್ತನಯಂ,

ಪರಿಪಾಲಿಸಿದಂ ವಾನರ ।
ಪುರಮಂ ಚಿರಕಾಲಮಹಿತ ಕಂಠಗ್ರಹಣಾ- ॥
ತುರಕರಕೃಪಾಣನಾಹವ ।
ನಿರಂಕುಶಂ ವಜ್ರಕಂಠನುದ್ಧತಕಂಠಂ ॥೧೧೬॥

ಆತನೊಂದು ದಿವಸಂ ತ್ರಿಕಾಲದರ್ಶಿ ಮಹರ್ಷಿಯರಂ ಕಂಡು ಪೂಜಿಸಿ ಪೊಡೆವಟ್ಟು ಧರ್ಮಶ್ರವಣಾನಂತರಂ ಮದೀಯ ಜನಕಂಗಚ್ಯುತನೊಳತಿಪ್ರೀತಿ ಸಮನಿಸಿದ ಕಾರಣಮೇನೆಂಬುದುಂ ಮುನೀಂದ್ರರಿಂತೆಂದು ಬೆಸಸಿದರ್: ವೀತಶೋಕಪುರದ ಪರದನರ್ಹದ್ದತ್ತನೆಂಬನಾತನ ತನಯರ್ ಧನದತ್ತ ವಸುದತ್ತರೆಂಬರ್ ತಮ್ಮ ತಂದೆ ತಪಸ್ಥನಿಪ್ಪುದುಂ ಸ್ತ್ರೀನಿಮಿತ್ತಂ ತಮ್ಮೊಳಗೆ ಮುಳಿದು, ಗುರೂಪದೇಶದಿಂ ಮುಳಿಸನುಳಿದು ತಪಂಗೆಯ್ದಣ್ಣನಚ್ಯುತೇಂದ್ರನಾದನನುಜನುಮಮನಗತಿವಡೆದು ನಾಕಚ್ಯುತಂ ಶ್ರೀಕಂಠನಾಗಿ

ತಪಚ್ಯುತೇಂದ್ರ ದರ್ಶನ ಜನಿತ ಜಾತಿಸ್ಮರಂ ಪಂದನಾಭಕ್ತಿಯಿನೊಡನೆ ಪೋಗುತ್ತುಂ, ಮನುಷ್ಯ ಕ್ಷೇತ್ರದಿಂ ದತ್ತಲ್ ತನಗೆ ಸಲವಿಲ್ಲದೊಡಮುವೆ ವೈರಾಗ್ಯಕಾರಣಮಾಗೆ, ನಿನಗರಸುತನಮನಿತ್ತು ತಪಂಬಟ್ಟನೆಂಬುದುಮುದಂ ಕೇಳ್ದು ತಾನುಂ ನಿರ್ವೇಗಪರಾಯಣನಾಗಿ ವಜ್ರಕಂಠಂ ನಿಜತನೂಜನಪ್ಪಿಂದ್ರಾಯುಧಂಗರಸುತನಮನಿತ್ತು ತಪಂಗೆಯ್ದು ಸುಗತಿಪ್ರಾಪ್ತನಾದಂದಿಂ ಬಳಿಯಂ,

ಅಪರಿಮಿತ ಭುಜಬಲರ್ವಾ ।
ಸುಪೂಜ್ಯಜಿನ ವೃಷಭ ಸಮವಸರಣಂಬರಮಾ ॥
ಕಪಿಕುಲದೊಳ್ಕಿಷ್ಕಿಂಧಾ ।
ಧಿಪರಿಂದಾರಾಯುಧನಿನಾದರಿತ್ತಲನೇಕರ್ ॥೧೧೭॥

ಅಲ್ಲಿಂ ಬಳಿಯಮಾಕುಲದೊಳಪ್ರತಿಹತಪ್ರಭನಮರಪ್ರಭನೆಂಬನಾದನತ್ತ ಲಂಕೆಗೆ ಧವಳಕೀರ್ತಿಯ ಕುಲದೊಳ್ಪಲರುಮವಿಶ್ರಾಂತ ವಿಕ್ರಾಂತರತಿಕ್ರಾಂತರಪ್ಪುದುಮಲ್ಲಿಂ ಬಳಿಯಂ ತ್ರಿಕೂಟನೆಂಬನೊಡೆಯನಾದನಾತನ ಸುತೆ ಗುಣವತಿಯನಮರ ಪ್ರಭಂಗೆ ಮದುವೆಮಾಡಲೆಂದು ಕಿಷ್ಕಿಂಧಪುರಕ್ಕುಯ್ವುದುಮಾಕೆ ವಿವಾಹವೇದಿಕೆಯೊಳ್ ಪಂಚರತ್ನವರ್ಣಚೂರ್ಣದಿಂದ ಬರೆದ ಲತೆಗಳೊಳಗೆ ವಾನರಂಗಳಂ ಕಂಡು ಬೆರ್ಚುವುದುಮಮರಪ್ರಭನಿವಂ ಬರೆದರಾರೆನೆ ಗೃಹಮಹತ್ತರರನಿವಂನಿಮ್ಮ ಪೂರ್ವಜನಪ್ಪ ಶ್ರೀಕಂಠಂ ಕೊಂಡಾಡಿದನಪ್ಪುರದಱಿಂ ನಿಮ್ಮ ಕುಲದವರುತ್ಸವಂಗಳೊಳಿಂತೆ ಬರೆವರೆನೆ ಮುನಿಸಂ ತೊಱೆದಂತಾದೊಡಿವಂ ಮೆಟ್ಟುವೆಡೆ-ಯೊಳೇಕೆ ಬರೆವಿರೆಂದು ಪತಾಕೆಗಳೊಳಂ ಮಕುಟಂಗಳೊಳಂ ಮಣಿಕನಕ ವಿರಚಿತಂಗಳಂ ಕೀಲಿಸಿ ಕೊಂಡಾಡಿ ವಾನರಧ್ವಜರುಂ ವಾನರಕುಲರುಮೆಂಬ ರೂಢಿಯಂ ಮಾಡಿ,

ಅಮರಪ್ರಭಖಚರಂ ತ ।
ನ್ನ ಮಗಂ ಕಪಿಕೇತುಗಿತ್ತು ಸಿರಿಯಂ ಸಂನ್ಯಾ- ॥
ಸಮನಪ್ಪುಕೆಯ್ದು ಮುಕ್ತಿ ।
ಪ್ರಮದಾಪ್ರೇಮಾಲೋಕನಕ್ಕೊಳಗಾದಂ ॥೧೧೮॥

ಆ ತೆಱದಿಂ ತೊಱೆದು ಪಲರುಮಾ ಕುಲದೊಳಂಬರ ಚರಮುಕ್ತರಾದಿಂ ಬಳಿಕ್ಕೆ ಲಂಕೆಗೆ ವಿದ್ಯುತ್ಕೇಶನೆಂಬನಾದನಾತನ ಮಹಾದೇವಿ ಶ್ರೀಚಂದ್ರೆಗೆ ಸುತಂ ಸುಕೇಶನೆಂಬನಾದನ-ತ್ತಲಾ ವಾನರಧ್ವಜಕುಲದೊಳ್ಮಹೋದಧಿಯೆಂಬನಾದನಾತಂಗಂ ವಿದ್ಯುತ್ಕೇಶಂಗಮತಿ ಪ್ರೀತಿ ಸಮನಿಸಿದುದಾ ವಿದ್ಯುತ್ಕೇಶನೊರ್ಮೆ ವನಕೇಳಿಯೊಳಿರ್ಪುದುಮೊಂದು ವಾನರಂ ಶ್ರೀಚಂದ್ರೆಗಂಗಭಂಗಮಂ ಮಾಡಿ ವಿದ್ಯುತ್ಕೇಶನಿಂದೇಸುವೆತ್ತು ಚಾರಣಋಷಿಯರ ಚರಣೋಪಾಂತಮಂ ಸಾರ್ದಾರಾಧನಾವಿಧಿಯಿಂ ದೇಹಮಂ ಬಿಟ್ಟು ದೇವಗತಿವಡೆದವಧಿಯಂ ಪ್ರಯೋಗಿಸಿ ಬಂದು ಶರೀರಪೂಜೆಗೆಯ್ವ ಸಮಯದೊಳ್ ವಿದ್ಯುತ್ಕೇಶನುಱಿದ

ಕಪಿಕುಲಕ್ಕಪಾಯಮನೊಡರ್ಚೆ ಕಂಡು ಕಡುಮುಳಿದು ಪರ್ವತಾಕಾರದ ವಾನರಂಗಳನಗುರ್ವು ಪರ್ವೆ ವಿಗುರ್ವಿಸುವುದುಮಂ,

ಮರನಂ ಕಿೞ್ತು ನಗಂಗಳಂ ನೆಗಪಿ ರೌದ್ರಾಕಾರದಿಂ ಬರ್ಪ ವಾ-
ನರರಂ ಕಂಡು ವಿಮುಕ್ತಕೇಶಭರ ವಿದ್ಯುತ್ಕೇಶ ವಿದ್ಯಾಧರಂ
ತ್ವರಿತಪ್ರಸ್ಖಲಿಪ್ರಯಾಣರಭಸಂ ಶುದ್ಧಾಂತ ಕಾಂತಾಜನಂ
ಬೆರಸುತ್ಕಂಪಿತನೋಡಿ ದಿವ್ಯಮುನಿಪಾದಂಭೋಜಮಂ ಪೊರ್ದಿದಂ ॥೧೧೯॥

ಅನ್ನೆಗಂ ಬೆಂಬೞಿಯಸುೞಿಯದೆ ಮುಟ್ಟೆವಂದೀ ಮುಟ್ಟುಗೊಟ್ಟದುರಾತ್ಮನಂ ವಿದಾರಿಸುವೆನೆಂದಾ ವಾನರಚರಾಮರಂಗೆ ಮುಳಿಸನುೞಿವಂತು ಧರ್ಮೋಪದೇಶಂಗೆಯ್ದು ವಿದ್ಯುತ್ಕೇಶನಂ ನೋಡಿ ನೀಮಿರ್ವರನೇಕ ಭವದೊಳೊರೊರ್ವರಂ ವಧಿಸುತ್ತುಂ ಬಂದೆಂತಾನುಂ ಮನುಷ್ಯಾಯುಷ್ಯಬಂಧಮಂ ಪಡೆದು ಶ್ರಾವಸ್ತಿ ಪುರದೊಳ್ನೀಂ ಯಶೋದತ್ತನಾಗಿ ಪುಟ್ಟಿ ಕರ್ಮೋಪಶಮದಿಂ ಜಿನದೀಕ್ಷೆಯಂ ಕೈಕೊಂಡುಗ್ರೋಗ್ರತಪಂಗೆಯ್ಯುತ್ತುಂ ಕಾಶೀವಿಷಯ-ದೊಳ್ಧರಣೀಭೂಷಣಮೆಂಬ ಪರ್ವತದ ಮೇಗೆ ಪ್ರತಿ ಮಾಯೋಗದೊಳಿರ್ಪುದುಮಂದು ಬೇಡನಾಗಿ ಪುಟ್ಟದೀ ಕಱಿದು ದೇವನುಂ ಮೃಗಯಾನಿಮಿತ್ತಂ ಕೊಬಿಲುತ್ತುಂ ಬಂದ ನಿಮಿತ್ತದಿಂ ನಿನ್ನಂ ಬಯ್ದು ನುಡಿವುದುಂ ನೀನುಂ ಮಾನಕಷಾಯದಿಂ ಕಱಿದು ಜ್ಯೋತಿರಮರಗತಿವಡೆದಲ್ಲಿಂ ಬಂದು ವಿದ್ಯುತ್ಕೇಶನಾದೆ ಬೇಡನುಂ ಕಱಿದು ಕೋಡಗನಾಗಿ ಮುನಿಪ್ರಸಾದದಿಂ ಮಹೋದಧಿವೆಸರ ದೇವನಾದನೆಂಬುದುಂ,

ದೇಶಿಕರಿಂ ಪೂರ್ವಭವ ।
ಕ್ಲೇಶಂಗಳನಱಿದು ಕೊಟ್ಟು ತೊಱಿದಂ ವಿದ್ಯು- ॥
ತ್ಕೇಶಂ ನಿಜತನಯಂಗೆ ಸು ।
ಕೇಶಂಗರಸಂ ದಿವಕ್ಕೆ ಸಂದಂ ಕಡೆಯೊಳ್ ॥೧೨೦॥

ಮತ್ತಿತ್ತ ವಾನರದ್ವೀಪಾಧಿಪತಿ ಚಿರಕಾಲಮರಸುಗೆಯ್ದು,

ಅವಚಱನಿಂದ್ರಿಯ ಸೌಖ್ಯಮಿಮಾಯೆ ವಿರಕ್ತಿಯಿಂ-
ದವನಿಯನಿತ್ತು ನಿಜಾತ್ಮಜಂ ಪ್ರತಿಬಿಂದುಗ-
ವ್ಯವಹಿತ ಸೌಖ್ಯಮನೀವುದಂ ಜವನಂ ಪರಾ-
ಭವಿಸಿ ಭವೋದಧಿಯಂ ಮಹೋದಧಿ ದಾಂಟಿದಂ ॥೧೨೧॥

ತದಪತ್ಯಂ ತನ್ನ ಮಕ್ಕಳಪ್ಪ ಕಿಷ್ಕಿಂಧಂಗಮಂಧ್ರಕಂಗಂ ಜರಾಪರಿಚಯದಿಂ ಸಿರಿಯನವಜ್ಞೆಗೆಯ್ದು ಕೊಟ್ಟು,

ಪ್ರತಿಬಿಂದು ಜರಾಬಿಂದುಗ ।
ಳ ತರ್ಕ್ಯಬಲ ಕಾಲಪುರುಷನಿಂ ಸಮನಿಸೆ ಸಂ- ॥
ಸೃತಿಯಂ ನಿರ್ಮೂಲಿಸಿ ನಿ ।
ರ್ವೃತಿಲಕ್ಷ್ಮೀವಶ್ಯತಿಲಕ ಬಿಂದುವನಾಂತಂ ॥೧೨೨॥

ಮತ್ತಿತ್ತ ವಿಜಯಾರ್ಧನಗೋಪತ್ಯಕದಾದಿತ್ಯನಗರಮನಾಳ್ವ,

ಮಂದಮಾಲಿ ವಿಯಚ್ಚರ ।
ನಂದನೆ ಕಡುನೀಱಿ ಮಿಾಱಿ ಶಕ್ರನ ಶಚಿಯಂ ॥
ಕಂದರ್ಪನ ರತಿಯಂ ತ ।
ನ್ನಂದಂ ಶ್ರೀಮಾಲೆ ಮಿಾಱಿದಳ್ ಶೈಶವಮಂ ॥೧೨೩॥

ಆ ಖಚರ ಕನ್ಯಾಸ್ವಯಂವರಕ್ಕೆ ದಕ್ಷಿಣೋತ್ತರ ಶ್ರೇಣಿಯ ಖಚರಕುಮಾರರುಂ ವಿದ್ಯಾಧರ ಚಕ್ರವರ್ತಿಯಪ್ಪಶನಿವೇಗ ತನೂಭವಂ ವಿಜಯಸಿಂಹನುಂ ಕಪಿಕೇತುಗಳಪ್ಪ ಕಿಷ್ಕಿಂಧಾಂಧ್ರಕರುಂಲಂಕಾಧಿಪನಪ್ಪಸುಕೇಶನುಂ ಮೊದಲಾಗೆ ಪಲಂಬರಂಬರಚರಾಧಿರಾಜರ್ ಬಂದು ಪಂಚರತ್ನಖಚಿತ ಕಾಂಚನಮಂಚಮೊಳ್ಮಹಾ ವಿಭೂತಿಯಿಂದಮಿರೆ,

ಶ್ರೀಮಾಲೆ ಮಾಲೆ ಸೂಡಿದ ।
ಳಾ ಮನ್ಮಥರೂಪನಪ್ಪ ಕಿಷ್ಕಿಂಧವಿಯ- ॥
ದ್ಗಾಮಿತೆಗಡಱಿದನದರ್ಕು ।
ದ್ದಾಮಭುಜಂ ವಿಜಯಸಿಂಹನಾಹವಸಿಂಹಂ ॥೧೨೪॥

ನೆರೆದ ವಿಯಚ್ಚರರಿರ್ದಂ ।
ತಿರೆ ತಾನೆ ಕಡಂಗಿ ಪೊಂಗಿ ಮುಂದಱಿಯದೆ ಕಾ- ॥
ತರನೀಟ್ಟುದ್ದಕೊಳ್ವೆನೆಂದಾ ।
ಪರಿಣಾಕ್ಷಿಯನಿರದೆ ಕಾಳೆಗಕ್ಕೊಡರಿಸಿದಂ ॥೧೨೫॥

ಆಗಳಂಧ್ರಕಸುಕೇಶರ್ ಕೀನಾಶರಂತೆ ದೆಸೆದೆಸೆಗೆ ಮಸಗಿ ಕಿಷ್ಕಿಂಧನುಮಂ ಶ್ರೀಮಾಲೆಯುಮಂ ಕಿಷ್ಕಿಂಧಪುರಕ್ಕೆ ಕಟ್ಟಿ ಕಡುಕೆಯ್ದು ಕಾದುವಾಗಳ್,

ಅಂಧ್ರಕನಾಕಾಶಂ ನೀ ।
ರಂಧ್ರಮೆನಲ್ ಸುರಿದು ಸರಲ ಸರಿಯಂ ಜವನೀ- ॥
ತಂ ಧ್ರುವಮೆಂಬಿನಮುಮರಪು ।
ರಂಧ್ರಿಯರಂ ಪಿಜಯಿ ಪಿಜಯಸಿಂಹಂಗಿತ್ತಂ ॥೧೨೬॥

ಅಂತು ಕಾಳೆಗಮಂ ಗೆಲ್ದು ಸುಕೇಶಸುಂ ತಾನುಂ ಕಿಷ್ಕಿಂಧಪುರಮಂ ಪೊಕ್ಕು ಸಮರಸನ್ನದ್ಧರಾಗಿರ್ಪುದುಮಿತ್ತಲಶನಿವೇಗಂ ಸುತನ ಸಾವಂ ಕೇಳ್ದು ಶೋಕವೇಗದಿಂ ಕ್ರೋಧವೇಗಮತ್ಯಧಿಕಮಾಗೆ ಗಗನವೀಧಿಯೊಳ್ಬಂದು ಕಿಷ್ಕಿಂಧಪುರಮಂ ಮೂವಳಸಾಗೆ ಮುತ್ತೆ ಪೊಜಿಮಟ್ಟು ಕಾದಿ ಯಮಮುಖಮನಂಧ್ರಕಂ ಪುಗುವುದುಂ ಕಿಷ್ಕಿಂಧಸುಕೇಶರತಿಚಕಿತಚಿತ್ತರಾಗಿ ಪೋಗಿ ಪಾತಾಳಲಂಕೆಯಂ ಪೊಕ್ಕಿರ್ಪುದು ಮಶನಿವೇಗಂ ಸುಕೇಶನ ರಾಜಧಾನಿಯಪ್ಪ ಲಂಕೆಯಂ ನಿರ್ಘಾತಂಗೆ ಕೊಟ್ಟು ನಿಜರಾಜಧಾನಿಗೆ ಪೋಗಿ ಕತಿಪಯದಿನದೊಳೊರ್ಮೆ ಪರ್ಮ್ಯಾಗ್ರಭೂಮಿಯೊಳಿರ್ದು ನೆಗೆದ ಮುಗಿಲಂ ನೋಡುತ್ತುಮಿರ್ಪುದುಂ,

ಘನಂ ಕರಗೆ ಕಂಡು ಕಂಡಶನಿವೇಗವಿದ್ಯಾಧರಂ
ಘನೋಪಲದ ಮಾಟ್ಕೆಯಿಂ ಕರಗೆ ತೃಷ್ಣೆ ಸಾಮ್ರಾಜ್ಯದೊಳ್
ಮನಸ್ವಿ ನಿಲವೇಟ್ಟು ತನ್ನ ಸುತನಂ ಸಹಸ್ರಾರನಂ
ಜಿನೇಂದ್ರಮುನಿರೂಪಮಂ ತಳೆದನಸ್ತ ಸಂತಾಪಮಂ ॥೧೨೭॥

ಅಂತಾತಂ ಜಾತರೂಪಧರನಪ್ಪುದುಮಿತ್ತ ಕಿಷ್ಕಿಂಧನುಂ ಮಧುಪರ್ವತದ ಮೇಲೆ ಪುರಮಂ ಮಾಡಿ ಶ್ರೀಮಾಲೆಯೊಳ್ಕೂಡಿ ಸುಖಮಿರ್ಪುದುಂ,

ಆ ಕ್ಷೋಣೀಶ್ವರವಲ್ಲಭೆ ।
ಋಕ್ಷಜ ಸೂರ್ಯ ತನೂಜರನಂ ಪಡೆದು ಸರೋ- ॥
ಜಾಕ್ಷಿಯನನಂತರಂ ಶುಭ ।
ಲಕ್ಷಣೆಯಿಂ ಸೂರ್ಯಮಾಲೆಯಂ ಸತಿ ಪಡೆದಳ್ ॥೧೨೮॥

ಆಕೆಯಂ ಮೇಘಪುರಮನಾಳ್ವ ಮೇರುಸುತನಪ್ಪ ಸಿಂಪಮರ್ದನಂಗೆ ಕೊಟ್ಟೊಡಾತಂ ಕರ್ಣಪರ್ವತದೊಳ್ಕರ್ಣಕುಂಡಳಮೆಂಬ ಪುರಮಂ ಮಾಡಿ ಮನೋರಾಗದಿನಿರ್ಪುದುಮಿತ್ತಲ್,

ಗಗನೇಚರಕೈರವಕುಲ ।
ಮೃಗಧರನೆನಿಸಿದ ಸುಕೇಶನಂಗನೆಗಾದರ್ ॥
ಪಗೆಯನಗೆಯೆತ್ತಲಿಂದ್ರಾ ।
ಣಿಗೆ ಮಾಲಿ ಸುಮಾಲಿ ಮಾಲ್ಯವಂತಸುತರ್ಕಳ್ ॥೧೨೯॥

ಅಂತವರ್ನಯೌವನಪ್ರಾಪ್ತರುಂ ಸಾಧಿತಸಕಲವಿದ್ಯರುಮವಾರ್ಯವೀರ್ಯರು-ಮಪ್ಪುವಜಿಂ ಮೆಚ್ಚಿದ ದೆಸೊಯೊಳ್ಮೆಚ್ಚಿದಂತೆ ಬಿಚ್ಚತಂ ಕ್ರೀಡಿಸುತ್ತುಮಿರೆ ಸುಕೇಶನವರಂ ಕರೆದು ದಕ್ಷಿಣ ಸಮುದ್ರಕ್ಕೆ ಪೋಗದಿರಿಮೆಂಬುದುಮವರದೇಕಾರಣಮೆನೆ ಸುಕೇಶನಿಂತೆಂದಂ ತೋಯದವಾಹನನಿಂ ತೊಡಗಿ ನಮ್ಮನ್ವಯಾಗತಮಪ್ಪ ಲಂಕಾಪುರಮನಶನಿರೇಗನೆಟಿದು-ಕೊಂಡು ನಿರ್ಘಾತಂಗೆ ಕೊಟ್ಟೊಡವನನೇಕ ವಿದ್ಯೆಗಳಿನಾರ್ಗಂ ದುಷ್ಟವೇಶಮೆನೆ ಕಾಪಂ ಮಾಡಿ

ಬಲಿಷ್ಠನಾಗಿರ್ದನಾತಂ ನಿಮ್ಮಂ ಕಂಡೊಡೆ ಕೊಲ್ಗುಮೆಂದು ಬಾರಿಸಿದೆನೆಂಬುಮವರದರ್ಕೆ ಮನದೊಳೆ ಕನಲ್ದು,

ಇನ್ನೆವರಂ ಕುಲಪರಿಭವ ।
ಮನ್ನಿಮ್ಮಡಿ ಪೇಱದಿರ್ದಿರಾಲಿಸಿ ತಡೆದಂ- ॥
ದುನ್ನತಿ ಪಿಂಗುಗುಮೆಂದು ।
ತ್ವನ್ನಕ್ರೋಧರ್ದವಾಗ್ನಿಯಂತುರಿದೆಜ್ವರ್ ॥೧೩೦॥

ಅಂತು ಕಲುಷವಶಗತರಸಂಖ್ಯಾತ ಬಲಸಮೇತರಾಗಿ ಪಾತಾಳಲಂಕೆಯಂ ಪೊಱಮಟ್ಟು ಮರುಸ್ಮಾರ್ಗದಿಂ ಬಂದಶಂಕಿತರ್ಲಂಕೆಯಂ ಮುತ್ತುವುದುಂ,

ಸೆರಗಂ ಬೆರಗಂ ಬಗೆಯದೆ ।
ಪುರಮಂ ಪೊಱಮಟ್ಟು ಕಾದಿ ಮಾಲಿಯ ಬಾಹಾ- ॥
ಪರಿಘನಿಶಿತಾಸ್ತ್ರಹತಿಯಿಂ ।
ಸುರಲೋಕಪ್ರಾಪ್ತನಾದನಾ ನಿರ್ಘಾತಂ ॥೧೩೧॥

ಘಾತಿಸಿ ರಣಮುಖದೊಳ್ನಿ ।
ರ್ಘಾತನನವರೀಟ್ಟುಕೊಂಡು ಲಂಕಾಪುರಮಂ ॥
ಪಾತಾಳಲಂಕೆಯಿಂ ಪಿತೃ ।
ಮಾತೃಗಳಂ ಬರಿಸಿ ರಾಜ್ಯಸುಖದಿಂದಿರ್ದರ್ ॥೧೩೨॥

ಅಂತು ಪಗೆಯನಗೆಯೆತ್ತಿ ಕಳೆದು ಕುಲಪರಿಭವಮಂ ಪಿಂಗಿಸಿ,

ಉಭಯಶ್ರೇಣಿಯ ಖಚರ ।
ಪ್ರಭುಗಳನವಟಲೆದು ಕಪ್ಪಮಂ ಕೊಂಡು ಮಹಾ- ॥
ವಿಭವಮನೊಲಕೊಂಡರ್ಪು ।
ಣ್ಯಭಾಗಿಗಳ್ಗಾಪುವೀರ್ಯಮನಿವಾರ್ಯಮೆನಲ್ ॥೧೩೩॥

ಅಂತು ಕೆಲವು ಕಾಲಂ ಪೋಪುದುಮವರ ತಂದೆ ಸುಕೇಶನಧಿರಾಜ ಯುವರಾಜ ಪಟ್ಟಮನವರ್ಗೆ ಕಟ್ಟಿ ಕಿಷ್ಕಿಂಧಂ ಬೆರಸು ತಪಸ್ವನಪ್ಪುದುಂ ಮತ್ತಿತ್ತಲ್ ರಥನೂಪುರಚಕ್ರವಾಳ ಪುರಮನಾಳ್ವ ಸಹಸ್ರಾರಖಚರವಲ್ಲಭಂ ನಿಜಮಹಾದೇವಿಗಳವಸಿಱೊಳಿಂದ್ರನ ವಿಭೂತಿಯಂ ನೋೞ್ಪ ಬಯಕೆ ಸಮನಿಸುವುದುಂ ವಿದ್ಯೆಯಿಂ ತದ್ವಿಭೂತಿಯಂ ತೋಱಿ ಬಯಕೆಯಂ ತೀರ್ಚೆ ನವಮಾಸಮಪ್ಪುದುಂ,

ಜನಿಯಿಸೆ ತನಯಂ ಬಾಂಧವ ।
ಜನಮಿಂದ್ರ ವಿಭೂತಿಯಿಂ ತದಂಬಿಕೆ ಮುನ್ನಂ ॥

ಮನದೊಳ್ಬಯಸಿದುದಱಿನಿಂ ।
ದ್ರನೆಂದು ಬಿತ್ತರಿಸೆ ನಾಮಕರಣೋತ್ಸವಮಂ ॥೧೩೪॥

ಆತನನುಕ್ರಮದಿಂ ಬಲೆದು ನವಯೌವನಪ್ರಾಪ್ತನಾಗಿ ಸಾಧಿತಸಕಲವಿದ್ಯನುಭಯಶ್ರೇಣಿಯಂ ಬಾಯ್ಕೇಳಿಸಿ ಸಕಲ ಚಕ್ರವರ್ತಿಪದಮಂ ಪಡೆದು ತನ್ನ ವಿಜಯಾರ್ಧನಗಮಂ ನಾಕಮೆಂದು ತನ್ನ ಖಚರಕಾಂತೆಯರನೂರ್ವಶಿ ರಂಭೆ ಸುಕೇಶಿಯರೆಂಬ ದೇವಕಾಂತೆಯರೆಂದು ತನ್ನ ವಾರಣಮನೈರಾಣವಮೆಂದು ತನ್ನಶ್ವಮನುಚ್ಚೈಶ್ರವಮೆಂದು ತನ್ನನುಚರನಂ ಹರಿಣಕೇಸರಿವೆಸರ ಪಡೆವಳನೆಂದು ತನ್ನ ಗಾಯಕರು ತುಂಬುರುನಾರದರೆಂದು ತನ್ನ ಮುಖ್ಯ ಪುರುಷರುಂ ಲೋಕಪಾಲಕರೆಂದು ತನ್ನ ಸಭೆಯಿಂ ಸುಧರ್ಮಮೆಂದು ತನ್ನ ಸೇನೆಯಂ ದೇವಸೇನೆಯೆಂದು ತನ್ನ ಸಾಮಾನ್ಯಾಯುಧಮಂ ಕುಲಿಶಾಯುಧಮೆಂದು ತನ್ನ ವಿಮಾನಮಂ ಋತುವಿಮಾನಮೆಂದು ತನ್ನ ಪುರೋಹಿತರನಶ್ವಿನ್ಯಾದ್ಯಷ್ಟವಸುಗಳೆಂದು ತನ್ನ ಕಿನ್ನರ ಪುರದವರ್ಗಳಂ ಕಿನ್ನರರೆಂದು ತನ್ನ ಗಂಧರ್ವ ಪುರದವರ್ಗಳಂ ಗಂಧರ್ವರೆಂದು ತನ್ನ ಯಕ್ಷಪುರದ -ವರ್ಗಳಂ ಯಕ್ಷರೆಂದು ತನ್ನ ಮಂತ್ರಿ ಮುಖ್ಯನಂ ಬೃಹಸ್ಪತಿಯೆಂದು ತಾನಿಂದ್ರನಲ್ಲದೆಯುಂ ತನ್ನಿಂದ್ರನೆಂದು ಬಗೆದು ನಾಲ್ವತ್ತೆಣ್ಛಾಸಿರಮಂತಃಪುರಕ್ಕಧಿಪನಾಗಿ ಪುರಾಕೃತ ಪುಣ್ಯದಿಂ ಸುಖಮನನುಭವಿಸುತ್ತಿರೆ,

ಮಾಲಿಗೆ ಕಪ್ಪಮೀವ ಖಚರರ್ಪಿಡಿದಿಂದ್ರನನೀಯದಾಜ್ಞೆಯಂ
ಪಾಲಿಸಲೊಲ್ಲದೇಳಿಸುವದುಂ ಚರರಿಂದಱಿದುಗ್ರಕೋಪಮು-
ನ್ಮೀಲಿಸೆ ಮೇಱಿದಪ್ಪಿದ ಬಲಂಬೆರಸಿಂದ್ರನನಾಗಳುಂತೆ ನಿ-
ರ್ಮೂಲಿಸಲೆಂದು ಕೀಱಿ ನಡೆದೆಯ್ದಿದನಾ ವಿಜಯಾರ್ಧಶೈಲಮಂ ॥೧೩೫॥

ಅಂತು ತನ್ನನೊಡವುಟ್ಟಿದ ಸುಮಾಲಿ ಮಾಲ್ಯವಂತರುಂ ಕಿಷ್ಕಿಂಧನ ಮಕ್ಕಳಪ್ಪ ಋಕ್ಷಜ ಸೂರ್ಯಜರುಂ ಪೆಱರಱಿಕೆಯ ನಾಯಕರುಂ ಬೆರಸಸಂಖ್ಯಾಸೇನಾಸಮನ್ವಿತನೆತ್ತಿ ಬರ್ಪುದನಿಂದ್ರಂ ಕೇಳ್ದು ರಥನೂಪುರಚಕ್ರವಾಳ ಪುರದಿಂದಿದಿರೆತ್ತಿ ಬಂದೈರಾವಣಾರೂಢಂ ಲೋಕಪಾಲಪುರಸ್ಸರಂ ಮಹಾಯುದ್ಧಂಗೆಯ್ವುದುಂ,

ಮಾಲಿ ಮುಳಿಸಿಂದಮಿಂದ್ರನ ।
ಮೇಲೆ ನಿಶಾತಾಸ್ತ್ರವರ್ಷಮಂ ಕಱೆವುದುಮಾ ॥
ಮಾಲಿಯನಿಂದ್ರಂ ದಿವ್ಯಶ ।
ರಾಳಿಯಿನೆಚ್ಚಂತಕಂಗೆ ಬಾಣಸುಗೆಯ್ದಂ ॥೧೩೬॥

ಅದಂ ಕಂಡು ಸುಮಾಲಿ ಮಾಲ್ಯವಂತರು ಋಕ್ಷಜ ಸೂರ್ಯಜರುಂ ಪೆಱರುಮಱಿಕೆಯ ನಾಯಕರುಂ ಬಿಱುತೋಡಿ ಪೋಗಿ ಪಾತಾಳಲಂಕೆಯಂ ಪೊಕ್ಕರಾಗಳಪಹಾರ ತೂರ್ಯಮಂ ಪೊಯಿಸಿ,

ಪ್ರಥಿತಪೃಥುಭುಜಸಹಾಯಂ ।
ಮಥಿಯಿಸಿ ರಿಪುಬಲಮನಾಜಿಯೊಳ್ಪೂರ್ಣಮನೋ- ॥
ರಥನಿದಿರ್ಗೊಳೆ ಪೌರಜನಂ ।
ರಥನೂಪುರಚಕ್ರವಾಳಪುರಮಂ ಪೊಕ್ಕಂ ॥೧೩೭॥

ಅಂತು ಗೆಲ್ಲಂಗೊಂಡು ಯಕ್ಷಪುರಮನಾಳ್ವ ವಿಶ್ವಾವಸುಗಂ ರೋಹಿಣಿಗಂ ಪುಟ್ಟಿದ ವೈಶ್ರವಣಂಗೆ ಲೋಕಪಾಲವೆಸರ ಪಟ್ಟಮಂ ಕಟ್ಟಿ ಲಂಕೆಯಂ ಕೊಟ್ಟು ಯಮಧರನೆಂಬ ವಿದ್ಯಾಧರಂಗೆ ಲೋಕಾಪಾಲವೆಸರನಿತ್ತು ಕಿಷ್ಕಿಂಧಪುರಮಂ ಕೊಟ್ಟು ಮತ್ತಂ ತನ್ನನಿಂದ್ರನಾಗಿ ಭಾವಿಸಿ ಸುಖಮಿರ್ಪುದುಮಿತ್ತಲ್

ಪಾತಾಳಂಕೆಯೊಳ್ಸಂ ।
ಪ್ರೀತಿ ಪೊದಳ್ದಿರೆ ಸುಮಾಲಿ ಖೇಚರಪತಿಗಂ ॥
ಪ್ರೀತಿಮತಿಗಂ ಜಗದ್ವಿ ।
ಖ್ಯಾತಂ ರತ್ನಶ್ರವಂ ತನೂಭವನಾದಂ ॥೧೩೮॥

ಆತನತಿಪ್ರಗಲ್ಭನಾಗಿ ಪುಷ್ಪೋತ್ತರಮೆಂಬ ಮಹಾಗಹನದೊಳ್ವಿದ್ಯೆಗಳಂ ಸಾಧಿಸಿ ಸಿದ್ಧಪರಮೇಷ್ಠಿಗಳಂ ಸ್ತುತಿಯಿಸುತ್ತಿರ್ದ ಸಮಯದೊಳ್ ಕೌತುಕಮಂಗಳಪುರಮನಾಳ್ವಂ ವ್ಯೋಮಭಾನುವೆಂಬ ವ್ಯೋಮಚರಂ ನಿಜತನೂಜೆಯಪ್ಪ ಕೈಕಶಿಯೆಂಬ ಕನ್ಯಾರತ್ನಮಂ ದಿವ್ಯಮುನಿಮುಖ್ಯರಾದೇಶದಿಂ ತನಗೆ ತಂದು ಕುಡುವುದುಮಲ್ಲಿಯೆ ವಿದ್ಯೆಯಿಂ ಪುಷ್ಪೋತ್ತರಮೆಂಬ ಪೊೞಲಂ ಮಾಡಿ ಪಿತೃಮಾತೃಗಳಂ ಬರಿಸಿ ಶುಭಮುಹೂರ್ತದೊಳಾಕೆಯಂ ಮದುವೆನಿಂದು ನಿರಂತರೋತ್ಸವದಿಂದಿರ್ಪುದುಮೊಂದು ದಿವಸಮಾ ಕೈಕಸಿ ಚತುರ್ಥಸ್ನಾನಾನಂತರಂ ನಿಜಮನೋವಲ್ಲಭನ ಸೂೞ್ಗೆವಂದು,

ಹರಿಯಂ ಹಿಮಕರನಂ ಖರ ।
ಕರನಂ ಬೆಳಗಪ್ಪ ಜಾವದೊಳ್ಕನಸಿನೊಳಾ ॥
ಹರಿಣಾಕ್ಷಿ ಕಂಡು ಗೃಹವನ ।
ಮರಾಳಸಾರಸರವಂಗಳಿಂದೆೞ್ಚತ್ತಳ್ ॥೧೩೯॥

ಅಂತುಪ್ಪವಡಿಸಿ ತನ್ನ ಕಂಡ ಕನಸುಗಳನನುಕ್ರಮಂ ತಪ್ಪದೞಿಪುದುಂ,

ಭರತಾರ್ಧಕ್ಕಧಿರಾಜನಪ್ಪ ಸುತನಂ ಪೆತ್ತಪ್ಪೆ ತನ್ವಂಗಿ ಕೇ-
ಸರಿಯಂ ಕಂಡುದಱಿಂ ಕಲಾಕುಶಲರಂ ತತ್ತ್ವಜ್ಞರಂ ಪೆತ್ತಪೈ
ಹರಿಣೀಲೋಚನೆ ನಿಶ್ಚಯಂ ಕನಸಿನೊಳ್ ಶೀತಾಂಶುವಂ ಬಾಲಭಾ-
ಸ್ಕರನಂ ಕಂಡುದಱಿಂದಮೆಂದಱಿಯೆ ಪೇೞ್ದಂ ತತ್ಫಲಪ್ರಾಪ್ತಿಯಂ ॥೧೪೦॥

ಅಂತು ರತ್ನಶ್ರವಂ ಶುಭಸ್ವಪ್ನಫಲಮಂ ನಿರೂಪಣಂ ಮಾಡುವುದುಮಾ ನಿತಂಬಿನಿ ನಿರವಧಿಪ್ರಮೋದಮಮಂ ತಳೆದು ಯಥಾಕ್ರಮದಿಂ ಗರ್ಭಂ ಬಳೆಯೆ ವಳೆಯೆ,

ಆಲಸುವುದಿಲ್ಲಾಗುಳಿಕೆಯ ।
ಪೊಲನಿಲ್ಲ ಬಟಿಲ್ಪುದಿಲ್ಲ ಕೃಶತೆಯ ದೆಸೆಯಿ- ॥
ಲ್ಲಳಘುಪರಾಕ್ರಮಿ ಬಸಿಱಿೊ ।
ಳ್ನೆಲಸಿದ ಮೆಯ್ಗಲಿ ತನೂಜನೆಂದಱಿಪುವವೋಲ್ ॥೧೪೧॥

ಹೂಂಕಾರಪೂರ್ವಕಂ ಕ ।
ಣ್ಣಂ ಕೆಚ್ಚನೆಗೆಯ್ದು ದೆಸೆಗಳಂ ನೋೞ್ಪಳ್ ಮ- ॥
ತ್ತಂ ಕೂರಸಿಯೊಳ್ನಿಜಮುಖ ।
ಪಂಕಜಮಂ ಸುತನ ದರ್ಪಮಂ ಸೂಚಿಪವೋಲ್ ॥೧೪೨॥

ಭರತತ್ರಿಖಂಡಮಂಡಳ ।
ಪರಿರಕ್ಷಣದಕ್ಷನೀ ತನೂಭವನೆಂಬೀ ॥
ಪರಮೋತ್ಸವಮಂ ಪೇೞ್ವಂ ।
ತಿರೆ ಪುರದೊಳ್ಕುಸುಮವೃಷ್ಟಿ ಸುರಿದುವು ನಿಚ್ಚಂ ॥೧೪೩॥

ರಣರಸಿಕಂ ಜಗದ್ವಿಜಯಿ ಖೇಚರಕಾಂತೆಯ ಗರ್ಭದರ್ಭಕಂ
ರಣದೊಳನೇಕ ವೈರಿನೃಪರಂ ತವೆ ಕೊಂದು ತದೀಯಮಾಂಸದಿಂ
ತಣಿಪುಗುಮೆಮ್ಮನೆಂದು ಪರಮೋತ್ಸವದಿಂ ಪಱಿಗುಟ್ಟಿ ಬಿಚ್ಚತಂ
ಕುಣಿವುವು ಭೂತಕೋಟಿ ಗಗನೇ ಚರವಲ್ಲಭ ರಾಜಧಾನಿಯೊಳ್ ॥೧೪೪॥

ಇಂತಿವಱ ತೋರ್ಕೆಯಿಂ ಗರ್ಭಾರ್ಭಕನಳುರ್ಕೆಯುಮದಟುಮಖಿಳ ಜನಪ್ರತೀತಮಾಗೆ ನವಮಾಸಂ ನೆಱಿಯೆ ಕೂಸಂ ಪೆತ್ತು ದಶಮ ದಿನದೊಳ್ ಭೀಮರಾಕ್ಷಸಂ ಕೊಟ್ಟ ನವಮುಖ ರತ್ನಭೂಷಣದ ಮಣಿಕಂಕಣದೊಳಾತನ ಮುಖಂ ಪ್ರತಿಬಿಂಬಿಸೆ ದಶಮುಖನೆಂದು ಪೆಸರಿನಿಟ್ಟು ಮತ್ತಂ ಭಾನುಕರ್ಣನುಂ ಚಂದ್ರನಖಿಯುಂ ವಿಭೀಷಣನುಮೆಂಬ ಮಕ್ಕಳನನುಕ್ರಮದಿಂ ಪೆತ್ತಳವರ್ ಬಳೆದು ಶೈಶವಮನತಿಕ್ರಮಿಸಿ ಪ್ರಭುಮಂತ್ರೋತ್ಸಾಹ ಶಕ್ತಿತ್ರಯಮೆ ಮೂರ್ತಿಗೊಂಡಂತೆ ಮೂವರು ಮಖಿಳ ಶಾಸ್ತ್ರಪಾರಾವಾರಾಪಾರಗರೊಂದು ದಿವಸಮಾಸ್ಥಾಯಿಕಾ ಮಧ್ಯನಾಯಕ ರತ್ನಂಗಳಂತಿರ್ದ ಸಮಯದೊಳ್,

ಶ್ರವಣಾನಂದಮನುಂಟಮಾಡೆ ಮಣಿಘಂಟಾನಿಸ್ವನಂ ಕೇತುಪ-
ಲ್ಲವಹಸ್ತಾಭಿನಯಂಗಳಂ ಮಣಿವಿಮಾನಶ್ರೇಣಿಗಳ್ಬೀಱಿ ಪೈ-

ಶ್ರವಣಂ ಕಾಮನಬಿಲ್ಗಳಂ  ಕೆದಱೆ ಭೂಷಾಪಂಚರತ್ನಾಂಶುಗ-
ಳ್ವಿವಿಜೇಂದ್ರನ ಖಚರೇಂದ್ರನಲ್ಲನೆನೆ ಪೋಗುತ್ತಿರ್ದನಾಕಾಶದೊಳ್ ||೧೪೫||

ಅಂತಾತಂ ತೃಣೀಕೃತ ತ್ರಿಭುವನನಾಗಿ ಪೋಗುತ್ತಿರ್ಪುದುಂ ದಶಗ್ರೀವನುದ್ಗ್ರೀವನಾಗಿ ಪೋಗುತ್ತಿರ್ಪನೀತನೆತ್ತಣಾತನೆಂಬುದು ಕೈಕಶಿ ದಶಮುಖಂಗಿಂತೆಂದಳೀತತನೆಮ್ಮಕ್ಕನ ಮಗಂ ವೈಶ್ರವಣನೆಂಬನುಭಯಶ್ರೇಣಿಕರಸನಪ್ಪಿಂದ್ರನೆಂಬ ವಿದ್ಯಾಧರ ಖಚರಚಕ್ರವರ್ತಿ ನಿಮ್ಮ ಪಿರಿಯ ಮುತ್ತಯ್ಯನಪ್ಪ ಮಾಲಿಯುಂ ಕೊಂದು ನಮ್ಮನ್ವಯದಿಂದ ಬಂದ ಲಂಕೆಯುಂ ಕೊಟ್ಟೊಡೀತನದನಾಳುತ್ತಿರ್ಪನಾಮುಮಿೀತಂಗೆ ಭೀತರಾಗಿರ್ಪೆನೆಂದು ದುಃಖಂಗೆಯ್ಯೆ ವಿಭೀಷಣಂ ಬಾರಿಸಿ ನಮ್ಮ ಪಗೆಯಂ ಬಗೆದಂತೆ ತೀರ್ಚೆ ದಶವದನಂ ನಮಗೆ ಸಂತೋಷಮಂ ಮಾಡಲಾರ್ಕುಮನ್ನೆಗಮೆಮ್ಮ ಕುಲಕ್ಕೆ ತಕ್ಕ ವಿದ್ಯೆಗಳಂ ಸಾಧಿಸುವಮೆಂದು ಬಿನ್ನವಿಸಿ ಶುಭದಿನ ಮುಹೂರ್ತದೊಳ್,

ಪಿತೃಮಾತೃಪಿತಾಮಹರ್ಗಾ ।
ನತರಾಗಿ ಪಿಶಾಚ ಭೂತಕೋಟಯಿನತ್ಯ- ॥
ದ್ಭುತಮನರಣ್ಯಮನಪ್ರತಿ ।
ಹತಶೌರ್ಯರ್ಬಂದು ಪೊಕ್ಕರಚಲಿತಧೈರ್ಯರ್ ||೧೪೬||

ಆ ಸಾಹಸಿಕರ್ತತ್ತ್ವಾ ।
ಭ್ಯಾಸಮನೊಡರಿಸುವ ಮುನಿಯ ಪೋಲ್ಬೂಣ್ಣಸ್ಯ- ॥
ವ್ಯಾಸಂಗಂ ಕಿಡೆ ಪಲ್ಯಂ ।
ಕಾಸನದೊಳ್ಮೂವರುಂ ಯಥಾಕ್ರಮನಿರ್ದರ್ ||೧೪೭||

ಅಂತು ದಶಕೋಟ ಮಂತ್ರದೊಳ್ಕೂಡಿದ ಷೋಡಶಾಕ್ಷರ ಮಹಾವಿದ್ಯೆಯಂ ಸಾಧಿಸುತ್ತಿರ್ಪುದುಂ ಜಂಬೂದ್ವೀಪಾಧಿಪತಿಯಪ್ಪ ನಾಶ್ರುತಿಯಬ ದೇವಂ ಭೌಮವಿಹಾರದಿಂ ಬಂದವರಂ ಕಂಡು ವಿದ್ಯಾಸಾಧನೆಗೆ ವಿಘ್ನಹೇತುಗಳಪ್ಪನೇಕವಿಕುರ್ವಣೆಗಳಂ ವಿಗುರ್ವಿಸೆಯುಮವರ್ಮಂದರದಂತಚಳಿತರಾಗಿರ್ದು ವಿದ್ಯೆಗಳಂ ಸಾಧಿಸಿ ಸಿದ್ಧವಿದ್ಯಾಧರರ್ಪಂಚ ಪರಮೇಷ್ಠಿಗಳಂ ಪೂಜಿಸಿದಿಂ ಬಟಿಯಂ,

ಆವಿಷ್ಕೃತ ನಿಯಮಂತ್ರಿದಿ ।
ನಾವಧಿಯೊಳಗಣ್ಯ ಪುಣ್ಯನಿಳಯಂ ವಿದ್ವಿ- ॥
ದ್ವೀವಾಕರ್ಷಣ ಪಟುವಂ ।
ರಾವಣನುಗ್ರಾಸಿರತ್ನಮಂ ಸಾಧಿಸಿದಂ ||೧೪೮||

ಅಂತು ಚಂದ್ರಹಾಸಮಂ ಸಾಧಿಸಿ ವಿದ್ಯೆಯಿಂ ಸ್ವಯಂಪ್ರಭಮೆಂಬ ಪೊಟಿಲಂ ಮಾಡಿ ನಿಜಪರಿಜನಂ ಬೆರಸು ಬಂದು ಜನಮಂ ಬರಿಸಿ,

ಪಲವುಂ ವಿದ್ಯೆಯೊಳಂ ಭುಜ ।
ಬಲದೊಳಮಿಾದೊರೆಯರಾರು ಮಿಲ್ಲೆನಿಸ ಸುಪ್ಪ- ॥
ತ್ಕುಲಮಂ ಪಾಲಿಸುವಸುಪ್ಪ ।
ತ್ಕುಲಮಂ ಸಾಧಿಸುವ ಮನದಳುರ್ಕೆಯಿನಿರ್ದರ್ ॥೧೪೯॥

ಅಂತಿರ್ಪುದುಮಿತ್ತ ಸುರಸಂಗೀತಪುರಪ್ರಧಾನಂ ಮಯಂ ತನ್ನ ಮಗಳಪ್ಪ ಮಂಡೋದರಿಯಂ ನೈಮಿತ್ತಿಕಾದೇಶದಿಂ ವಿಮಾನಮನೇಱಿಸಿಕೊಂಡು ಚರನಿರೂಪಿತಮಪ್ಪ ಸ್ವಯಂಪ್ರಭನಗರಕ್ಕೆವಂದು ದಶವದನಂಗೆ ಮಹಾ ವಿಭೂತಿಯಿಂ ಮದುವೆಯಂ ಮಾಡಿ ತದನಂತರಂ ಮಯಮಾರೀಚಾದಿಗಳಂ ಮನ್ನಿಸಿ ಕೞಿಪಿ ಬೞಿಯಂ ತನ್ನ ವಿದ್ಯೆಗಳಂ ನಿಗುರ್ವಿಸಿ ನೋಡಿ ಹರ್ಷದೊಳ್ಕೂಡಿ ಭೌಮವಿಹಾರಕ್ಕೆ ಪೋಗುತ್ತುಂ ಮೇಘಶೃಂಗಮೆಂಬ ನಿಗನಿತಂಬದಂಬುಜಷಂಡದೊಳ್ಪದ್ಮೆಯುಂ ವಿದ್ಯುತ್ಪ್ರಭೆಯುಂ ಮೊದಲಾಗುಱುಸಾಸಿರ್ವರ್ಕನ್ನೆಯರ್ ನೀರಾಟವಾಡುವುದಂ ಕಂಡು ಮನಂಗೊಂಡಾಕೆಗಳಂ ಗಾಂಧರ್ವವಿವಾಹದಿಂ ಸ್ವೀಕರಿಸಲ್ಪಗೆವುದುಂ ಕನ್ನೆಯರಿನಾವಾರ್ತೆಯನವರಯ್ಯನಪ್ಪ ಸುರಸೌಂದರಂ ಕೇಳ್ದು ಕನಕಮಾಲಂಬೆರಸು ಮೇಲೆತ್ತಿಬರ್ಪುದುಂ ಕಾದಿ ನಾಗಪಾಶದಿಂ ಕಟ್ಟಿ ಕೊಲಲೊಲ್ಲದೆ ಬಿಟ್ಟುದಕ್ಕೆ ಮೆಚ್ಚಿ,

ಅನಿಬರ್ಕನ್ನೆಯರುಮನಾ ।
ಜನಪತಿ ಪರಿಣಯನವಿಭವದಿಂದೀಯೆ ದಶಾ- ॥
ನನನೊಸೆದ ಮದುವೆನಿಂದಾ ।
ತ್ಮನಗರಮಂ ಬಂದು ಪೊಕ್ಕನತ್ಯುತ್ಸವದಿಂ ॥೧೫೦॥

ಅಂತು ಸ್ವಯಂಪ್ರಭನಗರಕ್ಕೆವಂದು ಕುಂಭಪುರದ ಮಹೋದರಂಗಂ ಸುರೂಪೆಗಂ ಪುಟ್ಟಿದ ವಿದ್ಯುದ್ವೇಗೆಯಂ ಭಾನುಕರ್ಣಂಗೆ ಮದುವೆಯಂ ಮಾಟ್ಟುದುಮಾಕೆಗಾತನತಿ ಸ್ನೇಹಿತನಾಗಿ ಕುಂಭಪುರದ ಮಾತನಾಗಳುಂ ಮೆಚ್ಚಿ ಕೇಳುತ್ತುಮಿರ್ದೊಡಾತಂಗೆ ಕುಂಭಕರ್ಣಾಭಿಧಾನಮಾಯ್ತು ಮತ್ತಂ ಜ್ಯೋತಿಃಪ್ರಭ ಪುರಮನಾಳ್ವ ಶುದ್ಧಕಮಳಂಗಮಾನಂದಮಾಲೆಗಂ ಪುಟ್ಟಿದ ರಾಜೀವ ಸರಸೆಯೆಂಬ ಕನ್ನೆಯಂ ವಿಭೀಷಣಂಗೆ ಮದುವೆಯಂ ಮಾಡಿ ಸುಖದಿನಿರೆ,

ಮಂಡೋದರಿ ಪಡೆದಳ್ ಮು ।
ನ್ನಿಂದಗಿಯಂ ಬೞಿಕೆ ಮೇಘವಾಹನನಂ ಶ- ॥
ತ್ರುಂದಮನನಮಿತಬಳನಂ ।
ನಂದನರಂ ಖೇಚರಾನ್ವಯಾನಂದನರಂ ॥೧೫೧॥

ಅವರಾಶಾದಂತಿಗೆ ನಿ ।
ಗ್ಗವಂಗಳಾದಂತೆ ತನಗೆ ನೆರವಾಗೆ ಮಹೋ- ॥

ತ್ಸವಮನದೇಂ ತಳೆದನೊ ಖಚ ।
ರವಲ್ಲಭಂ ಕಳೆಯಲೆಂದು ಕುಲಪರಿಭವಮಂ ॥೧೫೨॥

ಲಂಕೆಯನನ್ವಯಾಗತಮನೆಮ್ಮ ಪಿತಾಮಹನಪ್ಪ ಮಾಲಿಯಂ
ಮುಂಕಡುಕೆಯ್ದು ಕೊಂದೆಱೆದು ಕೊಂಡನನಿಕ್ಕಿ ದೊಡೆನಿನ ಬಾಹುವೀ-
ರ್ಯಂ ಕಡು ನೋೞ್ಪೆತಕ್ಕುಮೆನುತುಂ ಮನದುಮ್ಮಳದಿಂ ಕನಲ್ದು ವೀ-
ತಾಂಕುಶನೆತ್ತಿದಂ ಮುಳಿದು ಅಂಕೆಗನೂನಬಲಂ ದಶಾನನಂ ॥೧೫೩॥

ಅಂತು ಮಹಾಬಲಸಹಿತನಾಗಿ ಲಂಕೆಗೆತ್ತುವುದುಂ ವೈಶ್ರವಣನದಂ ಕೇಳ್ದು ತಾನುಮಿದಿರೆತ್ತಿ ಬಂದುಭಯಬಲಮುಂತಾಗಿ ಕಾದುತ್ತುಮಿರೆ ಧನದಂ ದಶವದನನಂ ಮುಟ್ಟೆವಂದು ನೀಂ ಮದೀಯ ಜನನಿಯನುಜೆಯ ತನಯಪ್ಪುದಱಿಂ ನಿನ್ನೊಳೆನಗೆ ಕಾಳೆಗಮುಚಿತಮಲ್ಲ ತೊಲಗಿ ಪೋಗೆಂಬುದುಂ ದಶವದನಂ ನಸುನಕ್ಕು ಕಲಪಕ್ಕೆವಂದು ನಣ್ಪುದೋರ್ಪುದವಸರಮಲ್ಲ ಕೈದುಗೆಯ್ಯೆಂದು ಕಡುಕೆಯ್ದು ನಿಲ್ವುದುಂ,

ಮುನಿಸಿಂದಿಸೆ ವೈಶ್ರವಣಂ ।
ದನುಜನದಂ ಕಡಿದು ಕಳೆದು ನಿಶಿತಾಸ್ತ್ರದಿನಾ- ॥
ತನ ತಲೆಯುಮನಿಬ್ಬಗಿಯ ।
ಪ್ಪಿನಮೆಚ್ಚಂ ಮೂರ್ಛೆವೋಗಿ ಬೀೞ್ತರ್ಪಿನೆಗಂ ॥೧೫೪॥

ಅಂತು ಮೂರ್ಛೆವೋದನಂ ವಿಯಚ್ಚರಾನುಚರರ್ ವಿಮಾನದೊಳಿಟ್ಟು ವಿಜಯಾರ್ಧನಗರಕ್ಕುಯ್ವುದುಂ ದಶಾನನಂ ಪುಷ್ಪಕವಿಮಾನಮಂ ಕಳೆದುಕೊಂಡು ಜಯಪತಾಕೆಯನೆತ್ತಿಸಿ ನಿಜಸ್ವಯಂಪ್ರಭಪುರಕ್ಕೆ ಪೋಪುದುಮಿತ್ತಲ್,

ಸೇನಾಮುಖದೊಳ್ಭಂಗಮ ।
ನಾನೆಯ್ದಿದೆನೆಂದು ವಿಶ್ರುತಂ ವೈಶ್ರವಣಂ ॥
ಮಾನಧನಂ ವೈರಾಗ್ಯ ।
ಧೀನಮನಂ ಜೈನದೀಕ್ಷೆಯಂ ಕೈಕೊಂಡಂ ॥೧೫೫॥

ಅಂತು ನಿಶ್ಶಲ್ಯನಾಗಿ ವಿನಯಂಧರ ಚಾರಣ ಸಮೀಪದೊಳ್ತಪಂಗೆಯ್ದುಪವರ್ಗ ಶ್ರೀಯನಾಲಿಂಗಿಸೆಯಿತ್ತ ದಕ್ಷಿಣಸಮುದ್ರದ ವೇಳಾವನವಾಸಿಗಳಪ್ಪಿಂದ್ರನ ಸಾಮಂತರೆಲ್ಲರಂ ಬಾಯ್ಕೇಳಿಸಿ ಮತ್ತಮೊರ್ಮೆ ಹಸ್ತಪ್ರಹಸ್ತ ಸುಮಾಲಿ ಮಾಲ್ಯವಂತ ಪ್ರಮುಖಸಹಿತಂ ಪುಷ್ಪಕವಿಮಾನಾರೂಢಂ ಮಹಾಬಲಂಬೆರಸು ಗಗನಮಾರ್ಗದಿಂ ನಡೆದು,

ಬಡಗಣ ದೆಸೆಯಂ ಸಾಧಿಸ ।
ಲೊಡರಿಸಿ ಭೂಚರವಿಯಚ್ಚರೇಶ್ವರರಂ ತ- ॥

ನ್ನಡಿಗೆಜಿಗಿಸಿ ದಶಕಂಠಂ ।
ಪಡೆದಂ ದೆಸವೆಣ್ಗೆ ಕೀರ್ತಿಮಣಿಕಂಠಿಕೆಯಂ ॥೧೫೬॥

ಅಂತು ನಿಖಿಳರಾಜಕಮನದಿರ್ಪಿ ಕಪ್ಪಂಗೊಂಡು ಕೈಲಾಸನಗದ ಸಮ್ಮೇದಗಿರಿಯ ನಡುವಣ ಸುರದಾರುವನೋಪಕಂಠದೊಳ್ಬೀಡಂ ಬಿಟ್ಟಿರ್ಪುದುಂ,

ದೆಸೆ ಕಿವುಡು ವೀೞ್ವಿನಂ ತೆರೆ ಮಸಗಿದ ಮುನ್ನೀರ ಪೆರ್ಚಿದುಳ್ಳೊಳಮಂ ಬೆ- ॥
ರ್ಚಿಸಿ ಕಾರ ಮುಗಿಲ ಮೊಳಗಂ । ಮಸುಳಿಸಿ ಪೊಣ್ಮೆತ್ತು ಬೃಂಹಿತಂ ಕಾನನದೊಳ್ ॥೧೫೭॥

ಆ ನಿನದಂ ಕಿವಿಗೆಯ್ತರೆ । ದಾನವಪತಿ ಭದ್ರಗಜದ ಬೃಂಹಿತಮೆಂದಾ ॥
ಕಾನನಮಂ ಪುಗುತಂದು ಮ । ದಾನೇಕಪದೊಂದು ಪಿರಿಯ ಕಡುಪಂ ಕಂಡಂ ॥೧೫೮॥

ಆ ಕಾಡಾನೆಯ ಕಡುಪಿನ ನಡುವೆ,

ಬೆದಱಿ ಮನಂ ವನಸ್ಥಳದೊಳೊಂದಿಭಮಿರ್ದುದು ಮೂರ್ಧಪಿಂಡಮ-
ಲ್ಲದು ಶಿಖರಸ್ಥಳಂ ನಿಟಳಮಲ್ಲದು ಪಾಶಱೆ ಕರ್ಣತಾಳಮ-
ಲ್ಲದಚಳಪಕ್ಷಸಂಹತಿ ಮದಪ್ಲವಮಲ್ಲದು ನಿರ್ಝರಪ್ಲವಂ
ಮದಗಜಮಲ್ಲದಿಂದ್ರನೊಳಿದಿರ್ಚಿದ ನೀಳನಗೇಂದ್ರಮೆಂಬಿನಂ ॥೧೫೯॥

ಅಂತಿರ್ದ ಶುಭಲಕ್ಷಣಾಕಾರಮುಮತ್ಯಾಯುತಕರಮುಮಿಂದ್ರನೀಲಚ್ಛಾಯಮುಂ ಮಹಾಕಾಯಮುಮಪ್ಪ ಭದ್ರಗಜಮಂ ಕಂಡು ಮನದೆಗೊಂಡೆನಗೆ ಪಟ್ಟವರ್ಧನಮಾಗಲಿದುವೆ ತಕ್ಕುದೆಂದು ಮುನ್ನಮಿಂದ್ರಂಗಂ ಪಿಡಿಪೀಯದತಿವರ್ತಿಯಂ ದಾನವಚಕ್ರವರ್ತಿ ವಿದ್ಯೆಯಿನಶ್ರಮದಿಂ ಪಿಡಿದಾ ಮಹಾಗಜಮಂ ತ್ರಿಜಗದ್ಭೂಷಣನಾಮಧೇಯಂ ಮಾಡಿ ಬೀಡಿಂಗೆ ಮಗುಱೆ ಬರ್ಪುದುಮಾ ಸಮಯದೊಳ್,

ನೆತ್ತರ ಪನಿಗಳ್ಮೆಯೊಳ್ ।
ಪತ್ತಿರ ಭೋರೆಂದು ಬಂದು ಗಗನಸ್ಥಳದಿಂ ॥
ಮತ್ತೊರ್ವಂ ದೂತಂ ಚಲ ।
ಚಿತ್ತಂ ಸರ್ವಾಂಗವಿನಯ ವಿನಮಿತನಾದಂ ॥೧೬೦॥

ಆಗಿ ದೇವಾ ಸೌವಾಲಿ ಯೆಂಬೆನಾಂ ವಾನರಧ್ವಜಾನುಚರನೆಂ ಸೂರ್ಯಜನುಂ ಋಕ್ಷಜನುಂ ನಿನ್ನಾಜ್ಞೆಯಂ ನೆರಂಬಡೆದು ಪಾತಾಳಲಂಕೆಯಿಂದೆತ್ತಿ ಪೋಗಿ ನಿಜಾನ್ವಯಾಗತಮಪ್ಪ ಕಿಷ್ಕಿಂಧಪುರಮಂ ಕೊಳಲೆಂದು ಪರಿದು ಮುತ್ತಿಕೊಳ್ವುದುಂ ಪೊಱಮಟ್ಟುಕಾದಿ,

ವಿಜಿಗೀಷು ಬಲ್ಪಿನಿಂ ಋ ।
ಕ್ಷಜನಂ ಸೆಱೆವಿಡಿಯೆ ಕಂಡು ಕಾಯ್ದೆಱಗಿದ ಸೂ- ॥

ರ್ಯಜನನು ಪುಣ್ಣಡಿಸಿದನೇ ।
ನಜೇಯಭುಜಬಲನೊ ಸಮರದೊಳ್ ಯಮರಾಜಂ ॥೧೬೧॥

ಆ ಸಮಯದೊಳ್ ಸೂರ್ಯಜನನೆಮ್ಮವರ್ ಮಳಯ ನಗರಕ್ಕೆ ನೆಗಪಿಕೊಂಡು ಪೋದರಾವನುಮಿಾ ತೆಱನಂ ನಿಮಗಱಿಪಲೆಂದು ಬಂದೆನೆಂದು ಬಿನ್ನವಿಸೆ,

ಆ ನುಡಿಗೇಳ್ದು ಸೈರಿಸದೆ ಕಾಲಿಡಲಾಗಸವೆಯ್ದದೀ ಮಹಾ-
ಸೇನೆಗೆನಲ್ಲವಂಗಿಡಿಸಲಾ ಜವನಂ ಪರಿಯಿಟ್ಟು ಮುತ್ತಿದಂ
ಪೋ ನಿಮಿಷಕ್ಕೆ ಕಿಷ್ಕಿಪುರಗೋಪುರಮಂ ಬಿಡೆ ಸುತ್ತಿ ಮುತ್ತೆ ನಾ-
ನಾನಕನಿಸ್ವನಂ ದಶದಿಶಾನನಮಂ ಮುಳಿಸಿಂ ದಶಾನನಂ ॥೧೬೨॥

ಆದಂ ಕಂಡು ಮಾಮಸಕಂಗೊಂಡು ಜವನನಾಯಕಂ ಸಾಟೋಪನೆಂಬನಾಟೋಪಂ-ಗಿಡದೆ ಪೊಜಮಟ್ಟು ನೆರೆದು ನಿಲ್ವುದುಮವಂಗೆ ಭಂಗಮಂ ಖರದೂಷಣರ್ಕುಡುವುದಂ ಯಮಂ ಕಂಡು ಸಮರಸನ್ನದ್ಧನಾಗಿ ಪೊಜಮಟ್ಟು ತಾಗಿ ದಶಮುಖ ಶಿಳೀಮುಖಕ್ಕೆ ಸುಗಿದು ಸಮರಮುಖಪರಾಙ್ಮುಖನಾಗಿ,

ಅತಿಜಂಘಾಳಂ ಭಯಕಂ ।
ಪಿತತನು ನಿಜಪತಿಯನಿಂದ್ರನಂ ಕಂಡು ಪದಾ- ॥
ನತನೆಂದಂ ದಶಮುಖನ ।
ಪ್ರತಿಮಂ ಬವರದೊಳಿದಿರ್ಚುವವರಾರವನಂ ॥೧೬೩॥

ಎನೆಮುಳಿದಿಂದ್ರಂ ದಶವದ ।
ನನ ಮೇಲೇೞ್ತರ್ಪ ಮಸಗದಿಂ ದೇೞ್ವುದು ಮಾ- ॥
ತನ ಮಂತ್ರಿಮುಖ್ಯರೆಂದ ।
ರ್ನಿನಗಿದು ಪದನಲ್ತು ನೆರೆದು ಕಾದುವುದವನೊಳ್ ॥೧೬೪॥

ಎಂದವರ್ನಯಮಂ ನುಡಿಯೆ ಮಾಣ್ದೊಡಂಬಟ್ಟು ಯಮಂಗೆ ಸುರಸಂಗೀತಕಪುರಮಂ ಕೊಟ್ಟು ವಿಷಯಾಸಕ್ತ ಚಿತ್ತನಪ್ಪುದಱಿಂ ಸಂತಃಪುರ ಪುರಂಧ್ರಿಯರೊಳ್ಪಿನೋದದಿಂ ಮಯ್ಯಱಿಯದಿರ್ದನಿತ್ತ ದಶಮುಖಂ ಋಕ್ಷಜ ಸೂರ್ಯಜರ್ಗೆ ಕಿಷ್ಕಿಂಧಪುರಮಂ ಕೊಟ್ಟು ನಿಜಾನ್ವಯಾಗತಮಪ್ಪ ಲಂಕೆಯಂ ಮಾತೃಪಿತೃಪಿತಾಮಹಸಹಿತಂ ಪುಷ್ಪಕವಿಮಾನಾರೂಢ-ನತಿಶಯ ವಿಭೂತಿಯಿಂ ಪೊಕ್ಕು ಸುಖದಿನಿರೆ ಕೆಲವು ದಿವಸಕ್ಕೆ,

ನಿರುಪಮಚರಿತ್ರೆ ಸೂರ್ಯಜ ।
ನರಸಿಯೆನಿಪ್ಪಿಂದುಮಾಲೆ ಪೆತ್ತಳ್ ಲೋಕೋ- ॥

ತ್ತರರೆನಿಪ ವಾಲಿಸುಗ್ರೀ ।
ವರುಮಂ ಶ್ರೀಪ್ರಭೆಯುಮಂ ಯಥಾಕ್ರಮದಿಂದಂ ॥೧೬೫॥

ಅಲಘುಭುಜರೆನಿಪ ಖೇಚರ ।
ಕುಲತಿಲಕರನಖಿಳಶಸ್ತ್ರವಿದ್ಯಾವಿದರಂ ॥
ಬಲಯುತರೆನಿಪ್ಪ ಋಕ್ಷಜ ।
ಕುಲವಧು ನಳ ನೀಳರೆಂಬ ಸುತರಂ ಪೆತ್ತಳ್ ॥೧೬೬॥

ಅಂತು ಪಲಕಾಲಂ ಪೋಪುದುಂ ವಾಲಿಸುಗ್ರೀವರನಧಿರಾಜ ಯುವರಾಜ ಪದವಿಯೊಳ್ನಿಲಿಸಿ ಸೂರ್ಯಜಂ ಪಿಹಿತಾಸ್ರವ ಭಟ್ಟಾರಕರ ಸಮಕ್ಷದೊಳ್ದೀಕ್ಷೆಯಂ ಕೊಂಡು ಮೋಕ್ಷಕ್ಕೆ ಪೋದನಿತ್ತಲ್,

ಪರಿಣಯನ ನಿಮಿತ್ತಂ ದಶ ।
ಶಿರನತ್ತಲ್ಪೋಗೆ ತೆಱಪುವಾರ್ದಿರ್ದಟಂ ॥
ಖರನಿರದುಯ್ದಂ ಲಂಕಾ ।
ಪುರದಿಂದಂ ಚಂದ್ರನಖಿಯನಂಬುಜಮುಖಿಯಂ ॥೧೬೭॥

ಅಂತುಯ್ದು ದಶಾನನಂಗಾನತನಲ್ಲದ ಚಂದ್ರೋದರನಂ ಯಮೋದರಂ ಪುಗಿಸಿ ಪಾತಾಳಲಂಕೆಯಂ ಸ್ವೀಕರಿಸಿ ಸುಖದಿನಿರೆ ದಶಾನನಂ ಮದುವೆನಿಂದು ಮಗುಟ್ದು ಬಂದು,

ಎನಗಿನಿಸಳ್ಕದೆನ್ನನುಜೆಯಂ ಪಿಡಿದುಯ್ದನವಂಗೆ ತಕ್ಕುದಂ
ಜನಿಯಿಪೆನೆಂದು ಗರ್ಜಿಸೆ ದಶಾನನನಾತನ ಕಾಂತೆ ನಿನ್ನ ಮೈ-
ದುನನನುರಕ್ತನಾಕೆಗನುರೂಪನಿದಾವುದು ಪೊಲ್ಲಕೆಯ್ದನೀ
ಮುನಿಸವಿವೇಕಮೆಂದು ನುಡಿದಳ್ಮಯನಂದನೆ ತದ್ದಶಾಸ್ಯನಂ ॥೧೬೮॥

ಅದಲ್ಲದೆಯುಂ ನಿನಗೆ ವಿಧೇಯನಲ್ಲದ ಚಂದ್ರೋದರನಂ ಕೊಂದು ನಿಷ್ಕಂಟಕಂ ಮಾಡಿದನಾತನಂ ಮುನಿದು ನೀಂ ಕೊಂದು ನಿಜಾನುಜಗೆ ವೈಧವ್ಯ ದೀಕ್ಷೆಯಿಂ ಕುಡುವುದಾವುದು ಚದುರೆಂದು ಕಲುಷಮಂ ಕಳೆದಳಿತ್ತ ಚಂದ್ರೋದರನ ಪತ್ನಿಯುಮಂತರ್ವತ್ನಿಯುಮಪ್ಪನುರಾಧೆ ಪರಿಜನಂಬೆರಸು ಪೋಗಿ ನವಮಾಸಂ ನೆಱೆಯೆ ಕೂಸಂ ಪೆತ್ತೀತಂ ಗರ್ಭದೊಳಿರೆ ಪಗೆವರಿಂ ದಸೆವಟ್ಟೆ ನೆಂದಾತಂಗೆ ವಿರಾಧಿತನೆಂದು ಪೆಸರನಿಡುವುದುಮಾತನನುಕ್ರಮದಿಂ ಬಳೆದು ಪಗೆಯಂ ಸಾಧಿಸುವುಪಾಯಮಂ ಬಗೆಯುತ್ತಿರ್ಪಿನಮಿತ್ತಲ್,

ಮಾನಧನಂ ವಿವೇಕನಿಧಿ ವಾಲಿ ಜಿನಾಗಮಕೋವಿದಂ ಪೆಱಂ-
ಗಾನತನಾಗೆ ದರ್ಶನವಿಶುದ್ಧಿಗೆ ದೂಷಣಮಕ್ಕುಮಂತಱಿಂ

ಜೈನಪದಕ್ಕೆ ಜೈನಮುನಿಗಲ್ಲದೆ ಕೈಮುಗಿಯೆಂ ದಲೆಂದು ಧ-
ರ್ಮಾನುಗನಪ್ರಮತ್ತಚರಿತಂ ಪ್ರಿಯಸಾದನಿದೇನುದಾತ್ತನೋ ||೧೬೯||

ಅಂತನಂತವೀರ್ಯನುಂ ಚರಮದೇಹಧಾರಿಯುಮವಕ್ರವಿಕ್ರಮಶಾಲಿಯುಮಪ್ಪ ವಾಲಿ ನಿಯಮಸ್ಥನಾಗಿ ಸುಖಮಿರ್ಪುದುಮೊಂದು ದಿವಸಮಾತನನುಜೆಯಂ ಶ್ರೀಪ್ರಭೆಯಂ ಬೇಡಿ ದಶಮುಖಂ ಮುಖ್ಯಪುರುಷರ ಕೈಯೊಳೋಲೆಯನಟ್ಟುವುದುಮದಂ ತಿಳಿದು ವಾಲಿ ಸುಗ್ರೀವಂ ಬೆರಸು ಮಂತ್ರಶಾಲೆಯಂ ಪೊಕ್ಕುಮಂತ್ರಿಮಂಡಳಮುಮನಾಪ್ತ ಪರಿಜನಮುಮಂ ಬರಿಸಿ,

ತಗದೆಮುಗುನ್ಮಾರ್ಗಿಗೆ ಕೂ ।
ಸುಗುಡಲ್ ದಶಕಂಧರಂ ಮದಾಂಧಂ ಧರ್ಮಾ- ॥
ನುಗನಲ್ಲನನುಜೆಯಂ ಕುಡೆ ।
ತೆಗಟಿಪದೊಳ್ಪರದೊಳೆಸಗೆ ಪಾತಕಮಕ್ಕುಂ ||೧೭೦||

ಕುಡೆ ಕೂಸನುದ್ಧತಂಗಾಂ ।
ಪೊಡೆವಡುವನಿತಕ್ಕುಮಾದೊಡೆನ್ನ ಚರಿತ್ರಂ ॥
ಕಿಡುಗುಂ ವ್ರತಮಂ ಕೈಕೊಂ ।
ಡೆಡೆಯೊಳ್ಬಿಟ್ಟವನೆ ಭಿನ್ನಭಾಜನಮಲ್ತೆ ||೧೭೧||

ಅದಱಿಂದಾತಂಗಾನೀ ।
ಯದೆ ಕೂಸಂ ಕಾಳೆಗಕ್ಕೆ ಮೆಯ್ದರೆ ಪಲಕಾ- ॥
ಲದ ರಾಕ್ಷಸವಾನರ ವಂ ।
ಶದ ನಣ್ಪನ್ನಿಂದಮಟಿದುದೆಂಬುದು ಲೋಕಂ ||೧೭೨||

ಅರಸುತನಂ ಗೆಯ್ವಟಿಪಿಂ ।
ಧುರದೊಳ್ಮಾಱಾಂತರೆಲ್ಲರಂ ಮಟ್ಗಿಪುದುಂ ॥
ದೊರೆಕೊಳ್ಗುಂ ಪಾತಕಮಾ ।
ಸಿರಿಯುಂ ಚಿರಮಲ್ತು ನೀರ ಬೊಬ್ಬುಳಿಕೆಯವೋಲ್ ||೧೭೩||

ಅದಱಿಂ ಪಟಿಗಂ ಪಾಪಕ್ಕಮಡೆಗುಡದ ತಪಮನಪ್ಪುಕೆಯ್ದಡೆನ್ನ ಕುಲಮುಂ ಕಿಡದೆ ಸಂದುನಡೆಗುಮೆಂದು ತಱಿಸಂದು ಸುಗ್ರೀವಂಗೆ ರಾಜ್ಯಮಂ ಕೊಟ್ಟು ಪರಿಜನಕ್ಕೆಲ್ಲಂ ನಿಶ್ಶಲ್ಯನಾಗಿ ಸದ್ದರ್ಶನ ಗಗನಚಂದ್ರರೆಂಬ ಚಾರಣರ ಪಕ್ಕದೊಳ್ ತೊಱೆದು ತಪಂಬಟ್ಟು ಘೋರವೀರತಪದಿಂ ಋದ್ಧಿಪ್ರಾಪ್ತನಾದಂ,

ಸುಗ್ರೀವನುಮಿತ್ತಲ್ಖಚ ।
ರಾಗ್ರಣಿ ತನ್ನನುಜೆಯಂ ನಯೋಪಾಯಂ ಪಾ- ॥

ಣಿಗ್ರಹಣ ಸಹಿತಮಿತ್ತು ದ ।
ಶಗ್ರೀವಂಗಾತ್ಮಪದವಿಯೊಳ್ಸುಖಮಿರ್ದಂ ॥೧೭೪॥

ಅಂತು ದಶವದನಂ ಶ್ರೀಪ್ರಭೆಯಂ ಮದುವೆನಿಂದು ಮತ್ತಮೊರ್ವ ನಿತ್ಯಾಲೋಕಪುರಮನಾಳ್ವ ನಿತ್ಯಾವಲೋಕನೆಂಬ ವಿದ್ಯಾಧರಂಗಂ ಶ್ರೀದೇವಿಗಂ ಪುಟ್ಟಿದ ರತ್ನಾವಳಿಯಂ ಮದುವೆನಿಂದು ಮಗುಟ್ದು ಬಪ್ಪ ಸಮಯದೊಳ್ಕೈಲಾಸನಗನಿತಂಬ ಸ್ಥಳದೊಳಿರ್ದ ಮಹಾಮುನಿಯ ಮೇಲೆ ವಿಮಾನಂ ನಡೆಯದೆ ನಿಲ್ವುದುಂ ವಿಸ್ಮಿತ ಮನನಿದೇನೆಂದು ನಿಂದವಲೋಕಿನೀ ವಿದ್ಯೆಯಿಂ ವಾಲಿದೇವನಪ್ಪುದನಱಿದಿನ್ನುಮೆನ್ನಮೇಲಣ ಮುಳಿಸನುೞಿಯದೆ ವಿಮಾನಮಂ ಸ್ತಂಭಿಸಿದನಾದೊಡೇನಾದದುದೀ ನಗಂ ಬೆರಸು ಕಿೞ್ತಿಯುದ್ದು ಸಮುದ್ರದೊಳಿಕ್ಕುವೆನೆಂದು ಪುಷ್ಪಕವಿಮಾನದಿನವನಿಗವತರಿಸಿ ಘನಾಪಘನಮುಮಂ ಬಹುಬಾಹುಗಳುಮಂ ವಿಗುರ್ವಿಸಿ ರಸಾತಳಕ್ಕಿೞಿದು ಧನದಾಚಳದಧಃಸ್ಥಳಮನೆಯ್ದಿ,

ಸಾಸಿರವಿದ್ಯೆಗಳ್ಬೆರಸು ತೋಳ್ಗಳ ತೆರ್ಕೆಗಳಿಂದಳುರ್ಕೆವೆ-
ತ್ತಾಸುರವೃರಿ ಬೆಳ್ಮುಗಿಲನೆತ್ತುವ ಘೋರಸಮೀರನಂತೆ ಕೈ-
ರಾಸಮನೆತ್ತೆ ಕಾವ ಬಗೆಯಿಂ ಬಹುರತ್ನಚಯಂಗಳಂ ಜಿನಾ-
ವಾಸಮನಂದು ವಾಲಿಮುನಿಪುಂಗವನುಂಗುಟದಿಂದಮೊತ್ತಿದಂ ॥೧೭೫॥

ಅಂತು ಶುಭಪರಿಣಾಮದಿಂ ದಶಮುಖನೊಳಪ್ಪ ಕಲುಷಮಿಲ್ಲದೆ ಕೈಲಾಸ ಶಿಖರಮಂ ಮೆಲ್ಲನೊತ್ತೆ ಪುಯ್ಯಲಿಡುವ ಸರಮಂ ಕೇಳ್ದು,

ಪರಿಜನಸಹಿತಂ ಮಂಡೋ ।
ದರಿ ಬಂದು ಮುನೀಂದ್ರರಕ್ಷಿಸೆಂದೆಱಗುವುದುಂ ॥
ಚರಣಾಂಗುಷ್ಠಮನೊಯ್ಯನೆ ।
ಕರುಣಾರಸಸಹಿತನೆತ್ತಿದಂ ಮುನಿಮಹಿತಂ ॥೧೭೬॥

ಆಗಳಾ ಪುಯ್ಯಲ್ಚುವ ರವಮೇ ಕಾರಣಮಾಗೆ ದಶಮುಖಂಗಂದಿಂದಿತ್ತ ರಾವಣನೆಂಬ ಪೆಸರಾಯ್ತನಂತರಮಾತಂ ರಸಾತಲದಿಂ ಪೊಱಮಟ್ಟು ವಾಲಿಭಟ್ಟಾರಕರಂ ಪೂಜಿಸಿ ಪೊಡೆವಟ್ಟು ತನ್ನ ಪೊಲ್ಲಮೆಯಂ ಕ್ಷಮೆಗೊಂಡು ಕಳೆದು,

ಕೆಲದ ಜಿನೇಶ್ವರಾವಸಥಮಂ ಬಲಗೊಂಡೊಳಪೊಕ್ಕು ದೇವನಂ
ವಿಲಸಿತರತ್ನರಾಜಿಗಳಿನರ್ಚಿಸಿ ಬಾಜಿಸಿದಂ ಲಯತ್ರಯಂ
ಸುಲಲಿತಮಾಗೆ ವಸ್ತುಗುಣರೂಪ ಜಿನಸ್ತವನಾಂಕಮಾಲೆಯಂ
ಪರತೆಱದಿಂ ರಸಂಬಡೆಯೆ ರಾವಣಹಸ್ತದಿನಂದು ರಾವಣಂ ॥೧೭೭॥

ಅಂತು ನಿರ್ಭರಭಕ್ತಿಯಿಂ ಬಾಜಿಪಾಗಳ್,

ಆಸನಕಂಪಮಾಗೆ ಫಣಿಪಂ ಫಣಿಲೋಕದಿನಂದು ಬಂದು ಕೈ-
ಲಾಸನಗಕ್ಕೆ ರಾವಣನ ದೇವರೊಳಾದತಿ ಭಕ್ತಿಹರ್ಷಮಂ
ಮಾಸರಮುಂಟುಮಾಡೆ ತನಗಿತ್ತಿನಿದಿರ್ಚಲೊಡಂ ಸಮಸ್ತದೇ-
ವಾಸುರಮುಖ್ಯ ನಾಯಕರ್ಗೆ ಜೀವವಿಮುಕ್ತಿಯನೀವ ಶಕ್ತಿಯಂ ॥೧೭೮॥

ಅಂತು ಫಣೀಂದ್ರನೀಯೆ ದಿವ್ಯಶಕ್ತಿಯಂ ಪಡೆದು ಪೋದನಿತ್ತಲಪಕೃತಿಯಂ ಗುರುಗಳೊಡನಾಲೋಚಿಸಿ,

ಪ್ರಾಯಶ್ಚಿತ್ತಂ ಗೊಂಡ ।
ಶ್ರೇಯಮನಪಹರಿಸಿ ವಾಲಿಮುನಿ ಶುಕ್ಲಧ್ಯಾ- ॥
ನಾಯತ್ತನಾಗಿ ಮುಕ್ತಿ ।
ಶ್ರೀಯುವತಿಯ ನಿಬಿಡ ಕುಚಮನಾಲಿಂಗಿಸಿದಂ ॥೧೭೯॥

ಮತ್ತಿತ್ತ ರಾವಣಂ ನಂದ್ಯಕಾ ಸುವೇಳಾದ್ವೀಪಂಗಳನಾಳ್ವ ಮಹಾಬಳವಿಜ್ಞಾನಧರರಂ ಬಾಯ್ಕೇಳಿಸಿ ಕುಂಭಕರ್ಣವಿಭೀಷಣಮಿಂದಗಿ ಮೇಘವಾಹನ ಖರಮರೀಚಿ ಸುಗ್ರೀವಾಂಗದ ಕರ್ಮಟಧ್ವಜ ಪ್ರಮುಖ ನಿಖಿಳವಿದ್ಯಾಧರ ಪರಮೇಶ್ವರರುಂ ಬಳಸಿ ಬರೆ ವಿವಿಧವಾಹನ ವಿಚಿತ್ರಾತಪತ್ರ ಪಾಳಿಕೇತನಂ ಬೆರಸುತ್ತರಾಭಿಮುಖನಿಂದ್ರನ ಮೇಲೆ ನಿಚ್ಚವಯಣಂ ಬರುತ್ತಂ ರೇವತೀನದೀ ತೀರದೊಳ್ ಬೀಡು ಬಿಟ್ಟು ತೊಱೆಯ ಸೈಕತಸ್ಥಳದೊಳ್ ರತ್ನಮಂಡಪಮನೆತ್ತಿಸಿ ಸಿಂಹಾಸನದ ಮೇಲೆ ಮಣಿಮಯ ಜಿನಪ್ರತಿಮೆಯನಿರಿಸಿ ಪೂಜಿಸುವ ಸಮಯದೊಳ್,

ತೀವಿ ಬರೆ ಭೋಂಕನಾ ನದಿ ।
ರಾವಣನತಿ ಸಂಭ್ರಮಾಕುಳಂ ನೆಗೆದು ನಭ- ॥
ಕ್ಕಾವುದು ಕಾರಣದಿಂದೀ ।
ರೇವತಿ ನದಿ ಬಂದುದೆಂದು ವಿಸ್ಮಿತನಾದಂ ॥೧೮೦॥

ಆಗಿ ಕಾಲವಲ್ಲದ ಕಾಲದಲ್ಲಿ ತೊಱೆ ಬಂದ ಕಾರಣಮನಾರೈವುದೆಂದು ದೂತನನಟ್ಟುವುದುಮವನದೆಲ್ಲಮನಱಿದು ಬಂದು ಮಾಹಿಷ್ಮತೀಪುರವಾಧೀಶ್ವರಂ ಸಹಸ್ರಬಾಹುವೀ ತೊಱೆಯಂ ಜಂತ್ರಂಗಳಿಂ ಕಟ್ಟಿ ನಿಜಾಂತಃಪುರ ಸಹಿತಂ ನೀರಾಟವಾಡಿ ಜಂತ್ರಂಗಳಂ ಕಳೆಯೆ ಪೊನಲ್ಕವಿತಂದುದೆಂದು ಬಿನ್ನವಿಸೆ,

ತ್ರಿಜಗದ್ಭೂಷಣಮಾದ್ಯ ।
ಧ್ವಜಮಂ ಮುಳಿದೇಱಿ ರಾವಣಂ ನಡೆವಸುಪ್ಪ- ॥
ದ್ಧ್ವಜಿನಿಯನೋಡಿಸಿ ರಿಪುಸಾ ।
ಮಜಮೊಡನೆ ಸಹಸ್ರಿಭುಜನುಮಂ ಸೆಱೆಗೆಯ್ದಂ ॥೧೮೧॥

ಅಂತಾತನಂ ಸೆಱೆಗೆಯ್ದು ನಿಜವಿಜಯಶಿಬಿರಕ್ಕೆ ತರ್ಪುದುಮಲ್ಲಿಗಾತನ ತಂದೆವಿರಪ್ಪ

ಶತಬಾಹುಗಳೆಂಬ ಜಂಘಚಾರಣರ್ ಧರ್ಮವಾತ್ಸಲ್ಯದಿಂ ಬರ್ಪುದುಂ ದಶಮುಖನಿದಿರೆೞ್ದು ಭಕ್ತಿಯಿಂ ವಂದಿಸಿ ಮಣಿಮಯಾಸನದೊಳಿರಿಸಿ ಬೆಸನಾವುದೆನೆ ಸಮ್ಯಗ್ದೃಷ್ಟಿಯಪ್ಪ ಸಹಸ್ರಬಾಹುವಂ ಬಿಡುವುದೆನೆ ಮಹಾಪ್ರಸಾದಮೆಂದಾತನಂ ಬರಿಸುವುದುಮಾತಂ ಬಂದು ದಿವ್ಯಮುನಿಗೆ ಪೊಡೆವಟ್ಟು ಕುಳ್ಳಿರ್ಪುದುಂ ಕರಗ್ರಹಣಪುರಸ್ಸರಂ ವಿನಯವಚನಂಗಳಂ ನುಡಿದು ನಿನ್ನ ರಾಜ್ಯದೊಳ್ನಿಲ್ವುದೆನೆ ತಪೋರಾಜ್ಯ ಮನಲ್ಲದೊಲ್ಲೆನೆಂದು,

ನಿಜಸುತನಪ್ಪ ಸುಬಾಹುಗೆ ।
ನಿಜರಾಜ್ಯಮನಿತ್ತು ದೀಕ್ಷೆಯಂ ಕೈಕೊಂಡಂ ॥
ನಿಜ ಜನಕನಪ್ಪ ಶತಬಾ ।
ಹು ಜಂಘಚಾರಣರ ಕೈಯೊಳಾಧರಣೀಶಂ ॥೧೮೨॥

ಅಂತು ದೀಕ್ಷೆಯಂ ಕೈಕೊಂಡು ಸಹಸ್ರಬಾಹು ಮೋಕ್ಷಕ್ಕೆ ಪೋಪುದುಮಿತ್ತಲ್,

ಖೇಚರವಿಭು ತಾಂ ಮುನ್ನಂ ।
ಭೂಚರ ಭೂಭುಜರನೈದೆ ಸಾಧಿಸಿ ಬೞಿಯಂ ॥
ಖೇಚರರಂ ಸಾಧಿಪೆನೆಂ ।
ಬೀಚಿತ್ತಂಬೆತ್ತು ವಿಜಯಯಾತ್ರೆಗೆ ತಳರ್ದಂ ॥೧೮೩॥

ಅಂತು ನಿಖಿಳರಾಜಕಮನೊತ್ತಿ ಕಪ್ಪಂಗೊಳುತ್ತುಂ ಧರ್ಮಮಂ ಪ್ರತಿಪಾಲಿಸುತ್ತುಂ ಬರುತ್ತುಮಿರೆ ರಾಜಪುರಮನಾಳ್ವ ಮರುತ್ತೆಂಬರಸಂ ಜೀವವಧೆಗೆಯ್ದು ಜನ್ಮಮನೊಡರ್ಚೆ ಪೆಱರಾರ್ಗಂ ಪೊಡೆವಡದೆ ಪಲವು ಪ್ರಾಣಿಗಳಂ ಕೊಂದಪನೆಂದು ಕೇಳ್ದಲ್ಲಿಗೆ ವಂದು ಯಾಗನಿಮಿತ್ತಂ ಯೂಪಸ್ತಂಭಂಗಳೊಳ್ ಕಟ್ಟಿ ಪಸುಗಳಂ ಗೋಳಿಡೆ ಕೊಂದು ಬೇಳ್ವುದಂ ಕಂಡ ಕೊಂಡಂಗಳನೊಡೆದುಶಾಲೆಗಳಂಕೆಡಿಸಿ ಯೂಪಸ್ತಂಭಂಗಳನುಡಿದು ಸಂವರ್ತಕಂ ಮೊದಲಾಗೆ ಸಕಲ ಋತ್ವಿಜರಂ ಜಡಿದು ಕೊಲಲಿರ್ಪ ಸಮಯದೊಳ್ ಮರುತ್ತೆಂಬರಸಂ ಪರಿತಂದು ರಾವಣನ ಕಾಲಮೇಲೆ ಬಿೞ್ದು ಕ್ಷಮೆಗೊಂಡು,

ಕನಕಪ್ರಭೆಯಂ ನಿರ್ಜಿತ ।
ಕನಕಪ್ರಭೆಯಂ ಮರುನ್ನರೇಂದ್ರಂ ನಿಜನಂ- ॥
ದನೆಯಂ ಖಚರಕುಳಾನಂ ।
ದನನೆನಿಪ ದಶಾನನಂಗೆ ನಲ್ಮೆಯಿನಿತ್ತಂ ॥೧೮೪॥

ಅಂತು ಮದುವೆನಿಂದು ಕನಕಪ್ರಭೆಗೆ ಪುಟ್ಟಿದ ತನ್ನ ಮಗಳಪ್ಪ ಸ್ವೀಕೃತಚಿತ್ತೆಯಂ ಮಧುರೆಯನಾಳ್ವ ಹರಿವಂಶನ ಮಗನಪ್ಪ ಮಧುವಿಂಗೆ ಕೊಟ್ಟು ದಶವದನಂ ಮಹಾಬಳಸಹಿತನಾಗಿ ಪದಿನೆಂಟು ವರ್ಷಕ್ಕೆ ವಿನೀತಾಖಂಡಮಂ ಬಾಯ್ಕೇಳಿಸಿ ಕ್ರಮದಿಂ ಕೈಲಾಸಪರ್ವತಮನೈದಿ

ವಾಲಿದೇವನ ಸಾಮರ್ಥ್ಯಮಂ ನೆನೆದು ಪೊಗೞುತ್ತುಂ ನಗನಿತಂಬದೊಳ್ಬೀಡು ಬಿಟ್ಟಿರ್ಪುದ ಮಿತ್ತಲ್,

ಪರಿರಕ್ಷಿಸಿ ದೇವೇಂದ್ರನ ।
ಶರಧಿ ಶರಾಸನ ತನುತ್ರತತಿಯಂ ನಳಕೂ- ॥
ಬರ ದಿಕ್ಪತಿ ದುರ್ಧರಭುಜ ।
ಪರಿಘಂ ದುರ್ಲಂಘ್ಯಪುರದೊಳತಿಬಲನಿರ್ದಂ ॥೧೮೫॥

ಆತಂ ರಾವಣಂ ಮೇಲೆತ್ತಿ ಬರ್ಪುದಂ ನಮ್ಮರಸಂಗಱಿಪೆಂದಟ್ಟಿದ ದೂತನ ವಚನದಿನಿಂದ್ರನಿದನಱಿದು,

ಏವಂ ರಾವಣನೆತ್ತಿ ಬಂದು ಬಲಿದಿರ್ಕಾ ಕಯ್ದುವಂ ಕಾದು ವಿ-
ದ್ಯಾವಷ್ಟಂಭದಿನೆ ದು ಮಂದರಮಹೀಭೃನ್ಮೇಖಳಾನಂದನ-
ಕ್ಕಾ ವಿದ್ಯಾಧರ ಚಕ್ರವರ್ತಿ ಜಿನಪೂಜೋತ್ಸಾಹದಿಂ ಪೋದನು-
ದ್ಧೀವಂ ದೋರ್ವಲಗರ್ವದಿಂ ಬಗೆದನಿಲ್ಲಿಂದ್ರಂ ದಶಗ್ರೀವನಂ ॥೧೮೬॥

ಮತ್ತಿತ್ತ ಚರವಚನದಿನಿಂದ್ರಂ ಬೆಸಸಿದುದಂ ನಳಕೂಬರಂ ಕೇಳ್ದೊಂದು ಯೋಜನಾಂತರದೊಳಿರ್ದರಂನುಂಗುವಂತಪ್ಪ ಬೇತಾಳಯಂತ್ರಂಗಳಿಂ ದೂರದೇಶದೊಳಿರ್ದೆ-ಟ್ಟಿಟ್ಟ ತಿಂಬಂತೆ ಫೂತ್ಕಾರಮುಕರಂಗಳಪ್ಪ ಮಹೋರಗಂಗಳಿನತಿದೂರದೊಳಟ್ಟಸುಡುವ ಕೇಸುರಿಯ ಪ್ರಾಕಾರಂಗಳಿಂ ಮತ್ತಮನಿತಾನುಂ ತೆಱದುಪದ್ರವಹೇತುಗಳಪ್ಪ ರೌದ್ರಮೃಗಂಗಳಿಂ ತುಱುಗಿ ಶತಯೋಜನೋತ್ಸೇಧಂಬಡೆದ ವಜ್ರಸಾಲಮೆಂಬ ಕೋಂಟೆಯಂ ವಿಗುರ್ವಿಸಿ ಪೊೞಲ್ಗೆ ದುರ್ಲಂಘ್ಯ ಪುರಮೆಂಬ ಪೆಸರನನ್ವರ್ಥಮಾಗಿ ಮಾಡಿ ಪೊಡರ್ಪುಗಿಡದಿರ್ಪುದುಂ,

ಅದಱ ತೆಱನಱಿಯದಱಿಯೆಂ ।
ಮುದಾತ್ತಬಲನಂ ಪ್ರಹಸ್ತನಂ ಪೇೞ್ದುದುಮಂ- ॥
ತದನಱಿದು ಬಂದವಂ ದಶ ।
ವದನಂಗಾದ್ಯಂತಮದಱಗುರ್ವಂ ಪೇೞ್ದಂ ॥೧೮೭॥

ಅಂತು ಪೇೞ್ದು ನಮ್ಮ ಪಡೆಗಲ್ಲಿ ಜಂತ್ರಂಗಳಿಂದುಪದ್ರವಮಾಗದಂತೆ ತೊಲಗಿ ಬಿಟ್ಟು ಬೞಿಕ್ಕದಂ ಕೊಳ್ವ ತೆಱನಂ ಬಗೆವುದೆಂಬುದುಂ ದಶವದನನಾ ನುಡಿಯನವಕರ್ಣಿಸಿ ಕೋಂಟೆಯಂ ಕೊಳ್ವುಪಾಯಮನೆ ಬಗೆಯುತ್ತ ಮಿರ್ಪಿನಮಿತ್ತಲ್,

ನಳಕೂಬರನ ಕುಲಾಂಗನೆ ।
ವಿಳಾಸವತಿ ರಾವಣಂಗೆ ಪಲಕಾಲಂ ಮು- ॥
ನ್ನೆಳಸಿರ್ಪ ಕಾಮಕಾತರೆ ।
ಕೆಳದಿಗೆ ತಿಳಿಪಂತು ತನ್ನ ತೆಱನಂ ಪೇೞ್ದಳ್ ॥೧೮೮॥

ಅಂತು ವಿದ್ಯಾಧರ ಪರಮೇಶ್ವರಿಯಪ್ಪ ಚಿತ್ರಮಾಲೆಗೆ ನಿಜಾಭಿಪ್ರಾಯಮಂ ಕಲಿ ರಾವಣನಲ್ಲಿಗಟ್ಟುವುದುಂ,

ನೀಲಪಟಚ್ಛದೆ ನಿಶೆಯೊಳ್ ।
ಲೋಲೇಕ್ಷಣೆ ಗಗನ ಮಾರ್ಗದಿಂ ರಾವಣನಿ- ॥
ರ್ದಾಲಯಮಂ ವಿಜಯಶ್ರೀ ।
ಲೀಲೆಯಿನಾ ಚಿತ್ರಮಾಲೆ ಬಂದೊಳಪೊಕ್ಕಳ್ ॥೧೮೯॥

ಅಂತು ರಾವಣನ ಕೆಲಕ್ಕೆವಂದು,

ಉಪರಂಭೆಯೆಂಬಳೆಮ್ಮ ರ ।
ಸಿ ಪೋಲಿಪೊಡೆ ರಂಭೆಗಗ್ಗಳಂ ಚೆಲ್ವಿಂದಾ- ॥
ರುಪಮೆಗೆ ಪೆಱರೆನಿಪಳ್ಪೀ ।
ನಪಯೋಧರೆ ನಿನ್ನ ಸಾರ್ಕೆಗಟ್ಟಿದಳೆನ್ನಂ ॥೧೯೦॥

ಪಲವು ದಿನಂ ನಿನ್ನೊಳ್ ತೊ ।
ಟ್ಟೊಲವಿಂದಾ ಚೆನ್ನೆ ನಿನ್ನನನವರತಂ ಪಂ- ॥
ಬಲಿಸುತ್ತುಂ ಚಿತ್ತೋದ್ಭವ ।
ನಲರಂಬುಗಳುರ್ಚೆ ನಾಡೆ ಪಾಡೞಿದಿರ್ದಳ್ ॥೧೯೧॥

ಏಪೊಗಳ್ವೆನತನು ವಿದ್ಯಾ ।
ದೇವತೆ ನಿರತಿಶಯಮಪ್ಪ ರೂಪಿಂ ವಿದ್ಯಾ- ॥
ದೇವತೆ ಸಾಮರ್ಥ್ಯದಿನೆನಿ ।
ಪಾವಧು ಬರೆ ದೇವ ನಿನಗೆ ತೀರದುದುಂಟೆ ॥೧೯೨॥

ಎನೆ ದಶಾನನಂ ಪಱಿಯುಂ ಪಾಪಮುಮಪ್ಪ ದುಶ್ಚರಿತ್ರಮನೇವೆನೆಂದು ಮನದೊಳ್ನಿಶ್ಚಯಿಸಿ ವಿಭೀಷಣನಂ ಬರಿಸಿ ರಹಸ್ಯದೊಳದನಱಿಪುವುದುಮಾತಂ ವಿದ್ಯಾಪ್ರಾಕಾರಮಂ ಕಿಡಿಸುವಂತುಟಂ ಪ್ರತಿವಿದ್ಯೆಯನಾಕೆಯಂ ಬರಿಸಿ ಪುಸಿದು ನಂಬಿಸಿ ಕಲ್ತುಕೊಳ್ವುದೆನೆ ರಾವಣನುಮಾದೂದವಿಗೆ ನಿನ್ನ ನುಡಿಯನೊಡಂಬಟ್ಟೆನಾಕೆಯಂ ತಾಯೆಂದು ವಕ್ರೋಕ್ತಿಯಿಂ ನುಡಿವುದುಕಮಾಕ್ಷಣದೊಲೆ ಪೋಗಿ ಬೇಗಂ ತುರ್ಪುದುಮವಳ್ಗೆ ಪುಸಿನಣ್ಪುದೋಜೆ ನಿನಗಮೆನಗಂ ದುರ್ಲಂಘ್ಯ ಪುರದೊಳ್ ಕೂಟಮಪ್ಪಂತುಟಂ ಮಾಡೆನೆ ಮನದೆಗೊಂಡಂತೆ ಗೆಯ್ವೆನೆಂದು ಸಾಲವಿದ್ಯಾಭೇದಿನಿಯಂ,

ಪ್ರತಿವಿದ್ಯೆಯನಾಕೆ ಕುಲ ।
ಕ್ಷತಿಯಂ ಪತಿಗಪ್ಪ ಹಾನಿಯಂ ಬಗೆಯದೆ ದು- ॥

ರ್ಮತಿ ಕೊಟ್ಟಳದೆನ್ನರುಮಂ ।
ಮತಿಗಡಿಪುದು ಚೋದ್ಯಮಲ್ತು ಮದನೋನ್ಮಾದಂ ॥೧೯೩॥

ಅಂತಾಕೆಯ ಕೈಯೊಳಾ ವಿದ್ಯೆಯಂ ಕೊಂಡು ಕಟಿಪಿ ಮರುದಿವಸಂ ಸಾಲವಿದ್ಯೆಯಂ ಪ್ರತಿವಿದ್ಯೆಯಿಂ ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತುವುದುಂ,

ಸೆರಗುಂ ಬೆರಗಂ ಬಗೆಯದೆ ।
ಪುರಮಂ ಪೊಱಮಟ್ಟು ಕಾದುವಾಗಳ್ನಳಕೂ- ॥
ಬರನಂ ವಿಭೀಷಣಂ ಮದ ।
ಕರಿಯಂ ಮೃಗವೈರಿ ಪಿಡಿವ ತೆಱದಿಂ ಪಿಡಿದಂ ॥೧೯೪॥

ಆ ಸಮಯದೊಳ್,

ದನುಜಾಧೀಶ್ವರನ ಪುರಾ ।
ತನ ಪುಣ್ಯದ ಫಲದಿನಾಯುಧಾಗಾರದೊಳೇಂ ॥
ಜನಿಯಿಸಿದುದೊ ವಿದ್ವಿಷ್ಟಾ ।
ವನಿಪಾಲಪ್ರಳಯಕಾಲಚಕ್ರಂ ಚಕ್ರಂ ॥೧೯೫॥

ಅಂತು ಸುದರ್ಶನ ಚಕ್ರರತ್ನಂ ಪುಟ್ಟುವುದುಂ ರಾವಣಂ ಮಹೋತ್ಸವದಿಂ ಚಕ್ರಪೂಜೆಯಂ ಮಾಡಿ ರಹಸ್ಯದೊಳಾಕೆಯಂ ಕರೆದು ನೀಂ ವಿಶುದ್ಧಕುಲದ ಕುಲಧ್ವಜಂಗಂ ಮಧುಕಾಂತೆಗಂ ಪುಟ್ಟಿದುದಱಿಂ ನಿಜಕುಲಾಚಾರಮಂ ಬಗೆದು ಶೀಲಪರಿಪಾಲನಂ ಮಾಳ್ಪುದಂತಲ್ಲದೆಯುಂ ನೀನೆನಗೆ ವಿದ್ಯೋಪದೇಶಂ ಗೆಯ್ದು ಗುರುವಾದುದಱಿಂದೇನುಮಂ ಬಗೆಯದೆ ನಳಕೂಬರನೊಳ್ಕೂಡಿ ಸುಖಮಿರೆಂದಾಕೆಯ ದುಷ್ಪರಿಣಾಮಮಂ ಪತ್ತುವಿಡಿಸಿ,

ನಳಕೂಬರನುಮನಾಕ್ಷಣ ।
ದೊಳೆ ಬರಿಸಿ ನಿಜಾಗ್ರತನಯನಿಂದಗಿಯಿಂದ- ॥
ಗ್ಗಳಮೆನೆ ಮನ್ನಿಸಿ ಭಯಮಂ ।
ಕಳೆದಿತ್ತಂ ಭೃತ್ಯಪದವಿಯಂ ದಶವದನಂ ॥೧೯೬॥

ಅಂತಾತಂಬೆರಸು,

ವಿಜಯಾರ್ಧನಗಕ್ಕೆತ್ತಿದ ।
ನಜೇಯದೋಶ್ಶಾಲಿ ರಾವಣಂ ನಿಜವಿಜಯ- ॥
ಧ್ವಜಿನಿಗಳಬ್ಧಿಗಳೇೞುಂ ।
ನಿಜಸೀಮಾ ವಜ್ರವೇದಿಯಿಂ ತಳರ್ದುವೆನಲ್ ॥೧೯೭॥

ಅಂತು ರಾವಣಂ ತನ್ನ ಮೇಲೆತ್ತಿ ಬಂದು ರಜತಗಿರಿನಿತಂಬದೊಳ್ ಬೀಡಂ ಬಿಟ್ಟನೆಂಬುದನಿಂದ್ರಂ ಕೇಳ್ದು ಸಮರಸನ್ನಾಹಭೇರಿಯಂ ಪೊಯಿಸುವುದುಂ,

ಚತುರಂಬುರಾಶಿಯಂ ಘೂ ।
ರ್ಣಿತಮೆನೆ ದಿಗ್ವಳಯಮಂ ದಿಶಾದ್ವಿರದನ ಬೃಂ- ॥
ಹಿತಮೆನೆ ನಭಮಂ ಘನಗ ।
ರ್ಜಿತಮೆನೆ ಪುದಿದತ್ತು ಭೂರಿಭೇರೀನಾದಂ ॥೧೯೮॥

ಕರಿಗಳ ವಾಜಿರಾಜಿಗಳ ತೇರ್ಗಳ ಖೇಚರ ರೊಡ್ಡಣಕ್ಕಣಂ
ಧರೆ ಕಿಱಿದಂಬರಂ ಕಿಱಿದು ಕೇತನಮಾಲಿಕೆಗೆಂಬಿನಂ ವಿಯ-
ಚ್ಚರ ಧರಣೀಶರತ್ನಮಕುಟಪ್ರಭೆಯಿಂ ದಶದಿಙ್ಮುಖಂಗಳಂ
ಭರಿತಮೆನಿಪ್ಪನಂ ನೆರೆದುದಾ ಧ್ವನಿಗಿಂದ್ರನ ರುಂದ್ರಸೈನಿಕಂ ॥೧೯೯॥

ಅಂತು ರಣಭೂಮಿಯೊಳಿಂದ್ರನ ಬಲವೊಡ್ಡಿ ನಿಲ್ವುದುಂ ರಾವಣನ ಬಲಂ ರಣರಭಸದಿಂ ಬಂದು ತಾಗುವುದುಂ,

ಇರ್ಬಲದ ಚತುರ್ಬಲಮುಂ ।
ದೋರ್ಬಲಮಂ ಮೆಱೆದು ನೆರೆದು ಕಾದುವ ಪದದೊಳ್ ॥
ಮಾರ್ಬಲಮಂ ಸುರಸೈನಿಕ ।
ಮೆಬ್ಬಿಟ್ಟಮುದಳ್ಕಿ ಬಳ್ಕಿ ಬೆಂಗುಡುವಿನೆಗಂ ॥೨೦೦॥

ಅಂತು ರಾಕ್ಷಸಬಲಮೆಲ್ಲಮೊಲ್ಲನುಲಿದೋಡುವುದುಂ ಕಂಡು ಮುಖ್ಯ ನಾಯಕರಪ್ಪ ವಜ್ರವೇಗನುಂ ಹಸ್ತಪ್ರಹಸ್ತರುಂ ಮಾರೀಚನುಂ ಉದ್ಭಟನುಮುಜ್ವಳನುಂ ವಜ್ರನುಂ ಮಹಾಜಲಧರನುಂ ಸಂಧ್ಯಾಭ್ರನುಂ ಕ್ರೂರನುಮೆಂದಿವರ್ಮೊದಲಾಗೆ ಮಹಾಬಲಪರಾಕ್ರಮರ್ತಂತಮ್ಮ ಬಲಮಂ ಪೆಱಗಿಕ್ಕಿ ದಿವಿಜಬಲಮನೆಲ್ಲಂ ಗೆಲೆ ಕಾದುವುದಂ ಕಂಡು ಮೇಘಬಲಿಯುಂ ತಟಿತ್ತುಂಗನುಮದ್ರಿಯುಂ ಸಂಜ್ವಲನುಂ ಪಾವಕನುಂ ಮೊದಲಾಗೆ,

ಸುರಬಲದ ನಾಯಕರ್ ಸಂ ।
ಗರದೊಳ್ ರಾವಣನ ಬಲದ ನಾಯಕರಂ ಸಂ- ॥
ಹರಿಸೆ ಕೆಲರಂ ಕಪಿಧ್ವಜ ।
ರರೆಬರ್ ಕಾಲಾಗ್ನಿರುದ್ರನಂತುರಿದೆಟ್ಟಿರ್ ॥೨೦೧॥

ಅಲ್ಲಿ ಮಹೋಗ್ರನಂದನಂ ಪ್ರಸನ್ನಕೀರ್ತಿಯುಂ ಮಾಲ್ಯವಂತ ತನೂಭವಂ ಶ್ರೀಮಾಲಿಯುಮೆಡೆವೊಕ್ಕು ಹತವಿತತ ಕೋಲಾಹಲಮಂ ಮಾಡಿ ಕಾದುವುದಂ ಕಂಡು ದಂಡಾಗ್ರಜನುಂ ಶಿಖಂಡ ವ್ಯಾಲಿಯುಂ ಶಿಖಂಡಿಯುಂ ಶಿಖಿಯುಂ ಕೇಸರಿಯುಂ ಕನಕನುಂಮೃಗಜಿಷ್ಣುನುಮೆಂಬಿಂದ್ರನಳಿಯಂದಿರ್ಮೊಲಾಗೆ ಕೆಲಬರ್ಕುಮಾರಕರ್ ಮುಸುಱಿ ಮುತ್ತುವುದುಂ,

ಶ್ರೀಮಾಲಿ ನೃಕುಮಾರ ।
ಸ್ತೋಮದ ತಲೆ ಪಱಿದು ಪಾಱೆ ಬೀೞ್ವೆಸೆಗಂ ಸಂ- ॥
ಗ್ರಾಮದೊಳೀಸಾಡಿದನಖಿ ।
ಳಾಮರರಾಗಸದೊಳೊಡನೆ ತಲೆದೂಗುವಿನಂ ॥೨೦೨॥

ಅವರಱಿವುದನಿಂದ್ರತನೂ ।
ಭವನೀಕ್ಷಿಸಿ ಕಲುಷವಶಗತಂ ತಾಗಿ ರಣೋ- ॥
ತ್ಸವದಿಂ ಮೇಳಿಸಿ ಮೊನೆಯೊ ।
ಳ್ಜವನಂ ಶ್ರೀಮಾಲಿಯಂ ಜಯಂತಂ ಕೊಂದಂ ॥೨೦೩॥

ಅಂತು ಶ್ರೀಮಾಲಿಯಂ ಕೊಂದು ಜಯಂತಂ ಜಯಪತಾಕೆಯನೆತ್ತಿಸುವುದುಮಿಂದ್ರ-ಜಿತ್ಕುಮಾರನತಿಕುಪಿತಚಿತ್ತನಾಗಿ ಜಯಂತನೊಳ್ಪೊಣರ್ವುದುಮಿಂದ್ರಂ ನೋಡಿ ಕಡುವೇಗದಿಂ,

ಮುಳಿದೈರಾವಣಗಂಧಸಿಂಧುರಮನಾಗಳ್ನೂಂಕಿದಂ ವ್ಯೋಮಮಂ-
ಡಳದೊಳ್ಬೆಳ್ಗೆ ಚಂದ್ರಮಂಡಳದ ಚೆಲ್ವಂ ಬೀಱೆ ದಿಕ್ಪಾಲಮಂ-
ಡಳಿ ಸುತ್ತಂ ಬರೆ ಪಾಳಿಕೇತನಶತಂಗಳ್ಮುಂದೆ ಮುಂದ್ಯೆಸೆ ಮಂ-
ಗಳ ಭೇರೀರವಮುಣ್ಮೆ ಪೊಣ್ಮೆ ದೆಸೆಯಂ ತಳ್ಪೊಯ್ಯೆ ಶಂಖಸ್ವನಂ ॥೨೦೪॥

ಅಂತಿಂದಗಿಯ ಮೊನೆಗೈರಾವಣವಾರಣಮನಱೆದು ನೂಂಕುವಿಂದ್ರನಂ ದನುಜೇಂದ್ರನ ಸಾರಥಿ ಸನ್ಮತಿ ಕಂಡಿಂತೆಂದಂ :

ನಿನಗಿಂದ್ರಂ ದೊರೆ ಸಂಗರಕ್ಕೆ ದೊರೆ ನೀನಿಂದ್ರಂಗೆ ಮತ್ತೊರ್ವರಾ-
ತನನೇನಾಂಕಗೊಳಲ್ ಸಮರ್ಥರೆ ಕುಮಾರಂ ಬಾಲಕಂ ಯುದ್ಧಯೋ-
ಗ್ಯನೆ ಕೈಕೊಳ್ವುದು ದೇವರಿಂದಗಿಯನೆಂದಾ ಲೋಲಸುಂಡಾಲಕೇ-
ತನಮಂ ಜೋದಿಸಿದಂ ದಶಾಸ್ಯರಥಮಂ ಸೂತಂ ಮನೋವೇಗದಿಂ ॥೨೦೫॥

ಅಂತು ಮುಟ್ಟೆ ಮೂದಲಿಸಿ ತಾಗುವುದುಂ,

ಶರಸಂಧಾನದ ವೇಗಂ ।
ಪರಿಕಿಸಲರಿದೆನಿಸಿ ದಿವಿಜಪತಿಯುಂ ದಶಕಂ- ॥
ಧರನುಂ ಕಾಯ್ದಿಸೆ ಪಾಯ್ದುವು ।
ಶರಮಯಮಾಯ್ತಖಿಳಭುವನಮೆನೆ ಶರನಿಕರಂ ॥೨೦೬॥

ಅಂತಚಿಂತ್ಯ ಯುದ್ಧಂಗೆಯ್ವು ದಾನವೇಂದ್ರನನಿಂದ್ರಂ ಸಾಧಾರಣಾಸ್ತ್ರಮೊಳ್ಗೆಲ್ವುದರಿ-ದೆಂದು,

ಮುನಿದು ತಮದಂಬಿನಿಂದಿಂ ।
ದ್ರನಿಸುವುದುಮಂ ಬೆಳಗಿನಂಬಿನಿಂಗೆಲ್ದೊಡೆ ಕಂ- ॥
ಡನಲಾಸ್ತ್ರದಿನಿಸೆ ದಿವಿಜಂ ।
ದನುಜೇಂದ್ರಂ ವಾರುಣಾಸ್ತ್ರದಿಂ ಖಂಡಿಸಿದಂ ॥೨೦೭॥

ಅಂತುಖಂಡಿಸೆ ಮತ್ತಂ ಪಲತೆಱದ ದಿವ್ಯಶರಂಗಳಿಂದಿಂದ್ರನೇಸಾಡೆ ರಾವಣನವಂ ಪ್ರತಿಶರಂಗಳಿಂದಭಿಭವಿಸೆ,

ದೇವರ್ಕಾವೊಡಮಿವನಂ ।
ಸಾವೆಯ್ದಿ ಪೆನೆಂದು ಮನದೊಳೊದವಿದಲಂಪಿಂ ॥
ರಾವಣನ ವರೂಥಕ್ಕೈ ।
ರಾವಣವಾರಣಮನಣೆದು ನೂಂಕಿದನಿಂದ್ರಂ ॥೨೦೮॥

ಅಂತು ನೂಂಕುವುದುಂ,

ನಿಜನೇತ್ರಾರ್ಧದೊಳಾಗಳಾಗಳದಟಂ ಶ್ರೀಮಾಲಿ ಸತ್ತೇವಮುಂ
ನಿಜವಂಶಪ್ರಭುವಪ್ಪ ಮಾಲಿಯನವಂ ಮುಂಕೊಂದನೆಂಬೇವಮುಂ
ನಿಜಕೋಪಾಗ್ನಿಗೆ ಕೊರ್ವನೀಯೆ ದೊರೆಕೊಂಡಂ ದ್ರೋಹನೆಂದೇಱಿದಂ
ತ್ರಿಜಗದ್ಭೂಷಣದಂತಿಯಂ ರಿಪುಚಮೂವಿದ್ರಾವಣಂ ರಾವಣಂ ॥೨೦೯॥

ಅಂತಿರ್ವರುಮೋರೊರ್ವರಾನೆಯಂ ಮುಟ್ಟೆ ನೂಂಕಿ ಮಹಾಯುದ್ಧಂಗೆಯ್ವಾಗಳ್ ರಾವಣ ನೈರಾವಣನ ಮೇಲೆ ಪಾಯ್ದು ಮುಂದಣಾಧೋರಣನಂ ಚರಣಪ್ರಹಾರದಿಂ ನೆಲಕ್ಕಿಕ್ಕಿ ಮಾತಂಗದ ಮೇಲೆ ಪಾಯ್ವ ಸಿಂಹದಂತಿಂದ್ರನ ಮೇಲೆ ಪಾಯ್ದು ಮತ್ತಮವನಂ ಮೇಲುದಱ ಸೆಱಂಗಿನೊಳಡಸಿ ಕಟ್ಟಿ ಕೊಲ್ವೆನಲ್ಲೆನಂಜದಿರೆಂದಭಯವಚನಮಂ ನುಡಿದು,

ಕರಿಯಂ ಹರಿ ಕೇಸರಿಯಂ ।
ಶರಭಂ ಶರಭಮನದೊಂದಿ ಭೇರುಂಡನಡು- ॥
ರ್ತಿರದುಯ್ವ ತೆಱದೆ ನಿಜಸಿಂ ।
ಧುರಕ್ಕೆ ಮಗುಟ್ದುಯ್ದನಿಂದ್ರನಂ ದನುಜೇಂದ್ರಂ ॥೨೧೦॥

ಆ ಸಮಯದೊಳಿಂದ್ರನ ಮಗನಪ್ಪ ಜಯಂತನನಿಂದ್ರಜಿತ್ಕುಮಾರಂ ಬಾಟ್ದಿಲೆದಂದೀಯೆ ರಾವಣನಭಯಘೋಷಣೆಯಂ ಮಾಡಿ ಮಹಾವಿಭವದಿಂ ಬಂದು ಲಂಕೆಯಂ ಪೊಕ್ಕು ಸುಖದಿನಿರೆ,

ಪರಿಜನಮುಮುಪಾಯನಮುಂ ।
ಬೆರಸು ಸಹಸ್ರಾರನಾತ್ಮತನಯನ ಮೋಹಂ ॥

ತರೆ ತನ್ನಂ ಬಂದಂ ದಶ ।
ಶಿರನಲ್ಲಿಗೆ ಮುಂದುಗಾಂಬರೇ ಮೋಹಾಂಧರ್ ॥೨೧೧॥

ಅಂತು ಬಂದು ಲಂಕಾಪುರಮಂ ಪುಗುವುದುಮುಚಿತ ಪ್ರತಿಪತ್ತಿಯಿಂ ಕಾಣಿಸಿಕೊಂಡು ಸಹಸ್ರಾರನಂ ನಿಜಜನಕನಿಂದಧಿಕಮಾಗೆ ಮನ್ನಿಸಿ ಮಣಿಮಯಾಸನದೊಳಿರಿಸಿ ವಿನಯವಿನಮಿತಂ ಬೆಸನಾವುದೆನೆ ಸಹಸ್ರಾರನಿಂತೆಂದಂ,

ನಿನಗೆಡಱ್ದಿಂದ್ರನಂ ಗೆ ।
ಲ್ದು ನಿನ್ನ ಬುಜಬಲದ ಮಹಿಮೆಯಂ ಬೀಱ್ದೆ ಜೀ- ॥
ಯೆನಿಸಾತನ ಸೆಱೆಯಂ ಬಿ ।
ಟ್ಟು ನಿನ್ನ ತಕ್ಕೂರ್ಮೆ ಬಣ್ಣಿಸಲ್ಬಾರದೆನಲ್ ॥೨೧೨॥

ಎನೆ ದಶಾನನಂ ಮಹಾಪ್ರಸಾದಮಂತೆ ಗೆಯ್ವೆನೆಂದಿಂದ್ರನಂ ಬರಿಸಿ ನಿಷ್ಕಷಾಯಂ ನಿನ್ನ ರಾಜ್ಯದೊಳ್ಸುಖಮಿರೆಂದು ಕಱ್ಪುವುದುಂ ರಾವಣಂಗೆ ನಿಶ್ಯಲ್ಯನಾಗಿ ತನ್ನ ಪೊಲಲ್ಗೆವಂದು ಇಂದುವೆಂಬ ತನ್ನ ಪಿರಿಯ ಮಗಂಗೆ ರಾಜ್ಯಮಂ ಕೊಟ್ಟು ತನ್ನ ಮಗನಪ್ಪ ಜಯಂತನುಂ ಲೋಕಾಪಲರುಂ ಬೆರಸು ದೀಕ್ಷೆಗೊಂಡು ಮೋಕ್ಷಕ್ಕೆ ಪೋದನಿತ್ತಲಿಂದ್ರನಂ ಗೆಲ್ದು ವಿಯಚ್ಚರೇಂದ್ರಂ ವರುಣನ ಮೇಲೆ ನಡೆಯಲೆಂದು ಸಮಸ್ತ ಸಾಮಂತರಂ ಬರಿಸಿ ಹನುವರ ದ್ವೀಪಕ್ಕೆ ದೂತನನಟ್ಟುವುದುಮಾತಂ ಬಂದು ಪ್ರತಿ ಸೂರ್ಯನುಮಂ ಪವನಂಜಯನುಮಂ ಕಂಡು ನಿಜಾಗಮನವೃತ್ತಾಂತಮನಱ್ಪುವುದುಂ ಪವನಂಜಯನಾಂಜನೇಯನಂ ಬರಿಸಿ,

ವರುಣಂ ಬಾಯ್ಕೇಳನೆಂಬೀ ಮುನಿಸನುವಿಸೆ ಮೇಲೆತ್ತಲಿಂದೀಗಳೆಮ್ಮಂ
ಬರವೇಳ್ದಿಂ ದಾನವೇಂದ್ರನ ತಡೆವುದು ಪದನಲ್ತೊಪ್ಪುಗೊಳ್ ರಾಜ್ಯರಕ್ಷಾ-
ಭರಮಂ ನೀನೆಂಬುದುಂ ಮಾರುತಿ ಮುಕುಳಿತಹಸ್ತಾಂಬುಜಂ ವೀರಲಕ್ಷ್ಮೀ-
ಪರಿರಂಭೋತ್ಸಾಹದಿಂದಾ ಬೆಸನನತಿಬಳಂ ತಂದೆಯಂ ಬೇಡಿಕೊಂಡು ॥೨೧೩॥

ಅಂತು ಬೆಸನಂ ಬೇಡಿಕೊಂಡು ವಿಮಾನಾರೂಢನಸಂಖ್ಯಾತಬಲಂ ಬೆರಸು ಸಮುದ್ರಮಧ್ಯದ್ವೀಪಂಗಳಿಂಪೊಲಲ್ಗಳುಮನಭೀಕಿಸುತ್ತುಂ ಬಪ್ಪ ಸಮಯದೊಳ್ ರಾವಣಂ ಗಗನಮಂಡಳದೊಳಿರ್ದು ಹನುಮನ ಬರವಂ ಕಂಡು,

ಇದಿರ್ವರೆ ತಾನುಮುತ್ಸುಕತೆಯಿಂದಿದಿರ್ವಂದು ಮರುತ್ಸುತಂ ಪದ-
ಕ್ಕೊದವಿದ ಭಕ್ತಿಯಿಂ ಮಣಿಕಿರೀಟಮರೀಚಿಯಿನೀಯೆ ಪಾದ್ಯಮಂ
ಪದಪಿನಳುರ್ಕೆಯಿಂ ತೆಗೆದು ತಳ್ಕಿಸೆ ದಾನವ ಚಕ್ರವರ್ತಿಗಾ-
ದುದು ರಿಪುಚಕ್ರಮಂ ತವಿಪುದಿನ್ನೆನಗಾವರಿದೆಂಬ ಸಂತಸಂ ॥೨೧೪॥

ಅಂತಾತನಂ ಕಾಣಿಸಿಕೊಂಡು,

ಆಗಸಮುಂ ದೆಸೆಯುಂ ಭೂ ।
ಭಾಗಮುಮೆಡೆನೆಱೆಯದೀ ಬಲಕ್ಕೆನೆ ನಡೆದಂ ॥
ಮೇಗಿಲ್ಲದ ಬಲ್ಲಾಳ್ ರಣ ।
ರಾಗರಸಂ ಕದನ ಕರ್ಕಶಂ ದಶವದನಂ ॥೨೧೫॥

ಅಂತು ನಡೆದು ಪಾತಾಳಪುಂಡರೀಕಪುರಮಂ ಮೂವಳಸಾಗೆ ಮತ್ತೆ ವರುಣನತಿ ಕುಪಿತನಾಗಿ ಪೊಱಮಡುವುದುಮೊಡನೆ,

ಒರ್ವನೆ ಜವನೆಂಬುದು ಪುಸಿ ।
ನೂರ್ವರ್ಜನಿಯಿಸಿದರೆನಿಸಿ ಖಚರಕುಮಾರ- ॥
ದೋರ್ವಲದೃಪ್ತರ್ಪುರಮಂ ।
ನೂರ್ವರ್ ಸಂಗ್ರಾಮಲಂಪಟರ್ಪೊಱಮಟ್ಟರ್ ॥೨೧೬॥

ಸಿಂಗದ ಜಂಗುಳಿಯಂತಿರ ।
ಸುಂಗೊಳಿ ಪೊಱಮಟ್ಟು ಕಾದೆ ವರುಣಕುಮಾರರ್ ॥
ಬೆಂಗೊಟ್ಟುದು ದಶಮುಖಚತು ।
ರಂಗಬಲಂ ಸಮರಮುಖದೊಳವರ್ಗಿದಿರುಂಟೇ ॥೨೧೭॥

ಅಂತು ಕಾದುತ್ತುಮಿರೆ ಹನುಮನೆಡೆವೊಕ್ಕು ತನ್ನ ಸೇನೆಯಿಂ ರಿಪುಸೇನೆಯಂ ಸುತ್ತಿ ಮುತ್ತಿ,

ವಾನರವಿದ್ಯೆಯಂ ತಳೆದು ವಾನರರುಪುಮನಾಂತು ವಿದ್ವಿಷ-
ತ್ಸೇನೆಯೊಳಾನೆಯಂ ಕುದುರೆಯಂ ರಥಮಂ ಪೃಥು ಗಂಡಶೈಲ ಸಂ-
ತಾನದಿನಿಟ್ಟು ಮೋದಿ ತರುರಾಜಿಗಳಿಂ ತವೆ ಕೊಂದನಾರ್ ಮರು-
ತ್ಸೂನುಗೆ ಕೈದುಗೆಯ್ದು ಕಡುಕೆಯ್ದು ಬರ್ದುಂಕುವರಾಜಿರಂಗದೊಳ್ ॥೨೧೮॥

ಅಂತು ಹನುಮನನುವರದೊಳಾಂತ ಬಲಮಂ ಕೃತಾಂತನಂತೆ ತವಿಸಿ ರಾಜೀವ ಪುಂಡರೀಕ ಪ್ರಮುಖರಪ್ಪ ನಿಜಕುಮಾರನೂರ್ವರಂ ಪಿಡಿದು ಕಟ್ಟುವುದುಮಂ ವರುಣಂ ಕಂಡತಿ ಕುಪಿತನಾಗಿ,

ನೆನೆದೆ ಕಲುಷವಶಂ ನ ।
ಚ್ಚಿನ ವಿದ್ಯೆಗಳಂ ಕಡಂಗಿ ಕಾದುವ ಪದದೊಳ್ ॥
ದನುಜೇಂದ್ರಂ ಪಿಡಿದಂ ವರು ।
ಣನನಾವಂ ರಾವಣಂಗೆ ಕೂರ್ಪಂ ತೋರ್ಪಂ ॥೨೧೯॥

ಅಂತಾತನಂ ಪಿಡಿದು ಕುಂಭಕರ್ಣಂಗೆ ಸೆಱೆಯನೊಪ್ಪಿಸಿ ಭುವನೋನ್ಮಾದಮೆಂಬುದ್ಯಾನವನದೊಳ್ಬೀಡಂ ಬಿಟ್ಟಿರ್ದು ವರುಣನಂ ಬರಿಸಿ,

ಕಲಿ ಸಾವಂ ಪಿಡಿವಡೆವಂ ।
ಕಲಹದೊಳಿದು ಭಂಗಮಲ್ತು ನೀಂ ಮುನ್ನಿನವೋಲ್ ॥
ನೆಲಸಿರ್ಪುದು ನಿಜರಾಜ್ಯದೊ ।
ಳೊಲವಿಂ ದೆಂದೊಸೆದು ವರುಣನು ಮನ್ನಿಸಿದಂ ॥೨೨೦॥

ಅಂತು ವರುಣನಂ ಮನ್ನಿಸಿ ಕರಗ್ರಹಣಂಗೆಯ್ದು ಕಾರುಣ್ಯಮನಱಿಪುವುದುಂ ವರುಣಂ ಹನುಮನ ಸೆರಗಿಲ್ಲದ ಬಲ್ಲಾಳ್ತನಮಂ ಪೊಗೞ್ದು ಸತ್ಯವತಿಯೆಂಬ ತನ್ನ ಮಗಳಂ ರಾವಣಂಗೆ ಮಹಾವಿಭವದಿನಿತ್ತು ತನ್ನ ಪೊೞಲ್ಗೆ ಪೋದನಿತ್ತ ರಾವಣಂ ಲಂಕೆಗೆವಂದು ಚಂದ್ರನಖಿಯ ಮಗಳಪ್ಪನಂ ಪುಷ್ಪೆಯಂ ಶ್ರೀಶೈಲಂಗೆ ಪರಿಣಯನೋತ್ಸವದಿನಿತ್ತು ಕರ್ಣಕಂಡಳಪುರಮನಾತಂಗೆ ರಾಜ್ಯಾಭಿಷೇಕಂಗೆಯ್ದು ಕುಡುವುದುಮಲ್ಲಿಯೆ ಸಹಸ್ರಾಂತಃಪುರ ಪುರಂಧ್ರಿಯರ್ಗೆ ವಲ್ಲಭನಾಗಿ ಸುಗ್ರೀವಂಗಂ ಸುತಾರೆಗಂ ಪುಟ್ಟಿದ ಪದ್ಮರಾಗೆಯಂ ಮದುವೆನಿಂದು ಸುಖಮಿರ್ದನಿತ್ತಲ್,

ಭರತತ್ರಿಖಂಡಮಂ ದಶ । ಶಿರನಾಳ್ದಂ ಚಕ್ರರತ್ನಮಸಿರತ್ನಂಗಳ್ ॥
ದೊರೆಕೊಂಡುವಖಿಳವಿದ್ಯಾ । ಧರವಲ್ಲಭರೆಲ್ಲರುಂ ಪದಾನತರಾದರ್ ॥೨೨೧॥

ಆ ಕ್ರೋಧೋದ್ಧತನಪ್ಪ ರಾವಣನೊಳಾವಂ ಕಾದುವಂ ಯುದ್ಧದೊಳ್
ಶಕ್ರಂಗಂ ತ್ರಿಜಗದ್ವಿಭೂಷಣಗಜಂ ಕೊಂದಿಕ್ಕಲೇಂ ಸಾಲದೆ
ಚಕ್ರಕ್ಕಂ ಪರಚಕ್ಕಮುಂಟೆ ಸಕಲೋರ್ವೀಚಕ್ರದೊಳ್ವಿದ್ವಿಷ-
ಚ್ಚಕ್ರಂ ತೋರ್ಕುಮೆ ಚಂದ್ರಹಾಸದಿರಿದೊಳ್ಮಾಱಾಂತು ವಿಕ್ರಾಂತಮಂ ॥೨೨೨॥

ನಿಖಿಳಕ್ಷತ್ರಕುಳಂ ವಿಯಚ್ಚರಕುಳಂ ಸಂಗ್ರಾಮಕೇಳೀಪರಾ-
ಙ್ಮುಖಮಾತ್ಮ ಪ್ರತಿಬಿಂಬದಂತೆ ಬೞಿಸಂದಾಜ್ಞಾವಿಧೇಯರ್ಗುಹಾ
ಮುಖದಂತೆಂದುದನೆನ್ನವಂದ್ಲು ನವರಕ್ತಾಸಕ್ತನಕ್ತಂಚರೀ-
ಮುಖದೊಳ್ತೂಂತುವುದಾಂತರಂ ದಶಮುಖೋತ್ಖಾತಾಸಿಧಾರಾಮುಖಂ ॥೨೨೩॥

ತ್ರಿಜಗದ್ಭೂಷಣಮಪ್ಪ ಸಮಾಜಮನೇಂ ಮಾಱಾಂಪುವೇ ಮಿಕ್ಕ ಸಾ-
ಮಜಮಾ ಯಕ್ಷಸಹಸ್ರ ರಕ್ಷಿತಮನುದ್ಯಚ್ಚಕ್ರಮಂ ಚಂದ್ರಹಾ-
ಸಜಯೋಗ್ರಾಸಿಯನಾಂಪ ಕೈದುಮೊಳವೇ ಕೈಲಾಸಮಂ ಕಿೞ್ತಿ ತ-
ದ್ಭುಜಮಂ ಭೂಭುಜಖೇಚರರ್ಕಳ ಭುಜಂಗಳ್ಪಿಂಗದೇನಾಂಪುವೇ ॥೨೨೪॥

ಮದಮನ ಭದ್ರಗಜಕ್ಕೆ ರಾಜವೆಸರಂ ಚಂದ್ರಂಗೆ ತೀವ್ರಪ್ರತಾ-
ಪದ ಪೆರ್ಚಂ ತಪನಂಗೆ ತೇಜದೊದವಂ ಸಪ್ತಾರ್ಚಿಗತ್ಯುಗ್ರಖ-

ಡ್ಗದಗುರ್ವಂ ಗಹನಕ್ಕೆಯುನ್ನತಿಯನೇಱುಂ ಗೋತ್ರಭೂಭೃತ್ಕುಳ-
ಕ್ಕದಟಂ ಸೈರಿಸುವಂ ಪೆಱಂಗೆ ಪೆಱತೇಂ ಲಂಕೇಶ್ವರಂ ಸೈರಿಸಂ ॥೨೨೫॥

ಕದನಕ್ಷೋಣಿಯೊಲೋಡಿದರ್ಮಡಿದರೆಂಬೀ ವಾರ್ತೆಯಂ ಕಂಡರೇಂ-
ದುದನೇಗೊಂಡರಿಳೇಶರೆಂಬ ನುಡಿಯಂ ಭೂಭಾಗದೊಳ್ಕೇಳಲಾ-
ದುದು ಗೆಲ್ವರ್ ಸರಿಗಾದಿದರ್ ಪಗೆವರೆಂಬೀ ವಾರ್ತೆಯಂ ಕೇಳಲಾ-
ಗದವಂ ವರ್ತಿಸಿದರ್ಬಳಿಕ್ಕೆನೆ ಜಗದ್ವಿದ್ರಾವಣಂ ರಾವಣಂ ॥೨೨೬॥

ಆಯುಧಮೆನಿತೊಳವವು ದಿ । ವ್ಯಾಯುಧಮವನನಳವದಾರ ಕೈಯಳವಾತಂ ॥
ಕಾಯಲ್ಬರ್ದುಂಕುವರ್ಕ್ಕೆ ಗಾಯದೊಡಾವಂಗಮೇಂ ನಿಲಲ್ವಂದಪುದೇ ॥೨೨೭॥

ಭೀಷಣಬಲರಸುಹೃದ್ಬಲ । ಶೋಷಣದಕ್ಷನ್ನೃಪಾಲಶರಣಾಗತ ಸಂ- ॥
ತೋಷಕರಕುಂಭಕರ್ಣವಿ । ಭೀಷಣರೆಂಬರ್ ದಶಾಸ್ಯನೊಡವುಟ್ಟಿದವರ್ ॥೨೨೮॥

ಕಾಲಮನಾಸೆಗೆಯ್ವನಿದಿರಿಕ್ಕುವನೆಮ್ಮೊಳಗಾವನೆಂದವರ್
ಕಾಲನಳೀಳಿದಂ ಬಗೆವರೀ ನೆಲನಂ ವಿಜಿಗೀಷುವೃತ್ತಿಯಿಂ
ಪಾಲಿಸುವರ್ಸುರಾಸುರವಿಯಚ್ಚರ ಸೇನೆಯೊಳಾರ್ಗಮಾಜಿಯೊಳ್
ಸೋಲದ ಮೇಘವಾಹನನುಮಿಂದಗಿಯುಂ ಖಚರೇಂದ್ರನಂದನರ್ ॥೨೨೯॥

ಅವನ ವಿಯಚ್ಚರಸೇನೆಯ ।
ಪವಣನದೇವೇಱ್ಪಿ ಕೈದುಗೆಯ್ಯದೊಡಮದಂ ॥
ತವೆ ಕೊಲ್ವುದರಿದು ದನುಜನ ।
ಬವರಂ ಕೈಸಾರೆಯಲ್ತು ಗೆಲ್ಲದ ಬವರಂ ॥೨೩೦॥

ಬಲದ ಭುಜಬಲದ ವಿದ್ಯಾ ।
ಬಲದ ಮನೋಬಲದ ಬಲ್ಪಿನಿಂ ನೃಪರಾರ್ಗಂ ॥
ಗೆಲಲರಿಯಂ ದಶಕಂಧರ ।
ನಲಂಘ್ಯ ವಿಕ್ರಾಂತತುಂಗನಮರೇಂದ್ರಂಗಂ ॥೨೩೧॥

ಎಂಬುದುಂ ಲಕ್ಷ್ಮಣಂ ಮುಳಿಸುವೆರಸಿದ ಮುಗುಳ್ನಗೆ ಪಸರಿಸೆ ಪರಿಹಾಸವಚೋವಿಳಾಸದಿನಿಂತೆಂದ:

ಆದಟಂ ರಾವಣನೆಂಬುದಂ ನುಡಿದು ತೋಱಲ್ವೇಱ್ಪುದೇ ಕಾದಲ-
ಮ್ಮದೆ ಕಳ್ದುಯ್ದುದೆ ಪೇೞ್ಗುಮಂಬಿಕೆಯನಾತಂ ಭೀತನಿಕ್ಷ್ವಾಕುವಂ-
ಶದರಂ ಗೆಲ್ವನೆ ರಾಮರಾವಣರ ಬಲ್ಪಂ ಮೆಲ್ಪುಮಂ ಕಾಣಲ-
ಪ್ಪುದು ತಟೆತ್ತಿಱಿವಲ್ಲಿ ದಿಟ್ಟಮೊಲೆಯಿಂ ತೂಗಿ ರಣಕ್ಷೋಣಿಯೊಳ್ ॥೨೩೨॥

ನಡೆವುದಿಳೇಶನೊಳ್ತೊಡರದನ್ನೆಗಮಾತನ ಗಂಡಗರ್ವಮಿ-
ನ್ನಡಗುಮ ರಾಮನಂಬು ನೆಱಿನಂ ನಡೆ ಕಾಲ್ನಡೆಗಟ್ಟು ನಿಲ್ಕುಮಿಾ
ನುಡಿ ತಡಮಲ್ತು ನಾಳೆಯೆ ರಣಾಂಗಣದೊಳ್ನಡೆ ನೋಡುವಿರ್ ಮರು-
ಳ್ವಡೆಯೊಡಗೂಡೆ ತಾಂಡವಮನಾಡುವ ರಾವಣನಿಟ್ಟೆಮಾಟಮಂ ॥೨೩೩॥

ದನುಜೇಂದ್ರನಲ್ಪವೀರ್ಯಂ ।
ಮನುಜೇಂದ್ರನನಂತವಿರ್ಯನಣ್ಣಂಗಾವ- ॥
ಣ್ಣನುಮಿದಿರೆ ಕರಿಗಳಂ ಗೆ ।
ಲ್ದನಿತಱೊಳಿಭವೈರಿ ಶರಭಮಂ ಗೆಲ್ದಪುದೇ ॥೨೩೪॥

ಕಟ್ತಿಲೆ ಪಿರಿದಾದೊಡಮೇಂ ।
ಮಾರ್ತಲೆಯೆ ದಿನಾಧಿಪಂಗೆ ಪಿರಿದಾದೊಡಮೇ- ॥
ರ್ನಾಪುದೆ ವೈರಿಸೈನ್ಯಮ ।
ಡುರ್ತಿಱಿಯಲಜೇಯ ಬಾಹುಬಲನಂ ಬಲನಂ ॥೨೩೫॥

ಹಿತಮಿತರಾಕ್ಯನಸ್ಖಲಿತಧೈರ್ಯಗುಣಂ ಗುಣರತ್ನರೋಹಣ
ಕ್ಷಿತಿಧರನತ್ಯುದಾತ್ತಮಹಿಮಂ ಶರಣಾಗತವಜ್ರಪಂಜರಂ
ನತನರಪಾಲಮೌಳಿ ಹರಿನೀಲ ಮಣಿಪ್ರಚಯದ್ವಿರೇಫಚುಂ-
ಬಿತಚರಣಾರವಿಂದನವದಾಯಶಂ ಕವಿತಾಮನೋಹರಂ ॥೨೩೬॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಲಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ದಶವದನವಂಶ ವರ್ಣನಂ
ದಶಮಾಶ್ವಾಸಂ



## ೧೧. ಲಂಕಾಪುರದಹನ ವರ್ಣನಂ

ಶ್ರೀವಧುಗೆ ಪೇರುರಂ ಜ ।
ನ್ಮಾವಾಸಂ ಕೀರ್ತಿವಧುಗೆ ಕೇಳೀಗೃಹಮಾ- ॥
ಶಾವಲಯಮೆನೆ ಸಮಸ್ತ ಕ ।
ಳಾವಿಭವಮನಪ್ಪುಕೆಯ್ದನಭಿನವಪಂಪಂ ॥೧॥

ಎಂಬುದುಂ ಜಾಂಬವ ಪ್ರಮುಖಪ್ರಧಾನರಿಂತೆಂದರ್ :

ಎಮಗಧಿರಾಜರಾಗಿ ಖರರೋರ್ವಿಗೆ ವಲ್ಲಭರಾಗಿ ಖೇಚರ-
ಪ್ರಮದೆಯರಂ ಮನಂಗೊಳಿಸಿ ರಾಜ್ಯವಿಲಾಸಮನಪ್ಪುಕೆಯ್ದನು-
ಕ್ರಮದೊಳೆ ದಂಡಮೊಂದುಟಿಯೆ ಭೇದಿಸಿ ತರ್ಪುದು ದೇವಿಯಂ ಪರಾ-
ಕ್ರಮದೆಡೆಯಲ್ತು ಪೊಲ್ಲದಸದಾಗ್ರಹಮಾತನೊಳಾಗ ವಿಗ್ರಹಂ ॥೨॥

ಅವರಿವರೆನ್ನದಾದ ನೃಪನಂದನರುಂ ದನುಜಂಗೆ ಭೀತಿಯಿಂ-
ದವನತರಪ್ಪರಲ್ಲದೊಸೆದಾಳ್ವೆಸದಿಂ ನಡೆವನ್ನರಿಲ್ಲನಾ-
ಮವರನುಪಾಯದಿಂದೆಮಗೆ ಬೆಂಬಲಮಾಗಿರೆ ಮಾಡಿ ಕೂಡಿಕೊಂ-
ಡವನೊಡನೆತ್ತಿ ಕಾದುವುದು ಕಾಲವಿಲಂಬನವಾಗಲಾಗದೇ ॥೩॥

ಎಂಬುದುಂ ರಘುವೀರನಿಂತೆಂದಂ :

ಆತಂಗೆ ನೆಱೆಯಲಾಱದ ।
ಭೀತರ ನೆರಮೇವುದೆನಗೆ ಮೊನೆಯೊಳ್ದನುಜಂ- ॥
ಗಾತಂಕಮನೊಡರಿಸಲನು ।
ಜಾತುಭುಜೋದ್ಭಾಸಿ ಖಡ್ಗಮಿದೆ ನೆರಮಲ್ತೇ ॥೪॥

ಅಸದನುಶಾಸಸಂ ರಘುಕುಲಕ್ಕೆ ಕುಲವ್ರತಮಮನ್ಯಕಾಂತೆಗಾ-
ಟಿಸಿದ ದುರಾತ್ಮನಂ ರಣದೊಳಣ್ಮೆದನಪ್ಪೊಡಮೋಘ ಬಾಣದಿಂ
ದೆಸೆವಲಿಗೆಯ್ವೆನಳ್ಕಿ ರಣಕೇಳಿಗೆ ಜಾನಕಿಯಂ ದಶಾಸ್ಯನೊ-
ಪ್ಪಿಸಿದೊಡೆ ಕಾವೆನಿಲ್ಲಿ ನಿಮಗಂ ನಮಂಗಂ ಪದನಲ್ತು ಮಂತಣಂ ॥೫॥

ಎಂಬುದುಂ ಜಾಂಬೂನದಂ ತನ್ನೊಳಿಂತೆಂದಂ :

ತೃಣಪುರುಷನಾಗಿ ಕಲ್ಪಿಸಿ ।
ರಣರಭಸಮನಪ್ಪುಕೆಯ್ವಪಂ ಬಗೆಯದೆ ರಾ- ॥
ವಣನುಮನಿನ್ನುಂ ಮುನ್ನುಂ ।
ಗಣನಾತೀತಪ್ರತಾಪನೀ ರಘುರಾಮಂ ॥೬॥

ಸೆರಗಂ ಪಾರದುದಾತ್ತ ರಾಘವನ ಮಾತಂ ಕೇಳ್ದು ಜಾಂಬೂನದಂ
ಪಿರಿದುಂ ವಿಸ್ಮಯಮುತ್ತು ಕಾದಿ ರಣದೊಳ್ ಪೌಲಸ್ತ್ಯನಂ ಗೆಲ್ವ ದು-
ರ್ಧರಬಾಹಾಬಲಮಂ ಪರೀಕ್ಷಿಸುವೆನೆಂಬೀ ಚಿತ್ತದಿಂ ಪೇೞಲಾ-
ತುರನಾದಂ ದನುಜಂಗೆ ದಿವ್ಯಮುನಿಪರ್ಮುಂ ಪೇೞ್ದ ವೃತ್ತಾಂತಮಂ ॥೭॥

ಅಂತು ಬಗೆದು ರಘುವೀರನ ಮುಖಾರವಿಂದಮಂ ನೋಡಿ ಜಾಂಬೂನದಂ ಮುಕುಳಿತಕರಕಮಲನಿಂತೆಂದಂ : ದೇವ ಮುನ್ನೊರ್ಮೆ ದಶಗ್ರೀವನನಂತವೀರ್ಯಕೇವಲಿಗಳ ಚರಣೋಪಾಂತದೊಳ್ಧರ್ಮಮಂ ಕೇಳ್ದು ತದನಂತರಮೆನಗೆ ಪೆಱರ ಕೈಯೊಳ್ಮರಣಮಕ್ಕುಮಾಗ-ದೆಂಬುದಂ ಬೆಸಸಿಮೆನೆ ನಿನಗೆ ಸಿದ್ಧಶೈಲಮನೆತ್ತಿದನ ಕೈಯೊಳ್ಮರಣಮಕ್ಕುಮೆನೆ ಸಿದ್ಧನಗಮನೆತ್ತುವ ಮಹಾಸತ್ತ್ವನಾವನುಮಿಲ್ಲವಜ಼ನೆನಗೆ ಮರಣಮಿಲ್ಲೆಂದು ಹರ್ಷಚಿತ್ತನಾದನೆಂಬದುಂ ಲಕ್ಷ್ಮಣನಿಂತೆಂದಂ :

ಕುಲನಗಮಂ ನೆಗಪುವ ದೋ ।
ರ್ವಲಕ್ಕೆ ನಿರ್ವಾಣಶೈಲಮೇಗಹನಮದಂ ॥
ಚಲಿಯಿಸುವೆನಚಲವಚನಂ ।
ಪಲಾಲಮನ್ವರ್ಥನಾಮ ಮಲ್ತೆಂಬಿನೆಗಂ ॥೮॥

ಎಂಬುದುಮಾ ಮಾತಂ ಮನದೆಗೊಂಡು ಜಾಂಬೂನದ ವಿಮಲಬದ್ಧಿ ಸುಗ್ರೀವ ನಳ ನೀಲಾರ್ಕ-ಮಾಲಿಗಳ್ ರಹಸ್ಯದಿಂ ರಾಮಲಕ್ಷ್ಮಣರ ವಿಮಾನಮೇಱಿಸಿಕೊಂಡು ವಿಯನ್ಮಾರ್ಗದೊಲ್ಪೋಗಿ ನಿರ್ವಾಣನಗಮೆಯ್ದಿ ಬಲವಂದರ್ಚಿಸೆ ತದನಂತರಂ ಸೌಮಿತ್ರಿ ಸಿದ್ಧಗುಣಸ್ತವನಮಂ ಮಾಡಿ,

ಪದಘಾತಕ್ಕೆ ಧರಿತ್ರಿ ಬಾಯ್ವಿಡೆ ಭುಜಾದಂಡಂಗಳಂ ಸಾಚಿ ಬಿ-
ರ್ಚಿದಿಳಾಸಂಧಿಗೆ ಮೆಯ್ವೊರ್ಣರ್ಚಿ ನೆಲೆಯಿಂದಕ್ಷೂಣಸತ್ತ್ವಂ ತಳ-
ರ್ಚಿ ದಶಗ್ರೀವನ ಕಂಠಕಂದಳದ ಬೇರಂ ಕೀಳ್ವವೋಲ್ ಕಿೞ್ತಿನೆ-
ತ್ತಿದನೊಲ್ಪೈಸಿದರಿನ್ನರಾರೆನೆ ನೃಪೇಂದ್ರಂ ಸಿದ್ಧಶೈಲೇಂದ್ರಮಂ ॥೯॥

ಆ ಕುತ್ಕೀಲಮನೊಂದೆ ದಕ್ಷಿಣಭುಜಂ ಪೊತ್ತೆತ್ತೆ ಬಾಹಾಬಲ-
ಕ್ಕೇಕಚ್ಛತ್ರಮದಾಯ್ತು ತತ್ಸಮಯದೊಳ್ಪೇವಾಸಕಥ್ವಾಸಮಾ-

ಶಾಂಕುಂಭೋದರವರ್ತಿಯಾಯ್ತು ಸುಮನೋವರ್ಷಂ ನದದ್ಭೃಂಗಮಾ-
ವಾಕೀರ್ಣಂ ಪೊಸತಾಯ್ತು ಸಾಹಸಧನಂ ಸೌಮಿತ್ರಿಸಾಮಾನ್ಯನೇ ||೧೦||

ಅಂತು ಸಿದ್ಧನಗಮನುದ್ಧರಿಸುವುದಂ,

ಗಿರಿನಿರ್ಝರಪ್ರವಾಹಂ ।
ಸುರಿದುದು ಭರತತ್ರಿಖಂಡರಾಜ್ಯಾಭಿಷವಂ ॥
ದೊರೆಕೊಂಡಪ್ಪುದು ದಶಕಂ ।
ಧರವಧೆಯಿಂದೆಂದು ಮುಂದು ತೋರ್ಪಂತಾಗಳ್ ||೧೧||

ಹರಿಚ ಭುಜಬಲಮನೀಕ್ಷಿಪ ।
ಸುರಸಮಿತಿಗೆ ಬೆಳಗಿದಂತೆ ಕೈದೀವಿಗೆಯಂ ॥
ಗಿರಿಗುಹೆಯ ಫಣಾ ಮಣಿ ಭಾ ।
ಸುರಂಗಳತಿಭಯದಿನುದ್ದಮೊಗೆದುವು ಫಣಿಗಳ್ ||೧೨||

ಪೂಮಱಿಯಂತಲ್ಲೊಕ್ಕುವು ।
ಪೂಮರಗಳ ಪೂಗಳಚಳಮೇಖಳೆಯಿಂದಾ ॥
ಪೂಮಱಿಯ ಮೊಱಿಗಿನಂತೆ ಗು ।
ಹಾಮುಖದಿಂದುಣ್ಮಿದತ್ತು ಸಿಂಹನಿನಾದಂ ||೧೩||

ಆ ಸಮಯದೊಳ್,

ಸುರಕುಸುಮವೃಷ್ಟಿ ಸುರತೂ ।
ರ್ಯರವಂ ಸುರಜಜಯಸ್ವನಂ ಕೈಮಿಗೆ ವಾ- ॥
ನರಹಿಚ್ಚ ಪ್ರಮುಖವಿಯ ।
ಚ್ಚರಪತಿಗಳ್ ತಮ್ಮ ಮನದೊಳಚ್ಚರಿವಟ್ಟರ್ ||೧೪||

ಅಂತವರತಿವಿಸ್ಮಯಂಬಟ್ಟು ರಾಮಲಕ್ಷ್ಮಣರಂ ಪೂಜಿಸಿ ಪೊಡೆವಟ್ಟು ಭರತ ತ್ರಿಖಂಡಮಂಡಳಮಂ ಬಲವಂದು ವೃಷಭಾದಿತೀರ್ಥವಂದನಾನಂದಮಂ ಮನದೆಗೊಂಡು ಮಗುೞ್ದು ಬಂದಾ ರಾತ್ರಿಯೊಳ್ಕಿಷ್ಕಿಂಧಪುರಮಂ ಪೊಕ್ಕು ವಿಶ್ರಮಿಸಿ ಮಱುದಿವಸಂ,

ಅಮರರ್ಪೂಜಿಸಿದ ಮಹ ।
ತ್ತ್ವಮುಮಂ ಲಕ್ಷ್ಮಣನ ಸಿದ್ಧಶೈಲೇಂದ್ರಮನ- ॥
ಶ್ರಮದಿಂದೆತ್ತಿದ ಭುಜವೀ ।
ರ್ಯಮುಮಂ ಪೋಗೞುತ್ತುಮಿರ್ಪುದುಂ ಕೆಲರಂದರ್ ||೧೫||

ಆ ರಾವಣನುಂ ಮುನ್ನಂ ।
ತಾರಾದ್ರಿಯನೆತ್ತದಿರ್ದನೇ ಭುಜಬಲದಿಂ- ॥
ದಾರಧಿಕರೆಂಬುದಂ ಸಮ ।
ರಾರಂಭದೊಳಲ್ಲದಱಿಯಲೇಂ ಬಂದಪುದೇ ॥೧೬॥

ಎಂಬುದುಂ

ರಾವಣನಗಮಂ ವಿದ್ಯಾ ।
ದೇವತೆಗಳ ಬಲದಿನೆತ್ತಿದಂ ಭುಜಬಲದಿಂ- ॥
ದಾವನುಮೆತ್ತಿದನಿಲ್ಲೀ ।
ಭೂವಲ್ಲಭನಂದಿಂದಮೆಂದರ್ಕೆಲಬರ್ ॥೧೭॥

ಕೆಲರೀತಂ ರಾವಣನಂ ।
ಕಲಹದೊಳುದಿಱಿಕ್ಕಿ ಭರತಮಂಡಳಮಂ ದೋ- ॥
ರ್ವಲದಿಂದಮಾಳ್ವನೆಂದ ।
ರ್ಕೆಲರಾವಂ ರಾವಣಂಗಿದಿರ್ಚುವನೆಂದರ್ ॥೧೮॥

ಅಂತೋರೊರ್ವರೊಂದೊಂದಂ ನುಡಿಯುತ್ತುಮೊಡನೊಡನೆ ಬರೆ ಸುಗ್ರೀವಾದಿಗಳ್ಬಂದು ಪೊಡೆವಟ್ಟು ಕುಳ್ಳಿರ್ಪುದುಂ ಪದ್ಮದೇವನವರ ಮುಖಪದ್ಮಮಂ ನೋಡಿ,

ಎಡೆಯಱಿಯದಿನ್ನೆವರೆಗಂ ।
ತಡೆದನ್ನೆಯಮೊಂದೆ ಸಾಲದೇ ಜಾನಕಿಯಿ- ॥
ರ್ದೆಡೆಯಱಿದು ಲಂಕೆಗೆತ್ತದೆ ।
ತಡೆಯೆ ಪರಾಕ್ರಮದ ಪೆರ್ಮೆ ಪೞಿಗೆಡೆಯಕ್ಕುಂ ॥೧೯॥

ಎನೆ ಜಾಂಬವನಿಂತೆಂದಂ:

ನಯಮಂ ತನಗಱಿಪಿದೊಡ ।
ನ್ನೆಯಮಂ ಬಿಡದನ್ನರಿಲ್ಲ ರಾಗಾದಿಗಳೇಂ ॥
ನಿಯತಂಗಳೆ ಕನ್ನಡಿಯಂ ।
ಪ್ರಯತ್ನದಿಂ ಬೆಳಗೆ ಪತ್ತುವಿಡದೆ ಕಲುಂಬಂ ॥೨೦॥

ಅತಿವರ್ತಿಯಾಗಿ ದಾನವ ।
ಪತಿಗಱಿಪುವರಿಲ್ಲ ತಕ್ಕುದಂ ಪರಿಜನದೊಳ್ ॥
ಹಿತನಂಜದೆ ಪೇೞ್ದು ಸುಭಾ ।
ಷಿತಮಂ ಕೈಗೊಳಿಸುಗುಂ ವಿಭೀಷಣನೆ ವಲಂ ॥೨೧॥

ದನುಜನನುಜಂ ಶುದ್ಧಾಚಾರಂ ವಿಚಾರಪರಂ ಪರಾಂ-
ಗನೆಯನವನಿನಾಥಂ ತಾಂಗಲ್ಕೆ ತಕ್ಕುದೆ ತಕ್ಕುದಂ
ನೆನೆದು ಕಟಿ'ಪೆಂದೊಳ್ಪಂ ಪೇೞ್ದಿಣ್ಣನಂ ಜಡಿದಟ್ಟುಗುಂ
ಜನಕಸುತೆಯಂ ಮಾಱಿಂ ದೈತ್ಯಂ ವಿಭೀಷಣನೆಂದುದಂ ॥೨೨॥

ಅಟ್ಟಲೆವೇೞ್ಪುದೊರ್ಮೆಗೆ ವಿಭೀಷಣನಲ್ಲಿಗೆ ನಮ್ಮ ನಣ್ಪಿನ-
ಟ್ಟಟ್ಟಯ ಮಾತನಟ್ಟದೊಡೆ ದೇವಿಯನಾತನ ಮಾತುಗೇಳ್ದು ಬಿ-
ಟ್ಟಟ್ಟುಗುಮುರ್ಕಿ ಸೊರ್ಕಿ ದಶಕಂಠನುದಂಚಿತಕಂಠನಾಗಿ ಬಿ-
ಟ್ಟಟ್ಟದೆ ಬೆಟ್ಟವೆಟ್ಟನುಸಿರ್ದಟ್ಟದೊಡಿರ್ದಪುದಲ್ತೆ ಕಾಳೆಗಂ ॥೨೩॥

ದೂತನನಟ್ಟುವಿದೆಂತುಂ ।
ನೀತಿಯೆ ನಿಜ ಕುಶಲವಾರ್ತೆಗೇಳದೊಡಕ್ಕುಂ ॥
ಸೀತಾದೇವಿಗೆ ಮರಣಮ ।
ದೇ ತೊದಳತಿದುಃಖವೇಗದಿಂದಾಗದುದೇಂ ॥೨೪॥

ಎಂಬುದುಮಾ ನುಡಿಗೆ ಮಹೋದಧಿಯಿಂತೆಂದ :

ಮಾರುತ ದಿನಕರಕರ ಸಂ ।
ಚಾರಕ್ಕಮಗಮ್ಯಮೆಂಬಿನಂ ವಿದ್ಯಾಪ್ರಾ- ॥
ಕಾರಮನೀಗಳೊಡರ್ಚಿದ ।
ನಾ ರಾಕ್ಷಸಪತಿಯ ಪುರಮನಾವಂ ಪುಗುವಂ ॥೨೫॥

ಅದಱಿ'ನೀಗಳಿಲ್ಲಿರ್ದ ವಿದ್ಯಾಧರರೊಳೊರ್ವರುಂ ಲಂಕೆಗೆ ಪೋಗಲು ಪೋಗಿ ಕಾರ್ಯಮಂ ತೀರ್ಚಲುಂ ಸಮರ್ಥರಿಲ್ಲೊರ್ವನತ್ತಲಿರ್ದಪನಜೇಯಬಲನಾಂಜನೇಯನ-ದೆಂತನೆ,

ದನುಜಂ ಮನ್ನಿಸುವಂ ವಿಭೀಷಣನುಮಾಂತಗೊಳ್ಳಿದಂ ಲಂಕೆಯಂ
ಘನಬಾಹಾಬಲದಿಂದೆ ಭೇದಿಸಿ ಪುಗಲ್ ಸಾಮರ್ಥ್ಯಮುಂಟಂಜನಾ-
ತನಯಂಗಾತನೆದೇವಿಯಂ ಬಿಡಿಸಿ ತರ್ಕುಂ ಕಾದಿ ತರ್ಕುಂ ದಶಾ-
ನನನೊಟ್ಟೈಸಿದನಪ್ಪೊಡೀ ಕೆಲಸಮಾತಂಗಲ್ಲದೇಂ ಸಾಧ್ಯಮೇ ॥೨೬॥

ಎಂಬುದುಮಾ ನುಡಿಗೆ ಸಂತೋಷಂಬಟ್ಟು ಮಹೋದಧಿಗೆ ಮೆಚ್ಚುಗೊಟ್ಟು ಸುಗ್ರೀವಂ ಗೃಹಭೂತಿಯೆಂಬ ದೂತನಂ ಹನುಮನಲ್ಲಿಗಟ್ಟುವುದಮಾತಂ ಗಗನಮಾರ್ಗದಿಂ ಪೋಗಿ ಹನುವರದ್ವೀಪಮನೆಯ್ದಿ,

ನಭದಿಂದೆ ಬಂದವಂ ರಾ ।
ಜಭವನಮಂ ಪೊಕ್ಕು ಪವನಸುತಪಾದನಖ- ॥
ಪ್ರಭೆ ಪಸರಿಸೆ ತನಗೆ ಶಿರೋ ।
ವಿಭೂಷಣಶ್ರೀಯನೀಯೆ ವಿನಮಿತನಾದಂ ॥೨೭॥

ಆಗಿ ನಿಜಾಗಮನವೃತ್ತಾಂತಮನಿಂತೆಂದು ಬಿನ್ನವಿಸಿದಂ : ರಾಮಲಕ್ಷ್ಮಣರ್ದಂಡಕಾರ್ಯಕ್ಕೆವಂದು ಶಂಭುಕಂ ಸಾಧಿಸಿದ ಸೂರ್ಯಹಾಸಮಂ ಕೊಂಡಾತನಂ ಕೊಂದುದಕ್ಕೆ ಪುಯ್ಯಲ್ಗೆವಂದ ಖರದೂಷಣರನವರ ಸೇನೆವೆರಸು ಕೊಂದು ಮಱಿಗೆವಂದ ವಿರಾಧಿತನಂ ಪಾತಾಳಲಂಕೆಯೊಳ್ನಿಱಿಸಿದರೆಂಬುದಂ ಸುಗ್ರೀವಂ ಕೇಳ್ದು,

ಇವರತಿಬಲರಿವರಿಂದೆ ।
ನ್ನವಿಷಾದಂ ಕಿಡುಗುಮೆಂಬ ಭರವಸದಿಂ ಕಂ- ॥
ಡವರಂ ಶರಣಾರ್ಥಿಯೆನೆ ।
ನ್ನವಸರಮಂ ತೀರ್ಚೆಮೆಂದ ಬಿನ್ನವಿಸುವುದುಂ ॥೨೮॥

ಶರಣಾಗತರಕ್ಷಣತ । ತ್ಪರರದನೇಗೊಂಡು ಕಾದಿ ಸಾಹಸಗತಿಯಂ ॥
ಶರಪತಿಯಿನಿಕ್ಕಿ ಚಿಂತಾ । ಜ್ವರಮಂ ಸುಗ್ರೀವನಂಗದಿಂ ಪಿಂಗಿಸಿದಂ ॥೨೯॥

ಅದಲ್ಲದೆಯುಂ,

ಉದ್ಧರಿಸಿದನಶ್ರಮದಿಂ ।
ಸಿದ್ಧಶಿಳಾತಳಮನೊಂದೆ ಕರತಳದಿಂದ- ॥
ಧೌರ್ಯೋದ್ಧರಣಸಹಿತಮಮರ ।
ರ್ಬದ್ಧಾಂಜಲಿಯಪ್ಪಿನಂ ಸುಮಿತ್ರಾಪುತ್ರಂ ॥೩೦॥

ಎಂದು ಬಿನ್ನವಿಸಿದ ದೂತನ ಮಾತಂ ಕೇಳ್ದು,

ಕಱಿದರ್ಖರದೂಷಣರಂ ।
ಬಱಿಲಂ ಮಾಯಾವಿಯಪ್ಪ ಸಾಹಸಗತಿಗಾ- ॥
ದಱಿವಱಿಯೆ ಬೇಗೆವಟ್ಟಂ ।
ಮಱಿಯಿಂದಾಱಿದವೊಲಾಱಿದಂ ಪವನಸುತಂ ॥೩೧॥

ಎನಗರಿದೆನಿಪ್ಪ ಸುಗ್ರೀ ।
ವನ ಪಗೆಯಂ ತೀರ್ಚಿ ಮಾಡಿದುಪಕಾರಕ್ಕೆ ॥
ನ್ನನೆ ರಾಮಲಕ್ಷ್ಮಣರ್ಗೀ ।
ವೆನೆಂದು ನಿಶ್ಚಯಿಸಿದಂ ಪ್ರಭಂಜನತನಯಂ ॥೩೨॥

ಆಗಳಾತನಂತಃಪುರ ಸೀಮಂತಿನೀಲಲಾಮೆಯಪ್ಪನಮಂಗಪುಷ್ಪೆ ಸಹೋದರಪಿತೃ-ವಿಯೋಗೋದ್ವೇಗಮುಮನಾತನ ನಯನ ಪುತ್ರಿಕೆಗೆ ಪದ್ಮರಾಗಮಣಿದರ್ಪಣಮೆನಿಪ್ಪ ಪದ್ಮರಾಗೆ ನಿಜಜನಕನಪ್ಪ ಸುಗ್ರೀವನ ಸಂತೋಷದೊಳಾದ ಮನಮೋರಾಗಮುಮನಪ್ಪುಕೆಯ್ಯೆ ಮಱುದಿವಸಂ ಮಂಗಳಾಚರಣಭೂಷಿತಂ ಮಣಿಘಂಟಾವಿರಾಜಮಾನವಿಮಾನಮನೇಱ್ ಕಿಷ್ಕಿಂಧನಗರಾಬಿಮುಖನಾಗಿ ತಳರ್ವುದುಂ,

ಪವನಸುತನೇನೆ ನಡೆದುದು ।
ಪವನಪಥಂ ನೆಱೆಯದೆಂಬಿನಂ ದೆಸೆಯೆಲ್ಲಂ ॥
ಕಿವಿ ಶಬ್ದಂಗಿಡೆ ಕಟಿಳಾ ।
ರವದಿಂ ಪಟುಪಟಹಶಂಖ ಭೇರೀರವದಿಂ ॥೩೩॥

ಆ ಸಮಯದೊಳ್ಮರುತ್ಸುತಾಗಮನೋತ್ಸವಕ್ಕೆ ಪುರದೊಳಪ್ಪಶೋಭೆಯಂ ಮಾಡಿ ಪರಿಜನ ಪುರಜ ಪುರಸ್ಸರಂ ಸುಗ್ರೀವನಿದಿರ್ಗೊಂಡು ಯಥೋಚಿತ ಪ್ರತಿಪತ್ತಿಯಿಂ ಕಾಣಿಸಿಕೊಂಡು ರಘುತನೂಜರಾಜಮಂದಿರಕ್ಕೊಡಗೊಂಡುಯ್ವುದುಂ,

ಅತಿವೃತ್ತಾಯತಕರನು ।
ನ್ನತವಂಶಂ ಭದ್ರಲಕ್ಷಣೋಪೇತಂ ಮಾ- ॥
ರುತಿ ರಾಮನ ಸಭೆಗೈರಾ ।
ವತಮಿಂದ್ರನ ಸಭೆಗೆ ಬರ್ಪ ತೆಱದಿಂ ಬಂದಂ ॥೩೪॥

ಅಂತು ಬಂದುಪಾಯನಪುರಸ್ಸರಂ ರಾಮಲಕ್ಷ್ಮಣರ ಚರಣಕಮಲಕ್ಕೆಱಗಿ ನಳನೀಳಾಂಗದವಿರಾಧಿತಪ್ರಮುಖರಂ ಪ್ರೇಮಾಲಿಂಗನಕ್ಷೇಮವಚನದಿಂ ಮನ್ನಿಸಿ ಮಣಿಮಯಾಸನದೊಳ್ಕುಳ್ಳಿರ್ಪುದುಂ ಜಾಂಬವನಿಂತೆಂದಂ:

ಕಿರಣಂ ತೀಕ್ಷ್ಣಕರಂಗೆ ತೀಕ್ಷ್ಣನಖರಂ ಸಿಂಹಕ್ಕೆ ವಜ್ರಾಯುಧಂ
ಪುರುಹೂತಂಗುರಿಗಣ್ ಮೃಡಂಗೆ ರದನಂ ದಿಗ್ದಂತಿಗಾದಂದದಿಂ
ನೆರವಾದಂ ಪವನಾತ್ಮಜಂ ಕದನಕೇಳೀಕರ್ಕಶಂ ರಾಮದೋಃ-
ಪರಿಘಕ್ಕುಂಡಿಗೆ ಸಾಧ್ಯಮಾದುದೆ ವಲಂ ಷಟ್ಖಂಡಭೂಮಂಡಳಂ ॥೩೫॥

ಈ ಬಲ್ಲಾಳ್ ಹನುಮನ ಭಾ ।
ಹಾಬಲದಿಂ ನಡೆದುದಿನ್ನೆಗಂ ದಶಕಂಠಂ- ॥
ಗಾ ಬಿಂಕಮುಮಾ ಬೀರಮು ।
ಮಾ ಬಿರಿಮುಮವಂಗೆ ನಡೆಯಲಿನ್ನಱಿದಪುವೇ ॥೩೬॥

ಎಂಬುದುಮಾ ಸಮಯದೊಳ್ ಸುಗ್ರೀವಂ ಪವಮಾನಸೂನುಗಿಂತೆಂದಂ :

ಅನತನಲ್ಲದಂಗೆ ಪದುಳಂ ನಿಲಲಿಲ್ಲ ನಿಜಾನ್ವಯಾಗತ-
ಸ್ಥಾನದೊಳಾನತಂಗೆ ಭಯಮಿಲ್ಲ ಜಗತ್ತ್ರಯಮಾಂತೊಡಂ ಜಯ-
ಶ್ರೀನಿಲಯರ್ ಸಹಾಯಮನಪೇಕ್ಷಿಸರಾರ್ಗಮಜೇಯರುದ್ಧತ-
ಮಾನಧನರ್ಮಹಾಮಹಿಮರಿಂತಿವರಿರ್ವರೆ ರಾಮಲಕ್ಷ್ಮಣರ್ ||೩೭||

ಈ ಮಹಾನುಭಾವರಪ್ಪೊಡೆ ಮುನ್ನಂ ಸೀತಾಸ್ವಯಂವರದೊಳ್ದೇವತಾಧಿಷ್ಠಿತಂಗಳಪ್ಪ ವಜ್ರಾರ್ಣವಸಾಗರಾವರ್ತಮೆಂಬ ಚಾಪರತ್ನಂಗಳಂ ನಾಗವಿದ್ಯೆಗಳ್ವೆರಸು ಕೊಂಡರತಿಪ್ರಚಂಡರ -ದಲ್ಲದೆಯುಂ,

ಕಾರಣಪುರುಷರಿವರ್ಸಾ ।
ಧಾರಣದವರಲ್ಲರಿಕ್ಕಿ ಸಾಹಸಗತಿ ಯಂ ॥
ಮಾರುತಿ ಶರಹತಿಯಿನಸಾ ।
ಧಾರಣಮಪ್ಪನಿನ ಭಂಗಮಂ ಪಿಂಗಿಸಿದರ್ ||೩೮||

ಎಂಬುದುಮದರ್ಕೆ ಹರ್ಷಚಿತ್ತನಾಗಿ ಮರುತ್ತನಯಂ ರಾಮಚಂದ್ರಂಗೆ ಮುಕುಳಿತಾಂಜಲಿಯಾಗಿ ದೇವ ಭವಜ್ಜನ್ಮ ಮುಖಿಳಜಗದುಪಕಾರ ನಿಮಿತ್ತಮಾದುದದುಕಾರಣದಿಂ,

ಎಮಗುಚಿತಂ ನಿಜಸೇವಾ ।
ಪ್ರಮೋದಮಧಿರಾಜ ಪಂಚಭೂತಂಗಳ್ಗಂ ॥
ನಿಮಗಂ ಪ್ರತ್ಯುಪಕಾರ ।
ಕ್ಷಮರಾರ್ ದೇಹಿಗಳೊಳಂಬಿಕಾಸ್ತ್ವಸ್ಯಕ್ಕಂ ||೩೯||

ಎಂದು ಬಿನ್ನವಿಸೆ

ಧೀರಪ್ರಕೃತಿಗೆ ಸೌಮ್ಯಾ ।
ಕಾರಕ್ಕನುಗುಣಮೆನಿಪ್ಪ ನಯವಿನಯವಚ- ॥
ಸ್ಸಾರತೆಗೆ ಮೆಚ್ಚಿ ರಘುಕುಲ ।
ವೀರಂ ಕಾರುಣ್ಯದೃಷ್ಟಿಯಿಂದೀಕ್ಷಿಸಿದಂ ||೪೦||

ಅಪರಿಮಿತಮೆನಿಪ ಕಾರು ।
ಣ್ಯಪಯಸ್ಸಾಗರಸಮುದ್ಭವಂಗಳನಿತ್ತಂ ॥
ನೃಪರತ್ನ ಭಟರತ್ನಂ ।
ಗಪೂರ್ವಮಂ ರತ್ನಕರ್ಣಕುಂಡಳಯುಗಮಂ ||೪೧||

ಅಂತು ಮೆಚ್ಚುಗುಡುವುದುಮನಂತರಂ ಮಹೋದಧಿವೇಸರ ವಿಧ್ಯಾಧರನಿಂತೆಂದ :

ನೀನಿಲ್ಲದಿನಿಬರುಂ ಲಂ।
ಕಾನಗರಿಗೆ ಪೋಗಿ ನುಡಿದು ದಶಕಂಧರನೊಳ್ ॥
ಜಾನಕಿಯ ಶುಧ್ಧಿಯಂ ಪವ।
ಮಾನಜ ತರ್ಪೆಸಕಮಿಲ್ಲದೋಸರಿಸಿರ್ದರ್ ॥೪೨॥

ಎನೆ ಮನದೆಗೊಂಡು ಮಾರುತಿ ಮೇಘರತಿಯಿನುದಾತ್ತರಾಘವಂಗೆ ಮುಕುಳಿತಕರಸರೋಜನಾಗಿ,

ನಯದಿಂ ತಂದಪೆನಂತುಮೀಯದೊಡೆ ಬಲ್ಪಿಂ ತಂದಪೆಂ ದೇವ ದೇ-
ವಿಯನಂತಲ್ಲದೆ ನೋಡಿ ಬಪ್ಪುದೆನೆ ಮಾಯಾರೂಪದಿಂ ಪೋಗಿ ಶು-
ದ್ಧಿಯನಾಂ ತರ್ಪವನಲ್ಲೆನಾನೆ ಕೊಳನಂ ಪೊಕ್ಕಂತೆವೋಲ್ಪೊಕ್ಕು ಲಂ-
ಕೆಯುಮಂ ದೈತ್ಯನುಮಂ ಭಯಂಗೊಳಿಸಿ ತರ್ಪೆಂ ಜಾನಕೀಶುದ್ಧಿಯಂ ॥೪೩॥

ತ್ರಿದಶೇಂದ್ರಾರಾತಿದೈತ್ಯಂ ಧರೆಯನೆ ರಸೆಗಂದುಯ್ಯೆ ಕೇಳ್ದಾದ ಕಾಯ್ಪಿಂ
ಕದನಕ್ರೀಡಾನುರಕ್ತಂ ಮುರರಿಪು ಪಗೆಯಂ ಕೊಂಡು ಭೂಕಾಂತೆಯಂ ಸ-
ಮ್ಮದದಿಂ ತಂದಂತೆ ಲಂಕೇಶ್ವರನಮರವಿದ್ವಿಷ್ಟನಂ ಕೋಪದಿಂದೋ-
ವದೆ ಕೊಂದಾಂ ತಂದಪೆಂ ದೇವಿಯನೆನಗರಿದೇ ದೇವ ಪೇೞಿನ್ನನೀಗಳ್ ॥೪೪॥

ಎಂದು ಪೂಣ್ದು ನುಡಿದಂಜನಾಸುತಂಗೆ ರಘುವೀರನಿಂತೆಂದಂ :

ಜನಕಜೆಯ ಶುಧ್ಧಿಯಂ ತ।
ರ್ಪ ನಿಯೋಗಂ ನಿನಗೆ ಮೊನೆಯೊಳಾಟಂದು ದಶಾ- ॥
ನನನಂ ಮಾನಿನಿಯಂ ತ।
ರ್ಪ ನಿಯೋಗಂ ಲಕ್ಷ್ಮಣಂಗೆ ಪುದು ಪೆಱರ್ಗುಂಟೇ ॥೪೫॥

ಎಂದು ನಿಯಮಿಸಿ ನುಡಿದು,

ಅಱಿಪುವರಿಲ್ಲ ತನ್ನ ಕೆಲದೊಳ್ಮಱೆದಪ್ಪೊಡಮೆನ್ನಗಲ್ಕೆಗಂ-
ದಱೆಯದವಳ್ಭಯಾಕುಲತೆಯಿಂದಸುವಂ ಬಿಡುವಂತುಟಪ್ಪ ಬೇ-
ಸಱಮೊಲಕೊಳ್ಗುಮಂತೆಸಗದಂತಿರೆ ಮಾೞ್ಪುದು ಸೀತೆ ದೇಹಮಂ
ತೊಱೆದ ಬೞಿಕ್ಕೆ ರಕ್ಕಸನನಿಕ್ಕಿದೊಡಿಕ್ಕಿದ ಲೆಕ್ಕಮಕ್ಕುಮೇ ॥೪೬॥

ಎಂದು ರಘುವೀರನಣುವಂಗೆ ಜಾನಕಿಯ ತನ್ನ ಕುಱಿಪಿನ ಪೆಱವು ವಿನ್ನಾಣಂಗಳನಱಿಪಿ,

ಜನಕಜೆಯ ವದನಸರಸಿಜ।
ಮನಲರ್ಚಲ್ ವಿರಹಖೇದ ತಮಮಂ ಕಳೆಯಲ್ ॥

ಹನುಮನ ಕೈಯೊಳ್ ರಘುನಂ ।
ದನನಿತ್ತನುದಂಶುಮಾಲಿ ರವಿಮಂಡಳಮಂ ॥೪೭॥

ಅಂತಿತ್ತು ತನಗಾಕೆಯ ಚೂಡಾಮಣಿಯಂ ತರ್ಪುದೆಂದು ಬೆಸಸೆ ಮಹಾಪ್ರಸಾದಮೆಂದಾ ಕ್ಷಣದೊಳೆ ಬಲಾಚ್ಯುತರ ಪದಂಗಳಂ ಬೀೞ್ಕೊಂಡತಿಪ್ರಬಲಬಲಸಮನ್ವಿತಂ ವಿಮಾನಾರೂಢಂ ಪವಮಾನಸೂನು ಪವನಪಥಕ್ಕೆ ನೆಗೆದು ಪೋಗುತ್ತುಂ ಮಹೇಂದ್ರಾಚಳಮಧ್ಯದೊಳ -ನತಿಶಯಮಾಗಿರ್ದ ಪುರಮಂ ಕಂಡು,

ಈ ಕ್ಷಣಸುಖಮಯಮಿದು ಜ ।
ನ್ಮಕ್ಷೇತ್ರಂ ಗಡ ಮಹೇಂದ್ರಪುರಮೆನಗೀ ತುಂ- ॥
ಗಕ್ಷೋಣೀಧರಸಾನುಸ ।
ಮಕ್ಷದ ಪಲ್ಯಂಕ ಗುಹೆಯೊಳೆಮ್ಮಬ್ಬೆ ಗಡಂ ॥೪೮॥

ಎನ್ನಂ ಪಡೆದವಳ್ಗಡ ತಾ ।
ಯನ್ನಡಪಿದರಮಿತಗತಿಗಳೆಂಬ ತಪಸ್ಸಂ- ॥
ಪನ್ನರ್ಚಾರಣಋಷಿಯ ।
ರ್ಮುನ್ನಜ್ಞಿಪಿದಳೆನಗೆ ಜನನಿ ಪರಿವಿಡಿಯಿಂದಂ ॥೪೯॥

ಈ ಮಹೇಂದ್ರಪುರಮನಾಳ್ವೆಮ್ಮ ಮುತ್ತಮ್ಮಂ ಮದೀಯ ಮಾತೆಯ ಗರ್ಭದೊಳಾನಿರ್ಪುದುಮೆನ್ನ ತಾಯ್ವಿರತ್ತೆಯುಂ ಮಾವನುಂ,

ಇಲ್ಲದ ದೋಷಮನಿಟ್ಟಜಿ ।
ವಿಲ್ಲದೆ ಪೊಱಮಡಿಸಿ ಕಳೆಯೆ ಶರಣೆಲ್ಲದೆ ತ- ॥
ನ್ನಲ್ಲಿಗೆ ಬರೆ ತಾನುಂ ಕೃಪೆ ।
ಯಿಲ್ಲದೆ ನಿರ್ಬುದ್ಧಿ ಪೊರ್ದಲೀಯದೆ ಕಳೆದಂ ॥೫೦॥

ಎಂದು ಕಡುಮುಳಿದು,

ರಣಪಟಹರವಂ ದಿಗ್ವಾ ।
ರಣ ಕರ್ಣಾಭ್ಯರ್ಣಮಂ ಪಳಂಚಲೆಯೆ ಸಮಿಾ- ॥
ರಣತನಯನಪ್ರಮಿತ ಭೀ ।
ಷಣಸೈನ್ಯಂ ಸುತ್ತಿ ಮುತ್ತಿದಂ ತತ್ಪುರಮಂ ॥೫೧॥

ಆಗಳಾ ಕಳಕಳಂ ಪ್ರತಿಪಥಮನೆಯ್ದೆ ಘನರವಕ್ಕೆ ಗರ್ಜಿಸಿ ಗುಹೆಯಂ ಪೊಱಮಡುವ ಮೃಗೇಂದ್ರನಂತೆ ಮಹೇಂದ್ರಂ ಪುರಮಂ ಪೊಱಮಟ್ಟು ಮಱುವಕ್ಕಮನಿಕ್ಕುವ ತಕ್ಕು ಮಿಕ್ಕುಬರೆ

ಕಡಂಗಿ ಕಾದುವಲ್ಲಿ ಮಾರುತಿಯ ವಾಹಿನಿಗೆ ಮಹೇಂದ್ರವಾಹಿನಿ ಬೇಸಗೆಯ ವಾಹಿನಿಯಂತೊಳ ಸೋರ್ವುದುಮದಂ ಪ್ರಸನ್ನಕೀರ್ತಿ ಕಂಡು ಕದನಕೇಳಿಗತಿವರ್ತಿಯಾಗಿ ತಾಗುವುದುಂ,

ತೇರಚ್ಚಂ ಮುಱಿಯೆಚ್ಚಂ ।
ಕೂರಂಬಿಂ ಬಿಲ್ಲಗೊಣೆಯುಮಂ ಪಱಿಯೆಚ್ಚಂ ॥
ಸಾರಥಿಯಂ ಕೆಡೆಯೆಚ್ಚಂ ।
ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ ॥೫೨॥

ಅಂತು ವಿರಥನಾಗಿ ಮತ್ತಂ ಪ್ರಸನ್ನಕೀರ್ತಿ ಮಾನಗರ್ವದಿಂ ವಿಮಾನಾರೂಢಂ ರಣಕ್ರೀಡೆಗೊಡರಿಸುವುದುಂ ಶ್ರೀಶೈಳಂ ತದ್ವಿಮಾನಮಂ ಛಾಯಾಗ್ರಹಣಂ ಗೆಯ್ಯೆ ನೆಲಕ್ಕೆ ವರ್ಪುದುಂ ಪ್ರಸನ್ನಕೀರ್ತಿಯಂ ಪಿಡಿಯೆ ಮಹೇಂದ್ರನುಮದಂ ಕಂಡು ಕಡುಕೆಯ್ದಚಿಂತ್ಯ- ಯುದ್ಧಮಂ ಗೆಯ್ದೊಡಾತನುಮಂ ಪಿಡಿದು ನಿಜವಿಜಯಶಿಬಿರಕ್ಕುಯ್ದು ಮನ್ನಿಸಿ,

ವಿನಯದಿನೆಱಗಿ ಮೃಗೇಂದ್ರಾ ।
ಸನಮಂ ಕೊಟ್ಟಮ್ಮ ನಿಮ್ಮ ಮೊಮ್ಮನೆ ನಾನಂ- ॥
ಜನೆಗಂ ಪ್ರಭಂಜನಂಗಂ ।
ಜನಿಯಿಸಿದೆಂ ಹನುಮನೆಂಬೆನೆಂದಱಿಪುವುದಂ ॥೫೩॥

ಆದಂ ಕೇಳ್ದಾನಂದಜಲಲುಳಿತಲೋಚನನತಿಪ್ರಮೋದಪುಳಕಮಂ ತಳೆದು ಮಹೇಂದ್ರನಿಂದ್ರಪದವಿ ದೊರೆಕೊಂಡಂತೆ ಸಂತುಷ್ಟಚಿತ್ತನಾಗಿ ಕಿಱಿದು ಬೇಗಮುನಿರ್ದು ನಿನ್ನ ಪುರುಷಾಕಾರಮುಂ ಮನೋಹರಾಕಾರಮುಮವಾರ್ಯವೀರ್ಯಮುಮಿನ್ನೆವರಂ ಶ್ರವಣಭೂಷಣಮಾಗಿರ್ದುವೀಗಳೆಮಗೆ ಪ್ರತ್ಯಕ್ಷಮಾದುವೆಂದು ಪೊಗಳ್ದು ಪಲತೆಱದಿಂ ಪರಸಿದ ಮಾತಾಮಹಂಗೆ ಮಾರುತಿ ಕೈಗಳಂ ಮುಗಿದು,

ಕಿಱುಗೂಸುತನದೊಳಾಜಿಯೊ ।
ಳಱಿಯಮೆಯಿಂದಾನಿದಿರ್ಚಿದೆಂ ಕ್ಷಮಿಯಿಪುದೆಂ- ॥
ದೆಱಗಿದನಣುವಂ ಗುಣಮಂ ।
ಮೆಱೆವಂಗದು ವಿನಯಮೊಂದೆ ಭೂಷಣಮಲ್ತೇ ॥೫೪॥

ಅಂತು ವಿನಮಿತನಾಗಿ ನಿಮ್ಮಡಿ ನಮ್ಮ ಕಪಿಧ್ವಜಕುಲಕ್ಕೆ ಪರಮೋಪಕಾರಮಂ ನಾಡಿದ ರಘುವೀರನ ಬೆಸದಿಂ ಲಂಕೆಗೆ ಪೋದಪ್ಪೆನಾಂ ಬರ್ಪಿನಂ ನೀಮುಂ ಕಿಷ್ಕಿಂಧಪುರಕ್ಕೆ ಪೋಗಿ ರಾಮಲಕ್ಷ್ಮಣರ ಚರಣಸೇವಾನುಗ್ರಹಮಂ ಪಡೆದು ಸುಗ್ರೀವಾದಿಗಳಂ ಕೂಡಿ ಸುಖಮಿರ್ಪುದೆಂದು ನಿಯಮಿಸಿ ಮಾರುತಿ ವೇಗದಿಂ ಮಾರುತಪಥಕ್ಕೆ ನೆಗೆದು ತೆಂಕಮೊಗದೆ ಪಯಣಂ ಪೋಪುದುಮಿತ್ತ ಮಹೇಂದ್ರಂ ಪ್ರಸನ್ನಕೀರ್ತಿವೆರಸು ಹನುಮರದ್ವೀಪಕ್ಕೆ ಪೋಗಿ ಹನುಮನರಮನೆಯಂ ಪುಗುವುದುಂ,

ಆಂಜನೆಗಳುಂಬಮಾಯ್ತು ಮು ।
ದಂ ಜನನೀಜನಕ ಬಂಧುಜನದರ್ಶನದಿಂ- ॥
ದಂಜನೆಯಂ ಕಂಡತಿ ಹ ।
ರ್ಷಂ ಜನಿಯಿಸಿದತ್ತು ಮಾತೃಪಿತೃಬಂಧುಗಳೊಳ್ ॥೫೫॥

ಅಂತು ಪರಸ್ಪರ ಕ್ಷೇಮಕುಶಲ ಭಾಷಾಪುರಸ್ಸರಂ,

ಅಮರ್ದಪ್ಪೆ ಹರ್ಷಪುಳಕೋ ।
ದ್ಗಮಮವರ್ಗಾದತ್ತು ಕಡವಲರ್ದುದೆನಲ್ಕಿ- ॥
ತ್ರಮೆ ದೇಹಿಗಿಷ್ಟ ಸಂಯೋ ।
ಗಮನಿಷ್ಟವಿಯೋಗಮೆರೆಡೆ ಸುಖಜನಕಂಗಳ್ ॥೫೬॥

ಅಂತು ಸಂತುಷ್ಟರಾಗಿ ಮಹೇಂದ್ರಪ್ರಸನ್ನಕೀರ್ತಿಗಳ ಕಿಷ್ಕಿಂಧಪುರಕ್ಕೆ ಪೋಗಿ ಬಲನಾರಾಯಣರಂ ಕಂಡಾಳ್ತನಮಂ ಕೈಕೊಂಡು ಕಪಿಧ್ವಜರೊಳ್ಕೂಡಿ ಸುಖಮಿರ್ದರಿತ್ತಲಾಕಾಶ-ಮಾರ್ಗದೊಳ್ಪೋಗುತ್ತುಂ,

ಆಧರಿತಕನಕಾಚಳಮಂ ।
ವಿಧು ರವಿ ಮಂಡಳವಿಚುಂಬಿಚೂಡಮನಾಶಾ- ॥
ವಧಿ ವಿಸ್ತೃತಮಂ ಭೋಂಕನೆ ।
ದಧಿಮುಖಪರ್ವತಮನಾಂಜನೇಯಂ ಕಂಡಂ ॥೫೭॥

ಪ್ರತಿಮಾಯೋಗನಿಯುಕ್ತರೆಂಟು ದಿವಸಂ ಕೈಯೆತ್ತೆವೆಂದಿರ್ದರ-
ಪ್ರತಿಮರ್ಚಾರಣರಾನಗೋಪರಿಮದೊಳ್ತತ್ಪಾರ್ಶದೊಳ್ಮೂವರ-
ಪ್ರತಿರೂಪಾನ್ವಿತೆಯರ್ ಸಿತಾಂಶುಕೆಯರಿರ್ದರ್ಕನ್ನೆಯರ್ಕಳ್ ಮಧು-
ವ್ರತಮಾಲಾಯತವೇಣಿಗಳ್ ಜಪಿಯಿಸುತ್ತುಂ ದಿವ್ಯಮಂತ್ರಂಗಳಂ ॥೫೮॥

ಆಸಮಯದೊಳ್ ಲಯಸಮಯದ ಕೇಸರಿಯ ಮಸಕಮನಪ್ಪುಕೆಯ್ದು,

ಚಾರಣಯುಗಳಮುಮಂ ಕ ।
ನ್ಯಾರತ್ನಂಗಳುಮನಳುರ್ದು ಸುಡಲೊಡರಿಪುದಂ ॥
ದಾರುಣದಾವಾನಳನಂ ।
ಮಾರುತಿ ಜಲವರ್ಷವಿದ್ಯೆಯಿಂ ಮಟ್ಗಿಸಿದಂ ॥೫೯॥

ಆ ಮಹೋಪಸರ್ಗಮಂ ಪಿಂಗಿಸಿ,

ಯತಿಪತಿಗಳ ಪಾದಾಂಭೋಜಮಂ ಭಕ್ತಿಯಿಂದಂ
ಸತತಗತಿತನೂಜಂ ಪೂಜಿಸುತ್ತಿರ್ದನಾಗಳ್

ಕೃತನಿಯಮನಿಯುಕ್ತಾಚಾರೆಯರ್ದಿವ್ಯಯೋಗಿ-
ದ್ವಿತಯ ಚರಣಪೂಜಾನಂತರಂ ಕನ್ನೆಯರ್ಕಳ್ ॥೬೦॥

ಮಾರುತಿಯ ಮುಖಾರವಿಂದಮಂ ನೋಡಿ ಮಹಾಮಹಿಮ ನೀಂ ಬಂದೆಮಗಮಿೀ ಮಹಾತಪೋಧನರ್ಗಂ ಸಮನಿಸಿದ ಮಹೋಪಸರ್ಗಮಂ ತೊಲಗಿಸಿ ಮಹೋಪಕಾರಮಂ ಮಾಡಿದೆಯೆಂದು ಸಂಸ್ತವನಪೂರ್ವಕದಿಂ ಮುಕುಳಿತಾಂಜಲಿಯಾಗಿರ್ಪುದುಂ,

ಈ ರೌದ್ರಾಟವಿಯೊಳದೇ ।
ಕಾರಣದಿಂದಿರ್ದಿರೆಂದು ವಿಸ್ಮಯಚಿತ್ತಂ ॥
ಮಾರುತಿ ಬೆಸಗೊಂಡಂ ಕ ।
ನ್ಯಾರತ್ನಂಗಳನಪಾರಕಾರುಣ್ಯಪರಂ ॥೬೧॥

ಅಂತು ಬೆಸಗೊಳ್ವುದುಂ,

ಅನವದ್ಯಚರಿತನೆಂದಱಿ ।
ದನಿಬರ ಕಡೆವುಟ್ಟನಾಕೆ ಹನುಮಂಗಸ್ಮ - ॥
ಜ್ಜನಕಂ ದಧಿಮುಖನಗರೀ ।
ಜನಪತಿಗಂಧರ್ವನೆಂಬನಂಬರಗಮನಂ ॥೬೨॥

ಎಮ್ಮ ಪೆಸರ್ ಚಿತ್ರಲೇಖೆಯುಂ ವಿದ್ಯುತ್ಪ್ರಭೆಯುಂ ತರಂಗಮಾಲೆಯು-ಮೆಂಬುದೆಮ್ಮನೆಮ್ಮಮ್ಮಂ ವಿಜಯಾರ್ಧನಿವಾಸಿಗಳಪ್ಪ ವಿದ್ಯಾಧರರ್ಮೊದಲಾಗೆ ಪಲರ್ ಬೇಡೆಯುಂ ಕುಡದಿರ್ಪುದುಮಂಗಾರನೆಂಬ ವಿದ್ಯಾಧರನತ್ಯಾಗ್ರಹಂಗೆಯ್ದು ಬೇಡುವುದು ಮಾತನುಮನುದಾಸೀನಂಗೆಯ್ದೊಂದು ಜಿನಭವನಕ್ಕೆ ಪೋಗಿ,

ಅನುರೂಪನಪ್ಪ ವರನಾ ।
ವನಪ್ಪನಸ್ಮತ್ತನೂಜೆಯರ್ಗೆಂದಷ್ಟಾಂ- ॥
ಗನಿಮಿತ್ತವನಱಿವ ಮಹಾ ।
ಮುನಿಯಂ ಬೆಸಗೊಂಡನೆಮ್ಮ ಪಿತೃವೊಂದುದಿನಂ ॥೬೩॥

ಅಂತು ಬೆಸಗೊಳ್ವುದುಮವರಿಂತೆಂದು ಬೆಸಸಿದರುತ್ತರಶ್ರೇಣಿಯ ಪ್ರಧಾನನಪ್ಪ ಸಾಹಸಗತಿಯಂ ಕೊಂದಾತಂ ನಿನ್ನ ಮಕ್ಕಳ್ಗೆ ಭರ್ತಾರನಕ್ಕುಮೆನೆ ಮನದೇಗೊಂಡು ಸಂತೋಷದಿನಿರ್ದನಾಮುಮೀ ಮಹಾವಿಪಿನದೊಳ್ಮನೋವೇಗಮೆಂಬ ವಿದ್ಯೆಯಂ ಸಾಧಿಸುತ್ತುಂ ದ್ವಾದಶವರ್ಷಮಿಲ್ಲಿರ್ದು ಪೆಜಿಗಾಜು ವರ್ಷದಿಂದ ವಿದ್ಯೆಯಂ ಸಾಧಿಸಿದೆವೆಮ್ಮಂ ಬೇಡಿ ಪಡೆಯದುದಂಗಾರವೇಗನೀ ಮಹೋಪಸರ್ಗಮಂ ಮಾಡಿದನೆಂದು ಪೇೞೆ ಕೇಳ್ದು,

ಅತಿಬಲನನಿಕ್ಕಿ ಸಾಹಸ ।
ಗತಿಯಂ ಕಿಷ್ಕಿಂಧಪುರದೊಳಿರ್ದಪನತ್ತು- ॥
ರ್ಜಿತತೇಜಂ ರಾಘವನೆಂ ।
ದತರ್ಕ್ಯಬಲವಜ಼ಿಪಿ ಪವನತನಯಂ ಪೋದಂ ॥೬೪॥

ಇತ್ತ ಗಂಧರ್ವಂ ನಿಜತನೂಜೆಯರ್ ಸಿದ್ಧವಿದ್ಯರಾದುದನಱಿದು ಸಂತುಷ್ಟಚಿತ್ತನಾಗಿ ತಮ್ಮಲ್ಲಿಗೆ ಬರ್ಪುದುಂ ಕನ್ನೆಯರ್ ಕಂಡಿದಿರ್ಗೊಂಡು,

ಚಲದಲಕ ತಮಾಲದಳಂ ।
ಚಲನಾಶೋಕಪ್ರವಾಳದೊಳ್ಪುಂಜಿಸೆ ಕೋ ॥
ಮಲೆಯರ್ವಿದ್ಯಾಧರ ಕುಲ । ತಿಲಕಂಗತಿಭಕ್ತಿಭರದಿನಾನತರಾದರ್ ॥೬೫॥

ಅಂತು ವಿನತರಾಗಿ,

ಸುತೆಯರ್ ಮಾರುತಿ ಪೇೞ್ದಿಂ ತನಗೆ ಪೇೞಲ್ಕೇಳ್ದು ಗಂಧರ್ವರಾ-
ಜತನುಜಂ ನಿಜಸೇನಿಕಂ ಬೆರಸು ಕಿಷ್ಕಿಂಧಕ್ಕೆ ಬಂದಿತ್ತು ತ-
ತ್ಸುತೆಯರ್ಮೂವರುಮಂ ಪ್ರಶಸ್ತದಿನದೊಳ್ ರಾಮಂಗೆ ಪೂಣ್ದಾಳ್ತನ-
ಕ್ಕತಿಹರ್ಷಂ ಸುಖಮಿರ್ದನತ್ತಲಣುವಂ ಪೋದಂ ವಿಯನ್ಮಾರ್ಗದೊಳ್ ॥೬೬॥

ಅಂಚಪ ಪೋಗಿ ಲಂಕಾಪುರದ ಬಹಿಃಪುರದೊಳ್ಬೀಡಂ ಬಿಟ್ಟು ಮಱುದಿವಸಂ ಪುರಮಂ ಪುಗುವ ಸಮಯದೊಳ್,

ಗೆಲವಂತಿರ್ಕೆಮ ವಾಯುಪುತ್ರನ ಬಲಕ್ಕಂ ಕೋಂಟೆ ವಿದ್ಯಾತ್ಮಕಂ
ಸರವಿಲ್ಲಾದುದಲೋಕದಂತದಜ ಮೇಲಿರ್ದುಗ್ರಕಾಳೋರಗಾ-
ವಲಿ ಘೂತಾವಲಿ ರೌದ್ರಸತ್ವನಿವಹಂ ಲೋಕಾದ್ಭುತಂ ನಾದೆಸೋ-
ಡಲಗುರ್ವಾದುದು ತದ್ವಿಭೀಷಣಕೃತಂ ದುರ್ವಾರವೈಕುರ್ವಣಂ ॥೬೭॥

ಆಗಳಾ ಸ್ವರೂಪಮೆಲ್ಲಮಂ ಪೃಥುಮತಿಪೆಸರ ಮಂತ್ರಿ ಬಿನ್ನವಿಸೆ ಮರುನ್ನದನಂ ನೆಱೆಯೆ ಕೇಳ್ದು ಕಲುಷವಶಗತನಾಗಿ ವಿಮಾನದಿನವನಿಗವತರಿಸಿ,

ಎನಗೀಪ್ರಾಕಾರವಿಘೇ ।
ದನಮಾವುದು ಗಹನಮೆಂದು ಕೋಪಾರುಣಲೋ- ॥
ಚನನನಿಲಸುತಂ ತೊಟ್ಟಂ ।
ತನುತ್ರಮಂ ವಜ್ರಮಯಮನಪ್ರತಿಹತಮಂ ॥೬೮॥

ಅಂತು ದಿವ್ಯ ಕವಚಮಂ ತೊಟ್ಟು,

ವಿಧಿಪೂರ್ವಕಮಾತ್ಮಗದಾ ।
ಯುಧಮಂ ದೈವಿಕಮನೆತ್ತಿ ಹನುಮಂ ವಜ್ರಾ- ॥
ಯುಧದಿಂ ದಿವಿಜೇಂದ್ರಂ ಕುಳ ।
ಕುಧರಂಗಳನಳಱಿ ಪೊಯ್ವ ತೆಱದಿಂ ಪೊಯ್ದಂ ॥೬೯॥

ಅಂತು ಪೊಯ್ದು ವಿದ್ಯಾಪ್ರಾಕಾರಮನೊಡೆವುದುಂ,

ದ್ವಾರನಿಯುಕ್ತಂ ರೌದ್ರಾ ।
ಕಾರಮೆನಲ್ವಜ್ರಮುಖನುಮೈತರೆಸೆರಗಂ ॥
ಪಾರದೆ ತಾಗಿದೊಡವನಂ ।
ಮಾರುತಿ ನಿಮಿಷಕ್ಕೆ ತೂಂತಿದಂ ಯಮಮುಖದೊಳ್ ॥೭೦॥

ಆದಂ ತದಾತ್ಮಜೆಯಪ್ಪ ಲಂಕೆ ಭೋಂಕನೆ ಕಂಡು ಕಡು ಮುಳಿದು,

ಜನಕನನಿಕ್ಕಿದುದ್ಧತನನಿಕ್ಕುವೆನೆಂದು ಕಡಂಗಿ ಬಂದು ಭೋಂ-
ಕನೆ ಚರಮಾಂಗನಂ ಪವನಸೂನುವನೀಕ್ಷಿಸಿ ಕಣ್ಣಸೋಲಮಾ-
ರ್ದನುವಿಸೆ ಶೋಕಮಂ ಮುನಿಸುಮಂ ಮಱೆದೆನ್ನುಮನೆನ್ನ ವಿದ್ಯೆಯು-
ಳ್ಳನಿತುನಿತ್ತೆ ನೆಂದು ಪಟದೊಳ್ಬರೆದೆಚ್ಚಳವಳ್ಪತಾಕೆಯಂ ॥೭೧॥

ಅಂತಿಸುವುದುಂ,

ಬಾರಿಸಿ ಲೇಖಾರ್ಥಮನವ ।
ಧಾರಿಸಿ ತಾನುಂ ಮಗುಬ್ದಿ ಕನ್ನೆಯ ಸೌಮ್ಯಾ- ॥
ಕಾರಕ್ಕೆ ರಣಾಜಿರದೊ ।
ಳ್ವೀರಶ್ರೀವೆರಸು ಮದುವೆ ನಿಂದಂ ಹನುಮಂ ॥೭೨॥

ಅಂತು ನಿರತಿಶಯರೂಪಸಂಪನ್ನೆಯಂ ಲಂಕೆಯೆಂಬ ಕನ್ನೆಯಂ ಮದುವೆನಿಂದು,

ಪವಮಾನಸುತಂ ಸಂಭ ।
ನ್ನವಿದ್ಯೆಯಿಂ ಮಾಡಿ ಪೊಱಲನಾಗಸದೊಳ್ತ- ॥
ನ್ನ ವರೂಥಿನಿಯೆಲ್ಲಮನಿರಿ ।
ಸಿ ವಿಯಚ್ಚರಪತಿಯ ಕೆಲಕೆ ಪೋಗಲ್ಬಗೆದಂ ॥೭೩॥

ತತ್ಪ್ರಪಂಚಮೆಲ್ಲಮಂ ಲಂಕಾಸುಂದರಿ ತಿಳಿದೀ ಬರಮಿದಾವ ಕಾರಣಮೆನೆ ರಾಮದೇವರವರ ಬೆಸದಿಂ ಸೀತಾದೇವಿಯ ಶುದ್ಧಿಯಂ ತರಲ್ಬಂದೆನೆಂಬುದುಮಾಕೆ ಹನುಮಂಗಿಂತೆಂದಳ್ :

ನಿಮಗೆ ಪುಗಲೀಯದಂತಿರೆ ।
ಸಮಕಟ್ಟಿದನಿಂದ್ರ ವೈರಿ ವಿದ್ಯಾಪ್ರಾಕಾ- ॥
ರಮನೊಡೆದು ನೀನಿದಂ ವ ।
ಜ್ರಮುಖನುಮಂ ಕೊಂದು ಪುಗುವೆ ಲಂಕಾಪುರಮಂ ॥೭೪॥

ಪರಮದ್ರೋಹನೆ ದಶಕಂ ।
ಧರಂಗೆ ನೀಂ ಪಗೆವರೊಡನೆ ಕೂಡಿದೆ ಮುನ್ನಂ ॥
ನೆರೆದು ವಿಭೀಷಣನೊಳ್ತ ।
ನ್ನಿರೂಪಿತಕ್ರಮದೆ ನೆಗಟ್ಟುದಲ್ಲಿಂ ಬಟಿಯಂ ॥೭೫॥

ಏಗೊಂಡಾಕೆಯ ಪೇಟ್ಟುದ ।
ನಾಗಳೆ ಕತಿಪಯವಿಯಚ್ಚರರ್ವೆರಸು ಮಹಾ- ॥
ಬಾಗಂ ಪೊಕ್ಕಂ ಪುರಮನ ।
ದೇಗಹನಮೊ ಪವನಜಂಗೆ ದುರ್ಗಮಯಮುಂಟೇ ॥೭೬॥

ಅನತು ನಿಶ್ಯಂಕಿತಂ ಲಂಕೆಯುಂ ಪೊಕ್ಕು ವಿಭೀಷಣನಂ ಕಂಡು ಕ್ಷೇಮಕುಶಲವಾರ್ತಾನಂತರಂ,

ಕುಲಮಂ ಸತ್ಯದ ಶೌಚದಗ್ಗಳಿಕೆಯಂ ಚಾರಿತ್ರಮಂ ಚಾಗಮಂ
ಚಲಮಂ ದೋರ್ಬಲಮಂ ಕಳಾವಿಭವಮಂ ಕೊಂಡಾಡುವೀ ರಾವಣಂ
ನೆನೆಸೆಲ್ಲಂ ಪಜಿವನ್ನ ಮನ್ಯವಧುವಂ ದುರ್ಮೋಹದಿಂ ಬಾಟ್ಟಿಗೆ-
ಯ್ಯಲದಂ ಬಾರಿಸದೊಯ್ಯನಿರ್ಪುದುಮುಪೇಕ್ಷಾದೋಷಮೇನಾಗದೇ ॥೭೭॥

ಎಣಿಸದೆ ತನ್ನ ಶೌಚಗುಣಮಂ ವ್ರತರಕ್ಷಣಮಂ ಪರಾಂಗನಾ-
ಪ್ರಣಯಮನಪ್ಪುಕೆಯ್ಯೆ ಶರಣಾಗತರಕ್ಷಣದಕ್ಷನಪ್ಪ ದ-
ಕ್ಷಿಣಭರತತ್ರಿಖಂಡಧರಣೀಪತಿ ದಾನವಚಕ್ರವರ್ತಿ ರಾ-
ವಣನಿದನಾಗದೆನ್ನೆಮೊಡೆ ನಿನ್ನ ನೆಗಟ್ಟೆಗೆ ಬನ್ನಮಾಗದೇ ॥೭೮॥

ಇನ್ನಾದೊಡಮೊಪ್ಪಿಸಿ ಸತಿ ।
ಯಂ ನಿಮ್ಮ ಕುಲಾಪವಾದಮಂ ಕಳೆವುದು ನಿ- ॥
ಮ್ಮನ್ನರುಪೇಕ್ಷಿಸೆ ನೆಲನು ।
ಳ್ಳನ್ನೆವರಂ ದಶಮುಖಂಗೆ ದುರ್ಯಶಮಕ್ಕುಂ ॥೭೯॥

ಎನೆ ವಿಭೀಷಣನಿಂತೆಂದಂ :

ದನುಜೇಂದ್ರಂಗಾಗದೆಂದಾನಿದನಱಿಪದುದಾಸೀನದಿಂ ಮುನ್ನಮೇನಿ-
ರ್ಪೆನೆ ದೃಷ್ಟಾದೃಷ್ಟ ಬಾಧಾಕರಮಿದುವೆ ಪರಪ್ರೇಯಸೀಪ್ರೇಮಮೆಂದಿಂ-
ದೆನಿತಾನುಂ ಪೇತು ದೃಷ್ಟಾಂತಮನಡಿಗಡಿಗಾಂ ತೋಱಿಯುಂ ಪೇೞ್ದೊಡಂ ಕೇ-
ಳನೆ ರಾಗೋದ್ವೇಗವೇಗಂ ಸಮನಿಸೆ ಹಿತಮಂ ಸೂಕ್ತಮಂ ಕೇಳ್ವನಾವಂ ||೮೦||

ಪನ್ನೊಂದು ದಿವಸಮಿಂದಿಂ ।
ಗನ್ನತ್ಯಾಗದೊಳೆ ದೇವಿ ಕುಲಮಂ ವ್ರತಮಂ ॥
ತನ್ನುನ್ನತಿಯಂ ಕಾದೊಡ ।
ಮಿನ್ನುಂ ವೈರಾಗ್ಯಮಾದುದಿಲ್ಲಗ್ರಜನೊಳ್ ||೮೧||

ಪ್ರಮದವನದೊಳಗೆ ಸೆಱೆಯಿ ।
ಟ್ಟು ಮತ್ತಮಟ್ಟಟಿಯಟ್ಟುತಿರ್ದಪನುಚಿತ- ॥
ಕ್ರಮಮಂ ಕಾಮುಕರಱಿವರೆ ।
ಸುಮನೋಬಾಣಂಗೆ ತಕ್ಕುಗಿಡದವರುಂಟೇ ||೮೨||

ಎಂದು ವಿಭೀಷಣಂ ನುಡಿಯೆ ಮರುತ್ಸುತಂ ಕೇಳ್ದು ಕರುಣಾರಸ ಪ್ರವಾಹಮೆೞ್ದುಯ್ಯೆ ವಿಭೀಷಣ ಭವನಮಂ ಪೊಱಿ ಮಟ್ಟದೃಶ್ಯನಾಗಿ ಪೋಗಿ ಸೀತಾದೇವಿಯಿರ್ದ ಬನಮಂ ಪೊಕ್ಕು ಮಂಡೊದರಿವೆರಸು ಪರರುಮಂಬರಚರನಿತಂಬಿನಿಯರ್ ಬಳಸಿ ದಿನಲಕ್ಷ್ಮಿಯಂ ಬಳಸಿದ ದೀಪಮಾಲೆಯಂತೆ ಕಾಂತಿಗೆಟ್ಟಿರೆ ವಿರಹವಿಧುರೆಯಾಗಿಯುಂ ಲಾವಣ್ಯರಸ ತರಂಗಿಣೀತರಂಗಲೇಖೆಯನನುಕರಿಸಿ ತಳಿರ್ತಶೋಕತರುತಳಮ ನಲಂ ಕರಿಸಿ,

ಪೊಗಗೊಂಡ ಚಿತ್ರಲತೆ ದೂ ।
ಳಿಗೊಂಡ ಪುತ್ತಳಿಗೆ ಮಂಜುಗೊಂಡಬ್ಜಿನಿ ಕಾ- ॥
ರ್ಮುಗಿಲೊಳಕೊಂಡೆಳವೆಱೆಯೆನೆ ।
ಮೃಗಲೋಚನೆ ಸೀತೆ ನಾಡೆ ಪಾಡೞಿದಿರ್ದಳ್ ||೮೩||

ಶ್ರೀವಧು ಪದ್ಮಸದ್ಮ ದಿನಗಲ್ಪಳಿದೇಕೆಯೊ ಪೇೞ್ ಮೇಕೆ ವಾಕ್-
ಶ್ರೀವಧುವಂಚೆಯಂ ತೊಱೆದಳೇಕೆಯೊ ಚಂದ್ರಿಕೆ ಚಂದ್ರಬಿಂಬದಿಂ
ಭೂವಳಯಕ್ಕೆ ಬಂದಳೆನುತುಂ ಬಗೆಯೊಳ್ಪೊಱಪೊಣ್ಮೆ ಸಂಶಯಂ
ಪಾವನಿ ವಿಸ್ಮಯಸ್ತಿಮಿತ ಲೋಚನನೀಕ್ಷಿಸಿದಂ ಮೃಗಾಕ್ಷಿಯಂ ||೮೪||

ನಿರುಪಮರೂಪೆಯರ್ ಸತಿಯರೀಮೊರೆಯರ್ಪೆಱರಾರುಮಿಲ್ಲ ಖೇ-
ಚರಿಯರ ಸುತ್ತಿನೊಳ್ಖಚರವೀರಭಟರ್ಕಳ ಕಾಪಿನೊಳ್ಪೆಱ-
ರ್ತರುಣೆಯರಿರ್ಪರಾರ್ ತ್ರಿಭುವನಾಂಬಿಕೆ ಜಾನಕಿ ತಪ್ಪದಪ್ಪಳಿಂ-
ತಿರೆ ಕಡುನೀಱಿಯಲ್ಲದೊಡೆ ರಾಘವನಂತಿರೆ ಚಿತ್ತಮಿಾವನೇ ||೮೫||

ಎಂದು ನಿಶ್ಚಿತಮನನಾಗಿ,

ಜಾನಕಿ ಪೊಜಿಗಾಗಿರೆ ಪವ ।
ಮಾನಸುತಂ ಕಾಣದಂತು ಪೆಜಿರಾರುಮಶೋ- ॥
ಕಾನೋಕಹ ಕಿಸಲಯ ಸಂ ।
ತಾನಸಮಾನಾಭರಣಕಿರಣಮೊದವಿಸೆ ಬಂದಂ ॥೮೬॥

ಅಂತು ಸುಕೃತಮೆ ರೂಪುಗೊಂಡಂತೆ ಕೆಲಕ್ಕೆವಂದು,

ಮುನ್ನಜ್ದಂತುಟಂ ಪ್ರಿಯನ ಮುದ್ರಿಕೆಯಂ ತನಗಿತ್ತು ವಾಯು ಪು-
ತ್ರಂ ನತನಾಗೆ ಕಂಡು ಮಣಿಮುದ್ರಿಕೆಗಂದಿದಿರ್ವಂದ ಮಾಜ್ಕೆಯಿಂ-
ದಂ ನಯನಾಂಬು ಹರ್ಷಪುಳಕಂ ಪೊಜಪೊಣ್ಮೆ ಮನೋವಿಕಾಸಮಂ
ಕನ್ನಡಿಸಿತ್ತು ಸೀತೆಗೆ ಮುಖಾಂಬುರುಹಂ ದರಹಾಸಪೇಶಲಂ ॥೮೭॥

ಕಲಶಕುಚಂ ಕದಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಮು-
ಳ್ಳಲರ್ದ ಮುಖಾರವಿಂದಮಕರಂದಮೆನಲ್ಬೆಮರ್ಗಳ್ಕಪೋಲದೊ-
ಳ್ಸಲಸಿದುವಂಗಕಾಂತಿ ಕುಡುಮಿಂಚಿನ ಗೊಂಚಲಸೊಪ್ಪವಿಟ್ಟವೋ-
ಲ್ಲಜಲಿಸಿತ್ತು ಜಾನಕಿಗೆ ಮುದ್ರಿಕೆ ಕೊಟ್ಟುದನಂಗ ಮುದ್ರೆಯಂ ॥೮೮॥

ಅಂತು ಹರ್ಷರಸತರಂಗಿತಾಂತರಂಗೆಯಾದ ಸೀತೆಯಂ ಮಂಡೋದರಿ ಮೊದಲಾಗಿ ಕೆಲದೊಳಿರ್ದ ಖಚರಕಾಂತೆಯರ್ ರಾವಣನೊಳಪ್ಪನು ಬಂಧ ಮನೊಡಂಬಟ್ಟು ಸಂತೋಷಂ ಬಟ್ಟಳೆಂಬುದಮಳುಂಬಮೆನೆ ಮುನಿದು,

ತನಗೆ ಪತಿವ್ರತಮಿಲ್ಲದ ।
ವನಿತೆ ಕುಲಸ್ತ್ರೀಯ ಭಿನ್ನಭಾಜನೆಯಿಂತ- ॥
ಪ್ಪನುಚಿತಮಂ ಪರಿವಂಶದ ।
ವನಿತೆಯರೊಳ್ನುಡಿಯಲಕ್ಕುಮೇ ನಿಮ್ಮನ್ನರ್ ॥೮೯॥

ಎನಗೆ ಪರಪುರುಷರಸ್ಮ ।
ಜ್ಜನಕ ಸಹೋದರ ಸಮಾನರೆನಗನುರಾಗಂ ॥
ಜನಿಯಿಸಿದುದು ರಘುಕುಲತಿಲ ।
ಕನ ಬೆಸದಿಂ ಬಂದ ದೂತನಂ ಕಾಣಲೊಡಂ ॥೯೦॥

ಎನೆ ಮಂಡೋದರಿ ಕೇಳ್ದು,

ಅರ್ಣವಲಂಘನಕ್ಷಮರೆ ಮಾನವರಾರ್ಗಮಭೇಧ್ಯಮಪ್ಪದಂ
ಸ್ವರ್ಣಲಯಂಬರಂ ನಿಮಿರ್ದ ವಜ್ರದ ಕೋಟೆಯನಾರೂ ಭೇದಿಪ-

ನಿರ್ಣಯಮಾಗೆ ರಾಘವನ ಶುದ್ಧಿಯನೀಕೆಗೆ ಪೇೞ್ದುದಾಗದೇ
ಕರ್ಣಪಿಶಾಚಮಿಾ ವಿಕಳಭಾಷೆ ನಿರನ್ನವಿಕಾರಮಾಗದೆ ||೯೧||

ಎಂದು ಪೆಂಡವಾಸದ ವಿಳಾಸಿನಿಯರೊಡನೆ ನುಡಿಯುತ್ತುಮಿರ್ಪುದುಮಗಣ್ಯಲಾವಣ್ಯವತಿ ವೈದೇಹಿ ಪುಣ್ಯಪುರುಷ ನೀನೆನ್ನನಪಾರದುಃಖಭಾರದಿಂ ನಮೆಯಲೀಯದೆ ಮದೀಯ ವಲ್ಲಭನ ಶುಭವಾರ್ತೆಯಂ ತಂದ ದೂಸಱಿಂದೆನಗೆ ನೀಂ ಪ್ರಭಾ ಮಂಡಳನಿಂದಗ್ಗಳಮಪ್ಪ ಸಹೋದರನ್ನೆ ನಿನ್ನ ಕುಲಗೋತ್ರನಾಮಂಗಳನೆನಗೆ ತಿಳಿಯೆ ಪೇೞೆನಲೊಡಂ,

ಸೆರಗಕ್ಕುಂ ಮೆಯ್ಗರೆದಾ ।
ನಿರಲೆಂದು ನಿಜಸ್ವರೂಪಮಂ ತೋಱುವುದುಂ ॥
ಮರುತಾತ್ಮ ಜನಂತಃಪುರ ।
ಪುರಂಧ್ರಿಯರ ಸೆಡೆದು ಸೀತೆಯಂ ಮಱೆಗೊಂಡರ್ ||೯೨||

ಅನಂತರಂ ಮರುತ್ತನೂಜಂ ಮುಕುತಳಿತಸರೋಜನಿಂತೆಂದಂ:

ಪಿತೃಪವನಂಜಯಂ ಖಚರವಲ್ಲಭನಂಜನೆ ಪೆತ್ತ ತಾಯ್ ಮಹಾ-
ಸತಿ ಹನುಮಂತನೆಂ ಪೆಸರೊಳಾಂ ವಿಜಯಪ್ರಮದಾಪ್ರಿಯಂ ಜಗ-
ತ್ಪತಿ ಪತಿ ರಾಮನಾ ಸುಚರಿತಂ ಬೆಸವೇೞ್ದೊಡೆ ನಿಮ್ಮ ಶುದ್ಧಿಗ-
ಪ್ರತಿಮ ಪತಿವ್ರತಾಚರಣಭೂಷಣಭೂಷಿತೆ ಬಂದೆನಂಬಿಕೇ ||೯೩||

ಕಮಲಿನಿಯಂ ಕಲಹಂಸಂ ।
ಸುಮನೋಮಂಜರಿಯನಳಿ ವನಾಂತಸ್ಥಳಿಯಂ ॥
ಸಮದೇಭಂ ನೆನೆವಂತನು ।
ಪಮೆ ನಿಮ್ಮಂ ನೆನೆದು ದೂರಿಪಂ ರಘುವೀರಂ ||೯೪||

ಎಂದು ಮತ್ತೆ ಕೆಲವು ವಿನ್ನಾಣಂಗಳನಿಂತೆಂದಂ:

ವಾರಿಜಮುಖಿ ಭೂಪಂ ಗಂ ।
ಭೀರಾವಾಹಿನಿಯ ತೀರದೊಳ್ ನಿಮ್ಮ ಮುಖಾಂ- ॥
ಭೋರುಹದೊಳ್ ಪಡಿಯಿಟ್ಟಂ ।
ಭೋರುಹಮಂ ಮೆಚ್ಚಲೊಲ್ದನಿಲ್ಲೊರ್ಮೆ ಗಂಡಂ ||೯೫||

ಭರತಂ ಪಿಂದನೆ ಬಂದಂ ।
ದರಣ್ಯದೊಳ್ ರಾಜ್ಯಭರಮನೊಪ್ಪಿಸಿದೊಡೆ ಸಂ- ॥
ವರಿಸಿ ಪದಿನಾಲ್ಕು ವರುಷಂ ।
ಬರಮಿರ್ದಂತಾಗಿ ರಾಘವಂ ನಿಯಮಿಸಿವಂ ||೯೬||

ಸಲಿಲಾಹರಣಾರ್ಥಂ ಪೋ ।
ಗಿ ಲಕ್ಷ್ಮಣಂ ದೇವಿ ಗಂಡವರಿಜೆಂದಿರ್ದಾ ॥
ಲಲನೆಯ ಕರಗದವಳ ಕೈ ।
ಯಲಟ್ಟಿವಂ ಗಡಮದೊರ್ಮೆ ಶೀತಳ ಜಳಮಂ ॥೯೭॥

ಕ್ರೀಡಾಪೂತಂ ಪೊಟಿಲಂ ।
ಮಾಡಿ ಘನಾಗಮದೊಳಿರಿಸಿ ಯಕ್ಷಂ ಕೊಟ್ಟಂ ॥
ಡಜೂಡಾಮಣಿಯಂ ಕದನ ।
ಕ್ರೀಡೆಗೆ ನೆನೆದಾಗಳಂತೆ ಬಂದಪೆನೆಂದಂ ॥೯೮॥

ಎಂಬುದುಮನುಭೂತಾರ್ಥ ಸ್ಮರಣೆಯಿಂ ಮನದ ಸಂಶಯಂ ಪಿಂಗೆ ಮನಂಗೊಂಡು ಮಾನಿನಿ ಪವಮಾನಸೂನುವನಿಂತೆಂದಳ್ :

ಎಂತು ದಾಂಟದೆ ಮಹಾರ್ಣವಮಂ ಬಂ ।
ದೆಂತು ಪೊಕ್ಕೆ ಪುರಮಂ ರಘುವೀರಂ- ॥
ಗೆಂತು ನಿನ್ನೊಡನೆ ಕೂಟಮದಾಯ್ತೆಂ ।
ಬಂತುಟಂ ತಿಳಿಪು ದೋರ್ಬಲಶಾಲೀ ॥೯೯॥

ಒಡೆದೆಂ ವಜ್ರದ ಕೋಂಟೆಯ ।
ನೆಡೆಮಡಗದೆ ಬಂದು ವಜ್ರಮುಖನಾಂತಿಜಿ‌ಯಲ್ ॥
ಕಡುಕೆಯ್ದೊಡೆ ಕೊಂದೆಂ ನಿ ।
ಮ್ಮಡಿ ಪುರಮಂ ಪೊಕ್ಕು ಬಂದು ಕಂಡೆಂ ನಿಮ್ಮಂ ॥೧೦೦॥

ಎಂದು ಬಿನ್ನವಿಸಿ ಮತ್ತಮಿಂತೆಂದನಂಬಿಕೆ ದಶಮುಖನ ತಂಗೆ ಚಂದ್ರನಖಿ ನಿಜತನೂಜನಪ್ಪ ಶಂಭುಕನಂ ಸೌಮಿತ್ರಿಕೊಂದು ಸೂರ್ಯಹಾಸಾಸಿಯಂ ಕೊಳ್ವುದುಮದಂ ಕಂಡಬಿಲ್ದು ತನ್ನ ಗಂಡನಪ್ಪ ಖರಂಗೆ ಪುಯ್ಯಲಿಡುವುದುಮತಿ ಕುಪಿತನಾತನಸಂಖ್ಯಾತ ಬಲಸಹಿತಮೆತ್ತಿ ಬಂದು ಲಕ್ಷ್ಮಣನೊಳ್ಕಾದುತ್ತುಮಿರೆ ದಶಾನನನುಮವರ ಬವರಮಂ ನೋಡಲೆಂದು ಬರುತ್ತುಂ ನಿಮ್ಮಡಿ ನಿಮ್ಮಂ ಕಂಡು ವಿಪರೀತಚಿತ್ತನಾಗಿ ಕೈದುಗೆಯ್ಯದೆ ಕೈತವದಿಂ ರಘುವೀರನನಗಲ್ಚಿ ನಿಮ್ಮನೊಯ್ವುದುಮಾಕ್ಷಣದೊಳ್ ಲಕ್ಷ್ಮಣನಲ್ಲಿಗೆ ರಾಮದೇವರ್ ಬಿಜಯಂಗೆಯ್ಯೆ ಬೇಗಂ ಬಂದು ಮುನ್ನಮಿರ್ದೆಡೆಯೊಳ್ ನಿಮ್ಮಂ ಕಾಣದೆ ಕಾನನದೊಳಱಸುತ್ತಿರ್ಪನ್ನೆಗಂ ಖರದೂಷಣರಂ ಕೊಂದು ಲಕ್ಷ್ಮಣನೇಕಾಕಿಯಾಗಿರ್ದಣ್ಣನ ಕೆಲಕ್ಕೆ ಬಂದು ಮದಂಬಿಕೆಯೆಲ್ಲಿರ್ದಳೆಂದು ಬೆಸಗೊಳ್ವುದುಮಾಂ ನಿನ್ನಲ್ಲಿಗೆ ಬಂದ ಪಿಂದೆಯಾವನಾನುಮೊರ್ವಂ ಮಾಯಾವಿ ಕೊಂಡುಯ್ದನೊ ಕ್ರೂರ ಮೃಗಂಗಳುಯ್ದುವೊ ಎಂದಬಿಲ್ದು ನುಡಿವುದುಂ ಲಕ್ಷ್ಮಣಂ

ವಿಷಣ್ಣ ಚಿತ್ತನಾಗಿರ್ಪುದುಮಾ ಸಮಯದೊಳ್ ಶರಣಾಗತಂ ವಿರಾಧಿತವಿಯಚ್ಚರಂ ನಿಮ್ಮ ಶುದ್ಧಿಗೆ ಚೆಚ್ಚರಮನುಚರನಟ್ಟಿ ರಾಮಲಕ್ಷ್ಮಣರಂ ಪಾತಾಳಲಂಕೆಗುಯ್ದು ಬೆಸಕೆಯ್ಯುತ್ತಿರ್ದನನ್ನೆಗಮಿತ್ತ ಸುಗ್ರೀವಂ ಮಾಯಾಸುಗ್ರೀವನ ವ್ಯತಿಕರದೊಳ್ ಶರಣಾಗತಶರಣ್ಯನಪ್ಪ ರಾಮನಂ ಕಂಡು ತನ್ನ ವೃತ್ತಾಂತಮಂ ಬಿನ್ನವಿಸೆ ನಿನ್ನ ಪಗೆಯಂ ತೀರ್ಚಿದಪೆನೆಂದು ಕಿಷ್ಕಿಂಧಪುರಕ್ಕೆ ಬಂದು,

ಸುಗ್ರೀವನಿ ಪಗೆ ಮಾಯಾ ।
ಸುಗ್ರೀವಂ ತತ್ಪ್ರಚಂಡನಂ ಕೀನಾಶಂ- ॥
ಗಗ್ರಗ್ರಾಸಂ ಮಾಡಿ ನೃ ।
ಪಗ್ರಾಮಣಿ ಕಳೆದನೆಮ್ಮ ಕುಲಪರಿಭವಮಂ ॥೧೦೧॥

ಅದಱಿನೆಮ್ಮ ವಾನರಧ್ವಜರಪ್ಪ ವಿದ್ಯಾಧರರೆಲ್ಲಂ ತಕ್ಕು ಪಕಾರತತ್ಪರತೆಯಿಂದಾಳ್ತನಕ್ಕೆ ಪೂಣ್ದು ರತ್ನಜಟಿಯದೆಸೆಯಿಂ ನಿಮ್ಮ ಶುದ್ಧಿಯನಱಿದಿಂ ಬೞಿಯಂ ಸುಗ್ರೀವನೆನ್ನುಮಂ ಬರಿಸಿ ಕಾಣಿಸಿದೊಡಾನುದಾತ್ತ ರಾಘವನ ಚರಣ ಸೇವೆಯೊಳ್ನಿಂದೆನೀಗಳಖಿಳವಿದ್ಯಾ ಪರಮೇಶ್ವರಪ್ಪ ವಿದ್ಯಾಧರರ್ಪಲರುಮಂ ಕೂಡಿಕೊಂಡು ರಾಮಲಕ್ಷ್ಮಣರ್ ಕಿಷ್ಕಿಂಧಪುರ ದೊಳಿರ್ದಟಿದೊಡೆ ರಾವಣನೊಳ್ ನುಡಿದು ನಿಮ್ಮಂ ಸೆಱೆಯಂ ಬಿಡಿಸಲ್ ಬಂದೆನಿದು ಮದೀಯ ವೃತ್ತಕಮೆನೆ ಸೀತೆ ಸಂತೋಷಂಬಟ್ಟು,

ಮರುದಾತ್ಮಜ ನಿಮ್ಮನ್ನರ್ ।
ಧುರೀಣರೇಕಾಂಗ ವಿಜಯಿಗಳ್ ಬಹುವಿದ್ಯಾ- ॥
ಪರಮೇಶ್ವರನಿಬರಿಳೇ ।
ಶ್ವರ ಪಾರ್ಶ್ವದೊಳೆಂದು ಜನಕಸುತೆ ಬೆಸಗೊಂಡಳ್ ॥೧೦೨॥

ಎನೆ ಮಯನ ಮಗಳ್ ಮಂಡೋದರಿ ಸೀತಾದೇವಿಗಿಂತೆಂದಳ್ :

ನೂತನರೊಳ್ಪುರಾತನರೊಳೀತನೊಳಾರ್ದೊರೆ ನಾಕಲೋಕದೊ-
ಳ್ಭೂತಳದೊಳ್ ರಸಾತಳದೊಳೊರ್ವನೆ ದೋರ್ಬಲಶಾಲಿ ಲೋಕವಿ-
ಖ್ಯಾತನಶೇಷವಿದ್ಯೆಗಳೊಳಾತತಕೀರ್ತಿ ಮರುತ್ತನೂಜನ-
ಬ್ಜಾತಮುಖೀ ಪವಣ್ಬಡಿಪೊಡೀತನ ಪೋಲ್ವರದಾರೊ ಲೋಕದೊಳ್ ॥೧೦೩॥

ಈತನ ಪರಾಕ್ರಮದಳುರ್ಕೆಯಂ ಪೇೞ್ವೊಡೆ ಮುನ್ನಮೊರ್ಮೆ ದಶಮುಖಂಗೆ ರಣಮುಖದೊಳಿದಿರ್ಚಿದ ವರುಣನಂ ಪರಾಙ್ಮುಖಂ ಮಾಡಿ ಗೆಲ್ದು ಕುಡೆ ವಿಯಚ್ಚರಪತಿ ಮೆಚ್ಚಿ ತನ್ನ ತಂಗೆಯಪ್ಪ ಚಂದ್ರನಖಿಯ ಮಗಳಪ್ಪನಂಗಪುಷ್ಪೆಯನೀತಂಗೆ ಮಹಾ ವಿಭೂತಿಯಿಂ ಮದುವೆಯಂ ಮಾಡಿ ಕೊಂಡಾಡಿ ತನ್ನೊಳೋರನ್ನಂ ಮಾಡಿ ಪೊರೆಯೆ ಪಾೞಿಗೆ ತಪ್ಪಿ,

ಬರವರೆ ಕರ್ವು ಕೊರ್ವಿ ಕರಮೇಳಿದಮಪ್ಪವೊಲೀತನುಂ ವಿಯ-
ಚ್ಚರಪತಿಯಪ್ಪ ರಾವಣನಿರಲ್ಕರಮೇಳಿದರಪ್ಪ ಭೂಮಿಗೋ-
ಚರರೊಳಸೇವ್ಯರೊಳ್ತನಗೆ ಕಿಂಕರಭಾವಮನಪ್ಪುಕೆಯ್ವನೀ-
ತರಳತೆಯೊಂದುಮಿಲ್ಲದೊಡ ಪೋಲ್ವವರಾರ್ಪವಮಾನಸೂನುವಂ ॥೧೦೪॥

ಎನೆ ಹನುಮನೆಂದನುದಾತ್ತರಾಘವಂ ಗೆಯ್ದುಪ್ರಕೃತಿಗೆ ಪ್ರತ್ಯುಪಕಾರಂ ಗೆಯ್ವೆನ್ನ ಪುರುಷಾಕಾರಮಂ ಪೆಱೆಯಲೆಂದು ಬಂದೆನೀ ಪೊಲ್ಲಮೆಯನೆಂತುಂ ಕಳೆಯಲಪ್ಪುದು ನಿಮಗೆ ಕುಲವಟಿಯೆ ನೆಲಂ ಪಱೆಯ ಮಾನಸಿಕೆಯನೊಕ್ಕು ಪರತ್ರಿಯಂ ಬಗೆಯದೆ ಪರಕಳತ್ರಮನಾಸೆಗೆಯ್ದು ಪೊಲ್ಲಮೆಯಂ ಕಳೆವಂದಮಾವುದೆನೆ ಕನಲ್ದು ಮಂಡೋದರಿ ಬೆಟ್ಟವೆಟ್ಟನಿಂತೆದಳ್ :

ಅನಿಲತನೂಭವ ಸುಗ್ರೀ ।
ವನುಮಂ ನಿನ್ನುಮನವಂಧ್ಯಕೋಪಂ ದಶಕಂ- ॥
ಠನಮೋಘಂ ಕೊಲ್ಲದೆ ಮಾ ।
ಣ್ಣನೆ ಪೇೞನೆ ಸೀತೆ ಕಲುಷವಶಗತೆಯಾವಳ್ ॥೧೦೫॥

ಅಂತು ಮುಳಿದು,

ದಾಂಟಿ ಕಡಲಂ ಜಗತ್ತ್ರಯ ।
ಕಂಟಕರಂ ಕೀೞ್ವ ರಾಮಲಕ್ಷ್ಮಣರಿಪ್ಪ- ॥
ತ್ತೆಂಟು ದಿವಸದೊಳೆ ನಿನಗಣ ।
ಮುಂಟಾಗಿಸುವರ್ವಿಶೇಷಮಪ್ಪೆರ್ದೆವಱಲಂ ॥೧೦೬॥

ಎನೆ ಮಂಡೋದರಿ ಲಯಸಮಯದ ಚಂಡಿಕೆಯಂತೆ ಮಾಮುಸಕಂ ಮಸಗಿ,

ಕೇಸುರಿ ಸೂಸೆ ತನ್ನ ಮೊಗದಿಂ ಕಿಡಿ ಬೀೞ್ತಿರೆ ತನ್ನ ಕಣ್ಗಳಿಂ-
ದಾಸುರಮಾಗಿ ದಾಡೆಗಳೊಡಲ್ಬಳಿದಂಬರಮಂ ತಱುಂಬೆ ತ-
ನ್ನಾಸುಕರಂ ಕರಂ ದೆಸೆ ಗಗುರ್ವಿಸೆ ಕೈಗಳನೆತ್ತಿ ಪೊಯ್ಯಲಿ-
ರ್ದಾ ಸಮಯಕ್ಕೆ ತಕ್ಕನೆಡೆವೊಕ್ಕನರಿಂಜಯನಂಜನಾಸುತಂ ॥೧೦೭॥

ಅದರ್ಕೆ ನಿತ್ತರಿಸದಾಕೆ ಸಭೆಯಿನೆೞ್ದು ರಾವಣನ ಕೆಲಕ್ಕೆ ಪೋದಳಿತ್ತ ಪವಮಾನಸೂನು ಬೋನಮಂ ತರಿಸೆ ಸೀತೆ ಸಿದ್ಧಪ್ರತಿಜ್ಞೆಯಾಗಿ,

ಸತಿ ಸುಚರಿತ್ರೆಪಂಚಪರಮೇಷ್ಠಿಗಳಂ ಸ್ತುತಿಗೆಯ್ದು ಭಕ್ತಿಯಿಂ
ಯತಿವರರ್ಗನ್ನಮಂ ಮನದೊಳಿತ್ತು ರಘೂದ್ವಹ ಪಾದಪಂಕಜ-

ದ್ವಿತಯಮನಿಟ್ಟು ಪೃತ್ಸರಸಿಯೊಳ್ಜನಕಾತ್ಮಜೆ ದೇವತಾವಿನಿ-
ರ್ಮಿತಮಣಿಕುಟ್ಟಿಮಸ್ಥಳದೊಳಿರ್ದಮೃತಾನ್ನಮನುಂಡನಂತರಂ ॥೧೦೮॥

ಹನುಮಂ ಕೈಮುಗಿದು ಜಗ।
ಜ್ಜನನಿ ರಘುಪ್ರವರನಲ್ಲಿಗೊಯ್ವೆಂ ನಿಮ್ಮಂ ॥
ಜನಕಾತ್ಮಜೆ ಬಿಜಯಂಗೆ।
ಯ್ಯೆನಲದು ತಕ್ಕೂರ್ಮೆಯಲ್ಲದೆಂದಿಂತೆಂದಳ್ ॥೧೦೯॥

ಧರಣೀವಲ್ಲಭನಾಜ್ಞೆಯಿಲ್ಲದೆನಗಂತುಂ ಬರ್ಪುದೌಚಿತ್ಯಮ-
ಲ್ಲರಸಂಗೆನ್ನಿರವಂ ನಿವೇದಿಪುದು ಕಾಲಕ್ಷೇಪಮಂ ಮಾಡಿ ನೀ-
ನಿರೆ ದೈತ್ಯೇಂದ್ರನಪಾಯಮಂ ನಿನಗೆ ಮಾಟ್ಕುಂ ಪೋಪುದೆಂದಾ ತನೂ-
ದರಿ ವೈದೇಹಿ ಮರುತ್ಸುತಂಗೆ ನಿಜ ಚೂಡಾರತ್ನಮಂ ನೀಡಿದಳ್ ॥೧೧೦॥

ಅಂತು ಚೂಡಾಮಣಿಯನಿತ್ತು ಮತ್ತಂ ಕರ್ಣರವೆಯೆಂಬ ತೊಱೆಯ ತಡಿಯೊಳ್ ಚಾರಣಯುಗಳಕ್ಕಾಹಾರದಾನಮಂ ಕೊಟ್ಟು ಪಂಚಾಶ್ಚರ್ಯಂ ಬೆತ್ತುದು ಮೊದಲಾಗೆ ಪಲವುವಿನ್ನಾಣಂಗಳಂ ಪೇೞ್ದು ಮನ್ಯೂದ್ಗತಕಂಠೆಯುಮಶ್ರುಜಲಲುಳಿತಲೋಚನೆಯುಮಾದ ಜಾನಕಿಗೆ ಹನುಮನಿಂತೆಂದಂ:

ಎನಗಪಾಯಮನಾವನೊಡರ್ಚುವಂ।
ಮೊನೆಯೊಳೆನ್ನೊಳದಾವನಿದಿರ್ಚುವಂ ॥
ಜನನಿ ರಾಘವನಾಜ್ಞೆಯೆ ಕಾದುದೀ।
ತನನದಲ್ಲದೊಡೆಲ್ಲಿಯ ರಾವಣಂ ॥೧೧೧॥

ಸೀತೆಯ ವಾರ್ತೆದಪ್ಪಿನಿತೆ ಸಾಲ್ವುದು ದೈತ್ಯನ ರಕ್ತಪಾನದಿಂ
ಬೂತಗಣಂಗಳಂ ತಣಿಪಿ ತಂದೆಪೆನಾಕೆಯನಂತು ತಾರದಂ-
ದಾತತಕೀರ್ತಿಸಲ್ಲದೆನೆ ಭೂಭುಜನಾಜ್ಞೆಗೆ ಮಾಣ್ದೆನಲ್ಲದಂ-
ದೇ ತೊದಳೀ ತ್ರಿಕೂಟನಗಮಂ ಬೆರಸಂಬಿಕೆ ನಿಮ್ಮನುಯ್ಯೆನೇ ॥೧೧೨॥

ಎಂದು ಬಿನ್ನವಿಸಿ ಬೀೞ್ಕೊಂಡು ತನ್ನೊಳಿಂತೆಂದಂ:

ಬರವಂ ಪೋಗುಮನಾರುಮೆತ್ತಱಿವರ್ ಬಂದಂತೆ ಪೋದಂದು ದೋಃ-
ಪರಿಘಂ ದೂಷಿತಮಕ್ಕುಮಿಕ್ಕಿ ಖಳರಂ ಕಿೞ್ತೀಪುರೋದ್ಯಾನಮಂ
ಪುರಮಂ ಸುಟ್ಟು ದಶಾಸ್ಯನೆನ್ನನಱಿವಂತಾಂ ಪೋಗಿ ರಾಮಾಂಘ್ರಿತಾ-
ಮರಸಕ್ಕಾನತನಪ್ಪೆನೆಂಬ ಮನಮಂ ತಂದಂ ಮರುನ್ನಂದನಂ ॥೧೧೩॥

ಎಂದು ಬಗೆಯುತ್ತುಮಿರ್ಪನ್ನೆಗಮತ್ತ ಮಂಡೋದರಿ ಖಚರವಲ್ಲಭನಲ್ಲಿಗೆ ಪೋಗಿ,

ದೇವ ರಘುರಾಮನಂ ಸು ।
ಗ್ರೀವಂ ಕೈಕೊಂಡು ಹನುಮನಂ ಬರಿಸಿ ದಶ- ॥
ಗ್ರೀವ ಬೆಸವೇೞೆ ಕಂಬು ।
ಗ್ರೀವೆಯ ಜಾನಕಿಯ ಶುದ್ಧಿಗಾತಂ ಬಂದಂ ॥೧೧೪॥

ಅಂತು ಬಂದು,

ಪ್ರಮದವನದೊಳಗೆ ಸೀತೆಯ ।
ಸಮೀಪದೊಳ್ ಹನುಮನಿರ್ದನೆಂದಱಿಪುವುದಂ ॥
ಬೆಮರ್ವನಿ ಗಂಡಸ್ಥಲದೊ ।
ಳ್ಗಮನಿಸೆ ಕಿಸುಗಣ್ಚೆ ಮಸಗಿದಂ ದಶಕಂಠಂ ॥೧೧೫॥

ಅಂತು ಮುಳಿದು ಕದನಕರ್ಕಶರಪ್ಪ ರಾಕ್ಷಸರಂ ಪೆಸರ್ವೆಸರೊಳೆ ಕರೆದು,

ಪ್ರಮದೋದ್ಯಾನದೊಳಾವನಿರ್ದನವನಂ ಕೊಂದಿಕ್ಕಿಮೆಂದಾಹವ-
ಕ್ಷಮರಂ ಪೇೞೆ ದಶಾನನಂ ದನುಜರುಂ ಸಾಮಾನ್ಯನೆಂದುದ್ಧತರ್
ಸಮರಕ್ರೀಡೆಗಪೇಕ್ಷೆಗೆಯ್ದು ಪರಿತಂದರ್ತಂಡದಿಂ ಚಂಡವಿ-
ಕ್ರಮನೀತಂ ಹನುಮಂತನೆಂದಱಿದೊಡೇನಾರುಂ ಮನಂಗೆಯ್ವರೇ ॥೧೧೬॥
ಅಂತು ದೆಸೆದೆಸೆಗೆ ಮಸಗಿ ಕವಿತರ್ಪುದುಂ,

ಆ ದನುಜಬಲಮನಾವನ ।
ಪಾದಪಮಂ ಕಿೞ್ತು ಮೋದಿ ಕೊಲಲೊಡರಿಸಿದಂ ॥
ಕಾದುವ ಬನಮಂ ಕೀೞ್ವ ವಿ ।
ನೋದಂಗಳನೆರಡನೊಡನೆ ತೀರ್ಚುವ ಬಗೆಯಿಂ ॥೧೧೭॥

ಅಸುಗೆಯ ಪೆರ್ಮರನಂ ಕಿ ।
ೞ್ತಿಸಮಬಲಂ ಬೀೞೆಪೊಯ್ಯೆ ಪವಮಾನಸುತಂ ॥
ಬಿಸುನೆತ್ತರ್ಕೆಂದಳಿರೆನೆ ।
ಪಸರಿಸೆ ದಾನವರಶೋಕವನಮೆನೆ ಕೆಡೆದರ್ ॥೧೧೮॥

ತಾಳವನಂಗಳುಮಂ ಹಿಂ ।
ತಾಳಕುಜಂಗಳಮನೊಡನೆ ಕಿೞ್ತಿಡೆ ದನುಜರ್ ॥
ತಾಳುಂ ತಟ್ಟುಂಗೆಡೆದರ್ ।
ಪಸರಿಸೆ ದಾನವರಶೋಕವನಮೆನೆ ಕೆಡೆದರ್ ॥೧೧೯॥

ಬಕ್ಕಿವಲಸುಗಳೊಳಸುರರ ।
ತೆಕ್ಕೆಯನೆಬ್ಬಿಟ್ಟ ಪೊಯ್ವುದುಂ ಕೋಟ್ಗಿದುಳುಂ ॥
ಬಕ್ಕಿಯ ತೋಳೆಯುನಸೂಸಿದು ।
ವಾರ್ಕಡು ಕೆಯ್ವನಿಲಜಂಗೆ ಕೂರ್ಪಂ ತೋರ್ಪರ್ ॥೧೨೦॥

ತಿಲಕತರುವಿಂ ನಿಶಾಚರ ।
ಬಲಮಂ ಬಿಡೆ ಪೊಯ್ದುಕೊಂದು ರಾವಣನ ಯಶ- ॥
ಸ್ತಿಲಕಮುಮನವರ ಪೆಂಡಿರ ।
ತಿಲಕಮುಮಂ ತೊಡೆದಸೊಡಸೆ ಪವಮಾನಸುತಂ ॥೧೨೧॥

ಅಂತು ಮೇಲೆತ್ತಿಬಂದಸುರರ ಸೇನೆಯಂ ಪೇಟಿ ಪೆಸರಿಲ್ಲದಂತು ಪೇಸದೆ ಕೊಂದು,

ಅಮಿತಬಳಂ ಕಿಟ್ತಿಡಾ ।
ಡೆ ಮರುತ್ತನಯಂ ಮರುನ್ನದೀತೀರವನ- ॥
ದ್ರುಮಮೆನಿಸಿದುವಂಬರದೊ ।
ಳ್ಗಮೇರು ಮಂದಾರ ಪಾರಿಜಾತ ಕುಜಂಗಳ್ ॥೧೨೨॥

ಸರಲತಮಾಲ ತಾಲ ಕದಲೀ ಸಹಕಾರ ಮಹೀರುಹಂಗಳಂ
ಪರಶುವೊ ಮೇಘವಹ್ನಿಯೊ ದವಾಗ್ನಿಯೊ ಘೋರಸಮೀರನೋ ವನ-
ದ್ವಿರದಮೊ ತನ್ನ ತೋಳ್ವಲಮೆನಲ್ಬಲಮುಂ ಬಯಲಾಗೆ ಕಿಟ್ತಿನಾ-
ಸುರಗಿರಿಯಂ ಕೀಟಲ್ನೆಜಿವ ಮಾರುತಸೂನುಗಿದಾವ ಸಾಹಸಂ ॥೧೨೩॥

ಕೋಗಿಲೆ ಬೆರ್ಚಿ ಪಾಜಿದುವು ಚೂತವನಾಳಿಯಿನಾ ಶುಕವ್ರಜಂ
ಪೂಗವನಂಗಳಿಂ ಬೆದಱಿ ಪೋದುವು ಬಾಲಮರಾಳಸಂಕುಳಂ
ಪೂಗೊಲದಿಂದಗಲ್ದುವೆನಸುಂ ಪೆಱಪಿಂಗಿದುವುನ್ಮದಾಳಿ ಪು-
ನ್ನಾಗವನಂಗಳಿಂ ತವಿಸೆ ನಂದನಮಂ ಪವಮಾನನಂದನಂ ॥೧೨೪॥

ತನಿಗಂಪಂ ಕೆದಱುತ್ತುಮಿರ್ಪ ಪಳಿಕಿಂದಾಕರ್ಷಣಂ ಮಾಡಿ ಭೃಂ-
ಗನಿಕಾಯಂಗಳನಂಗಜಂಗೆ ವಿಜಯಸ್ತಂಭಂ ವನಶ್ರೀಗೆ ಯೌ-
ವನಮೆಂಬಂತು ಪೊಗಟ್ತೆಯಂ ತಳೆದುವಂ ಕಿಟ್ತಿಂ ಮರುನ್ನಂದನಂ
ಘನಸಾರದ್ರುಮಮಂ ದಶಾನನನ ಕೀರ್ತಿಸ್ತಂಭಮಂ ಕೀಳ್ವವೋಲ್ ॥೧೨೫॥

ಪುಗಲಿಲ್ಲೀ ವನದೊಳ್ಮದೀಯ ಪಿತೃಗುಂತುಂ ವೈರಮುರ್ವೀಜರಾ-
ಜಿಗಳೊಳ್ಗಂಧವಹಂ ಮದೀಯಜನಕಂಗೆಂದನ್ವಯದ್ವೇಷಮಂ

ಬಗೆಯೊಳ್ತಾಳ್ದಿದ ಮಾೞ್ಕೆಯಿಂ ಪವನಜಂ ಕಿೞ್ತಿಂ ಪುರೋದ್ಯಾನಮಂ
ಬಗೆಯೆತ್ತಾಯ್ತನೆ ವಾರ್ತೆಗಲ್ಲಿ ತರುವಲ್ಲೀಗುಲ್ಮ ಮೊಂದಿಲ್ಲೆನಲ್ ॥೧೨೬॥

ನೆಲನುೞ್ಚಿಂತವೊಲಾಗೆ ಕಿೞ್ತು ಬನಮಂ ಮಾೞ್ಪೊಂತರು ವೇೞ್ದಿ ಸೃ-
ಗ್ಜಲದಿಂ ತಾಯ್ವೆದೆಗೂಡೆ ಬಿತ್ತಿ ಪೆಣನಂ ಬೇೞ್ಕೊಂದು ಶೌರ್ಯಾಂಕುರಂ
ತಲೆದೋಱ್ತ್ತದು ಕೊರ್ವಿ ಕೀರ್ತಿಲತೆಯಾಯ್ತಾವಳ್ಳಿಯಿಂದಬ್ಧಿಲ-
ಸ್ಥಳಮಂ ಮುದ್ರಿಸಿ ರಾವಣಂಗಮಟಿಲಂ ತಂದಂ ಮರುನ್ನಂದನಂ ॥೧೨೭॥

ಜಾನಕಿಯಿರ್ದಶೋಕೆಯ ಸಮೀಪದೊಳಿರ್ದ ಫಲಪ್ರಸೂನಸಂ-
ತಾನವಿರಾಜಮಾನಕುಜರಾಜಿಯನೋವದೆ ಕಿೞ್ತಿನಿಲ್ಲ ರೂ-
ಕ್ಷಾನಿಲಪಾತದಿಂ ತಪನ ತಾಪದಿಂಬಿಕೆಗಗ್ಗಳಂ ಪರಿ-
ಮ್ಲಾನತೆಯುಕ್ಕುಮೆಂದುೞಿಪಿದಂ ಕೆಲವಂ ಪವನಂಜಯಾತ್ಮಜಂ ॥೧೨೮॥

ಅಂತು ದಶಾನನಂಗೆ ಯಶೋಭಂಗಮಾಗೆ ವನಭಂಗಂ ಮಾೞ್ಪುದುಂ ಚರಂ ನಿಶಾಚರನೊರ್ವನತಿತ್ವರಿತಗತಿಯಿಂ ಬಂದು,

ವನಪಾಲರನಿಕ್ಕಿಯುಮಾಂ ।
ತ ನಿಶಾಚರಬಲಮನಿಕ್ಕಿಯಂ ಪವನಸುತಂ ॥
ಬನಮ ಕಿೞ್ತಿಕ್ಕಿಯುಮಾ ।
ರೆನಗಿದಿರಾಂಪನ್ನರೆಂದು ಕಂಡುಕೆಯ್ದಿರ್ದಂ ॥೧೨೯॥

ಎಂದು ಬಿನ್ನವಿಸೆ,

ಚರವಚನಂ ಕಿವಿಯಂ ಸಾ ।
ರ್ತರೆ ಘನನಿನದಕ್ಕೆ ಕೆಳರ್ದ ಕೇಸರಿವೋಲ್ ಕೇ- ॥
ಸರಿಪೀಠದಿನೆೞ್ದಿಂ ದಶ ।
ಶಿರನೆರಡುಂ ಪುರ್ವುಮುರ್ವಿ ಗಂಟಿಕ್ಕುವಿನಂ ॥೧೩೦॥

ಅಂತು ಕಡುಮುಳಿದು ಮೇಲೆ ನಡೆಯಲೊಡರಿಸುವ ತಂದೆಯನಿಂದಗಿ ಮಾರ್ಕೊಂಡು,

ಲೋಕಾಧಿಪತಿ ದಶಾನನ ।
ನೇಕಾಕಿಯ ಮೇಲೆ ನಡೆದನೆಂಬಪವಾದಂ ॥
ಲೋಕಕ್ಕೆ ಪರ್ವಿ ನಿಜಬಾ ।
ಹಾಕೌಕ್ಷೇಯಕದ ಕೂರ್ಪು ನೇರ್ಪಡುಗಿಡುಗುಂ ॥೧೩೧॥

ನೀಂಬರಮುಂಟೆ ದೇವ ಕದನಂ ಪವಮಾನತನೂಭವಂ ರಣಾ-
ಡಂಬರದಿಂದಮಂಡಜದೊಡೆ ಕೊಂದಪೆನಂಜಿದೊಡಮ್ಮ ನಿಮ್ಮ ಪಾ-
ದಾಂಬುರುಪಕ್ಕೆ ತಂದವನನೊಪ್ಪಿಸುವೆಂ ಬೆಸಸೆನ್ನನೆಂದು ಶೌ-
ರ್ಯಾಂಬುಧಿ ಬೇಡಿದಂ ಬೆಸನನಿಂದಗಿ ಖೇಚರ ಚಕ್ರವರ್ತಿಯಂ ||೧೩೨||

ಅಂತು ಬೆಸಂಬಡೆದು ಸಮರಸಂರಂಭನಿದಿರ್ಚಿ ಬರ್ಪುದುಂ ಮಾರುತಿ ಕಂಡು ಪೆಱಗಿರಿಸಿ ಬಂದ ನಿಜ ವರೂಥಿನಿಯಂ ಬರಿಸಿ ವಿಜಯ ರಥಾರೂಢನಾಗಿ ಲಂಕಾಪುರಮೆಲ್ಲಂ ತಳ್ಳಿಸುವಂತು ಕಾದಿ ಪೆಸರ ನಾಯಕರಂ ಪೇಸೇಟಿ ಕೊಂದಿಂದಗಿ ಮುಟ್ಟೆವರ್ಪುದುಂ ತನ್ನೊಳಿಂತೆಂದಂ :

ಕಾದುವ ಕೂರ್ಪುದೋರ್ಪ ಬೆಸನಂ ರಘುಜಂ ಬೆಸವೇಟ್ಟಿನಿಲ್ಲ ಮೇ-
ಲಾದ ನಿಶಾಚರಪ್ರಮುಖರೊಳ್ ತಲೆ ಮುಟ್ಟಿಜಿವಂದಮಾವುದಾ-
ನೀ ದನುಜಾತ್ಮಜಂಗೆ ಪಿಡಿಪಿತ್ತು ದಶಾನನನಳ್ಕಿ ಬಳ್ಕಿ ಲಂ-
ಕಾದಹನಕ್ಕೊಡರ್ಚುವೆನೆನುತ್ತುಮಿದಂ ಬಗೆದಂ ಮರುತ್ಸುತಂ ||೧೩೩||

ಎಂಬುದು ಮತ್ತಂ

ಬಗೆಯದೆ ದಾನವಾಧಿಪನ ದೋರ್ಬಲಮಂ ಖಚರಪ್ರವೀರರಂ
ಬಗೆಯದೆ ನಚ್ಚಿ ತನ್ನಳವನಿಂದಗಿಗಾಂ ಪಿಡಿಪೀವೆನೆಂಬಿದಂ
ಬಗೆದನಿದೇನಪಾರಬಲನೋ ರಣಧೀರನೊ ಸಿದ್ಧವಿದ್ಯನೋ
ಬಗೆವರದಾರಿದಂ ಹನುಮನಂತಿರಖಂಡಿತಗಂಡಗರ್ವದಿಂ ||೧೩೪||

ಎಂದು ನಿಶ್ಚಯಿಂಗೆಯ್ದು ತನ್ನ ಬಲವೆಲ್ಲಮಂ ಬೀಡಿಂಗೆ ಕಟಿ‌ಪಿ ಕದನ ಕೇಳಿ ಗಳ್ಕಿದಂದದಿಂದಿರಲಿಂದಗಿ ಪಿಡಿವುದುಮಾತನಾತನಂ ತಂದು ಕಾಣಿಸಿ ದಶವದನಂಗಿಂತೆನಿತಂ ನಮ್ಮ ವಿದ್ಯಾವಿನಿರ್ಮಿತಮಪ್ಪ ವಜ್ರಪ್ರಾಕಾರಮನೊಡೆದು ವಜ್ರ ಮುಖನಂ ಕೊಂದು ಸೀತಾದೇವಿಯ ಸಮೀಪಕ್ಕೆವಂದು ಬನಮೆಲ್ಲಮಂ ಕಿಟ್ಟು ಮೇಲೆ ಬಂದ ಖಚರಬಲಮಂ ಕೊಂದನೀತಂಗೆ ತಕ್ಕುದಂ ದೇವರೆ ಬಲ್ಲಿರೆಂದು ಬಿನ್ನವಿಸೆ,

ಕಿಸುಸೆರೆವರಿದಿರೆ ಕಣ್ಣೊಳ್ ।
ನೊಸಲೊಳ್ಪುರ್ವಡರೆ ಗಂಡಸ್ಥಳದೊಳ್ ॥
ಪಸರಿಸೆ ಬೆಮರ್ವನಿಗಳ್ ಮುನಿ ।
ದಸುರೇಂದ್ರಂ ಪವನಸುತನನಂದಿಂತೆಂದಂ ||೧೩೫||

ಮಸುಳೆ ನಿಜಾನ್ವವಾಯಮಹಿಮೋನ್ನತಿ ನಾಟ್ಕಡೆವೋಗೆ ಪಾಟಿಯುಂ
ಪಸುಗೆಯುಮೆನ್ನ ಮನ್ನಣೆಯನಿಂದಗಿಯೊಳ್ ಸಮಕಕ್ಷಮಾಗೆ ರ-

ಕ್ಷಿಸಿದುದನೇನುಮಂ ಬಗೆಗೆ ತಾರದೆ ಲಜ್ಜೆಯನೊಕ್ಕು ಬಿಟ್ಟು ಮಾ-
ನಸಿಕೆಯನಿಂತು ಭೂಚರರ್ಗೆ ಖೇಚರ ನೀಂ ಚರನಾಗಿ ಬರ್ಪುದೇ ॥೧೩೬॥

ಉಪಕೃತಿಯಂ ನೆನೆಯದೆ ನೀ ।
ನಪಕೃತಿಯನೊಡರ್ಚಿದ್ದೈ ದುರಾತ್ಮನೆ ರಿಪುಭೂ- ॥
ಮಿಪರೊಳೊಡಗೂಡಿದ್ದೈ ದ್ರೋ ।
ಹ ಪೆಂಪುಗಿಡೆ ದಂಡಿಸಲ್ಕೆವೇಟ್ಟುದೆ ನಿನ್ನಂ ॥೧೩೭॥

ಎನೆ ಕೆಲದೊಳಿರ್ದ ಕೆಲರ್ದಾನವರ್ಪವಮಾನಸೂನುಗಿಂತೆಂದರ್ ಸ್ವಾಮಿ ದ್ರೋಹನಾಗಿ ಸೇನಾಭಂಗಮಂ ಮಾಡಿ ಪರಬಲಂಬೊಕ್ಕು ತಕ್ಕುಗಿಡಿದು ದೋಷಕ್ಕೆ ಪಕ್ಕಾದೆ ಪವನಂಜಯಂಗೆ ಪುಟ್ಟಿದೊಡಿಂತು ಪಾೞಿದಪ್ಪಿ ಗುಣಂ ಗೆಟ್ಟುದು ದೊರೆಕೊಳ್ಳದೆನೆ ಪವನಸುತಂ ಮುಳಿದವರನಿಂತೆಂದಂ :

ತೋಯದವಾಹನನನ್ವಯ ।
ದಾಯತಿಗಿಡೆ ಪಾೞಿದಪ್ಪಿ ಪೞಿಪೊರ್ದೆ ಪರ- ॥
ಸ್ತ್ರೀಯನಪೇಕ್ಷಿಸಿದ ಖಳ ।
ನ್ಯಾಯಮನಾರೈದು ನೋಡಿಕೊಳ್ಳಿಂ ನಿಮ್ಮೊಳ್ ॥೧೩೮॥

ಅಱಿನಂ ದಶಮುಖನನಱಿದುದ ।
ನಱಿಯುತ್ತುಂ ಪೊಲ್ಲದೆಂದು ಬಾರಿಸದೊಳ್ಪಂ ॥
ಮಱಿದಿರ್ಪುದಱಿಂ ದೋಷ ।
ಕ್ಕೆಱೆವಟ್ಟೆನಿಸಿರ್ದ ಪಾಪಿಗಳ್ ನೀಮೆವಲಂ ॥೧೩೯॥

ಸೌಮಿತ್ರಿಯ ಕೈಯೊಳ್ ರಣ ।
ಭೂಮಿಯೊಳಿರ್ದಪುದು ರಾವಣಂಗಂ ನಿಮಗಂ ॥
ಪೋ ಮರಣಂ ಬಿದಿ ಬರೆದುದು ।
ನೇಮಾತೇದೊರೆಯರಾದೊಡಂ ತೊಡೆದಪರೇ ॥೧೪೦॥

ಎಂದು ಪಲತೆಱದಿಂ ನೆಱನೆತ್ತಿ ನುಡಿಯೆ ದಶಕಂಠಂ ಮುಳಿದು ಪಲವಂ ಗೞಪಲೀಯದೀತನಂ ರಾಮದೂತನೆಂದು ಗೋಸಣೆಗಳೆದು ಪರಿಭವಿಸಿ ಪೊಱಮಡಿಸಿ ಕಳೆಯಿಮೆನೆ,

ಸಿಡಿಲ ಪೊಡರ್ಪಾಕ್ಷಣ ದೊ ।
ಳ್ಸುಡುವುದು ಕಾಟ್ಕಿರ್ಚು ಬನಮನನಿಲನೆ ಬೆಸದಿಂ ॥
ಸುಡುವುದು ತೆಗೞಿನಲೇಂ ಕಿಡಿ ।
ಕಿಡಿವೋದನೊ ಕೋಪತಾಪದಿಂ ಪವನಸುತಂ ॥೧೪೧॥

ಉರಿಲಿಂಗ ದೆಸೆಯಿಂದಮಂದೊಗೆದುದೋ ಪೇಳಿಂಬಿನಂ ಕಣ್ಣ ಕೇ-
ಸುರಿಗಳ್ದಳ್ಪಿಸೆ ಕೋಪದಿಂದಮುರಿದೆಟ್ಟಾ ಸ್ಥಾನದಲಿರ್ದ ದು-
ರ್ಧರ ವಿದ್ಯಾಧರವೀರರಂ ಜವನ ಬಾಯೊಳ್ತೂಂತಿದಂ ತನ್ನನಿ-
ಷ್ಠುರ ಪಾದಾಪತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ ||೧೪೨||

ಬಿದಿರ್ದೀಡಾಡಿ ಕೆಲಂಬರಂ ಕೆಲಬರಂ ನಿಟ್ಟೆಲ್ವು ಸುರ್ಗಾಗೆ ಕಾ-
ಯ್ದೊದೆದೆಟ್ಟಿಟ್ಟ ಕೆಲಂಬರಂ ಕೆಲಬರಂ ಪಿಟ್ಟಾಗೆ ಪೊಯ್ದಣ್ಮೆ ತಾ-
ಗಿದರಂ ಸೀಳ್ದು ಕೆಲಂಬರಂ ಕೆಲಬರಂ ಪ್ರೋದ್ವೃತ್ತರಂ ದೈತ್ಯರಂ
ತುದಿಗಾಲಂ ಪಿಡಿದೆತ್ತಿ ಪೊಯ್ದು ನೆಲದೊಳ್ಕೊಂದಂ ಮರುನ್ನಂದನಂ ||೧೪೩||

ಅಂತು ಕಲ್ಪಾಂತಕೃತಾಂತನಂತೆ ಮಾಮಸಕಂ ಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು ಸಿಂಹಲಂಘನದಿಂದಂಬರಕ್ಕೆ ನೆಗೆದು,

ಮನೆಮನೆದಪ್ಪದೆ ನೆಗೆದುದು ।
ತನಿಗಿರ್ಚಿನೆ ದಹನವಿದ್ಯೆಯಿಂ ಸುಟ್ಟಂ ಪಾ- ॥
ವನಿ ಲಂಕೆಯನಸುರಾಧೀ ।
ಶನ ಮನಮುರಿವನ್ನಮಾನನಂ ಪೊಗೆವನ್ನಂ ||೧೪೪||

ಬಹುಧೂಮಲೇಖೆ ನೆಗೆದುವು ।
ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾ- ॥
ದಹನಮನಸುರೇಂದ್ರವಿನಾ ।
ಶಹೇತುಗಳ್ ಧೂಮಕೇತುಗಳ್ನೆಗೆದುವೆನಲ್ ||೧೪೫||

ಅಸುರೇಂದ್ರಂಗೆ ಕೃತಾಂತರ ।
ಕಿಸುಗಣ್ಣಿದ ಕಣ್ಣ ಕೆಂಪೆನಲ್ಕೆಸುರಿ ದ- ॥
ಳ್ಪಿಸಿದುದು ಬದ್ಧಭ್ರುಕುಟವೊ ।
ಲಸದಳಮರ್ವಿಸಿದುದುರ್ವಿ ಧೂಮಸ್ತೋಮಂ ||೧೪೬||

ಅಣುವನ ವಹ್ನಿವಿದ್ಯೆ ಸುಡೆ ಲಂಕೆಯನಲ್ಲಿ ಛಟಚ್ಛಟೆಂಬ ಭೀ-
ಷಣರವಮುಣ್ಮೆ ನೀಳ್ದುರಿಯ ನಾಲಗೆಗಳ್ದಶಕಂಠರಕ್ತದಿಂ
ತಣಿವ ದಿನಂಗಳಾದಪುವು ರಾಮಶರಂಗಳಿನೆಂದು ರಾಗದಿಂ
ಕುಣಿವ ಕುಕಿಲ್ವ ಭೈರವಿಯ ರಕ್ತ ಜಟಾಪಟಲಂಗಳೆಂಬಿನಂ ||೧೪೭||

ಪುರಹರನೂಡೆ ಮುಂ ತ್ರಿಪುರಮಂ ಪಲಕಾಲಮುಪೋಷಿತವ್ರತಾ-
ಚರಣದೊಳಿರ್ದನೀಗಳುಪವಾಸದ ಪಾರಣೆ ವಾಯುಪುತ್ರನಿಂ

ದೊರೆಕೊಳೆ ಲಂಕೆಯಂ ಶಿಖಿ ಶಿಖಾವಧಿಯಪ್ಪಿನಮುಂಡು ತೇಗುವಂ
ತಿರೆರ ಪೊಣಪೊಣ್ಮದತ್ತು ಧುಗಿಲೆಂಬ ಧಗದ್ಧಗಿಲೆಂಬ ನಿಸ್ವನಂ ॥೧೪೮॥

ಕರುಮಾಡಂ ಮೇರುವಂ ಪರ್ವಿದುದು ಚಟುಳದಾವಾಗ್ನಿಯೆಂಬಂದದಿಂ ನಿಂ-
ದುರಿಯುತ್ತಿರ್ದತ್ತವಂ ಸುತ್ತಿರ್ದ ಧವಳಹಾರಂಸುಧಾವಾರ್ಧಿಯಂ ದು-
ಸ್ತರ ದೌರ್ವಜ್ವಾಲೆ ಜಿಹ್ವಾಪರಿಕರಮಳುರ್ದತ್ತೆಂಬಿನಂ ಕಣ್ಗೆ ದೇಂ ಭೀ-
ಕರಮಾಗಿರ್ದತ್ತೊ ಲಂಕಾಪುರಮನುರಿಪೆ ದಿವ್ಯಾಗ್ನಿಯಿಂದಾಂಜನೇಯಂ ॥೧೪೯॥

ವಾಸುಗಿ ನುಂಗಲೆಂದು ದಶಕಂಧರನಂ ರಸೆಯಿಂ ಧರಾತಳ-
ಕ್ಕಾಸುರಮಾಗೆ ತನ್ನ ರಸನಾದ್ವಿಸಹಸ್ರಮಗುರ್ವನೀಯೆ ಭಾ-
ಬಾಸುರರತ್ನರಂಜಿತ ಸಹಸ್ರಫಣಂ ನೆಗೆದಂತೆ ಸುತ್ತಲುಂ
ಕೇಸುರಿ ಮಾಲೆ ನಿಂದುರಿಯೆ ಬೆಂದುದು ರಾವಣರಾಜಮಂದಿರಂ ॥೧೫೦॥

ಗೃಹದೀರ್ಘಿಕೆಯಂ ಧಾರಾ ।
ಗೃಹಮಂ ಬಡಬಾಗ್ನಿಯಂದದಿಂ ರತ್ನಶಿಲಾ- ॥
ಗೃಹಮಂ ಸಿಡಿಲಂತಿರೆ ಧವ ।
ಳಹಾರಮಂ ದಾವಶಿಖಿವೊಲಳರ್ದುದು ದಹನಂ ॥೧೫೧॥

ಕನಕದ ರಜತದ ಕಾಂಸ್ಯದ ।
ಮನೆ ಮುಟ್ಟುರಿ ಮುಟ್ಟೆ ಕರಗಿ ಕಣ್ಣೆಟ್ಟುವು ದೈ- ॥
ತ್ಯನ ಸಿಂಹಾಸಂದಿಗೆ ರಾ ।
ಮನ ವೀರಶ್ರೀ ಕಡಂಗಿ ಕಣ್ಣಟ್ಟಳೆನಲ್ ॥೧೫೨॥

ಸುರಿವ ಮದಾಂಬುವಿಂದುರಿಯ ನಾಲಗೆ ತಣ್ಣಸಮಾಗೆ ಬೇಗದಿಂ
ಪರಿದುವು ನಿರ್ಝರಂ ಸುರಿವ ಜಂಗಮನೀಲನಗಂಗಳೆಂಬಿನಂ
ಭರದೊಳೆ ಕಂಭಮಂ ಮುಱಿಯೆ ಪಾಯ್ದು ತೊಡರ್ಪಱದಾನೆಸಾಲೆಗೆ-
ಯ್ತರೆ ಯಮಜಿಹ್ವೆಯಂತುರಿಯ ನಾಲಗೆ ದಾಸವನಂಕದಾನೆಗಳ್ ॥೧೫೩॥

ಇದು ಕಡೆಗಾಲದಂದಿನಡೆವೊತ್ತಿದ ಪಾವಕನೆಂಬಿನಂ ಪೊದ-
ಱಿಯದವಿ ಕೃಶಾನು ಸುತ್ತಿ ಸುಡೆ ಮಂದಿರಮಂ ನೆಗೆದುಳ್ಳ ಲೆಂಕರಂ
ಜೆವಱಿಸಿ ಲಾಯಮಂ ಪರಿದು ಮುಂಡಿಗೆಯಂ ಮುಱಿದಾಗಳೇಂ ಬಿಸಿ-
ಲ್ಗುದುರೆಗಳಂದದಿಂ ಕುದುರೆಗಳ್ಬಲವುಂ ದೆಸೆಬಿದ್ದ ಮಾದುವೋ ॥೧೫೪॥

ಎನ್ನ ಸುತನತಿಥಿಪೂಜೆಯ- ।
ನೆನ್ನ ಸಖಿಂಗಿತ್ತನಗ್ನಿಗೆಂದನುಕೂಲಂ ।

ತನ್ನೊಲವಿಂ ದೂಡಿದನನಿ- ।
ಲಂ ನಯದಿಂ ಬೀಸಿ ಬೀಸಿ ಲಂಕಾಪುರಮಮಂ ॥೧೫೫॥

ಆ ಸಮಯದೊಳಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕಟಬಯಲ್ದಾಣದೊಳ್ ದೊಮ್ಮಳಿಸಿ ನಿಂದ ಬಹುಜನಂಗಳುಮ್ಮಳಿಸಿ ತಮ್ಮೊಳಿಂತೆಂದರ್ :

ಜನಕಜೆಗಾಸೆಗೆಯ್ಯೆ ಸುಕೃತಕ್ಷಯದಿಂ ಜಲವರ್ಷವಿದ್ದೆ ಪೆ-
ೞ್ಗನೆ ಪೆಱಪಿಂಗೆ ಪುಷ್ಪಕವಿಮಾನಮನೇಱಿ ದಶಾನನಂ ವಧೂ-
ಜನಸಹಿಂತಂ ಕೃಶಾನುಗೆ ಭಯಾಕುಳನಪ್ಪುದು ಚೋದ್ಯಮಲ್ತದೆಂ-
ತೆನೆ ಶುಚಿಯಲ್ಲದಂಗೆ ಬೆಸಗೆಯ್ಗುಮೆ ವಿದ್ಯೆಗಳಾವುವಾದೊಡಂ ॥೧೫೬॥

ಮಾನವದೂತನೆತ್ತ ಜಲರಾಶಿಯನಳ್ಕದೆ ಪಾಯ್ದುಬರ್ಪುದೆ-
ತ್ತಾನಲಳುಂಬಮಪ್ಪಸುರನೇನೆಯನೊರ್ವನೆ ಕೊಲ್ವುದೆತ್ತ ಲಂ-
ಕಾನಗರಕ್ಕೆ ನಂದನವನಕ್ಕೆ ವಿನಾಶಮನೀವುದೆತ್ತಿದೇಂ
ದಾನವರಾಜದುರ್ವಿಳಸಿತೋತ್ಕಟಸಂಕಟವೇಗಮಾಗದೇ ॥೧೫೭॥

ಪ್ರತಿಪಕ್ಷಮುಂಟೆ ಲಂಕಾ- ।
ಪತಿಗಣುವಂ ರಾವಣಂಗಿದಿರ್ಚುವನೆ ಮಹಾ- ॥
ಸತಿ ಸೀತೆಯ ಶೋಕಾನಳ ।
ಹತಿಯಿಂ ಬೆಂದಿತ್ತು ಕೂಡೆ ಲಂಕಾನಗರಂ ॥೧೫೮॥

ಎಂದು ಪೌರಜನಂ ಮಱುಗೆ ಲಂಕಾಪುರಮನುರಿಪಿ ಗಗನತಳಕ್ಕೆ ನೆಗೆದು ಮುಗುಱ್ದು ನಿಜಸೇನೆಯಂ ಕೂಡಿಕೊಂಡು ಗಂಧವಹನಂದನಂ ಕಿಷ್ಕಿಂಧಪುರಾಭಿಮುಖನಾಗಿ,

ಮಾರುತಮಾರ್ಗಮಂ ಪುದಿಯೆ ಕೇತನ ಪಟ್ಟಕೆಗಳ್ ವಿಮಾನಘಂ-
ಟಾರುತಿಗಳಿಳ್ಗಯಾನಕಘನಧ್ವನಿಗಳ್ದೆಸೆಯಂ ಪಳಂಚೆ ಭೂ-
ಷಾರುಚಿಗಳ್ದಿವಕ್ಕೆ ತನಿಗೊರ್ವನೊಡರ್ಚೆ ಜಯಾಂಗನಾಪ್ರಿಯಂ
ಮಾರುತಿ ಬಂದನಾ ರಘುತನೂಜಮನೋರಥಸಿದ್ಧಿ ಬರ್ಪವೋಲ್ ॥೧೫೯॥

ಅಂತು ಬಂದು ಗಗನತಳದಿನವನೀತಳಕ್ಕವತರಿಸಿ ಕಿಷ್ಕಿಂಧಪುರಬಹಿಃಪುರದೊಳ್ಬೀಡಂ ಬಿಟ್ಟು ಪುರಮಂ ಪುರಂಧ್ರಿಯರ ಮನಮುಮನರಮನೆಯುಮನೊಡನೆ ಪೊಕ್ಕು,

ರಾಮಭುಜಪ್ರತಾಪತಪನೋದಯಶೈಲಮುಪಾಂತಪರ್ವತ-
ಸ್ತೋಮಸಮನ್ವಿತಂ ಬರುತುಮಿರ್ದಪುದೆಂಬಿನೆಗಂ ವಿಯಚ್ಚರ-
ಗ್ರಾಮಣಿ ಸೂರ್ಯವಂಶನರಪಾಲಶಿರೋಮಣಿಯಿರ್ದ ತತ್ಸಭಾ-
ಭೂಮಿಗೆ ಬಂದನಾಪ್ತ ಖಚರಾನುಚರಂ ಪವನಂಜಯಾತ್ಮಜಂ ॥೧೬೦॥

ಮರಕತರತ್ನಕುಂಡಲಮರೀಚಿಗಳಿಂ ದೆಸೆಗಳ್ಪಸುರ್ವುವೆ-
ತ್ತರಿರೆ ಮಕುಟಪ್ರಭಾಪಟಲದಿಂ ಗಗನಂ ಕಿಸುಸಂಜೆ ಪರ್ವಿದಂ-
ತಿರೆ ಕನಕಾದ್ರಿಯೊಳ್ಪೊಳೆವ ತಾರೆಗಳಂದದೆ ತೋರಮುತ್ತಿನ‌ಸ್ರ-
ಸರಮುರದೊಳ್ತಳತ್ತಳಿಸೆ ಬಂದನರಿಂಜಯನಂಜನಾತ್ಮಜಂ ॥೧೬೦॥

ಅಂತು ಬರುತ್ತುಮಿರೆ,

ವದನವಿಕಾಸದಿಂ ಬರವಿನೇೞ್ತರದಿಂದಮೆ ಕಾರ್ಯಸಿದ್ಧಿಯಾ-
ದುದನಱಿದಂಜನಾಸುತ ನಿರೀಕ್ಷಣದಿಂ ರಘುಜಂಗೆ ಹರ್ಷಮಾ-
ದುದು ಪರಿಷಜ್ಜನಕ್ಕೆ ಪರಮೋತ್ಸವಮಾದುದು ಲಕ್ಷ್ಮಣಂಗೆ ಕೊ-
ರ್ವಿಮದು ಮನಂ ಮುದಂಬಡೆಯರಾರಭಿವಾಂಛಿತಕಾರ್ಯಸಿದ್ಧಿಯಿಂ ॥೧೬೨॥

ಅಂತು ನಿಜಾಗಮನಮೆ ಸಭಾಜನಮಂ ಹರ್ಷರಸಭಾಜನಂ ಮಾಡೆ,

ಪುದಿದಿರೆ ರಾಮಲಕ್ಷ್ಮಣರ ಕಣ್ಬೊಳಪುಂ ಬಳಸಿರ್ದ ತತ್ಸಭಾ-
ಸದರ ವಿಲೋಚನಪ್ರಭೆಯುಮಾತ್ಮಶರೀರಮನಂಜನಾಸುತಂ
ವಿದಳಿತ ನೀಲನೀರಜವನಂ ನಡೆತಂದಪುದೆಂಬಿನಂ ಸಭಾ-
ಸದನಮನೆಯ್ದಿದಂ ಸಲಿಲವೀಚಿಗಳಂ ಗೆಲೆ ಭೂಷಣಾಂಶುಗಳ್ ॥೧೬೩॥

ಅಂತು ಬಂದು ರಾಘವಂಗೆ ವಿನಯವಿನಮಿತನಾಗಿ ಲಕ್ಷ್ಮಣಂಗೆ ತುಟಿಲ್ಗೆಯ್ದು ಸಮುಚಿತಪ್ರದೇಶದೊಳಿಕ್ಕಿದುತ್ತುಂಗ ಮಣಿಮಯಾಸನಮನಲಂಕರಿಸಿ,

ಮಣಿಯೆ ವಿರಹಾಂಧಕಾರಂ।
ಕುಣಿಯೆ ಜಗತ್ಪತಿಯ ನೇತ್ರಪುತ್ರಿಕೆ ಮೆಯ್ಯೊ॥
ಳ್ಪಿಣಿಯೆ ಪುಳಕಾಳಿ ಚೂಡಾ।
ಮಣಿಯಂ ಕೊಟ್ಟಂ ನೃಪಂಗೆ ಪವಮಾನಸುತಂ ॥೧೬೪॥

ಅಂತು ಕುಡುವುದುಂ,

ಆ ರತ್ನಕ್ಕಿದಿರ್ವರ್ಪವೋಲ್ ನೃಪತಿಗಾನಂದಾಶ್ರುಗಳ್ ಬಂದುವಾ
ಸ್ತ್ರೀರತ್ನಂ ಪದೆದಪ್ಪಿದಂತೆ ಪುಳಕಂ ಚೂಡಾಮಣಿಸ್ಪರ್ಶದಿಂ
ಧೀರೋದಾತ್ತನ ಮೆಯ್ಯೊಳುಣ್ಮಿದುವು ಸೀತಾಶುದ್ಧಿಯಂ ಕೇಳ್ವ ಚೇ
ತೋರಾಗಂ ರಘುನಂದನ ಶ್ರುತಿಗೆ ತಂದತ್ತಾದಮೌತ್ಸುಕ್ಯಮಂ ॥೧೬೫॥

ಅನಂತರಂ ಮರುನ್ನಂದನಂ ಬಿನ್ನಪಮನವಧಾರಿಸುವುದೆಂದಿಂತೆಂದಂ:

ಘನಸಮಯಸಮಾಗಮಮಂ।
ಮನಮೊಳ್ನೆಸೆಯುತ್ತುಮಿರ್಩ ಚಾದಗೆವೋಲ್ಮ॥
ಜ್ಜನನಿ ನಿಜಾಗಮನಮೆ ಜೀ।
ವನಮಾಗಿರೆ ದೇವ ಜೀವನಮಮಂ ಪಿಡಿದಿರ್ದಳ್ ॥೧೬೬॥

ದೇವ ಪತಿವ್ರತಾಗುಣದಿನಗ್ಗಳಮಾವುದುಮುಂಟೆ ಜಾನಕೀ ।
ದೇವಿಗೆ ರಾವಣಂ ಮುಳಿದು ಮಾಳ್ಪುಪಸರ್ಗಮವೆನ್ನಮಾದೊಡಂ
ಬೇವಸಮಂ ಮನಕ್ಕೆ ತರಲಾಱದೆ ನಿಮ್ಮಡಿ ನಿಮ್ಮ ಭಕ್ತಿಯಿಂ
ಪಾವಿನ ಪಲ್ಲ ನಂಜು ಕಿಡುವಂತಿರೆ ಮಾಂತ್ರಿಕಮಂತ್ರಶಕ್ತಿಯಿಂ ॥೧೬೭॥

ಎಂದು ಬಿನ್ನವಿಸಿ ಮತ್ತಂ ಕೆಲವು ವಿನ್ನಾಣಂಗಳನಿಂತೆಂದಂ:

ಮುನಿವೃಂದಾರಕರಪ್ಪ ಚಾರಣಯುಗಕ್ಕಾಹಾರಮಂ ದೇವರೀ-
ಯೆ ನದೀತೀರದೊಳಾಯ್ತು ಚೋದ್ಯಮೆನೆ ಪರಮಚಾಶ್ಚರ್ಯಮಾ ಯೋಗಿ ದ-
ರ್ಶನದಿಂ ದಂಡಕನಾ ಮಹಾಗಜನದೊಳ್ಪರ್ದಾಗಿ ಪುಟ್ಟಿರ್ದು ತೊ-
ಟ್ಟನೆ ಜಾತಿಸ್ಮರನಾದನೆಂಬ ಕುಱಿಪಂ ಮನ್ಮಾತೆ ಪೇೞ್ದಟ್ಟಿದಳ್ ॥೧೬೮॥

ಎಂಬುದುಂ ಪ್ರಭಂಜನಸುತನ ಪ್ರಧಾನಪುರುಷಂ ಪೃಥುಮತಿವೆಸರ ಮಂತ್ರಿ ದಾಶರಥಿಗೆ ಕೈಗಳಂ ಮುಗಿದು,

ಅಮಿತಬಲಂ ದೇವರ್ ಬೆಸ- ।
ಸೆ ಮನೋವೇಗದೊಳ್ ಪೋಗಿ ಲಂಕಾಪ್ರಾಕಾ ॥
ರಮನೊಡೆದಂ ಕೊಂದು ವ- ।
ಜ್ರಮುಖನನಾರ್ ವಲಿಮುಖಧ್ವಜಂಗಿದಿರಾಂಪರ್ ॥೧೬೯॥

ಬನಮಂ ಕಿೞ್ತಿಂ ಪೌಲ ।
ಸ್ತ್ಯನ ಲಂಕಾಪುರಮನುರಿಪಿದಂ ನಿಮ್ಮ ಬೆಸಂ ॥
ತನಗಿಲ್ಲದಸುರನಂ ಕೊ ।
ಲ್ಲನೆ ತಾರನೆ ದೇವ ದೇವಿಯಂ ಹನುಮಂತಂ ॥೧೭೦॥

ಎಂದು ಬಿನ್ನವಿಸೆ ಸುಗ್ರೀವಾದಿಗಳ ಹನುಮನ ಭುಜಬಲಕ್ಕಿದಾವ ಗಹನಮೀತಂಗಸಾಧ್ಯಮಾವುದೆಂದು ಕೊಡು ಕೊನೆಯೆ ಮರುನ್ನಂದನಂ ರಘುನಂದನಂಗೆ ಮತ್ತಮಿಂತೆಂದ:

ಆಂ ನಿಮ್ಮ ಶುದ್ಧಿಯಂ ಪೇ- ।
ೞ್ದಿನ್ನ ಮಜ್ಜನನಿ ಜೀವಿತಾಶೆಯನಿೞಿಕೆ- ॥

ಯ್ದನ್ನತ್ಯಾಗಂ ಗೆಯ್ದಳ್ ।
ಮುನ್ನಾದರ್ ಸತಿಯರಿನ್ನರಾರೆಂಬಿನೆಗಂ ॥೧೭೧॥

ಅಸುರನ ಮಾಟ್ಪಿಪಕೃತಿಯಿಂ- ।
ದಸುವಂ ಬಿಡುವಂತುಟಕ್ಕುಮಂಬಿಕೆಗೆ ಬೞಿ- ॥
ಕ್ಕಸುರೇಂದ್ರನನಿಕ್ಕಿದೊಡ- ।
ಲ್ಲಿಸಾಧ್ಯಮೇಂ ತಕ್ಕುದಲ್ತು ಕಾಲಕ್ಷೇಪಂ ॥೧೭೨॥

ಎಂಬುದುಮಂಜನಾಸುತನ ಬಿನ್ನಪಮೆ ತನಗೆ ವೀರರಸಪ್ರವಾಹಿನಿಗೆ ಸೇತುವಾಗೆ,

ಈ ವಾರಾಶಿಯನೀಂಟಲೆನ್ನ ಬಡಬಾಸ್ತ್ರಂ ಸಾಲ್ವುದಾರಾಂತೊಡಂ
ಜೀವಾಕರ್ಷಣವಿದ್ಯೆಯಂ ಮೆಱೆವುದೆನ್ನೀ ಚಾಪದಮಡಂ ದಶ-
ಗ್ರೀವಂಗಣ್ಣನೆ ಸಾಲ್ವನಿಂ ತಡವುದೇತಕ್ಕೆಂದು ಸೌಮಿತ್ರಿ ಸು-
ಗ್ರೀವಂಗೆಂದನುದಂಚಿತಭ್ರುಕುಟ ಗಂಡೋದ್ಗಾರಿಘರ್ಮೋದಕಂ ॥೧೭೩॥

ಎಂಬುದುಮಾ ನುಡಿಗೊಡಂಬಟ್ಟು ಸುಗ್ರೀವಂ ರಣರಸೋದ್ಗ್ರೀವನಾಗಿ,

ತಡೆವನಿತೇಕೆ ನಾಳೆ ನಡೆವಂ ರಣಕೇಳಿಗೆ ಬಾಡಬಾಸ್ತ್ರಮಂ
ತುಡುವನಿತಚ್ಚಿಗಂ ನಿನಗದೇವುದೊ ಲಕ್ಷ್ಮಣದೇವ ನಮ್ಮ ಪೆ-
ರ್ಪಡೆ ಕಡಲಂ ನಭೋಗಮನವಿದ್ಯೆಯ ಸೇತುವೆನಲ್ಕೆ ದಾಂಟಿ ಮಾ-
ರ್ಪಡೆಯನದಿರ್ಪುಗುಂ ರಘುತನೂಜನೊಳಾಜಿಗೆ ಬರ್ಪ ಗಂಡರಾರ್ ॥೧೭೪॥

ಎನೆ ಸಿಂಹನಾದಂ ಸಿಂಹದಂತೆ ಗರ್ಜಿಸಿ,

ಒರ್ವನೆ ಪೋಗಿ ಕಿಚ್ಚು ಬನಮಂ ಪುರಮಂ ಸುಡೆ ಕಂಡು ತನ್ನ ದೋ-
ರ್ಗರ್ವಮನೊರ್ವರುಂ ಮೆಱೆಯಲಾಱರೆ ಮಾರುತಿಯನ್ನರಿಲ್ಲಿ ಸಾ-
ಸಿರ್ವರತರ್ಕ್ಯದೋರ್ವಲಯುತರ್ ಖಚರಾಧಿಪರಿರ್ದಪರ್ನಿಶಾ-
ಟರ್ವಯಲಿಂಗೆ ಬಂದಪರೆ ನಿಂದಪರೇ ರಣರಂಗಭೂಮಿಯೊಳ್ ॥೧೭೫॥

ಎನೆ ವಾಲಿದೇವತನೂಭವಂ ಚಂದ್ರಮರೀಚಿ ದಶನಮರೀಚಿ ವಿದ್ಯುನ್ಮರೀಚಿಯಂ ಪಳಂಚಲೆವಿನಮಿಂತೆಂದಂ :

ಮಾರುತಿ ಬುದ್ಧಿವೇೞ್ದೊಡಮದಂ ಬಗೆಗೊಳ್ಳನೆ ರಾಮನಂಬುಗ-
ಳ್ಸೂರಿಮುವೆಂಬಿದಂ ಬಗೆಗ ತಾರನೆ ಸಂಚಿತಪೂರ್ವಕರ್ಮದು-
ಷ್ಟೇರಣೆ ನೇರಿತಂ ನಡೆಯಲೀಗುಮೆ ದುರ್ಮತಿಯಪ್ಪ ರಾವಣಂ-
ಗೀ ರಣಕೇಳಿ ಮಾರಣಮನೀಯದೆ ಕೆಮ್ಮನೆ ಸಯ್ತು ಪೋಕುಮೇ ॥೧೭೬॥

ಅದೆಂತೆನೆ, ಸಾಧಿತಸಕಲವಿದ್ಯರಪ್ಪ ಗಗನಗತಿಯುಂ ಭೂತ ಪತಿಯುಂ ನಾಗರಾಜನುಮಶನಿವೇಗನುಂ ಮಹೇಂದ್ರನುಂ ಮೃಗೇಂದ್ರನುಂ ಭೀಮ ಕುಂಡಲನುಂ ಪ್ರಭಾಮಂಡಲನುಂ ಪ್ರಸ್ನಕೀರ್ತಿಯುಂ ತಟದ್ವಕ್ರನುಂ ವಜ್ರದಂಷ್ಟನುಂ ವಿದ್ಯುನ್ಮಾಲಿಯುಂ ರವಿಯುಂ ಕ್ರೂರನುಂ ಶೂರನುಮಂಗದನುಂ ನಳನುಂ ನೀಳನುಂ ಸುಷೇಣನುಂ ಮಂದರನುಂ ಜಾಂಬವನುಂ ಸಮೀರಣನುಂ ಸಿಂಹನಾದನುಂ ವರಾಹನುಂ ವಿರಾಧಿತನುಂ ಹನುಮನುಂ ಮತ್ತಂ ಪೆಱರಜೆಕೆಯ ವಿದ್ಯಾ ಬಲಗರ್ವಿತರಪ್ಪ ವಿದ್ಯಾಧರರೆಲ್ಲರುಂ ರಾಮಲಕ್ಷ್ಮಣರ ಬೆಸನನೆ ಪಾರುತ್ತುಮಿರ್ದರಿವರೊಲೊರ್ವೊರ್ವೆರೆ ಮಾರ್ಬಲಮಂ ಕೊಲಲುಂ ಗೆಲಲುಂ ಸಮರ್ಥ ರಿನ್ನೆಮಗೆ ಪೆಱತು ಮಂತಣಕ್ಕೆಡೆಯಿಲ್ಲೆನೆ ಕೇಳ್ದಿಲ್ಲರುಮಾತನ ಮಾತನೆ ಮನದೆಗೊಂಡು ವಿಜಯ ಪ್ರಯಾಣ ನಿಶ್ಚಿತಮಂತ್ರರಾಗಿರ್ಪುದುಮಾ ಸಮಯದೊಳ್,

ಕುಸಿದುವು ಕಿರಣಂಗಳ್ ಕಡು ।
ವಿಸಿಲಪೊಡರ್ಪುಡುಗೆ ವಂದನುಕ್ರಮದೊಳ್ತಂ ॥
ಬಿಸಿಲಾಯ್ತನಂತರಂ ಪೊಂ- ।
ಬಿಸಿಲಾದುದು ಪೊರ್ದೆ ಪಱ್ಕಿವೆಟ್ಟಮನರ್ಕಂ ॥೧೭೭॥

ತಪಸಿಗೆ ಪಿಂಗುವವೋಲಾ ।
ತಪಯೋಗಂ ತಿಣ್ಣಮಾದ ರಾಗೋದಯದಿಂ ॥
ತಪನಂಗೆ ಪಿಗಿದತ್ತಾ ।
ತಪಯೋಗಂ ತಿಣ್ಣಮಾಗೆ ಸಧ್ಯಾರಗಂ ॥೧೭೮॥

ಆವಂ ಗಡ ವಾರುಣಿಯಂ ।
ಸೇವಿಸಿ ನಾಣ್ಗೆಡದನುಟಿದನಂಬರಮಂ ರಾ- ॥
ಜೀವಸಖಂ ವಾರುಣಿಯಂ ।
ಸೇವಿಸಲೊಡಮಾತ್ಮತೇಜಮಸ್ತಮಿಸುವಿನಂ ॥೧೭೯॥

ದಶವದನನ ಪರಮಾಯು ।
ರ್ದಶೆಯುಂತಸ್ತಮಿಸೆ ಭಾನುಮಂಡಲಮಾಗಳ್ ॥
ದಶವದನನ ಪಟಿಯೆಂತಿರೆ ।
ದಶದಿಗ್ವದನಮುಮನುರ್ವಿ ಪರ್ವಿತ್ತು ತಮಂ ॥೧೮೦॥

ಕುಮುದಕ್ಕೆ ಮುಂದಹಾಸಂ ।
ಕಮನಿಸಿದುದು ಬಿಟ್ಟು ಬಂದು ಸರಸಿಜಮಂ ವಿ- ॥
ಭ್ರಮಿಸೆ ಸಿರಿ ತನ್ನೊಳಾಶ್ಚ- ।
ರ್ಯಮೆ ಜಡರನ್ಯಾಪಕರ್ಷದಿಂ ರಾಗಿಸರೇ ॥೧೮೧॥

ಕೋಕಮಿಥುನಂ ವಿಯೋಗೋ- ।
ದ್ರೇಕಂ ದೋಷಾನುಷಂಗದಿಂ ಸಮನಿಸೆ ಚಿಂ- ॥
ತಾಕುಲಿತಮಾದುದಾರ್ಗಂ ।
ವ್ಯಾಕುಲತೆಯನುಂಟುಮಾಟ್ಕುಮಿಷ್ಟವಿಯೋಗಂ ॥೧೮೨॥

ಅಂಬಿಜಿವಿಡಿವ ತಮೋದಾ ।
ನಾಂಬುವಿನೊಳ್ ಮುಳುಗಿ ನಿಂದ ನಭಮೆಂಬ ಮದ- ॥
ಸ್ತಂಭೇರಮಮಾಗಳ್ ಸಿ ।
ಬ್ಬಂಬೊಯ್ದವೊಲಡರೆ ತುಱುಗಿದುವು ತಾರಗೆಗಳ್ ॥೧೮೩॥

ಪೆಱತೆಗೆವ ತಮಂ ತಟ್ಟಿಮೆ ।
ದುಱುಗಲೆನಲ್ ಪೂರ್ವದಿಗ್ವಧೂವದನಂ ಕ- ॥
ಣ್ದೆಱೆದವೊಲದೇಂ ಬೆಳರ್ತು ದೊ- ।
ಕಿಱಿದೆಡೆ ತುಹಿನಾಂಶುಬಿಂಬಮುದಯಿಪ ಪದದೊಳ್ ॥೧೮೪॥

ಅನಂತರಂ ರೋಹಿಣೀರಮಣನುದಯಾಚಲ ಶಿಖಂಡಮಣಿಮಂಡನನೆನಿಸೆ,

ಜನಕಜೆಯ ವದನಮಂ ಸಿತ ।
ವನರುಹಮಂ ಚಂದ್ರಕಾಂತಮಣಿದರ್ಪಣಮಂ ॥
ನೆನೆಯಿಸಿದುದು ರಾಮಂಗಮ- ।
ರ ನದಿಯ ಕಲಹಂಸನಂ ಸುಧಾಕರಬಿಂಬಂ ॥೧೮೫॥

ಆ ಸಮಯದೊಳುದಾತ್ತರಾಘವನುಚಿತಸನ್ಮಾನದಾನಪುರಸ್ಸರಮಖಿಲ ವಿದ್ಯಾಧರಾಧಿರಾಜರಂ ಬೀಡಿಂಗೆ ಬೆಸಸಿ ನಿರ್ವರ್ತಿತ ಸಂಧ್ಯಾಸಮಯಂ ಶಯ್ಯಾಗ್ರಹಕ್ಕೆ ಬಿಜಯಂಗೆಯ್ದು ದುಕೂಲಪ್ರಚ್ಛದಾಚ್ಛಾದಿತ ವಿಶಾಲ ಹಂಸತೂಲ ತಲ್ಪತಲದೊಳ್ ಸುಖಪ್ರಸುಪ್ತನಿರೆ,

ಜಿನಪೂಜಾವಸರಂ ಪ್ರಭಾತಸಮಯಂ ದಿಗ್ಜೈತ್ರಯಾತ್ರಾ ವಿನೋ-
ದನದಿಂ ರಾಘವ ಮುಖ್ಯಮಂಗಳಮನಿಂ ತೀರ್ಚಲ್ಕೆ ಶಯ್ಯಾನಿಕೇ-
ತನದಿಂ ನೀನಿರದೇಳ್ವುದೆಂದು ಕರೆವಂತಾದತ್ತು ರಾಜಾಲಯಾ-
ಬ್ಜಿನಿಯೊಳ್ ಪೊಣ್ಮುವ ಹಂಸಸಾರಸರಥಾಂಗೋತ್ತಾನ ಕೋಳಾಹಳಂ ॥೧೮೬॥

ಮತ್ತುಮಿನಿಸಾನುಂ ಬೇಗದಿಂ,

ಕದನಮದೋದ್ಧತಂ ಮುಳಿದು ಲಕ್ಷ್ಮಣನಾರ್ದಿಡೆ ವಾಯುವೇಗದಿಂ
ತ್ರಿದಶವಿರೋಧಿಯಪ್ಪ ದಶಕಂಠನ ವಕ್ಷಮನುರ್ಚಿ ಪೋಗಿ ಪೊ-

ಣ್ಮೆದ ರುಧಿರಾಂಬುವಿಂದರುಣಮಾದ ಸುದರ್ಶನಚಕ್ರದಂತದೇ-
ನುದಯಿಸಿದತ್ತೊ ಸಾಂಧ್ಯಸಮಯಾರುಣಿತಂ ದಿನನಾಥಮಂಡಳಂ ॥೧೮೭॥

ಅಂತು ನೇಸಱ ಮೂಡುವುದುಂ,

ಬಳಭದ್ರಂ ವ್ಯವಹಾರಮಂಗಳಮನಾಜ್ಯಾವೇಕ್ಷಣಾದ್ಯುತ್ಸವಂ-
ಗಳನತ್ಯುತ್ಸವದಿಂದೊಡರ್ಚಿ ಜಿನಪೂಜೋತ್ಸಾಹಮಂ ಮುಖ್ಯಮಂ-
ಗಳಮಂ ಮಾಳ್ಪಿನುರಾಗಮಂ ಬಗೆಗೆ ತಂದಂ ಭಾರತೀಕರ್ಣಕುಂ
ಡಳನಪ್ರಾಕೃತನಪ್ರಮತ್ತ ಚರಿತಂ ಸಾಹಿತ್ಯವಿದ್ಯಾಧರಂ ॥೧೮೮॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಲಂಕಾಪುರದಹನ ವರ್ಣನಂ
ಏಕಾದಶಾಶ್ವಾಸಂ



## ೧೨. ಲಂಕಾದಿಗ್ವಿಜಯಪ್ರಯಾಣ ವರ್ಣನಂ

ಶ್ರೀಗೆ ನೆಲೆಯಿನಪ ನಿಜಶ- ।
ಯ್ಯಾಗೃಹದಿಂ ಸ್ನಪನರತ್ನಮಂಟಪವೇದೀ- ॥
ಭಾಗಕ್ಕೆ ಪದತಳಂಗಳ್।
ರಾಗಮನೋಲಗಿಸೆ ಬಂದನಭಿನವಪಂಪಂ ॥೧॥

ಅಂತು ಬಂದು

ಸ್ನಪನಪವಿತ್ರಂ ಶುಚಿ ವ-
ಸ್ತ್ರ ಪೂತಗಾತ್ರಂ ಪ್ರದಾನಮಂತ್ರ ವಿಧಾನಾ- ॥
ದ್ಯುಪಚರಿತಾಚಮನಂ ಪಂ- ।
ಚಪರಮಗುರುಗರ್ಘ್ಯವೆತ್ತಿದಂ ರಘುರಾಮಂ ॥೨॥

ತದನಂತರಂ ಮಹಾಪ್ರವಾಹಿನೀಸಲಿಲಸಮ್ಮಿಶ್ರಕರ್ಪೂರದಳಬಹುಳ ಕಾಂತಿವಂತುರಿತ ಚಂದ್ರಕಾಂತಿ ಕಳಶಂಗಳಿಂ ಸುರಭಿ ಮಲಯರುಹ ಪಂಕಪಿಂಜರಿತ ಶುಕ್ತಿಕೆಗಳಿಂ ಸಜಳಧವಳಕಳ-ಮಾಕ್ಷತ ಕ್ಷೀರಗೌರ ಪಾಂಡುರಿತ ಕರ್ಕೇತನಕರಂಡಕಂಗಳಿಂ ನವೀನಪ್ರಸೂನ ಮಧುವಿಲೀನ ಮಧುಕರ ಪಟಲಕರ್ಬುರಿತ ರತ್ನಪಟಲಿಕೆಗಳಿಂ ಸುಪಕ್ವಭಕ್ಷ್ಯೋಪದಂಶಪ್ರಚುರ ಚಾರು ವಿಚಿತ್ರ ವರ್ಣ ಶಬಲಿತಸುವರ್ಣ ಪರ್ಯಣಂಗಳಿಂದುನ್ಮುಖ ಮಯೂಖ ಮಾಣಿಕ್ಯದೀಪಕಿರಣಾ-ರುಣಿತ ಮರಕತಮಣಿ ಪುತ್ರಿಕೆಗಳಿಂ ಬಹುಳ ಕಾಳಾಗರು ಧೂಮಾಶ್ಯಾಮಲಿತ ಕಲಧೌತಧೂಪ-ಪಟಲಂಗಳಿಂ ಕ್ಷೀರಾದಿಸವನ ಪಾವನರಸ ವಿಚಿತ್ರಿತ ಶಾತಕುಂಭಂಗಳಿಂ ಗಂಧಸಲಿಲ ಸಂಭೃತ ವಿಶಾಲ ಹರಿನೀಲ ಭೃಂಗಾರಂಗಳಿಂ ನಿಜಪ್ರಭಾಪಟಲಪಲ್ಲವಿತಶೋಣಮಣಿಕಳಶಂಗಳಿಂ ಸ್ಫಟಿಕಮಣಿ ಕಿರಣಜಾಲಜಟಿಲಿತ ಮಧ್ಯರಂಗದಿಂ ಸಂಗೀತಕರಸತರಂಗಿತ ಬಾಹ್ಯರಂಗದಿಂ ಸ್ಥೂಲಮುಕ್ತಾಫಲ ಮುಕುಳಿತ ವಿವಿಧರಂಗವಲ್ಲಿಯಿಂ ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು ದರ್ಶನಸ್ತವನಮುಖರ ಮುಖಂ ಯಥಾವಿಧಿಯಿನಭಿಷವಮಂ ತೀರ್ಚಿ,

ಸಿರಿಕಂಡದ ಕೋಟ್ಟಿಸಜಿಳೊಳ್ ।
ಬೆರಸಿದ ಕತ್ತುರಿಯ ಸಾರವಣೆ ಬೆಳಗಿದ ಕ- ॥

ಪ್ಪುರವಳಿಕಿನ ಸೊಡರ್ಗಳ್ ಸೌಂ ।
ದರಮೆನೆ ಜಿನಪತಿಯನವನಿಪತಿ ಪೂಜಿಸಿದಂ ॥೩॥

ಸುರಹೊನ್ನೆಯ ವಾಸಂತಿಯ ।
ಸುರಯಿಯ ಚಂಪಕದ ಕರ್ಣಿಕಾರದ ಪೊಂದಾ- ॥
ವರೆಯ ವಿಚಕಿಲದ ನಸುಬಿರಿ- ।
ದರಲಿಂದರ್ಚಿಸಿದನವನಿಪತಿ ಜಿನಪತಿಯಂ ॥೪॥

ಚಾರು ಚರುನಿಚಯದಿಂ ಘನ ।
ಸಾರಾಗರುಧೂಮಾಲೇಖೆಯಿಂ ಮಲಯಜಕಾ- ॥
ಶ್ಮೀರರಸದಿಂ ಜಿನೇಂದ್ರನ- ।
ನಾರಾಧಿಸಿದಂ ನರೇಂದ್ರ ಚೂಡಾರತ್ನಂ ॥೫॥

ಬಾಳೆಯ ಮಾವಿನ ಕಮ್ಮರ- ।
ದೀಳೆಯ ತನಿವಣ್ಗಳಿಂದಮರ್ಚಿಸಿದಂ ಭೂ- ॥
ಪಾಳಂ ನಿರ್ಭರಭಕ್ತಿಯ- ।
ಜಾಳಕಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್ ॥೬॥

ಚರು ಮಣಿಪರ್ಯಣಕ್ಕೆ ಬಿಡುಮುತ್ತಿನ ಸೇಸೆಗೆ ಧೂಪಬಾಜನ-
ಕ್ಕರುಣಮಣಿಪ್ರದೀಪಿಕೆಗೆ ದಿವ್ಯಫಲಕ್ಕೆ ನಮೇರು ಪುಷ್ಪಮಂ-
ಜರಿಗೆ ಸುಗಂಧಶುಕ್ತಿಕೆಗೆ ಪುಣ್ಯನದೀಜಲಪೂರ್ಣರತ್ನಭಾ-
ಸುರಕಳಶಕ್ಕೆ ಮೇರೆ ಪವಣೆಲ್ಲೆನೆ ಪೂಜಿಸಿದಂ ರಘೂದ್ವಹಂ ॥೭॥

ಎನಿತೊಳವಾತಪವಾರಣ- ।
ಮೆನಿತೊಳವು ವಿಚಿತ್ರಪಲ್ಲವಾಂಚಿತ ಮಣಿಕೇ- ॥
ತನಮೆನಿತೊಳವಾಭರಣಮ- ।
ವನಿತಱೊಳಂ ರಘುತನೂಭವಂ ಪೂಜಿಸಿದಂ ॥೮॥

ಅಗರುವ ಧೂಮಲತಾ ಶಾ-
ಖೆಗೆಳೆಳಗಾಯ್ದು ಜುಗಲೆಂದು ಬಗೆ ಬೆದಱುವಿನಂ ॥
ಮಗಮಗಿಸುವ ತನಿಗಂಪಿಂ- ।
ಗಗಲದೆ ಮೊಗಸಿದುವು ಮಧುರಪ್ರಕರಂಗಳ್ ॥೯॥

ಮರಕತಕಳಶಂಗಳ್ ಕೇ- ।
ಸರಿಪೀಠಮನುದ್ಗತಾಂಶು ಲೇಖಾದೂರ್ವಾಂ- ॥

ಕುರದಿಂದರ್ಚಿಸೆ ಮುಕ್ತಾ- ।
ಭರಣ ಮನರ್ಚಿಸಿದನಂಬು ಜಳಧಾರೆಗಳಿಂ ॥೧೦॥

ಅಂತರ್ಚಿಸಿ ರಾಮಚಂದ್ರಂ ಜಿನೇಂದ್ರಮುಖಚಂದ್ರನಿರೀಕ್ಷಣ ಹರ್ಷಪುಳಕಿತ ಸರ್ವಾಂಗನಾನಂದಬಾಷ್ಪಸಲಿಲಲುಳಿತ ವಿಳೋಚನಂ ನಿಟಲತಟಘಟಿತ ಕುಟ್ಮಳಿತಾಂಜಲಿಪುಟಂ ನಮಿತಶಿರಸ್ಸರೋಜಂ ಗಂಧಸಲಿಲಶೇಷಾಕ್ಷತ ಕುಸುಮಶೇಖರಂ ಜಿನಚರಣ ಚಂದನತಿಳಕ ವಿಲಸಿತೆ ವದನಾರವಿಂದನುಚ್ಚರಿತ ಪುನರ್ದರ್ಶನ ವಾಕ್ಯಮಾಣಿಕ್ಯ ಕಂಠಾಭರಣಂ ಜಿನಚರಣಮಂ ಬೀಟಿಕ್ಕೊಂಡು ಜಿನಪೂಜಾಗೃಹ ಪುರೋಭಾಗದ ಚವುಪಳಿಗೆಯೊಳುತ್ತುಮಮಣಿಮಯಾಸನಾಸೀನಂ ಸುರಭಿ ಕುಸುಮದಾಮ ಸುಗಧಾನುಲೇಪನ ದಿವ್ಯವಸನದಿವ್ಯಾಭರಣ ಭೂಷಿತನಪ್ಪುದುಂ,

ಪೂತ ನಮೇರು ಸುತ್ತಿದಳಿಮಂಡಳಿಯಿಂ ರಜತಾದ್ರಿ ನೀಳಜೀ-
ಮೂತ ಕದಂಬದಿಂ ಸುರಗಜಂ ಮದವಟ್ಟೆಯಿನಾರ ದಿಟ್ಟಿಗಂ
ಪ್ರೀತಿಯನುಂಟುಮಾಳ್ಪಿವೊಲದೇಸೆಸೆದಿರ್ದನೊ ದೇಹದೀಪ್ತಿ ಚಂ-
ದ್ರಾತಪಮಂ ಪಳಂಚಲೆಯೆ ನೀಳಪರಿಚ್ಛದದಿಂ ಹಲಾಯುಧಂ ॥೧೧॥

ಎಱಗಿಸಿ ಪಂಚರತ್ನರುಚಿಯಿಂ ಸುರಚಾಪದ ಚೆಲ್ವನಟ್ಟಿಱೆಂ
ದೆಱಗಿಸಿ ನೋಟ್ಪ ನೋಟಕರ ಲೋಚನಪುತ್ರಿಕೆಯಂ ಪೆಱರ್ಗೆ ತಾ-
ನೆಱಗದೆ ಪೆರ್ಮೆಯಂ ತಳೆದುದೆಂದೊಡೆ ಬಣ್ಣಿಪರಾರ್ ಜಿನೇಶ್ವರಂ-
ಗೆಱಗಿ ಮಹತ್ತ್ವಮಂ ಪಡೆದ ರಾಘವರತ್ನಹಟತ್ಕಿರೀಟಮಂ ॥೧೨॥

ಮರಕತಮಣಿಕುಂಡಲರ- ।
ಶ್ಮಿರೇಖೆಯಿಂ ಗಂಡಮಂಡಳಂ ಸೇವಾಳಂ ॥
ಬೊರೆದ ಧವಳಾಬ್ಜದಂತಿರೆ ।
ಕರಮೆಸೆದಂ ಕಣ್ಗೆ ನೃಪತಿಚೂಡಾರತ್ನಂ ॥೧೩॥

ಫಣಮೈದಂ ಪಡೆದಂ ತನ- ।
ಗೆಣೆವಡೆದಂ ಶೇಷನುರ್ವಿಯಂ ತಾಳ್ದನೆನಲ್ ॥
ಮಣಿಮುದ್ರೆಯ ಫಣಮಣಿ ಕ- ।
ಣ್ಗೊಣರಂ ತಣಿಪಿದುದು ಭುಜಯುಗಂ ರಘುಸುತನಾ ॥೧೪॥

ತರುಣಮೃಣಾಲಗರ್ಭರುಚಿವೆತ್ತ ರಘೂದ್ಭವದೇಹದೀಪ್ತಿಮಂ-
ಜರಿಯನುಪಾಶ್ರಯಂಬಡೆದು ನಿಸ್ತುಲಮೌಕ್ತಿಕಹಾರಯಷ್ಟಿ ಪೇ-
ರುರದೊಳದೇಂ ವಿರಾಜಿಸಿದುದೋ ಜನತಾನಯನೋತ್ಪಲೋತ್ಸವಂ
ಶರದದ ಸಾಂದ್ರ ಚಂದ್ರರುಚಿಯೊಳ್ತಲೆದೋಱುವ ತಾರಕಾಳಿವೋಲ್ ॥೧೫॥

ಅನಂತರಮಲ್ಲಿಂ ತಳರ್ದು,

ಚಮರರುಪಂಗಳಂ ತನಗರಚ್ಕಿಲದೊಳ್ನಡೆತಂದು ಖೇಚರ-
ಪ್ರಮದೆಯರಿಕ್ಕೆ ಬೆಳ್ಗೊಡೆ ಸುಧಾಕರನಂ ಕೆಳಿಚಾಡೆ ಮಾಡೆ ರಾ-
ಗಮನೆಳೆವಣ್ಗೆ ಕೇಸಡಿಯ ಕೆಂಪು ತನುಪ್ರಭೆ ಬೀಱೆ ಚಂದ್ರಿಕಾ-
ಭ್ರಮೆಯನಿಳಾಧಿಪಂ ನಡೆದನೋಲಗಸಾಲೆಗದೊಂದು ಲೀಲೆಯಿಂ ॥೧೬॥

ಅಂತು ಬಂದು ತನ್ನ ಧ್ಯಸ್ಪಟಿಕಘಟಿತವೇದಿಕಾ ಶಿಖಂಡಮಂಡನಮೆನಿಸಿರ್ಪ ಸಿಂಹಪೀಠದೊಳಮೋಘಬಾಣನಪ್ಪುದಾತ್ತ ರಾಘವನುಮಧಿರಾಜಪಾರ್ಶ್ವ ಮಣಿಮಯಾಸನದೊಳ್ ಸಾಗರಾವರ್ತಧನುರ್ಜ್ಯಾಲತಾ ತಾಡನ ಜನಿತಕಿಣ ಕಳಂಕಾಂಕಿತ ಪ್ರಕೋಷ್ಠನಪ್ಪ ಲಕ್ಷ್ಮಣನು ಮತ್ರಿಪುತ್ರನಂ ಬಳಸಿದ ನಕ್ಷತ್ರ ಮಂಡಳದಂತೆ ವಿವಿಧ ಮಣಿಕುಂಡಳಮರೀಚಿ ನಭೋಮಂಡಳಮನಾವರಿಸೆ ಸೇನಾಪ್ರಧಾನರ್ ಸಮುಚಿತಾಸನದೊಳ್ ಸುಗ್ರೀವಾಂಗದ ನಳ ನೀಲ ಜಾಂಬದ ಹನುಮತ್ಪ್ರಮುಖನಿಖಿಳಖಚರ ಪರಿವೃಢರುಮಿರ್ಪುದುಮಾ ಸಮಯದೊಳ್ಪುರೋಹಿತನುಚ್ಚರಿತಸ್ವಸ್ತಿ ಶಬ್ದಂ ದೇವ ದಿಗ್ವಿಜಯ ಪ್ರಯಾಣಲಗ್ನಮತ್ಯಾಸನ್ನಮೆಂದು ಬಿನ್ನವಿಸೆ ಸೇನಾಪ್ರಧಾನಂ ನಳಂ ವಿಜಯಪ್ರಯಾಣ ದುಂದುಭಿಯಂ ಪೊಯ್ಸುವುದುಂ,

ಲಂಕಾಧೀಶ್ವರ ಕಾಳೆಗಂ ನಿನಗೆ ಲೇಸಲ್ತೆಂತೆನಲ್ ವಾಸುದೇ-
ವಂ ಕೊಲ್ವಂ ಪ್ರತಿವಾಸುದೇವನನಿದೇಂ ಸಂದೇಹಮೇ ಸೀತೆಯಂ
ನೀಂ ಕೊಟ್ಟಟ್ಟು ಬರ್ದುಂಕಲಾಟಿಸುವೊಡೆಂಬಂ ತಪ್ಪ ದಿಗ್ಭಿತ್ತಿಗಂ
ಧೀಂಕಿಟ್ಟತ್ತು ರಘುಪ್ರವೀರವಿಜಯಪ್ರಸ್ಥಾನ ಭೇರೀರವಂ ॥೧೭॥

ಕುಲಶೈಲಂಗಳ ಪದ್ಮಿನೀಕುಲದ ದೇವೀಸಂಕುಲಂ ಬೆರ್ಚಿ ಪೆ-
ಳ್ಪಳಿಸುತ್ತುಂ ದೆಸೆಯಾನೆ ಬೆರ್ಚಿ ಕಿವಿಯಂ ಮಾರ್ತಂಡಸಪ್ತಾಶ್ವಮಂ-
ಡಳಿ ಶಂಕಾಕುಳಿತಂ ಪೆಡಂಮಗುಟೆ ಶಕ್ರಾಲಿಂಗನಂಗೆಯ್ಯೆ ಸಂ-
ಚಲಿಸುತ್ತಂ ಶಚಿ ಘೂರ್ಣಿಸಿತ್ತು ರಘುಜಪ್ರಸ್ಥಾನ ಭೇರೀರವಂ ॥೧೮॥

ಬಲಭದ್ರನ ನಿರ್ಮಳಕೀ- ।
ರ್ತಿಲತಾಕಂದಳಮೆನಿಪ್ಪ ಪನ್ನೆರಡುಂ ಮಂ- ॥
ಗಲಶಂಖಂಗಳ ದನಿಗ- ।
ಳ್ಕುಳಗಿರಿಕುಂಜದೊಳೊಡರ್ಚಿದುವು ಮಾರ್ದನಿಯಂ ॥೧೯॥

ಭೋರೆನೆ ಪೊಯ್ವುದುಮಾಱುಂ ।
ಸುರಿವಪ್ಪುವು ರಜತಶಿಖರಿಶಿಖರದೊಳೆನೆ ಖೇ- ॥
ಚರಿಯರ್ಮುತ್ತಿನ ಸೇಸೆಯ- ।
ನರಸಂಗಿಕ್ಕಿದರಪಾಂಗಮಾಲಾ ಸಹಿತಂ ॥೨೦॥

ದಧಿ ತಿಲಕಪುರಸ್ಸರಮಖಿ ।
ಳ ಧರಾಧೀಶಂಗೆ ನೀಡಿದಳ್ಮತ್ತೊರ್ವಳ್ ॥
ವಿಧುವದನೆ ದರಸ್ಮಿತಮಂ ।
ಮಧುಕರಝುಂಕಾರಮುಖರಮಂ ಬಾಸಿಗಮಂ ॥೨೨॥

ಅಗಳಖಿಳಜಯಯಧ್ವನಿವೆರಸು ಕುಲವೃದ್ಧಕುಲಾಂಗನಾ ಜನದಾಶೀರ್ವಾದಮೊದವೆ ಸಿಂಹವಿಷ್ಟರದಿನೆಟ್ಟು,

ಇರದೊಡನೆಟ್ಟಿ ವಿಯಚ್ಚರ ।
ಪರಿವೃಢರ ಕಿರೀಟರತ್ನರುಚಿಗಳ್ಗಗನೋ- ॥
ದರಮಂ ಚಿತ್ರಿಸೆ ತಳರ್ದಂ ।
ನಿರಂಕುಶಂ ಲಕ್ಷ್ಮಣಾನ್ವಿತಂ ರಘುವೀರಂ ॥೨೩॥

ಮಂಡಳಿಸಿದತ್ತು ನಿಜರುಚಿ ।
ಮಂಡಳಮಾಗಸದೊಳೆಂಬಿನಂ ಬೆಳ್ಗೊಡೆ ಕ- ॥
ಣ್ಗೊಂಡು ಪರಿಭವಿಸಿದುದು ಶಶಿ।
ಮಂಡಳಮಂ ಬಂದು ಕಂಡ ಬೆಳ್ದಾವರೆಯಂ ॥೨೪॥

ಪದಿನಾಱುಂ ಚಮರಜಮಂ ।
ಪದಿನಱುವರ್ ಖಚರಕನ್ನೆಯರ್ಪೂಗುಡಿ ಪೇ - ॥
ರ್ಚಿದ ಜಂಗಮಲತೆಗಳೆನಲ್ ।
ಬಿದಿರ್ದಿಕ್ಕಿದರೊಡನೆ ಮದನನಂಬಿಕ್ಕುವವೋಲ್ ॥೨೫॥

ಎಸೆದುದು ಮಂಗಳಾನಕಘನಧ್ವನಿ ಮಂಗಳ ಪಾಠಕಸ್ವನಂ
ಪಸರಿಸಿದತ್ತು ಪೂರ್ಣಕಳಶಂ ಗುಡಿ ವಂದನಮಾಲೆ ಮುಂದೆ ಸಂ -
ಧಿಸಿದುವು ಗಾಯಿನೀಮಧುರಮಂಗಳಗೀತರವಂ ಮನಕ್ಕೆ ಸಂ-
ತಸದೊದವಂ ನಿಮಿರ್ಚಿದುದು ರಾಘವದಿಗ್ವಿಜಯಪ್ರಯಾಣದೊಳ್ ॥೨೬॥

ಕಳಶಕುಚಂ ಕದಕ್ಕಿದಿಸೆ ಕೋಮಲೆಯರ್ ಶಶಿಕಾಂತ ಕಾಂತಮಂ-
ಗಳಕಳಶಂಗಳಂ ತಳೆದು ಮಂಗಳದರ್ಪಣಪಲ್ಲವಾಸಕಂ-
ಗಳನುಡೆನೂಲ ನೂಪುರದ ಮೆಲ್ಲುಲಿ ಕೆಯ್ಮಿಗೆ ಪುಣ್ಯದೇವತಾ-
ಕುಳಮನೆ ಗಾಡಿವೆತ್ತು ನಡೆದರ್ ಮನುವಂಶ ಜಯಪ್ರಯಾಣದೊಳ್ ॥೨೭॥

ದುಗುಲದ ಗುಡಿಗಳ ಬೆಂಬಿಡಿ ।
ದು ಗಾಳಿ ತಣ್ಪಡಿದು ತೀಡೆ ಕೈಸನ್ನೆಗಳಿಂ ॥

ಪಗೆವರ್ ಬೆಂಗುಡಿಮೆಂಬಂ ।
ತೊಗೆದುವು ಮನುವಂಶಮಂಡನಂ ನಡೆವೆಡೆಯೊಳ್ ॥೨೮॥

ಎರಡನೆಯ ಸೂರ್ಯಹಾಸದ ।
ಪರಿಜಂ ಕೈಕೊಂಡು ಲಕ್ಷ್ಮಣಂ ಬಲಗೆಲದೊಳ್ ॥
ಬರೆ ಬಂದಂ ನಿಜಪಾಂಡುರ ।
ಮರೀಚಿ ಕಣ್ಗೊಳಿಸೆ ರೋಹಿಣೀರಮಣನವೋಲ್ ॥೨೯॥

ಅಂಗದ ಭುಜಶಿಖರದ ರ ।
ತ್ನಾಂಗದಮಂ ನಖಮಯೂಖಮಾಲಿಕೆಯಿಂ ಚಿ- ॥
ಲ್ವಿಂಗೆ ನೆಲೆಮಾಡಿ ನಡೆದಂ ।
ಜಂಗಮತಾರಾದ್ರಿಯೆಂಬಿನಂ ಬಲಭದ್ರಂ ॥೩೦॥

ಅಂತು ರಾಜಭವನದಿಂ ಪೊಱಮಟ್ಟು ಪುರೋಭಾಗಕ್ಕೆವಂದು,

ಮುನಿಜನದ ಬಂಧುಜನದಭಿ ।
ಜನದಬಲಾಜನದ ಪರಕೆಗಳ ಕಿವಿಯಂತೆ- ॥
ಕ್ಕನೆ ತೀವೆ ರಥಮನೇಱಿದ ।
ನಿನವಂಶಜನೇಱಿ ವಿಜಯವಧು ನಿಜಭುಜಮಂ ॥೩೧॥

ಆ ಸಮಯದೊಳ್ ನಳ ನೀಲ ಸುಷೇಣ ಪ್ರಸನ್ನಕೀರ್ತಿ ಪ್ರಮುಖ್ಯ ನಾಯಕರಂ ಸೇನಾಮುಖಕ್ಕೆ ಪೇೞ್ದು ಸುಗ್ರೀವಾಂಗದ ಜಾಂಬೂನದ ಗಗನಪತಿ ಭೂತಗತಿ ಪ್ರಭೃತಿಗಳಂ ಪಶ್ಚಿಮಪ್ರದೇಶದೊಳ್ ನಿಯೋಜಿಸಿ ತಟದ್ವಕ್ತ್ರ ವಜ್ರದಂಷ್ಟ್ರ ವಿರಾಧಿತ ಮಹೇಂದ್ರ ಮೊದಲಾಗೆ ಪಲರುಮಂ ಬಲವಕ್ಕದೊಳ್ ನಿಲಿಸಿ ಮಂದರ ಸಮೀರ ಸಿಂಹನಾದ ವರಾಹಕರನೆಡವಕ್ಕದೊಳ್ ಪೇೞ್ದು ಸೌಮಿತ್ರಿ ಸಕಲವಿದ್ಯಾಧರ ಕುಮಾರರ್ವೆರಸು ತಾನುಂ ಹನುಮನುಂ ದಾಶರಥಿಯ ರಥೋಭಯ ಪಾರ್ಶ್ವದೊಳ್ ರಥಾರೂಢರ್ ಮೆಯ್ಗಾಪಾಗಿ ನಡೆವುದುಂ,

ನಡೆಗೊಂಡತ್ತು ಮದೇಭದಾನಜಳಧಾರಾಸಾರದಿಂ ಮಾರುತಂ
ನಡೆಗೆಟ್ಟರ್ಪಿನಮುತ್ಪತಾಕೆಗಳಿನಾಕಾಶಾಪಗಾವೀಚಿ ನೂ-
ರ್ಮಡಿಸುತ್ತಿರ್ಪಿನಮಸ್ತ್ರಶಸ್ತ್ರಪಟಳಪ್ರದ್ಯೋತದಿಂದಂ ಪಗ-
ಲ್ಕಡು ಕೊರ್ವಂ ಪಡೆದಿರ್ಪಿನಂ ರಘುತನೂಜಾಖರ್ವ ಚಾತುರ್ಬಲಂ ॥೩೨॥

ಕರಿತುರಗರಥಪದಾತಿಯ ।
ಪರಿಸಂಖ್ಯೆಯನಱಿಯೆನಲ್ಲಿ ಕೇತನಪಟಸಂ- ॥
ಚರಣಕ್ಕೆ ನಭಂ ಭಟಸಂ ।
ಚರಣಕ್ಕೆ ಧರಿತ್ರಿ ನೆಱೆಯದೆಂಬಿದನಱಿವೆಂ ॥೩೩॥

ನಿಜತೇಜಂ ಪೊಱಗಾಗೆ ಸೈರಿಪನೆ ರಾಮಸ್ವಾಮಿಯೆಂಬಂತೆ ನೀ-
ರಜಮಿತ್ರಪ್ರಭೆಯಂ ಪಳಂಚಲೆದು ಸೀತಾದೇವಿಯಂ ಕೊಂಡು ಪೋ -
ದ ಜಗತ್ಕಂಟಕ ತೇಜಮಿರ್ದದೆಸೆಯಂ ಪೊಟ್ಟಿಂತು ಪತ್ತುಂದಿರಾ
ವ್ರಜಮಂ ಪೊಟ್ದಿ ಪೊದಟ್ದಿಕೊರ್ವುವೊಡೆದತ್ತುತ್ತಾನ ಸೇನಾರಜಂ ॥೩೪॥

ತೆಣಱುತ್ತುಂ ತಲೆಮಟ್ಟು ತಾಳ್ದಿ ಧರೆಯಂ ಸೇನಾಭರಾಕ್ರಾಂತದಿಂ
ಫಣಿರಾಜಂ ನಡುನೆತ್ತಿ ಪೊತ್ತಿ ಕಿಡಿವಿಟ್ಟಂತಿರ್ದುದಾಗಳ್ ಫಣಾ-
ಮಣಿಚಕ್ರಂ ವಿಷವಹ್ನಿಧೂಮಪಟಲಂ ನಿಶ್ವಾಸನಿರ್ಯತ್ಸಮಿ-
ರಣನಿಂ ಪೂರಿಸಿದಂತಿರಿರ್ದುದು ಫಣಾಚಕ್ರಾಂಕಿತಂ ಸ್ವಸ್ತಿಕಂ ॥೩೫॥

ಅಂತಸಂಖ್ಯಾತಸೇನಾಸಮುದ್ರಂ ದಕ್ಷಿಣಸಮುದ್ರಾಭಿಮುಖಮಾಗಿ ನಡೆದು,

ವೇಲಾಂಧ ನಗನಿತಂಬದ ।
ವೇಲಾಂಧಪುರೋಪಕಂಠಮಂ ಸಾರ್ದುದು ಭೂ- ॥
ಪಾಲಸ್ಕಂಧಾವಾರಂ ।
ವೇಲಾವನ ವೀಧಿಯಿಲ್ಲ ದಂಭೋನಿಧಿವೋಲ್ ॥೩೬॥

ಅಗಳಾ ಪುರಾಧಿಪತಿ ಚತುರಂಗಸೇನಾಸಮನ್ವಿತಂ ಸಮುದ್ರವೆಸರ ವಿದ್ಯಾಧರಂ ಮುಂದೆ ನಡೆದ ನಳನ ಪಡೆಗೆ ರಣಾನುರಾಗದಿನಡ್ಡಂಬಂದು ನಿಲ್ವುದುಂ,

ಭ್ರುಕುಟಿ ಲಲಾಟದೊಳ್ತನಗೆ ತೋಱದ ಮುನ್ನಮಿದಿರ್ಚಿದನ್ಯಸೈ-
ನಿಕಮನದಿರ್ಪೆ ತನ್ನ ಪಡೆ ತನ್ನಪರಾಕ್ರಮಗರ್ವದುರ್ವು ಕೌ-
ತುಕಮೆನೆ ಕಟ್ಟಿದಂ ಖಚರನಾಯಕನಪ್ಪ ಸಮುದ್ರನಂ ಭಯಾ-
ನಕರಸಮುದ್ರನಂ ನಳನರಾತಿ ಬಳಾರ್ಣವಬಾಡವಾನಳಂ ॥೩೭॥

ಅತಿಗಂಭೀರನನರ್ಘ್ಯರತ್ನ ಕಟಕಾಧಾರಂ ಮಹಾವಾಹಿನೀ-
ಪತಿ ಲಕ್ಷ್ಮೀನಿಳಯಂ ನಿಸರ್ಗವಿಭು ಮರ್ಯಾದಾಪರಂ ಲೋಕವಿ-
ಶ್ರುತಸೀಮಾಂತನವಂ ನಿಮಿರ್ಚಿದ ಸಮುದ್ರಂ ಯುದ್ಧದೊಳ್ಬಂಧನ-
ಸ್ಥಿತಿನಾದಂ ತಲೆವಿಲ್ಲೊಳೆಂದೊಡೆ ನಳಂ ಗಂಡಂ ಪೆಱಂ ಗಂಡನೆ ॥೩೮॥

ಅಂತಾತನಂ ತಂದು ನಳಂ ತನಗೊಪ್ಪಿಸುವುದುಂ ಬಲಭದ್ರಂ ಸಮುದ್ರಂಗಭಯಮಂ ಕೊಟ್ಟು ಮನ್ನಿಸೆ ಮಱುದಿವಸಮಾತಂ ತನ್ನ ಸುತೆಯರಂ ಸತ್ಯಶ್ರೀ ಕಮಲೆ ಗುಣಮಾಲೆ ರತ್ನ ಚೂಳಿಕೆಯಂಬ ನಾಲ್ವರಂ ಲಕ್ಷ್ಮಣಂಗೆ ಕೊಟ್ಟು ವೈವಾಹಿಕ ಸಂಬಂಧದಿಂ ಭೃತ್ಯಪದಮನಪ್ಪುಕೆಯ್ದು ಪೂರ್ವಪದಮಂ ಪಡೆದು ಮಱುದಿವಸಮಲ್ಲಿಂದೆತ್ತಿ ನಡೆವಾಗಳ್,

ಅಡಿಗೆಱಗಿ ಸುವೇಳಾಚಲ ।
ದೊಡೆಯಂ ಖಚರಂ ಸುವೇಳನೆಂಬಂ ತನ್ನು- ॥
ಳ್ಳೊಡಮೆಯನಿತ್ತಿಱೆವಿಟ್ಟಗೆ ।
ನಡೆದಂ ರಘುಜನ ಬಲಕ್ಕೆ ಮಾರ್ಬಲಮುಂಟೇ ॥೩೯॥

ಅಂತಂದಿನ ದಿವಸಂ ಸುವೇಳಾಚಲದೊಳಿರ್ದು ಮಱುದಿವಸಂ ಲಂಕಾ ದ್ವೀಪದ ಸಮೀಪಮಪ್ಪ ಹಂಸದ್ವೀಪಮನೆಯ್ದೆ ವರ್ಪುದುಮಾ ದ್ವೀಪಾಧಿಪತಿ ನಭಶ್ಚರನಸಂಖ್ಯಾತ ಬಲಸಮೇತನಾಗಿ ತಾಗುವುದುಂ,

ಅನುವರದೊಳ್ ಹಂಸದ್ವೀ ।
ಪನಾಥನಂ ದ್ವೀಪಿ ರಥನನಂಜಿಸಿ ದಂಡೋ- ॥
ಪನತಂ ಮಾಡಿದ ಯಮದಂ ।
ಡ ನಿಭಮದಾರಳವೊ ನಳನ ಬಾಹಾದಂಡಂ ॥೪೦॥

ಅಂತಾ ದ್ವೀಪದೊಳ್ಬೀಡಂ ಬಿಟ್ಟು ಲಕ್ಷ್ಮೀಧರಂ ಪ್ರಭಾಮಂಡಲಂಗೆ ಬೞಿಯನಟ್ಟಿ ಪೆಱವುಂ ದ್ವೀಪಾಂತರವಿದ್ಯಾಧರಾಧಿರಾಜರನಾಜ್ಞಾವಿಧೇಯರಂ ಮಾಡುತ್ತುಮಿರ್ಪಿನಮಿತ್ತಲ್,

ಅರುಣಮಣಿಪ್ರಭಾಪಟಲದಿಂದರುಣಾತಪಮಂ ತಗುಳ್ದು ಬಿ-
ತ್ತರಿಸುವ ಸಿಂಹಪೀಠದೊಳದೇನೆಸೆದಿರ್ದನೊ ರಾಹುಮಂಡಳಂ
ತರುಣದಿನೇಶಮಂಡಳಮನಾವರಿಸಿರ್ದವೊಲಿಂದ್ರನೀಲಭಾ-
ಸುರತರ ದೇಹದೀಪ್ತಿ ಪುದಿವಂತು ದಿಶಾನನಮಂ ದಶಾನನಂ ॥೪೧॥

ಉರದಿಂದಗಲದ ಲಕ್ಷ್ಮಿಯ ।
ತರಳೇಕ್ಷಣಮಾಲೆ ಹಾರಲತೆ ದನುಜನ ಪೇ- ॥
ರುರದೊಳ್ ಸೊಗಯಿಸಿದುದು ಕಾ ।
ರಿರುಳೊಳ್ತಲೆದೋರ್ಪ ತರಳತಾರಾವಳಿವೋಲ್ ॥೪೨॥

ಅಂಗದ ಮಣಿಭೂಷಣ ಕಿರ ।
ಣಂಗಳ್ಗದೊಳಗಣರಸುಗಳ ಜಯವಧುವಂ ॥
ಪಿಂಗದೆ ನಿಲೆ ಕಟ್ಟುವ ಪಾ ।
ಶಂಗಳಿವೆನೆ ಭುಜದೊಳೇಂ ಮನಂಗೊಳಿಸಿದುವೋ ॥೪೩॥

ಅವತಂಸ ಪಾರಿಜಾತಾ ।
ಸವಮಂ ಸವಿದಾಡಿ ಪಾಡುವಳಿಗಳ ನಿನದಂ ॥
ಸವಿವಡೆಯೆ ಸೈರಿಸಂ ಚಮ ।
ರವಿಕ್ಕುವಬಲೆಯರ ಪಿಂಡುಗಂಕಣದುಲಿಯಂ ॥೪೪॥

ತನುಜರುಮನುಜರುಮುಚಿತಾ ।
ಸನದೊಳ್ಮಂತ್ರಿಗಳುಮಿರೆ ವಿಳಾಸದಿನಿರ್ದಂ ॥
ದನುಜಾಧೀಶಂ ಪ್ರತ್ಯಂ ।
ತ ನಗಂ ಸುತ್ತಿರ್ದ ನೀಳಕುತ್ಕೀಳದವೋಲ್ ॥೪೫॥

ಜನಕಸುತೆ ಮನದೊಳಿರೆ ಪರಿ ।
ಜನಮಿರೆ ನಿಯತಪ್ರದೇಶದೊಳ್ದಿರಹೋದ್ರೇ- ॥
ಕನಮಂ ಮಱೆಯಿಸಿ ದನುಜೇಂ ।
ದ್ರನಿಂದ್ರನಿರ್ಪಂತಿರೋಲಗಂಗೊಟ್ಟಿರ್ದಂ ॥೪೬॥

ಅಂತಿರ್ಪುದುಂ

ಚರನೊರ್ವಂ ಬಂದು ವಸುಂ ।
ಧರೆಯೊಳ್ಕೈಯಿಕ್ಕಿ ಜಯಜಯಧ್ವನಿ ಪೊಣ್ಮ- ॥
ತ್ತಿರೆ ನಿಂದು ನಿಟಿಲತಟಗತ ।
ಕರಕುಟ್ಮಲನಾಗಳಸುರಪತಿಗಿಂತೆಂದಂ ॥೪೭॥

ಭುವನದೊಳಿನ್ನೆಗಂ ಕಂಡಱೆಯೆಂ ದನುಜೇಂದ್ರ ದೇವ ದಾ-
ನವ ಖಚರಾಧಿನಾಯಕರೊಳಾಹವದೊಳ್ ನಿನಗುರ್ಕಿ ಸೊರ್ಕಿ ಮೀ-
ಱುವ ತಲೆದೋಱುವುದ್ಧತರನೀಗಳಿದಚ್ಚರಿ ಕಂಡೆನಾಂ ಮಹೋ
ತ್ಸವದೊಳೆ ಬಂದಪರ್ ಮನುಜರಾಹವ ಕೇಳಿಗೆ ರಾಮಲಕ್ಷ್ಮಣರ್ ॥೪೮॥

ಬಲನಾರಾಯಣರಂ ನೆರಂಬಡೆದು ನಿಮ್ಮೊಳ್ಕಾದುವುದ್ಯೋಗದಿಂ
ಪಲವುಂ ದ್ವೀಪದ ಖೇಚರರ್ ನೆರೆದು ಹಂಸದ್ವೀಪದೊಳ್ಬಿಟ್ಟು ಮುಂ-
ಕಲಹಕ್ಕಲ್ಲದ ನಮ್ಮನೊಲ್ಲದವರೆಲ್ಲಂ ತಮ್ಮೊಳೊಂದಾದರಾ
ಕಲಿಗಲ್ದಾನವ ಚಕ್ರವರ್ತಿ ನಿಜದೋರ್ದಂಡಂಬರಂ ಗಂಡರೇ ॥೪೯॥

ಎಂದು ಬಿನ್ನವಿಸಿದ ಚರನ ವಚನಮನವಧಾರಿಸಿ ಬೀರಸಿರಿಯ ಬೆಳ್ಪಸದನದ ಬೆಳಗಿನಂತೆ ದಂತಕಾಂತಿ ಪಸರಿಸೆ ಮಂದಸ್ಮಿತಮುಖಂ ವಿದ್ಯಾಧರ ಪ್ರಮುಖನಪ್ಪ ದಶಮುಖನಿಂತೆಂದಂ :

ತಂದೆಂ ಸೀತೆಯನಾಂ ಪರಾಭವಮನೆನ್ನೊಳ್ಕಾದಿ ನೀಗಲ್ಕನಂ
ದಂದೇಕಾಕಿಗಳೆತ್ತಿ ಬರ್ಪರವರೊಳ್ಸಂಧಾನಮಂ ಮಾಡಿ ಮು-
ನ್ನೆಂದುಂ ಕಪ್ಪಮನಿತ್ತು ಬಾಳ್ವ ಖಚರರ್ಕೈವಾರದಿಂ ಕಾದಿಸ-
ಲ್ಬಂದಪ್ಪರ್ಪರಹಸ್ತದಿಂ ಮೊಬನಿಡಲ್ಬರ್ಪಂತೆ ಕಾಳಾಹಿಯಂ ॥೫೦॥

ಎಂಬುದುಂ

ಮೃಗರಾಜಂ ಗರ್ಜಿಪುದುಂ ।
ನಗದೊಳ್ಮಾರ್ದನಿಗಳುಣ್ಮುವಂತೊಡನೊಡನಿಂ- ॥
ದಗಿ ಮೇಘವಾಹನಾದಿಗ ।
ಳಗುರ್ವು ಪರ್ವುವಿನಮಸುರನೆಂದುದನೆಂದರ್ ॥೫೧॥

ಅಂತವರ್ನರ್ಮಸಚಿವನಂತಿಚ್ಛೆಯಂ ಪ್ರತಿಪಾಳಿಸಿ ನುಡಿವುದುಮದಂ ಕೇಳ್ದು ನಯ ವಿನಯ ವಿದ್ಯಾಭೂಷಣನಪ್ಪ ವಿಭೀಷಣಂ ದೇವ ಬಿನ್ನಪಮನವಧಾರಿಸುವುದೆಂದಿಂತೆಂದಂ :

ಇಚ್ಛಾಪ್ರತಿಪಾಲನಮಂ ।
ತುಚ್ಛಂ ನುಡಿಗುಂ ವಿವೇಕಿ ಪೊಲ್ಲಮೆಗಂಡೇ- ॥
ನಾಚ್ಛಾದಿಸುಗುಮೆ ಕಾರ್ಯಪ ।
ರಿಚ್ಛೇದಮನುಭಯಲೋಕಹಿತಮಂ ಪೇೞ್ಗುಂ ॥೫೨॥

ಅರುಚಿ ಲೋಭಿ ಶುಚಿ ಲೋಭಮಿಲ್ಲದಂ ।
ವಿಶದಶೌಚಗುಣಮೊಂದೆ ಕಾರಣಂ ॥
ಕುಶಲವೃತ್ತಿಗೆನೆ ಭೂಭುಜಂ ಗುಣಾ ।
ತಿಶಯ ಸೂರಿ ಶುಚಿಯಾಗದಿರ್ಪನೇ ॥೫೩॥

ಬಗೆ ದೆಸೆಬಿದ್ದಂ ಪರಿವುದು ।
ಬಗೆಯಂ ಬಗೆದಂತೆ ಪರಿಯಲೀಯದೆ ಪಿರಿಯಂ ॥
ತೆಗೆವುದು ಪಟೆಪೊರ್ದದ ಬ ।
ಟ್ಟೆಗೆ ನಿಜದಿಂದಾರ ಬಗೆಗಳುಂ ನೇರಿದುವೇ ॥ ॥೫೪॥

ಅವಿರುದ್ಧಮಿಂದೆಂಬಿನಮನು ।
ಭವಿಸುವುದಿಂದ್ರಿಯಸುಖಂಗಳಂ ಮಱಿದುಂ ಮೀ- ॥
ಱಿವು ತನ್ನನವೆಂಬನ್ನೆಗ ।
ಮವನೀಶ್ವರ ನಪ್ಪುಕೆಯ್ವು ದಿಂದ್ರಿಯ ಜಯಮಂ ॥೫೫॥

ಜಡಧಾರೆ ಸೋಂಕೆ ಸಿರಿಗ ।
ನ್ನಡಿಗೆ ಕಲುಂಬೇಱುವಂತೆ ಸಿರಿಯೊಡೆಯಂಗೇಂ ॥
ಪಡೆಮಾತೊ ಪರಕಲತ್ರದ ।
ತೊಡರ್ಪಿನಿಂ ಕರ್ಪುಗೊಳ್ಳದಿರ್ಪುದೆ ತೇಜಂ ॥೫೬॥

ಸಮನಿಸೆ ದುಶ್ಚರಿತಂ ಬಿಡ ।
ದ ಮಹೀಪಾಲಂ ಕಳಂಕಮಂ ಕಳೆಯದ ಚಂ- ॥

ದ್ರುಮನುಂ ಬಡವಾಗ್ನಿಯನುಪ ।
ಶಮಿಸದ ಲವಣಾಂಬುರಾಶಿಯುಂ ಜಡರಕ್ಕುಂ ॥೫೭॥

ಕುಲಕಾಂತಾಸಂತೋಷಂ ।
ಕುಲವರ್ಧನಹೇತು ಪರವಧೂಸಂತೋಷಂ ॥
ಕುಲನಾಶಹೇತುವೆಂಬಿದು ।
ಪಲಧರಗೋಪಾಲ ಬಾಲಕಪ್ರಖ್ಯಾತಂ ॥೫೮।

ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ
ವಿಧುವಿಖ್ಯಾತಿ ಕಲುಂಬುಗೊಳ್ವುದಪವಾದಾತೋದ್ಯನಾದಂ ದಿಶಾ-
ವಧಿಯಂ ದಾಂಟುಗುಮನ್ಯಜನ್ಮದೊಳಗಕ್ಕು ದುರ್ಗತಿಕ್ಲೇಶಮೆಂ-
ದಧಿರಾಜರ್ಕೆಲ ರಾಲಿಸರ್ ಮಱೆದುಮನ್ಯಪ್ರೇಯಸೀವಾರ್ತೆಯಂ ॥೫೯॥

ಯಮಪಾಶಂ ಪಗೆವಂಗೆ ಕಲ್ಪಲತೆ ಕೈಯಾಂತಂಗೆನಲ್ಚಂಡವಿ-
ಕ್ರಮಮಂ ಚಾಗದ ಪೆರ್ಮೆಯಂ ಮೆಱೆಯದನ್ಯಸ್ತ್ರೀಕಚಾಕರ್ಷಣ-
ಶ್ರಮಸಂಭೋಗವಿಳಾಸಮಂ ಮೆಱೆವ ಬಾಹಾಸಂಗದಿಂ ಪಿಂಗದಿ-
ರ್ಕುಮೆ ವೀರಾಂಗನೆ ಕಡ್ಡೆ ತೋಳ್ವಸುಗೆಯೊಳ್ ನೇರ್ಪಟ್ಟು ನಿಲ್ವನ್ನಳೇ ॥೬೦॥

ಪೂವಿನೊಳಂ ಪೋರ್ಕುಳಿ ನಮ ।
ಗೇವುದೊ ಯುದ್ಧಂ ಪ್ರಧಾನಪುರುಷಕ್ಷಯಮೆಂ- ॥
ಬೀ ವಚನಮಂ ವಿಚಾರಿಪು ।
ದೀವುದು ಜಾನಕಿಯನುಱಿವುದಸವಾಗ್ರಹಮಂ ॥೬೧॥

ಪರಿಜನಮುಮಾಪ್ತಜನಮುಂ ।
ಪುರಮುಂ ಬಾಂಧವರುಮಗಲದೊದೆಡೆಯೊಳ್ ಸೈ- ॥
ತಿರಲಕ್ಕುಂ ಜಾನಕಿಯಂ ।
ಪರಿಪರಿಸಿದೊಡಲ್ಲದಂದಿರಲ್ಬಂದಪುದೇ ॥೬೨॥

ಎಂದು ನುಡಿಯಲೊಡಮಿಂದಗಿ ವಿಷತರುಪ್ರಸವದಂತೆ ದಂತಕಾಂತಿ ಪಸರಿಸೆ ವಿಭೀಷಣ ಸುಭಾಷಿತ ದೂಷಣಪರನಿಂತೆಂದಂ :

ವನಿತಾರತ್ನಮಯತ್ನಸಾಧ್ಯಮೆನೆ ಕೈಸಾರ್ದತ್ತು ಸೈಪಿಂದದಂ
ಮನುಜಂಗೀವುದೆ ಮಂತ್ರಮಿೂಯದೊಡಪಾಯಂ ಸಾರ್ಗುಮೆಂಬೀನಯಂ
ಮನದೊಳ್ಮಚ್ಚರಿಪಂಗೆ ತೋರ್ಕುಮುಱಿದಂಗೇಂ ತೋರ್ಕುಮೇ ಯುದ್ಧಸಾ-
ಧ್ಯನೆ ವಿದ್ಯಾಧರಸಿದ್ಧಕಿನ್ನರಚಮೂ ವಿದ್ರಾವಣಂ ರಾವಣಂ ॥೬೩॥

ಬಗೆಯಂ ಶಂಕಾತಮಂ ತಳ್ತಿರೆ ತಱಿಸಲವಂ ಕಾಣ್ಬುದೇಂ ಮೊಗ್ಗೆ ನೀರ್ಗಾ-
ದಿಗೆ ಮುನ್ನೀರ್ಕೋಂಟೆ ವಿದ್ಯಾತ್ಮಕಮಸುರಬಲಂ ಕಾಪಿ ನಾಳ್ತೋಳ ಬಲ್ಪಿಂ
ನೆಗಟ್ದಾ ತಾರಾದ್ರಿಯಂ ಜಾಳಿಸಿದ ದಶಮುಖಂ ಮುಖ್ಯನೆಂದಂದು ಲಂಕಾ-
ನಗರಕ್ಕಾತಂಕಮಕ್ಕುಂ ಮನುಜಬಲದಿನೀ ಕಜ್ಜಮಂ ನೀನೆ ಕಾಣ್ಬೈ ||೬೪||

ಪರಚಕ್ರಂ ಚಕ್ರಮಂ ಮೀಱುವುದೆ ರಿಪುಬಲಂ ಚಂದ್ರಹಾಸಾಸಿಯಂ ಭೀ-
ಕರಮಂ ಮಾಱಾಂಪುದೇ ಮಾರ್ಪಡೆಗೆ ಪಡೆಯಲಾತಂಕಮಂ ನಮ್ಮ ವಿದ್ಯಾ-
ಧರಸೈನ್ಯಂ ಸಾಲದೇ ಕೆಮ್ಮನೆ ಭಯರಸಮಂ ತಾಳ್ದುವೈ ಲಕ್ಷ್ಮಣಂ ಸಂ-
ಗರದೊಳ್ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧಕಂಠಂ ||೬೫||

ಎಂಬುದುಂ ವಿಭೀಷಣಂ ಮುಳಿಸಂ ಮೊಗಕ್ಕೆ ತಂದಿಂದಗಿಯನಿಂತೆಂದಂ :

ಅಯಶಕ್ಕಂಜದೆ ನೀಂ ತಂ ।
ದೆಯ ರಾಜ್ಯಕ್ಕಟಿಪಿ ಕಲಹಮಂ ಬಲ್ಲಿದರೊಳ್ ॥
ಬಯಸುವೆ ಗಾವಿಲ ರಣಭೂ ।
ಮಿಯೊಳಾರುಮನುಟಿಯಲೀಗುಮೇ ರಾಮಶರಂ ||೬೬||

ತಂದನೆ ಸೀತೆಯನಟಿವಂ ।
ತಂದಂ ಲಂಕಾಪುರಕ್ಕೆ ತನಗಂ ನಮಗಂ ॥
ತಂದಂ ತವಿಲಂ ನಮ್ಮರ ।
ಸಂ ದೆಸೆಯಂ ಪುದಿಯೆ ದುರ್ಯಶಃಪಟಪರವಂ ||೬೭||

ವಟ್ಟಂದೆತ್ತುದು ಬೆಳ್ಳಿಯ ।
ಬೆಟ್ಟಂ ಬಿಣ್ಪಿಂಗೆನಿಪ್ಪ ಕೋಟಕಶಿಲೆಯಂ ॥
ಬಟ್ಟಾಡಿದ ಬಾಹಾಬಳ ।
ನಿಟ್ಟಳವೆಂಟನೆಯ ಕೇಶವಂಗಿದಿರುಂಟೇ ||೬೮||

ಕರವಾಳ್ಸಾಧನಮಾಯ್ತು ಸಾಧಿಸದೆ ಸೈಪಿಂ ಸೂರ್ಯಹಾಸಂ ಧನು-
ಶ್ಶರಜಾಳಂ ನೆರಮಾಗೆ ಸಂಹರಿಸಿದಂ ಸೇನಾನ್ವಿತಂ ಯುದ್ಧದೊ-
ಳ್ಖರನಂ ದೂಷಣನಂ ಪ್ರಸಿದ್ಧರಖಿಳದ್ವೀಪಾಧಿಪರ್ಖೇಚರ-
ರ್ನೆರೆದಾಳೋಳಿಗೆ ವಂದರಾರ್ಗಮಧಿಕಂ ಸೌಮಿತ್ರಿ ಸಾಮರ್ಥ್ಯದೊಳ್ ||೬೯||

ಸಂಧಿಯನುಂಟುಮಾಡುವುದು ಸೀತೆಯನೀವುದು ರಾಮಲಕ್ಷ್ಮಣ-
ರ್ಬಾಂಧವರಪ್ಪುದಂಬಗೆವುದೇಳಿಸುವಂತವರ್ಗಾರುಮೇಂ ಸಮ-
ಸ್ಕಂಧರೆ ಯುದ್ಧದೊಳ್ ರಣಮನರ್ಥಕಮೆಂತೆನೆ ಕಾದಿದಂದು ನಿ-
ಲ್ಕುಂ ಧರೆ ನಿಲ್ವಿನಂ ಪಟಿ ಜಯಾಪಜಯಂಗಳೊಳಂ ದಶಾನನಾ ||೭೦||

ಮುಂಕೊಟ್ಟಟ್ಟುವುದುತ್ತಮಂ ರಿಪುಬಲಂ ವಾರಾಶಿಯಂ ದಾಂಟದ-
ನ್ನಂ ಕಲ್ಪಾಂತಕೃತಾಂತದೂತಸದೃಶಂಗಳ್ ರಾಮರೌದ್ರೇಷುಗಳ್
ಲಂಕಾದ್ವಾರಕವಾಟಮಂ ಮುಱಿಯದನ್ನಂ ಲಕ್ಷ್ಮಣಜ್ಯಾಲತಾ-
ಟಂಕಾರಂ ಕಿವಿಗೈದದನ್ನಮಖಿಳಪ್ರಖ್ಯಾತೆಯಂ ಸೀತೆಯಂ ॥೭೧॥

ಎಂಬುದುಮಾ ನುಡಿಗೆ ಕಾರಮುಗಿಲ ಮೊಱಗಿಂಗೆ ಮಸಗುವ ಪಂಚಾನನದಂತೆ ದಶಾನನಂ ದೆಸೆದೆಸೆಗೆ ಮಸಗಿ,

ಒಱೆಯಿಂದಮುರ್ಚೆ ಮಿಂಚಂ ।
ಕಱೆಯುತ್ತುಮಗುರ್ವು ಪರ್ವೆ ವಿಳಯಾಂಬುದದಿಂ ॥
ಪೊಱಮಟ್ಟ ಸಿಡಿಲ ಮಸಕಮ ।
ನುಱೆ ಸೆಱೆವಿಡಿವತ್ತು ಚಂದ್ರಹಾಸಕೃಪಾಣಂ ॥೭೨॥

ಅಗಳ್ ವಿಭೀಷಣಂ ಘನಗದಾದಂಡಮಂ ಕೊಂಡಿದಿರೊಳದಿರದಿರ್ಪುದುಂ ಕುಲವೃದ್ಧರೆಡೆವೊಕ್ಕು ನುಡಿಯೆ ಕೋಪಮನುಪಶಮಿಸಿ ಮಂದಸ್ಮಿತಂ ದಶಮುಖನಿಂತೆಂದಂ :

ಎನಗಂ ಬಲ್ಲಾಳ್ಗಡಂ ಮಾನವನಭಿಮತಮಂ ಕೇಳಲಾದತ್ತವಂಗಾ-
ಳನಮಂ ಪೂಣ್ದೆನ್ನೊಳಂ ದಾಯಿಗತನಮನಿವಂ ತೋರ್ಕೆ ದೋರ್ದಂಡಕಂಡೂ-
ಯನಮಂ ಚಂಡಾಸಿ ಸಂಘಟ್ಟಿದಿನೊಗೆವುರಿಯಂ ಮಟ್ಗಿಪಂ ಮೂಱು ಕಣ್ಣಾ-
ತನುಮನ್ನೊಳ್ಮೀಱೆ ಮಾಱಾಂತೊಡ ಪಡೆಯದೆ ಸಂತ್ರಾಸಮಂ ಚಂದ್ರಹಾಸಂ ॥೭೩॥

ಚಪಳಂ ಮೇಳದ ಪಂದೆ ಚೆಚ್ಚದಿದಿರೊಳ್ಮಾತಾಡೆ ಕೋಪಂ ಪೊದ-
ಟ್ದಪವಾದಂ ಪರೆವಂತು ಗೋತ್ರವಧೆಯಕ್ಕುಂ ಲಂಕೆಯಿಂದೀತನಂ
ವಿಪರೀತಾತ್ಮನನೀಗಳಿಂತ ಕಳೆಯಿಂ ಶಂಕಾಕುಳಂ ಬಾಳ್ತೆಯಾ
ದಪನೇ ಸಂಗರಕೇಳಿಗಿರ್ದೊಡುಪದೇಶಂಗೆಯ್ದಪು ಭೀತಿಯಂ ॥೭೪॥

ಎನಲೊಡಮಶನಿವೇಗ ಚಪಳಾವೇಗ ಸಂಹಾರಕ ವಿದ್ಯುತ್ಪ್ರಮುಖ ಸಾಮಂತರ್ ಸಹಿತಂ ಮೂವತ್ತಕೌಹಿಣೀಬಲಂ ಬೆರಸು,

ಉರಿ ಕೊಳಲಿರ್ದ ಸಾನುವನದಿಂ ಮದಸಿಂಧುರಯೂಥನಾಥನೋ-
ಸರಿಸುವ ಮಾಱ್ಕೆಯಿಂ ದಶರಥಾತ್ಮಜರಿಂ ಕಿಡಲಿರ್ದ ಲಂಕೆಯಿಂ-
ದಿರದೆ ವಿಭೀಷಣಂ ತೊಲಗಿದಂ ಖಚರಾನ್ವಯ ರಾಜ್ಯಲಕ್ಷ್ಮಿಯಂ
ಧರಿಯಿಸಲಿರ್ದ ಪುಣ್ಯನಿಧಿಯಂ ಸುಕೃತಂ ತೊಲಗಿಕದಿರ್ಕುಮೇ ॥೭೫॥

ದನುಜೇಂದ್ರಂಗೆ ಮೃಗೇಂದ್ರಪೀಠಮೆ ಮಿಗಿಲ್ಸಾಮರ್ಥ್ಯದಿಂ ಲಕ್ಷ್ಮಿಯಿಂ
ತನಗಾರುಂ ಮಿಗಿಲಿಲ್ಲದಂ ಬಗೆದನೇ ಸದ್ವೃತ್ತಮಂ ಬಿಟ್ಟೊಡ-

ಣ್ಣನುಮಂ ಬಿಟ್ಟು ವಿಭೀಷಣಂ ತೊಲಗಿ ಪೋದಂ ತಕ್ಕನುದ್ವೃತ್ತನ-
ಪ್ಪನ ಸಂಸರ್ಗದಿನಪ್ಪ ಸಂಪದಮುಮಂ ಸದ್ವೃತ್ತರೇಗೆಯ್ವರೋ ॥೭೬॥

ಅಂತು ವಿಭೀಷಣಂ ಲಂಕಾಪುರಮಂ ಪೊಱಮಟ್ಟು ಹಂಸದ್ವೀಪಕ್ಕೆ ಬಂದು ನಿಜಮಹತ್ತರನಂ ಮುಂದಟ್ಟುವುದುಮಾತಂ ಪೋಗಿ ಪ್ರತೀಹಾರಪುರಸ್ಸರಂ ರಾಜಭವನಮಂ ಪೊಕ್ಕು ದೂರಾವನತಮಸ್ತಕಂ ಸರ್ವಾಂಗಪ್ರಣತನಾಗಿ ನಿಟಲತಟ ಘಟಿತಕರಕಿಸಲಯದ ಮೇಲೆ ದಂತಕಾಂತಿ ಪಸರಿಸೆ ದೇವ ಬಿನ್ನಪಮನವಧಾರಿಸುವುದೆಂದಿಂತೆಂದಂ :

ಮದಮದಿರಾಪ್ರಮತ್ತಹೃದಯಂ ಹಿತಮಂ ತನಗೊಲ್ದು ಪೇಟಿ ಕೇ-
ಳದೆ ವಿಪರೀತಮಂ ಬಗೆದು ಬಗ್ಗಿಸೆ ರಾವಣನೀ ದುರಾತ್ಮನೊಳ್
ಪುದುವೆನಗೇವುದೆಂದು ಬರುತಿರ್ದಪನಲ್ತೆ ಶರಣ್ಬುಗಲ್ಭವ-
ತ್ಪದನಖವಜ್ರಪಂಜರಮನಾಜಿವಿಭೀಷಣನಾ ವಿಭೀಷಣಂ ॥೭೭॥

ಎಂದು ಮತ್ತಂ ದಶಮುಖನ ಮುಖರತೆಯುಮನುದ್ವೃತ್ತತೆಯುಮಂ ನೆಱೆಯೆ ಬಿನ್ನವಿಸಿ ಪೋಪ್ಪುದುಮತಿ ಕ್ರಾಂತ ಪ್ರಮುಖ ಮಂತ್ರಿಮುಖ್ಯರೆಂದರಿವರೊಡ ವುಟ್ಟಿದರಾಗಿಯುಮತಿಸ್ನೇಹಿತರಪ್ಪರ್ ಪುಸಿಜಗಳಮಂ ಪೊಣರ್ಚಿ ನಮಗುಪಾಯ ದಿನಪಾಯಮಂ ಬಗೆದು ಬಪ್ಪರಿದಂ ದೇವರವಧಾರಿಸುವುದೆನೆ,

ದನುಜರಪಾಯಮಂ ಬಗೆವರೆಂತೆನಗಾ ದಶಕಂಠನುಂ ರಣ-
ಕ್ಕೆನಗಿದಿರಾಗದಳ್ಕಿ ಜನಕಾತ್ಮಜೆಯಂ ಕಪಟಪ್ರಪಂಚಮಂ
ಜನಿಯಿಸಿ ಕೊಂಡು ಪೋದನೆನೆ ಕೆಮ್ಮನೆ ಬೆರ್ಚುವುದೇ ಶರಣ್ಗೆವಂ-
ದನೊಳಭಯಪ್ರದಾನಮನೊಡರ್ಚುವುದೇವುದಿದಕ್ಕೆ ಮಂತಣಂ ॥೭೮॥

ಎರೆದರ್ಗೀಯದೆ ಮಾಱಾಂ ।
ತರನಿಕ್ಕದೆ ಮಱೆಗೆವಂದರಂ ಕಾಯದೆ ಬಾ- ॥
ಟ್ಟಿರಮಗನ ಬಾಹುದಂಡಂ ।
ನಿರರ್ಥಕಂ ವ್ಯರ್ಥಮವನ ಪಾರ್ಥಿವಜನ್ಮಂ ॥೭೯॥

ಎಂಬುದುಮಂಜನಾಸುತಂ ಜನಪ್ರವಾದದೊಳಮಿವರ ವಿಪ್ರತಿಪತ್ತಿಯಂ ಕೇಳ್ದವಲ್ಲದೆಯುಂ ವಿಭೀಷಣಂ ಗುಣಾಧಿಕನೆಂಬುದು ಜಗತ್ಪ್ರಸಿದ್ಧಮಾತನೆನಗಸ್ಮಜ್ಜನನಿಯುಪ್ಪ ಸೀತಾದೇವಿಯಿರ್ದೆಡೆಯಂ ಪೇೞ್ದಿನ್ನಂ ಮನ್ನಿಸಿ ಕಳಿಪಿದನೆನೆ ರಘುಕುಲಾಂಬರದ್ಯುಮಣಿ ವಿಭೀಷಣನ ಮಹತ್ತರನಂ ತುಷ್ಟಿದಾನ ಪುರಸ್ಸರಂ ನಿಮ್ಮಾಳ್ದನಂ ತಂದು ಕಾಣಿಸೆಂದು ವಿಸರ್ಜಿಸುವುದುಮಾತಂ ವಿಭೀಷಣನಂ ಕಂಡು ರಾಮದೇವನ ಕಾರುಣ್ಯಮುಮಂ ಮಹಾಮಹಿಮೆಯುಮಂ ಬಿನ್ನಪಂಗೆಯ್ವುದುಂ,

ಪಲತೆಱದ ಪಱಿಯ ದನಿ ತೆರೆ ।
ಯುಲಿಪೆನೆ ಪೊಕ್ಕಿತ್ತು ಕಟಕಮಂ ನೋೞ್ಪರ ಕ- ॥
ಣ್ಣಲಸೆ ವಿಭೀಷಣ ವಾಹಿನಿ ।
ಜಲನಿಧಿಯಂ ಬಂದು ಪುಗುವ ಕುಲವಾಹಿನಿವೋಲ್ ॥೮೦॥

ಆ ಸಮಯದೊಳ್,

ಇದಿರಟ್ಟ ದಿವ್ಯವಸನಾಂ ।
ಗದಾದಿ ಭೂಷಣಮನವನಿಪತಿ ಸುಗ್ರೀವಾಂ- ॥
ಗದಮುಖ್ಯರನಿದಿರಟ್ಟಿದ ।
ನುದಾತ್ತರಾಘವನ ಪದೆಪನಾವಂ ಪಡೆವಂ ॥೮೧॥

ಅನಂತರಂ ಕತಿಪಯ ಪರಿಜನಪರಿವೃತಂ ಪ್ರಧಾನ ಪುರುಷಪುರಸ್ಸರಂ ರಾಜಭವನಮಂ ಪೊಕ್ಕು,

ಮಣಿಮಯಭೂಷಣಪ್ರಭೆ ಮನಕ್ಕನುರಾಗಮನುಂಟುಮಾಡೆ ರೋ
ಹಣಗಿರಿ ವಾರ್ಧಿಯಂ ಮಱಿವುಗಲ್ಪಡೆತಂದಪುದೆಂಬಿನಂ ವಿಭೀ-
ಷಣನವನೀಶನಿರ್ದೆಡೆಗೆ ಬಂದು ಪದಾನತನಾಗೆ ಭಾಳದೊ-
ಳ್ಪೆಸೆದು ನಖಾಂಶು ಕಟ್ಟದಪೊಲಿರ್ದುದು ಖೇಚರರಾಜ ಪಟ್ಟಮಂ ॥೮೨॥

ಆಗಳ್,

ತೆಗೆದಾದರದಿಂ ತೞ್ಕೈ ।
ಸಿ ಗಗನಚರನಮೃತ ರಸದೊಳೋಲಾಡುವವೋಲ್ ॥
ಸೊಗಯಿಸಿದಂ ಚಂದ್ರಿಕೆಯಂ ।
ನಗುವ ನರೇಂದ್ರನ ತನುಪ್ರಭಾಚಂದ್ರಿಕೆಯಿಂ ॥೮೩॥

ಗುಣಮಂ ಕಡೆಗಣಿಸಿದ ರಾ ।
ವಣನೊಳ್ಪುದುವಾೞ್ದ ದೋಷಪರಣಕ್ಕೆ ವಿಭೀ- ॥
ಷಣನಮರನದಿಯೊಳಘಮ ।
ರ್ಷಣಮಿರ್ದವೊಲಿರ್ದನಧಿಪನಂಗಪ್ರಭೆಯಿಂ ॥೮೪॥

ಜನನಾಥನ ಸಮ್ಮನದಿಂ ।
ಮನದೊಳ್ಮೆಯ್ವೆರ್ಚೆ ಸಂತಸಂ ಬಲಗೆಲದೊ- ॥
ಳ್ತನಗಾಗಲೇಱಲಿಕ್ಕಿದ ।
ಕನಕಾಸನದೊಳ್ವಿಭೀಷಣಂ ಕುಳ್ಳಿರ್ದಂ ॥೮೫॥

ರಾವಣನಿಂದಾದೆರ್ದೆವಟಿ ।
ಲಾವಗಮೋಸರಿಸೆ ನೃಪನ ದಯೆಯಿಂ ಖಚರಂ ॥
ದಾವಾನಲನಿಂ ಬೆಂದು ಸು ।
ಧಾವರ್ಷದೊಳಾಱಿದಚಲಮಿರ್ಪಂತಿರ್ದಂ ॥೮೬॥

ಅನಂತರಂ ರಾಮಚಂದ್ರಂ ವಿಭೀಷಣನನುಚಿತಸಂಭಾಷಣ ಸುಧಾರಸದಿಂ ತಣಿಪಿ ಬೀಡಿಂಗೆ ಬೆಸಸುವುದುಮನ್ನೆಗಮತ್ತ ಪ್ರಭಾಮಂಡಳಂ ಸಹಸ್ರಾಕ್ಷೌಹಿಣೀಬಲಂಬೆರಸು ಬಂದು ಕುಡುವುದುಂ ಮಱುದಿವಸಮಲ್ಲಿಂ ತಳರ್ದು ಸಮುದ್ರತೀರಮನೆಯ್ದಿವರ್ಪುದುಂ,

ಶರನಿಧಿ ತೇಜಮಂ ಜಸಮುಮಂ ತಲೆಯೊಳ್ಸಲೆ ಪೂಣ್ದು ತಾಳ್ದಿದಂ
ತಿರೆ ತುಱುಗಿರ್ದ ವಿದ್ರುಮಲತಾವಳಿ ಶಂಖದ ಬಳ್ಳವಳ್ಳಿ ಬಂ-
ಧುರಮೆನಿಸಿರ್ದುವಾ ರಘುತನೂಭವನೇಟ್ಟಿರೆ ಸೇಸೆಯಿಕ್ಕಿದಂ-
ತಿರೆ ತೆರೆಗೈಯೊಳುಚ್ಚಳಿಸಿ ಸೂಸಿದುವಬ್ಧಿಯ ತೋರಮುತ್ತುಗಳ್ ॥೮೭॥

ವಾರಿಧಿ ರಘುಜಂಗೆತ್ತಿದ ।
ನೀರಾಜನದೀಪಕಳಿಕೆ ಪೊಳೆದಪುದೆಂಬಂ- ॥
ತೋರೊಂದೆಡೆಯೊಳ್ಪೊಳೆದುವು ।
ರಾರಾಜಿತಪದ್ಮರಾಗರುಚಿಮಂಜರಿಗಳ್ ॥೮೮॥

ನೆಲೆಯಿಲ್ಲದೆಯುಂ ನೆಲನಂ ।
ಬಲವೆಂದುಂ ವೇಳೆಗೊಂಡು ಮೆಯ್ಯಿಕ್ಕಿಯುಮಾ ॥
ಜಲನಿಧಿತರಂಗ ಭಂಗಾ ।
ಕುಲಿತಂ ನಸೆಯಿಸಿದುದನ್ಯರಾಜನ್ಯಕಮಂ ॥೮೯॥

ಸುಟಿಗಳ್ಪೀರ್ದಿಗುರಿಯವೋ ।
ಲ್ಸುಟಿಮುವು ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂ- ॥
ಬಳಿಯಂ ಬೆಟ್ಟಟ್ಟುವವೋಲ್ ।
ತಟಿ ತಳ್ತಪೊಲಿರ್ದುವೊಗೆದ ಮಣಿಕಿರಣಂಗಳ್ ॥೯೦॥

ಆ ಮಹಾಸಮುದ್ರಮಂ ಬಲಾಚ್ಯುತರ್ ನೋಡಿ ಮೆಚ್ಚುತ್ತುಮಿರ್ಪುದುಮಾ ಸಮಯದೊಳ್,

ಜಲಧಿಯ ಮೇಲೆ ಬಂದ ಜಳರಾಶಿಯೊ ಪೇಟಿಮೆನಿಪ್ಪ ಪೆರ್ಮೆಯಂ
ತಳೆದ ಬಲಂ ನಭೋಗಮನವಿದ್ಯೆಯೆ ಸೇತುವೆನಲ್ಕಳಂ ದ್ವಿಷ-
ದ್ವಳವಿಳಯಾನಬಳಂ ನಡೆಯಿಸಲ್ಕಭಮೊಳ್ಪಡೆವತ್ತು ಭಪ್ರಸಂ-
ಕುಳಮಕರಂ ಪಯಪ್ರಕರವೀಚಿ ವರೂಥಕುಳೀರಸಂಕುಳಂ ॥೯೧॥

ಕೇತು ವ್ರಾತಮರೀಚಿ ಖೇಚರಕಿರೀಟಾನರ್ಘ್ಯರತ್ನಾಂಶು ಭೂ-
ಷಾತೇಜಃಪಟಲಂ ವಿಮಾನಬಹುರತ್ನಚ್ಛಾತೆ ತಳ್ಪೊಯ್ವಿನಂ
ಜ್ಯೋತಿರ್ಮಂಡಳಮೇಕೆ ತೆಂಕ ನಡೆಯುತ್ತಿರ್ದಪ್ಪುದೆಂಬಂತಸಂ-
ಖ್ಯಾತಂ ತಾಂ ನಡೆದತ್ತು ರಾಘವಮಹಾಸೈನ್ಯಂ ನಭೋಭಾಗದೊಳ್ ॥೯೨॥

ಮತ್ತಮಲ್ಲಿ

ಪಾವನಿ ಜಾಂಬವಾಂಗದ ಸುಷೇಣ ವಿಭೀಷಣ ಚಂದ್ರರಶ್ಮಿ ಸು-
ಗ್ರೀವವಿಯಚ್ಚರಪ್ರಮುಖರೇಜಿವ ರತ್ನವಿಮಾನಮಾಲೆ ಶೋ-
ಭಾವಹಮಾಗೆ ಸುತ್ತಿಬರೆ ತನ್ನ ವಿಮಾನಮನಂಬರಂ ಬಯ-
ಲ್ಪಾವರೆದಾಣದಂತಿರೆಸೆದಂ ರಘುಜಂ ಕಳಹಂಸಲೀಲೆಯಿಂ ॥೯೩॥

ಪೊಗೆಯುತ್ತುಂ ಬಡಬಾಗ್ನಿ ರಾವಣಯಶೋದುಗ್ಧಾಬ್ಧಿಯಂ ಪೀರ್ವದಂ-
ದುಗದಿಂ ಬಂದಪುದಕ್ಕುಮೆಂಬ ಬಗೆಯಂ ಸೌಮಿತ್ರಿ ಪೀತಾಂಬರಾಂ-
ಶುಗಳುಂ ತನ್ನ ತನುಪ್ರಭಾಪಟಲಮುಂ ಮಾಜ್ಪಿಂತು ಬಂದಂ ವಿಮಾ-
ನಗಭಸ್ತಿಸ್ತಬಕಂ ಪಳಂಚಲೆವಿನಂ ಜ್ವಾಲಾಸಹಸ್ರಂಗಳಂ ॥೯೪॥

ಗಣನೆಗಳುಂಬಮೀ ನೃಪರುಪಾರ್ಜಿತಪುಣ್ಯಮೆನಲ್ಕೆ ರಾಮಲ-
ಕ್ಷ್ಮಣರ ವಿಮಾನಮಂ ಬಳಸಿ ಖೇಚರರಾಜವಿಮಾನ ಸಂಚಯಂ
ಮಣಿಮಯಮಂಬರಸ್ಥಳಮುಮಿಟ್ಟೆಡೆಯುಂಬಿನಮುಂಬುರಾಶಿಯಂ
ಕ್ಷಣಮೊಳೆ ದಾಂಟಿ ಪೋರ್ದಿಮದು ವೇಳೆಯದೊಂದು ವನಾಂತರಾಳಮಂ ॥೯೫॥

ಬೆಟ್ಟಮನೊಟ್ಟ ಬಟ್ಟೆ ನಡೆವಚ್ಚಿಗಮೇವುದೊ ವಾರ್ಧಿಯಂ ಮುಗಿ-
ಲ್ವಟ್ಟೆಯೆ ಬಟ್ಟೆಯಾಗೆ ನಡವಚ್ಚರಿವೆತ್ತು ವಿಯಚ್ಚರಾಧಿಪ-
ರ್ತೊಟ್ಟನೆ ದಾಂಟಿ ವಾರಿಧಿಯನಾ ತಡಿಗಯ್ದುವುದುಂ ನಭಕ್ಕೆ ತೂಂ-
ತಿಟ್ಟವೊಲಾಗೆ ದಳ್ಳಿಸಿದುದಾ ಪಡೆಯೊಳ್ಪೊಜಪೊಣ್ಮುವುಳ್ಳೊಳಂ ॥೯೬॥

ಅಂತು ಸಮುದ್ರಮಂ ದಾಂಟಿ ಲಂಕಾಭಿಮುಖರಾಗಿ ಪಯಣಂಬೋಗಿ ವಿಂಶತಿಯೋಜನವಿಸ್ತಾರಮುಂ ತ್ರಿಂಶದ್ಯೋಜನಾಯಾಮಮುಮಪ್ಪ ರಣಭೂಮಿಯಂ ಕೈಕೊಂಡಿರ್ಪುದುಂ,

ಅವರವರ್ಗೆ ತಕ್ಕ ಮಣಿಮಯ ।
ಭವನಮನಧಿರಾಜರಾಜ ಗೃಹಮಂ ಕಡೆ ಪ- ॥
ಟ್ಟವರ್ಗೊಳಗಾಗಿರೆ ಸಂಭಿ ।
ನ್ನವಿದ್ಯೆಯಿಂ ಸ್ಥಪತಿ ಮಾಡಿಕೊಟ್ಟಂ ಬೀಡಂ ॥೯೭॥

ಗೃಹದೀರ್ಘಿಕೆಯಂ ವಲ್ಲೀ ।
ಗೃಹಮಂ ಗೃಹವನಮನುಪವನಂಗಳನಾರ್ಗಂ ॥
ಸ್ಪೃಹಣೀಯಮಾಗೆ ಪಲವಂ ।
ಬಹುವಿದ್ಯಾ ಗೃಹಮಹತ್ತರರ್ ಸಮೆದಿತ್ತರ್ ॥೯೮॥

ಅಂತು ಬೀಡಂಬಿಟ್ಟಲ್ಲಿ ರಾಮಲಕ್ಷ್ಮಣರ ರಾಜಭವನಮಂ ಬಳಸಿ ಸುಗ್ರೀವ ಪ್ರಭಾಮಂಡಳ ಪ್ರಮುಖಖಚರಪರಿವೃಢರುಂ ಮಖಿಳ ಸೇನೆಯುಮನುರೂಪಭವನದೊಳಿಡೆಯಱಿದು ಬೀಡಂ ಬಿಟ್ಟಿರ್ಪುದುಂ,

ದಿವಿಜನದೀತರಂಗಧವಳಂ ನಿಜನಿರ್ಮಲಕೀರ್ತಿವಲ್ಲಿ ಭೂ-
ಭುವನಮನಾವಗಂ ಪುದಿವಿನಂ ಮಿಬುಧಾವಳಿಗಪ್ಪಿನಂ ಮಹೋ-
ತ್ಸವಮಧಿರಾಜಪೂಜ್ಯನಭಿ ರಾಮತೆಯಂ ತಳೆದಂ ಸರಸ್ವತೀ-
ಶ್ರವಣ ವಿಭೂಷಣಪ್ರಥಿತವಾಗ್ವಿಭವಂ ಕವಿತಾಮನೋಹರಂ ॥೯೯॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರಬಾಳಚಂದ್ರಮನೀಂದ್ರಚರಣಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಲಂಕಾದಿಗ್ವಿಜಯಪ್ರಯಾಣ ವರ್ಣನಂ
ದ್ವಾದಶಾಶ್ವಾಸಂ



## ೧೩. ಬಲಾಚ್ಯುತ ಪುಣ್ಯಪ್ರಭಾವೋದಯ ವರ್ಣನಂ

ಶ್ರೀಸುಕೃತಕ್ಕಾತ್ಮವಚಃ ।
ಶ್ರೀಸೂನೃತ ಸಂಪದಕ್ಕೆ ತೊಡವೆನೆ ಜಸಮಾ- ॥
ಶಾಸುದತಿಗೆ ಸಾಹಿತ್ಯಕ ।
ಳಾ ಸುಭಗಂ ಪೆಂಪುವೆತ್ತ ನಭಿನವಪಂಪಂ ॥೧॥

ಅ ಪ್ರಸ್ತಾವದೊಳ್,

ಜನಿತಾಕೋಳಾಹಳಂ ಕಾಹಳಬಹುವಿಧವಾದ್ಯಸ್ವನಂ ಶಂಖಭೇರೀ-
ಧ್ವನಿ ಹೇಷಾಬೃಂಹಿತಂಗಳ್ವಿಳಯಜಳನಿಧಿಧ್ವನಮೆಂಬನ್ನೆಗಂ ಭೋಂ-
ಕನೆ ಕರ್ಣಾಭರ್ಣಮಂ ಸಾರ್ತರೆ ಮುನಿದಸುರಂ ಪೊಯ್ಸೆ ಪೊಣ್ಮಿತು ಚಂಡಾ-
ಶನಿಘೋಷಂ ಲೋಕಮಂ ಮೂವಳಸುವಳಸೆ ಸನ್ನಾಹಭೇರೀನಿನಾದಂ ॥೨॥

ಎನಗೆ ರಣರಭಸದಿಂ ಗಡ ।
ಮನುಜಂ ಮೇಲೆತ್ತಿ ಬಂದ ನಿಂ ದೋಃ ಕಂಡೂ- ॥
ಯನಮಂ ಕಟಿಲ್ವಲೆಡೆಯಾ ।
ಯ್ತೆನುತ್ತುಮುತ್ತರಳ ತಾಮ್ರಲೋಚನನಾದಂ ॥೩

ಆಗಳಾಗಂಭೀರರವಮಂಬರಮನಾವರಿಸುವುದುಮುತ್ತ ಭಾಸ್ಕರಪುರದ ಪಯೋಧರಪುರದ ಕಾಂಚನಪುರದ ಕಂಪನಪುರದ ವ್ಯೋಮವಲ್ಲಭಪುರದ ಗಂಧರ್ವಪುರದ ಶಶಿಮಂದಿರ ಪುರದ ಶಿವಮಂದಿರಪುರದ ಸಿಂಹಪುರದ ಲಕ್ಷ್ಮೀಪುರದ ಮಹಾಶೈಳ ಪುರದ ಚಕ್ರಪುರದ ಸೀಮಂತಪುರದ ಮಳಯಪುರದ ಶ್ರೀಗುಹಾ ಪುರದ ಮನೋಹರಪುರದ ಅಶ್ವಪುರದ ಚಂದ್ರಪುರದ ಕಿರಿಂಜಯಪುರದ ಶಶಿಸ್ಥಾಪನಾಪುರದ ಮಾರ್ತಾಂಡಪುರದ ಸಹಸ್ಥಾಪನಪುರದ ವಿಶಾಲಸ್ಥಾಪನ ಪುರದ ಜಯಪುರದ ಪರೀಕ್ಷಾ ಪುರದ ಶ್ರೀಚಂದ್ರಪುರದ ಗಜಪುರದ ಗೋಪುರದ ಮಹಿಷೀಪುರದ ರತ್ನಪುರದ ವಿದ್ಯಾಧರರ್ಮೊದಲಾಗೆ ಪಲವುಂ ಪುರದ ವಿದ್ಯಾಧರಾಧಿರಾಜರೆಲ್ಲಂ ತಂತಮ್ಮ ಸಮಗ್ರಸಾಮಗ್ರಿಸಹಿತರಾಗಿ ಬಂದು ಕೂಡುವುದುಮಂದಶಗ್ರೀವನವರಂ ಸನ್ಮಾನ

ದಾಸಂಗಳಿಂ ಸಂತೋಷಂಬಡಿಸಿ ಚತುಸ್ತ್ರಿಂಶತ್ಸಹಸ್ರಾಕ್ಷೌಹಿಣೀ ಬಲಂಬೆರಸು ರಣರಸೋದ್ದೀಪನಾಗಿರ್ದನಾ ತ್ರಿಖಂಡಮಂಡಳಾಧಿಪತಿಯೊಳ್

ರಣರಭಸದಿಂದಮಾವಂ
ಪೊಣರ್ವಂ ಮೂವತ್ತುನಾಲ್ಕು ಸಾಸಿರದಕ್ಷೌ- ॥
ಹಿಣಿಗೊಡೆಯನಾದನೊಳ್ ರಾ ।
ವಣನೊಳ್ ವಿದ್ವಿಷ್ಟಸೈನ್ಯವಿದ್ರಾವಣನೊಳ್ ॥೪॥

ಮತ್ತಿತ್ತ ರಾಮಲಕ್ಷ್ಮಣರ ಸಹಸ್ರಾಕ್ಷೌಹಿಣೀ ಬಲಕ್ಕಧಿಪರಪ್ಪ ಸುಗ್ರೀವ ಪ್ರಭಾಮಂಡಳಸಮನ್ವಿತರ್ ಸಂಗ್ರಾಮೋತ್ಸುಕಚಿತ್ತರಾಗಿ ಪೆಱರುಮತಿಬಳರಪ್ಪ ವಿದ್ಯಾಧರರ್ಬಂದು ಕೂಡುವುದುಮವರನೊಳಕೊಳುತ್ತುಮಿರ್ದರ್, ತದಕ್ಷೌಹಿಣೀ ಪ್ರಮಾಣಮೆಂತೆನೆ ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದು ಪೃತನೆಯೆಂದುಂ ಚಮುವೆಂದುಮಾನೀಕಿನಿಯೆಂದುಮೆಂಟು ತೆಱದಿಂ ಪಡೆಗೆ ಪೆಸರಕ್ಕುಮಲ್ಲಿ,

ಒಂದಾನೆಯ ಕಾಲ್ಗಾಪಿನೊ ।
ಳೊಂದು ರಥಂ ಮೂಱು ತುರಗಮೈದುಂ ಕಾಲಾ- ॥
ಳೊಂದಾಗಿ ಬಂದು ಮೊನೆಯೊ ।
ಳ್ನಿಂದಂದದು ಪತ್ತಿಯೆಂಬ ಪೆಸರಂ ಪಡೆಗುಂ ॥೫॥

ತ್ರಿಗುಣಂ ಪಿರಿದಕ್ಕು ಪ ।
ತ್ತಿಗೆ ಸೇನೆಯದಕ್ಕೆ ಮತ್ತೆ ಸೇನಾಮುಖಮುಂ ॥
ತ್ರಿಗುಣಂ ಪಿರಿದಕ್ಕುಮದಂ ।
ತ್ರಿಗುಣಿಸಿದೊಡೆ ಗುಲ್ಮಮೆಂಬ ಪೆಸರಂ ಪಡೆಗುಂ ॥೬॥

ತ್ರಿಗುಣಿಸು ಗುಲ್ಮಮನದು ನೆ ।
ಟ್ಟಗೆ ವಾಹಿಯಕ್ಕುಮಂತೆ ತದ್ವಾಹಿನಿಯಂ ॥
ತ್ರಿಗುಣಿಪುದುಂ ಪೃತನೆಯದಂ ।
ತ್ರಿಗುಣಿಸೆ ಪೆಱತೇನೊ ಚಮುವೆನಲ್ಪೆಸರ್ವಡೆಗುಂ ॥೭॥

ಈ ನೆಗಟ್ದಿ ಚಮೂತ್ರಿತಯಮ ।
ದಾನೀನಿಕಿನಿಯಕ್ಕುಮದು ಪದಿರ್ಮಡಿಸಲೊಡಂ ॥
ತಾನಕ್ಷೌಹಿಣಿಯಕ್ಕುಂ ।
ಜೈನೋಕ್ತಮರನ್ಯರೆತ್ತಲಱಿವರ್ಮೂಖರ್ ॥೮॥

ಇಂತೆನಿಸಿದಕ್ಷೌಹಿಣಿಯೊಳಗಾನೆಗಳಿಪ್ಪತ್ತೊಂದು ಸಾಸಿರದೆಂಟುನೂಱೆಪ್ಪತ್ತಕ್ಕುಂ ರಥಂಗಳುಮನಿತೆಯಕ್ಕುಮಱುವತ್ತಯ್ದು ಸಾಸಿರದಱುನೂಱಪತ್ತು ಕುದುರೆಯಕ್ಕುಮೊಂದು ಲಕ್ಕಮುಮೊಂಬತ್ತು ಸಾಸಿರದ ಮೂನೂಱಯ್ವತ್ತು ಕಾಲಾಳಕ್ಕುಂ,

ಒಂದಕ್ಷೌಹಿಣಿಗಿನಿತ ।
ಕ್ಕುಂ ದಲ್ ಚತುರಂಗಸಂಖ್ಯೆಯೆನೆ ಪಡೆಯೆರಡುಂ ॥
ನಿಂದಿಱಿವೊಡೆ ನೆಲನೆಡೆಗಿಱಿ ।
ದೆಂದಱಿವಾ ಪಡೆಯ ಪವಣನಱಿವವನಾವಂ ॥೯॥

ಗಣಿತಿಗನಿನಿ ತನಿತಕ್ಷೌ ।
ಹಿಣಿಯೆಂದೆಣಿಸಲ್ಸಮರ್ಥನಕ್ಕುಮ ರಥವಾ- ॥
ರಣ ವಾಹ ಪದಾತಿಗಳಂ ।
ಗುಣಿಯಿಸಲಾರ್ತಪನೆ ರಾಮರಾವಣ ಬಲಮಂ ॥೧೦॥

ಭಗಣದ ಲೆಕ್ಕಮಂ ಮಱಿಯ ನೀರ್ವನಿಯಂ ಪರಮಾಣುಸಂಖ್ಯೆಯಂ
ಗಗನದ ಸೀಮೆಯಂ ಜಳಧಿವೀಚಿಗಳಂ ದೆಸೆಯಂತಮಂ ಪವ-
ಣ್ಬುಗಿಸಲೆರಟ್ಟಿಲಂಗಳ ಮದದ್ವಿಪ ವಾಹ ವರೂಥ ಕಿಂಕರಾ-
ಳಿಗಳ ಪವಣ್ಗಳಂ ಪವಣಿಸಲ್ಬಗೆದಪ್ಪನೆ ಗಾಂಪನಾಗನೇ ॥೧೧॥

ಇಂತತಿ ಪ್ರಬಲಮಪ್ಪುಭಯಮುಮಾಯುಧಮನರ್ಚಿಸುವ ವಿಜಯವಾರಣ ವಾಜಿಗಳಂ ಪೂಜಿಸುವ ವೀರಸಂನ್ಯಸನಮಿರ್ಪ ಸುಭಟಾಲಾಪಮನಾಲಿಸುವ ರವಳಿ ಘೋಷಿಸುವ ದುಂದುಗದಿನಂದಿನಿರುಳಂ ಕಳಿಪೆ ನೇಸರ್ಮೂಡುವುದುಮಿಂದಗಿ ಬೆಸಸಿದಂದದೊಳ್,

ಆರೆಮಗಿದಿರ್ಚುವರ್ ಸಮ ।
ರಾರಂಭಕ್ಕಾಮೆ ಮುಖ್ಯ ನಾಯಕರೆಮೆನು- ॥
ತ್ತಾರಿಂ ಮುನ್ನಂ ಸೆರಗಂ ।
ಪಾರದೆ ಹಸ್ತಪ್ರಹಸ್ತರುಱಿದ್ದೊಡ್ಡಿರ್ದರ್ ॥೧೨॥

ಮಾರೀಚಂ ಮೊದಲಾಗೆ ಮ ।
ಹಾರಥರೊಡನೇಱಿ ಸಿಂಹರಥಮಂ ರಥಿಗಳ್ ॥
ನೀರದಗರ್ಜನಮಂ ರಣ ।
ಭೇರೀರವಮಿಱಿಪೆ ಲಂಕೆಯಂ ಪೊಱಮಟ್ಟರ್ ॥೧೩॥

ಪುಲಿಯ ರಥದೊಳ್ಬಲರ್ ಮೆ ।
ಯ್ಗಲಿಗಳ್ವಜ್ರೋದರಾದಿ ವೀರಪ್ರಮುಖರ್ ॥

ಕಲಹಕ್ಕೆ ನಡೆಯೆ ನಡೆದರ್ ।
ಪಲಂಬರಂಬರಚರರ್ತುರಂಗಮದಟಿದೊಳ್ ॥೧೪॥

ಕರಿತುರಗಾರೂಢರ್ ಸಂ ।
ಗರಕ್ಕೆ ತನಗಂಗರಕ್ಕೆಯೆನಿಸಿದ ವಿದ್ಯೈ- ॥
ಧರತನಯರೇಟಿಕೋಟಿಯು ।
ಮರೆಬರೆ ರಣಭೂಮಿಗ್ರಿಂದ್ರಜಿತು ಪೊಜಿಮಟ್ಟಂ ॥೧೫॥

ಇಂದಗಿಯ ಕೆಲದೊಳಹಿತರ ।
ನಿಂದಗಿದುಗಿವಂತು ಮಾಟ್ಟಿವೆಮಗಳ್ಕದರಾ- ॥
ರೆಂದಂಬಂ ತೂಗುತ್ತುಂ ।
ಬಂದರ್ ಜಿತಶತ್ರುಮೇಘವಾಹನವೀರರ್ ॥೧೬॥

ಶಾತತ್ರಿಶೂಲರುಚಿ ತೀ ।
ವ್ರಾತಪಮಂ ಬೇಱಿ ರಿಪುಬಳವಿಯೋ- ॥
ತ್ಪಾತಮೆನೆ ಕುಂಭಕರ್ಣಂ ।
ಜ್ಯೋತಿಷ್ಪ್ರಭ ಮಣಿವಿಮಾನದೊಳ್ಪೊಱಮಟ್ಟಂ ॥೧೭॥

ಅಂತು ನಿಜವಿಜಯಸೇನ ಸಂಗ್ರಾಮದೊಳೊಡ್ಡಿ ನಿಲ್ವುದುಂ,

ಪಿಡಿದುಗ್ರಾಸ್ತ್ರಮನೇಱಿ ಪುಷ್ಪಕಮನಾಶಾಚಕ್ರಮಂ ಚಕ್ರಮಂ
ನಡೆ ನೋಡುತ್ತುಮಪಾರಸೈನ್ಯಸಹಿತಂ ಪೂರ್ಣೇಂದುವಂ ಪೋಲೆ ಬೆ-
ಳ್ಗೊಡೆ ಭೇರೀರವಮೇಕಶಂಖನಿನದಂ ತಳ್ಪೊಯ್ಯೆ ದಿಕ್ಚಕ್ರಮಂ
ನಡೆದಂ ದಾನವಚಕ್ರವರ್ತಿ ಸಮರಪ್ರಾರಂಭಸಂರಂಭದಿಂ ॥೧೮॥

ಅಂತು ನಡೆವೆಡೆಯೊಳ್,

ಒಡೆಯೆ ಸುರಾಲಯಂ ಕೆಡೆಯೆ ಪರ್ವತಸಂಕುಳಮುರ್ವರಾತಳಂ
ನಡುಗೆ ದಿಶಾನನಂ ಪೊಗೆಯೆ ಭೂಮಿರುಹಂ ಪ್ರತಿಕೂಲವಾಯುವಿಂ-
ದುಡಿಯೆ ಖಗಾಳಿ ದುಸ್ಸ್ವರದಿನೂಳೆ ರಣಾಗ್ರಹದುರ್ಣಯಕ್ಕಣಂ
ಸೆಡೆಯದೆ ಸಂಗರಾವನಿಗೆ ಮಾನಧನಂ ನಡೆದಂ ದಶಾನನಂ ॥೧೯॥

ಸಮರಾರ್ಥಿ ಪೊಣ್ಮುವುತ್ಪಾ ।
ತಮನಪಶಕುನಂಗಳಂ ದಶಾಸ್ಯಂ ವೀರ- ॥
ಪ್ರಮುಖಂ ಬಗೆಯದೆ ಬಂದಂ ।
ಸಮರಾವನಿಗರ್ಥಿ ದೋಷಮಂ ಬಗೆದಪನೇ ॥೨೦॥

ಅಂತು ಬಂದೊಡ್ಡಿ ನಿಲ್ವುದುಂ,

ದನುಜೇಂದ್ರನೊಡ್ಡು ಕಗ್ಗನೆ ।
ಕನೆಯುತ್ತಿರೆ ನೋಡಿ ಕಂಡು ವಾನರಚಿಪ್ನರ್ ॥
ಮುನಿಸನುವಿಸೆ ಕಾದುವ ತ ।
ಕ್ಕಿನೊಳಾಹವಭೂಮಿಗೆಕ್ಕೆಯಿಂ ನಡೆತಂದರ್ ॥೨೧॥

ಪಲತೆಱದ ಪಱೆಯ ದನಿಗಳ್ ।
ನೆಲೆವೆರ್ಚುವ ಕಡಲ ತೆರೆಯ ತಾರ್ಮುಟ್ಟಿನ ಬ- ॥
ಲ್ಲುಲಿಯೆನೆ ಕಲಹಕ್ಷೋಣಿಗೆ ।
ಪಲಬರ್ಸುಭಟರ್ಕಪಿಧ್ವಜರ್ಕವಿತಂದರ್ ॥೨೨॥

ಪಲತೆಱದ ವಾಹನಂಗಳ ।
ನಲಂಘ್ಯವಿಕ್ರಮರೆನಿಪ್ಪ ವಿದ್ಯಾಧರವೀ- ॥
ರಲಲಾಮರೇಱೆ ಸಂಗ್ರಾ ।
ಮಲೋಲುಪರ್ಸಮರಭೂಮಿಗಂದೇೞ್ತಂದರ್ ॥೨೩॥

ನಲ ನೀಲರ್ಸಮರೋರ್ವಿಗೆ ।
ವಿಲಯಾಗ್ನಿಗಳಂತೆ ಮುಂತೆ ನಡೆದರ್ವಿದ್ಯಾ- ॥
ಬಲದ ಭುಜಬಲದ ಸೆಣಸಿಂ ।
ಕಲಿಗಳ್ ಹಸ್ತಪ್ರಹಸ್ತರೊಳ್ತಳ್ತಿಱಿಯಲ್ ॥೨೪॥

ಅಂಗದ ಕುಮಾರನಾಹವ ।
ರಂಗದೊಳಾನಿಂದ್ರಜಿತ್ಕುಮಾರಂಗೀವೆಂ ॥
ಭಂಗಮನೆಂದು ಪರಾಕ್ರಮ ।
ತುಂಗಂ ಕಡುಕೆಯ್ದು ಕದನಕೇಳಿಗೆ ಬಂದಂ ॥೨೫॥

ಅಮಿತ ಚತುರಂಗಸೇನಾ ।
ಸಮನ್ವಿತರ್ ಪ್ಲವಗ ಕೇತುಗಳ್ಮಾರುತಮಾ- ॥
ರ್ಗಮನೆಳಸಿ ಬಳಸಿ ನಡೆದ ।
ರ್ಸಮರಕ್ಷೋಣಿಗೆ ಸುಷೇಣನುಂ ಜಾಂಬವನುಂ ॥೨೬॥

ಅಂತು ನಿಜನಾಮಾಂಕಿತವಿಜಯ ವೈಜಂಯಂತಿಗಳಂಬರಮನಳ್ಳಿಱಿಯೆ ಜಾಂಬವಾಂಗದ ಸುಷೇಣಪ್ರಮುಖನಿಖಿಳ ವಲೀಮುಖಧ್ವಜಪ್ರಧಾನರ್ ರಣರಸಿಕರಾಗಿ ನಡೆದರ್ಮತ್ತಂ ಪ್ರಭಾಮಂಡಳನುಂ ಮಹೇಂದ್ರನುಂ ಚಂದ್ರಾಭನುಂ ಮಹಾ ಬಲನುಂ ಸಮುನ್ನತಬಲನುಂ ಸರ್ವಪ್ರಿಯನುಂ ದುರ್ಬುದ್ಧಿಯುಂ ಶರಭನುಂ ಪ್ರೀತಿಂಕರನುಂ ದೃಢರಥನುಂ

ಕುಮುದಾ ವರ್ತನುಂ ಸೂರ್ಯಜ್ಯೋತಿಯುಂ ಜಯಾಶ್ರಯನುಂ ವಿಮಲಸಾಗರನುಂ ಸನ್ಮಾನನುಂ ರತಿವರ್ಧನನುಮೆಂಬ ಪೆಸರ ನಾಯಕರುತ್ಸಾಯಕರಾಗಿ ನಡೆದರ್ಮತ್ತಂ,

ಓರೋರ್ವರ ಚತುರಂಗಮ ।
ನಾರೆಣಿಸಲ್ನೆರ್ಜಿವರೆನೆ ರಣಾನಕರುತಿ ದಿ- ॥
ಗ್ವಾರಣಮನೆಯ್ದೆ ಖೇಚರ ।
ವೀರರಗುರ್ವುರ್ವೆ ಸಂಗರೋರ್ವಿಗೆ ಬಂದರ್ ॥೨೭॥

ಜವನೊಳ್ ದೊರೆಯೆನಿಸುವ ಖಚ ।
ರವೀರಭಟರೇಜೆ ಪುಲಿಯ ರಥಮಂ ಸಮರೋ- ॥
ತ್ಸವದಿಂ ನಡೆದರ್ ದಶವದ ।
ನವರೂಥಿನಿಯಂ ಜವಂಗೆ ಬಾಣಸುಗೆಯ್ಯಲ್ ॥೨೮॥

ಪ್ರಸ್ತಾರಂ ದೋರ್ಬಲಮಂ ।
ದುಸ್ತರಮಂ ಬೀಱಲೆಂದು ರಣಭೂಮಿಗೆ ತೇ- ॥
ಜಸ್ತರಣೆ ನಡೆದನಹಿತ ತ ।
ಮಸ್ತೋಮಮನಳುರೆ ಮಂಡಳಾಗ್ರಮಯೂಖಂ ॥೨೯॥

ಮತ್ತಂ ವಿಪಕ್ಷಬಳಕುಲಧರಕುಲಿಶಪ್ರಹಾರನೆನಿಸಿದ ಪ್ರಸ್ತಾರನುಂ ಕದನಕೇಳೀ ಕೃತಾಂತನೆನಿಸಿದ ಹಿಮವಂತನುಂ ರಿಪುಮನೋಭಂಗನೆನಿಸಿದಭಂಗನುಂ ಪ್ರಚಂಡಪ್ರತಾಪನೆನಿಸಿದ ಪ್ರಿಯರೂಪನುಮಾದಿ ಯಾಗನೇಕಾನೇಕದ್ವಿಪಂಗಳನೇಱಿ ರಣಕ್ಷೋಣಿಗೆ ನಡೆದರ್, ಮತ್ತಂ ಯಮಸಮಕಕ್ಷನಪ್ಪ ದುಷ್ಪ್ರೇಕ್ಷನುಂ ರಿಪುಘಟಾವಿಘನಮೃಗೇಂದ್ರನಪ್ಪ ಪೂರ್ಣಚಂದ್ರನುಂ ಪ್ರಧನರಥಪಯೋಧಿಯಪ್ಪ ಸುವೀಧಿಯುಂ ರಿಪುಹೃದಯ ವಿದಾರಣರಣಾನಕಸ್ವನನೆನಿಪ್ಪ ನಿಸ್ವನನುಂ ನಿರ್ಜಿತಾನೇಕವಿಗ್ರಹನೆನಿಪ್ಪ ಪ್ರಿಯವಿಗ್ರಹನುಂ ಮೊದಲಾಗೆ ಸಿಂಹರಥಮನೇಱಿ ಸಂಗರಾಂಗಣಕ್ಕೆ ನಡೆದರ್ ಮತ್ತಂ ವಿದ್ಯುತ್ಕರ್ಣ ಕಾಲ ಕ್ಷಿತಿ ಧರತರಳ ಸಂಗ್ರಾಮಪ್ರಮುಖ ನಿಖಿಳ ಘೋಳಾಯ್ತರ್ ಮನೋಜವಜಾತ್ಯಶ್ವಂಗಳ ನೇಱಿ ಕದನ ಕೇಳಿಗೆ ನಡೆದರ್ ಮತ್ತಂ.

ಅನುವರಭೂಮಿಗೆ ಬಲವಾ ।
ಹನನುಂ ರವಿ ಹನುಮನುಂ ಪ್ರಚಂಡಾರಿಯುಮು- ॥
ಗ್ರನುಮಾದಿಯಾಗೆ ಖೇಚರ ।
ರನೇಕವಾಹನಮನೇಱಿ ನಡೆದರನೇಕರ್ ॥೩೦॥

ಅಂತು ಸಂಗ್ರಾಮಭೂಮಿಗೆ ವಂದು ರಘುವೀರನ ಬಲದ ಸೇನಾನಾಯಕರಪ್ಪ ನಳನೀಲರ ಪೇೞ್ದೆಡೆಯೊಳೊಡ್ಡಿ ನಿಲ್ವುದುಂ,

ಅಪ್ರತಿಮಪ್ರತಾಪನಿಧಿ ಭೂಷಣರತ್ನಪಟತ್ಕಿರೀಟರ
ತ್ನಪ್ರಭೆ ಬೇಱೆ ಬೇಱೆ ಕುಡುಮಿಂಚಿನ ಗೊಂಚಲನುಗ್ರಯುದ್ಧಕೇ-
ಳೀಪ್ರಿಯನಪ್ರಮೇಯಬಲನುದ್ಗತಮುದ್ಗರಹಸ್ತನೇಱೆ ರ-
ತ್ನಪ್ರಭಮಂ ವಿಮಾನಮನಗುರ್ವಿಸಿದಂ ನಭದೊಳ್ವಿಭೀಷಣಂ॥೩೧॥

ಮತ್ತ ಮಾತನ ಸಮಕ್ಷದೊಳ್ವಿಜೌಕ್ಷೌಹಿಣಿಗಾಗಸಮಡೆನೆಱೆಯದೆನಿಸಿ,

ಬಲನಾರಾಯಣರಂ ನಿರೀಕ್ಷಿಸಿ ದಶಗ್ರೀವಂ ರಣಕ್ಷೋಣಿಯೊ-
ಳ್ತಲೆಯಂ ತೂಗೆ ಪೊಡರ್ಪುದೋರ್ಪನೆನುತುಂ ಬಂದೊಡ್ಡಿ ತಾರಾಭ್ರಮಂ-
ಡಲಮಂ ಮೂವಳಸಾಗಿ ಮುತ್ತಿ ವಿಳಸದ್ಭೂಷಾಪ್ರಭಾಮಂಡಳಂ
ಬಲವಾರಾಶಿಯ ಮಧ್ಯದೊಳ್ತರುಣಸಂತಿರ್ದಂ ಪ್ರಭಾಮಂಡಳಂ ॥೩೨॥

ಮತ್ತಂ ತತ್ಸಮೀಪದೊಳಸಂಖ್ಯಾತವಾಹಿನೀ ಸಹಿತನಾಗಿ ನಿಜಕಿರೀಟ ಪ್ರಭೆ ನಭಮನಾವರಿಸೆ,

ಸುಗ್ರೀವಂ ಕಡುಕೆಯ್ದುದ।
ಶಗ್ರೀವನೊಳಿಱಿಯಲಾನೆ ಸಾಲ್ವೆನೆನುತ್ತುಂ॥
ವಿಗ್ರಹಕಾಂಕ್ಷೆಯಿನಿರ್ದನು।
ದಗ್ರಬಳಂ ರತ್ನಮಯವಿಮಾನಾರೂಢಂ ॥೩೩॥

ಮತ್ತಂ ವಿರೋಧಿಬಳಸಂವರ್ತನಸಮಯನೆನಿಪ ಯುದ್ಧಾವರ್ತನುಂ ರಣಕ್ರೀಡಾಸುಕೃತಕೃತಾಂತನೆನಿಪ ವಸಂತನುಂ ರಿಪುಕುಳಕುಮುದರದನಿಯೆನಿಪ ಕುಮುದನುಂ ಕೀರ್ತಿಚಂದನರಸಚರ್ಚಿತದಿಗಂತನನಿಸಿದರ್ಪಜ್ಜಿತ್ತನುಂ ವಿದ್ವಿಷ್ಟಕುಳ ಕಾಳೋರಗನೆನಿಪ್ಪರಂಗನುಂ ಮೊದಲಾಗೆ ಪಲರುಂ ಖಚರಪರಿವೃಢರಂಬರಮನಾವರಿಸಿ ವಿವಿಧಾಯುಧಹಸ್ತರ್ ಜ್ಯೋತಿರಮರ ನಾಯಕರಂತಿರ್ಪುದುಮಾ ವಿದ್ಯಾಧರಾಧಿರಾಜ ಮಧ್ಯದೊಳ್,

ಚಾಮರಮನಿಕ್ಕೆ ಖೇಚರ।
ಕಾಮಿನಿಯರ್ಮಣಿವಿಮಾನದೊಳ್ಮಣಿಮಯ ಘಂ-॥
ಟಾ ಮಧುರಧ್ವನಿಯೊಳ್ಕ।
ಲ್ಪಾರಮರಿರ್ಪಂತೆ ರಾಮಲಕ್ಷ್ಮಣರಿರ್ದರ್ ॥೩೪॥

ಅಂತುಭಯಬಲಮುಂ ನೆಲನುಮಾಗಸಮುಮೆಡೆನೆಱೆಯದಂತು ಸಮುಚಿತವ್ಯೂಹಪ್ರತಿವ್ಯೂಹಸ್ಥಾಪನೆಗಳಂ ಯಥಾವಿಧಿಯಿಂ ಪ್ರಯೋಗಿಸಿ ತಂತಮ್ಮ ಮೊನೆಯ ನಾಯಕರ ಬಿರುದಿನ ಜೀರವಪ್ಪಳಿಯ ಪದಿರ ಪಱೆಯ ಕಾಳೆಯ ಕಳಕಳಂ ಕಿವಿ ಶಬ್ದಂಗಿಡೆ ದಿವಮನೆಯ್ದೆ ಮಿಳಿರ್ದು ಮಿಳ್ಳಿಸುವ ಪೆಸರ ಕುಱುಪಿನ ಪಳಯಿಗೆಗಳುಂ ಸಂದಣಿಸಿ ಮುಂದೆ

ನಿಂದ ಪಲವುಂ ಸಿಂದಂಗಳುಂ ಕಣ್ಬೊಲಕ್ಕೆ ಬರೆ ಕಸಲ್ದೊನಲ್ದು ಕದನಕೇಳೀ ಕುತೂಹಲರಾಗಿರ್ಪುದುಮಿತ್ತ ನಳ ನೀಲರುಮತ್ತ ಹಸ್ತಪ್ರಹಸ್ತರುಂ ಪ್ರಳಯಪ್ರಭಂಜನಂ ಬೀಸುವಂತೆ ಕೈವೀಸುವುದುಂ,

ಇಳೆ ಮೊಟಗಿತ್ತೊ ಭಾನುರಥಮುರ್ವಿಗೆ ಬಿಟ್ಟುದೊ ಶೇಷಕಂಠಕಂ-
ದಳಕರಿನಾಸ್ಥಿ ಸುಟ್ಟೆದುದೊ ಗೋತ್ರನಗಂ ಪಿಳಿಗಿತ್ತೊ ಸಾಗರಂ
ತಳರ್ದುದೊ ಮೇರೆಯಿಂದಮುಱಿದಂದಿನಿತದ್ಭುತನಾದಮಾದಮ
ಗ್ಗಳಿಸದೆನಲ್ ವಿಘೂರ್ಣಿಸಿದುದಿರ್ವಲದೊಳ್ಸಮರಾನಕಸ್ವನಂ ॥೩೫॥

ಕರಿಯೊಳ್ಕರಿ ಹಯದೊಳ್ ಹಯ ।
ಮುರುರಥದೊಲ್ ರಥಮುಮಾಳ್ಗಳೊಡನಾಳ್ಗಳ್ ಕಾ- ॥
ಯ್ದುರವಣಿಸಿ ತಾಗೆ ತಾಗಿದು ।
ವೆರಡೊಡ್ಡುಂ ನೆಲದೊಲಾಗಸಂ ತಾಗುವವೋಲ್ ॥೩೬॥

ಧರೆ ಕಂಪಂಗೊಳ್ವಿನಂ ಪೆರ್ವಡೆಗಳೆರಡುಮೋರೊಂದಱೊಳ್ತಾಗೆ ತೂರ್ಯ-
ಸ್ವರಮುಂ ಕೋದಂಡ ಟಂಕಾರಮುಮಿಭರದಸಂಘಟ್ಟ ನಿರ್ಘೋಷಮುಂ ಜೋ-
ದರ ಬಾಣಾಸಾರ ಘೋರಧ್ವನಿಯುಮಸಿಖಣತ್ಕಾರಮುಂ ಪರ್ವಿ ರೋದೋಂ
ತರಮಂ ಸಂವರ್ತಕಾಲಕ್ಷುಭಿತಜಲನಿಧಿಧ್ವಾನದಂತಾದುದೆತ್ತಂ ॥೩೭॥

ಕರವಾಳೊಳ್ಕರವಾಳ್ವಳಂಚೆ ಕಿಡಿಗಳ್ಪೇರಾನೆ ಪೇರಾನೆಯೊ-
ಳ್ಭರದಿದಂ ಮೊಗಮಿಕ್ಕೆ ದಂತಶಕಲಂಗಳ್ತೇರ್ಗಳೊಳ್ತೇರ್ಗಳು-
ಬ್ಬರಮೇಸಾಡೆ ತುರಂಗಕೇತನಚಯಂಗಳ್ ಕೊಂತದೊಳ್ಕೊಂತಮಾ-
ಸುರಮಪ್ಪಂತೆಡರೊತ್ತೆ ತೋರವೆಣಗಳ್ ಬೀಟ್ಟಿಂದುವುಗ್ರಾಜಿಯೊಳ್ ॥೩೮॥

ಅಂತು ಚತುರಂಗ ಸೇನೆ ಭರಂಗೆಯ್ದು ತಾಗಿ ಥಟ್ಟೊತ್ತಿಱಿವ ಸಮಯದೊಳ್

ನಡೆಗಿಡೆ ಗಾಳಿ ಪೂಟಿ ಗಗನಸ್ಥಳಿ ತೆಕ್ಕನೆ ತೀವೆ ದಿಙ್ಮುಖಂ
ನಡುವಿರುಳಂತೆ ಕಟ್ಟಲಿಸೆ ಪಟ್ಟಪಗಲ್ ರಣಮಂನಿರೀಕ್ಷಿಸ-
ಲ್ಪಡೆಯದೆ ದೇವರುಂ ದಿವಿಜಕಾಂತೆಯರುಂ ಬೆಱಗಾಗಿ ಪೂಣೆವೂ-
ಕ್ಕೊಡನೊಡನಾರ್ದೆರಟ್ಟಿಡೆಯ ಬಿಲ್ವಡೆ ಬಿಱಿಮುದಸ್ತ್ರವಿದ್ಯೆಯಂ ॥೩೯॥

ದೆಸೆಯಂ ನುಂಗಿ ದಿನೇಶನಂ ನೊಣೆದು ರೋದೋಭಾಗಮಂ ಪೀರ್ದು ಸಂ-
ದಿಸಿ ಮುಂದೈಸಿ ಧನುರ್ಬಲಂಗಳಿಸೆ ಬಾಣಶ್ರೇಣಿ ಸೇನಾಂಗದೊ-
ಳ್ಪಿಸುನೆತ್ತರ್ಪೊಱಪೊಣ್ಮೆ ಸೋರ್ತರೆ ಕರುಳ್ಕಣ್ಣಾಲಿಗಳ್ಪೂಸೆ ಖಂ-
ಡಿಸೆ ಕೈಗಳ್ಕಡಿಖಂಡಮಾಗೆ ಕಣಕಾಲ್ನಟ್ಟಿರ್ದುವುಗ್ರಾಜಿಯೊಳ್ ॥೪೦॥

ರಣಗಟ್ಟಿಲೆ ಕೈಮಿಗೆ ಬಿ ।
ಲ್ಲಣೆ ಕಡುಕೆಯ್ದುಭಯಬಲದೊಳಂಬಿಕ್ಕುವುದುಂ ॥
ಕಣೆಕಣೆಯನೊರಸೆ ಕದನಾಂ ।
ಗಣದೊಳ್ಕಿಡಿ ಕೆದಱಿದತ್ತು ಕೆಂಡದ ಮೞೆಯಂ ॥೪೧॥

ಮಾರ್ಮಲೆದು ಬಿಲ್ಲ ಬಿತ್ತಿಗ ।
ರೊರ್ಮೊವಲಿಸ ಕಣೆಗಳುರ್ಚಿ ಪೋದುವು ನೆಜಿನಂ ॥
ಧರ್ಮಗುಣಚ್ಯುತರನ್ಯರ ।
ಮರ್ಮವಿಭೇದಿಗಳೆನಿಪ್ಪುದೊಂದಚ್ಚರಿಯೇ ॥೪೨॥

ಎಡೆಗಿಡೆ ಗಗನಂ ಪವನಂ ।
ನಡೆಗಿಡೆ ಬಿಲ್ಪಡೆಗಳಿಸುವ ಕಣೆಗಳ್ನೆಱಿನಂ ॥
ಬಿಡೆ ನಟ್ಟು ಸುಭಟರಸುವಂ ।
ನಡೆಯಿಸಿದುವು ಯಮಪುರಕ್ಕೆ ಯಮದೂತರವೋಲ್ ॥೪೩॥

ತುಡುವಂಬಂ ಬಿಡುವಂಬಂ ।
ನಡುವಂಬಂ ಕಾಣ್ಬುದಾರ್ಗಮರಿದೆಂಬಿನೆಗಂ ॥
ಕಡುವಿಲ್ಲರ್ ಕಡುಕೆಯ್ದಿಸೆ ।
ಕಡುವೇಗದೆ ಪರಿದುವರುಣಜಲದ ಪೊಸಲ್ಗಳ್ ॥೪೪॥

ಬಾಣಾಂಧಕಾರಮುದ್ಗತ ।
ಶೋಣಿತಸಂಧ್ಯಾಭ್ರಮಸ್ತಮಿತರವಿಕಿರಣ- ॥
ಶ್ರೇಣಿ ಧನುರ್ಬಲ ಸಮರ ।
ಕ್ಷೋಣಿ ಚಮೂ ಕಾಲರಾತ್ರಿ ಪಡೆಮುದಗುರ್ವಂ ॥೪೫॥

ರವಿಕಿರಣಂಗಳಸ್ತಮಿಸೆ ಕಟ್ಟಲೆ ಕೈಮಿಗೆ ಸುತ್ತಿ ಮುತ್ತಿ ದಿ-
ಗ್ವಿವರಮನಾಗಸಂ ಪೊಳೆವ ಪೊಂಗಱೆಯಿಂ ಕಪಿಲಾಗಿ ಘೋರಸ-
ಲ್ಪವನ ಜವಂಗಳಿರ್ವಲದ ಬಿಲ್ಪಡೆ ಪೊಕ್ಕಿಸೆ ಬಾಣಸಂಕುಳಂ
ಕವಿದುವು ತೋಳೆವಿಂಡು ಕವಿವಂತೆಲೆಯಿಕ್ಕಿದ ಕಾನನಂಗಳಂ ॥೪೬॥

ಸೆರಗಂ ಪಾರದೆ ಪೂಣೆವೊಕ್ಕು ಪೊಱಮುಯ್ವಂ ತಾಗೆ ಕೈವೇಗಮ-
ಚ್ಚರಿಯಂ ಪುಟ್ಟಿಸೆ ಕೀವಿ ತೊಟ್ಟಿಸುವುದುಂ ನೇರ್ದಿಕ್ಕೆ ಸರ್ವಾಂಗಮಂ
ಶರಜಾಳಂ ಬಿಸುನೆತ್ತರುಣ್ಮೆ ಸೊರೆನೆತ್ತರ್ಸೂಸೆ ಕೆನ್ನೆತ್ತರಂ
ಬಿರಿವಿಟ್ಟರ್ಪಿಸೆ ಕೂಡೆ ಬಿಲ್ಪಡೆ ಪಡಲ್ವಟ್ಟಿತ್ತು ಸಂಗ್ರಾಮದೊಳ್ ॥೪೭॥

ಓವದೆ ಬಿತ್ತಿ ಗರದುರ್ತಿಸೆ ರೌದ್ರಶರಾಳಿ ರೋಮರೋ-
ಮಾವಳಿವಪ್ಪುದುರ್ಚೆ ಬಿಸುನೆತ್ತರ ಸುಟ್ಟುರ ಪರ್ವಿ ವಹ್ನಿಜಿ-
ಹ್ವಾವಳಿಯಂದಮಾಗೆ ತೊವಲಿಕ್ಕಿದ ಪೆರ್ವಟಿಖ ಬೇಗೆಗಿರ್ಚೆಸೊ-
ಳ್ಪೇವಪೊಲಿರ್ದುವಿರ್ವಲದ ಬಿಲ್ಲಣಿಗಳ್ ರಣರಂಗಭೂಮಿಯೊಳ್ ॥೪೮॥

ಸ್ತನಿತಧನುರ್ಗುಣಧ್ವನಿ ಶತಪ್ರದಶಸ್ತ್ರಮರೀಚಿ ನಾಡೆ ಕಂ-
ಗನೆ ಕನಿವೊಡ್ಡು ಕಾರಮುಗಿಲಂತಿರೆ ಘೋರನೆ ಕೊಂಡುದಾಗಳಂ-
ಬಿನ ಮಱೆ ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ಬೆಣಂ ರಣಾ-
ವನಿತಳಮಿರ್ದುದಂಕುರಿತಮಾದವೊಲೊಕ್ಕ ಕರುಳ್ವಿಣಿಲ್ಗಳಿಂ ॥೪೯॥

ಸತತಂ ಸತ್ಪಥವರ್ತಿಗಳ್ ಋಜುಗಳತ್ಯುತ್ಕಷ್ಟವಂಶಂಗಳ-
ನ್ವಿತಸದ್ಧರ್ಮಗುಣಂಗಳಸ್ತ್ರತತಿಗಳ್ನಿಸ್ತ್ರಿಂಶಧಾನುಷ್ಕಸಂ-
ಗತಿಯಿಂದಂ ಪರಮರ್ಮಭೇದಿಗಳೆನಲ್ತೀಕ್ಷ್ಣಂಗಳುಂ ಮಾಂಸಲೋ-
ಹಿತವಕ್ತ್ರಂಗಳುಮಾದುವೆನ್ನರುಮನೇಂ ದುಸ್ಸಂಗಮೇಗೆಯ್ಯದೋ ॥೫೦॥

ಅಸುರಮಾಗೆ ಕೈಯ ಕಣೆಗಳ್ತವುವನ್ನೆಗಮೆಚ್ಚು ಬಿಟ್ಟು ಬಾ-
ಣಾಸನಮಂ ಕರುತ್ತಿಜೆದು ಕಟ್ಟದ ಗೇಣುಡಿವನ್ನಮನ್ಯರ-
ಟ್ಟಾಸುರಮಾಗೆ ಕೂರ್ಗಣೆಗಳಿಂದಿಸೆ ಮುಂದಡಿಯಿಟ್ಟು ವೀರಸಂ-
ನ್ಯಾಸದಿನಪ್ಸರೋಗಣಮನಲ್ಲಿ ಕೆಲರ್ಬಸದಾಗೆ ಮಾಡಿದರ್ ॥೫೧॥

ನೊಸಲೊಳ್ನಟ್ಟಂಬಂ ಕಿ ।
ೞ್ತು ಸುಭಟನುಚ್ಚಳಿಸೆ ಪುಣ್ಣಬಾಯಿಂ ನೆತ್ತ- ॥
ರ್ನೊಸಲುರಿಗಣ್ಣುರಿಯೆನೆ ನ ।
ರ್ತಿಸುವ ಮರುಳ್ವಡೆಯ ನಡುವೆ ಮೃಡನಿರ್ದಂ ॥೫೨॥

ಅಂತು ಬಿಲ್ವಡೆ ಪಡಲ್ವಡೆ,

ಜವನೆದೆ ಬಿರ್ಚಿದ ತೆಱದಿಂ ।
ತವುತರ್ಪುದುಮುಭಯಬಲಧನುರ್ಧರಸೈನ್ಯಂ ॥
ಜವನೆರ್ಮೆವೋಜೆಗಳ್ತಾ ।
ಗುವಂತೆ ತಾಗಿದರದುರ್ತು ಕಡಿತಲೆಕಾಱರ್ ॥೫೩॥

ಕೆಂಬಲಗೆಯ ಪೊಳೆಪಿಂ ಸಂ ।
ಧ್ಯಾಂಬುದಮಂ ಪಡೆದು ಜಡಿದು ಕಡಿತಲೆ ತೂಗು- ॥

ತ್ತುಂ ಬಿಡದೆ ಸಿಡಿಲ ಬಳಗಮಿ ।
ದೆಂಬಿನೆಗಂ ತಾಗಿದತ್ತು ಭಾರ್ಗವಸೈನ್ಯಂ ॥೫೪॥

ಅಗಳಿರ್ವಲವ ಕಡಿತಲೆಕಾಜಿರಲಗಲಗಿನೊಳ್ತಾಗಿ ಪಳಂಚಿ ನೀರ್ಘಾತವುಪ್ಪರಂ ತಾಳವಟ್ಟಮವಿತ ಮುಟಿತಮೆಂಬ ಪಲವು ತೆಱದಿಜಿವ ಬಿನ್ನಣದೊಳ್ನೆಱಿದು ತಾಳುಂತಟ್ಟುಂ ಪೊಯ್ಯೆ ಕಡಿಖಂಡಮಾದ ಮೆಯ್ಯುಂ ಕುಣಿಲ್ವಾಜುವ ಮುಂಡಮುಂ ಮುಂಡವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟಿಲ್ಪೊಟ್ಟೆಯುಂ ಕಣಿವೋದ ಕಣ ಕಾಲುಂ ದೊಣೆವೋದ ಮೇಗಾಲುಂ ಪಜೆದ ಪೊರ್ಕುಳ್ಗಳುಂ ಸೋರ್ವ ಕರುಳ್ಗಳುಂ ಆರ್ವ ಮರುಳ್ಗಳುಂ ಕೆತ್ತುವ ತನಿಗಂಡಮುಂ ಕುಣಿವ ಮರುಳ ತಂಡಮುಂ ನೆತ್ತರ ತೊಜಿಯುಂ ನೆಣನ ಪಳ್ಳಂಗಳುಂ ಪೆಣದ ಬಣಂಬೆಗಳುಂ ಕೋಟ್ಮೆ ಮುಳ ಕೋಟ್ಕಿಸಜುಮಗುರ್ವುವಡೆಯೆ

ಪಜಿದ ತಲೆ ರಾಗದಿಂ ಬೊ ।
ಬ್ಬಿಜಿದಾರ್ವಿನಮಟ್ಟೆ ಕಟ್ಟಿದಲಗಿಂದಂ ತ- ॥
ಳ್ತಿಜಿವುದುಮೊಡನೊಡನೆ ಬಯ ।
ಲ್ದೊಜೆವರಿದುವು ರೌದ್ರರಸಮುಮದ್ಭುತರಸಮುಂ ॥೫೫॥

ತಲೆಗರೆಯದಣ್ಮೆ ಸತ್ತರ ।
ತಲೆಗಳನಟ್ಟಿಯೊಳಮರ್ಚಿಕೊಂಡುಯ್ವೆಡೆಯೊಳ್ ॥
ತಲೆ ತಡವರಲಮರಿಯರೇಂ ।
ತಲೆಯಂ ತಲೆವಿಡಿದು ಬಿಡದೆ ತಲೆವೊರ್ತಿರ್ದರ್ ॥೫೬॥

ಅಂತು ಪೇರಣಿ ಪೆಣಮಯಮಾಗೆ ಮೇರೆದಪ್ಪಿದ ಪೂರ್ವಾಪರಪಾರಾವಾರವೀಚಿ ನಿಚಯಮೆನಿಸಿ,

ಆಹವಕರ್ಕಶರಶ್ವಾ ।
ರೋಹಕರೊಟ್ಟೈಸೆ ಕೀಜಿ ಬಿಟ್ಟಕ್ಕುವುದುಂ ॥
ಲೋಹಖುರಂಗಳ್ಪರಿದುವು ।
ವಾಹಿನಿಯ ತರಂಗಮನೆ ತುರಂಗಚಯಂಗಳ್ ॥೫೭॥

ಸೆರಗಂ ಬೆರಗಂ ಬಗೆಯದೆ ।
ಪೊರೆದಾಳ್ದನ ಜೋಳವಾಳಿ ನಿಲೆ ಘೋಟಿರಾಯ್ಟರ್ ॥
ಪರಿಯಿಪುದುಮೊಂದೆ ನೇಣೊಳ್ ।
ಪರಿವಂತಿರೆ ಪರಿದುವುಭಯಬಲದ ಹಯಂಗಳ್ ॥೫೮॥

ಕಟ್ಟಿದ ಪಂಚವಣ್ಣಗೆಯ ಪಟ್ಟೆಯ ತೊಂಗಲೊಳಿಂದ್ರಚಾಪಮಂ
ಪುಟ್ಟಿಸಿ ತೊಟ್ಟ ವಜ್ರಕವಚಚ್ಛವಿಯೊಳ್ಚಪಳಾಕಳಾಪಮಂ
ಪುಟ್ಟಿಸಿ ತಾಗಿ ತಳ್ತಿಱಿದು ಲೋಹಿತ ದೃಷ್ಟಿಯನಾಸವಾರಿಗ-
ಳ್ಪುಟ್ಟಿಸೆ ಮೇರೆದಪ್ಪಿ ಕವಿತಂದುದು ರೌದ್ರರಸಂ ರಣೋರ್ವಿಯೊಳ್ ॥೫೯॥

ಒದವಿದ ಲೋಹವಕ್ಕರೆಯ ವಾಹಕರಿಕ್ಕಿದ ಸೀಸಕಂಗಳಿ-
ತ್ತಿದ ಕರವಾಳ ವಜ್ರಕವಚಂಗಳ ಕಾಂತಿ ದಿಶಾಂತರಾಳಮಂ
ಪುದಿವಿನೆಗಂ ಮನಃಪವನವೇಗದೆ ನೋೞ್ಪರ ಕಣ್ಗಳೊಳ್ಪಿಸಿ
ಲ್ಗುದುರೆಗಳಂದದಿಂ ಕುದುರೆಗಳ್ಪೊಳೆದುಳ್ಕಿದುವಿರ್ವಲಂಗಳೊಳ್ ॥೬೦॥

ಅಂತು ಪರಿದು ತಾಗುವುದುಂ,

ಜವನರವಾವು ಕೊಂಡುವೆನೆ ಕರ್ಕಡೆಗೊಂಡುವು ಚಕ್ರಮೆಯ್ದೆವಂ-
ದುವು ಲಯಕಾಲಚಕ್ರಮೆನೆ ನಾಳಿಯ ಕೋಲ್ಗವನಾಳಿವೆಂಬಿನಂ
ಕವಿದುವು ತೋಮರಂ ಜವನ ಡಾಮರವಾದುವು ಜಾನುದಘ್ನಮಾ-
ದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾ ಸವಾರಿಗಳ್ ॥೬೧॥

ಪಾಯಿಸಿ ಪೊಯ್ಯೆ ಘೋಟಿಯಿಲರೊರ್ವರನೊರ್ವರಗುರ್ವು ಪರ್ವೆ ಕಾ-
ಳಾಯಸಶುಕ್ತಿಯಿಂ ಸಮೆದ ಸೀಸಕದಿಂ ಬಹುರಾಹುಮಂಡಲ-
ಪ್ರಾಯಮೆನಿಪ್ಪ ದಾನವರ ಪಂದಲೆಗಳ ರವಿಮಂಡಳಂಬರಂ
ಪಾಯೆ ಬಿಸಿಲ್ಪೊಡರ್ಪುಗಿಡೆ ಪಾಳಿಸಿದತ್ತುಪರಾಗಲೀಲೆಯಿಂ ॥೬೨॥

ಬಾಳುಡಿ ಪಾಱೆ ಬೀೞೆ ಪಗಲುಳ್ಕದವೋಲ್ ರುಧಿರಂ ದಿಗಂತಮಂ
ಮೇಳಿಸೆ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ
ಪಾಳಿಸೆ ಸೂಸಿ ಕೋೞ್ಮಿದುಳ ತಂಡಮಿಳಾವಳಯಕ್ಕೆ ಬಿೞ್ದ ತಾ-
ರಾಳಿಗಳಂತಗುರ್ವಿಸೆ ಭಯಂಕರಮಾಯ್ತು ತುರಂಗಸಂಗರಂ ॥೬೩॥

ತಾಱಿದ್ದಂಬರಮುತ್ಕ ।
ಲ್ಲೋಳಮಸೃಕ್ಸಿಂಧು ಕಾೞ್ಪುರಂ ಪರಿವಿನೆಗಂ ॥
ತಾಳುಂ ತಟ್ಟುಂ ಬೊಯ್ದರ್ ।
ಘೋಟಿಯ್ಯರ್ ಸುಭಟರಟ್ಟೆಗಳ್ತೇಂಕುವಿನಂ ॥೬೪॥

ಆಹವದೋಹಳಂ ತಮಗೆ ಕೈಮಿಗೆ ಬಾಳಱಿಪೊಯ್ಗೆ ಬೆರ್ಚದು-
ತ್ಸಾಹಮನಪ್ಪುಕೆಯ್ದಿಱಿದು ಪೋಗದೆ ಮಣ್ಮಿಟಿಯಾಗೆ ವಾಜಿಯುಂ

ವಾಹಕರುಂ ಮರುಳ್ವಡೆಯುಮಾಗಡೆ ತಮ್ಮೊಡನಾಡೆ ರಾಗದಿಂ
ವಾಹಕರಟ್ಟೆಯುಂ ತುರಗದಟ್ಟೆಯುಮಾಡಿದುವಾಜಿರಂಗದೊಳ್ ॥೬೫॥

ನೆರೆದು ನಿಶಾಟರೆಲ್ವುಟಿಯೆ ತಿಂದ ಗಜಂಗಳೆ ನಾವೆಯಾಗೆ ಪು-
ಲ್ಮರುಳಕುಟುಂಬಮಂ ಪೆಣದ ಕೈಗಳೆ ಪುಟ್ಟುಗಳಾಗೆ ರಾಗದಿಂ
ತರೆಯನಡಂಗೆ ಪೊಯ್ದು ಮುಗಿಲುದ್ದಮೆನಲ್ಪರಿಯುತ್ತುಮಿರ್ಪ ನೆ-
ತ್ತರ ತೊಱೆಯಂ ಮರುಳ್ತೊಟಿಸಿ ಪಾಯಿಸುತಿರ್ದುವು ಯುದ್ಧಭೂಮಿಯೊಳ್ ॥೬೬॥

ಅಂತುಭಯಬಲದ ವಾಹವ್ಯೂಹಮೊರ್ಮೊದಲೊಳೆ ಮಣ್ಮುಟಿಯಾಗೆ,

ಕ್ಷಿತಿಚಕ್ರಂ ನಿಜಭಾರದಿಂ ತೆಱೆದತ್ತೆಂಬನ್ನೆಗಂ ಚಕ್ರಚೀ-
ತ್ಕೃತಮಾಕಲ್ಪ ಘನಾಘನ ಸ್ತನಿತ ಮೆಂಬಂತಾ ಧನುರ್ದಂಡ ಟಂ-
ಕೃತಮುದ್ದಾಮ ಯಮಾಟ್ಟ ಹಾಸರವಮೆಂಬನ್ನಂ ಹಯಾನೀಕಹೇ-
ಷಿತಮತ್ಯದ್ಭುತಮಾಗೆ ತಾಗಿದುವು ತೇರ್ತೇರೊಳ್ ರಣಕ್ಷೋಣಿಯೊಳ್ ॥೬೭॥

ರಥಿಗಳ್ ರಥಿಗಳನಿಸೆ ಸಾ ।
ರಥಿಗಳ್ ಸಾರಥಿಗಳೊಡನೆ ತಳ್ತಿಱಿಯೆ ಮರು- ॥
ತ್ಪಥದೊಳ್ ಮಿಳ್ಳಿಸೆ ಪಟಯಿಗೆ ।
ರಥಂ ರಥಂಗಳೊಳಿದಿರ್ಚಿ ತಾಗಿದುವಾಗಳ್ ॥೬೮॥

ಕದನದೊಳಾರ್ದು ಸಾರ್ದಿಸೆ ಮಹಾರಥರಚ್ಚು ಸಿಡಿಲ್ದುದೀಸು ಸೂ-
ಸಿದುದರಗೀಲ್ ಕಟಿಲ್ದುದು ಮಡಂ ಕಡಿವೋದುವು ಹಾಪೆ ರೂಪುಗೆ-
ಟ್ಟುದು ನೊಗನೋರೆವೋಯ್ತು ತುರಗಂ ಪಡಲಿಟ್ಟುದು ವೈಜಯಂತಿ ಬಿ-
ಟ್ಟುದು ರಥಚೋದಕರ್ ಮಡಿದರಾಗಳಪಾರಶರಪ್ರಹಾರದಿಂ ॥೬೯॥

ಸಾರಥಿ ಮಡಿದೊಡಮಳ್ಕದೆ ।
ತೇರಂ ಜೋಡಿಸುತುಮಾಂತ ರಥಿಯೊಳ್ ಸೆರಗಂ ॥
ಪಾರದೆ ತಳ್ತಿಱಿಯುತ್ತುಂ ।
ಸಾರಥಿಯುಂ ರಥಿಯುಮಾಗೆ ಕಾದಿದರರೆಬರ್ ॥೭೦॥

ತಪ್ಪದೆ ರಣಮುಖದೊಳ್ಮಂ ।
ತಪ್ಪದಟರನಿಸೆ ಮಹಾರಥರ್ಜವನಾಳಂ- ॥
ತಪ್ಪ ಕಣೆ ರೋಮರೋಮಂ ।
ದಪ್ಪದ ನಾಂಟಿದುವು ಸೀಂಟಿದುವು ವಿಧಿಲಿಪಿಯಂ ॥೭೧॥

ಕೃತಶಸ್ತ್ರವಿದ್ಯರಪ್ರತಿ ।
ಹತಭುಜಬಲರುಭಯ ಬಲದ ರಥಿಗಳ್ ಗತಜೀ- ॥
ವಿತರಾದರ್ ಸಂಗ್ರಾಮದೊ ।
ಳತಿರಥ ಸಮರಥ ಮಹಾರಥಾರ್ಧರಥರ್ಕಳ್ ॥೭೨॥

ತೇರೊಡ್ಡು ಗಾಳಿಗೊಡ್ಡಿದ ।
ನೀರದದೊಡ್ಡಿನವೊಲಾಗೆ ಕೂರಂಕುಶಮಂ ॥
ಚಾರಿಸುತುಮಾನೆಗಳನಾ ।
ಧೋರಣರಾ ರಣದೊಳಣೆದು ನೂಂಕಿದರಾಗಳ್ ॥೭೩॥

ಮೊಗವಡಮಂ ನಿಷಾದಿ ಕಳೆದಂಕುಶದಿಂದಣೆದಾರ್ದು ನೂಂಕೆ ಗಾ-
ಳಿಗೆ ಗಜೆ ಮೂಡಿದಂತೆ ಪರಿವಾನೆಗಳಾನೆಗಳೊಳ್ಕಡಂಗಿ ಕಾ-
ರ್ಮುಗಿಲವೊಲಟ್ಟಿ ಮುಟ್ಟಿ ಕಡುಪಿಂ ಬಿಡೆ ಪೋರ್ದುವು ಕೋಡ ಕೊಟಿಳೊಳ-
ಲ್ಲುಗುತರೆ ಕೋಟ್ಮೆದುಳ್ವೆರಸು ಮಸ್ತಕಪಿಂಡದ ಮೌಕ್ತಿಕೋತ್ಕರಂ ॥೭೪॥

ನಡುಗೆ ಧರಾತಳಂ ಕದಳಿಕಾಪರಿಘಪ್ರತಿಘಾತದಿಂ ಮುಗಿಲ್
ಪಡಲಿಡೆ ಕೋಪಮುಂ ಜವಮುಮೇಟ್ಗೆಯುಮಾಸುರಮಪ್ಪಿನಂ ಮದಂ
ಬಿಡುತರೆ ಕೀಜೆ ತಾಗಿದುವೆರಟ್ಟಿಡೆಯಾನೆಯೊಳಾನೆಗಳ್ಸಿಡಿ-
ಲ್ಸಿಡಿಲನೆ ತಾಗಿದಂತೆ ಕಿಡಿ ಬೀಟ್ತಿರೆ ತಾಗೆ ರಥಂ ರಥಂಗಳೊಳ್ ॥೭೫॥

ಉಗುವೆಂಟುಂ ಮದಧಾರೆ ಬಲ್ಸರಿಗಳಂ ದಂತಾಂಶುಗಳಬಳ್ಳಿಮಿಂ-
ಚುಗಳಂ ಬಿಚ್ಚನೆ ಬಿಟ್ಟ ದಿಟ್ಟಿ ಸಿಡಿಲಂ ಕೀಟ್ಮಾಡೆ ಕಾರ್ಗಾಲ ಕಾ-
ರ್ಮುಗಿಲೊಡ್ಡಂ ಮುಗಿಲೊಡ್ಡು ತಾಗುವವೊಲ್ಕೈತಂದಾನೆಯೊಡ್ಡಾನೆಯೊ-
ಡ್ಡುಗಳೊಳ್ತಾಗಿದುವದ್ಭುತಸ್ತನಿತಮೆಂಬನ್ನಂ ಬೃಹದ್ಬೃಂಹಿತಂ ॥೭೬॥

ಅಂತು ದಂತಿಘಟೆ ದಂತಿಘಟೆಯೊಲಾಂತು ಮೊಗಮಿಕ್ಕೆಯುಂ ಜೋದರ್ ಜೋದರೊಳೀಸಾಡಿಯುಂ ಮಧ್ಯಮನಿಷಾದಿಗಳ್ ಮಧ್ಯಮನಿಷಾದಿಗಳೊಳಸಿ ಮುಸಲ ಕಣಾಯ ಕಂಪನ ಮುಸುಂಡಿ ಭಿಂಡಿವಾಳ ವಜ್ರಮುಷ್ಟಿ ಮುದ್ಗರ ಚಕ್ರ ಪರಶುತೋಮರ ಪಾಶಾಂಕುಶಾದಿ ಶಸ್ತ್ರಾಸ್ತ್ರಗಳೊಳಿಚ್ಚುಮಿಟ್ಟುಮಿಜಿದುಂ ಪೊಯ್ದುಮತಿಭಯಂಕರಾಕಾರಮಾಗೆ ಕಾದುವಾಗಳ್,

ಕೇತನದಂಡಾಹತ ಜೀ ।
ಮೂತಘಟಾಪಟಲದಿಂ ರದಾಹತಮದವ- ॥
ನ್ಮಾತಂಗಕುಂಭದಿಂ ರಣ ।
ಭೂತಲದೊಳ್ಬೀಟ್ಟುವೊಡನೆ ಮೌಕ್ತಿಕಮಣಿಗಳ್ ॥೭೭॥

ಕರಿಘಟೆಯಿರ್ಕೆಲಂ ಬಿಡಿದು ಕತ್ತಿಗೆಯಂ ಜಡಿಯುತ್ತುಮಂಗರ-
ಕ್ಕರ ಪಡೆ ತಾಗೆ ಮಾರ್ಪಡೆಯ ಕತ್ತಿಗೆಯೊಳ್ಜವನೆರ್ಮೆವೋರಿಯಂ
ತಿರ ತಲೆಮಟ್ಟು ತಳ್ತಿಱಿದು ಮೆಯ್ವಸದಿಂ ಜವನುಂಡು ಕಾಱಿದಂ
ತಿರೆ ಕಡಿಖಂಡಮಾಗ ಕರಮಾಸುರಮಾದುದು ಸಂಗರಾಂಗಣಂ ॥೭೮॥

ಕಾಲ್ಗಾಪಿನ ಬಲ್ಲಣೆಯೊ ।
ಳ್ಬಲ್ಗೆಯ್ತದಿನಿಱಿದು ಮಡಿಯೆ ನೆತ್ತರ ತೊಱೆಗ- ॥
ಳ್ಗಲ್ಗಲನೆ ಪರಿಯೆ ಕರುಳ ಪಿ ।
ಣಲ್ಗಳೆ ತೆಪ್ಪಂಗಳಾಗೆ ತೇಂಕಿದರರೆಬರ್ ॥೭೯॥

ಮಣಿಯೇಱಿಂಗೆ ದಿಶಾಗಜಂ ಪೆಳಱಿ ಕೋಡೇಱಿಂಗೆ ಮಾಱಾನೆಗಳ್
ರಣದೊಳ್ ಬೆಂಗುಡೆ ಜೋದರೆಚ್ಚ ಪಲವುಂ ನಾರಾಚದೇಱಿಂಗೆ ಬ-
ಲ್ಲಣೆಗಳ್ ಬೆಂಗುಡೆ ಕೇತನಪ್ರಚಯದಳ್ಳೇಱಿಂಗೆ ನೋಟ್ಟಿಪ್ಪರೋ-
ಗಣಮುಂ ದೇವರುಮಳ್ಕೆ ವಾರಣರಣಂ ಕಣ್ಗೇನಗುರ್ವಾದುದೋ ॥೮೦॥

ಅಗಮೊಳಗಂ ಮೊಗಂಬುಗುವವೋಲ್ಮದದಾನೆಗಳಾನೆಯೊಳ್ಮೊಗಂ
ಬುಗುತರೆ ದಂತದಂಡಹತಿಯಿಂ ಬಿಸುನೆತ್ತರಧಾರೆಗಳ್ಪುಗಿ-
ಲ್ಪುಗಿಲೆನೆ ಪಾಯ್ದು ಪೊಣ್ಮೆ ದುವು ಕೋಟ್ಮೆದುಳೊಕ್ಕುವು ಬಲ್ಗರುಳ್ಗಳಿ-
ರ್ಬಗಿಯೆನೆ ದೋಣೆವಿಟ್ಟುದುರಮಳ್ದರಿವಿಟ್ಟುದು ಕುಂಭಮಂಡಳಂ ॥೮೧॥

ಇಭಮಿದಿರಾಗಿ ತನ್ನೊಡನೆ ತಳ್ತಿಱಿದಾಜಿಯೊಳಣ್ಮೆ ಸತ್ತನಂ
ಸುಭಟನನಾಗಸಕ್ಕೆ ಪಿಡಿದೆತ್ತಿ ಭಯಂಕರಮಾಗೆ ಮಾರ್ಬಲ-
ಕ್ಕಭಿಮುಖಮಾಗಿ ಕೀಱೆ ಪರಿದತ್ತು ಸುರಪ್ರಮದಾ ಜನಕ್ಕೆ ದು-
ರ್ಲಭಮೆನಿಸಿರ್ದ ವಲ್ಲಭನನಾಪದದೊಳ್ಪದದೀವ ಮಾಱ್ಕೆಯಿಂ ॥೮೨॥

ಕರಿಗಳ ರಥಿಗಳ ಹರಿಗಳ ।
ನರರ ಕಬಂಧಂಗಳೊಡನೆ ಭೂತಗಣಂಗಳ್ ॥
ನೆರೆದಾಡಿದುವದ್ಭುತಮಾ ।
ಸುರಮಚ್ಚರಿ ರೌದ್ರಮಾಗೆ ರಣಮಂಡಳದೊಳ್ ॥೮೩॥

ಅಂತು ಮಾಱಾಂತು ಕಾದಿ ನಕ್ತಂಚರಜಾತುರ್ದಂತಮಂತಕಪುರಮನೆಯ್ದೆ,

ಬಲಮೞಿದೊಡಳವುಗೞಿದಾ ।
ಬಲಿಮುಖ ಬಲವಾಸೆಗೆಯ್ಯೆ ನಳನೀಳರ ತೋ- ॥

ಳ್ವಲಮಮಂ ಪೊಗಟಿಸಿದರ್ ದೋ ।
ರ್ವಲಮಮಂ ಹಸ್ತಪ್ರಹಸ್ತರಿರ್ವಲದಿಂದಂ ॥೮೪॥

ಅಂತು ವಾನರಸೈನ್ಯಮೆಲ್ಲಮೊಲ್ಲನುಲಿದೋಡಿ ನಳನೀಳರ ಮಱಿಯಂ ಪುಗುವುದುಂ,

ಇಳೆ ನಡುಗುವಿನಂ ರಥಮಂ ।
ನಳನ ವರೂಥಕ್ಕೆ ಸಯ್ತುವರಿಸಿಯೆ ಕೋಪಾ- ॥
ನಳನುದ್ಧಮುರಿಯೆ ಹಸ್ತಂ ।
ಕೆಳರ್ದಂತಕನಂತೆ ಕಲುಷವಶಗತನಾದಂ ॥೮೫॥

ಆಗಿ ನಳನಿರೀಕ್ಷಣದಿನನ್ಯಜನ್ಮ ಜನಿತಕ್ರೋಧಮತ್ಯಧಿಕಮಾಗೆ,

ತ್ರಸ್ತಾರಿಧನುರ್ಜ್ಯಾನಿನ ।
ದಸ್ತನಿತಂ ಪೊಣ್ಮೆ ನಳನ ಮೇಲಾಕ್ಷಣದೊಳ್ ॥
ದುಸ್ತರತೇಜಂ ಕಱಿದಂ ।
ಹಸ್ತದ ಮಱಿಯೆನಿಸಿ ಹಸ್ತನಂಬಿನ ಮಱಿಯಂ ॥೮೬॥

ಆಗಳವನ ಶರ ವರ್ಷಮಂ ನಳಂ ಬಾಡವಾನಳನಂತೆ ತವಿಸಿ,

ಪೊಱಮುಯ್ವಂತಾಪನ್ನಂ ।
ಪೆಱಿಯಂಬಂ ತೀವೆ ತೆಗೆದು ಹಸ್ತನ ತಲೆಯಂ ॥
ಪಱಿಯೆಚ್ಚಂ ಸಂಗರದೊಳ್ ।
ಮಱುವಕ್ಕಂ ನಳನ ಕಣೆಗೆ ಮಡಿಯದುದುಂಟೇ ॥೮೭॥

ಅಂತು ಹಸ್ತನಸ್ತಮಿಸುವುದುಂ ಪ್ರಹಸ್ತನತಿಕುಪಿತನಾಗಿ ನಿಜವರೂಥಮಂ ನಳನ ವರೂಥಕ್ಕದಿರದಿದಿರಂ ಪರಿಯಿಸುವುದುಮಾ ಸಮಯದೊಳ್ ನೀಳಂ ನೀಳಮೇಘದಂತೆ ಗರ್ಜಿಸಿ ನಳನಂ ಪೆಱಗಿಕ್ಕಿ ನಿಲ್ವುದುಂ,

ಎಂತು ಪೆಱಗಿಕ್ಕಿ ನಳನಂ ।
ನಿಂತಂಜೆಸಂದಾಂತೆ ಬಲ್ಪುಗಿಡದಣ್ಮಣ್ಮೆಂ- ॥
ದಂತಕನೆ ಮಸಗಿ ಮೇಲೆ ।
ಬ್ದಿಂತೆವೊಲಿರ್ದಂ ಪ್ರಹಸ್ತ ಸಪ್ರತಿಮ ಬಳಂ ॥೮೮॥

ಅಂತು ನೆಱಿದು ನಿಂದು,

ಪಾಱುಂಬಳೆಯಿಂದಿಡೆ ಜವ ।
ನಾಱದೆ ಕಡುವೇಗದಿಂದಮೆಯ್ತ ರ್ಪುದನ- ॥

ಯ್ದಾಱು ಕಡಿಯಾಗಲೆಚ್ಚಂ ।
ಮಾಱೌಂಪುದು ಮೊಗ್ಗೆ ನಳನುಮಂ ನೀಳನುಮಂ ॥೮೯॥

ಅಂತವನ ನಚ್ಚಿನ ಕೈದುವಂ ಕಡಿಖಂಡಮಾಗೆಚ್ಚು,

ಮೊನೆಯಂಬಂ ದೊಣೆಯಿಂದಮುರ್ಚಿ ತಿರುವಾಯೊಳ್ ಸಾರ್ಚಿ ಬೇಗಂ ಪ್ರಹ-
ಸ್ತನ ವಕ್ಷಸ್ಥಳಮಂ ಕರುತ್ತಿಸುವುದುಂ ಕಾಳಾಹಿವೋಲ್ ಕೊಂಡು ತೊ-
ಟ್ಟನೆ ಬೆನ್ನಿಂ ಪೊಱಮಟ್ಟು ಪೋಗೆ ಸರಲಿಂ ಮುಂಪೋದುದಾಯುಃಪ್ರಭಂ-
ಜನಮೆಂದಂದಿದಿರಾಂಪರಾರ್ ವಿಜಯಲಕ್ಷ್ಮೀಲೋಲಸಂ ನೀಲಸಂ ॥೯೦॥

ಅಂತು ಹಸ್ತ ಪ್ರಹಸ್ತರಸ್ತಮಿಸೆ,

ಕಾವೆಂ ನಳನೀಳರ್ ಕೊಲೆ ।
ಸಾವ ದಶಾನನನ ಬಲಮನಿಂದಿಂಗೆಂಬಂ- ॥
ತಾವೃತಸಾಂಧ್ಯದ್ಯುತಿ ರಾ ।
ಜೀವಸಖಂ ಪಶ್ಚಿಮಾಬ್ಧಿಯೊಳ್ಮಯ್ಗರೆದಂ ॥೯೧॥

ಅಂತು ನೇಸಱ ಪಡುವುದುಮುಭಯಬಲಮುಪಹಾರತೂರ್ಯಮಂ ಪೊಯ್ಸಿ ತಂತಮ್ಮ ಬೀಡಿಂಗೆ ಪೋಗಿ ಸಮರಪರಿಶ್ರಮಮನಾಱಿಸುತ್ತುಮೋಲಗಂಗೊಟ್ಟಿರ್ಪುದು ಮಾಸಮಯದೊಳ್,

ನಳನೀಳರ್ ಭುಜವೀರ್ಯಮಂ ಮೆಱೆದುದಂ ಹಸ್ತಪ್ರಹಸ್ತರ್ ದ್ವಿಷ-
ದ್ಬಳಮಲ್ಲಾಡುವಿನಂ ಕರುತ್ತಿಱಿದು ದೇವಸ್ತ್ರೀಯರುತ್ಸಂಗಮಂ-
ಗಳ ಪೀಠಸ್ಥಿತರಾದುದಂ ನೆರೆದು ಜಾತುರ್ದಂತಮುಂ ಕಾದಿ ಮ-
ಣ್ಮಟಿಯಾದಂದಮುಮಂ ತಗುಳ್ದು ಪೊಗಟುತ್ತಿರ್ದರ್ಕೆಲರ್ ಖೇಚರರ್ ॥೯೨॥

ಅದಲ್ಲದೆಯುಂ,

ಕೆಲರ್ಗನುಲೇಪಮಂ ಕೆಲರ್ಗೆ ಭೂಷಣಮಂ ಕೆಲರ್ಗಾಯುಧಂಗಳಂ
ಕೆಲರ್ಗೆ ತನುತ್ರಮಂ ಕೆಲರ್ಗೆ ವಾಜಿಗಳಂ ಕೆಲರ್ಗುನ್ನದೇಭಮಂ
ಕೆಲರ್ಗೆ ವರೂಥಮಂ ತಡೆಯದಟ್ಟುವ ದಂದುಗದಿಂದಮಂದು ಕ-
ಣ್ಣಲೆ ಬೆಳಗಾದುದಿರ್ವಲದ ನಾಯಕರ್ಗಂ ಕದನಾನುರಾಗದಿಂ ॥೯೩॥

ಅನಂತರಂ,

ಕದನರಸಾಸ್ವಾದನಲೋ ।
ಛದಿನೆರಡುಂ ಪಡೆಯುಮೊಡನೆ ಪಾರ್ದಿರ್ದಪುವೆ- ॥

ನ್ನುದಯಮನಿಂ ತಡೆದಿರ್ಪುದು ।
ಪದನಲ್ತೆಂಬಂತೆ ದಿನಪನುದಯಂಗೆಯ್ದಂ ॥೯೪॥

ಜವನಿಕೆಯಂ ನಿಶಾಚರಕಬಂಧಮನಾಡಿಸಲಂಧಕಾರಮಂ
ರವಿ ಕಳೆದಿಕ್ಕೆ ತನ್ನ ಕರಪಲ್ಲವದಿಂದುಷೆ ಪಿಂಗೆ ಪಣ್ಣೆ ಬಂ-
ದುವು ಕರಿ ಕೀಱಿ ಬಂದುವು ಹಯಂ ರಣಭೂಮಿಗೆ ತೇರ್ ತೆರಳ್ದು ಬಂ-
ದುವು ತಱಿಸಂದು ಬಂದುವು ಕಡಂಗಿ ಧನುರ್ಬಲಮಿರ್ವಲಂಗಳೊಳ್ ॥೯೫॥

ಅಂತು ಬಂದು ಕೈವೀಸುವುದುಂ,

ಅಂತುಭಯಬಲದ ಚಾತು ।
ರ್ದಂತಂ ಪೇಸೇಟಿ ಕಾದಿ ದೆಸೆವಲಿಗುಡಲೆಂ- ॥
ದಂತಕನಡುವುಟ್ಗೆಯನ ।
ಟ್ವಂತಿರೆ ಕಡಿಖಂಡಮಾಯ್ತು ರಣಮಂಡಳದೊಳ್ ॥೯೬॥

ಅಗಳ್ ಸಂಗ್ರಾಮರಸರಸಿಕರಾಗಿ,

ಮಾರೀಚ ಸಿಂಹಕಟಿಗಳ್ ।
ಚಾರಣ ಶುಕ ಮಕರ ವಿಘ್ನ ಶರಪಂಜರ ಗಂ- ॥
ಭೀರ ಮದನಾಂಕುಶರ್ ಸಮ ।
ರಾರಂಭದೊಳಿರ್ದರುಱಿದೆ ವಜ್ರಪ್ರಮುಖರ್ ॥೯೭॥

ಅಂತಿರ್ದಪೌಲಸ್ತ್ಯನ ಪದಿಂಬರ್ ಸಾಮಂತರೊಳಂ ಪ್ರಭಾಮಂಡಳನ ಸಾಮಂತರ್ ಸಂತಾಪನುಂ ಪ್ರಥಿತನುಂ ನಂದನನು ಮುದ್ಧತನುಂ ಮಹೋದಧಿಯುಮುದ್ದಾಮಕೀರ್ತಿಯುಂ ವಿಘಟನುಂ ಉದ್ದಾಮನುಂ ಗಜನುಂ ದುರಿತಾಸ್ತನುಮೆಂಬ ಪದಿಂಬರುಮೋರೊರ್ವರಂ ಗಱಿಸನ್ನೆಗೆಯ್ದು ಕಾದುವಲ್ಲಿ,

ಸಂತಾಪನಂ ವಿರೋಧಿಗೆ ।
ಸಂತಾಪಮನುಂಟು ಮಾಟ್ಪಿ ಬಲ್ಲಾಳಮಂ ಕ- ॥
ಲ್ಪಾಂತಕೃತಾಂತನವೋಲ್ ಕೊಂ ।
ದಂ ತಲ್ಲಣಿಪಂತು ಮಾರ್ಬಲಂ ಮಾರೀಚಂ ॥೯೮॥

ರಾವಣಸೇನೆ ಬಾಜಿಸೆ ಜನಾನಕಮಂ ರಘುರಾಮಸೇನೆಯೊಳ್
ತೀವ್ರ ಭಯಾನಕಂ ಗಗನಮಂಡಳಮಂ ನಿಜಚಾಪಟಂಕೃತಂ
ಮೂವಳಸಾಗೆ ಮುತ್ತೆ ಮಕರಂ ಬಡವಾಮುಖದನ್ನಮಪ್ಪ ಬಾ-
ಣಾವಳಿಯಿಂ ಮಹೋದಧಿಯ ಜೀವನಮಂ ತವುವನ್ನಿಮಿಾಂಟಂದಂ ॥೯೯॥

ಉದ್ದಾಮನ ಪಂದಲೆ ಪಱೆ ।
ದುದ್ದಂ ಪಾಱುವಿನಮಿಸುವುದುಂ ಗಂಭೀರಂ ॥
ಬದ್ದವಣದ ಪಱೆಗಳ್ ಕಿವಿ ।
ಸದ್ದಂಗಿಡೆ ಪೊಯ್ದುವಿಂದ್ರವೈರಿಯ ಪಡೆಯೊಳ್ ॥೧೦೦॥

ಸಿಂಹಕಟಿ ರಿಪುಮದದ್ವಿಪ ।
ಸಿಂಹಪ್ರಥಿತನನಜೇಯಬಾಹಾಬಳನಂ ॥
ಸಂಹರಿಸಿದಂ ದಶಾಸ್ಯನ ।
ಸಿಂಹಾಸಂದಿಯನ ಸಂಚಲಂ ಮಾಡುವವೋಲ್ ॥೧೦೧॥

ಅಂತು ನಿಜವರೂಥಿನಿಯ ನಾಲ್ವರುಂ ಮಹಾಸಾಮಂತರಂತಕ ಜಠರಾಗ್ನಿ ಗಾಹುತಿಯಪ್ಪುದುಂ ಘೃತಾಹುತಿವಡೆದ ಹಂತವಹನಂತುಱೆದ ಸಾಮಂತರತಿಕುಪಿತರಾಗಿ ರಾವಣನ ವರೂಥಿನಿ ಯರಥಿಗಳಂ ಗಜೆಸನ್ನೆಗೆಯ್ದು ಲಯಸಮಯದ ಭೈರವನ ಭೀಕರಾಕಾರಮನಪ್ಪುಕೆಯ್ದು ಕಾದುವಲ್ಲಿ,

ಎರಡುಂ ತೇರೊಂದ ನೊಂದೆಯ್ತರ ನಡುಗೆ ನೆಲಂ ನೇಮಿಸಂಘಟ್ಟದಿಂದಂ-
ಬರದೊಳ್ ಮತ್ತೇಭಸಿಂಹಧ್ವಜಮಭಿನಯಮಂ ಬೀಱೆ ಕೋದಂಡ ಟಂಕಾ-
ರರವಂ ಕೈಗಣ್ಮೆ ಸಾರ್ತಂದಿಸೆ ದಶಮುಖಸಾಮಂತನಂ ವಿಘ್ನನಂ ತೋ-
ಮರದಿಂದುದ್ದಾಮನಿಟ್ಟಂ ಜಿಡೆ ಕಡುನೆಜನಂ ನಟ್ಟು ತೂಗಾಡುವನ್ನಂ ॥೧೦೨॥

ಇಡೆ ವಜ್ರಿ ವಜ್ರಹತಿಯಿಂ ।
ಕೆಡೆದ ಕುಳಾಚಳದ ಮಾಟ್ಕೆಯಿಂದಂ ವಿಘ್ನಂ ॥
ಕೆಡೆದಂ ತೋಮರಹತಿಯಿಂ ।
ದೊಡನುಣ್ಮೆ ಜಯಾನಕಸ್ವನಂ ಕಪಿಬಲದೊಳ್ ॥೧೦೩॥

ದನುಜೇಂದ್ರನ ಸೇನೆಯ ವ ।
ಜ್ರನ ದೋರ್ದಂಡಂಗಳಂ ಕುಠಾರಾಯುಧದಿಂ ॥
ಮನುಜೇಂದ್ರನ ಸೇನೆಯ ವಿಘ ।
ಟನಾಜಿಯೊಳ್ ಪೋಡುಗಾಜಿನಂತಿರೆ ತಱೆದಂ ॥೧೦೪॥

ಆ ರಣರಂಗದೊಳುನ್ಮದ ।
ವಾರಣಮಜಗರಮನಿಕ್ಕುವಂತವಯವದಿಂ ॥
ಚಾರಣನಂ ಕೊಂದಿಕ್ಕಿದ ।
ನಾರಳವುದ್ಧತನವಾರ್ಯಬಾಹಾವೀರ್ಯಂ ॥೧೦೫॥

ಎಡೆವಲಿಗುಡಲೆಂದಂತಕ ।
ನಡುವುಟ್ಗಿಯನಟ್ಟ ತೆಱದೆ ತಾರುಂ ತಟ್ಟುಂ- ॥
ಗೆಡೆದಿರೆ ರಣದೊಳ್ಮೃತ್ತುಂ ।
ಕಡಿಖಂಡಮದಾಯ್ತು ನೋಡೆ ರಣಮಂಡಲದೊಳ್ ॥೧೦೬॥

ಶುಕನಂ ದುರಿತಾಸ್ತ್ರಕಿಂ ।
ಶುಕವಿಟಪಿನಳುರ್ವ ದಾವ ಪಾವಕನಂತಂ- ॥
ತಕಹೋಮಕುಂಡದೊಳ್ ನೂಂ ।
ಕೆ ಕಂಡು ಕಾಲಾಗ್ನಿಯಂತೆ ರಾವಣನುರಿದಂ ॥೧೦೭॥

ಶರಪಂಜರನಂ ಯಮಕುಂ ।
ಜರಕ್ಕೆ ಕಡಿಕೊಂಬುಮಾಡಿ ಕಡಿಖಂಡಮೆನಲ್ ॥
ಕರವಾಳಿಂ ನಂದನನಾ ।
ಜಿರಂಗದೊಳ್ ಪೊಯ್ಯೆ ಪೊಯ್ದುವುತ್ಸವ ಪಟಹಂ ॥೧೦೮॥

ಗಜರಿಪು ನಖರಪ್ರಕರದೆ ।
ಗಜಮಂ ಸೀಳ್ದೊಟ್ಟುವಂತೆ ಮದನಾಂಕುಶನಾ- ॥
ತ್ಮಜಯಾಸಿಯಿಂದೆ ಕೊಂದಂ ।
ಗಜನಂ ರಾವಣನ ಸೇನೆ ಸುಗಿದುಗಿವಿನೆಗಂ ॥೧೦೯॥

ಅಂತೆರಟ್ಬಲಮುಮೊಟ್ಟಜೆಗಿಡದೆ ತಳ್ತಿಱಿದು ಪಾಳಿಯನಸಕಟಿದುಟಿದು,

ಚಂಡಪರಾಕ್ರಮರ್ ದನುಜನಾಯಕರುಂ ರಣರಾಗದಿಂ ಪ್ರಭಾ-
ಮಂಡಳಮುಖ್ಯನಾಯಕರುಮೊರ್ವರೊಳೊರ್ವರಿದಿರ್ಚಿ ಸಾವುದಂ
ಕಂಡು ಕೃಪಾಳು ಮಾಣಿಸುವೆನಿಂದಿನ ಯುದ್ಧಮನೆಂಬ ಮಾಟ್ಕೆಯಿಂ
ಚಂಡಮರೀಚಿ ಪಶ್ಚಿಮಪಯೋಧಿಯೊಳೊಯ್ಯನೆ ಮೆಯ್ಯನಿಕ್ಕಿದಂ ॥೧೧೦॥

ಅಂತು ನೇಸಱ ಪಡುವುದುಂ,

ಅಪಹಾರತೂರ್ಯಮಂ ಪೊಯಿ ।
ಸಿ ಪಡೆಗಳೆರಡುಂ ರಣೋರ್ವಿಯಿಂದಂ ತಂತ- ॥
ಮ್ಮ ಪುರಕ್ಕೆವೋದುವಾನಕ ।
ವಿಪುಳರವರಂ ಗಗನವಿವರಮಂ ತೀವುವಿನಂ ॥೧೧೧॥

ಅಂತು ಬೀಡಿಂಗೆ ಪೋಗಿ ಸಂಗ್ರಾಮಸಂರಂಭದೊಳುಭಯಬಲಮುಮಿರ್ಪಿನಂ,

ಮತ್ಕುಲನ ವಿಜಯನಾಟ್ಯಚ ।
ಮತ್ಕೃತಿಯಂ ನೋಡಿ ಕಣ್ಗಳಂ ತಣಿಪುವೆನೆಂ ॥
ದುತ್ಕಂಠತೆಯಿಂದುದಯಕು ।
ಭೃತ್ಕೂವಮನೇಱಿದಂತಿರಿನನುದಯಿಸಿದಂ ॥೧೧೨॥

ಅಂತಿನೋದಯಮಪ್ಪುದುಂ ಪೂರ್ವಕ್ರಮದೊಳುಭಯವಾಹಿನಿಯುಂ ರಣಭೂಮಿಗೆ ಬಂದೊಡ್ಡಿ ನಿಲ್ವುದುಂ ದಶಾನನ ಸೇನಾಪತಿಗಳಪ್ಪ ಕುಂಭ ನಿಕುಂಭ ಶಂಭು ಸ್ವಯಂಭು ಚಂಡ ಪ್ರಚಂಡ ಕುಂಡಲ ಹಾಲಾಹಲ ಪುಷ್ಪಚೂಲ ಧೂಮರಾಕ್ಷಸ ಸಮಧ್ಯಾಕ್ಷ ಭೀಮ ಭೀಷಣ ಧವಳಕೀರ್ತಿ ವಿಕ್ರಮ ವಿದ್ಯುಜ್ಜಿಹ್ವ ಸೌಮ್ಯಾನನ ಶಾರ್ದೂಲ ಪ್ರಮುಖರನೇಕರೊಡ್ಡಿ ನಿಲ್ವುದುಂ,

ಮನುವಂಶಲಲಾಮನ ರಾ ।
ಮನ ಮುಂದೆ ಪೊಡರ್ಪುದೋರ್ಪ ಸೈಪೆಮಗಾದ- ॥
ತ್ತೆನುತುಂ ಖೇಚರವಲ್ಲಭ ।
ರನೇಕರೊದವಿದ ರಣಾನುರಾಗದಿನಿರ್ದರ್ ॥೧೧೩॥

ಅಂತುದಾತ್ತರಾಘವನೊಳ್ ಮಿತ್ರತ್ವ ದಿಂ ಕೂಡಿದ ವಿದ್ಯಾಧರವೀರರಪ್ಪ ಚಂದ್ರಾಭ ಚಂದ್ರಮಾಲಿ ರತಿವರ್ಧನ ಮೇಘಪರ್ವತ ಸರ್ವಪ್ರಿಯ ತರಂಗ ತರಳ ಚಪಳಾವೇಗ ವಿದ್ಯುತ್ಕರ್ಣ ಜಯ ವಿಜಯರೆಂಬ ರಣಪ್ರಣಯಿಗಳ್ ತಮತಮಗೆ ಸಮಕಕ್ಷರಪ್ಪ ವಿದ್ಯಾಧರಪ್ರತಿನಾಯಕರೋರೊರ್ವರೊಳಗುರ್ವುಮದ್ಭುತಮುಮಾಗೆ ಕಾದುವಲ್ಲಿ,

ಉಡಿವ ರಥಂಗಳಿಂ ಮಡಿವ ವಾಜಿಗಳಿಂ ಕಡಿಖಂಡಮಪ್ಪರ-
ಜ್ಜಡೆಯ ಪದಾತಿಯಿಂ ಕೆಡೆವ ವಾರಣದಿಂ ಕುಣಿವಟ್ಟೆಗಾರ್ವ ಬೊ-
ಬ್ಬಿಡುವ ಮರುಳ್ಗಳಿಂ ಪರಿವ ಲೋಹಿತದಿಂ ಪಱಿವಂಬರಕ್ಕೆ ಧೀಂ-
ಕಿಡುವ ಶಿರಂಗಳಿಂದತಿಭಯಂಕರಮಾದುದು ಸಂಗರಾಂಗಣಂ ॥೧೧೪॥

ಪಲವುಂ ದಿನಮಿಂತೆರಡುಂ ।
ಬಲದ ಮಹಾಬಲಪರಾಕ್ರಮರ್ ಕಾದಿ ಮನೋ- ॥
ಬಲದ ಭುಜಬಲದ ವಿದ್ಯಾ ।
ಬಲದಳವಂ ನೆಱೆಯೆ ಮೆಱೆದು ಮಣ್ಮಲೆಯಾದರ್ ॥೧೧೫॥

ಅಂತರವರನುದಿನಮನುವರದೊಳಣ್ಮಿ ಕಾದುತ್ತಿರ್ದೊಂದು ದಿವಸಂ,

ದಾವಾನಳಕ್ಕೆ ವನ್ಯಮೃ ।
ಗಾವಳಿ ಬೆಂಗುಡುವ ಮಾೞ್ಕೆಯಿಂ ಬೆಂಗುಡೆ ಸು- ॥

ಗ್ರೀವನ ಪಡೆ ಸೆಡೆದು ದಶ ।
ಗ್ರೀವನ ಪೆರ್ವಡೆಗಗುರ್ವುವಡೆದುದು ಸಮರಂ ॥೧೧೬॥

ಆ ಸಮಯದೊಳ್ ನಿಜವರೂಥಿನಿಯಂ ಪೆಱಗಿಕ್ಕಿ,

ತ್ರಿಪತಾಕೆ ನಿಟಲತಟದೊಳ್ ।
ಕಪಿಧ್ವಜಂ ಗಗನತಳದೊಳರ್ವಿಸೆ ಕಿಷ್ಕಿಂ- ॥
ಧಪುರಾಧಿಪನುಱದಿಱೆಯಲ್ ।
ವಿಪಕ್ಷಮಂ ರಥಮನೇಱಿದಂ ಸುಗ್ರೀವಂ ॥೧೧೭॥

ಅಂತು ರಥಾರೂಢನಾಗಿ ಕಾದಲ್ ಕಡಂಗಿ ಬರ್ಪುದುಂ,

ಬಾರಿಸಿ ಸುಗ್ರೀವನನು ।
ಗ್ರಾರಾತಿಬಲಕ್ಕೆ ಲಯಮನೊಡರಿಪ ಬಗೆಯಿಂ ॥
ಮಾರುತಿ ಕರಿಯಂ ಪೂಡಿದ ।
ತೇರಂ ಜವನೇಱುವಂತಿರೇಱಿದನಾಗಳ್ ॥೧೧೮॥

ಅನಂತರಂ,

ಮಿಳಿರ್ದು ಮಿಳ್ಳಿಸೆ ವಾನರಕೇತನಂ ।
ಪ್ರಳಯ ಕಾಲದ ಮಾರಿಯ ಮೂರಿಯಂ ॥
ತಳೆದು ಮಾರುತಿಯೇಱಿದ ತೇರದೇಂ ।
ತಳರ್ದುದೋ ಧರೆ ಕಂಪಿಸುವನ್ನೆಗಂ ॥೧೧೯॥

ಅಂತು ತಳರ್ದು ಪವಮಾನತನೂಭವಂ ಮನಃಪವನವೇಗದಿಂ ಕುಂಭಕರ್ಣನ ತನೂಭವರಪ್ಪ ಮಾಲಿ ಜಂಬುಮಾಲಿಗಳ ಬಲಮನಳಱೆ ತಾಗುವುದುಂ,

ಜ್ಯಾರಾಪಕ್ಕಗಿದಳ್ಕಿ ಬಳ್ಕೆ ದಿಗಿಭಂ ಕೋದಂಡದೊಳ್ ಪೂಡಿಕೊಂ-
ಡಾರುತ್ತುಂ ನಿಶಿತಾಸ್ತ್ರದಿಂದಿಸೆ ಹನೂಮಂತಂ ದ್ವಿಷತ್ಸೇನೆಯೊಳ್
ಪೇರಾಳುಂ ತುರಗಂಗಳುಂ ರಥಮುಮುನ್ಮತ್ತೇಭಮುಂ ಬಿಱ್ದುವಾ-
ರ್ವೀರಾಗ್ರೇಸರನಪ್ಪ ಮಾರುತಿಯ ದಿವ್ಯಾಸ್ತ್ರಕ್ಕೆ ಮೆಯ್ವಾರ್ದುವರ್ ॥೧೨೦॥

ಪವಮಾನಪ್ರಿಯನಂದನಂ ಚರಮದೇಹಂ ದೇಹಮಂ ಕೈದುಮು-
ರ್ಚವು ವಿದ್ಯಾಪರಮೇಶ್ವರಂ ಗಜರಥಾರೂಢಂ ಮಹಾನ್ವಿ ಕಾ-
ದುವರಾರಾತನನಂತವೀರ್ಯನಿದಿರೊಳ್ ಮಾಱಾಂಪುದುಂ ಕೊಂದನಾ-
ಹವದೊಳ್ಮಾಲಿಯ ಜಂಬುಮಾಲಿಯ ಮಹಾಸಾಮಂತಸಂದೋಹಮಂ ॥೧೨೧॥

ಜವನೆರ್ದೆ ಬಿರ್ಚಿದುದೆನೆ ದಾ ।
ನವಸೇನೆಗೆ ವಿಳಯಸಮಯಮಿೂಸಮಯದೆ ಸಂ- ॥
ಭವಿಸಿದುದೆನೆ ತವೆ ಕೊಂದಂ ।
ಪವಮಾನಸುತಂಗೆ ಸಂಗರಕ್ಕಿದಿರುಂಟೇ ॥೧೨೨॥

ಅಂತು ಜಯ ಜಯಾರಾವದೊಡನೆ ಜಯಜಾಯಾರಮಣನಪ್ಪ ಮಾರುತಿ ನಿಜ ನಿಶಿತಶರಾಸಾರದಿಂ ತನ್ನ ಸೇನಾಕೃಶಾನು ಜ್ವಾಲಾಕಲಾಪಮನದಿರ್ಪೆ ವಿಲಯ ಸಮಯ ಜ್ವಾಲೆಯಂತೆ ಮಾಲಿ ತಿಣ್ಣಮುರಿದು ನಿಜವರೂಥಮಂ ಮಾರುತಿಯ ರಥಕ್ಕೆ ಸೈತುವರಿಯಿಸೆ,

ಬಿಸಿಲೆಸಕಂಗಿಡೆ ಕಟ್ಟಿಲೆ ।
ಪಸರಿಸೆ ಮಾರುತಿಯ ತೇರ ಗಜಮಸ್ತಕದಿಂ ॥
ಪೊಸಮುತ್ತುಗಳುಗೆ ಕೈಮಿಗೆ ।
ಬಿಸುನೆತ್ತರ್ ಮಾಲಿ ಕಱೆದನಂಬಿನ ಮಳೆಯಂ ॥೧೨೩॥

ಅಂತು ಮಾರುತಿಯ ವರೂಥಮಂ ಮಿಸುಕಲೀಯದಿಸುವುದುಂ,

ಸ್ಯಂದನಬಂಧನಮಂ ಮಾ ।
ಜ್ಜಿಂ ದಲಿವಂ ನಮಗಮೆಂದು ಹನುಮಂ ಮುಳಿದಂ- ॥
ಬಿಂದಮದಂ ಖಂಡಿಸಿ ಪೆಱ ।
ತೊಂಪಂಬಿಂದವನ ತಲೆಯುಮಂ ಪಱಿಯೆಚ್ಚಂ ॥೧೨೪॥

ಅಂತು ಮಾಲಿಯ ತಲೆ ಪಱಿದು ನೆಲಕ್ಕೆ ಬೀೞ್ವುದುಂ,

ನಿಜಾಗ್ರಜನ ಸಾವು ಬೇವಸಮನಗ್ಗಳಂ ಮಾೞ್ಪುದುಂ
ಗಜಾರಿ ಘನಗರ್ಜನಕ್ಕೆ ಕದುಕೆಯ್ದು ಮೇಲ್ವಾಯ್ವವೋ-
ಲಜೇಯಬಲ ಜಂಬುಮಾಲಿ ಗದೆಗೊಂಡು ಮೇಲ್ವಾಯ್ವುದುಂ
ಭುಜಾಸಿಯೊಳೆ ಕೊಂದನಂದವನುಮಂ ಮರುನ್ನಂದನಂ ॥೧೨೫॥

ಅಂತು ಜಂಬುಮಾಲಿಯಂ ಕೊಂದು ಧವಳಚ್ಛತ್ರಚಾಮರ ಪಾಳಿಧ್ವಜ ಶಂಖ ಕಹಳ ಪ್ರಮುಖ ರಾಜ್ಯಚಿಹ್ನಂಗಳ್ವೆರಸು ಹಸ್ತ್ಯಶ್ವರಥಪದಾತಿ ಬಲದಿಂ ವಿದ್ಯಾಧರಾಧಿರಾಜರಿಂ ಪರಿವೃತನಾಗಿರ್ದ ದಶಮುಖನಂ ವಲಿ ಮುಖಧ್ವಜಂ ಕಂಡು,

ದೊರೆವೆತ್ತ ಸಮರಮಿೂಗಳ್ ।
ದೊರೆಕೊಂಡತ್ತೆಂದು ತನ್ನ ರಥಮಂ ಲಂಕೇ- ॥
ಶ್ವರನಿರ್ದೊಡ್ಡಣದತ್ತಲ್ ।
ಪರಿಯಿಸಿದನದೇಂ ಪ್ರತಾಪಿಯೋ ಪವನಸುತಂ ॥೧೨೬॥

ಅಂತು ಪರಿಯಿಸೆ ರಕ್ಕಸವಡೆ ತಕ್ಕುಗೆಟ್ಟು ತಲ್ಲಣಿಸುವಂತೊಟ್ಟೈಸಿ ಕಾದುತ್ತುಂ ಬರ್ಪ ವಲಿಮುಖಧ್ವಜನಂ ದಶಮುಖಂ ಕಂಡು ಮುಳಿದು ಕಾದಲ್ಬಗೆಯೆ ಮಯತನೂಜರಪ್ಪ ಮಹೋದರ ವಜ್ರೋದರರ್ ದಶವದನನ ಸ್ಯಂದನಕ್ಕಡ್ಡಂ ಬಂದು ಕಾಳೆಗಮಂ ಕೈಕೊಂಡು ಮಹೋದರನಂಗದನೊಳ್ ವಜ್ರೋದರಂ ಹನುಮನೊಳಗಂಮಾಯಾಯುದ್ಧದೊಳಂ ಸಾಮಾನ್ಯಾಸ್ತ್ರದೊಳಂ ದಿವ್ಯಾಸ್ತ್ರದೊಳಂ ಪಿರಿದುಪೊಟ್ಟು ಕಾದೆ,

ಅಂಗದನ ಕಣೆ ಮಹೋದರ ।
ನಂಗರ ಲೋಹಿತಮನೀಂಟೆ ಪಿಂಗೆ ದಶಪ್ರಾ- ॥
ಣಂಗಳುಮೇಂ ಪಡೆದನೊ ದಿವಿ ।
ಜಾಂಗನೆಯರ ಪೀವರಸ್ತನಾಲಿಂಗನಮಂ ॥೧೨೭॥

ಅಂತು ಮಹೋದರನಂ ಯಮೋದರಮನಂಗದಂ ಪುಗಿಸೆ ತಾನುಮತಿಕುಪಿತನಾಗಿ,

ತಿರುವಾಯೊಳ್ ತೊಟ್ಟು ದಿವ್ಯಾಸ್ತ್ರಮನಿಸೆ ಹನುಮಂ ಸಾಯಕಂ ನಾಂಟೆ ವಜ್ರೋ
ದರವಕ್ಷೋಭಾಗಮಂ ಬೆಂಗಲಗು ಬಳೆಯೆ ಕರ್ಣೋತ್ತರಿರ್ಮೆಯ್ಯೊಳಂ ಪಾ-
ಯ್ತರೆ ಜೀವಂಬಿಟ್ಟು ಬಾಯಂ ನಯನಯುಗಳಮಂ ಬಿಟ್ಟು ಕರ್ವೆಟ್ಟು ಬೀಳ್ಗಂ
ತಿರೆ ಬಿಡ್ಡಂ ಭೂಮಿಯೊಳ್ ರಾವಣಭುಜವಿಜಯಶ್ರೀಯುಮಲ್ಲಾಡುವನ್ನಂ ॥೧೨೮॥

ಅಂತು ವಜ್ರೋದರಂ ಸುರಸುಂದರೀವಿಮಾನೋದರಮನಲಂಕರಿಸೆ,

ದವದಹನಂ ಕಾನನಮಂ ।
ತವಿಪಂತಿರೆ ಬಾಡವಾನಲಂ ವಾರಿಧಿಯಂ ॥
ತವಿಪಂತಿರೆ ಪವನಸುತಂ ।
ತವಿಸಿದನಗಣಿತಮೆನಿಪ್ಪ ದಾನವಬಲಮಂ ॥೧೨೯॥

ಅಣುವನ ಕೂರ್ಗಣೆಗಳ್ ನಡೆ ।
ಪೆಣಮಯಮಾದತ್ತು ಮೇರೆ ಪವಣಿಲ್ಲದ ರಾ- ॥
ವಣವಡೆ ಪರ್ವಿದ ಮರ್ವಾ ।
ಕ್ಷಣದೊಳ್ ಕಿಡುವಂತೆ ಚಂಡಕರಕರಹತಿಯಿಂ ॥೧೩೦॥

ದಿವ್ಯಾಯುಧಂಗಳಂ ಗೆಲೆ ।
ದಿವ್ಯಾಯುಧಮಸುರವಡೆಯನನಿಲನ ತನುಜಂ ॥
ಸವ್ಯಾಪಸವ್ಯಮೆಚ್ಚುರ ।
ಣವ್ಯಸನಿ ಪಿಶಾಚವಡೆಗೆ ಬಾಣಸುಗೆಯ್ದುಂ ॥೧೩೧॥

ಆ ಸಮಯದೊಳ್,

ಮಾಲಿಗೆ ಜಂಬುಮಾಲಿಗೆ ಮರುತ್ತನಯಂ ಕುಡೆ ಯುದ್ಧದೊಳ್ ಕೃತಾಂ-
ತಾಲಯಮಂ ನಿಜಾತ್ಮಜರ ಸಾವಿನೊಳುತ್ಕಟಮಾಗೆ ಶೋಕಮು-
ನ್ಮೀಲಿಸೆ ಕೋಪಮಾ ಪ್ರಳಯಭೈರವನಂತಿರೆ ಕುಂಭಕರ್ಣನಾ-
ಭೀಲಮನೆತ್ತಿ ಪೊತ್ತು ನಡೆದಂ ಕದನಕ್ಕಿದಿರಂ ತ್ರಿಶೂಲಮಂ ॥೧೩೨॥

ಅಂತು ಕಡಂಗಿ ಬರ್ಪ ಕುಂಭಕರ್ಣನಂ ಕಂಡು ಮಾರುತಿಯಂ ಪೆಱಗಿಕ್ಕಿ ರಘುವೀರನ ಬಲದ ಮಹಾಸಾಮಂತರ್ ಚಂಡನುಂ ಶಶಿಮಂಡಳನುಂ ಬಲಿಯುಂ ಮೊದಲಾಗೆ ಪಲರುಮಡ್ಡಂ ಬಂದು ತನ್ನ ಬಳಮನಳಱೆ ಕಾದುತ್ತುಮಿರೆ ಕುಂಭಕರ್ಣನತಿಕುಪಿತನಾಗಿ ಪ್ರಕ್ಷೋಭಣ ವಿದ್ಯಾಶರದಿಂ ಕಪಿಧ್ವಜರ ಧ್ವಜಿನಿ ಮೆಯ್ಯಱೆಯದೊಱಗುವಂತು ಮಾಳ್ಪುದುಂ ನಿದ್ರಾ ಪ್ರಬೋಧಿನಿಯೆಂಬ ದಿವ್ಯಬಾಣದಿಂ ಸುಗ್ರೀವಂ ಹನುಮಂ ಮೊದಲಾಗೆ ಮಿಕ್ಕ ನಾಯಕರ ನಿದ್ರಾ ಮುದ್ರೆಯಂ ಕಳೆವುದುಮನಿಬರುಂ ರಕ್ಕಸವಡೆ ಬೆಂಗುಡೆ ಕಾದುತ್ತುಮಿರೆ ಕಂಡು ಕಡುಮುಳಿದು,

ಚಳಿಯಿಸಲಮರಾಚಳಮಂ ।
ತುಳುಂಕಲಂಭೋನಿಧಾನಮಂ ದಿನಕೃನ್ಮಂ- ॥
ಡಳಮನಿಳೆಗಿೞಿಪಲೆಂದಾ ।
ಜಿಳಂಪಟಂ ದೆಸೆಗೆ ಮಸಗಿದಂ ದನುಜೇಂದ್ರಂ ॥೧೩೩॥

ಅಂತು ದಶಗ್ರೀವಂ ಸುಗ್ರೀವನ ಕಂಠಕಂದಳಮಂ ಚಂಡಪರಶುವಿಂ ಖಂಡಿಸಲುಂ ಪವಮಾನತನೂಭವನ ಪ್ರಾಣಪವಮಾನನಂ ಬಾಹುರಾಹುಗಾಹಾರಮಿಕ್ಕಲುಂ ಪ್ರಭಾಮಂಡಳನ ಮಂಡಳಾಗ್ರಮಂ ಚಂದ್ರಹಾಸಪ್ರಭಾಮಂಡಳದಿಂದ ಹತಪ್ರಭಾ ಮಂಡಲಂ ಮಾಡಲುಂ ನಳನ ಕೋಪಾನಳನಂ ಖಡ್ಗಧಾರಾಜಲದಿಂ ನಂದಿಸಲುಂ ನೀಳನ ನೀಳಲೋಹಿತದಿಂ ಭೂತಗಣಮಂ ತಣಿಪಲುಮುತ್ಕಂಠನಾಗಿ ನಿಜವರೂಥಮಂ ರಿಪುವರೂಥಿನಿಗೆ ಪರಿಯಿಸಲೊಡರಿಸುವುದು-ಮಾಸಮಯದೊಳ್ ಮಂಡೋದರೀ ಜಠರಜಾಪ್ಸುವೀವಿಕಸಿತಾರವಿಂದನಿಂದ್ರಜಿತ್ಕುಮಾರಂ ತಂದೆಯ ಮುಖಾರವಿಂದಮಂ ನೋಡಿ ನಿಟಿಲತಟಘಟಿತಮುಕುಳಿತಾಂಜಲಿ ಪುಟನಿಂತೆಂದಂ:

ತ್ರಿಪತಾಕೆ ನಿನ್ನ ನಿಟಿಲದೊ ।
ಳಪಾಂಗದೊಳ್ ಕೆಂಪು ಸಮನಿಪನ್ನೆವರಂ ಸೈ- ॥
ರಿಪುದೆ ವಲಮೆನಗೆ ಬನ್ನಂ ।
ನೃಪೇಂದ್ರ ಬನ್ನಕ್ಕೆ ಬೇಱೆ ಕೋಡೆರಡೊಳವೇ ॥೧೩೪॥

ನೀಂಬರೆಗಂ ಕಪಿಧ್ವಜರಸಾಧ್ಯರೆ ನಿನ್ನೊಳಿದಿರ್ಚುವನ್ನನಾ-
ವಂ ಬೆಸಸೆನ್ನನಂಜಿದೊಡವಂದಿರೆ ಬಾೞ್ದಿಲೆದಂದಪಂ ರಣಾ-
ಡಂಬರದಿಂದಮಂಜದೊಡೆ ಪಂದಲೆವಂದಪೆನೆಂದು ಪೂಣ್ಬು ಶೌ-
ರ್ಯಾಂಬುಧಿ ಬೇಡಿದಂ ಬೆಸನನಿಂದಗಿ ದಾನವಚಕ್ರವರ್ತಿಯಂ ॥೧೩೫॥

ಅಂತು ತಂದೆಯನಿಂದಗಿ ಬೆಸನಂ ಬೇಡಿಕೊಂಡು,

ಗಿರಿಗಳೆ ಪರಮಾಣುಗಳೆನೆ ।
ಸರೋಜಭವನೀ ಕರೀಂದ್ರಮಮಂ ಮಾಡಿದನೆಂ- ॥
ದಿರದದೞಿ ಕಾಯಬಲಮಮಂ ।
ನಿರೂಪಿಸಲ್ ನಾಗರಾಜನುಂ ನೆಱಿದಪನೇ ॥೧೩೬॥

ಎಂಬಿನಮುಗುರ್ವುವೆತ್ತುದಂ ತ್ರೈಲೋಕ್ಯಕಂಟಕಮೆಂಬಾನೆಯನೇಱಿ ಪ್ರಳಯ ಪ್ರಕ್ಷೋಭಮಾದಂತೆ ಮುಳಿದು ಬರೆ ವಾನರಬಲಂ ದೋರ್ವಲಮನುೞಿದು ಪೆಳಱಿ ಸುಗ್ರೀವನುಂ ಪ್ರಭಾಮಂಡಳನುಮಿದಿರ್ಚಲ್ ನೆಱಿದು ನಿಲ್ವುದುಮವರನಿಂದ್ರಜಿತ್ಕುಮಾರನಿಂತೆಂದಂ:

ಕಪಿವಂಶರ್ಗೆ ನಿಸರ್ಗಂ ।
ಚಪಳತೆ ಖಚರೇಂದ್ರನಪ್ಪ ದಶಕಂಠನ ಪಾ- ॥
ದಪಯೋಜಸೇವೆಯಂ ಬಿ ।
ಟ್ಟು ಪಶುವೆ ನೀ ಭೂಚರರ್ಗೆ ಕಿಂಕರನಾದೈ ॥೧೩೭॥

ನಿನ್ನಂಬನಱಿಯದಾಜಿಯೊ ।
ಳೆನ್ನೊಡನೆ ಪೊಣರ್ಕೆಗೆಂದು ಬಂದಪೆ ಮುನಿದಾಂ ॥
ನಿನ್ನಂ ಕೊಲ್ವೆಡೆಯೊಳ್ ಕಾ ।
ವನ್ನರ್ ಕೈಕೊಂಡು ಭೂಮಿಗೋಚರರೊಳರೇ ॥೧೩೮॥

ಎನೆ ಮುನಿದು,

ಕಾಳೆಗಮನುೞಿದು ಪೆಂಡಿ ।
ಗರ್ಾಳೆಗಮಂ ಮಾೞ್ಪಿ ಗಂಡುಮಾತುಳ್ಳೊಡೆ ಕೂ- ॥
ವಾರ್ಳ ಮಸೆದೋರ್ಪುದೆನಗೆಂ ।
ದೇಳಿಸಿದಂ ದನುಜತನುಜನಂ ಸುಗ್ರೀವಂ ॥೧೩೯॥

ಅಂತವರಿರ್ವರುಮೋರೊರ್ವರಂ ಮೂದಲಿಸಿ ಕಾದುತ್ತು ಮಿರ್ದರನ್ನೆಗಮಿತ್ತಲ್,

ಜನಕಾತ್ಮಜನೊಳ್ ದಶಮುಖ ।
ತನೂಭವಂ ಮೇಘವಾಹನಂ ಬಿಲ್ವೊಯ್ದಂ ॥
ಬಿನ ಮಱಿಯಂ ಲಯಸಮಯದ ।
ಘನಾಘನಂ ಕಱಿವ ಮಾಱ್ಕೆಯಿಂದಂ ಕಱಿದಂ ॥೧೪೦॥

ಅವನೆಚ್ಚಂಬುಗಳಂ ಚಂ ।
ಡವಿಕ್ರಮಂ ಮಂಡಳಾಗ್ರದಿಂ ಖಂಡಿಸಿದಂ ॥

ಬವರದೊಳಿದಿರಾಂಪವರಾ ।
ರವಾರ್ಯಭುಜವೀರ್ಯನಂ ಪ್ರಭಾಮಂಡಳನಂ ॥೧೪೧॥

ಅಂತು ನಿಜನಿಶಾತ ಶರಸಂಘಾತಮಂ ಖಂಡಿಸೆ ಮೇಘವಾಹನನಗ್ನಿಬಾಣದಿನಿಸುವುದುಮದಂ ಪ್ರಭಾಮಂಡಳಂ ವಾರುಣಾಸ್ತ್ರದಿಂ ಕಡಿಯೆ ಕಡುಮುಳಿದು,

ತಿರುವಿನೊಳಿಟ್ಟು ಕೂರ್ಗಣೆಗಳಂ ಧನುವಂ ಪೊಜಿಮಯ್ವನೆಯ್ದುವಂ-
ತಿರತೆಗೆದಸ್ತ್ರವಿದ್ಯೆಗಿವನೊಳ್ದೊರೆಯಾರೆನೆ ಮೇಘವಾಹನಂ
ತುರಗಮನೆಚ್ಚು ಸಾರಥಿಯನೆಚ್ಚು ಪತಾಕೆಯನೆಚ್ಚು ಬಿಲ್ಲನೆ-
ಚ್ಚು ರಥಮನೆಚ್ಚು ಪಂಚು ಪಜಿ ಮಾಡಿದನಾ ಜನಕಾತ್ಮಜಾತನಂ ॥೧೪೨॥

ಅಂತು ವಿರಥನಂ ಮಾಡಿ,

ದನುಜಸುತಂ ಪನ್ನಗಶರ ।
ದಿನಿಸುವುದುಂ ಜನಕಸುತನನದು ಪೆಣೆದಹಿ ಬಂ- ॥
ಧನದಿಂ ಪೊಡರ್ಪುಗುಂದಿಸೆ ।
ತನುವಂ ಮಜಿದಿಳೆಗೆ ಬಿಟ್ಟು ಮೂರ್ಛೆಗೆ ಸಂದಂ ॥೧೪೩॥

ಅಂತತಿಪ್ರಚಂಡಬಳಂ ಪ್ರಭಾಮಂಡಳಂ ಮೂರ್ಛಿತನಪ್ಪುದುಮಿತ್ತಲಿಂದ್ರಜಿತ್ಕುಮಾರಂ ಸುಗ್ರೀವನಂ ವಿರಥನಂ ಮಾಡಿ ಪನ್ನಗಾಸ್ತ್ರದಿಂದಿಸುವುದುಂ,

ಕಾಲಡಿಯಿಂ ಕೊರಲ್ವರೆಗಮಿಂದಗಿಯೆಚ್ಚ ಫಣೀಂದ್ರಸಾಯಕಂ
ಕೀಲಿಸಿದಂತೆವೋಲ್ ಬಿಗಿಯೆ ಸುತ್ತುವುದುಂ ಬಸಮುತ್ತು ಮುಚ್ಚಿ ಕ-
ಣ್ಣಾಲಿಗಳಿಚ್ಚೆಗೆಟ್ಟು ಕಪಿಕೇತನನಾಗಳೆ ಮುಚ್ಚೆವೋಗೆ ಶ-
ಕ್ರಾಲಯಮಂ ಪಳಂಚಿದುದು ದಾನವಸೈನ್ಯಜಯಾನಕಸ್ವನಂ ॥೧೪೪॥

ಮತ್ತಿತ್ತಲೊಂದು ಮೊನೆಯೊಳ್,

ಮಾಯಾಯದ್ಧದೊಳಂ ದಿ ।
ವ್ಯಾಯುಧಯುದ್ಧದೊಳಮಧಿಕಬಲರುಭಯಬಲಂ ॥
ಜೀಯೆಂಬಿನೆಗಂ ಕಾದಿದ ।
ರಾಯತಿ ನಿಲೆ ಕುಂಭಕರ್ಣನುಂ ಮಾರುತಿಯುಂ ॥೧೪೫॥

ಅಂತು ಕಾದುವಲ್ಲಿ,

ರಣಕರ್ಕಶನಸುರಕುಲಾ ।
ಗ್ರಣಿ ವಿರಥಂ ಮಾಡಿ ವೀರನಂ ಖಚರಕುಲಾ- ॥

ಗ್ರಣಿಯನವಯವದೊಳಣುವನ ।
ಸಣುವಂ ಪಿಡಿವಂತು ಕುಂಭಕರ್ಣಂ ಪಿಡಿದಂ ॥೧೪೬॥

ಅಮಿತಪರಾಕ್ರಮ ಪ್ರಥಿತರಪ್ಪ ಕಪಿಧ್ವಜರುಂ ವಿಯಚ್ಚರ-
ಪ್ರಮುಖರುಮೆಯ್ದಿದರ್ ನೆರೆದು ರಾವಣಸೇನೆಯೊಳಣ್ಮಿ ಕಾದಿ ಭಂ-
ಗಮನಿದು ತಕ್ಕುದನ್ಯರವಶರ್ ದಶಕಂಧರನಂ ದಶಾಸ್ಯಸೈ-
ನ್ಯಮನುಜಿದಿಕ್ಕಿ ಗೆಲ್ವೆಡೆಗೆ ಲಕ್ಷ್ಮಣನೆಂಬುದೆ ರಾಮನೆಂಬುದೇ ॥೧೪೭॥

ಅಂತಿಂದಗಿ ಮೇಘವಾಹನ ಕುಂಭಕರ್ಣರಿಂ ಸುಗ್ರೀವ ಪ್ರಭಾಮಂಡಳ ಹನುಮ ಪ್ರಮುಖ ಮುಖ್ಯನಾಯಕರುಂ ನಾಗಪಾಶವಿದ್ಯೆಯಿಂ ಕಟ್ಟುವಡೆದು ಪಟ್ಟಿರ್ಪುದುಂ,

ಅವರಘವಟ್ಟಿರವಂ ತಿಳಿ ।
ದು ವಿಭೀಷಣನಱಿಪಿ ರಾಮಲಕ್ಷ್ಮೀಧರರ್ಗೆ- ॥
ನ್ನ ವರೂಥಿನಿಯಂ ಕೊಂಡ ।
ನ್ನೆವರಂ ನೀಮಿರ್ಪುದವರನೀಗಳೆ ತರ್ಪೆಂ ॥೧೪೮॥

ಎಂದು ಬಿನ್ನಪಂಗೆಯ್ದು ವಿಭೀಷಣಂ ರಣರಸಿಕನಾಗಿ ಪೋಪುದುಮಂಗದಂ ತಾನುಮೊಡನೆ ಸಂಗ್ರಾಮಸಂರಂಭಮನಪ್ಪ ಕೆಯ್ದು ಕುಂಭಕರ್ಣನಂ ಮುಟ್ಟೆವಂದು,

ಸಂಗರದೊಳ್ ಕುಡುವೆಂ ದೋ ।
ರ್ಭಂಗಮನಾವಂಗಮೆಂದು ಕಲುಷಾನಳನಿಂ- ॥
ದಂಗದನಂಗೀಕರಿಸಿದ ।
ನಂಗಾರಮನುಗುಟ್ವಿಕಾರ ಸಿಡಿಲ ಪೊಡರ್ಪಂ ॥೧೪೯॥

ಅಂತು ಮಾಮುಸಕಂಗೊಂಡು ಕೃತಾಂತನಂತೆ ಸಾಧಾರಣಾಸ್ತ್ರದೊಳಂ ದಿವ್ಯಾಸ್ತ್ರದೊಳಮಸಾಧಾರಣಮಾಗಿ ಕಾದಿ,

ಶರಭಂ ಪಿಡಿದ ಮೃಗಾಧೀ ।
ಶ್ವರನಂ ಭೇರುಂಡನೆಟಿದುಕೊಳ್ವಂತೆ ನಿಶಾ- ॥
ಚರಕದಿನಂಗದಂ ಸಂ ।
ಗರಾಂಗಣದೊಳೆಟಿದುಕೊಂಡನಾ ಮಾರುತಿಯಂ ॥೧೫೦॥

ಗೆಲೆ ಕಾದಿ ಕುಂಭಕರ್ಣನ ।
ನಲಂಘ್ಯಬಲನಂಗದಂ ಜಯಶ್ರೀನಿಳಯಂ ॥
ಜಲದಪಥಕ್ಕೊಗೆದಾಕ್ಷಣ ।
ದೊಳೆ ಮಾರುತಿವೆರಸು ರಘುಜನಲ್ಲಿಗೆ ಬಂದಂ ॥೧೫೧॥

ಇತ್ತ ವಿಭೀಣನಿಂದಗಿಮೇಘವಾಹನರೊಳಾಹವಕೊಡರ್ಚುವುದುಮವರೆಮ್ಮ ಕಿಱೆಯಮ್ಮನೊಳ್ ಕಾದುವುದು ತಕ್ಕುದಲ್ತು ಪಿಂಗೆ ಭಂಗಮಿಲ್ಲೆಂದು ಕೈದುಗೆಯ್ಯದುಪೇಕ್ಷೆಗೆಯ್ದು ತೊಲಗಿಪೋಗೆ ಮುಟ್ಟೆವೋಗಿ ವಿಭೀಷಣಂ ಪನ್ನಗಶರವೇಷ್ಟಿತರಾಗಿರ್ದ ಸುಗ್ರೀವಪ್ರಭಾಮಂಡಳರಂ ಕಂಡೇನುಂಗೆಯ್ಯಲಱೆ ಕಯದೆ ಸಂಭ್ರಮಚಿತ್ತನಾಗಿ ನೋಡುತ್ತುಮಿರೆ,

ಏನುಚಿತಮೆ ರಘುಕುಳಬಳ ।
ಹಾನಿಯನೀಕ್ಷಿಸುವುದೆಂದು ಕಡುವೇಗದೊಳು- ॥
ತ್ತಾನಪದಂ ಪೋಪಂತಿರೆ ।
ಭಾನು ಬಿಸಿಲ್ಮಸುಱೆ ಪೊಕ್ಕನಪರಾರ್ಣವಮಂ ॥೧೫೨॥

ಅಂತು ನೇಸರ್ಪಡುವುದುಮಂ ದಶಾಸ್ಯನಪಹಾರತೂರ್ಯಮಂ ಪೊಯ್ಸಿ ಬೀಡಿಂಗೆ ಪೋಪುದುಮಿತ್ತಲ್,

ಸೌಮಿತ್ರಿ ಮುಕುಳಿತಾಂಜಳಿ ।
ರಾಮಂಗಿಂತೆಂದನಿವರ್ಗೆ ಪನ್ನಗಶರಮೂ- ॥
ರ್ಛಾಮುದ್ರಾ ಚ್ಛೇದನದಿಂ ।
ಕ್ಷೇಮಮನೊಡರಿಸುವುಪಾಯಮಾವುದು ಪೇಱಿಂ ॥೧೫೩॥

ಎನೆ ದಾಶರಥಿ ದಶನಕಾಂತಿ ನಿರ್ವಿಷೀಕರಣಮಣಿಮಯೂಖದಂತೆ ನಿಮಿರ್ವಿನಮಿಂತೆಂದಂ :

ಇವರುಪದ್ರವಮಂ ಕ್ಷಣಮಾತ್ರದಿಂ ।
ತವಿಸುಗುಂ ನೆನೆ ಮುಂ ಬರಮಿತ್ತನಂ ॥
ದಿವಿಜನಂ ಪೆಱತೇನೆನೆ ಲಕ್ಷ್ಮಣಂ ।
ಸವಿನಯಂ ನೆನೆದಂ ಬರಮಿತ್ತನಂ ॥೧೫೪॥

ನೆನೆವುದುಮಾಸನಕಂಪಂ ।
ಜನಿಯಿಸಿದತ್ತಾಗಳಾಮಹಾಲೋಚನನೆಂ- ॥
ಬ ನಿಳಿಂಪಂಗೆನೆ ರಘುವೀ ।
ರನ ಲಕ್ಷ್ಮೀಧರನ ಸೈಪು ಸಾಧಾರಣಮೇ ॥೧೫೫॥

ತನಗಾಸನಕಂಪಂ ತೊ ।
ಟ್ಟನೆ ಪುಟ್ಟೆ ರಣಪ್ರಪಂಚದೊಳ್ ರಘುವೀರಂ ॥
ನೆನೆದಪನೆಂದು ಮಹಾಲೋ ।
ಚನನೊರ್ಮೊದಲಱಿದನವಧಿಲೋಚನದಿಂದಂ ॥೧೫೬॥

ಅಂತವಂ ಗರುಡಾಧಿಪನಪ್ಪ ಮಹಾಲೋಚನನಱಿದು ಬಹುವಿದ್ಯಾಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡವಾಹಿನಿಯುಮೆಂಬೆರಡುಂ ವಾಹನವಿದ್ಯೆಗಳುಮಂ ದಿವ್ಯಾಸ್ತ್ರಂಗಳುಮನುಯ್ದು ಕುಡೆಂದು ನಿಜಾನುಚರನಪ್ಪ ಚಿಂತಾವೇಗನೆಂಬ ದೇವಂಗೆ ಬೆಸಸುವುದುಮಾತಂ ಬಂದು ಸಿಂಹವಾಹಿನಿಯಂ ರಾಮಂಗೆ ಗರುಡವಾಹಿನಿಯಂ ಲಕ್ಷ್ಮೀಧರಂಗೆ ಸದ್ಭಾವದೀವುದುಂ,

ಮನ್ನಿಸಿ ಚಿಂತಾವೇಗಮ ।
ಹೋನ್ನತನಂ ಜೈನಪೂಜೆಗೆಯ್ದತಿ ಹರ್ಷೋ- ॥
ತ್ಪನ್ನಪುಳಕಾವಳೀ ಸಂ ।
ಛನ್ನ ಶರೀರರ್ ಬಲಾಚ್ಯುತರ್ ಬಗೆಗೊಂಡರ್ ॥೧೫೭॥

ಪ್ರಣತಜಗಜ್ಜನಂ ತ್ರಿಭುವನಪ್ರಭು ಕಾವ್ಯಕಳಾವಿಳಾಸಿನೀ-
ಪ್ರಣಯಿ ಪರಾರ್ಥಕಲ್ಪತರು ನಮ್ಮ ಮನೋರಥಸಿದ್ಧಿ ದೇಶಭೂ-
ಷಣ ಕುಲಭೂಷಣ ವ್ರತಿಪದಾಂಬುಜಸೇವೆಯಿನಾದುದೆಂದು ಸ-
ದ್ಗುಣಮಣಿಭೂಷಣಂ ಪುಳಕಮಂ ತಳೆದಂ ಕವಿತಾಮನೋಹರಂ ॥೧೫೮॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರ ಮುನೀಂದ್ರ ಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಬಲಾಚ್ಯುತಪುಣ್ಯಪ್ರಭಾವೋದಯ ವರ್ಣನಂ
ತ್ರಯೋದಶಾಶ್ವಾಸಂ



## ೧೪. ರಘುವೀರವಿಜಯ ವರ್ಣನಂ

ಶ್ರೀರಮಣನಿಷ್ಪಸಿದ್ಧಿಗೆ ।
ಚಾರಣಮುನಿ ಪಾದಕಲ್ಪಪಾದಪಮೆ ವಲಂ ॥
ಕಾರಣಮಾದುದೆನುತ್ತುಂ ।
ಚಾರಿತ್ರಪವಿತ್ರನೊಸೆದನಭಿನವಪಂಪಂ ॥೧॥

ಅಲಘಮಹಿಮಾಪ್ರಭಾವಂ ।
ನೆಲೆವೆರ್ಚಿದುದೆಮಗೆ ಯೋಗನಿಷ್ಠಾಪರ ನಿ- ॥
ಶ್ಚಲರೆನಿಪ ದೇಶಭೂಷಣ ।
ಕುಲಭೂಷಣ ದಿವ್ಯಯೋಗಿ ದರ್ಶನದಿಂದಂ ॥೨॥

ಎಂದವರಂ ನಿರ್ಭರಭಕ್ತಿಯಿಂ ಸ್ತುತಿಗೆಯ್ಯೆ ಹರ್ಷಭರ ವಿನಮ್ರನಾಗಿ ವರ್ಷ ವಾರುಣಕೃಶಾನುಬಾಣಂ ಮೊದಲಾಗೆ ಪಲವುಂ ದಿವ್ಯಬಾಣಂಗಳುಮಂ ಸಿಂಹ ಗರುಡಧ್ವಜಂಗಳುಮನಭೇದ್ಯ ವಜ್ರಕವಚಂಗಳುಮನನರ್ಘ್ಯತರ ಭೂಷಣಂಗಳುಮಂ ರಾಮಲಕ್ಷ್ಮಣರ್ಗೆ ಕೊಟ್ಟು ಚಿಂತಾವೇಗಂ ಮನಃಪವನವೇಗದಿಂ ನಿಜ ನಿವಾಸಕ್ಕೆ ಪೋಪುದುಮಿತ್ತಲ್,

ಜಿನಧರ್ಮದ ಸಾಮರ್ಥ್ಯದಿ ।
ನಿನಿತು ಮಹಾಮಹಿಮೆ ರಾಮಲಕ್ಷ್ಮೀಧರರೊಳ್ ॥
ಜನಿಯಿಸಿ ವಿಸ್ಮಯಮಾದುದು ।
ಹನುಮಂತಪ್ರಮುಖ ನಿಖಿಳ ವಿದ್ಯಾಧರರೊಳ್ ॥೩॥

ಅನಂತರಂ ಗರುಡವಾಹಿನಿಯ ತನುಪ್ರಭೆ ತಮಮನಭಿಭವಿಸೆ ತತ್ಪಕ್ಷಪಾತ ಜಾತವಾತಘಾತದಿಂ ನಾಗಪಾಶವಿದ್ಯೆ ಸಿಡಿಲ್ದು ಪೋಗೆ ಸುಗ್ರೀವಪ್ರಭಾಮಂಡಳರಪಗತ ಮೂರ್ಛಿತಪ್ರಪಂಚರ್ ಸಿಂಹಗರುಡವಾಹನಾರೂಢರಾಗಿರ್ದ ರಾಮಲಕ್ಷ್ಮಣರಲ್ಲಿಗೆ ಬಂದವರ ಪುಣ್ಯಪ್ರಭಾವಕ್ಕೆ ಸಂತೋಷಂಬಟ್ಟು ನಿಮಗೀ ಮಹಾತಿಶಯಮಾದ ವೃತ್ತಾಂತಮಂ ಬೆಸಸಿಮೆನೆ

ಶ್ರೀರಾಮದೇವರದೆಲ್ಲಮಂ ನೆಱೆಯೆ ಬೆಸಸುತ್ತುಂ ಬೀಡಿಂಗೆ ಬಿಜಯಂಗೆಯ್ದಂದಿನಿರುಳಾ ಮಹೋತ್ಸವ ವ್ಯಾಪಾರದೊಳಿರ್ಪುದುಂ,

ಇಂದಿನನುವರದೊಳಪಜಯ ।
ಮಂ ದನುಜಂಗುಂಟುಮಾಳ್ಕುಮಿನವಂಶಜನೆಂ- ॥
ದಂದಧಿಕರಾಗಮಮಂ ತಳೆ ।
ದಂದದಿನಿನನುದಯಶಿಖರಿಶೇಖರನಾದಂ ॥೪॥

ಅಂತು ನೇಸಮರ್ೂಡುವುದಂ ದಶವದನನೆಂದಿನಂದದಿಂ ರಣಭೂಮಿಗೆ ವಂದೊಡ್ಡಿ ನಿಲ್ವುದುಮಿತ್ತ ರಾಮಲಕ್ಷ್ಮಣರ್ ನಿರ್ವತಿತನಿತ್ಯನಿಯಮರ್ ದೇವನಿತ್ತ ದಿವ್ಯಕವಚಮಂ ತೊಟ್ಟು ದಿವ್ಯಾಭರಣಭೂಷಿತರಾಗಿರ್ಪುದುಂ,

ದನುಸುತಂ ಕಿಟಿ ತನ್ನನಾ ಮುಳಿಸಿಂ ಮೃಡಾದ್ರಿಯೆ ಸಿಂಹವಾ-
ಹಿನಿಯ ರೂಪಿನೊಳಾಹವಕ್ಕೆ ಸಹಾಯಮಾಯ್ತು ರಘೂದ್ವಹಂ-
ಗೆನಿಸಿ ಕಾಯಬಲಂ ಕನತ್ಕನಕೋಪಲಾಕ್ಷಿ ಬೃಹದ್ಗುಹಾ-
ನನಮುಗುರ್ವಿಸೆ ತುಂಗಶೃಂಗಮೆ ಕೋಱದಾಡೆಗಳಾದವೋಲ್ ॥೫॥

ವಿಳಯಘನಾಘನಂಗಳೆನೆ ಪಕ್ಷಯುಗಂ ನಡೆತಪ್ಪ ರೋಹಣಾ-
ಚಳಮೆನೆ ಪಂಚವರ್ಣವಿಲಸತ್ತನು ಬಿಚ್ಚಟ ಬಿಟ್ಟ ದಿಟ್ಟಿಗಳ್
ಪೊಳೆವುದಿತಾರ್ಕಬಿಂಬಮೆನೆ ಚಂಚು ಮರೀಚಿಶತಹ್ರದಪ್ರಭೋ-
ಜ್ಜ್ವಳಮೆನೆ ಭೀಕರಂ ಗರುಡವಾಹಿನಿ ವಿದ್ಯೆಯ ವಿಕ್ರಿಯಾಕ್ರಮಂ ॥೬॥

ಅಂತಗುರ್ವಾಗೆ ವಿಗುರ್ವಿಸಿ ಬಂದ ಸಿಂಹಗರುಡ ವಾಹನಂಗಳ ನೇಱೆ ಸಿಂಹಗರುಡ ಧ್ವಜಂಗಳುಮನೆತ್ತಿಸಿ ದೇವನಿರ್ಮಿತಂಗಳಂ ಸಿತಾತಪತ್ರಂಗಳಂ ಪಿಡಿಯಿಸಿ ಸುಗ್ರೀವ ಪ್ರಭಾಮಂಡಳಮರುತ್ಸುತ ಪ್ರಮುಖ ನಿಖಿಳ ವಿದ್ಯಾಧರರ್ ಬಳಸಿ ಬರೆ ಸಂಗ್ರಾಮಭೂಮಿಗೆ ಬಂದೆಂದಿನಂದದಿನೊಡ್ಡಿ ನಿಲ್ವುದುಂ,

ಎರಡೊಡ್ಡುಂ ತಾಗಿ ಭಯಂ ।
ಕರಮೆನೆ ಕಾದಿದುವು ಪಱಿದ ತಲೆ ನೆತ್ತರ ಸು- ॥
ಟ್ಟುರೆ ಖಂಡ ದಿಂದೆ ಕೋಟ್ಮೆದು ।
ಳ ರಾಶಿ ನೆಣದುರ್ವು ಪರ್ವೆ ಸಮರಾವನಿಯಂ ॥೭॥

ವಾರಣಘಟೆಯುಂ ಜೋದರು ।
ಮಾರೋಹಕರುಂ ತುರಂಗದಳಮುಂ ರಥಿಯುಂ ॥
ತೇರುಮೊಡನಟೆಯೆ ಪೊಲ್ತು ।
ತ್ತೀರೊಡ್ಡುಂ ಪವನ ಹತ ಘನಾಘನದೊಡ್ಡಂ ॥೮॥

ಪಲವು ಗಜಂಗಳುಂ ಪಲವು ವಾಜಿಗಳುಂ ವಲವುಂ ರಥಂಗಳುಂ
ಪಲವುಮುದಗ್ರವೀರಭಟರುಂ ಪಲವುಂ ತೆಱಿದಾಯುಧಂಗಳುಂ
ಪಲವು ವಿಧಂಗಳಿಂ ಪಲವುಮೊಡ್ಡಣದಿಂ ಪಲರುಂ ಪೂಗಟ್ವಿನಂ
ತೊಲಗದೆ ತಾಗಿ ತಳ್ತಿಱಿಯೆ ನಾಡೆಯುಮದ್ಭುತಮಾದುದಾಹವಂ ॥೯॥

ಆ ಸಮಯದೊಳ್,

ವಾನರಸೇನೆ ದಾನವರ ಸೇನೆಯನಳ್ಕುಱೆ ಕಾದೆ ಕಂಡು ಪಂ-
ಚಾನನದಂತೆ ಗರ್ಜಿಸಿ ದಶಾನನನೆಯ್ತರೆ ಬೆರ್ಚಿ ಪೋಗೆ ದೀ-
ನಾನನವಾ ಕಪಿಧ್ವಜಿನಿ ಬೇಗಮದಂ ಪೆಱಗಿಕ್ಕಿ ತಾಗಿದಂ
ದಾನವರಾಜನಂ ಜವನ ಮುಂಬಿವನೆಂಬಿನೆಗಂ ವಿಭೀಷಣಂ ॥೧೦॥

ಅಂತು ತಾಗುವುದುಂ ಕಂಡು ಕಡುಮುಳಿದು ರಾವಣಂ ವಿಭೀಷಣನನಿಂತೆಂದಂ :

ಎನ್ನೊಡನೆ ಪುಟ್ಟಿ ಖಚರಕು ।
ಲೋನ್ನತಿ ಕೀಟ್ಟಿಟ್ಟು ತಕ್ಕುಗಿಡೆ ಕಿಂಕರ ಭಾ- ॥
ವಂ ನಿನಗೆ ಸಮನಿಸಿತ್ತು ಕೆ ।
ಲಂ ನಗುವಿನ ಮೆಲವೂ ನೀಚ ಭೂಗೋಚರರೊಳ್ ॥೧೧॥

ಅಕ್ಷೂಣಮಪ್ಪ ಸಿರಿಯಂ ।
ದಕ್ಷಿಣಭರತತ್ರಿಖಂಡಧರೆಯಂ ಯುವರಾ- ॥
ಜಕ್ಷತ್ರಚಾಮರಮನುೞಿ ।
ದಕ್ಷಮ ದೊರೆಗೆಟ್ಟ ಮಾನವಂಗಾಳಾದ್ಯೆ ॥೧೨॥

ಎಂದು ಮೂದಲಿಸಿ,

ತನಗಧಿಕಮಾಗೆ ಮನದೊಳ್ ।
ಮುನಿಸು ವಿಭೀಷಣನನೆಂದನಸುರೇಂದ್ರನದೆಂ- ॥
ತನುಜನೊಡನಾಂ ತೊಡರ್ಚುವೆ ।
ನನುವರಮಂ ಗೋತ್ರವಧಮಹಾಪಾತಕಮಂ ॥೧೩॥

ಆದಱಿನೆನ್ನ ಮುಂತಣಿಂ ತೊಲಗಿ ಪೋಗೆಂದ ದಶಮುಖನ ದುರುಕ್ತಿಗೆ ವಿಭೀಷಣಂ ಕೋಪಗ್ರಹಾವೇಶಮನಪ್ಪುಕೆಯ್ದು ಹಿತಮನಱಿಪಿದೊಡೆನ್ನಂ ಪೊಱಮಡಿಸಿ ನಿನ್ನ ಸೌಧರ್ಮಿಕೆಯುಂ ತಕ್ಕೂರ್ಮೆಯುಂ ಪಱಿಪಟ್ಟು ಪೋದುದಿನ್ನಾದೊಡಂ ಭುವನಸ್ತವನೀಯುಮಪ್ಪೆಮ್ಮ ತೋಯದವಾಹನಾನ್ವಯಕ್ಕೆ ಬನ್ನಮಪ್ಪಂತು ಪರಪ್ರೇಯಸಿಗಱಿಪಂ ತಂದ ನಿರ್ಬುದ್ಧಿಕೆಯನುೞಿದು ನಿನಗಂ ನಿನ್ನ ವಂಶಕ್ಕಮಕಾಲಮೃತ್ಯುವಂ ತಾರದೆ ರಾಮಸ್ವಾಮಿಗೆ ಜಗನ್ಮಾತೆಯುಂ

ಸೀತಾದೇವಿಯನೊಪ್ಪಿಸಿ ನಿನ್ನ ಸಾಮ್ರಾಜ್ಯ ಪದವಿಯೊಳ್ ಪದುಳಂ ನಿಲ್ವುದೆನೆ ಮುನಿದು ತಿರುವಾಯೊಳಂಬಂ ತೊಟ್ಟು ಮುಟ್ಟಿವರೆ,

ತ್ರಿಪತಾಕಾಭಿಷಣತರ ।
ಲಪನಂ ತೆಗೆದಿಸೆ ವಿಭೀಷಣಂ ರಾವಣ ಕೀ- ॥
ರ್ತಿಪತಾಕಾದಂಡಂ ಬೆರ ।
ಸು ಪತಾಕಾದಂಡಮುಡಿದು ಕೆಡೆದತ್ತಾಗಳ್ ॥೧೪॥

ಅಂತು ವಿಭೀಷಣನೇಸಾಡೆ ತಾನುಮೊಡನೆ,

ಸೋದರನ ಧನುರ್ಗುಣಮಂ ।
ಭೇದಿಸಿದಂ ರೋಷಿ ರಾವಣಂ ಮದಮದಿರೋ- ॥
ನ್ಮಾದವಶಂ ಧರ್ಮಗುಣ ।
ಚ್ಛೇದನಮಂ ಮಾಳ್ಪುದೆಂಬುದೊಂದಚ್ಚರಿಯೇ ॥೧೫॥

ಅಂತು ದಶಾನನಂ ನಿಜಶರಾಸನಮಂ ಖಂಡಿಸೆ,

ದಶವದನಶರಾಸನಮಂ ।
ನಿಶಾತಶರದಿಂ ವಿಭೀಷಣಂ ಖಂಡಿಸಿದಂ ॥
ದಶವದನನುಂ ವಿಭೀಷಣ ।
ನ ಶರಾಸನಮಂ ನಿಶಾತಶರದಿಂ ಕಡಿದಂ ॥೧೬॥

ಅಂತು ಕಲುಷವಶಗತನಾಗಿ,

ಪಿತೃವುಂ ಪಿತೃವ್ಯನುಂ ಕಾ ।
ದೆ ತಮ್ಮೊಳಿಂದಗಿಗೆ ಪಕ್ಷಮಾದುದು ಲಂಕಾ- ॥
ಪತಿಯೊಡನೆ ತಕ್ಕುದೊರ್ಮರ ।
ದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ ॥೧೭॥

ಅಂತಿಂದ್ರಜಿತ್ಕುಮಾರನೆಡೆವೊಕ್ಕು ವಿಭೀಷಣನೊಳ್ಕಾದಲೊಡರಿಸೆ ಲಕ್ಷ್ಮಣಂ ನಿಜವರೂಥಮನಾತನ ರಥಕ್ಕಡ್ಡಂನೂಂಕಿ,

ಇತ್ತಿತ್ತ ಮಗುಟಿ ಮಗುಟಿಂ ।
ದತ್ತಲ್ ರಾಮಾನುಜನ್ಮನಿಂದಗಿಯೊಳ್ ಕಾ- ॥
ದುತ್ತುಮಿರೆ ರಾಘವಂ ಸುಭ ।
ಟೋತ್ತಮನೊಳ್ ಕುಂಭಕರ್ಣನೊಳ್ಬಿಲ್ಲ್ವೊಯ್ದಂ ॥೧೮॥

ಆ ಸಮಯದೊಳಸಮಯ-ಪ್ರಳಯ-ಸಮಯ-ಸಮುತ್ಪಾದನ-ಸಮರ್ಥನಪ್ಪ ಕೃತಾಂತನಂತೆ ಹನುಮಂತಂ ಕುಂಭಕರ್ಣನೊಳ್ ವಿರಾಧಿತಂ ಮಯನೊಳ್ ಕಿಷ್ಕಿಂಧಂ ಕೇತುವಿನೊಳ್ ಪ್ರಭಾಮಂಡಳಂ ಮೇಘವಾಹನನೊಳೂರ್ಜಿತಂ ದೃಢರಥನೊಳ್ ಪೆಱರುಮಱೆಕೆಯ ಕಪಿಧ್ವಜ ಬಲದ ನಾಯಕರನೇಕರುಂ ರಾಕ್ಷಸಬಲದ ನಾಯಕರೊಳ್ ಬಿಲ್ವೊಯ್ದು ಬಹುಕಬಂಧ ನರ್ತನ ಪ್ರಬಂಧ ಮತ್ಯದ್ಭುತಮಾಗೆ ಕಾದಿ ಮಹಾಯುದ್ಧಂ ಗೆಯ್ಯುತ್ತುಮಿರ್ಪಿನಮಿತ್ತಲ್,

ಇಂದಗಿ ಸಾಧಾರಣ ಶರ ।
ಸಂದೋಹದಿನೆಚ್ಚು ಕಾದಲಣಮಾಱದೆ ಶ- ॥
ತ್ರುಂದಮನೊಳ್ ಲಕ್ಷ್ಮಣನೊಳ್ ।
ತಂದಂ ದಿವ್ಯಾಸ್ತ್ರಗರ್ಭಶರಧಿಗೆ ಕೆಯ್ಯಂ ॥೧೯॥

ಅಂತು ದಿವ್ಯಬಾಣಮಂ ಬಾಣಾಸನದೊಳ್ ಪೂಡಿಕೊಂಡುಪೇಂದ್ರನನಿಂದ್ರ-ಜಿತ್ಕುಮಾರನಿಸುವುದುಂ,

ಗಗನಾಭೋಗ ದೊಳಿರ್ದು ನೋೞ್ಪಸುರಸಂದೋಹಂ ಮಹೋತ್ಸಾಹದಿಂ
ಪೊಗೞ್ವನ್ನಂ ತಮದಂಬನರ್ಕಶರದಿಂ ದಾಶೀವಿಷೋಗ್ರಾಸ್ತ್ರಮಂ
ಖಗರಾಜಾಸ್ತ್ರ ನಿಪಾತದಿಂ ಕಿಡಿಸಿ ದಿವ್ಯಾಸ್ತ್ರಂಗಳಿಂ ಗೆಲ್ದನಿಂ-
ದಗಿಯಂ ಸಂಪ್ರತಿಕಾಲ ಸಾಂಧ್ಯಜಲದಾರಕ್ತೇಕ್ಷಣಂ ಲಕ್ಷ್ಮಣಂ ॥೨೦॥

ತ್ರಿದಶೇಂದ್ರವಿಜಯಿಯಂ ದಶ ।
ವದನನನಾಹವದೊಳಿಕ್ಕಲಿರ್ದ ಮಹಾವೀ- ॥
ರ್ಯದ ಕಣೆಗೆ ಲಕ್ಷ್ಮಂಗಾ ।
ವುದು ಗಹನಮೊ ಗೆಲ್ದುದುೞಿದ ರಣಬಾಲಕರಂ ॥೨೧॥

ಅಂತು ಗೆಲ್ದಿಂದಗಿಯಂ ವಿರಥಂ ಮಾಡಿ ನೆಲಕಿಕ್ಕಿ ನಾಗಪಾಶದೊಳ್ ಕಟ್ಟಿ ವಿರಾಧಿತನ ಕೈಯೊಳ್ ಬೀಡಿಂಗೆ ಕಟೆಪುವುದುಮಿತ್ತಲ್,

ಪೆಱರಳವೆ ರಾಮನೊಳ್ ತ ।
ಳ್ತಿಱಿಯಲವಂ ರಾವಣಂಗೆ ಶೌರ್ಯದೊಳಂ ನೇ- ॥
ರ್ಗಿಱಿಯನೆನೆ ಕುಂಭಕರ್ಣಂ ।
ಮೆಱೆದಂ ಕೋದಂಡಬಾಹುದಂಡದ ನೆರವಂ ॥೨೨॥

ಅಂತು ಕದನಕರ್ಕಶನಾಗಿ ಕಾದುತ್ತುಮಿರೆ ರಾಘವನವನನೇಳಿದಂ ಬಗೆದು ದಿವ್ಯಬಾಣ ತೂಣೀರಕ್ಕೆ ಕೈಯನೊಯ್ಯದೆ,

ಸಾಮಾನ್ಯಾಸ್ತ್ರಂಗಳಿಂ ಭಂಗಮನೊಡರಿಸಿದಂ ಕುಂಭಕರ್ಣಂಗೆನಲ್ ಸಂ-
ಗ್ರಾಮಾವಷ್ಟಂಭಸಂರಂಭದಿನತುಳ ಬಳಂ ಮೀಱೆ ಮಾಱಾಂಪನಾವಂ
ರಾಮಂ ದಿವ್ಯಾಸ್ತ್ರಮಂ ತೊಟ್ಟೊಡೆ ಕುಲನಗಮಳ್ಳಾಡುಗುಂ ದಿಕ್ಕರೀಂದ್ರ-
ಸ್ತೋಮಂ ಬಾಯ್ಬಿಟ್ಟು ಪಿಮ್ಮೆಟ್ಟುಗುಮಿಳೆಗಿಳಿಗುಂ ವ್ಯೋಮದಿಂ ಭಾನುಬಿಂಬಂ ॥೨೩॥

ಅಂತವನ ಶಸ್ತ್ರಾಸ್ತ್ರ ತನುತ್ರ ಕೋದಂಡ ಪತಾಕಾದಂಡಂಗಳಂ ಖಂಡಿಸುವುದುಂ,

ಮಿಕ್ಕ ಮಹಾರಥಂ ವಿರಥನಾದನಧೋಕ್ಷಜನಂತೆ ನಾಗಪಾ-
ಶಕ್ಕೊಳಗಾದನೀಶ್ವರ ಕಿರೀಟಮೆನಲ್ ರಥದಿಂ ನೆಲಕ್ಕೆ ಪಾ-
ಯ್ದಕ್ಕಟ ಬೊಮ್ಮನಂತಿರೆ ರಜೋಮಯ ನಾದನಿದಿರ್ಚೆ ರಾಮನೊಳ್
ತಕ್ಕಿನ ಕುಂಭಕರ್ಣನೆನೆ ಮಿಕ್ಕವರಾಂತು ಬರ್ದುಂಕುವನ್ನರಾರ್ ॥೨೪॥

ಅಂತು ಬಂಧನಕ್ಕೆ ವಂದ ಕುಂಭಕರ್ಣನಂ ಪ್ರಭಾಮಂಡಲಂಗೊಪ್ಪಿಸುವುದುಂ ಪ್ರಭಾಮಂಡಲಂ ಮೇಘವಾಹನನಂ ನಾಗಪಾಶದೊಳ್ ಕಟ್ಟಿ ಕುಂಭಕರ್ಣಂ ಬೆರಸು ಬೀಡಿಂಗೆ ಪೋದನಿತ್ತಲ್ ಪಿರಿದುಂ ಬೊಬ್ಬುಭರಂಗೆಯ್ದು ಕಾದುತ್ತುಮಿರ್ದ ವಿಭೀಷಣನಂ ರಾವಣಂ ನೋಡಿ ಕೊಲಲ್ವೇಡಿ,

ಶೂಲಾಯುಧದಿಂದಿಡೆ ಲಯ ।
ಕಾಲೋರಗನಂತೆ ಬರ್ಪುದುಂ ಜಯಲಕ್ಷ್ಮೀ- ॥
ಲೋಲಂ ಲಕ್ಷ್ಮೀಧರನ ।
ಸ್ತ್ರಾಲಿಗಳಿಂ ಖಂಡಖಂಡಮಾಗಿರೆ ಕಡಿದಂ ॥೨೫॥

ಅಂತು ಕಡಿದು ವಿಭೀಷಣನಂ ಪೆಱಗಿಕ್ಕೆ ಲಕ್ಷ್ಮೀಧರನೆಡೆಗೋದು ರಾವಣನೊಳ್ ತಾಗುವುದುಂ,

ನೀಂ ಕಾದೆ ವಿಭೀಷಣನಂ ।
ಮುಂಕೊಲಲೆಂದಿಟ್ಟ ಶೂಲಮಂ ಖಂಡಿಸಿ ನಿ- ॥
ನ್ನಂ ಕಾವವನಾವನೆನು ।
ತ್ತುಂಕೊಂಡಂ ದಿವ್ಯಶಕ್ತಿಯಂ ದಶಕಂಠಂ ॥೨೬॥

ಅಂತು ಕೊಂಡಭಿಮಂತ್ರಿಸಿ ಸರ್ವಶಕ್ತಿಯಿಂದಿಡುವುದುಂ,

ಕುಳಿಕನ ದಾಡೆಯೋ ಯಮನ ದಾಡೆಯೊ ಮೇಣ್ ಪ್ರಳಯಾಗ್ನಿಜಿಹ್ವೆಯೋ
ಜಳಧಿಯನೀಂಟುವೌರ್ವದಹನಾರ್ಚಿಯೊ ಪೇಟಿನೆ ರೌದ್ರರೂಪಮಂ
ತಳೆದು ಕಪಿಧ್ವಜರ್ ನಡುಗುವಂತು ದಶಾನನನಿಟ್ಟ ಶಕ್ತಿ ನಿ-
ಶ್ಚಳಮೆನೆ ನಟ್ಟುದಪ್ರತಿಮ ಶಕ್ತಿ ಜನಾರ್ದನ ವೀರವಕ್ಷಮಂ ॥೨೭॥

ಅಂತಾ ದಿವ್ಯಶಕ್ತಿ ನಿಶ್ಯಕ್ತಿಯಪ್ಪಂತು ನಟ್ಟುನಿಲೆ,

ಸಮರವಿಜಯಾಂಗನಾಸಂ ।
ಗಮ ಜನಿತಶ್ರಮದೊಳಾದ ನಿದ್ರೆಯವೋಲ್ ಕ- ॥
ಣ್ಣೆಮೆ ಮುಚ್ಚೆ ಮುಚ್ಚೆವೋದಂ ।
ಕಮಳಾಕ್ಷಂ ದನುಜದಿವ್ಯಶಸ್ತ್ರಾ ಹತಿಯಿಂ ॥೨೮॥

ಅನುವರದೊಳ್ ಸಮಬಳನೀ ।
ತನೆ ದೋರ್ಬಲದೃಪ್ತನೆಂಬ ಬಗೆದಾರದೆ ಬಿ- ॥
ಟ್ಟನನಿಜೆಯಲೊಲ್ದನಿಲ್ಲಾ ।
ವನೊ ರಾವಣನಂತು ಪಾೞಿಯಂ ಪಾಳಿಸುವಂ ॥೨೯॥

ಅಂತು ಮೂರ್ಛಿತನಪ್ಪುದುಂ ದಾನವಸೇನೆಯೊಳ್ ಘೂರ್ಣಿಸುವ ಜಯಜಯಾನಕರವಂ ಶ್ರವಣವಿವರಮಂ ಸಾರ್ತರೆ ತದ್ವೃತ್ತಾಂತಮಂ ತಿಳಿದು,

ಅನುಜನ ಮೂರ್ಛೆವೋದಟಲೆ ಕೋಪಮನಗ್ಗಳಮುಂಟುಮಾಡೆ ಕೀ-
ಟ್ವೆನೊ ಕುಳಶೈಳಮಂ ಕುಡಿವೆನೋ ಕಡಲಂ ವಸುಧಾತಳಕ್ಕೆ ತ-
ರ್ಪೆನೊ ಶಶಿಸೂರ್ಯಮಂಡಳಮನೆತ್ತುವೆನೋ ನೆಲನಂ ವಿಯತ್ತಳ-
ಕ್ಕೆನಗಿದಿರಾವನೆಂದೊದಱೆ ರಾವಣನೊಳ್ ಪೊಣರ್ದಂ ರಘೂದ್ವಹಂ ॥೩೦॥

ಅಂತು ಪೊಣರ್ದು,

ತಿರುವಿಲ್ಲಂಬು ಪತಾಕೆ ವಜ್ರಕವಚಂ ಸೂತಂ ವರೂಥಂ ಹಯೋ-
ತ್ಕರಮೆಂಬಿಂತಿವನಾಗಳೆಚ್ಚು ಕಡಿಖಂಡಂ ಮಾಡಿ ದಿವ್ಯಾಸ್ತ್ರದಿಂ
ವಿರಥಂ ಮಾಡಿದನೇಟು ಸೂೞ್ವಿರೆಗಮಾವಂ ರಾಮಬಾಣಕ್ಕೆ ನಿ-
ತ್ತರಿಪಂ ತನ್ನನೆ ಸಂತವಿಟ್ಟನಸುರಂ ಮುಂತಾಗಲೇಸಾರ್ತನೇ ॥೩೧॥

ಅಂತು ರಾವಣಂ ಪಲವುಸೂಟ ವಿರಥನಾಗಿಯುಮವಿಚ್ಛಿನ್ನಕವಚನುಮವ್ರಣ ಕಾಯನುಮಪ್ಪುದುಂ,

ಭೇದಿಪುದು ಕುಳಾದ್ರಿಯನೆ ।
ನ್ನೀ ದಿವ್ಯಶರಂಗಳಿವನ ದೇಹಮನಿನಿಸಂ ॥
ಭೇದಿಸಿದುವಿಲ್ಲ ವಿಸ್ಮಯ ।
ಮಾದಪುದಲ್ಲಾಯುವಲ್ಲನಕ್ಕುಂ ದನುಜಂ ॥೩೨॥

ಅಂತು ಬಗೆಯುತಿರ್ಪುದುಂ,

ಇನವಂಶೋದ್ಭವನಪ್ಪ ಲಕ್ಷ್ಮಣನ ಮೂರ್ಛಾವೇಗಮಂ ಪಿಂಗಿಸಲ್
ಮನುವಂಶಂಗೆಡೆಮಾಟ್ಟಿನಿಂದಿನಿರುಳೊಳ್ ಲಕ್ಷ್ಮೀಧರಂ ಗೆಲ್ವುಮಿ೦
ದನುಜಾಧೀಶ್ವರನಿಟ್ಟ ಶಕ್ತಿಯ ಪೊಡರ್ಪಂ ತಕ್ಕುದಿಲ್ಲಿರ್ಪುದ-
ಲ್ತೆನಗೆಂಬಂತೆ ದಿನಾಧಿನಾಥನಪರಾಂಭೋರಾಶಿಯಂ ಪೊರ್ದಿದಂ ||೩೩||

ಅಂತು ನೇಸರ್ಪಡುವುದುಮೆರಡುಂ ಪಡೆಗಳಪಹಾರತೂರ್ಯಮಂ ಪೊಯ್ಸಿ ತಂತಮ್ಮ ಬೀಡಿಂಗೆ ಪೋಪ ಸಮಯದೊಳ್,

ಮನದೊಳ್ ಹರ್ಷವಿಷಾದಮಾಯ್ತು ದನುಜಂಗಾನೊರ್ವನಂ ವೈರಿಯಂ
ಮೊನೆಯೊಳ್ ಸಾಧಿಸಿದೆಂ ಮಹಾಬಲನನೆಂಬುತ್ಸಾಹದಿಂದಾತ್ಮನಂ-
ದನನಪ್ಪಿಂದಗಿ ಮೇಘವಾಹನರುಮಂ ಮತ್ಸೋದರಂ ಕುಂಭಕ-
ರ್ಣನುಮಂ ಬಾಟ್ದಿಲೆಗೊಂಡರೆಂದಸದಳಂ ಮೆಯ್ವೆರ್ಚಿದುಬ್ಬೇಗದಿಂ ||೩೪||

ಅಂತು ಬಗೆ ಬೆದಱಿ ರಾವಣಂ ಲಂಕೆಗೆ ಪೋದನಿತ್ತ ದಾಶರಥಿ ಮೂರ್ಛಿತನಾಗಿರ್ದ ಲಕ್ಷ್ಮಣನಂ ಕಂಡು ತಾನುಂ ಮೂರ್ಛೆವೋಗಿ ನೀಡಱೆಂದೆಟ್ಚಿತ್ತು ಮತ್ತಮತಿ ವಿಹ್ವಲಚಿತ್ತನಾಗಿ ತಮ್ಮನನೆಯ್ದೆವರ್ಪುದುಂ ಜಾಂಬವ ಸುಷೇಣ ಪ್ರಮುಖ ಮಂತ್ರಿಗಳೆಂದರ್ : ದೇವ, ದಿವ್ಯಶಸ್ತ್ರಪ್ರಹರಣದೊಳಾದ ವೇದನೆ ನಿಮ್ಮ ಕರಸ್ಪರ್ಶನದಿಂಧಿಕಮಪ್ಪುದು, ಮಟ್ಟಬೇಡೆಂದು ಬಾರಿಸಿ ನೀಮೇಕೆ ವಿಹ್ವಲರಪ್ಪಿರ್ ಸೌಮಿತ್ರಿಯಪ್ಪೊಡೆಂಟನೆಯ ಕೇಶವನಾತನ ಕೈಯೊಳ್ ರಾವಣಂಗಪಾಯಮಕ್ಕುಮಲ್ಲದೀತಂಗಪಾಯಮಪ್ಪುದಿಲ್ಲಂ ದಿವ್ಯಶಸ್ತ್ರ ಪ್ರಹರಣ ಭರಣ ಮನಪಹರಿಸುವ ಭೇಷಜ ಪ್ರಯೋಗಮನೊಡರಿಸುವಮೆಂದು ಶೋಕೋದ್ರೇಕಮನು ಪಶಮಿಸುವುದುಮನಂತರಂ,

ಸೌಮಿತ್ರಿಯ ಸುತ್ತಣ ರಣ ।
ಭೂಮಿಯನಿಂಬಾಗೆ ಸಮೆಱೆ ಕಪಿಕೇತುಕುಳ- ॥
ಗ್ರಾಮಣಿ ಸುಗ್ರೀವಂ ವಿ ।
ದ್ಯಾಮಯಮಂ ಸಪ್ತಗುಪ್ತಿಯಂ ನಿರ್ಮಿಸಿದಂ ||೩೫||

ಅಂತು ನಿರ್ಮಿಸಿದ ವಿದ್ಯಾಪ್ರಾಕಾರಂಗಳಂ ಬಹಿರಂತಃಪ್ರದೇಶಂಗಳೊಳ್ ಪಲರ್ ವಿದ್ಯಾಧರರಂ ಕಾಪುವೇಟ್ಟುದುಂ,

ಚಲಿಯಿಸೆನೆಂದಾದಿಯ ಬಾ ।
ಗಿಲ ಕಾಪಿನೊಳಸಮಸೈನ್ಯನೆಂಟನೆಯ ಕುಲಾ- ॥
ಚಲಮೆಂಬಿನಂ ಪ್ರಭಾಮಂ ।
ಡಲನಿರ್ದಂ ಮಂಡಳಾಗ್ರಮಂ ಜಡಿಯುತ್ತುಂ ||೩೬||

ಎರಡನೆಯ ಬಾಗಿಲೊಳ್ ಸಂ ।
ಗರಕ್ಕೆ ತಾನಂಗರಕ್ಕೆ ರಘುಜಂಗೆಂಬಂ- ॥
ತೆರಡನೆಯ ದಂಡಧರನಂ ।
ತಿರಿರ್ದನುಜಿದಂಗದಂ ಗದಾದಂಡಧರಂ ॥೩೭॥

ಮೂಱನೆಯ ನೊಸಲ ಕಣ್ಣಂ ।
ತೋಱುವೆನಾನಸುರಸೇನೆಗೆಂಬಂತಾಗಳ್ ॥
ಮೂಱನೆಯ ಬಾಗಿಲೊಳ್ ಕೈ ।
ಮೀಱದೆ ಶೂಲಾಯುಧಂ ವಿಭೀಷಣನಿರ್ದಂ ॥೩೮॥

ಸಮದಂ ಚಾಪಧರಂ ತ ।
ನ್ನಮಿತಬಲಂ ಬೆರಸು ಮಾರುತಂಗಂ ಪುಗಲಿಂ- ॥
ದು ಮರೀಚಿಗಮಣಮರಿದೆನೆ ।
ಕುಮುದಂ ನಾಲ್ಕನೆಯ ಬಾಗಿಲೊಳ್ ನೆಱೆದಿರ್ದಂ ॥೩೯॥

ಪರಚಕ್ರ ವಿಳಯಕೇತುವೊ ।
ಲಿರೆ ಕೊಂತಂ ತನ್ನ ಹಸ್ತದೊಳ್ ತನ್ನ ಬಲಂ ॥
ಬೆರಸು ಸುಷೇಣಂ ಖೇಚರ ।
ಪರಿವೃಢನೈದನೆಯ ಬಾಗಿಲೊಳ್ ಬಂದಿರ್ದಂ ॥೪೦॥

ಅಪರಿಮಿತಸೈನಿಕಂ ಪಿಡಿ ।
ದು ಪಿಂಡಿವಾಳಮನಖರ್ವ ಬಾಹಾಗರ್ವಂ ॥
ಕ್ಷಪಿತರಿಪುಸೈನ್ಯನಿರ್ದಂ ।
ಕಪಿಕುಲನಾಱನೆಯ ಬಾಗಿಲೊಳ್ ಸುಗ್ರೀವಂ ॥೪೧॥

ಎನ್ನನತಿಕ್ರಮಿಸಲ್ ನೆಱೆ ।
ವನ್ನಂ ಪೆಱನಾವನಿರುಳ ಕಾಳೆಗದೊಳೆನು- ॥
ತ್ತುಂ ನೀಳಂ ರಣಲೋಳಂ ।
ತನ್ನ ಬಲಂ ಬೆರಸು ಕಡೆಯ ಬಾಗಿಲೊಳಿರ್ದಂ ॥೪೨॥

ಅಂತಪರಸಂಖ್ಯಾತ. ಬಲಸಮೇತರಾಗಿರ್ಪುದುಮಾ ಪ್ರಾಕಾರದೊಳಗಣ ಮಣಿಮಂಡಪದ ಪೂರ್ವದ್ವಾರದೊಳ್ ಶರಭನುಂ ಪಶ್ಚಿಮದ್ವಾರದೊಳ್ ಜಾಂಬವನು ಮುತ್ತರದ್ವಾರದೊಳ್ ಚಂದ್ರಮರೀಚಿಯುಂ ದಕ್ಷಿಣದ್ವಾರದೊಳ್ ಮಹೇಂದ್ರನುಮಪಾರ ವೀರಭಟಸಮನ್ವಿತರಾಗಿ ಲಕ್ಷ್ಮಣಸಂ ಕಾಯ್ದು ಕೊಂಡಿರ್ಪುದುಮಿತ್ತ ರಾವಣಂ ನಿಜಾಂತರಂಗದೊಳ್,

ಸಾಯದೆ ಮಾಣಂ ಲಕ್ಷ್ಮಣ ।
ನೀಯಿರುಳೊಳ್ ಸಾಯೆ ಸೆಱೆಗಳಂ ಕೊಲ್ಲದೆ ಕೈ- ॥
ಗಾಯರವರೆನಗೆ ಪಿರಿದುಮ ।
ಪಾಯಂ ಸಮನಿಸುವುದೆಂದು ಚಿಂತಿಸುತಿರ್ದಂ ॥೪೩॥

ಅಂತಿರ್ಪುದುಮತ್ತ ಸೀತಾದೇವಿ ಶಕ್ತಿಪ್ರಹಾರದಿಂ ಲಕ್ಷ್ಮಣಂ ಮೂರ್ಛಿತನಾಗಿರ್ದನೆಂದು ಕೇಳ್ದಸಹ್ಯ ಶೋಕಾನಳದಮದಹ್ಯಮಾನ ಮಾನಸೆ

ಈ ದಿವ್ಯಾಯುಧಹತಿಯಿಂ ।
ದಾದತ್ತು ವಿಪತ್ತಿ ನಿನಗೆ ಲಕ್ಷ್ಮೀಧರ ಧಾ- ॥
ತ್ರೀದಯಿತನಪ್ಪೆ ನೀನೆಂ ।
ಬಾದೇಶಮದೆತ್ತ ಪೋಯ್ತೊ ಮನುಕುಲತಿಲಕಾ ॥೪೪॥

ಸಾವಂ ರಾವಣನೆಂದರ್ ।
ಕೇವಲಿಗಳ್ ಸಿದ್ಧಶಿಲೆಯನುದ್ಧರಿಸಿದ ಶೌ- ॥
ರ್ಯಾವಷ್ಟಂಭದಿನದು ಪುಸಿ ।
ಸಾವಾದುದು ನಿನಗೆ ದನುಜಶಸ್ತ್ರಾಹತಿಯಿಂ ॥೪೫॥

ಎಂದು ಪಲತೆಱದಿಂ ಪ್ರಳಾಪಂಗೆಯ್ವ ಸೀತೆಯಂ ವಿನೀತೆ ಖಚರಕಾಂತೆ ಸಂತೈಸಿ ನಿನಗಿನಿತು ದುಃಖವೇಗಮೇವುದೌ ನಿನ್ನ ಮೈದುನಂ ವಾಸುದೇವನಪ್ಪುದಱಿಂ ಪ್ರತಿ ವಾಸುದೇವನಿಂ ಸಾವನೆಯ್ದುವನಲ್ಲನೆಂದಱಿಲನಾಱಿಸುತಿರ್ಪಿನಮಿತ್ತಲ್,

ಗಗನಚರಂ ಲಕ್ಷ್ಮೀಧರ ।
ನಗಣ್ಯಪುಣ್ಯಪ್ರಭಾವದಿಂ ಮತ್ತೊರ್ವಂ ॥
ಗಗನತಳಂ ನಿಜಭೂಷಾಂ ।
ಶುಗಳಿಂ ಪ್ರಜ್ವಲಿಸುವಂತು ಬೇಗಂ ಬಂದಂ ॥೪೬॥

ಅಂತು ಬೇಗಂ ಬಂದು ಬೀಡಂ ಪುಗುವಲ್ಲಿ ಕಾಪಿನವರ್ಪುಗಲೀಯದಿರ್ಪುದುಮಾತಂ ರಥನೂಪುರಚಕ್ರವಾಳಪುರದಿಂ ಕಾಳೆಗದ ಶುದ್ಧಿಗೆ ಜನಕನಟ್ಟಿ ದೊಡೆ ಬಂದೆನೆಂದವರನುಮತದಿಂ ಪ್ರಭಾಮಂಡಳನಂ ಬಂದು ಕಂಡು ತನ್ನ ಬಂದ ಬರವನಱಿಪಿ ಸೌಮಿತ್ರಿಯ ಮೂರ್ಛಾಪ್ರಪಂಚಮನವರ ದೆಸೆ ಯಿನಱಿದಾನೀ ದಿವ್ಯ ಶಕ್ತಿಯಿಂದಾದಪಾಯಮನಪಹರಿಸು- ವುಪಾಯಮಂ ಬಲ್ಲೆನೆಂಬುದುಂ ಪ್ರಭಾಮಂಡಳಂ ಪ್ರಮೋದಮುದಿತಹೃದಯನಾತನಂ ರಾಮಸ್ವಾಮಿಯಲ್ಲಿಗುಯ್ಯುದುಮಾತಂ ಸಾಷ್ಟಾಂಗಪ್ರಣತನಾಗಿ ದೇವ ಭವತ್ಪ್ರಸಾದದಿಂ ಲಕ್ಷ್ಮೀಧರಂಗೆ ಸರ್ವಕ್ಷೇಮಮಕ್ಕುಮಾದೆಸೆಗುಮ್ಮಳಿಸದೆನ್ನ ಬಿನ್ನಪಮನವಧಾರಿಸುವು- ದೆಂದಿಂತೆಂದಂ :

ನಿರುಪಮ ದೇವ ಗೀತ ಪುರಮೆಮ್ಮ ಪುರಂ ಪುರವಲ್ಲಭಂ ಕಲಾ-
ಪರಿಣತನೆನ್ನ ತಂದೆ ಶಶಿಮಂಡಳನಾನತಿಚಂದ್ರನೆಂಬ ಖೇ-
ಚರನೆನದೊರ್ಮೆ ವಾಯುಪಥದೊಳ್ ಪರಮೋತ್ಸವದಿಂ ವಿಹಾರಿಸು-
ತ್ತಿರೆ ಪಗೆವಂ ಸಹಸ್ರವಿಜಯಂ ಕಡುಕೆಯ್ದಿದಿರಾಗಿ ತಾಗಿದಂ ॥೪೭॥

ಅಂತು ತಾಗೆ ಪಿರಿದುಪೊೞ್ತಿರ್ವರುಂ ಭರಂಗೆಯ್ದು ಕಾದುತ್ತುಮಿರ್ಪುಮಂ,

ಅವನಿಟ್ಟ ಶಕ್ತಿಯಿಂದಾಂ ।
ಜವವಱಿದು ನಭೋವಿಭಾಗದಿಂ ಸಾಕೇತ- ॥
ಕ್ಕವರಿತರಿಸಿ ಮಹೇಂದ್ರೋದ್ಯಾ ।
ನವನದ ತಣ್ಬುಱಿಲ ತಾಣದೊಳ್ ಬಿೞ್ದಿರ್ದೆಂ ॥೪೮॥

ಭರತನುಮೆನ್ನ ಪುಣ್ಯವಶದಿಂದಿರದಲ್ಲಿಗೆ ಬಂದು ಮೂರ್ಛೆವೋ-
ಗಿರೆ ಕೃಪೆಯಿಂದಮೆನ್ನನವಲೋಕಿಸಿ ದಿವ್ಯಸುಗಂಧತೋಯಮಂ
ತರಿಸಿ ಮದಂಗದೊಳ್ ತಳಿಯೆ ಶಕ್ತಿಯ ಶಕ್ತಿ ಪೊಡರ್ಪುಗೆಟ್ಟು ಚೆ-
ಚ್ಚರಮದು ಪಿಂಗೆ ಮೂರ್ಛೆತಿಳಿದೆಂ ಮರವಟ್ಟವನೇೞ್ದಿ ಮಾೞ್ಕೆಯಿಂ ॥೪೯॥

ಅಂತು ಮೂರ್ಛೆಯಿಂದೆೞ್ಚಿತ್ತು ಕತಿಪಯಪರಿಜನಂ ಬೆರಸಿರ್ದ ಭರತನಂ ಕಂಡಕಾರಣಬಂಧುವಪ್ಪ ನಿನ್ನ ದೂಸಱಿಂದೆನಗೆ ಪುನರ್ಜನ್ಮಮಾದುದೀ ಗಂಧಸಲಿಲಕ್ಕಿನಿತು ಸಾಮರ್ಥ್ಯಮಾದ ಕಾರಣಮಂ ಪೇೞ್ವುದೆನೆ ಭರತನಿಂತೆಂದನೆಮ್ಮ ಪುರಕ್ಕೆ ದೇಶಕ್ಕಂ ಮಾರಿಗುತ್ತಂ ಮೊದಲಾಗ ಪೆಱವುಮಾಗಂತುಕ ಪೀಡೆಗಳಪ್ಪುದುಮಾಸವರ್ಕೆಲ್ಲಂ ಗೆಯ್ಯಲಱಿಯದುಮ್ಮಳಿಸುತ್ತಿರ್ಪುದುಮಾವ್ಯತಿಕರಮನೆಮ್ಮ ಮಾವಂ ದ್ರೋಣಮೇಘಂ ಕೇಳ್ದು ಬಂದಾ ಗಂಧೋದಕಮಂ ತಳಿದು,

ಪುರಮಂ ದೇಶಮುಮಂ ವ್ಯಾ ।
ಧಿರಹಿತಮಪ್ಪಂತು ಮಾೞ್ಪುದುಂ ಪಿರಿದಪ್ಪ- ॥
ಚ್ಚರಿ ತನ್ನ ಚಿತ್ತದೊಳ್ ಬೆ ।
ಳ್ದಿರೆ ಭರತಂ ದ್ರೋಣಮೇಘನಂ ಬೆಸಗೊಂಡಂ ॥೫೦॥

ಅಂತು ಬೆಸಗೊಳ್ವುದುಂ ದ್ರೋಣಮೇಘನಿಂತೆಂದಂ:

ಪಲವುಂ ವ್ಯಾಧಿಗಳಿಂ ಮ ।
ತ್ಕುಲವಧು ನಮೆಯುತ್ತುಮಿರ್ದು ಬಸುಱಾಗಲೊಡಂ ॥
ತೊಲಗೆ ರುಜೆ ಹೃದಯಶಲ್ಯಂ ।
ಲಲನಾರತ್ನಮನದೊಂದು ಕೂಸಂ ಪಡೆದಳ್ ॥೫೧॥

ಆ ಕೂಸಿಂಗದು ಕಾರಣದಿಂ ವಿಶಲ್ಯಸೌಂದರಿಯೆಂಬ ಪೆಸರಾದುದಾಕೆಯ ಮಜ್ಜನಜಲದಿನೆಮ್ಮ ನಾಡುಂ ಬೀಡುಂ ವ್ಯಾಧಿರಹಿತಮಾದುದೆಂಬಿದಂ ದ್ರೋಣಮೇಘಂ ಪೇಟ್ದಿನೆಂದು ಭರತಂ ಪೇಟ್ವುದುಂ,

ಎನಗಧಿಕಮಾಗೆ ಕೌತುಕ ।
ಮಿನಿತತಿಶಯಮಾಕೆಗಾದ ಕಾರಣಮಮಂ ಪೇ- ॥
ಟೆನಗೆಂದು ಮತ್ತೆಯುಂ ಭರ ।
ತನನಾಂ ಬೆಸಗೊಂಡೆನಪರಿಮಿತ ಸುಚರಿತನಂ ॥೫೨॥

ಬೆಸಗೊಳ್ವುದುಂ ಭರತನಿಂತೆಂದನೀ ಪೂರ್ವವಿದೇಹದ ಪುಂಡರೀಕಿಣೀಪುರಮನಾಳ್ವಂ ತ್ರಿಭುವನಾನಂದ ಚಕ್ರವರ್ತಿಯೆಂಬನಾತನ ಮಗಳನಂಗಶರೆಯೆಂಬಳ್ ತಿರುವಿಂ ಬರ್ದುಂಕಿದನಂಗ ಶರಲಂಬಿನಂತೆ ಕೇಳೀವನದೊಳಗೆ ಸುಟಿಯುತ್ತಿರ್ಪುದುಮಾ ಸಮಯದೊಳ್ ಪುಷ್ಕಳಾವತೀವಿಷಯದ ವಿಜಯಾರ್ಧಗಿರಿಯ ಪ್ರತಿಷ್ಠಾಪುರಮನಾಳ್ವಂ ಪುನರ್ವಸುವೆಂಬ ವಿದ್ಯಾಧರನಾಕೆಯಂ ಕಂಡು ಮದನಶರಶಲಾಕಾ ಕಳಿತ ಹೃದಯನಾಗಿ ನಿಜ ವಿಮಾನದೊಳಿಟ್ಟು ನಭಕ್ಕೆ ನೆಗೆದು ಪೋಪುದುಂ ತ್ರಿಭುವನನಾಂದ ಚಕ್ರವರ್ತಿ ಕೋಪವಶವರ್ತಿಯಾಗಿ ಪಲರುಂ ವಿದ್ಯಾಧರಪ್ರಮುಖರನಾತನ ಮೇಲೆತ್ತಮೇಟ್ವುದುಮವರೊಳ್ ಪುನರ್ವಸು ಕಾದಿ ಬಸವಳಿದನಂಗಶರೆಯಂ ಪರ್ಣಲಘುವಿದ್ಯೆಯಿನಾಕೆಯಂ ನೆಲಕ್ಕಿಟಿಪುವಂತು ಮಾಡಿ ಪೋಪುದುಂ,

ಆ ವಿದ್ಯೆ ಗಗನತಳದಿಂ ।
ದಾವಧುವಂ ಮೆಲ್ಲನುಯ್ದು ರೌದ್ರಮೃಗಂಗ- ॥
ಳ್ಗಾವಾಸಮೆನಿಪದೊಂದು ಮ ।
ಹಾವಿಷಮಾಟವಿಯೊಳಿರಿಸಿ ಪೋದತ್ತಾಗಳ್ ॥೫೩॥

ಆಕೆಯುಮಾಕಾಂತಾರನ ।
ದೀಕೂಲದೊಳಿರ್ದು ನೆನೆದು ಪಿತೃಮಾತೃಗಳಂ ॥
ಶೋಕಾಕುಳೆ ದುಷ್ಕರ್ಮವಿ ।
ಪಾಕಮಿದೆಂದಂತರಂಗದೊಳ್ ಚಿಂತಿಸಿದಳ್ ॥೫೪॥

ಧರಣೀಶ್ವರ ಸುತೆಯಾಗಿಯು ।
ಮರಣ್ಯದೊಳ್ ಬಿಟ್ಟು ಸಾವ ದುಷ್ಕರ್ಮಫಲಂ ॥
ದೊರೆಕೊಂಡತ್ತೆನಗಿದನಪ ।
ಹರಿಪೊಡೆ ಪೆಱತೇಂ ಜಿನೇಂದ್ರಚರಣಮೆ ಶರಣಂ ॥೫೫॥

ಎಂದು ತಱಿಸಂದು ತಪದೊಳ್ ।
ನಿಂದು ಮಹಾನೋಂಪಿಯನಿತುಮಂ ಪಲಕಾಲಂ ॥
ಸಂದಿಸಿ ನೋಂತು ತನೂದರಿ ।
ಪಿಂದಿಕ್ಕಿದಳಬ್ದಮಂ ಸಹಸ್ರತ್ರಯಮಂ ॥೫೬॥

ಅಂತು ತನು ತಾಱೆ ತಪಂಗೆಯ್ವನಶನದೀಕ್ಷೆಯೊಳಿರ್ದೊಂದು ದಿವಸಂ,

ನುಂಗೆ ಜರದಜಗರಂ ತ ।
ನ್ವಂಗಿ ತಪಸ್ವಿನಿ ಸಮಾಧಿ ಸಮನಿಸೆ ಮನದೊಳ್ ॥
ಪಿಂಗದೆ ನೆಲಸಿರೆ ಪಂಚಪ ।
ದಂಗಳ್ ನಾಲಗೆಯೊಳಱಿವೆ ಮೆಯ್ಯಾಗಿರ್ದಳ್ ॥೫೭॥

ಅಂತಿರ್ದು ಶರೀರಭಾರಮನಿೞಿಪಿ ಸನತ್ಕುಮಾರದೊಳ್ ಪುಟ್ಟಿ ಸುರಲೋಕ ಸುಖಮನನುಭವಿಸಿ ಬಂದೀಗಳೀ ದ್ರೋಣಮೇಘಂಗೆ ಸರ್ವೌಷಧಿಪ್ರಾಪ್ತೆಯಪ್ಪ ಸುತೆಯಾದಳಾ ಪುನರ್ವಸುವುಂ ಬಂದು ಮುನ್ನ ತನ್ನಿರಿಸಿ ಪೋದ ಪೇರಡವಿಯೊಳನಂಗಶರೆಯಂ ಕಾಣದೆ ತನಗದುವೆ ನಿರ್ವೇಗಕಾರಣಮಾಗೆ ತಪಂಬಟ್ಟು,

ತನುವಂ ತಪಿಯಿಸಿ ತಪದೊಳ್ ।
ಮುನಿಯದೆ ಮುನಿಯಿಸದೆ ನಡೆದು ಮುನಿಪತಿ ಸಂನ್ಯಾ- ॥
ಸನದಿಂ ಸಮಾಧಿ ಸಮನಿಸೆ ।
ಸನತ್ಕುಮಾರದೊಳಪಾರಸುಖದೊಳ್ ತಣಿದಂ ॥೫೮॥

ನಿರತಿಶಯ ಸುಖ ಸುಧಾಸಾ ।
ಗರದೊಳ್ ಮನಮಾರೆ ಮೂಡಿ ಮುೞುಂಗಿಡುತ್ತುಂ ॥
ಪರಮಾಯುವಂ ಪುನರ್ವಸು ।
ಚಿರಾಮರಂ ತೀರ್ಚಿ ಬಂದು ಲಕ್ಷ್ಮಣನಾದಂ ॥೫೯॥

ಎಂದು ಮನಃಪರ್ಯಯಜ್ಞಾನಿಗಳಪ್ಪ ಸರ್ವಭೂತಹಿತ ಭಟ್ಟಾರಕರ್ ತನಗೆ ಪೇೞ್ದಿದನೆನಗೆ ಭರತಂ ಪೇೞ್ವನೆಂದತಿಚಂದ್ರಪ್ರಿಯಚರಂ ಬಿನ್ನವಿಸೆ ರಾಮಚಂದ್ರಂ ಮೆಚ್ಚಿ ಮೆಚ್ಚುಗೊಟ್ಟು ಹನುಮದಂಗದ ಪ್ರಭಾಮಂಡಳರನಾ ಗಂಧೋದಕಮಂ ಭರತನಂ ಬೇಡಿ ತನ್ನಿಮೆಂದಟ್ಟುವುದುಮವರ್ ಮನೋವೇಗದಿಂ ದಿವ್ಯವಿಮಾನಂಗಳನೇಱಿ ವಿಯನ್ಮಾರ್ಗದಿಂ ಪೋಗಿ ಸಾಕೇತಪುರಮಂ ಪೊಕ್ಕು ಭರತನಂ ಕಂಡು,

ಕಿಱಿದಱಿಕೊಳೆ ರಣದ ವಾರ್ತೆಯ ।
ನಱಿಪಿ ದಶಾನನನ ಶಕ್ತಿ ನೆಱಿಗೊಳೆ ತನುವಂ ॥

ಮಱಿದಿರ್ದಂ ಲಕ್ಷ್ಮಣನೆಂ ।
ದಱಿಪಿದರಂಗದ ಮರುತ್ತನೂಜಪ್ರಮುಖರ್ ॥೬೦॥

ಪ್ರಶಮಿಸುಗುಂ ಲಕ್ಷ್ಮೀಧರ ।
ನ ಶಕ್ತಿಯಿಂದಾದ ಬಾಧೆ ತಡೆಯದೆ ನೀಮೀ ॥
ನಿಶೆಯೊಳೆ ತಂದೆಮಗೀವುದು ।
ವಿಶಲ್ಯಸೌಂದರಿಯ ಮಿಂದ ಗಂಧೋದಕಮಂ ॥೬೧॥

ಅದಲ್ಲದಂದು ನೇಸರ್ ಮೂಡುವುದುಂ ಲಕ್ಷ್ಮಣಂ ಗತಪ್ರಾಣನಕ್ಕುಮೆನೆ ಭರತ ಶತ್ರುಘ್ನರ್ ಕೇಳ್ದು ರಾವಣನ ಮೇಲೆ ನಡೆಯಲೊಡರಿಸಿ,

ವಿಸಸನದೊಳ್ ದಶಮುಖನಂ ।
ದೆಸೆವಲಿಗುಡಲೆಂದು ಭರತಶತ್ರುಘ್ನರ್ ಸಾ- ॥
ಹಸಧನರಾಜಿಕ್ರೀಡಾ ।
ವಸಥರ್ ಸನ್ನಾಹಭೇರಿಯಂ ಪೊಯ್ಸುವುದುಂ ॥೬೨॥

ಅದಂ ಪ್ರಭಾಮಂಡಳಂ ಬಾರಿಸಿ ರಘುವೀರನ ಬೆಸನಿಲ್ಲದೆ ನಿಮ್ಮನುಯ್ವುದುಚಿತಮಲ್ತು ನಿಮಗೆ ಲಂಕೆ ದೂರಮಪ್ಪುದಱಿಂ ಬೇಗಂ ಬರಲ್ಬಾರದೆನೆ ಭರತನಿನ್ನೆಮಗೆ ಕಜ್ಜಮಾವುದೆಂಬುದುಂ ಗಂಧೋದಕಮಂ ತರಿಸಿಕೊಟ್ಟೊಡದನುಯ್ದು ಲಕ್ಷ್ಮಣನ ಶಸ್ತ್ರಪೀಡೆಯಂ ಕಳೆವಮೆನೆ ಭರತನಿಂತೆಂದಂ,

ಸುರಭಿಜಲದಿಂದಮೇನಾ ।
ತರುಣಿಯನೊಡಗೊಂಡು ಪೋಪುದಾಕೆಗೆ ಲಕ್ಷ್ಮೀ- ॥
ಧರನೆ ವರನೆಂಬುದಂ ಶುಭ ।
ಚರಿತರ್ಮುನ್ನೆನಗೆ ದಿವ್ಯಮುನಿಪರ್ ಪೇೞ್ದರ್ ॥೬೩॥

ಎಂತುಂ ಸ್ತ್ರೀರತ್ನಕ್ಕಾ ।
ತಂ ತಕ್ಕಂ ಮಿಕ್ಕರನಧಿಕಾರಿಗಳೆಂದ- ॥
ತ್ಯಂತಹಿತರಂ ಪ್ರಧಾನರ ।
ನಂತವರೊಡಗೂಡಿ ಕೂಸನೆರೆದಟ್ಟುವುದುಂ ॥೬೪॥

ಮನ್ನಿಸಿ ಭರತನ ಮಾತಂ ।
ತನ್ನ ತನೂಭವೆ ವಿಶಲ್ಯಸೌಂದರಿವೆರಸಿ- ॥
ತ್ತಂ ನೂರ್ವರ್ ಕನ್ನೆಯರಂ ।
ಚೆನ್ನೆಯರಂ ದ್ರೋಣಮೇಘನತ್ಯುತ್ಸವದಿಂ ॥೬೫॥

ಆ ಕನ್ಯಾರತ್ನಂಗಳಂ ಪ್ರಭಾಮಂಡಳಂ ವಿಮಾನಾರೂಢೆಯರ್ಮಾಡಿ ನಕ್ಷತ್ರವೀದಿಯಿಂ ಕ್ಷಣಮಾತ್ರದಿಂದಾಗಳೆ ರಣಭೂಮಿಯನೆಯ್ದಿ ವಿಮಾನಂಗಳಿನವನಿಗವತರಿಸಿ ಬರ್ಪಲ್ಲಿ ವಿಶಲ್ಯಸೌಂದರಿ ಲಕ್ಷ್ಮಣನನೆನಿತೆನಿತು ಸಾರೆ ವರ್ಪುದುಮನಿತನಿತು ಶಕ್ತಿ ಶಕ್ತಿಗೆಟ್ಟು,

ಗಗನಾಭೋಗಮನಾವಗಂ ಬೆಳಗುತುಂ ಜ್ವಾಲಾಸಹಸ್ರಂಗಳಿಂ
ಮಗುಳುತ್ತುಂ ಕಿಡಿಯಂ ಜನಾರ್ದನನ ವಕ್ಷೋಭಾಗಮಂ ಬಿಟ್ಟು ಮೇ-
ಗೊಗೆವಾಗಳ್ ಪವನಾತ್ಮಜಂ ಪಿಡಿಯೆ ದಿವ್ಯಸ್ತ್ರೀಯ ರೂಪಾಗಿ ಕೈ-
ಮುಗಿದೆನ್ನಂ ಬಿಡಿಮೆಂದು ತಲ್ಲಣಿಸಿ ಶಂಕಾತಂಕಮಂ ತಾಳ್ದಿದಳ್ ॥೬೬॥

ಅಂತು ನಡನಡ ನಡುಗುತ್ತುಮಾಂ ವಿಜಯೆಯೆಂಬೆಂ ಪ್ರಜ್ಞಪ್ತಿವಿದ್ಯೆಯಿಂ ಕಿಱಿಯಳೆಂ ಬಾಲಿಭಟ್ಟಾರಕರ್ ಕಾರಣಮಾಗೆ ರಾವಣಂ ಕೈಲಾಸಮನೆತ್ತಿ ಬಟಿಕ್ಕೆ ಬೀಣೆಯಂ ಬಾಜಿಸಿ ಜಿನಗುಣಸ್ತವನಂಗಳಂ ಹರ್ಷಚಿತ್ತನಾಗಿ ಪಾಡುತ್ತುಮಿರೆ ಧರಣೇಂದ್ರಂ ತನಗಾಸನಕಂಪಮಾಗೆ ಬಂದು,

ಕರಮೊಸೆದು ನೋಡಿ ದಶಕಂ ।
ಧರನಂ ಹರ್ಷಪ್ರಕರ್ಷದಿಂದೆನ್ನಂ ಖೇ- ॥
ಚರಪತಿಗೆ ಕೊಟ್ಟನಾಂ ದಶ ।
ಶಿರನ ಬೆಸಂ ಬಿಡಿದು ತಾಗಿದೆಂ ಲಕ್ಷ್ಮಣನಂ ॥೬೭॥

ಆನುಮೀ ಸರ್ವೌಷಧಿ ಪ್ರಾಪ್ತೆಯಪ್ಪ ವಿಶಲ್ಯಸೌಂದರಿಯಿನಲ್ಲದೆ ಪೋಪೆನಲ್ಲೆನ್ನಂ ಪೋಗಲೀಯಿಮೆನೆ ವಿದ್ಯಾಧರರ್ಗೆಲ್ಲಂ ಚೋದ್ಯಮಾಗೆ ವಿದ್ಯಾದೇವತೆಯನಣುವಂ ಬಿಟ್ಟು ಕಳೆವುದುಮಿತ್ತಲ್,

ಚಲದಲಕಚಯಂ ರಘುಕುಲ ।
ತಿಲಕನ ಚರಣಾರವಿಂದಮಂ ಮಧುಕರಮಂ- ॥
ಡಲಿಯಂತೆ ಮುಸುಕೆ ವನಿತಾ ।
ತಿಲಕಂ ನಡೆತಂದು ವಿನಯವಿನಮಿತೆಯಾದಳ್ ॥೬೮॥

ತದನಂತರಂ,

ದನುಜೇಂದ್ರನ ವಿಜಯಶ್ರೀ ।
ವನಿತೆಯೊ ಲಕ್ಷ್ಮಣನ ಪುಣ್ಯದೇವತೆಯೋ ಪೇ- ॥
ೞೆನೆ ಕೆಲದೊಳ್ ಬಂದಿರ್ದಳ್ ।
ತನುರುಚಿ ಮೂವಳಸು ವಳಸೆ ಪರಿಷಜ್ಜನಮಂ ॥೬೯॥

ಆಗಳಾ ಕನ್ಯಾರತ್ನದ ಕರಸ್ಪರ್ಶನಮಾತ್ರದಿಂ ಪವಿತ್ರಮಾದ ಸುರಭಿಸಲಿಲಸೇಚನದಿಂ,

ಪತ್ತುವಿಡೆ ಮೂರ್ಛೆ ಮುನಿಸ ।
ಜ್ಜೊತ್ತಿದವೋಲ್ ಮನದಿನಗಲದಿರೆ ಕಣ್ ಕೆಂಪಂ ॥
ಬಿತ್ತರಿಸೆ ಮಸಗಿ ರಾವಣ ।
ನೆತ್ತಣನೆನುತುಂ ಜನಾರ್ದನಂ ಕುಳ್ಳಿರ್ದಂ ॥೭೦॥

ಅಂತಿರ್ಪುದುಂ,

ಅಲರ್ವಂತೆ ದಿನೋದಯದೊಳ್ ।
ಜಲಜವನಂ ರಾಘವಂಗಮಖಿಳಜನಕ್ಕಂ ॥
ನೆಲೆವೆರ್ಚಿದುದನುರಾಗಂ ।
ಜಳರುಹನಾಭಂಗೆ ಪಿಂಗೆ ಮೂರ್ಛಾವೇಗಂ ॥೭೧॥

ಆಶೀರ್ನಿನಾದಮಾಶಾ ।
ದೇಶಮನೆಯ್ದಿದುದು ಮಂಗಳಾನಕರವಮಾ- ॥
ಕಾಶಮನಡರ್ದುದು ಮೂರ್ಛಾ ।
ಕ್ಲೇಶಂ ಲಕ್ಷ್ಮೀಧರಂಗೆ ಪೆಱಪಿಂಗಲೊಡಂ ॥೭೨॥

ನಾರಾಯಣನಂ ಮಣಿಮಯ ।
ನೀರಾಜನದೀಪಮಾಲೆ ಬಳಸಿದುವಾಗಳ್ ॥
ಮೇರುವನೊಲ್ಲದೆ ಪಲವುಂ ।
ತಾರಾವಳಿ ಬಳಸುವಂತು ನೀಳಾಚಳಮಂ ॥೭೩॥

ಆ ಸಮಯದೊಳ್ ಲಕ್ಷ್ಮಣನ ಸಮಕ್ಷದೊಳಿರ್ದ ವಿಶಲ್ಯಸೌಂದರಿ,

ಅಪಹರಿಸಿ ಶಕ್ತಿಬಾಧೆಯ ।
ನುಪಕಾರಮನುಂಟುಮಾಡಿ ಲಕ್ಷ್ಮಣನೊಳ್ ಪೀ- ॥
ನಪಯೋಧರೆ ಕಡುಗಾಡಿಯಿ ।
ನಪಕಾರಮನತನುಬಾಧೆಯಂ ಪುಟ್ಟಿಸಿದಳ್ ॥೭೪॥

ಆಗಳಾ ಕನ್ಯಾರತ್ನಂ ಬೆರಸು ತಮ್ಮ ತಂದ ನೂರ್ವರ್ ಕನ್ನೆಯರುಮಂ ಮರುನ್ನಂದನಾದಿಗಳ್ ವಿವಾಹವಿಧಿಯಿಂ ಕೈಕೊಳ್ವುದೆನೆ ರಾವಣವಿಜಯಾನಂತರಂ ಸಕಲಭುವನಾಂಬಿಕೆಯಂ ಸೀತಾದೇವಿಯಂ ತಂದು ರಾಮಸ್ವಾಮಿಗೊಪ್ಪಿಸಿದೊಡಲ್ಲದೆ ಮದುವೆ ನಿಲ್ಲೆನೆನೆ ತಮ್ಮ ಪೋದ ಬಂದ ವೃತ್ತಾಂತಮಂ ವಿಶಲ್ಯಸೌಂದರಿಯಂ ತಂದ ತೆಱನುಮಂ ತಿಳಿಪಿ ತಮ್ಮ ಪುಣ್ಯಪ್ರಭಾವಕ್ಕದಾವಗಪನಮುಂದೊಡಂಬಡಿಸೆ ಶುಭಮುಹೂರ್ತದೊಳ್ ಲಕ್ಷ್ಮಣನನಿಬರುಮಂ ಮದುವೆನಿಲ್ವುದುಮಿತ್ತಲ್,

ಚರನಱಿಪೆ ತಮಗೆ ದಶಕಂ ।
ಧರನ ಮೃಗಾಂಕಾದಿ ಮಂತ್ರಿಮುಖ್ಯರ್ ಲಕ್ಷ್ಮೀ- ॥
ಧರಪುಣ್ಯ ಶಕ್ತಿಯಂ ದಶ ।
ಶಿರಂಗದಂ ಪೇಟಿಲೆಂದು ಬೇಗಂ ಬಂದರ್ ॥೭೫॥

ಅಂತು ಬಂದವರ್ ಸಮುಚಿತಾಸನದೊಳ್ ಕುಳ್ಳಿರ್ದು ಮುಕುಳಿತಾಂಜಳಿಗಳಾಗಿ,

ಇರುಳೊಳ್ ವಿಶಲ್ಯಸೌಂದರಿ ।
ಬರ ಶಕ್ತಿ ಪೊಡರ್ಪುಗೆಟ್ಟು ಪೋದುದು ತತ್ಸುಂ- ॥
ದರಿವೆರಸು ನೂರ್ವರಂ ನೃಪ ।
ತರುಣಿಯರಂ ದೇವ ಮದುವೆನಿಂದನುಪೇಂದ್ರಂ ॥೭೬॥

ಎಂದು ಬಿನ್ನವಿಸಿ,

ಸೀತೆಯನೊಪ್ಪಿಸುವುದು ರಘು ।
ಜಾತನೊಳೊಡರಿಪುದು ಸಂಧಿಯಂ ಸಂಗ್ರಾಮಂ ॥
ಪೋ ತಕ್ಕುದಲ್ತು ನಮಗವ ।
ರೇತೞದೊಳಮಧಿಕರವರನಾರ್ ಗೆಲ್ದಪರೋ ॥೭೭॥

ಎತ್ತಾನುಂ ಗೆಲ್ದೊಡಮಾ ।
ಪತ್ತಂ ಪಿಡಿವೆತ್ತ ಕುಂಭಕರ್ಣಾದಿಗಳೊಳ್ ॥
ಮತ್ತೇನೊಡರಿಸುವರೊ ದನು ।
ಜೋತ್ತಂಸ ಬೞಿಕ್ಕೆ ಗೆಲ್ದೊಡಂ ಫಲಮುಂಟೇ ॥೭೮॥

ಎನೆ ಘನಾಘನನಿನದಮನಾಲಿಸಿದ ಪಂಚಾನನದಂತೆ ದಶಾನನಂ ಕನಲ್ದು,

ಇಂದ್ರನುಮಂ ಗೆಲ್ದೆನ್ನನು ।
ಪೇಂದ್ರಂ ಗೆಲ್ದಪನೆ ಗೆಲ್ದೊಡಂ ಜೀವನಮಾ- ॥
ಚಂದ್ರಾರ್ಕಮೆ ವಿಶದಯಶ ।
ಶ್ಚಂದ್ರಿಕೆಗೆ ಕಳಂಕಮಾಗದಂತಿರೆ ನೆಗೞ್ವೆಂ ॥೭೯॥

ಅದಱಿಂ ನಿಮ್ಮ ಮಂತಣಕ್ಕವಸರಮಲ್ತುಸಿರದಿರಿಮೆಂದು ಮಂತ್ರಿಗಳಂ ಜಡಿಯೆ ರಾವಣನ ಕಟ್ಟಾಯಕ್ಕೆ ಮಯಂ ವಿಸ್ಮಯಂ ಬಟ್ಟು ದೇವ ನಮ್ಮ ಸೆಱೆಗಪಾಯಮಾಗದಂತು ಕಾದಿ ಗೆಲ್ವುದೆನೆ,

ಮಯನೆಂದುದನೇಗೊಂಡಂ ।
ನಯನಿಪುಣರ್ ಪೇೞ್ವೊಡಂ ದುರಾಗ್ರಹದಿಂ ಸಂ- ॥

ಧಿಯ ಮಾತಂ ಕೈಕೊಳ್ಳನೆ ।
ಭಯವರ್ಜಿಯಂ ಕದನಮದವಶಂ ದಶವದನಂ ॥೮೦॥

ಅಂತಾ ನುಡಿಗೊಡಂಬಟ್ಟನಂತರಂ ರಾಮಲಕ್ಷ್ಮಣರ ಪುಣ್ಯಪ್ರಭಾವಕ್ಕೆ ವಿಸ್ಮಯಂ ಬಟ್ಟು ಸಿಂಹಗರುಡವಾಹನಂಗಳಂ ಪಡೆದು ಸುಗ್ರೀವಪ್ರಭಾಮಂಡಳ ಮರುನ್ನಂದನಾದಿಗಳ್ಗೆ ಪನ್ನಗಶರಪ್ರಹಾರದಿಂ ಸಮನಿಸಿದಾಸನ್ನ ಮೃತ್ಯುವನಪಹರಿಸಿ,

ಅವಯವದಿಂದಮೆನ್ನ ತನುಜಾನುಜರಂ ಪಿಡಿದುಯ್ದರೆನ್ನ ಕೈ-
ದುವನುರಗೇಂದ್ರನೊಳ್ಪಡೆದ ಶಕ್ತಿಯನಶ್ರಮದಿಂದೆ ಗೆಲ್ದರಾ-
ನವರನಶಲ್ಯರೆಂದುಱದೆ ಕಾದಿದೆನಪ್ಪೊಡೆ ಕಾರ್ಯಹಾನಿ ಸಂ-
ಭವಿಸುಗುಮೆಂದು ತನ್ನ ಮನದೊಳ್ ಪರಿಭಾವಿಸಿದಂ ದಶಾನನಂ ॥೮೧॥

ಅಂತು ಮನದೊಳ್ ಮಂತಣಮಿರ್ದು ಕಾರ್ಯನಿಶ್ಚಯಂಗೆಯ್ದು,

ಸಾಧಾರಣರಿವರೆನಿಪ ವಿ ।
ರೋಧಿಗಳುಮನುಱದೆ ನೆಗೞ್ದುದನುಚಿತಮದಱಿಂ ॥
ಸಾಧಿಸಿ ಬಹುರೂಪಿಣಿಯಂ ।
ಸಾಧಿಸುವೆಂ ಪಗೆಯನೆಂಬ ಬಗೆಯಂ ಬಗೆದಂ ॥೮೨॥

ಅಂತು ಬಗೆದು ಲಂಕಾನಗರದೊಳಂ ನಾಡೊಳಂ ಹಿಂಸೆ ಬೇಡೆಂದು ಗೋಸಣೆಗಳೆದು ಜಿನಪೂಜೆಯಂ ಪ್ರತಿದಿನಂ ಮಾೞ್ಪಂತು ನಿಯಮಿಸಿ ಮಂಡೋದರಿಗಂ ಪೊಲ್ಲಮೆನಿತು ಪಸರ್ಗಮನಾರ್ ಮಾೞ್ಪೊಡಂ ನಮ್ಮ ಪಡೆಯೊಳ್ ಮಾರ್ಕೊಳ್ಳದಂತು ಮಾೞ್ಪುದೆಂದು ಪೇೞ್ದು.

ಅರಮನೆಯೊಳಗಣ ಜಿನಮಂ ।
ದಿರಮಂ ನಡೆತಂದು ಮಂಗಳದ್ರವ್ಯಪುರ- ॥
ಸ್ಸರಮೊಳಗೆ ಪೊಕ್ಕು ಶಾಂತೀ ।
ಶ್ವರಂಗೆ ಪದೆಪೊದವೆ ಮಾಡಿ ಸವನೋತ್ಸವಮಂ ॥೮೩॥

ತದನಂತರಂ ದಿವ್ಯಾರ್ಚನೆಗಳಿಂದರ್ಚಿಸಿ ಪದ್ಮಾಸನಸ್ಥಿತಂ ಸ್ಫಟಿಕಾಕ್ಷಮಾಲೆಯಂ ಪಿಡಿದು ದಿವ್ಯಮಂತ್ರಗಳಂ ಜಪಿಯಿಸುತ್ತಿರ್ದನನ್ನೆಗಂ ಫಾಲ್ಗುಣನಂದೀಶ್ವರಮಾದುದಾಗಳು ಭಯಬಲಮಭಯ ಘೋಷಣೆಯಂ ಘೋಷಿಸಿ ಕಾಳೆಗಮನುೞಿದಿರ್ಪುದುಂ,

ಅಱಿದು ವಿಭೀಷಣನಸುರನ ।
ತೆಱನೆಂ ಚರವಚನದಿಮದದಂ ರಘುವೀರಂ- ॥
ಗಱಿಪುವ ಬಗೆಯಿಂ ಬಂದಂ ।
ಪೆಱನೀತೆಱದಿಂದ ಕೂಡೆ ತಿಳಿದವನಾವಂ ॥೮೪॥

ಅಂತು ಬಂದು ವಿಭೀಷಣನಿಂತೆಂದಂ :

ಭುಜಬಲಮಂ ಪವಣ್ಗಿಡಿಪೊಡಪ್ರತಿಮಂ ತವಿಲಿಲ್ಲ ದಾವನ-
ಧ್ವಜನಿಗೆ ಚಂದ್ರಹಾಸಮನಿದಿರ್ಚುವ ಚಕ್ರಮನಾಂಕೆಗೊಳ್ವ ಭೂ-
ಭುಜಸುರಖೇಚರಪ್ರಮುಖರಿಲ್ಲೆನೆ ರಾಘವದೇವ ದುರ್ಜಯಂ
ನಿಜಮೊಳೆ ಮತ್ತೆ ಸಾಧಿಸಿದಪಂ ಬಹುರೂಪಿಣಿಯಂ ದಶಾನನಂ ॥೮೫॥

ರಾವಣನೊರ್ವನುಮಂ ಧರ ।
ಣೀವಲ್ಲಭ ಗೆಲ್ವುದರಿದು ಸಾಧಿಸಿ ವಿದ್ಯಾ- ॥
ದೇವತೆಯನವಂ ಪಡೆವಂ ।
ರಾವಣಕೋಟಿನಿದಿರ್ಚುವವರಾರ್ ಬಟೆಯಂ ॥೮೬॥

ಅವಜೆಂ ವಿದ್ಯಾಸಾಧನೆವ್ರೋಗದಮುನ್ನಂ ರಾವಣಂಗುಪಸರ್ಗಮನೊಡರ್ಚಿ ಲಂಕಾಪುರಮಂ ಕೈಕೊಳ್ವೊಡಿದವಸರಮೆನೆ ರಘುವೀರನಿಂತೆಂದಂ :

ವನಿತೆಗೆ ಕೈದುವಂ ಬಿಸುಟವಂಗಿದಿರಾಗದವಂಗೆ ಭೂಭುಜಂ
ಮುನಿವುದು ಪಾಟಿಯಲ್ತು ನಿಯಮಸ್ಥಿತನಾಗಿ ದಶಾನನಂ ಜಿನೇಂ-
ದ್ರನ ಮಟಿವೊಕ್ಕು ಸಾಧಿಸಿದಪಂ ಗಡ ವಿದ್ಯೆಯನೆಂತೊ ಬಾಧೆಯಂ
ಜನಿಯಿಪುದಾತನೊಳ್ ಬಿಸುಡತಕ್ಕುದನಿಂತುಸಿರಲ್ಕೆ ತಕ್ಕುದೇ ॥೮೭॥

ಎನೆ ವಿಭೀಷಣಾಂಗದಾದಿಗಳೀ ಮಹಾಸತ್ವನಪ್ಪ ರಘುವೀರನನಾಚಾರಮನೊಲ್ವನಲ್ಲನಮುಕಾರಣದಿನಧಿರಾಜನಜೆಯುದಂತು ವಿದ್ಯಾಸಾಧನೆಗೆ ವಿಘ್ನಮುಂ ಮಾಟ್ಪಿವೆಂದು ನಂದೀಶ್ವರಮಂ ಕಟೆಪಿ ವಿಭೀಷಣಂ ಬೆರಸು,

ಮಕರಧ್ವಜ ಮುಖ್ಯರ್ ಖಚ ।
ರ ಕುಮಾರರ್ ಗಗನ ಮಾರ್ಗದಿಂ ಬಂದು ಬಲಾ- ॥
ಧಿಕರಸಮಸೈನಿಕರ್ ಮಸ ।
ಗಿ ಕಪ್ಪಿಧ್ವಜರುಜಿದೆ ಲಂಕೆಯಂ ಪುಗುತಂದರ್ ॥೮೮॥

ಒಡೆಯುತ್ತುಂ ಮಾಡಂಗಳ ।
ನುಡಿಯುತ್ತುಂ ನಂದನಂಗಳಂ ನೀರ್ನೆಲನಂ ॥
ಕಿಡಿಸುತ್ತುಂ ಲಂಕೆಗವರ್ ।
ಪಡೆದರ್ ನಿಶ್ಶಂಕರಳವಿಗಟಿದೆರ್ದೆವಟಿಲಂ ॥೮೯॥

ಅಂಬು ವಾನರಸೇನೆ ಲಂಕೆಯಂ ಕವಡಿ ಕಲಂಕೆ ಮಯಂ ಮುಳಿದು ಕಾಳೆಗಕ್ಕೊಡರಿಸೆ ಮಂಡೋದರಿ ತಂದೆಯಂ ಬಾರಿಸುವುದುಮಾತಂ ಶುಭಪರಿಣಾಮದಿಂ ನಿಜ ಭವನಮಂ ಪೊಕ್ಕಿರೆ ವಾನರಸೇನೆಯರಮನೆಯಂ ಪೊಕ್ಕು,

ಮುನಿದೆೞೆದು ತಂದು ನಿಜಕುಲ ।
ವನಿತೆಯರಂ ಬಿಡದೆ ಮೋದಿಯುಂ ಹಾಹಾಕ್ರಂ- ॥
ದನಮಂ ಪುಟ್ಟಿಸೆ ಕೇಳಂ ।
ದನುಜಂ ಜಪಿಯಿಸುತಮಿರ್ದನವ್ಯಗ್ರಮನಂ ॥೯೦॥

ಅಂತಿರ್ಪುದುಮಾಜಿನಭವನದೊಳ್ ವಸಿಯಿಸುವ ದೇವತೆಗಳೆಲ್ಲಮಿವರಲ್ಲದುದಂ ನೆಗೞ್ದಪ್ಪರೆಂದಗುರ್ವಾಗೆ ಬೇತಾಳರೂಪುಗಳಂ ವಿಗುರ್ವಿಸಿ ಪರಿತಂದು ಮಾರ್ಕೊಂಡು ಮರ್ಕಟ ಧ್ವಜಬಲಕ್ಕೆ ಭಂಗಮಂ ಪಡೆಯೆ ಪೆಱವುಂ ಜಿನಾವಾಸನಿವಾಸಿಗಳಪ್ಪ ದೇವತೆಗಳಾ ಬಲಮಂ ಪೆಱಗಿಕ್ಕಿ ಕಾದಿ ಮುನ್ನಿನ ದೇವತೆಗಳನೋಡಿಸುವುದುಮವು ಪರಿತಂದು ನಿಜ ಸ್ವಾಮಿಯಪ್ಪ ಪೂರ್ಣಭದ್ರನೆಂಬ ಯಕ್ಷಾಧಿಪಂಗೆ ಪೇೞ್ವುದುಂ,

ಮುನಿಪತಿಗಳ ತೇಜದಿಂದನ ।
ಶನಮಂ ಕೈಕೊಂಡು ಕೈದುವಂ ಬಿಸುಟು ದಶಾ- ॥
ನನನಿರೆಯುಂ ಕಾದುವುದ ।
ಕ್ಕೊನಲ್ದವಂ ಮಾಣಿಭದ್ರನಲ್ಲಿಗೆ ಪೋದಂ ॥೯೧॥

ಅಂತು ಪೋಗಿ ತತ್ಸ್ವರೂಪಮಂ ಪೇೞ್ದು ತಾನುಮಾತನುಮತಿಕುಪಿತರಾಗಿ ಬಂದು ದೇವತೆಗಳಂ ತೂಳ್ದಿ,

ಅಭಿಭವಿಸಿ ಕಪಿಧ್ವಜನಿಯ ।
ನಭಯರ್ ಪರಿತಂದು ರಾಮಲಕ್ಷ್ಮಣರಂ ನೋ- ॥
ಡಿ ಭಯಾಕುಳಚಿತ್ತರ್ ಮಾ ।
ಣಿ ಭದ್ರನುಂ ಪೂರ್ಣಭದ್ರನುಂ ಸ್ತುತಿಯಿಸಿದರ್ ॥೯೨॥

ಅಂತು ಪೊಗೞ್ದು ನಿಮ್ಮ ಸಾಮಂತರುಪಶಾಂತನಾಗಿರ್ದ ರಾವಣನ ಪೊೞಲನೞೆಯೆ ನಿಮ್ಮ ಪುರುಷಾಕಾರ ಮಱೆಗುಮೆನೆ ಲಕ್ಷ್ಮಣನಿಂತೆಂದಂ:

ಸೀತಾದೇವಿಯನೀ ರಘು ।
ಜಾತನ ಕುಲವಧುವನೞೆಪಿ ಕೈತವದಿಂ ತಂ- ॥
ದಾತಂಗೆ ಹಿತಂಗೆಯ್ವುದು ।
ಪೋ ತಕ್ಕುದೊ ತಗದೊ ಬಗೆದು ನೋಡಿಂ ನಿಮ್ಮೊಳ್ ॥೯೩॥

ನಿಮಗೆಮ್ಮ ಮಾಡಿದಪಕಾ ।
ರಮಾವುದಕ್ರಮದಿನೆಮ್ಮ ಮೇಲೆ ಬರಲ್ಕ- ॥
ಕ್ಕುಮೆ ಪೇೞೆಮೆಂದ ಲಕ್ಷ್ಮಣ ।
ನ ಮಾತು ಕಿವಿಗೆಯ್ದೆ ಚಿತ್ತವಿತ್ತಿಂತೆಂದರ್ ॥೯೪॥

ಲಂಕಾಪುರ ಪ್ರಾಸಾದಂಗಳ್ಗಳಂ ಚೈತ್ಯಾಲಯಂಗಳ್ಗಂ ನಿಯಮಸ್ಥನಾಗಿರ್ದ ರಾವಣಂಗ- ಮೞಿವಂ ಮಾಡದ ಸಾಧನೆಗೆ ವಿಘ್ನಮಂ ಮಾಡಿಮೆಂದು ರಾಮಲಕ್ಷ್ಮಣರಂ ಪರಸಿ,

ಜಕ್ಕರ್ ಪೂಜಿಸಿ ಪೋದ ಬ ।
ೞಿಕ್ಕಂಗದನೇಱಿ ಚಾರಿಸುತ್ತಂಕುಶದಿಂ ॥
ದಿಕ್ಕರಿಯನಧಃಕರಿಸುವ ।
ತಕ್ಕಿನ ಕಿಷ್ಕಿಂಧಮೆಂಬ ನಿಜವಾರಣಮಂ ॥೯೫॥

ಅಂತು ವಾರಣಾರೂಢಂ ಪುರಗೋಪುರಮಂ ಪೊಕ್ಕು,

ಲಂಕೆಯ ಚೆಲ್ವಂ ನೋಡು ।
ತ್ತುಂ ಕಿಷ್ಕಿಂಧಾಧಿರಾಜನರಮನೆಯಂ ಪೊ- ॥
ಕ್ಕಂ ಕಣ್ಗೆ ತೊಡವೆನಿಪ್ಪುದ ।
ನಂಕುಶದಾಭರಣದಂಶು ತೞ್ಕೈಸೆ ನಭಮಂ ॥೯೬॥

ಅಂತರಮನೆಯಂ ಪೊಕ್ಕುಸೌಂದರನುಮಿಂದ್ರಸುಂ ಮೊದಲಾಗೆ ಪಲರುಮಂಬರಚರ ಕುಮಾರರ್ಕಳಂ ಬಲಸಹಿತರಾಗಿ ಪೂಜಿಗಿರಿಸಿ ತಾಂ ಶಾಂತಿಜಿನ ಭವನಮಂ ಬಲಗೊಂಡೊಳಗಂ ಪೊಕ್ಕು ದರ್ಶನಸ್ತುತಿಗೆಯ್ದು ನೀಲನಗದಂತೆ ನಿಶ್ಚಲನಾಗಿರ್ದ ರಾವಣನಂ ನೋಡಿ,

ಅಂಗದನೆಂದಂ ರಾಮಶ ।
ರಂಗಳ ಕೋಳ್ಗಗಿದು ಸುಗಿದು ದಶವದನ ಮನೋ- ॥
ಭಂಗಮನೊಳಕೊಂಡೇಕೆ ಜ ।
ಪಂಗೆಯ್ದಪೆ ನೆನೆಯ ನಿನ್ನ ದುರ್ವಿಲಸಿತಮಂ ॥೯೭॥

ದುರಭಿಪ್ರಾಯನೆ ಖೇಚರಾನ್ವಯದ ಶುದ್ಧಾಚಾರಮಂ ಬಿಟ್ಟು ಕಾ-
ಪುರುಷಂ ಕಾತರನೆಂದು ಸತ್ಪುರುಷರೆಲ್ಲಂ ದೂಷಿಸುತ್ತಿರ್ಪಿನಂ
ಪರದಾರಪ್ರಿಯನಾದ ಪಾತಕನೆ ಯುದ್ಧಕ್ಕಳ್ಕಿ ಶುದ್ಧಾತ್ಮನಂ-
ತಿರೆ ಶಾಂತೀಶನ ಮುಂದೆ ಮೆಯ್ಗರೆದಿದೇನಂ ಜಾನಿಸುತ್ತಿರ್ದಪೈ ॥೯೮॥

ಬಲವೞಿಯೆ ನಿನ್ನ ಬಾಹಾ ।
ಬಲಮಂ ಪೆಱಗಿಕ್ಕಿ ವಿದ್ಯೆಯಂ ಸಾಧಿಸಿ ನೀಂ ॥
ಗೆಲಲೇನಾರ್ತಪೆ ನಿನ್ನಂ ।
ಕೊಲಲ್ಕೆ ಜನಿಯಿಸಿದ ರಾಮಲಕ್ಷ್ಮೀಧರರಂ ॥೯೯॥

ಕಿಚ್ಚೆಟ್ಟಿ ಬೞಿಕೆ ನಂದಿಸ ।
ಲಚ್ಚಿಗದಿಂ ಬಾವಿದೋಡುವಂತಿರೆ ಕಣ್ಣಂ ॥

ಮುಚ್ಚಿ ಜಪಿಯಿಸುವೆ ರಾಘವ ।
ನೆಟ್ಟಂಬಿಂ ಕಾಯಲಾರ್ಪುವೇ ದೇವತೆಗಳ್ ॥೧೦೦॥

ಎಂದು ಪಲತೆಱದಿಂ ನೆಱನೆತ್ತಿ ನುಡಿಯುತ್ತುಮುತ್ತರೀಯುವಸನಾಂಚಳದಿಂ ಮೋದುತ್ತುಮಾತನ ಕೈಯ ಪಳಿಕಿನಕ್ಷಮಾಲೆಯಂ ಪಱಿದೀಡಾಡುತ್ತುಮಿಂತು ಬಹುಪ್ರಕಾರದಿಂ ಪರಿಭವಿಸಿ ಮತ್ತಮಾತನ ಪೆಂಡಿರ ಭೂಷಣಂಗಳಂ ಕಳೆದು ಬಿಸುಡುತ್ತುಮಲ್ಲದುದಂ ನುಡಿಯುತ್ತುಂ,

ಯುವತಿಯರೋರೊರ್ವರ ತಲೆ ।
ನವಿರಂ ತಲೆನವಿರೊಳಡಸಿ ಕಟ್ಟುತ್ತುಂ ಮೋ- ॥
ದುವುದುಂ ದ್ವಿಗುಣಿಸಿದುದು ಹಾ ।
ರವಂ ಪ್ರತಿಧ್ವಾನದಿಂಜಿನೇಂದ್ರಾಲಯದೊಳ್ ॥೧೦೧॥

ಅಟೆಯೊಳೆ ಜಾನಕಿಯಂ ತಂ ।
ದಟೆಗಂಡನೆ ನಿನ್ನ ಪೆಂಡಿರಂ ನೀಂ ನೋೞ್ಪಿಂ- ॥
ತೆಟೆದುಯ್ವಪೆನಣ್ಮು ವೊಡುಟೆ ।
ದಟೆ ಜಪಮಂ ದನುಜ ತೋರ್ಪುದೆನ್ನೊಳ್ ಕೂರ್ಪಂ ॥೧೦೨॥

ಎಂದು ಮಾಣದೆ,

ರೋದನಮುಣ್ಮೆ ಪೊಣ್ಮೆ ಕುಟಿಲಾಳಕಮಂ ಪಿಡಿದೀೞ್ದು ತಂದು ಮಂ-
ಡೋದರಿಯಂ ಮದೀಯ ಪಿತೃಗುಕ್ಕೆವ ಚಾಮರವಿಕ್ಕಲುಯ್ದಪೆಂ
ಕಾದಿ ಕೊಳಲ್ಕೊಡರ್ಪು ನಿನಗುಳ್ಳೊಡೆ ಚೇತರಿಸೆಂದು ದುಃಖಸಂ-
ಪಾದನೆಯಂ ತದಂಗನೆಯರೊಳ್ ಪಡೆದಂ ಗುಣತುಂಗನಂಗದಂ ॥೧೦೩॥

ಅಂತಾತಂ ಪರಿಭವಿಸಿ ಮಂಡೋದರಿ ಮೊದಲಾಗೆ ಪಲರಂತಃಪುರಾಕಂತೆಯ-ರಿಂತೆಂದರ್ :

ಸಾಧಿಸಿ ವಿದ್ಯೆಯಿಂ ಪಡೆವುದೇಂ ನಿಜಪಾರ್ಶ್ವದೊಳೆಮ್ಮನಿಂತಿವರ್
ಬಾಧಿಸಲೆಂತು ನೀಂ ಮಿಡುಕದಿರ್ದಪೆ ಮುಚ್ಚೆಗೆ ಸಂದರಂತೆ ವಿ-
ದ್ಯಾಧರಚಕ್ರವರ್ತಿ ಶರಣಾಗೆಮಗೆಂದು ಶರೀರತಾಪ ತ-
ಪ್ತಾಧರಮಟ್ಟುದುಚ್ಚರವದಿಂದವರೋಧವಧೂಕದಂಬಕಂ ॥೧೦೪॥

ಅಂತವರ್ಗತಿ ಪ್ರಳಾಪಮಪ್ಪಂ ತದವಟಿಲನಂಗದಂ ಪಡೆವುದುಂ ರಾವಣಂ ಧ್ರುವಮಂಡಳದಂತೆ ಚಳಿಯಿಸದೆ ಚಿತ್ತನಿರೋಧಂಗೆಯ್ದು ದಿವ್ಯಮಂತ್ರದಿಂ ವಿದ್ಯೆಯಂ ಸಾಧಿಸುವುದುಂ,

ಪೊಸಗಾರ ಸಿಡಿಲ ಮಸಕಮ ।
ನಸಕಟಿಮು ಕೃತಾಂತಜಿಷ್ವ ಪೊಡಕರಿಸುವವೋಲ್ ॥
ಬೆಸಸು ಬೆಸಸೆಂದು ಕರಮ ।
ರ್ವಿಸಿ ಸನ್ನಿವಮಾಯ್ತು ವಿದ್ಯೆ ರಾವಣನಿದಿರೊಳ್ ॥೧೦೫॥

ಅಂತು ಸನ್ನಿಹಿತೆಯಾಗಿ ಚಕ್ರಧರನಪ್ಪ ಲಕ್ಷ್ಮೀಧರನುಂ ಚರಮದೇಹಧಾರಿಯಪ್ಪ ರಾಮಸ್ವಾಮಿಯುಮುಟಿಯಲುಟಿದರನುಟಿಯಲೀಯಸೆನೆ ರಾವಣನುಟಿದರಟಿ ವೆನೆಗೇವುದೆಂದು ವಿದ್ಯಾದೇವತೆಗೆ ಪೊಡೆವಟ್ಟು ಶಾಂತಿ ಜಿನಭವನಮಂ ಮೂಱು ಸೂಟಿ ಬಲಗೊಂಡು ಬರ್ಪನ್ನೆಗಮಂಗದಾದಿಗಳ್ ಪೊಱಮಟ್ಟು ಪೋಗಿ ತಮ್ಮ ಬೀಡಂ ಪುಗುವುದುಂ.

ಇತ್ತ ದಶಾನನಂ ನಿಜವಧೂಜನಮಂ ಕೊಱಚಾಡಿ ಕಾಡಿದು-
ದ್ವೃತ್ತ ರನಿಕ್ಕಲುಮ್ಮಳಿಸಿ ಬಲ್ಮುಳಿಸಿಂ ಬೆಮರುಣ್ಮೆ ಪೊಣ್ಮೆ ಮೇ-
ಲೆತ್ತಿ ಭವೈರಿಯಂತೊದಱೆ ಕೆಂಗಱೆ ಮೂಡಿದ ಭೃಂಗಮಾಲೆ ನೀ-
ಳ್ದತ್ತೆನೆ ನೋಡಿದಂ ಮಯತನೂಜೆಯ ಬಾಡಿದ ವಕ್ತ್ರಪದ್ಮಮಂ ॥೧೦೬॥

ಅಂತಾಕವೆರಸು ಸಮಸ್ತಾಂತಃಪುರಮಂ ನೋಡಿ ನಿಮಗಿನಿತು ಭಂಗಮಂ ಮಾಡಿದಂಗದಾದಿಗಳಂ ಭ್ರೂಭಂಗಮಾತ್ರದೊಳೆ ಸೆಱೆಗೆದಂದು ನಿಮ್ಮ ಮುಂದೆ ಬಹುಪ್ರಕಾರದಿಂ ಪರಿಭವಿಸಿದಪ್ಪೆನೆಂದು ಸಂತೈಸಿ ಶಾಂತಿಜಿನಭವನದೊಳ್ ಮಹಾ ಪೂಜೆಯಂ ಮಾಡಿ ನಿರ್ವರ್ತಿತ ನಿಯಮನಮೃತಾಹಾರಮನಾರೋಗಿಸಿ ತದನಂತರಂ ಬಹುರೂಪಿಣೀ ವಿದ್ಯಾಪ್ರಭಾವಮಂ ಪರೀಕ್ಷಿಸಿ ಪ್ರಮೋದಮುದಿನಹೃದಯನಾಗಿ,

ಸಮಧಿಕರಾರ್ ಜಗತ್ತ್ರಯದೊಳೆನ್ನೆನಗೆನ್ನೊಳಿದಿರ್ಚುವನ್ನರಾರ್
ಸಮರದೊಳೆಂದು ತನ್ನ ಭುಜದಂಡಮನೀಕ್ಷಿಸಿ ಜಾನಕೀಮುಖಾ-
ಬ್ಜಮನವಲೋಕಿಸಲ್ ಕರಮೆ ಕಾತರನಾಗಿ ವಿಯಚ್ಚರಾಧಿಪಂ
ಪ್ರಮದವನಕ್ಕೆ ಬಂದನರಲಂಬುಗಳಿಲ್ಲದ ಕಾಮನೆಂಬಿನಂ ॥೧೦೭॥

ಅಂತು ಭೋಂಕನೆ ಬರ್ಪ ರಾವಣನ ಗಂಡಗಾಡಿಯಂ ಕೆಲದೊಳಿರ್ದ ಖಚರಕಾಂತೆ ಸೀತಾದೇವಿಗೆ ತೋರ್ಪುದುಂ,

ರಾವಣನ ರೂಪು ಸೀತಾ ।
ದೇವಿಗೆ ತೃಣಕಲ್ಪಮಾಯ್ತು ಪತಿಭಕ್ತಿಯೊಳಾ- ॥
ರಾ ವನಿತೆಯ ತೆಱದಿಂ ಸ ।
ದ್ಭಾವಮನೊಳಕೊಂಡ ಪುಣ್ಯವತಿಯರ್ ಸತಿಯರ್ ॥೧೦೮॥

ಏನಂ ಕೇಳ್ದಪೆನೋ ರಘು ।
ಸೂನುವ ಲಕ್ಷ್ಮಣನ ಪೊಲ್ಲವಾರ್ತೆಯನಿನ್ನೆಂ- ॥
ದಾ ನಳಿನಾನನೆ ಬರ್ಪ ದ ।
ಶಾನನನಂ ಕಂಡು ತಾಳ್ದಿದಳ್ ತಲ್ಲಳಮಂ ॥೧೦೯॥

ಅಂತು ತಲ್ಲಣಿಸುತ್ತಿರ್ದ ಮಾನಿನಿಯನೆಯ್ದೆವಂದು ದಶಾನನನಿಂತೆಂದನೆನಗೆ ಬಹುರೂಪಿಣೀವಿದ್ಯೆ ಸಾಧ್ಯಮಾದುದಿನ್ನಸಾಧ್ಯಮಪ್ಪ ಮಱುವಕ್ಕಮಿಲ್ಲ ನಿನ್ನ ನಚ್ಚಿನ ರಾಮನ ದೆಸೆಯಂ ಬಿಟ್ಟೆನಗೊಂಡಂಬಟ್ಟು ಸಾಮ್ರಾಜ್ಯ ಸುಖಮನನುಭವಿಸೆನೆ ಸೀತೆ ವಿಹ್ವಲೀಭೂತಚಿತ್ತೆಯಾಗಿ,

ಕರುಣಿಸುವೊಡೆನಗೆ ದಶಕಂ ।
ಧರ ಧುರದೊಳ್ ರಘುತನೂಜನಾಯುಃಪ್ರಾಣಂ ॥
ಬರೆಗಂ ಬಾರದಿರೆನುತುಂ ।
ಧರಿತ್ರಿಯೊಳ್ ಮೈಯನೊಕ್ಕು ಮೂರ್ಛೆಗೆ ಸಂದಳ್ ॥೧೧೦॥

ಜಾನಕಿ ಮೂರ್ಛಿತೆಯಾಗೆ ದ ।
ಶಾನನನನುಕಂಪೆ ಪುಟ್ಟಿ ಕರುಣಿಸಿ ತನ್ನಂ ॥
ತಾನೆ ಪಳಿದುಳಿದು ಕರ್ಮಾ ।
ಧೀನಸಮುತ್ಪನ್ನ ದುರಘದುಷ್ಪರಿಣತಿಯಂ ॥೧೧೧॥

ಕದಡಿದ ಸಲಿಲಂ ತಿಳಿವಂ ।
ದದೆ ತನ್ನಿಂ ತಾನೆ ತಿಳಿದ ದಶವದನಂಗಾ- ॥
ದುದು ವೈರಾಗ್ಯಂ ಸೀತೆಯೊ ।
ಳುದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ ॥೧೧೨॥

ಪತ್ತು ವಿಡಿದಿರ್ದನೇ ರವಿ ।
ಪತ್ತಿದ ಸಂಧ್ಯಾನುರಾಗಮಂ ಮನದಳಿಪಿಂ- ॥
ದೆತ್ತಾನುಂ ಪೊಲ್ಲೆನಿಪುದ ।
ನುತ್ತಮನಾಚರಿಸಿ ಪತ್ತುವಿಡದಿರ್ದಪನೇ ॥೧೧೩॥

ಅಂತು ಮನದೊಳೊಗೆದ ಕಾರುಣ್ಯರಸಮೆ ಸೀತೆಯೊಳಾದನುರಕ್ತಿಯಂ ಕರ್ಚಿ ಕಳೆವುದುಂ ಸ್ವಭಾವ ಪರಿಣತಿಯೊಳ್ನಿಂದು ಸ್ವಕೀಯಾಪ್ತ ಪುರುಷ ಪರಿಷಜ್ಜನಕಿಂತೆಂದಂ:

ಗುಣಪರಿಪಾಲನಾರ್ಥಮೆನಗಂ ಬಗೆದೋಜೆದಳಿಲ್ಲ ದಿವ್ಯ ಭೂ-
ಷಣ ವಸನಾಂಗರಾಗಮುಮನೊಲ್ಲದೆ ಖೇಚರ ರಾಜ್ಯಲಕ್ಷ್ಮಿಯಂ

ತೃಣಸಮನಾಗೆ ಭಾವಿಸಿದಳೀ ಸತಿಯುಂ ಮೊದಲಾಗೆ ಪೌರುಷ-
ಪ್ರಣಯಿಯನಿಂತಪೇಕ್ಷಿಸುವೆನೇ ಗುಣಾಹಾನಿಯನೆನ್ನ ಪಾಪದಿಂ ||೧೧೪||

ಇವರಂ ಪ್ರಾಣಪ್ರಿಯರಂ ।
ನೆವಮಿಲ್ಲದೆ ಕರ್ಮವಶಮೆ ನೆವಮೆನೆ ಕಂದ- ॥
ರ್ಪವಿಮೋಹದಿಂದಗಲ್ಚಿದೆ ।
ನವಿವೇಕಿಯೆನೆನ್ನ ಕುಲದ ಪೆಂಪಟಿವಿನೆಗಂ ||೧೧೫||

ರಾಮನಿನಗಲ್ಚಿ ತಂದಾ ।
ನೀ ಮಾನಿನಿಗಿನಿತು ದುಃಖಮಮಂ ಪುಟ್ಟಿಸಿದೆಂ ॥
ಕಾಮವ್ಯಾಮೋಹದಿನಾ ।
ಶಾಮುಖಮಂ ಪುದಿಯೆ ದುರ್ಯಶಃಪಟಹರವಂ ||೧೧೬||

ಎನಗೆ ವಿಭೀಷಣಂ ಹಿತಮನಾದರದಿಂದಮೆ ಪೇಟಿ ಕೇಳದಾ-
ತನವಿನೀತೆನೆಂ ಗಜಜೆ ಗರ್ಜಿಸಿ ಬೈದನುಜಾತನಂ ವಿನೀ-
ತನನಜಿಯಟ್ಟಿ ದುರ್ವ್ಯಸನಿಯೆಂ ಕಟಿದೆಂ ವ್ಯಸನಾಭಿಭೂತನಾ-
ವನುಮನುರಾಗವೇಗದೆ ಹಿತಾಹಿತ ಚಿಂತೆಯನೇಕೆ ಮಾಡುವಂ ||೧೧೭||

ಜಸದಟಿವಂ ಪರಾಭವದ ಪತ್ತುಗೆಯಂ ದೊರೆವೆತ್ತ ತನ್ನ ಮಾ-
ನಸಿಕೆಯ ಕೇಡನುನ್ನತಿಯ ಬನ್ನಮನನ್ಯ ಭವಾನು ಬಂಧ ಮ-
ಪ್ಪಸುಗತಿಯಂ ಸುಪ್ಪಜ್ಜನದ ಬೇವಸಮಂ ಜನತಾಪವಾದಮಂ
ಬೆಸನಿಗಲಾರುಮೆತ್ತ ಲಜೆವರ್ ವಿಷಯಾತುರಮತ್ತಚೇತಸರ್ ||೧೧೮||

ಎಂದುದ್ವೇಗಪರನಾಗಿ ನುಡಿದಾತ್ಮಗತದೊಳಿಂತೆಂದಂ :

ಇರದುಯ್ದಿಗಳೆ ಕೊಟ್ಟೊಡನ್ನ ಕಡುಪುಂ ಕಟ್ಟಾಯಮುಂ ಬೀರಮುಂ
ಬಿರುದುಂ ಬೀಸರಮಕ್ಕುಮೋಸರಿಸಿದಂತಾಗಿರ್ಕುಮಂತಾಗದಂ-
ತಿರೆ ದೋರ್ಗರ್ವಮನಿರ್ವಲಂ ಪೊಗಟ್ಚಿನಂ ಸೌಮಿತ್ರಿಯಂ ರಾಮನಂ
ವಿರಥಂ ಮಾಡಿ ರಣಾಗ್ರದೊಳ್ ಪಿಡಿದು ತಂದೀ ಸೀತೆಯಂ ಕೊಟ್ಟಪೆಂ ||೧೧೯||

ಎಂದು ನಿಶ್ಚಯಿಸಿ ನಿಜನಿವಾಸಕ್ಕೆ ವಂದಂಗದ ಪ್ರಭಾಮಂಡಳ ಸುಗ್ರೀವ ಹನುಮದಾದಿಗಳ ದುರಾಚಾರಕ್ಕೆ ಮುಳಿದವಂದಿರಂ ರಾಮನುಟಿಯೆ ಕೊಲ್ವೆನೆಂದು ಭರಂಗೆಯ್ದಿರ್ದನಾ ಸಮಯದೊಳ್,

ಪರಿವೇಷಂ ನಾಡೆ ಭಯಂ ।
ಕರಮಪ್ಪುದನರ್ಕಬಿಂಬದೊಳ್ ನಟ್ಟಿರುಳೊಳ್ ॥

ಸುರಚಾಪಂ ಮೂಡುವುದಂ ।
ಗಿರಿಶಿಖರಂ ಬಿರಿವುದಂ ನೆಲಂ ಮೊಬಿಗುವುದಂ ॥೧೨೦॥

ಪಿಡಿಗೆ ಮದಮಪ್ಪುದಂ ಮದ ।
ಮುಡುಗುವುದಂ ಮದಗಜಕ್ಕೆ ಗೃಹದೇವತೆಗಳ್ ॥
ಗಡಣದಿನಟ್ಟುದನಾಗಸ ।
ಮೆಡೆಗೆಟ್ಟಿರೆ ಧೂಮಕೇತುಗಳ್ ಮೂಡುವುದಂ ॥೧೨೧॥

ಪಗಲುಳ್ಕಂ ಬೀೞ್ವುದಂ ಧಾರಿಣಿ ನಡುಗುವುದಂ ಕೊಳ್ಳೆನಲ್ ದೀಪ್ತದೊಳ್ ಬ-
ಳ್ಳುಗಳೂಳುತ್ತಿರ್ಪುದಂ ಕೈದುಗಳುಡಿವುದನಾದಿತ್ಯನುಂ ಚಂದ್ರನುಂ ಮೇ-
ಗೊಗೆದಂತಾಗಿರ್ಪುದಂ ಮಾಡದ ಮಣಿಕಲಶಂ ಬೀೞ್ವುದಂ ಕಂಡು ತಮ್ಮೊಳ್
ಬಗೆದರ್ ನೈಮಿತ್ತಿಕರ್ ನಾಳಿನ ಸಮರದೊಳಕ್ಕುಂ ದಶಾಸ್ಯಂಗಪಾಯಂ ॥೧೨೨॥

ಎಂದು ನಿಶ್ಚಯಿಸಿ ನುಡಿಯುತ್ತಿರ್ದರಾಗಳಸುರಪತಿ ನಿಜಾಸ್ಥಾನ ಮಂಟಪ ಮಧ್ಯಸ್ಥಿತಿ ಸಿಂಹಾಸನದೊಳಿರ್ದು ಸೆಱೆಯೊಳಿರ್ದ ತನುಜಾನುಜರಂ ನೆನೆದು ಮುನಿದು ಕಾಳೆಗಕ್ಕೊಡರಿಸಿ ಶಸ್ತ್ರಶಾಲೆಯಂ ಪುಗುವುದಮದಂ ಮಂಡೋದರಿ ಕಂಡು ಮಂತ್ರಿಗಳ್ಗಿಂದಿನ ರಣಮಂ ರಾವಣಂ ಮಾಣ್ಬಂತು ಮಾೞ್ಪುದೆಂಬುದುಮೆವರಿತೆಂದ ರಾವಿದಂ ಪಲವುಂ ಪರ್ಯಾಯದಿಂ ಪೇೞ್ದೊಡಂ ಕೇಳನಿಲ್ಲಿಗೆ ತಕ್ಕುದಂ ನುಡಿದು ದೇವಿಯರೆಂತಾನುಮೊಡಂಬಡಿಸುವುದೆನೆ ಮಂಡೋದರಿ ರಾವಣನಲ್ಲಿಗೆ ಬಂದೆಱಗಿಪೊಡೆವಟ್ಟು

ಆನೀ ಜಾನಕಿಯಂ ರಘುಪ್ರಿಯ ತನೂಜಂಗಿತ್ತು ತರ್ಪೆಂ ಭವ-
ತ್ಸೂನುಭ್ರಾತೃಗಳಂ ರಣವ್ಯಸನದಿಂ ಸಾವೆಯ್ದುಗುಂ ಬಂಧು ಸಂ-
ತಾನಂ ಕಾಳೆಗಮಂ ಬಿಸುೞ್ವುದೆನೆ ರೋಷಾವೇಶದಿಂ ರಾವಣಂ
ನೀನಿಲ್ಲಿಂ ತೊಲಗೆಂದು ಚಪ್ಪರಿಸಿದಂ ಮಂಡೋದರೀ ದೇವಿಯಂ ॥೧೨೩॥

ಅಂತು ಚಪ್ಪರಿಸೆಯುಂ ಮಾಣದೆ ಮತ್ತಮಿಂತೆದಳ್,

ಪರವನಿತೆಗೆಱೆಪಿ ರಣದು ।
ರ್ಧರನೆನಿಸಿರ್ದಶನಿ ಘೋಷ ನೞಿದುದನಸುರೇ- ॥
ಶ್ವರ ನೀನೇನಱಿಯದನೇ ।
ಪರಿಹರಿಸಲ್ವೇೞ್ವುದದೞಿನಸದಾಗ್ರಹಮಂ ॥೧೨೪॥

ಎಂತುಮೀತಂಗಳೆಂಟನೆಯರ್ಧ ಚಕ್ರವರ್ತಿಗಳ್ ನಿನಗೆ ಶತ್ರುಗಳದೞಿನಿವರ ಬವರಮನುೞಿದು ಸಂಧಿಗೊಡಂಬಟ್ಟು ವಿದ್ಯಾಧರ ರಾಜ್ಯ ಸುಖಮನನುಭವಿಸುವುದೆನೆ ರಾವಣನೆಂದನವಂದಿರೆನಗೆ ಕಾಳೆಗದೊಳ್ ನಿಲ್ವ ಗಂಡರಲ್ಲರದರ್ಕೆ ನೀನಂಜದಿರೆಂದು ಸನ್ನಾಹ ಭೇರಿಯಂ ಪೊಯಿಸುವುದುಮಂ,

ಹಿತಮಂ ಹಿತರಱೆಪಿದೊಡಂ ।
ಮತಿಗೆಟ್ಟಱೆಕೆಯ್ವನೆಂದು ದಶಮುಖಕುಲದೇ- ॥
ವತೆ ಪುಯ್ಯಲಿಡುವವೋಲ್ ದಿ ।
ಗ್ವಿತತಿಯನಾವರಿಸಿದತ್ತು ಭೇರೀನಾದಂ ॥೧೨೫॥

ಆ ಸಮಯದೊಳ್ ಸಿಂಹಾಸನಾರೋಹಣಕ್ಕಿದುವೆ ಚರಮಸಮಯ ಮೆಂದಱೆಪುವಂತೆ,

ತಾರಗೆಯಂ ತಮಂ ಸಱೆಗೆ ತಂದವೊಲರ್ವಿಸೆ ದೀಪದೀಪ್ತಿಯೊಳ್
ಹಾರಮರೀಚಿ ಮಾಣಿಕದ ಪೆರ್ದೊಡವಿಂ ಪೊಱಪೊಣ್ಮುವಂಶುಗಳ್
ದಾರುಣಕೋಪಪಾವಕನೆ ತನ್ನೊಡಲಂ ಸುಡುವಂದಮಾಗೆ ಕೋ-
ಪಾರುಣನೇತ್ರನೆಟ್ಟನೊಡನೇೞ್ವಿನೆಗಂ ಖಚರೇಂದ್ರಮಂಡಳಂ ॥೧೨೬॥

ಅವಯವಶೋಭೆಯಂ ಪಡೆವುದಲ್ಲದೆ ಭೂಷಣಮೆನ್ನ ಮಾಱ್ಕೆಯಿಂ-
ದವಯವಮಾಗೆ ವರ್ತಿಸುವುವೇಂ ಪೆಱವೆಂದನೇಳಿಪಂತೆವೋಲ್
ನವಮುಖಭೂಷಣಂ ದಶಮುಖ ವ್ಯವಹಾರಮನಿತ್ತು ರಾವಣಂ-
ಗವಿರಳ ಕಾಂತಿಯಿಂ ಬೆಳಗಿದತ್ತು ಸಮಸ್ತ ದಿಶಾಮುಖಂಗಳಂ ॥೧೨೭॥

ಅಂತು ಸಿಂಹಾಸನದಿನೆೞ್ದು,

ಚಾಮರಮನಿಕ್ಕೆ ಖಚರ ।
ಪ್ರಮದಾಜನಮುತ್ತಮಾಂಗದೊಳ್ ಬೆಳ್ಗೊಡೆ ಚಂ- ॥
ದ್ರಮನಂ ಗೆಲೆ ನಡೆದಂ ವಿ ।
ಕ್ರಮಧವಳಂ ಚಂದ್ರಹಾಸಮಂ ಜಡಿಯುತ್ತುಂ ॥೧೨೮॥

ಆಗಳಸಮ ಸಮರಕೇಳೀಕುತೂಹಲ ಖಚರಪರಿವೃಢರುಮುಭಯ ಪಾರ್ಶ್ವದೊಳಂ ಮಣಿ ಮಕುಟಕಾಂತಿ ಪೊದೆೞ್ದುನಿಳ್ದು ಮಿಗೆ ಪರ್ವಿ ಶಕ್ರಶತ ಧನುವನನುವಿಸೆ ಕೆಳರ್ದ ಕೇಸರಿಗಳಂತೆ ನಡೆಯೆಯುಮಪಾರ ಚತುರಂಗ ಸೇನೆ ಚರಣಸಂಚರಣಕ್ಕೆ ನೆಲಂ ನೆಱೆಯದೆಂಬಂತೆ ನಡೆಯೆಯುಂ ಕರಿ ವೃಷಭ ಸಿಂಹ ಗರುಡ ಹಂಸಾದಿ ಮಹಾಧ್ವಜಂಗಳೆಡೆಗಿಱಿದು ನಡೆಯೆಯುಂ ವಿವಿಧ-ರತ್ನಖಚಿತ-ಕನಕದಂಡ-ಮಂಡಿತ-ವಿಚಿತ್ರ-ರಾಜಚಿಹ್ನಂಗಳ್ ಮುಂದೆ ಸಂದಣಿಸಿ ನಡೆಯೆಯುಂ ನಡೆವ ಸಮಯದೊಳೊಡನೊಡನೆ ನೆಲಂ ಮೊಱಗೆ ಪಱೆಯ ದನಿಗಳೆಂದುಮಾಕಸ್ಮಿಕಮುದಯಿಪ ಧರಾಕಂಪಮಂ ಸೇನಾಭರದಿನಾದ ಧರಾಕಂಪಮೆಂದುಂ ಪಸರಿಸುವ ದಿಗ್ದಾಹಮುಮಂಬರ ಚರಕಿರೀಟ-ಮಾಣಿಕ್ಯ-ಮಯೂಖ-ಲೇಖೆಗಳೆಂದುಮವಿರಳಮಾಗೆ ಕವಿದ ಕಾವುಳಮಂ ಸೇನಾರಜೋಜಾಳಮೆಂದು ಪೂಜಾ-ವಾಜಿ-ವಿಳೋಚನ-ವಿಗಳದಶ್ರು ಬಿಂದುಗಳನಾನಂದಾಶ್ರು ಬಿಂದುಗಳೆಂದುಮೊಱೆ-

ಯಿನುರ್ಚಿದ ಕೈದುಗಳನಿದಿರ್ಚಿದ ರನಿಜೆಯಲೆಂದುರ್ಚಿದುವೆಂದುಂ ಕಣ್ಬೊಲದೊಳ್ ಸುೞಿವ ಕಾಲಾಯಸ ಕಾಲ ಪುರುಷನಂ ಕಾಳೆಗಕ್ಕೆ ಜವಂ ನೆರಂ ಬಂದಪ್ಪನೆಂದುಮಾಗಸದೊಳೊಗೆವ ಧೂಮಕೇತುಗಳಂ ವಿಜಯಕೇತುಗಳೆಂದುಂ ಕಣ್ಣೊಳುಳ್ಕುವುಲ್ಕಾಪಾತಮಂ ನಿಜ ಪ್ರತಾಪಾನಳವಿಸ್ಫುಲಿಂಗಂಗಳೆಂದುಮಭೂತಪೂರ್ವಮಪ್ಪುತ್ಪಾತಂಗಳನೇನುಮಂ ಬಗೆಯದೆ ಕೋಪಮನೆ ಬಗೆದು,

ರದನಂಗಳ್ ನಾಲ್ಕಱಿಂದದ್ಭುತಮೆನಿಪ ಸಹಸ್ರದ್ವಿಪಸ್ಕಂಧದೊಳ್ ಪೂ-
ಡಿದ ವಿದ್ಯಾದೇವತಾ ನಿರ್ಮಿತ ರಥಮನತಿ ಕ್ಷೋಭದಿಂದೇಱಿ ಬಂದಂ
ಕವನಕ್ಷೋಣೀತಳಕ್ಕುನ್ನಮಿತ-ಬಹುಪತಾಕಾಪಟಚ್ಛನ್ನ ಮೇಘಾ-
ಸ್ಪದಮಂ ಸಂಗ್ರಾಮಭೇರೀರವಬಧಿರಿತ ನಾನಾದಿಶಾಸ್ಯ ದಶಾಸ್ಯಂ ॥೧೨೯॥

ಅಂತು ಬಂದು ಸಂಗ್ರಾಮ ಭೂಮಿಯೊಳೊಡ್ಡಿ ನಿಲ್ವುದುಂ,

ಈ ತೋರ್ಪುದಚಳಮೋ ಜೀ ।
ಮೂತಮೊ ಪೇೞೆಂದು ಪೊಳೆವುದಂ ಜಾಂಬವನಂ ॥
ಕೌತುಕದಿಂ ಬೆಸಗೊಂಡಂ ।
ಸೀತಾರಮಣಂ ದಶಾಸ್ಯನೇಱಿದ ರಥಮಂ ॥೧೩೦॥

ಅಂತು ಬೆಸಗೊಳ್ವುದುಂ ಜಾಂಬವನದು ರಾವಣನ ಬಹುರೂಪಿಣೀ-ವಿದ್ಯಾ-ವಿನಿರ್ಮಿತ-ವರೂಥಮೆಂಬುದುಮದಂ ಲಕ್ಷ್ಮಣಂ ಕೇಳ್ದು ಸನ್ನಾಹ ಭೇರಿಯಂ ಪೊಯಿಸೆ,

ಆರಾಧಿಸಿ ಪಡೆದಂ ಗಡ ।
ತೇರಂ ದೋಸ್ಸಾರನಲ್ಲದಂಗೇವುದೊ ಪೇೞ ॥
ತೇರೆಂದು ಸಿಂಹರಥಮಂ ।
ವೀರಶ್ರೀರಮಣನೇಱಿದಂ ರಘುವೀರಂ ॥೧೩೧॥

ವಿಗ್ರಹಭೂಮಿಯೊಳಿಂದು ದ ।
ಶಗ್ರೀವನನಿಕ್ಕಿ ವಿಜಯಲಕ್ಷ್ಮಿಯೊಳಾಂ ಪಾ- ॥
ಣಿಗ್ರಹಣಮನೊಡರಿಪೆನೆಂ ।
ಬಾಗ್ರಹದಿಂ ಕೃಷ್ಣನೇಱಿದಂ ಸ್ಯಂದನಮಂ ॥೧೩೨॥

ಅಂತು ಸಿಂಹಗರುಡವಾಹಿನೀ ವರೂಥಂಗಳಂ ರಾಮಲಕ್ಷ್ಮಣರೇಱಿ ವಿದ್ಯಾಪರಮೇಶ್ವರರಪ್ಪ ವಿದ್ಯಾಧರರಿಂ ಪರಿವೃತರಾಗಿ ಚತುರಂಗಬಲಸಮನ್ವಿತರ್ ಶುಭಶಕುನಂಗಳನಿದಿರ್ಗೊಳುತ್ತುಂ ಸಂಗ್ರಾಮ ಭೂಮಿಗೆ ಬಂದೊಡ್ಡಿ ನಿಲ್ವುದುಂ ರಾವಣಂ ಕಂಡು ಕೈವೀಸುವುದುಮುಭಯಬಲಮುಂ ತಳ್ತು ಕಾದುವಲ್ಲಿ ವಾನರ ಬಲದ ನಳನುಂ ನೀಲನುಂ ಕುಮುದನುಂ ಯೂಥನಾಥನುಮೆಂಬ ನಾಯಕರೊಟ್ಟೈಸಿ ತಳ್ತಿಱಿದು ದನುಜಬಲಮಂ ತವೆ

ಕೊಲ್ವುದಂ ಕಂಡು ಮಾರ್ಕೊಂಡು ರಾಕ್ಷಸ ಬಲದ ಮುಖ್ಯ ನಾಯಕರ್ ಕುಂಭನುಂ ವಿಕ್ರಮನುಂ ಮಾಲಿಯುಂ ಸೂರ್ಯರಥನುಂ ಮೊದಲಾಗೆ ಪಲರುಂ ತಂತಮ್ಮ ಪಡೆಗಭಯಮಪ್ಪಂತು ಕಾದುತ್ತುಮಿರ್ದರತ್ತ ಮತ್ತೊಂದು ಮೊನೆಯೊಳ್ ರಾವಣನ ಬಲದ ಭೂತನುಂ ಸಂಭೂತನುಂ ಕುಳಿಕನುಂ ಸುಷೇಣನುಂ ಕಾಳನುಂ ಚಂಡನು ಮೂರ್ಮಿಯುಂ ತರಂಗನುಂ ವಾನರ ಬಲದೊಳಗ ತಲೆಮುಟ್ಟು ಮಲೆದು ಕಾದುವಲ್ಲಿ,

ವನಗಜಯೂಥಮಂ ಭರದಿನಟ್ಟುವ ಕೇಸರಿಯಂತೆ ದೈತ್ಯರು-
ಳ್ಳನಿಬರುಮಂ ಮಹಾರಣದೊಳದ್ಭುತಮಾಗೆ ಕರುತ್ತು ಕಾದಿ ಪಾ-
ವನಿ ಬಿಜುತೋಡುವಂತೆ ಬೆದಜಟ್ಟುವುದುಂ ನಡೆ ನೋಡಿ ಕಂಡು ಕಾ-
ಯ್ಪನುವಿಸೆ ಮುಟ್ಟೆ ಮೂದಲಿಸಿ ತಾಗಿದನಾಹವದುರ್ಜಯಂ ಮಯಂ ॥೧೩೩॥

ಅಂತು ತಾಗಿ,

ಅಯನಯಮಯನತಿವೇಗದೆ ।
ಮಯನಿಸೆ ದುರ್ಜಯನೆನೆನಿಪ್ಪ ಮಾರುತಿಗಂ ವಿ- ॥
ಸ್ಮಯಮಗ್ಗಳಮಾದುದು ಶರ ।
ಮಯ ಮಾಪತ್ತಖಿಳಗಗನ ದಿಗವನಿವಳಯಂ ॥೧೩೪॥

ಅಂತು ಪುಂಖಾನುಪುಂಖಮಿಸುವುದುಂ,

ಅವನೆಚ್ಚ ಬಾಣಜಾಲಮ ।
ನವಯವದಿಂದೆಚ್ಚು ತವಿಸಿದಂ ಮಾರುತಿ ಭೈ- ॥
ರವನಂದದಿಂ ತ್ರಿಶೂಲದಿ ।
ನವನಿಟ್ಟಂ ದನುಜಸೇನೆ ಬ್ಬೊಜ್ಜಿರಿವಿನೆಗಂ ॥೧೩೫॥

ಅಂತಿಡುವುದುಂ,

ಶೂಳಾಯುಧಂ ನಿಶಿತಶ ।
ರಾಳಿಗಳಿಂ ಪವನಸೂನು ಕಡಿದಿಕ್ಕೆ ಮಯಂ ॥
ದೋಳಾಯಮಾನ ಚಿತ್ತಂ ।
ಕಾಳೆಗದ ಪೊಡರ್ಪುಗೆಟ್ಟು ಮರವಟ್ಟಿರ್ದಂ ॥೧೩೬॥

ಅದಂ ಕಂಡು ದಶವದನಂ ಪ್ರಜ್ವಳಿತಮೆಂಬ ದಿವ್ಯರಥಮನಟ್ಟುವುದುಮದನೇಜೆ ಮಯಂ ಮಹಾಯುದ್ಧಂ ಗೆಯ್ದು ಜಯಶ್ರೀಯನಪ್ಪಕೆಯ್ದು,

ಕರಮುರಿದು ಮಯನ ಬಾಹಾ ।
ಪರಿಘಕ್ಕಿದಿರುಡುವುದಾರ್ಗಮಾಹವದೊಳ್ ಮು- ॥



ರಘುವೀರ ವಿಜಯ ವರ್ಣನಂ

ರ್ಧರನೆನಿಸಿದತುಳ ಬಲನಂ ।
ನಿರಾಯುಧಂ ಮಾಡಿದಂ ಮರುನ್ನಂದನನಂ ॥೧೩೭॥

ಅಂತು ಹನುಮಂ ನಿರಾಯುಧನಪ್ಪುದುಂ ಪ್ರಭಾಮಂಡಳಂ ಬಂದೆಡೆಗೊಂಡು ತಾಗುವುದುಂ,

ಧುರದೊಳ್ ಮಯನಾತನುಮಂ ।
ವಿರಥಂ ಮಾಳ್ಪುದುಮದಕ್ಕೆ ಸುಗ್ರೀವಂ ಚಿ- ॥
ಚ್ಚರ ಮೊದಲೆ ಬಂದು ತಾಗಿದ ।
ನರಾತಿ ಬಳಮೆಲ್ಲಮೊಲ್ಲನುಲಿದೋಡುವುದುಂ ॥೧೩೮॥

ಅಂತು ತಾಗುವುದುಮಾತನುಮಂ ಬೇಗದೊಳೆ ನಿರಸ್ತ್ರಂ ಮಾಳ್ಪುದುಮಾತನಂ ಪೆಱಗಿಕ್ಕಿ,

ಉರವಣೆಸಿ ವಿಭೀಷಣನತಿ ।
ಭರದಿಂ ತಾಗುವುದುಮಾ ಮಹಾಬಳನ ಭುಜಾ- ॥
ಪರಿಘಕ್ಕೆ ಕುಂದನೆನಿಸಂ ।
ದೊರೆಕೊಳಿಸಿದನೆಂದೊಡೇಂ ಮಯಂ ದುರ್ಜಯನೋ ॥೧೩೯॥

ಆಗಲಾ ಮಯನ ಮಸಕಮುಂ ಸಿಂಹರಥಾರೂಢಂ ದಾಶರಥಿ ಕಂಡು ಕಡು ಮುಳಿದು,

ಇದು ರಕ್ಕಸರಸುವಂ ಪೀ ।
ರ್ವುದಗ್ರಕಾಳಾಹಿಯೆನಿಪ ಬಿಲ್ಲ ರಾಮಂ ॥
ಪದುಳಂ ತಂದಂಗುಷ್ಠದ ।
ಮೊದಲ್ಗೆ ಕೊಪ್ಪಿಂಗೆ ನೂಂಕಿದಂ ಜ್ಯಾಲತೆಯಂ ॥೧೪೦॥

ಅಂತು ನಿಜವಿಯಧನುರ್ಲತೆಯನೇಱಿಸಿ ನೀವಿ ಜೇವೊಡೆವುದುಂ,

ರಾವಣನ ದಿವ್ಯರಥದ ಗ ।
ಜಾವಳಿ ಪೆಟ್ಟಳಿಸೆ ಬೆರ್ಚಿ ರವಿಯ ಹಯಂಗಳ್ ॥
ತೀವಿದುದು ಗಗನಮಂ ವ ।
ಜ್ರಾವರ್ತಧನುರ್ಲತಾ ಘನ ಜ್ಯಾರಾಂ ॥೧೪೧॥

ಅನಂತರಂ ಸಂವರ್ತಸಮಯದತಿವರ್ತಿಯಪ್ಪ ದಂಡಧರನ ಪೊಡರ್ಪನಪ್ಪು ಕೆಯ್ದು ಮಾರ್ಪಡೆಯುಂಪಡಲ್ವಡಿಸುತ್ತುಂ ಬರ್ಪುದಾತ್ತ ರಾಘವನ ಬೞಿವಿಡಿದು ವಿಭೀಷಣ ಪ್ರಭಾಮಂಡಳ ಮರುತ್ಸುತ ಸುಗ್ರೀವಾದಿಗಳುಂ ಮಗುಳ್ದು ಕಾದಲ್ ಮನಂಗೆಯ್ದು ಬರೆ ಪದ್ಮ ದೇವನವರಂ ಪಿಂತಿಕ್ಕಿ ಮಯನಂ ಮುಟ್ಟೆವಂದು ಮಹಾಯುದ್ಧಂಗೆಯ್ದು,

ಜನಕಸುತನಂ ಮರುನ್ನಂ ।
ದನನಂ ಸುಗ್ರೀವನಂ ವಿಭೀಷಣನಂ ಗೆ- ॥
ಲ್ದನನಂಜಿಸಿ ರಾಮಂ ಜಯ ।
ವನಿತೆಯ ಕೈವಿಡಿದ ತೆಱದೆ ಮಯನಂ ಪಿಡಿದಂ ॥೧೪೨॥

ಪಿಡಿಯೆ ರಘೂದ್ವಹಂ ಮಯನನೀಕ್ಷಿಸಿ ರಾಕ್ಷಸ ಚಕ್ರವರ್ತಿ ಕಾ-
ಯ್ಪೊಡರಿಸೆ ಕೀಱೆ ತನ್ನ ರಥಮಂ ಪರಿಚೋದಿಸವೇೞ್ದು ರಾಮನೊಳ್
ತೊಡರಲೊಡರ್ಚೆ ಬರ್ಪ ಪದದೊಳ್ ಮಗುಳಿತ್ತಲೆನುತ್ತುಮೆಯ್ದಿದಂ
ಸಿಡಿಲ ಪೊಡರ್ಪುಮಂ ಜವನ ಕೂರ್ಪುಮನಿೞ್ಕುಳಿಗೊಂಡು ಲಕ್ಷ್ಮಣಂ ॥೧೪೩॥

ಅಂತು ರಘುನಂದನನ ಸ್ಯಂದನಮಂ ಪೆಱಗಿಕ್ಕಿ,

ಎತ್ತಾನುಂ ದೊರೆಕೊಂಡೆ ರಾಘವನಮೋಘಾಸ್ತ್ರಕ್ಕೆ ಮಾರಾಂಪ ವಿ-
ಕ್ರಾಂತಂ ಕಾರ್ಮುಕ ನಿನ್ನೊಳುಂಟೆ ಕದನಕ್ಕಣ್ಣಂ ಬರಂ ಗಂಡರಾರ್
ಮುಂತಾಗೆನ್ನೊಳಿದಿರ್ಚು ಕೂರ್ಗಣೆಯ ಕೂರ್ಪಂ ತೋರ್ಪೆನಣ್ಮೆಂದು ಕ-
ಲ್ಪಾಂತೋಗ್ರಾಂತಕನಂತೆ ಗರ್ಜಿಸಿದನಾರಕ್ತೇಕ್ಷಣಂ ಲಕ್ಷ್ಮಣಂ ॥೧೪೪॥

ಅಂತು ಗಜರಿ ಗರ್ಜಿಸುವುದುಂ ಘನಗರ್ಜನೆಗೇಳ್ದ ಕೇಸರಿಯಂತೆ ಕೆಳರ್ದು,

ಕರಿಗಳ್ ಸಾಸಿರದೊಳ್ ಪೂ ।
ಡಿ ರಥಂ ಜಂಗಮಕುಲಾದ್ರಿ ಬರ್ಪಂತೆ ಭಯಂ- ॥
ಕರಮಾಗೆ ಬಂದು ದಶಕಂ ।
ಧರನಾಸುರಮಾಗೆ ತಾಗಿದಂ ಲಕ್ಷ್ಮಣನಂ ॥೧೪೫॥

ಆಗಳೆಱಂಕೆಯ ಬೆಟ್ಟಂ ।
ಬೇಗಂ ಬರ್ಪಂತೆ ಬಂದು ಲಕ್ಷ್ಮಣನ ರಥಂ ॥
ತಾಗಿದುದು ಗರುಡವಾಹಿನಿ ।
ಸಾಗರಮುಚ್ಚಳಿಸೆ ಪಕ್ಷಪವನಾಹತಿಯಿಂ ॥೧೪೬॥

ಅಂತವರ್ ತಂತಮ್ಮ ರಥಮಸನತಿ ದೂರದೊಳ್ನಿಲಿಸಿ,

ಇವು ದೃಷ್ಟಿವಿಷಾಹಿಯ ಗರ ।
ಳವಹ್ನಿ ಜಿಹ್ವಾವಿಭಾಸಮೆನೆ ಕಣ್ಗಳ ಕೆಂ- ॥
ಪವರೊರ್ವರೊರ್ವರಂ ಪ್ರಾ ।
ಣವಾಯುಮಂ ನುಂಗುವಂತೆ ನೋಡಿದರಾಗಳ್ ॥೧೪೭॥

ಅಂತವರಿರ್ವರುಮೋರೊರ್ವರಂ ಜನ್ಮಾಂತರ ಜನಿತ ಕಲುಷವಶಗತರಾಗಿ ನೀಡುಂ ನೋಡೆ ತದನಂತರಂ ಲಕ್ಷ್ಮೀಧರಂ ದಶಕಂಧರನನಿಂತೆಂದಂ:

ಪಲದಿವಸಕ್ಕೆತ್ತಾನುಂ ।
ಕಲಹಕ್ಕೊಳಗಾದೆ ನಿನ್ನ ಬಾೞ್ವಾಸೆಯ ಪಂ- ॥
ಬಲನಿನ್ನುೞಿ ರಘುವೀರನ ।
ಚಲನಾಬ್ಜಕ್ಕೆಱಗಿ ಪಡೆಯ ಮೃತ್ಯುಂಜಯಮಂ ॥೧೪೮॥

ಎನೆ ದಶಮುಖಂ ಮುಳಿದಿಂತೆಂದಂ :

ತ್ರಿಜಗದೊಳುಳ್ಳಱಿಕೆಯ ಭೂ ।
ಭುಜರಂ ಭುಜಬಳದಿನೆನ್ನ ಕಾಲ್ಗೆಱಗಿಸಿದೆಂ ॥
ನಿಜ ತನುಗೆಱಗಿಸುವೆನಧೋ ।
ಕ್ಷಜ ನಿಮಿಷಾರ್ಧದೊಳೆ ಪರ್ದುಮಂ ಕಾಗೆಯುಮಂ ॥೧೪೯॥

ಎಂದು ಬಿಡೆನುಡಿದು ಕೈದುಗೆಯ್ಯೆಂದು ಮೊದಲಿಸಿ ನಿಜವಿಜಯ ಚಾಪಂಗಳನೇಱಿಸಿ ನೀವಿ ಜೇವೊಡೆವುದುಂ,

ದಿನಕೃನ್ಮಂಡಳಮಂ ಪಳಂಚಿ ಕುಲಭೂಭೃತ್ಕೂಟದೊಳ್ ಬೇಱಿ ಮಾ-
ರ್ದನಿಯಂಪುಟ್ಟಿಸಿ ಲೋಕಪಾಲರ ಮನಕ್ಕಾತಂಕಮಂ ತಂದು ಕೂ-
ಡೆ ನಭೋಮಂಡಳಮಂ ದಿಶಾವಳಯಮಂ ತಟಿಲ್ವೊಯ್ದು ಪೊಣ್ಮೆ ತ್ತುಪೇಂ-
ದ್ರಸ ದೈತ್ಯೇಂದ್ರನ ದಿವ್ಯಚಾಪವಿಪುಳವ್ಯಾಘಾತ ಘೋರಸ್ವನಂ ॥೧೫೦॥

ಅಂತು ಸಮರಸನ್ನದ್ಧರಾಗಿ,

ಅಯ್ದುಂ ಸ್ಥಾನದೊಳಂ ನಿಂ ।
ದಯ್ದುಂ ತೆಱದೇಸಿನೋಜೆವೆತ್ತಪ್ರತಿಮರ್ ॥
ಕಾಯ್ದಿಸೆ ದೆಸೆ ಮಸುಳ್ವಿನೆಗಂ ।
ಪಾಯ್ದುವು ಪುಂಖಾನುಪುಂಖಮಸ್ತ್ರಾವಳಿಗಳ್ ॥೧೫೧॥

ದನುಜೇಂದ್ರನ ಗಜರಥಮುಂ ।
ಮನುಜೇಂದ್ರನ ಗರುಡರಥಮುಮೆವೆ ಮಿಡುಕದೆ ನಿ- ॥
ಲ್ವಿನಮವರೆಚ್ಚಂಬುಗಳಂ ।
ದನುವರದೊಳ್ ಪೊಡೆದುಪೊಡನೆ ಶರಪಂಜರಮಂ ॥೧೫೨॥

ಓರೊರ್ವರೆಚ್ಚ ಕಣೆಗಳ ।
ನೋರೊರ್ವರ್ ಕಡಿದು ಮಾಣದಿಸೆ ಕಾರ್ಮುಗಿಲಿಂ- ॥

ದೋರಂತೆ ಪಾಯ್ವ ಪುಷ್ಕರ ।
ಧಾರಾಸಂದೋಹದಂತೆ ಪಾಯ್ದುವು ಕಣೆಗಳ್ ॥೧೫೩॥

ಪುರುಷೋತ್ತಮನಿಸೆ ದಶಕಂ ।
ಧರನಂ ಕೂರ್ಗಣೆಗಳುರ್ಚಲಾಱವೆ ದಶಕಂ- ॥
ಧರನಿಸೆ ನಿಶಿತಾಸ್ತ್ರಂಗಳ್ ।
ಪುರುಷೋತ್ತಮತನುವನುರ್ಚಲಾಱವೆ ಧುರದೊಳ್ ॥೧೫೪॥

ನೆಱೆದುದು ನಿನ್ನ ನಿಷೇಕಂ ।
ನೆಱೆಗೊಳ್ಳದೆ ಮಾಣವೆನ್ನ ಬಾಣಾವಳಿಗಳ್ ॥
ಗಱೆ ಸೋಂಕದೆ ಪೋಗೆನುತುಂ ।
ಗಱೆ ಗಱೆಯಂ ಸೋಂಕಿ ಪರಿಯೆ ಲಕ್ಷ್ಮಣನೆಚ್ಚಂ ॥೧೫೫॥

ಸಮಧಿಕರಸ್ತ್ರಶಸ್ತ್ರ ಬಲದೊಳ್ ದೃಢಕಾಯದೊಳತ್ಯುದಗ್ರ ವಿ-
ಕ್ರಮದೊಳನಂತವೀರ್ಯದೊಳನೇಕವಿಧ ಪ್ರಧನಂಗಳೊಳ್ ಧನು-
ಶ್ರಮದೊಳಪಾರ ಪೌರುಷದೊಳಾದೊಡಮೇಂ ಪ್ರತಿ ವಾಸುದೇವನೊಳ್
ಸಮನಿಸಿದಾಯುರಂತ್ಯಮೆ ಜಯಪ್ರದಮಾದುದು ವಾಸುದೇವನೊಳ್ ॥೧೫೬॥

ರಾವಣ ಲಕ್ಷ್ಮಣರತಿರೋ ।
ಷಾವೇಶದಿನೆಚ್ಚುಮಿಟ್ಟುಮಿಱಿದುಂ ಪೊಯ್ದುಂ ॥
ನೋವಂ ಸಾವಂ ಬಗೆಯದೆ ।
ದೇವರ್ಕಳ ನೆರವಿ ನೋಡೆ ಕಾದುತ್ತಿರ್ದರ್ ॥೧೫೭॥

ಸಾಧಾರಣಾಸ್ತ್ರದಿಂದಮ ।
ಸಾಧಾರಣಮಪ್ಪ ಯುದ್ಧಮಂ ಮಾಡಿಯುಮೇಂ ॥
ಸಾಧಿಸಲಣಮಾಱನೆ ಲ ।
ಕ್ಷ್ಮೀಧರನಂ ಕದನಕರ್ಕಶಂ ದಶವದನಂ ॥೧೫೮॥

ಅಂತಚಿಂತ್ಯಯುದ್ಧಂ ಗೆಯ್ದು ಲಕ್ಷ್ಮಣನಂ ಗೆಲಲಾಱದೆ ವಿದ್ಯಾಯುದ್ಧಮಂ ಪೊಣರ್ಚಿ ದಿವ್ಯಾಸ್ತ್ರಮನಭಿಮಂತ್ರಿಸಿ ಕೊಂಡಿಸುವುದುಂ,

ಪೊಗೆ ಪೊಱಪೊಣ್ಮೆ ಸೂಸೆ ಕಿಡಿಗಳ್ ಗರಳಾನಲನಿಂ ಜಗಂಗಳಂ
ಬಗೆಯದೆ ನುಂಗಲೆಂದು ಪರಿತಂದುಪುದಂತಕ ನಾಜ್ಞೆಯಿಂದ ಮಿಂ
ಪಗೆವಡೆಗಿಲ್ಲಜೀವನಮೆನಲ್ ದಶಕಂಧರನೆಚ್ಚ ರೌದ್ರಪ-
ನ್ನಗಶರಮಂ ಗರುತ್ಮಶರದಿಂ ಬಿಱುತೋಡಿಸಿದಂ ಜನಾರ್ದನಂ ॥೧೫೯॥

ಲಯಸಮಯಂ ಜಗಕ್ಕೆ ಪೆಱತಾವುದೊ ರಾವಣನುಗ್ರಕೋಪವ-
ಹ್ನಿಯೆ ವಿಳಯಾನಳಂ ಮುಳಿಸೆ ಕಲ್ಪವಿರಾಮಮೆನಲ್ ಸಹಸ್ರಜಿ-
ಹ್ವೆಯೊಳಮಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ
ಜಯರಮಣೀರಮಂ ತವಿಸಿದಂ ಹರಿ ವಾರುಣ ದಿವ್ಯ ಬಾಣದಿಂ ||೧೬೦||

ಇಸೆ ತಮದಂಬಿನಿಂ ದಶಮುಖಂ ತಪನಾಸ್ತ್ರದಿನದ್ರಿ ಬಾಣದಿಂ-
ದಿಸೆ ದನುಜಾಧಿಪಂ ಕುಳಿಶಸಾಯಕದಿಂ ತರುದಿವ್ಯಬಾಣದಿಂ-
ದಿಸೆ ಖಚರಂ ಕುಠಾರ ಶರದಿಂದಭಿಮಂತ್ರಿಸಿ ಮೇಘಬಾಣದಿಂ-
ದಿಸೆ ದಶಕಂಧರಂ ಪವನಸಾಯಕದಿಂ ತಱೆದಂ ಗದಾಯುಧಂ ||೧೬೧||

ಇವು ಮೊದಲಾಗಿರೆ ನಿಜದಿ ।
ವ್ಯವಿಶಿಖಮಂ ಮತ್ತಮಾಜಿಯೊಳ್ ಪಲವಂ ದಾ-॥
ನವರಿಪು ಭಂಜಿಸೆ ನಿಜದಿ ।
ವ್ಯವಶಿಖದಿಂ ದೆಸೆಗೆ ಮಸಗಿದಂ ದಶವದನಂ ||೧೬೨||

ಅಂತು ಮುಳಿದು ದಿವ್ಯಬಾಣದಿಂ ಗೆಲಲ್ ನೆಱೆಯದೆ,

ಸಿಡಿಮಿಡಿಗೊಂಡು ತನ್ನಕಲುಷೋಗ್ರಕೃಶಾನುವೆ ತನ್ನ ದೇಹಮಂ
ಸುಡೆ ನಿಲಲಾಱದುಮ್ಮಳಿಸಿ ಲಕ್ಷ್ಮಣದೇವನ ದಿವ್ಯಬಾಣದಿಂ
ಕಿಡೆ ನಿಜದಿವ್ಯಬಾಣದೆಸಕಂ ಮಸಕಂ ಗಿಡದಿಂದ್ರಂ ವಿದ್ವಿಷಂ
ಪಡೆದನಪಾರಮಂ ತನುಗಳಂ ಬಹುರೂಪಿಣಿಯೆಂಬ ವಿದ್ಯೆಯಿಂ ||೧೬೩||

ಆ ವಿದ್ಯೆಯ ಸಾಮರ್ಥ್ಯಮ ।
ನೇವಣ್ಣಿಸುವೆಂ ಜನಾರ್ದನಂಗಾಕ್ಷಣದೊಳ್ ॥
ರಾವಣಮಯಮಾಯ್ತಖಿಳಧ ।
ರಾವಲಯಂ ಗಗನವಳಯಮಾಶಾವಳಯಂ ||೧೬೪||

ರಾವಣರನೇಕರುಂ ಯು ।
ದ್ಧಾವಷ್ಟಂಭಪ್ರಚಂಡದೋರ್ದಂಡರಗು- ॥
ರ್ವಾವರಿಸೆ ಸುತ್ತಿಮುತ್ತೆ ಜ ।
ಯಾವಸಥಂ ಲಕ್ಷ್ಮಣಂ ರಣೋತ್ಸುಕನಾದಂ ||೧೬೫||

ಅಂತು ಸೌಮಿತ್ರಿಯಂ ಸುತ್ತಿ ಮುತ್ತಿ,

ಇಟ್ಟರ್ ಕೆಲರಿಱಿದರ್ ಕೆಲ ।
ರೊಟ್ಟಜೆಯಿಂ ಬಂದು ತಾಗಿದರ್ ಕೆಲರಂಬಂ ॥

ತೊಟ್ಟರ್ಕೆಲರಟ್ಟೆಯಿಂ ಬೊ ।
ಬ್ಬಿಟ್ಟರ್ ಕೆಲರಾಜಿರಂಗದೊಳ್ ಪೌಲಸ್ತ್ಯರ್ ॥೧೬೬॥

ಅಂತಗುರ್ವಾಗೆ ವಿಗುರ್ವಿಸಿ ಕಾದುವಲ್ಲಿ,

ಅನಿತುಂ ರಾವಣಕೋಟ ಕೋಟಿ ತೆಱದಿಂ ದಿವ್ಯಾಸ್ತ್ರ ಶಸ್ತ್ರಂಗಳಿಂ
ಮುನಿದೈತಂದಿಸೆ ಪೊಯ್ಯೆ ತಳ್ತಿಱೆಯೆ ತಳ್ತೇಸಾಡಿದಂ ಕೋಟಿಗೊ-
ರ್ವನೆ ಬಿಲ್ಗೊಂಡು ಪುನರ್ಭವಂಗಳವು ಕೋಟಾಕೋಟಗಳ ಪಾಱೆ ಬೀ-
ಱ್ವೆನೆಗಂ ಪಂದಲೆಗಳ್ ಧನುರ್ಧರಧುರೀಣಂ ದುರ್ಧರಂ ಲಕ್ಷ್ಮಣಂ ॥೧೬೭॥

ಶರಸಂಧಾನದ ವೇಗಮಂ ಪೊಗೞಲಾವಂ ಸಾಲ್ದಪಂ ಕೋಟಿದೈ-
ತ್ಯರನಾಂತೊರ್ವನೆ ದೀಪಮಾಲಿಕೆಗಳಂ ಚಂಡಾನಿಲಂ ನಂದಿಪಂ-
ತಿರೆ ಮುಯ್ವೆರ್ಚೆ ದನಂತವಾಗಿ ಕಣಮಂ ಚಂಡಾಂಶು ನಿರ್ಮೂಲಿಪಂ-
ತಿರೆ ನಿರ್ಮೂಲಿಸಿದಂ ನಿಶಾತಶರಸಂಘಾತಂಗಳಿಂ ಲಕ್ಷ್ಮಣಂ ॥೧೬೮॥

ರಾವಣಕೋಟೆಯ ತಲೆ ಕೆಂ ।
ದಾವರೆಯಂ ಕೆದಱಿದಂತೆ ರಣಮಂಡಳಮಂ ॥
ತೀವೆ ತೆಗೆದೆಚ್ಚು ಲಕ್ಷ್ಮಣ ।
ದೇವನವೋಲ್ ಕೋಟಿಭಟನೆನಿಪ್ಪವನಾವಂ ॥೧೬೯॥

ಸಮರಕ್ಷೋಣಿಯನೆಯ್ದೆ ರಾವಣ ಶಿರಂಗಳ್ ತೀವಿ ತಱಿಸ್ಸುಯ್ವನು-
ಕ್ರಮದಿಂ ಪುಂಜಿಸೆ ರೌದ್ರಮಾದುವು ಸುಮಿತ್ರಾ ಪುತ್ರಬಾಣಾಸನಾ-
ಶ್ರಮದೊಳ್ ವಿಶ್ರಮಿಸಿರ್ಪ ಯೋಗಿನಿ ಜಯಶ್ರೀ ವಿಶ್ರುತಾಕಾಶ ಲಿಂ-
ಗಮನಾರಕ್ತ ಸರೋಜ ಸಂತತಿಗಳಿಂದಭ್ಯರ್ಚನಂ ಗೆಯ್ವವೋಲ್ ॥೧೭೦॥

ಅಂತಗುರ್ವಾಗೆ ವಿಗುರ್ವಿಸಿ ಕಾದುವಲ್ಲಿ ರಾವಣನ ತಲೆಗೆ ನೆಲನುಮಾಕಾಶಮುಮೆಡೆ ನೆಱೆಯದೆನೆ ತಱಿದೊಟ್ಟೆ ರಾವಣಂ ಬಹುರೂಪಿಣೀ ವಿದ್ಯೆಯನುೞಿದು ಮುಳಿಸನುೞಿಯದೆ ಚಂದ್ರಹಾಸದಿನಿಱಿಯೆ ಲಕ್ಷ್ಮಣಂ ಸೂರ್ಯಹಾಸದಿನದಕ್ಕೆ ಭಂಗಮನೊಡರ್ಚೆ ಕೆರ್ಳೇಱಿದ ಕೋಪದಿಂ ಮನಂ ಬೆರ್ಚೆ,

ದೊಣೆಯಿಂದಂ ತೆಗೆಯಲ್ಕೆ ಮರ್ವು ನಭಮಂ ಪರ್ವಿತ್ತು ದಿವ್ಯಾಸ್ತ್ರಮಂ
ಗೊಣೆಯಕ್ಕುಯ್ಯಲೊಡಂ ದಿನಾಧಿಪನ ತೇಜಂ ಪಿಂಗಿಪೋದತ್ತು ರಾ-
ವಣನೇಸಾಡಿದೊಡಾಯ್ತು ರಾತ್ರಿಸಮಯಂ ಸಮ್ಮೋಹನಾಸ್ತ್ರಕ್ಕೆ ಲ-
ಕ್ಷ್ಮಣವೀರಂ ಪ್ರತಿಕಾರಮಂತ್ರವಿಕಳಂ ವಿಭ್ರಾಂತನಾಗಿರ್ಪಿನಂ ॥೧೭೧॥

ಅಸ್ಸೆಗಮತ್ತ ಚಂದ್ರವರ್ಧನ ವಿಯಚ್ಚರೇಂದ್ರನ ಮಕ್ಕಳೆಣ್ಬರ್ ಕನ್ನೆಯರ್ ಮಣಿ-ಮಯ-ವಿತಾನ-ವಿರಾಜಮಾನವಿಮಾನಾರೂಢೆಯರ್ ವಿಯನ್ಮಾರ್ಗದಿಂ ಬಂದು ಲಕ್ಷ್ಮಣನಂ ನೋಡುತ್ತುಮಿರೆ ದೇವಾಪ್ಸರೋಗಣಿಕೆಯರಾಕೆಗಳಂ ನೀಮಾರ್ಗೇನಿಮಿತ್ತಂ ಬಂದಿರೆಂದು ಬೆಸಗೊಳ್ವುದುಮವರಿಂತೆಂದು ಪೇಳ್ದರ್ ಸೀತಾಸ್ವಯಂವರಕ್ಕೆ ಮದೀಯ ಜನಕನೊಡಗೊಂಡು ಪೋಗಿ ಲಕ್ಷ್ಮಣನಂ ಕಂಡು ಮನದೆಗೊಂಡೆಮ್ಮನೀತಂಗೆ ಕೊಟ್ಟೆನೆಂಬುದುಮೆಮಗೀತನ ಪುರುಷನಪ್ಪುದಱೆನೀತನನುವರವೆಂತಾದಪುದೆಂಬುದಂ ನೋಡಲ್ ಬಂದೆವೆನೆ ಲಕ್ಷ್ಮಣನಾ ಮಾತಂ ಕೇಳ್ದಾಕೆಗಳನಳ್ಕರ್ತು ನೋಟ್ಟುದುಮವರ್ ಸಮಯೋಚಿತಮನಱೆದು ಸಮ್ಮೋಹನಶರ ಶಕ್ತಿಯನೀ ಮಂತ್ರದಿಂ ಕಿಡಿಸೆಂದುಚ್ಚರಿಸುವುದುಮಾ ಮಂತ್ರದಿನಭಿಮಂತ್ರಿಸಿ,

ಶರಧಿಯನುರ್ಚೆ ಪಿಂಗಿದುದು ಭೋಂಕನೆ ಕಟ್ಟಿಲೆ ದಿವ್ಯಬಾಣಮಂ
ತರೆ ತಿರುವಿಂಗೆ ತೀವ್ರಕಿರಣಂ ತಲೆದೋಱೆದನಾರ್ದು ಪಂಕಜೋ-
ದರನಿಸೆ ರಾತ್ರಿ ಪಿಂಗಿ ಪಗಲಪ್ಪುದುಮಾದುದು ಸಂತಸಂ ಸುರಾ-
ಸುರರ್ಗವಲೋಕಿಸಲ್ ಪಡೆದೆವೆಂದವರಿರ್ವರ ದೋರ್ವಲಂಗಳಂ ॥೧೭೨॥

ಅಂತು ಸಮ್ಮೋಹನಾಸ್ತ್ರಂ ಕೂರ್ಪುಗಿಡೆ ಪೊಡರ್ಪುಗಿಡದೆ ರಾವಣಂ ವಿಘ್ನವಿನಾಯಕಾಸ್ತ್ರದಿಂದಿಸುವುದುಮದಂ ಲಕ್ಷ್ಮಣಂ ಸಿದ್ಧಾರ್ಥ ವಿದ್ಯಾ ಶಿಲೀಮುಖದಿಂ ಪರಾಙ್ಮುಖಂ ಮಾಟ್ಟುದುಂ,

ಎನಿತಂ ಕೊಂಡಾಡುವೆನೀ ।
ತನ ಮಸಕಮನೀಗಳಿಂತೆ ಕಿಡಿಸುವೆನೆಂದಾ ॥
ದನುಜೇಂದ್ರಂ ರೋಷಹುತಾ ।
ಶನನೆರ್ದೆಯೊಳ್ ತಿಣ್ಣಮುರಿಯೆ ಕಿಡಿಕಿಡಿವೋದಂ ॥೧೭೩॥

ಅಂತತಿ ಪ್ರಬಲ ಕಲುಷವಶಗತನಾಗಿ,

ಪರಚಕ್ರಕ್ಷಯ ಕಾಲಚಕ್ರಮೆನಿಸಿರ್ದಾತ್ಮೀಯ ಚಕ್ರಕ್ಕೆ ಖೇ-
ಚರಚಕ್ರೇಶ್ವರನುಯ್ಯೆ ಕೈಯನದು ತೇಜಶ್ಚಕ್ರದಿಂ ಕೋಟಿಭಾ-
ಸ್ಕರ ಚಕ್ರಪ್ರಭೆಯಂ ಪಳಂಚಲೆದು ಕೈಗೆಯ್ತಂದು ಲೋಕೈಕಭೀ-
ಕರಮಾಟಂದುದು ನೀಲಮೇಘನಿಕಟ ಪ್ರಸ್ಫಾರದಂಭೋಳಿವೋಲ್ ॥೧೭೪॥

ಅಂತು ವೀರಪುರುಷರತ್ನನೆನಿಪ ರಾವಣನ ಕೈಗೆ ಚಕ್ರರತ್ನಂ ಬರ್ಪುದುಮದಂ ಲಕ್ಷ್ಮಣಂ ಕೋವರಚಕ್ರಮಂ ಬಗೆವಂತೆ ಬಗೆದು,

ಭೇದಿಪೆನೀ ದಶಾನನನ ಚಕ್ರಮನೀತನ ಕಂಠನಾಳಮಂ
ಭೇದಿಸಿ ತೋರ್ಪೆನೆನ್ನ ಭುಜವೀರ್ಯಮನೆಂದು ಕಡಂಗಿ ವಿಕ್ರಮಾ-

ಸಾದಿತ ವಿಶ್ವಲೋಕವಿಜಯಂ ಕುಲಿಶಾಸ್ತ್ರದ ಪಿಳ್ಕು ನಾರಿಯೊಳ್
ಕೋಮು ಕದಂಪನೆಯ್ದೆ ಧನುವಂ ತೆಗೆದರ್ವಿಸಿದಂ ಜನಾರ್ದನಂ ॥೧೭೫॥

ಕಡಿಖಂಡಂ ಮಾಡುವೆಂ ಚಕ್ರಮನೆಡೆಯೊಳೆನುತ್ತುಂ ಧನುರ್ದಂಡಮಂ ಜೇ-
ವೊಡೆಗೆಯ್ದುಗ್ರಾಸ್ತ್ರಮಂ ಸಂಧಿಸಿ ತಿರುವಿನೊಳಾಲೀಢದೊಳ್ನಿಂದು ಕೋಲುಂ
ಕಡೆಗಣ್ಣುಂ ಕೈಯುಮಿಂಬಾಗಿರೆ ತೆಗೆನೆಱೆದವ್ಯಗ್ರನೇಕಾಗ್ರಚಿತ್ತಂ-
ಬಡೆದಿರ್ದಂ ಚಂದ್ರಚೂಡಂ ತ್ರಿಪುರಮನಿಸಲೆಂದಿರ್ದವೋಲ್ ರಾಮಚಂದ್ರಂ ॥೧೭೬॥

ದಂಡಧರಂಬೊಲಿರ್ದನಭಿವೀಕ್ಷಿಸುತುಂ ಶತಖಂಡಮಪ್ಪಿನಂ
ಖಂಡಿಸುವೆಂ ವಿಯಚ್ಚರನನಚ್ಚಿನ ಚಕ್ರಮನೆಂದು ಘರ್ಮವಾ-
ರ್ಮಂಡಲಿ ಗಂಡಮಂಡಲದಿನಲ್ಲುಗೆ ಲೋಹಿತಲೋಚನಂ ಪ್ರಭಾ-
ಮಂಡಲನೆತ್ತಿ ಚಂಡಭುಜದಂಡವಿಮಂಡಿತ ಮಂಡಲಾಗ್ರಮಂ ॥೧೭೭॥

ಇಡೆ ದಶವದನನ ಚಕ್ರದ ।
ಪೊಡರ್ಪನಾಂ ಕಿಡಿಪೆನೆಂದು ಶೂಲಾಯುಧಮಂ ॥
ಪಿಡಿದೆತ್ತಿ ಸೂಸೆ ಕಣ್ಗಳ್ ।
ಕಿಡಿಯಂ ಭೈರವನವೋಲ್ವಿಭೀಷಣನಿರ್ದ ॥೧೭೮॥

ಪುಡಿ ಪುಡಿ ಮಾಟ್ಪೆಂ ಚಕ್ರಮ ।
ನಡೆಯೊಳ ಲಕ್ಷ್ಮಣನನೆಯ್ದಲೀಯೆನೆನುತ್ತುಂ ॥
ಪಿಡಿದೆತ್ತಿ ಗದೆಯನಿರ್ದಂ ।
ಕಡೆಗಾಲದ ಪೊಡೆವ ಸಿಡಿಲವೋಲ್ಸುಗ್ರೀವಂ ॥೧೭೯॥

ಇರೆ ವಾಮಹಸ್ತದೊಲ್ಬಿಲ್ ।
ತಿರುವಂ ಗೊಲೆಗೊತ್ತಿ ಚಕ್ರಮಂ ಚೆಲ್ಲಿಸುವೆಂ ॥
ಬರಲೀಯೆನೇಮ ಲಾಂಗಲ ।
ಶರಂಗಳಂಪಿಡಿದು ಪವನನಂದನನಿರ್ದಂ ॥೧೮೦॥

ವಿಕ್ರಮಕರ್ಕಶನೀತನೆ ।
ಶಕ್ರನೆನಲ್ಪಿಂಗದಂಗದಂ ವಜ್ರದ ರು- ॥
ಕ್ಷಕ್ರಂ ದೆಸೆಯಂ ದಳ್ಳಿಸೆ ।
ಚಕ್ರಮನಾಕ್ರಮಿಸಲೆಂದು ತಱೆಸಂದಿರ್ದಂ ॥೧೮೧॥

ಅಂತವರ್ ಸಹಸ್ರ ಯಕ್ಷರಕ್ಷಿತಮಪ್ಪ ಸುದರ್ಶನ ಚಕ್ರದ ಬರವನಭಿವೀಕ್ಷಿಸುತ್ತಿರ್ಪು-
ದುಮತ್ತ ದಶಮುಖಂ ಲಕ್ಷ್ಮಣಂಗಭಿಮುಖನಾಗಿ,

ಅಟೆಗಂಡಿನೊಳೇಂ ಕಯ್ದುವ ।
ನುಟಿ ಶಕ್ತಿಯೊಳಾದ ಸಾವನೆಂತಾನುಂ ಮುಂ- ॥
ಕಟೆದಿಂ ಸಾಯದಿ ರಾಂ ತರ ।
ನುಟಿವಂತಾಡುಗುಮೆ ಚಕ್ರಧಾರಾಚಕ್ರಂ ॥೧೮೨॥

ಎಂದು ಮೂದಲಿಸಿ,

ತಿರಿಪೆ ಧರಾಚಕ್ರಂ ಕೋ ।
ವರ ಚಕ್ರದ ತೆಱದೆ ತಿರಿದುದೆಂಟುಂ ದೆಸೆ ತ- ॥
ಳ್ತುರಿದುವು ಚಕ್ರದ ಬಿಸುಪಿಂ ।
ಸುರಸಂಕುಲಮಗಿದು ತೆಗೆದುರ್ದಿದೆಡೆಯಿಂದಂ ॥೧೮೩॥

ಆಗಳದಂ ಕಂಡು,

ಕಾವವರಾರೊ ಲಕ್ಷ್ಮಣನನಕ್ಕಟ ಸೀತೆಯ ಬೇಸಕ್ಕೆ ಕಾ-
ಲಾವಧಿಯಾದುದಿಲ್ಲೆನೆ ಸುರಾಸುರ ಮಂಡಲಮಾರೆ ಹರ್ಷದಿಂ-
ರಾವಣಸೈನಿಕಂ ಕಪಿಬಲಂ ಬಿಱುತೋಡುವಿನಂ ತ್ರಿಲೋಕ ವಿ-
ದ್ರಾವಣನಿಟ್ಟನಾ ಖಚರಚಕ್ರಿ ಸುದರ್ಶನ ದಿವ್ಯಚಕ್ರದಿಂ ॥೧೮೪॥

ಅಂತಿಡುವುದುಮಾ ಚಕ್ರರತ್ನಂ ತನ್ನನಾಕ್ರಮಿಸಲಿರ್ದ ಹನುಮಾಂಗದಾದಿಗಳ ದಿವ್ಯಾಯುಧಂಗಳನೊಟ್ಟಯಿಸಿ ಲಕ್ಷ್ಮೀಧರನಂ ಮುಟ್ಟೆವಂದು ಮೂಸೂಟ್ಟಿಲವಂದಾತನ ಬಲದ ಮುಯ್ಪಿನ ಕೆಲದೊಳಿರ್ಪುದುಮದಂ ಲಕ್ಷ್ಮೀಧರನವಲೋಕಿಸುತ್ತುಮಿರೆ ರಾಮಸ್ವಾಮಿ ಲಕ್ಷ್ಮಣ ನಿನಗೆ ಚಕ್ರರತ್ನ ದೊರೆಕೊಂಡುದದನೆ ಕೊಂಡಿಡೆಂದು ಬೆಸಸುವುದಮದಕ್ಕೆ ಲಕ್ಷ್ಮಣಂ ದಕ್ಷಿಣ ಭರತಧಾತ್ರಿಗಭಯಹಸ್ತಮನಿಪ್ಪ ತನ್ನ ದಕ್ಷಿಣ ಹಸ್ತಮಂ ನೀಡೆ,

ಲಂಕಾನಾಥನ ಜಯವಧು ।
ಪಂಕಜನಾಭಂಗೆ ಕೂರ್ತು ರಣಮುಖದೆಡೆಯೊಳ್ ॥
ಮುಂ ಕೊಟ್ಟಟ್ಟಿದ ರನ್ನದ ।
ಕಂಕಣಮೆಂಬಂತೆ ಕೈಗೆವಂದುದು ಚಕ್ರಂ ॥೧೮೫॥

ಆಗಲ್ ಚಕ್ರಪಾಣಿ ಖಚರ ಚಕ್ರವರ್ತಿಯನಿಂತೆಂದಂ:

ನಿನ್ನ ನಚ್ಚಿನ ಚಕ್ರಮಂ ಬೆಸಕೆಯ್ಯಲೊಲ್ಲದೆ ಬಿಟ್ಟು ಬಂ-
ದೆನ್ನನಾಶ್ರಯಿಸಿತ್ತು ಕೆಮ್ಮನೆ ಕಾದಿ ಸಾಯದೆ ಲಂಕೆಯೊಳ್
ನಿನ್ನ ಪುತ್ರಕಳತ್ರ ಮಿತ್ರರೊಳೊಂದಿ ರಾಜ್ಯವಿಭೂತಿಯೊಳ್
ಮುನ್ನಿನಂತಿರು ಬೇಡಿಕೊಂಡಭಯಪ್ರದಾನಮನಣ್ಣನೊಳ್ ॥೧೮೬॥

ಅಸದಾಗ್ರಹಮಮಂ ಬಿಟ್ಟೊ।
ಪ್ಪಿಸು ಸೀತಾದೇವಿಯಂಜಗಜಗಜನನಿಯ ನ-॥
ರ್ಚಿಸು ರಾಮಸ್ವಾಮಿಯ ಚರ।
ಣ ಸರೋರುಹಮಮಂ ಕಿರೀಟಮಣಿಮಂಜರಿಯಿಂ ॥೧೮೭॥

ಎನೆ ದಶಮುಖಂ ಕೋಪಶಿಖಿಯಿಂ ಸಂದುವ ಸೊಡರಂತುದ್ದಮುರಿದು,

ಎಲೆ ಪಾಱುಂಬಳಿ ಪೋಗೆ ಪೋದುದೆ ಸುಮಿತ್ರಾ ಪುತ್ರ ಮತ್ಪೌರುಷಂ
ಪಲವಂ ನೀಂ ಗಿಣಿ ಯಂದದಿಂ ಗಱಪದಿರ್ಕೈಲಾಸಮಂ ತೂಗಿದೀ
ತೊಲೆಯೊಳ್ದಕ್ಷಿಣ ಬಾಹುದಂಡದೊಳಿದಿರ್ಚಲ್ಗಂಡರಾರೆಂದು ಮೈ-
ಗಲಿ ಪಾಯ್ದಂ ರಥದಿಂ ನೆಲಕ್ಕೆ ಜಡಿಯುತ್ತುಂ ಚಂದ್ರಹಾಸಾಸಿಯಂ ॥೧೮೮॥

ಅಂತು ಪೊಡರ್ಪುಗಿಡದತಿ ಜವದಿನೆಯ್ತರ್ಪುದಂ ಕಂಡು ಕೋಟಕ ಶಿಲೆಯನೆತ್ತಿದ ಮಹಾಸತ್ವಂ ಸುದರ್ಶನಚಕ್ರದೊಳಿಡುವುದುಂ,

ಹೃದಯಂ ಸೀತಾನಿಮಿತ್ತಂ ಮನಸಿಜನಿಸೆ ಪಂಚೇಷುವಿಂ ಭಿನ್ನಮಾಗಿ-
ರ್ದುದಱಿಂ ಲಕ್ಷ್ಮೀಧರಂ ಕೋಪದಿನಿಡೆ ಪೆಱತೇಂ ಚಕ್ರರತ್ನಕ್ಕೆ ಪಾಡಾ-
ದುದೆನಲ್ಪಟ್ಟುರ್ಚಿ ಬೆನ್ನಿಂ ಪೊಱಮಡೆ ವಿಗತಪ್ರಾಣನಾ ದಾನವೇಂದ್ರಂ
ತ್ರಿದಶೇಂದ್ರಂ ವಜ್ರದಿಂದಿಟ್ಟೊಡೆ ನಡುಗೆ ನೆಲಂ ಬೆಟ್ಟು ಬೀೞ್ವಂತೆ ಬಿಟ್ಟಂ ॥೧೮೯॥

ಅಂತು ಚಕ್ರಹತಿಯಿಂ ಧರಾಚಕ್ರ ದೊಳ್ಬಿಟ್ಟು,

ಅಸುರನನರ್ಘಶೋಣಮಣಿ ಭೂಷಣದೀಧಿತಿಯೊಲ್ಕಿರೀಟದೊಳ್
ಮಿಸುಗುವ ಪದ್ಮರಾಗರುಚಿಯೊಳ್ ಪೊಱಪೊಣ್ಮುವ ರಕ್ತವಾರಿಯೊಳ್
ಮುಸುಕಿ ರಣಾವಲೋಕನ ಕುತೂಹಲದಿಂ ನೆರೆದಪ್ಸರೋಗಣಾ-
ಕ್ಕಸುರಕುಲಾಧಿದೇವತೆ ಚಿತಾನಲನಿಂ ಸುಡುವಂತೆ ತೋಱಿದಂ ॥೧೯೦॥

ಅಸಿರತ್ನಂ ಚಕ್ರರತ್ನಂ ಬಡೆದನಮಿತ ಶಸ್ತ್ರಾಧಿದೈವಂಗಳಂಸಾ-
ಧಿಸಿದಂ ಕೈಲಾಸಮಂ ಚಾಳಿಸಿದನಖಿಲದಿಕ್ಪಾಲರಂ ಗೆಲ್ದನಂತ-
ಪ್ಪಸುರೇಂದ್ರಂ ತನ್ನ ಶಸ್ತ್ರಾನನದೊಳೆ ಮರಣಪ್ರಾಪ್ತನಾದಂ ದಲೆಂದಂ-
ದ ಸತೀಸಂಭೋಗಕೇಳೀರತರುಱಿದವರ್ಗಳ್ ಸಾವುದಿನ್ನಾವ ಚೋದ್ಯಂ ॥೧೯೧॥

ಅಂತು ದಶಾನನಂ ಯಮಾನನಮಂ ಪುಗುವುದುಂ,

ಸುರಿದುದು ಪುಷ್ಪವೃಷ್ಟಿ ಸುರದುಂದುಭಿ ಘೂರ್ಣಿಸಿದತ್ತುಪೇಂದ್ರನಂ
ಪರಸಿದುದಟ್ಟಿಱಿಂ ಸುರಗಣಂ ಮಿಳಿರ್ದತ್ತು ಜಯಧ್ವಜಂ ನಿಶಾ-

ಚರಬಲಮೋಡಿದತ್ತಭಯ ಘೋಷಣೆಯುಣ್ಮೆ ದುದಬ್ಧಿ ಘೋಷಮಂ
ಪರಿಭವಿಸಿತ್ತು ವಾನರಪತಾಕಿನಿಯೊಳ್ ವಿಜಯಾನಕಸ್ವನಂ ॥೧೯೨॥

ಆಗಳವನೀತಲದೊಳ್ ಬಿದ್ದಿರ್ದ ರಾವಣನಂ ವಿಭೀಷಣಂ ಕಂಡು ಸಹೋದರ ಸ್ನೇಹಂ ಕಾರಣಮಾಗೆ ಮೂರ್ಛೆವೋಗಿ ಶೀತಲಕ್ರಿಯೆಯಿನೆಂತಾನುಮೆಚ್ಚತ್ತು ಮತ್ತಮತಿ ಪ್ರಲಾಪಂಗೆಯ್ದು ಶೋಕವಿಕಲನಾಗಿರ್ದನಿತ್ತ ರಾವಣಂಗೆ ಮರಣವಾದುದನಱಿದು ಚಂದ್ರಾನನೆಯುಂ ಚಂದ್ರಿಕೆಯುಂ ಪ್ರವರೆಯುಂ ರಂಭೆಯುಮೂರ್ವಶಿಯುಂ ಮಂಡೋದರಿಯುಂ ಕಮಲೆಯುಂ ಕಮಲಾನನೆಯುಂ ರುಕ್ಮಿಣಿಯುಂ ರತ್ನಮಾಲೆಯುಂ ಶ್ರೀಕಾಂತೆಯುಂಶ್ರೀಮತಿಯುಂ ಶ್ರೀಮಾಲೆಯುಂ ಸಂಧ್ಯಾಮಾಲೆಯುಂ ತಟನ್ಮಾಲೆಯುಂ ಚಂದ್ರೆಯುಮನಂಗಸೌಂದರಿಯುಮಾನಂದೆಯುಂ ವಸುಂಧರೆಯುಂ ಪದ್ಮಾವತಿಯುಂ ಪ್ರಭಾವತಿಯುಂ ಭಾನುಮತಿಯುಂ ಧೃತಿಯುಂ ಮನೋವೇಗೆಯುಂ ರತಿಕಾಂತೆಯುಮೆಂಬಿವರ್ ಮೊದಲಾಗೆ ಪದಿನೆಣ್ಸಾಸಿರ್ವರಂತಃ-ಪುರಪುರಂಧ್ರಿಯರ್ ಬೇಗಂ ಬಂದಾತನ ಕಳೇವರಮಂ ಕಂಡು ತಟಿಕ್ಕೈಸಿಕೊಂಡು ಮೂಛೆವೋಗಿರ್ದುಕಿಱಿದು ಬೇಗದಿನೆಚ್ಚು ವಿಷಾದವಹ್ನಿ ಗಾಜ್ಯಾಹುತಿಗಳಾಗಿ,

ನಿನ್ನಂತವುರದ ಕಾಂತೆಯ ।
ರನ್ನೋಡದೆ ಸುಡಿಯದಿಂಬು ಕೆಯ್ಯದೆ ಪದೆಪಿಂ ॥
ಮನ್ನಿಸೆ ಮುನಿದ ತೆಱದಿಂ ।
ನಿನ್ನಿರ್ಪಿರವಾವ ಕಾರಣಂ ಖಚರಪತೀ ॥೧೯೩॥

ಕರಿ ಹರಿ ಹಂಸ ಮೀನ ಮಕರಾದಿ ಮಹಾಧ್ವಜವಾರ ಮುಂದೆ ಪೇಟಿ
ಪರಿವುವೊ ನಿನ್ನ ಬೆಳ್ಗೊಡೆಯ ತಣ್ಣೆಲಲೊಳ್ ನಿಲಲಾರೊ ಯೋಗ್ಯರಾರ್
ಸುರನರಕಿನ್ನರೋರಗರನಾಲ್ವೆಸಕೆಯ್ಯುವುದಾತ್ತರಿನ್ನದಾರ್
ಭರತವಸುಂಧರಾವಳಯಮಂ ಪರಿಪಾಲಿಸುವರ್ ದಶಾನನಾ ॥೧೯೪॥

ದುರ್ಮತಿ ಧಾತ್ರನಿಂ ನಿನಗೆ ದುಃಸ್ಥಿತಿಯಾದುದು ನಿನ್ನ ಪೆಂಡಿರಿ-
ನ್ನಾರ್ಮದುಮಾಸದೊಳ್ ನಿಜವಿನೋದವನಂಗಳ ಪಾದಪಂಗಳೊಳ್
ಪೆರ್ಮೊಲೆಯೊತ್ತಿನಿಂ ಕುರವಕಕ್ಕೆ ವಿಕಾಸಮನುಂಟುಮಾಟ್ಪರಿ-
ನ್ನಾರ್ಮಧು ಬಿಂದು ಸೇಕದೊಳೆ ಕೇಸರದೊಳ್ ಪಡೆವರ್ವಿಕಾಸಮಂ ॥೧೯೫॥

ದಿವಮಂ ನೀಂ ಪುಗೆ ಖೇಚರೇಂದ್ರ ತರಲಾಪಾಂಗಪ್ರಭಾಪಾತದಿಂ-
ದವ ರೋಧಾಂಗನೆ ಯರ್ಕಲಾರ್ ತಿಲಕದೊಳ್ ಪುಗೊಂಚಲಂ ಮಾಟ್ಪರಿ-
ನ್ನವನೀವಲ್ಲಭ ನಿನ್ನನಂದನದಶೋಕಾನೋಕಹಕ್ಕಾರೊ ಪ-
ಲ್ಲವಮಂ ಪುಟ್ಟಸುವರ್ ವಿಲಾಸವತಿಯರ್ ಪಾದಪ್ರಹಾರಂಗಳಿಂ ॥೧೯೬॥

ಇಂಕಡುಕೆಯ್ದು ದಿಕ್ಪತಿಗಳಳ್ಕುವಿನಂ ತ್ರಿಜಗದ್ವಿಭೂಷಣ-
ಕ್ಕಂಕುಶವಿಟ್ಟು ದಿಗ್ಗಜಮನೋಡಿಸಲುಂ ವಿಜಯಾರ್ಧಶೈಲದಿಂ
ತೆಂಕಣಧಾತ್ರಿಯಂ ತನಗೆ ಕಂಕಣದಂತಿರೆ ಕೈಗೆ ಮಾಡಲುಂ
ಲಂಕೆಯನಾಳಲುಂ ನೆಱೆವ ಖೇಚರ ವಲ್ಲಭರಾರ್ ದಶಾನನಾ ॥೧೯೭॥

ಬಾಳಿಯನಂಜಿಸಿ ಭುಜಬಲ ।
ಶಾಳಿಯನೋಡಿಸಿ ಸಹಸ್ರಬಾಹುವನಿನ್ನಾರ್ ॥
ಬಾಳ ಮಸೆಯಿಂ ದಶಾನನ ।
ಕೀಟಿಸೌಳ್ಮಾಡುವರೊ ನೆಲದೊಳುಳ್ಳರಸುಗಳಂ ॥೧೯೮॥

ದಿವಿಜಭವನಕ್ಕೆ ಹಾ ದಾ ।
ನವೇಂದ್ರ ನೀನತಿಥಿಯಾದೆ ತುಡುವವರಿನ್ನಾರ್ ॥
ನವಮುಖಭೂಷಣಮಂ ಸ್ವೈ ।
ರವಿಹಾರದಿನೇಱುವನ್ನರಾರ್ ಪುಷ್ಪಕಮಂ ॥೧೯೯॥

ಇತ್ತ ಸುರಾಸುರರ್ ನೆರೆದು ಬೊಬ್ಬಿಡೆ ನೀಂ ಕಿಱುಗುಂಡನೆತ್ತುವಂ-
ತೆತ್ತಿದ ಬನ್ನಮಂ ಬಗೆಗೆ ತಂದು ಕುಬೇರ ಗಿರೀಂದ್ರಮೊರ್ಷೆ ಮ-
ಯ್ವೆತ್ತಿರೆ ನಿರ್ಝರೋದಕದಿನೋಕುಳಿಯಾಡುವಿನಂ ದಶಾಸ್ಯ ದೇ-
ವೋತ್ತಮಕಾಮಿನೀಜನದ ತೋಳ್ವಲೆಯೊಳ್ ತೊಡರಲ್ಕೆ ತಕ್ಕುದೇ ॥೨೦೦॥

ಎತ್ತುವಿನಂ ಮಹೋತ್ಸವ ಪತಾಕೆಗಳುತ್ಸವತೂರ್ಯ ನಿಸ್ವನಂ
ಬಿತ್ತರಿಪನ್ನಮಂತಕನ ಬಾರಿಗೆ ಸೋವತಮಾದೆ ದೇವ ದು-
ರ್ವೃತ್ತವಿರೋಧಿ ನಿರ್ದಲನ ಕಾಳೆಗದೊಳ್ ಪಿಡಿಪೆತ್ತ ಸತ್ತ ಬೆ-
ನ್ನಿತ್ತ ವಿರೋಧಿಭೂಭುಜರ ಖೇಚರರಾಜರ ರಾಜಧಾನಿಯೊಳ್ ॥೨೦೧॥

ಎಂದತಿಪ್ರಲಾಪಂಗೆಯ್ಯುತ್ತುಂ ರಾವಣನ ಚರಣೋಪಾಂತದೊಳ್ ಮಯ್ಯನೀಡಾಡಿ ಹಾ ಹಾ ದಶಾಸ್ಯ ಕೀರ್ತಿವಲ್ಲರೀವಲಯಿತದಿಶಾಸ್ಯ ಹಾ ಹಾ ವಿಲಾಸ ಮಕರಧ್ವಜ ಖೇಚರಕುಲಧ್ವಜ ಹಾ ಹಾ ತ್ರಿಲೋಕವಿಜಯಸ್ತಂಭ ಜಯ ಶ್ರೀಸಾಲ ಭಂಜಿಕಾರಂಜಿತ ಭುಜಸ್ತಂಭ ಹಾ ಹಾ ದುರ್ವಾರದೈತ್ಯ ದರ್ಪ ವಿಧ್ವಂಸ ಸರಸ್ವತೀಕರ್ಣಾವತಂಸ ಹಾ ಹಾ ರಿಪುನೃಪತಿ ಕಟಕ ವಿಟಪಿ ಕುಠಾರ ಖಚರಕಾಮಿನೀಪಯೋಧರ ಮಧ್ಯರಾಜಿತ ತರಳ ತಾರಹಾರ ಹಾ ಹಾ ವನಿತಾ ಯೌವನವನ ವಸಂತ ಅನವರತ ಚತುರ್ವಿಧ ಪುರುಷಾರ್ಥ ಚಿಂತಿತ ಸ್ವಾಂತ ನಿನ್ನಂತವುರದ ಕಾಂತಾಜನದ ಕದಂಪಿನೊಳ್ ಮೃಗಮದ ಪತ್ರಲೇಖೆಯಂ ಬರೆಯಲುಂ ಬಾಹುಲತೆಯೊಳ್ ಪಿಂಡುಗಂಕಣಮನೇಱೆಸಲುಂ ಘನಸ್ತನ ಮಂಡಲದೊಳ್ ಮಲಯರುಹ ಚರ್ಚೆಯನೊಡರ್ಚಲುಂ ನಿತಂಬ ಬಿಂಬದೊಳ್ ನೂಲ ತೊಂಗಲಂ ತೊಡರ್ಚಲುಂ

ಪವಪಯೋರುಹದೊಳ್ ಮಣಿನೂಪುರಮನಳವಡಿಸಲುಮತಿ ಪರಿಚಯದಿನಲಸಿದಂತೆ ದಿವಿಜಕಾಂತಾಸಂಭೋಗ ಸುಖ ಲೀಲಾಲಸನಾಗಿ,

ದಿಗಿಭಕ್ಕೆ ಕುಲಾದ್ರಿಗೆ ಪ ।
ನ್ನಗಪತಿಗತಿ ಭಾರಮಾಗೆ ಭೂ ಭಾರ ಮನೇ- ॥
ಕೆ ಗಡಂ ನೀನೊಪ್ಪಿಸಿ ವ ।
ಜ್ರಿಗೆ ತಲ್ಲಣಮಾಗೆ ದಿವಕೆ ದಾಟೆಯನಿಟ್ಟೈ ॥೨೦೨॥

ಎಂದು ಪಲತೆಱದಿಂ ಪಳಯಿಸುವ ಪೌಲಸ್ತ್ಯನ ಕುಲಸ್ತ್ರೀಯರಂ ಕಂಡು ರಾಮಸ್ವಾಮಿ ಕರುಣಿಸಿ ರಾವಣಂಗೀಮರಣಮಾತನ ದುರ್ವ್ಯಸನದಿಂದಾದುದಲ್ಲದೆಮ್ಮಿಂದಾದುದಲ್ತಾರ್ಗಂ ಸಂಸಾರ-ಸ್ವರೂಪಮಿಂತುಟೆ ವಲಮಾರ ಜೀವನಮುಂಜವ್ವನಮುಂ ಧನ ಧಾನ್ಯಮುಮಿಷ್ಟ-ಸಂಯೋಗಮುಂ ಕ್ಷಣದೆ ನಶ್ವರಂಗಳದಱಿನವರ್ಗಱಲದಲಸದೆ ಸೈರಿಪುದೆಂದನಿಬರುಮಂ ಸಂತಯಿಸಿ,

ಬವರಂ ಗೆಯ್ದಾತಂಗಾ ।
ಯ್ತುವಸಾನಂ ತಕ್ಕುದಲ್ತು ಪಗೆಗೊಳ್ವುದು ಮಿ- ॥
ಕ್ಕವರೊಳ್ ನಮಗೆಂದಂ ರಾ ।
ಘವಂಗೆ ಸಚ್ಚರಿತದೆಸಕಮೊಂದಚ್ಚರಿಯೇ ॥೨೦೩॥

ಎಂದು ತಾನುಂ ಲಕ್ಷ್ಮಣನುಮಾಸೆಯನೇಱೆ ಪಲರ್ ಸಾಮಂತರ್ ಬಳಸಿಬರೆ ಮಂಡೋದರಿಯ ಸಮೀಪಕ್ಕೆವಂದಾಕೆಯ ಶೋಕಮಂ ಸಂಸಾರಸ್ವರೂಪಮಂ ಪೇೞ್ದು ಪಿಂಗಿಸಿ ಬೞಿಯಂ ಕರ್ಪೂರಾಗರು ಗೋಶೀರ್ಷಚಂದನಾದಿಗಳಿಂ ರಾವಣನಂ ಯಥಾವಿಧಿಯಿಂ ಸಂಸ್ಕರಿಸಿ ತದನಂತರಮಿಂದಗಿ ಮೇಘವಾಹನ ಕುಂಭಕರ್ಣ ಮಯ ಮಾರೀಚಾದಿಗಳಂ ಬರಿಸಿ ಸೆಱೆಯಂ ಬಿಡಿಸಿ ಪಲತೆಱದಿನವರ ಶೋಕಮನುಪಶಮಿಸಿ,

ರಾವಣನೊರ್ವನೆ ಕಟಿದಂ ।
ನೀವಿನಿಬರುಮೞ್ಕಱಿಂ ವಿಭೀಷಣನೊಳ್ ಸ- ॥
ದ್ಭಾವಮನೆ ಮೆಱೆದು ಖಚರ ।
ಶ್ರೀ ವಿಭವಮನೆಂದಿನಂದದಿಂದನುಭವಿಸಿಂ ॥೨೦೪॥

ಎಂಬುದುಂ ಕುಂಭಕರ್ಣಾದಿಗಳ್ ರಾಮಲಕ್ಷ್ಮಣರ ನಿಷ್ಕಷಾಯುತ್ವಮುಮಂ ಸಂಸಾರಭೀರುತ್ವಮುಮಂ ಧೈರ್ಯಮುಮಂ ಬಾಹುವೀರತ್ವಮುಮಂ ಮೆಚ್ಚಿ ಪೊಗೞ್ದಿನ್ನೆಮಗೆ ಸಂಸಾರಸುಖಂ ಸಾಲ್ಗುಮೆಂದು ಭೋಗನಿರ್ವೇಗಪರರಾಗಿ ನುಡಿದು ರಾಮಲಕ್ಷ್ಮಣರ್ವೆರಸು ಪದ್ಮಸರೋವರದೊಳ್ ಜಲದಾನಕ್ರಿಯೆಯಂ ನಿರ್ವರ್ತಿಸಿದಿಂ ಬೞಿಯಂ ನೇಸರ್ ಪಡುವ ಸಮಯದೊಳ್,

ಅನುಪಮರಜುಸಾಸಿರ್ವರ್ ।
ಮುನಿಗಳ್ವೆರಸಪ್ರಮೇಯ ಮುನಿನಾಥರ್ ವಂ- ॥
ದಿನಪಥದಿಂಲಂಕೆಯ ನಂ ।
ದನದೊಳ್ ನೆಲೆಗೊಂಡು ನಿಯಮನಿಯಮಿತರಿರ್ದರ್ ॥೨೦೫॥

ಅಂತಿರ್ಪುದು,

ಪ್ರಕಟಿಸಿದುದು ಶುಕ್ಲಧ್ಯಾ ।
ನ ಕೃಶಾನುಜ್ವಾಲೆಯಿಂದವರ್ಸುಡೆ ಮೂಲ- ॥
ಪ್ರಕೃತಿಗಳೊಳ್ ಘಾತಿಗಳಂ ।
ಸಕಲ ಪದಾರ್ಥಾವಭಾಸಿ ಕೇವಲಬೋಧಂ ॥೨೦೬॥

ಇತ್ತ ಧಾತಕೀಷಂಡದೊಳ್ ತೀರ್ಥಂಕರಕುಮಾರ ಜನ್ಮೋತ್ಸವಮಪ್ಪುದುಂ ಚತುರ್ನಿಕಾಯ ದೇವನಿಕಾಯಂ ಭಗವಜ್ಜನ್ಮಾಭಿಷವಣಮಂ ತೀರ್ಚಿ ಲಂಕೆಯ ಮೇಲೆ ಬರುತ್ತುಂ ಕುಸುಮಾಯುಧೋದ್ಯಾನದೊಳ್ ಸರ್ವಜ್ಞತ್ವಮಂ ಪೆತ್ತಿರ್ದಪ್ರಮೇಯ ಭಟ್ಟಾರಕರಂ ಕಂಡು ಬಲಗೊಂಡು ಪೊಡೆವಟ್ಟು ಪೂಜಿಸುವ ಸಮಯದೊಳ್ ಭೋಂಕನೆ ಪಸರಿಸುವ ಶಂಕಪಟಹಾದಿ ವಿವಿಧವಾದ್ಯರವಂಗಳಿಂ ರಾಮಲಕ್ಷಣರುಂ ವಾನರಧ್ವಜರುಂ ಕೇಳ್ದು ಜಿನಪೂಜೋತ್ಸವ ಪಟಹರವಂಗಳೆಂದಜೆದಿಂದ್ರಜಿತ್ ಮೇಘವಾಹನ ಕುಂಭಕರ್ಣಾದಿಗಳಿಂ ಪರಿವೃತರಾಗಿ ಭಟ್ಟಾರಕರಿರ್ದೆಡೆಗೆ ಪೋಗಿ,

ಆ ರಘುವಂಶಕೇತು ಬಲಗೊಂಡು ಲಲಾಟದೊಳೊಪ್ಪೆ ಹಸ್ತಪಂ-
ಕೇರುಹಕುಟ್ಮಲಂ ವಿನಮಿತಂ ವಿವಿಧಾರ್ಚನೆಯಿಂದಘೌಘಸಂ-
ಹಾರಕರಂ ಭವಾಂಬುನಿಧಿತಾರಕರಂ ನೆಗಟ್ದ ಪ್ರಮೇಯ ಭ-
ಟ್ಟಾರಕರಂ ರಘುಪ್ರವರನರ್ಚಿಸಿದಂ ಕವಿತಾಮನೋಹರಂ ॥೨೦೭॥

ಇದು ಪರಮಜಿನಸಮಯ ಕುಮುದಿನೀಶ್ವರಚಂದ್ರಮುನೀಂದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ರಘುವೀರವಿಜಯ ವರ್ಣನಂ
ಚತುರ್ದಶಾಶ್ವಾಸಂ



## ೧೫. ಸೀತಾಪರಿತ್ಯಾಗ ವರ್ಣನಂ

ಶ್ರೀರಾಮಾರಮಣಂ ವಾಕ್ ।
ಶ್ರೀರಾಮಾವಲ್ಲಭಂ ಯಶಃಶ್ರೀ ಕಾಂತಂ ॥
ವೀರಶ್ರೀಪತಿ ಮುನಿವ್ರಂ ।
ದಾರಕಪದ ವಿನತನಾದನಭಿನವಪಂಪಂ ॥೧॥

ಅಂತು ನಿರ್ಭರಭಕ್ತಿಯಿಂ ವಂದಿಸಿ ಸಂಸಾರಕ್ಷಯಕಾರಣಮಪ್ಪ ಧರ್ಮಮುಮನಾಪ್ತ ಗುಣಂಗಳುಮಂ ಜೀವಾದಿ ತತ್ವಭೇದಂಗಳುಂ ಭಟ್ಟಾರಕರ್ ಬೆಸಸೆ ಕೇಳ್ದು ಸಂತುಷ್ಟಚಿತ್ತನಾದನನಂತರಮಿಂದ್ರಜಿನ್ಮೇಘವಾಹನ ಕುಂಭಕರ್ಣ ಮಯ ಮಾರೀಚಾದಿಗಳ್ ತಂತಮ್ಮ ಭವಾಂತರಂಗಳನವರ್ ಬೆಸಸೆ ಕೆಳ್ದಲ್ಲಿಯೇ ದೀಕ್ಷೆಗೊಂಡರ್, ಮಂಡೋದರಿಯುಂ ನಾಲ್ವತ್ತೆಣ್ಸಾಸಿರ ವಿದ್ಯಾಧರಿಯರ್ವೆರಸು ಶಶಿಕಾಂತಾರ್ಯಿಕಾ ಸಮಕ್ಷದೊಳ್ ದೀಕ್ಷೆಗೊಂಡು ಶುಭಧ್ಯಾನ ತಾತ್ಪರ್ಯದಿನಿರ್ದಳಿತ್ತಲ್ ಪುನರ್ನಮಸ್ಕಾರಂಗೆಯ್ದು ಮಗುಟ್ದು ಸುಗ್ರೀವಾಂಗದ ಪ್ರಭಾಮಂಡಲ ಮರುತ್ಸುತ ವಿರಾಧಿತ ಪ್ರಮುಖ ವಿದ್ಯಾಧರ ಪರಿವೃತರ್ ತ್ರಿಜಗದ್ಭೂಷಣ ಗಜಾರೂಢರಾಗಿ,

ಗುಡಿಯುಂ ಸಿಂದಂಗಳುಂ ಮುಂದುರು ವರಿಯೆ ದಿನಾಧೀಶಬಿಂಬಂಬರಂ ಧೀಂ-
ಕಿಡೆ ಶಂಖಧ್ವಾನಮಾಶಾವಿವರಮನಿತುಮಂ ತೀವೆ ಭೇರೀರವಂ ಬೆ-
ಳ್ಗೊಡೆಯುಂ ಚಿತ್ರಾತಪತ್ರಂಗಳುಮಜನಿಸೆ ಚಂಡಾಂಶುವಂ ಮುಟ್ಟೆವಂದರ್
ಕಡುಚೆಲ್ವಂಬೆತ್ತ ಲಂಕಾಪುರದುಪವನಮಂ ರಾಮಲಕ್ಷ್ಮೀಧರರ್ಕಳ್ ॥೨॥

ಅಂತು ಬಂದು,

ಜಕ್ಕರ ಕಾಪಿನೊಳ್ ನಡೆಯೆ ಮುಂದೆ ಸುದರ್ಶನ ಚಕ್ರರತ್ನಮಿ-
ರ್ವಕ್ಕದೊಳಂ ವಿಯಚ್ಚರ ಕುಲಪ್ರಭುಗಳ್ ಬರೆ ಭೂಷಣಾಂಶುಗಳ್-
ತೆಕ್ಕನೆ ತೀವುವಂತು ನಭಮಂ ದನುಜಾಧಿಪರಾಜಧಾನಿಯಂ
ಪೊಕ್ಕರಯೋಧ್ಯೆಯಂ ಪುಗುವವೋಲಸಮಾನಬಲರ್ ಬಲಾಚ್ಯುತರ್ ॥೩॥

ಅಂತು ಪುರಮಂ ಪೊಕ್ಕು ರಾಜವೀಥಿಯೊಳಗನೆ ಸೀತಾದರ್ಶನೋತ್ಸುಕನಾಗಿ ಬರ್ಪರಾಮಸ್ವಾಮಿಯ ಮನಮನಱಿದು ಚಾಮರಗ್ರಾಹಿಣಿಯರ್ ದೇವ ಸೀತಾದೇವಿಯರಿತ್ತಲೀ ಪುಷ್ಪಪ್ರಕೀರ್ಣಕಮೆಂಬ ನಗದ ನಂದನದೊಳಿರ್ದರೆಂದು ಬಿನ್ನವಿಸುವುದುಮಾದೆಸೆಗೆ ವಿಜಯವಾರಣಮನಣೆದು ನೂಂಕಿ ರಾಘವಂ ಬರ್ಪ ಸಮಯದೊಳ್ ಸೀತಾದೇವಿಯ ಕೆಲದೊಳಿರ್ದ ಖೇಚರಿಯರ್ ತನ್ನ ಬರವನಱಿಪುವನ್ನೆಗಮೆಯ್ದೆವಂದು,

ಬಂಬಳನೆ ಬಾಡಿ ಮಂಜಿಱಿ ।
ದಂಬುಲತೆಯಂತಿರಿರ್ದ ಜಾನಕಿಯಂ ನೀ- ॥
ಲಾಂಬರನೀಕ್ಷಿಸಿ ವಿಜಯ ।
ಸ್ತಂಬೇರಮದಿಂ ಸಮುತ್ಸುಕಂ ಧರೆಗಿೞಿದಂ ॥೪॥

ಅಂತಾನೆಯಿಂದಿೞಿದು ಬರ್ಪ ವಲ್ಲಭವಿಲೋಕನ ಜನಿತ ಸಂಭ್ರಮದಿನಾಕಂಪ-ನಮನಪ್ಪುಕೆಯ್ದು,

ಇದಿರ್ವಂದು ಕೈಗಳಂ ಮುಗಿ ।
ದುದಯಿಸೆ ಪುಲಕಂಗಳುಣ್ಮೆ ಘರ್ಮಜಲಂಗಳ್ ॥
ಪದಪದ್ಮಕ್ಕೆ ಱಗಿರ್ದಳ್ ।
ಕೆದಱಿದ ಕುರುಳೋಳಿ ಮಱಸೆ ಮಱಿದುಂಬಿಗಳಂ ॥೫॥

ಆ ಸಮಯದೊಳ್,

ಸತಿಯ ಪತಿವ್ರತಾಗುಣಸಮೃದ್ಧಿಗೆ ದರ್ಶನಶುದ್ಧಿಗಟ್ಟಿಱಿಂ
ಸ್ತುತಿಯಿಸಿ ನಿರ್ಜರರ್ ಕಱಿದು ಪೂಮಱಿಯಂ ವನನಾಂಗ ರಾಗದಿಂ-
ದತಿಶಯ ದಿವ್ಯಭೂಷಣಗಳಂಗಳಿನರ್ಚಿಸೆ ನೋಡಿ ನಾಡೆ ವಿ-
ಸ್ಮಿತಮನರಾಗಿ ಜಾನಕಿಗೆ ಕೈಮುಗಿದರ್ ಖಚರಾಧಿನಾಯಕರ್ ॥೬॥

ಜಾನಕಿಯ ಶೀಲಮಂ ದಿವಿ ।
ಜಾನೀಕಮ ಮೆಚ್ಚೆ ಪೊಗೞ್ದು ಪೂಜಿಸೆ ರಾಮಂ- ॥
ಗಾನಂದಪುಲಕಮಾದುವು ।
ಮಾನಿನಿಯರ್ ಮಹಿಮೆಗಿಂತು ನೋಂತರುಮೊಳರೇ ॥೭॥

ಅನಂತರಂ ಸೀತಾದೇವಿಗೆ ಲಕ್ಷ್ಮೀಧರನೆಱಗಿ ಪೊಡೆವಟ್ಟೊಡಾತನಂ ಪರಸಿ ಮನ್ನಿಮಿತ್ತಂ ಕರಂ ಸೇದೆವಟ್ಟರೆಂದು ಮನ್ಯುಮಿಕ್ಕು ಶೋಕಿಸುತ್ತಿರ್ಪುದುಂ ಲಕ್ಷ್ಮಣನುಂ ರಾಮನುಂ ಸಂತಯಿಸಿ ದಿಂ ಬೞಿಯಂ ಪ್ರಭಾಮಂಡಲನಂ ಕಂಡು ಪೊಡೆವಟ್ಟೊಡಾಡತನತಿ ಪ್ರೀತಿಯಿಂ ಪರಸೆ ಮತ್ತೆ ಸೀತಾದೇವಿಗೆ ಸುಗ್ರೀವ ನಳ ನೀಲಾಂಗದ ಮುರುತ್ಸುತ ಚಂದ್ರಾಭ ಸುಷೇಣಜಾಂಬವಾದಿಗಳಂ ಪೆಸರ್ವೆಸರೊಳೆ ಪೇೞ್ದು ತೋಱಿ ಸಂತೋಷಮಂ ಮಾಡೆ,

ಸತಿಯುಂ ತಾನುಂ ಮದಾಂಧದ್ವಿಪಮನೊಡನೆ ಬಂದೇಱೆ ವಿದ್ಯಾಧರಾಧೀ-
ಶತನೂಜರ್ ಸುತ್ತಲುಂ ದೊಮ್ಮಳಿಸಿ ನಡೆಯೆ ಬೇಱೊಂದು ಪೂರ್ಣೇಂದುಬಿಂಬಾ-
ಕೃತಿಯಿಂ ಶ್ವೇತಾತಪತ್ರಂ ಸೊಗಯಿಸಿ ದೆಸೆಯಂ ತೀವೆ ತೂರ್ಯಪ್ರಣಾದಂ
ಜಿತಶಕ್ರಾವಾಸಮಂ ರಾವಣನರಮನೆಯಂ ರಾಘವಂ ಬಂದು ಪೊಕ್ಕಂ ॥೮॥

ತ್ರಿಜಗದ್ಭೂಷಣಮಾದ್ಯ ।
ದ್ಗಜಮಂ ಬಂದೇಱೆ ಪೊಳೆಯಿಸುತ್ತಂಕುಶಮಂ ॥
ವಿಜಿಗೀಷು ಲಕ್ಷ್ಮಣಂ ಮದ ।
ಗಜದಡಕಿಲಿದೆನಿಸಿ ಪೊಕ್ಕನೊಡನರಮನೆಯಂ ॥೯॥

ಅಂತರಮನೆಯಂ ಪೊಕ್ಕಲ್ಲಿಯ ಶಾಂತಿಜಿನಭವನಮಂ ರಾಮಲಕ್ಷ್ಮಣರ್ ಸಕಲ ವಿದ್ಯಾಧರರ್ ಸಹಿತಂ ಬಲಗೊಂಡು ಜಿನಪತಿಯಂ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸಿ ದಿವ್ಯಾರ್ಚನೆಯಿಂದರ್ಚಿಸಿದಿಂ ಬೞಿಕ್ಕೆ ಸಹಸ್ರಾಂತಃಪುರ ಪ್ರಧಾನೆಯಪ್ಪ ವಿದಗ್ಧವೆಸರ ತನ್ನ ಮಹಾದೇವಿಯಂ ವಿಭೀಷಣಂ ರಾಮಸ್ವಾಮಿಯಲ್ಲಿಗಟ್ಟುವುದುಮಾ ಮಹಾನುಭಾವೆ ಬಂದು ರಾಮಲಕ್ಷ್ಮರ್ಗಂ ಸೀತಾದೇವಿಗಮೆಱಗಿ ಪೊಡೆವಟ್ಟೆಮ್ಮರಮನೆಗೇಟ್ರ್ನಿಂ ಕಾಲ್ಗರ್ಚುವೆನೆಂಬವ-ಸರದೊಳ್ ವಿಭೀಷಣನುಂ ಬಂದು ಬಿಜಯಂಗೆಯ್ಯಿಮೆಂದು ಸಿಂಹಗರುಡವಾಹನಾರೂಢರಂ ಮಹಾವಿಭೂತಿಯಿಂ ನಿಜರಾಜಭವನಕ್ಕುಯ್ದು ಸಿಂಹಾಸನದೊಳಿರಿಸಿ ಮಣಿಭಾಜನದೊಳರ್ಘ್ಯ-ಪಾದ್ಯಮಂ ಕೊಟ್ಟು,

ಅವರ್ಗೆ ವಿಭೀಷಣನತ್ಯು ।
ತ್ಸವದಿಂ ಬಿರ್ದಿಕ್ಕಿ ದಿವ್ಯಮಣಿಭೂಷಣ ದಿ- ॥
ವ್ಯ ವಿಲೇಪನ ದಿವ್ಯಾಂಬರ ।
ನಿವಹಮನೋಲಗಿಸಿ ವಿನಯಮಂ ಪ್ರಕಟಿಸಿದಂ ॥೧೦॥

ಅಂತು ನಿರಂತರೋತ್ಸವದಿಂ ಕತಿಪಯದಿನಂಗಳ್ ಪೋದಿಂ ಬೞಿಯಮೊಂದು ಶುಭದಿನಮುಹೂರ್ತದೊಳ್,

ಬೆಸಕೆಯ್ದಪ್ಪುದು ಚಕ್ರರತ್ನಮಖಿಳೋರ್ವೀಚಕ್ರಮಂ ನೀಮೆ ಪಾ-
ಲಿಸಿಮಾಳೋಳಿಯೊಳಿರ್ಕೆ ರಾಜಕುಲಮೆಂದುತ್ಸಾಹ ತೂರ್ಯಸ್ವನಂ
ದೆಸೆಯಂ ತೀವೆ ವಿಭೀಷಣಂ ಬೆರಸು ಸುಗ್ರೀವಾದಿಗಳ್ ರಾಘವಂ-
ಗೆ ಸುಮಿತ್ರಾತನಯಂಗೆ ರಾಜ್ಯ ಸವನ ಪ್ರೋತ್ಸಾಹಮಂ ಮಾಡಿದರ್ ॥೧೧॥

ಅಂತು ಪೂರ್ವಜನ್ಮ ಸಂಚಿತಸುಕೃತದಿಂ ದಿವ್ಯಾಯುಧ ವಸ್ತುವಾಹನಂಗಳುಮಂ ದಿವ್ಯಸ್ತ್ರೀಯರುಮಂ ಸ್ವೀಕರಿಸಿ ಮುನ್ನೆ ತಮ್ಮ ಬರ್ಪ ಸಮಯದೊಳ್ ಮದುವೆನಿಂದರಸಿಯರಂ ತರಿಸಿ ಶುಭದಿನಮುಹೂರ್ತದೊಳ್,

ಆನತಿಶಯ ರೂಪವಿದ್ಯಾ ।
ವಿನಯಸಮನ್ವಿತೆಯರಂ ಮಹೋತ್ಸವ ಪಟಹ- ॥
ಧ್ವನಿ ಪೊಣ್ಮೆ ಚಂದ್ರವರ್ಧನ ।
ತನುಜೆಯರಂ ಪಡೆದು ಮದುವೆನಿಂದನುಪೇಂದ್ರಂ ॥೧೨॥

ಅಂತು ರಾಮಲಕ್ಷ್ಮಣರ್ ಸುಖದಿನಲ್ಲಿ ಕೆಲವು ಕಾಲಮಿರ್ದರಿತ್ತಲಿಂದ್ರಜಿತ್ ಮೇಘವಾಹನರ್ ಕೇವಲ ಜ್ಞಾನಮಂ ಪಡೆದು ನರ್ಮದೆಯ ತಡಿಯೊಳ್ ಮುಕ್ತಿಪ್ರಾಪ್ತರಾದರದಱಿಂದಾ ತೊಱೆ ಮೇಘರವೆಯೆಂಬ ಪೆಸರ ತೀರ್ಥಮಾದುದು. ತೂರ್ಣಮತಿಯೆಂಬ ನಗನಿತಂಬದೊಳ್ ಜಂಬುಮಾಲಿ ತಪಂಗೆಯ್ದಹಮಿಂದ್ರಸ್ಥಾನದೊಳ್ ಪುಟ್ಟಿದಂ. ಕುಂಭಕರ್ಣಂ ನರ್ಮದೆಯ ತಡಿಯೊಳ್ ಕೇವಲ ಜ್ಞಾನಪ್ರಾಪ್ತನಾಗಿ ಮೋಕ್ಷಕ್ಕೆ ಸಂದುದಱಿನಾ ಪೊೞೆಗೆ ಪೀಠರವೆಯೆಂಬ ಪೆಸರಾಯ್ತು. ಮಾರೀಚನುಂ ಕಲ್ಪಗತನಾದಂ. ಮಯನುಮಂಬರಚಾರಣತ್ವಮುಮಂ ಸರ್ವೌಷಧರ್ಧಿತ್ವಮುಮನವಧಿಜ್ಞಾನಮುಮಂ ಪೆತ್ತು ಮಲರಹಿತನಾಗಿ ನೆಗಟ್ದು ಜೀವಿತಾವಧಿಯೊಳೀಶಾನಕಲ್ಪಕ್ಕೆ ಪೋದಂ. ಮಂಡೋದರೀಗಣಿನಿಯರುಮನೇಕಕಾಲಂ ದರ್ಧರ ಕಾಲಕ್ಲೇಶ ತಪದಿಂ ನೋಂಪಿಗಳಂ ಚರಿಯಿಸಿ ವಿಹಾರಿಸುತ್ತಂ ವೈತರಣೀ ನಗನಿತಂಬದ ಶಾರ್ದೂಲ ಗುಹೆಯೊಳಗಿರ್ದು ಧರ್ಮಧ್ಯಾನದಿಂ ಮುಡಿಪಿ ಬೞೆಯಮೀಶಾನಕಲ್ಪಗತೆಯಾದಕುೞೆದಸಿಯರುಗ್ರೋಗ್ರ ತಪಂಗೆಯ್ದು ಶುಭಧ್ಯಾನದಿಂ ಮುಡಿಪಿ ತಂತಮ್ಮ ಸ್ಥಾನದೊಳ್ ಪುಟ್ಟಿದರ್ ಮತ್ತಿತ್ತ ಲಂಕೆಯೊಳ್ ರಾಮಲಕ್ಷ್ಮಣರ್ ಚಕ್ರವರ್ತಿಗಳಾಗಿ ಸುಖದಿನಿರ್ಪುದುಮತ್ತಲ್,

ನೆನೆದಪರಾಜಿತೆ ರಘುರಾ ।
ಮನನತಿ ಶೋಕಪ್ರಬಂಧದಿಂದಿರ್ಪುದುಮಾ- ॥
ವನಿತೆಯರಮನೆಗೆ ಬಂದಂ ।
ಘನಪಥದಿಂ ಭೋಂಕನಿೞೆದು ನಾರದ ಮುನಿಪಂ ॥೧೩॥

ಅಂತು ಬರ್ಪುದನಪರಾಜಿತಾಮಹಾದೇವಿ ಕಂಡಿದಿರೆೞ್ದೆಱಲಿಕ್ಕಿ ಬೞೆಯಮಿಬ್ಭಾಕಾ- ರಂಗೆಯ್ವುದುಂ,

ನಿಮಗಿನಿತು ಶೋಕಮೇಕಾ ।
ಯ್ತೆಮಗಸಿತುಮನಱೆಯ ಪೇೞೆಮೆನೆ ನಾರದ ದಿ- ॥
ವ್ಯಮುನೀಶ್ವರನನಿತುಮನಾ ।
ಕಮಲಾನನೆ ನೆಱೆಯೆ ತಱೆಯೆ ಬಿನ್ನವಿಸುವುದುಂ ॥೧೪॥

ಅದಂ ನಾರದನವಧಾರಿಸಿ ರಾಮಲಕ್ಷ್ಮಣರ ಕ್ಷೇಮವಾರ್ತೆಯಂ ನಿಮಗಿಂದೆ ತಂದಪೆ ನೆಂದಪರಾಜಿತಾಹಾದೇವಿಯ ಮನೋ ದುಃಖಮಂ ಕಳೆದು,

ನೀರದಪಥಕ್ಕೆ ಘೋಂಕನೆ ।
ನಾರದನೊಗೆದೆಯ್ದಿ ಲಂಕೆಯಂ ತನುರುಚಿ ನೀ- ॥
ಹಾರದ ರುಚಿಯಂ ಗೆಲೆ ಬಲ ।
ನಾರಾಯಣದೇವರಿರ್ದ ಸಭೆಯಂ ಪೊಕ್ಕಂ ॥೧೫॥

ಅಂತು ಪುಗುವುದುಂ ರಾಮಸ್ವಾಮಿ ನಾರದನಪ್ಪುದನಱಿದು ಬೇಗಮಿದಿರೆಟ್ಟಿ ಮಣಿಮಯಾಸನದೊಳಿರಿಸಿ ಕನಕಪಾತ್ರದೊಳರ್ಘ್ಯಪಾದ್ಯಮಂ ಕೊಟ್ಟು ನೀವೀ ರಣನಿರೀಕ್ಷಣಮಂ ಮಾಡದೆತ್ತಲಿರ್ದಿರೆಲ್ಲಿಂದಂ ಬಂದಿರೆಂಬುದುಂ ನಾರದನಿಂತೆಂದನಾನೀ ದೇಶದಿಂ ಪೋಗಿ ಧಾತಕೀಷಂಡದ ಪರ ವಿದೇಹದ ಸುರೇಂದ್ರ ರಮಣಪುರದೊಳ್ ತೀರ್ಥಕರರ್ ಜನಿಯಿಸಿದೊಡವರ್ಗೆ ಜನ್ಮಾಭಿಷೇಕಮಂ ಸಕಲ ಸುರವರರ್ ಸುರಗಿರಿಮಸ್ತಕದೊಳ್ ಮಾಟ್ಪುದಂ ನೋಡುತ್ತುಮಿರ್ದೀಗಳಯೋಧ್ಯೆಯಂ ಪೊಕ್ಕಪರಾಜಿತಾ ಮಹಾದೇವಿಯರುಮಂ ಸುಮಿತ್ರಾದೇವಿಯರುಮಂ ಕಂಡೆನವರ್ ನಿಮ್ಮನೀ ಸಮಯದೊಳ್ ಕಾಣದಿರ್ದೊಡೆ ನಿಶ್ಚಯಂ ಶರೀರ ಪರಿತ್ಯಾಗಂಗೆಯ್ವರೆಂದಱಿಪುವುದುಂ,

ಆ ಮಾತು ಮುಟ್ಟೆ ಕಿವಿಯಂ ।
ರಾಮಂಗಂ ಲಕ್ಷ್ಮಣಂಗಮುದ್ವೇಗಂ ನಿ- ॥
ಸ್ಸೀಮಂ ಸಮನಿಸೆ ತಮ್ಮಂ ।
ತಾಮೆ ಕೃಪಾಶೂನ್ಯರೆಂದು ನಿಂದಿಸಿಕೊಂಡರ್ ॥೧೬॥

ಅಂತು ನಿಜಜನಿಯರನಗಲ್ದು ಬಹುಕಾಲಮತಿಕ್ರಾಂತಮಾದುದೆಂದು ಕಟ್ಟಗಡೆದು,

ನಮ್ಮಲ್ಪ ವಿಭವಮಂ ಸುಖ ।
ಮಂ ಮನದೊಳ್ ಬಗೆದು ಬಗೆದೆಮಿಲ್ಲುಟಿದುದನೆಂ- ॥
ದುಮ್ಮಳಿಸಿ ವಿಭೀಷಣನಂ ।
ತಮ್ಮಲ್ಲಿಗೆ ಬರಿಸಿ ರಾಮಲಕ್ಷ್ಮಣರೆಂದರ್ ॥೧೭॥

ಅವಧಿಯ ವರ್ಷಂಗಳ್ ತೀ ।
ರ್ದುವಯೋಧ್ಯೆಗೆ ಪೋಗದಂದು ಜನನಿಯರುಂ ಬಾಂ- ॥
ಧವರುಂ ಖೇದಿಸುವರ್ ಪೋ ।
ಗವೇಟ್ಟುದೆಂದಱಿಪಿ ತಮ್ಮ ಗಮನೋದ್ಯಮಮಂ ॥೧೮॥

ಪವಣಿಲ್ಲದ ಲಂಕೆಯ ಜನ ।
ಭವನಂಗಳೊಳೆಲ್ಲಮರ್ಚನಾದ್ರವ್ಯಕ್ಕಂ ॥
ಪವಣಿಲ್ಲನೆ ರಾಮಂ ಜಿನ ।
ಸವನೋತ್ಸವದೊಳ್ ಸುರೇಂದ್ರನಂ ಗೆಲೆವಂದಂ ॥೧೯॥

ಮಂಗಳಪರಿಕರಮಮಂ ಖಚ ।
ರಾಂಗನೆಯರ್ ಪಿಡಿದು ಮುಂದೆ ಬರೆ ಮಂಗಳ ವೃ- ॥
ತ್ತಂಗಳನೋದುತ್ತುಂಬರೆ ।
ಮಂಗಳ ಪಾಠಕ ನಿಕಾಯಮೆರಡುಂ ಕೆಲದೊಳ್ ॥೨೦॥

ನಾನಾನಕರುತಿ ಸಕಲದಿ ।
ಶಾನನಮಂ ತೀವೆ ರಾಜ ಚಿಹ್ನವ್ರಜಮು- ॥
ತ್ತಾನಿತಮೆಸೆದಿರೆ ದಿವ್ಯವಿ ।
ಮಾನಮನುತ್ಸವದಿನೇಱಿದಂ ಪುಷ್ಪಕಮಂ ॥೨೧॥

ಬಲದೊಳ್ ಲಕ್ಷ್ಮೀಧರನೆಡ ।
ಗೆಲದೊಳ್ ಜಾನಕಿ ಬೆಡಂಗುವೆತ್ತೆಸೆದಿರೆ ಸು- ॥
ತ್ತಲುಮಿರೆ ಖಚರವಿಮಾನಾ ।
ವಲಿ ರಾಮಂ ಮಣಿವಿಮಾನದೊಳ್ ಕಣ್ಗೆಸೆದಂ ॥೨೨॥

ಅಂತು ರಾಮಲಕ್ಷ್ಮಣರ್ ಸಾಧಿತ ದಕ್ಷಿಣ ದಿಗ್ವಿಜಯರ್ ಪ್ರಯಾಣ ಭೇರಿಯಂ ಪೊಯಿಸಿ,

ಜಂಗಮ ಸರೋವರಂಗಳ ।
ಭಂಗಿಯನದಟಲೆವ ಖಚರ ಪರಿವೃಢರ ವಿಮಾ- ॥
ನಂಗಳ್ಗಿಡೆ ನೆಱೆಯದು ಗಗ ।
ನಾಂಗಣಮೆಂಬಂತಯೋಧ್ಯೆಗಭಿಮುಖರಾದರ್ ॥೨೩॥

ಅಂತು ತಳರ್ದು ಜಲಧಿಯಂ ದಾಂಟಿ ದಂಡಕಾರಣ್ಯಮನೆಯ್ದೆವಂದು,

ಚಾರಣಮುನಿಯುಗಲಕ್ಕಾ ।
ಹಾರಮನಿತ್ತೆಡೆಯನಲ್ಲಿ ತಮ್ಮಿರ್ದ ಲತಾ- ॥
ಗಾರದ ಪುಟಿಲೆಡೆಯಂ ಸೀ ।
ತಾರಮಣಿಗೆ ಸುಟ್ಟಿ ತೋಱಿದಂ ರಘುವೀರಂ ॥೨೪॥

ಜಲಜಾಕ್ಷಿಗೆ ಸೀತೆಗೆ ರಘು ।
ಕುಲತಿಲಕಂ ಸುಟ್ಟು ತೋಱಿದಂ ಮುನ್ನಂ ಕೇ- ॥
ವಲಲಬ್ಧಿ ದೇಶಭೂಷಣ ।
ಕುಲಭೂಷಣ ಸಾಧುಗಳ್ಗೆ ಸಮನಿಸಿದೆಡೆಯಂ ॥೨೫॥

ಅಂತು ಪವನಪಥದೊಳ್ ಮನಃಪವನವೇಗದಿಂ ಬರ್ಪ ಸಮಯದೊಳ್,

ಕನಕಪ್ರಾಕಾರದೊಳಂ ।
ವನಮಾಲೆಯೊಳಂ ಮಸಕ್ಕೆಮಂದೀ ಪುರಮಾ- ॥
ವನದೆಂದು ರಘೂದ್ವಹನಂ ।
ಜನಕಜೆ ಬೆಸಗೊಂಡಳಂದಯೋಧ್ಯಾಪುರಮಂ ॥೨೬॥

ಅಂತು ಬೆಸಗೊಳುದುಂ ರಾಮದೇವರಿದು ನಮ್ಮಯೋಧ್ಯಾಪುರಮೆಂದು ಪೇಟುತ್ತುಂ ಪುರಬಹಿಃಪುರಮನೆಯ್ದೆ ಬರ್ಪಸಮಯದೊಳ್ ನಾನಾವಿಧ ವಿಮಾನಂಗಳೇಱೆ ಬರ್ಪ ವಿದ್ಯಾಧರಪರವೃಢರಿಂ ಪುಷ್ಪಕವಿಮಾನಮನೇಱೆ ಬರ್ಪ ರಾಮಸ್ವಾಮಿಯ ಬರವನಱೆದು ಮಹಾವಿಭೂತಿಯಿಂ ಪ್ರಮೋದಮುದಿತಹೃದಯನಾಗಿ,

ಇಭಮಂ ನೀಲಾಚಲಸ ।
ನ್ನಿಭಮಂ ಶತ್ರುಘ್ನಸಹಿತಮೇಱೆ ವಿಭೂಷಾ- ॥
ಪ್ರಭೆ ನಭಮನಡರೆ ಭರತಂ ।
ಶುಭ ಚರತನಿದಿರ್ಗೆಳಲಯೋಧ್ಯೆಯಂ ಪೊಱಮಟ್ಟಂ ॥೨೭॥

ಅಂತು ಮಹಾವಿಭೂತಿಯಿಂ ಬರ್ಪ ಭರತಶತ್ರುಘ್ನರಂ ರಾಮಸ್ವಾಮಿ ಗೆಂಟಱೊಳೆ ಕಂಡು ಪುಷ್ಪಕವಿಮಾನದಿನವನಿಗವತರಿಸೆ ಭರತಶತ್ರುಘ್ನರುಮಾನೆಯಿಂದಿೞಿದು ಬಂದು ಪದಪ್ರಾಂತದೊಳ್ ಸರ್ವಾಂಗಪ್ರಣತರಾಗಿರ್ಪುದುಂ ರಾಮದೇವರ್ ತೆಗೆದಪ್ಪಿಕೊಂಡು ಪರಸಿದ ಬೞಿಕ್ಕೆ ಸೀತಾದೇವಿಗಂ ಲಕ್ಷ್ಮೀಧರಂಗಮನುಕ್ರಮದಿಂ ಪೊಡೆವಟ್ಟು ಪರಕೆಯಂ ಕೈಕೊಂಡೋರೊರ್ವರ ಕುಶಲವಾರ್ತೆಯಂ ಬೆಸಗೊಂಡು ಸಂತುಷ್ಟಚಿತ್ತರಾದನಂತರಂ ಸುಗ್ರೀವ ಪ್ರಭಾಮಂಡಲ ಮುರುತ್ಸುತಾದಿಗಳಿಂ ಪರಿವೃತರಾಗಿ,

ಮಣಿಘಂಟಾ ಮಣಿಕಿಂಕಿಣೀ ಮಣಿವಿತಾನಭ್ರಾಜಿಯಂ ನೇತ್ರ ಭೂ-
ಷಣಮಂ ಲೀಲೆಯಿನೇಱೆ ಪುಷ್ಪಕಮನುದ್ಯತ್ಕೇತ ನಾನೀಕ ತೋ-
ರಣ ಮಾಂಗಲ್ಯ ಸಮೃದ್ಧಮಂ ಭರತಶತ್ರುಘ್ನರ್ಕಳುಂ ರಾಮಲ-
ಕ್ಷ್ಮಣರುಂ ಪೊಕ್ಕರಯೋಧ್ಯೆಯಂ ಪುದಿವಿನಂ ಗಂಭೀರ ಬಂಭಾರವಂ ॥೨೮॥

ಅಂತು ಪುರಮಂ ಪೊಕ್ಕಪರಾಜಿತಾ ಮಹಾದೇವಿಯುಮಂ ಸುಮಿತ್ರಾ ಮಹಾದೇವಿಯುಮಂ ಸುಪ್ರಭಾಮಹಾದೇವಿಯುಮಂ ಕೈಕಾಮಹಾದೇವಿಯುಮಂ ರಾಮಲಕ್ಷ್ಮಣರ್ ಕಂಡೆಱಗಿ ಪೊಡೆವಟ್ಟವರ ಪರಮಾಶೀರ್ವಚನ ಪಾರಿಜಾತ ಕರ್ಣಪೂರ ಸಂಯೋಗದಿಂ ಮನೋರಾಗಮನಪ್ಪುಕೆಯ್ದಿರ್ಪುದುಂ,

ಬಲನಾರಾಯಣರುಂ ಭೂ ।
ತಲಮಂ ಭರತತ್ರಿಖಂಡಮಂ ನಿಜಬಾಹಾ- ॥

ಬಲದಿಂ ರಕ್ಷಿಸಿ ನಿಜನಿ।
ರ್ಮಲಯಶದಿಂ ಭುವನಮೆಲ್ಲಮಂ ಧವಲಿಸಿದರ್ ॥೨೯॥

ಅಂತವರ್ ಸುಖದಿನೋಲಗಂಗೊಟ್ಟಿರ್ದೊಂದು ಶುಭದಿನ ಮುಹೂರ್ತದೊಳ್ ರಾಮಸ್ವಾಮಿ ರಾಕ್ಷಸದ್ವೀಪ ಸಹಿತಂ ಲಂಕೆಯಂ ವಿಭೀಷಣಂಗೆ ದೇವೋಪನೀತ ಪುರಮಂ ರತ್ನಜಟಿಗೆ ಕಿಷ್ಕಿಂಧನಗರಮಂ ಸುಗ್ರೀವಂಗೆ ಶ್ರೀಪರ್ವತನಗರಮಂ ಹನುಮಂಗೆ ಪಾತಾಳಲಂಕೆಯಂ ವಿರಾಧಿತಂಗೆ ರಥನೂಪುರ ಚಕ್ರವಾಳಪುರಮಂ ಪ್ರಭಾಮಂಡಲಂಗೆ ರಾಜ್ಯಾಭಿಷೇಕಂಗೆಯ್ದು ಕೊಟ್ಟು ಮತ್ತಂ ಪೆಱರುಪಕಾರಂಗೆಯ್ದವರ್ಗಂ ಪ್ರಾರ್ಥಿಸೆ ಬಂದ ವಿದ್ಯಾಧರರ್ಗಂ ನಾಡುಂ ಬೀಡುಮಂ ಕೊಟ್ಟು ಲಕ್ಷ್ಮಣನಂ ತ್ರಿಖಂಡಮಂಡಲಕ್ಕಧಿರಾಜನಂ ಮಾಡಿ ಭರತನನಯೋಧ್ಯೆಯಂ ಮುನ್ನಿನಂದದಿನಾಳ್ವುದೆಂದು ಬೆಸಸೆ,

ಭರತಂ ನಿಮ್ಮಾಜ್ಞೆಯಂ ಮೀಱದೆ ವಸುಮತಿಯಂ ಕಾದುಕೊಂಡಿರ್ದೆ ನಿನ್ನಾ-
ನರಸಂ ಕೈಕೊಳ್ವೆನಲ್ಲೆಂ ವಿಷಯಸುಖಮನಾನೊಲ್ಲೆನಾಂ ಮೋಕ್ಷಲಕ್ಷ್ಮೀ-
ಪರಿರಂಭೋತ್ಕಂಠನೆಂ ಸಂಸೃತಿಯ ದೆಸೆಗೆ ಬೆಚ್ಚುತ್ತೆ ನಾನೆಂದು ವೈರಾ-
ಗ್ಯರತಂ ರಾಮಂಗೆ ಕೈಯಂ ಮುಗಿದೆಱಗಿದನನ್ನಂ ಮಹಾ ಸತ್ವನಾವಂ ॥೩೦॥

ಅಂತು ತಪಕ್ಕೆ ತಱಿಸಂದು ನುಡಿಯೆ ರಾಮದೇವರ್ ಮುನ್ನೆಮಗೆಭೂಚರರೆ ಬೆಸಕೆಯ್ದರೀಗಳ್ ಖೇಚರರುಂ ಬೆಸಕೆಯ್ವರಿಂ ಕೆಲವು ಕಾಲ ರಾಜ್ಯಸುಖಮನನುಭವಿಸಿ ನಾಮೆಲ್ಲಮೊಡನೆ ತಪಂಬಡುವಮೆನೆ ನಿಮ್ಮಡಿ ನೀಮೆನಗೆ ಕಾರುಣ್ಯಂಗೆಯ್ದೊಡೆನ್ನಂ ಪೋಗಲೀವುದೆನಗಿಂ ತಪಮೆ ಕಾರ್ಯಂ ನೀಮಿದಂ ಮಾರ್ಕೊಳ್ಳದಿರಿಮೆಂದು ಮಱುಮಾತಿಂಗಡೆಯಿಲ್ಲದಂತತಿ ಪ್ರತಿಜ್ಞೆಗೆಯ್ದು ಬಿನ್ನವಿಸಿ ರಾಜಭವನಮಂ ಪೊಱಮಟ್ಟು ಪೋಗೆ ಸಂಭ್ರಮದಿಂ ಲಕ್ಷ್ಮೀಧರನುಂ ಕೈಕಾಮಹಾದೇವಿಯುಂ ವೈದೇಹಿಯುಂ ವಿಶಲ್ಯಾ ಸುಂದರಿಯುಂ ಪಲರುಮಂತಃಪುರ ಪುರಂಧ್ರಿಯರುಂ ಬಱಿಯನೆ ಪೋಗಿ ತಪೋವಿಘ್ನಹೇತುಗಳಪ್ಪ ಮಾತುಗಳಂ ನುಡಿಯುತ್ತುಮಿರ್ಪಿನಮತ್ತಲಯ್ದನೆಯ ಕ್ರೋಧಿನಿಯೆಂಬ ಮದದೊಳತಿವರ್ತಿಯಾಗಿ,

ತ್ರಿಜಗದ್ಭೂಷಣವಾರಣಂ ಮುಱಿಯೆ ಪಾಯ್ದಾಲಾನಮಂ ತ್ವಗ್ಗಲೋ-
ಪಜ ಬಂಧಂಗಳನೆಲ್ಲಮಂ ಪಱಿವಿನಂ ಪೊಯ್ದೆತ್ತಿ ಮೊತ್ತಕ್ಕೆ ಕಾ-
ಯ್ದು ಜವಂ ಕೊಲ್ವವೊಲೆಯ್ದೆ ಬಂದು ಜವದಿಂ ಗಂಧಾಂಧನಾ ಭೀಮ ಸಾ-
ಮಜಮುಂ ವಿಸ್ಮಯಮಪ್ಪಿನ ಭರತನಂ ಕಂಡಾಯ್ತು ಜಾತಿಸ್ಮರಂ ॥೩೧॥

ಅಂತು ಜಾತಿಸ್ಮರನಾಗಿ ಮದೋದ್ರೇಕಮಂ ಬಿಟ್ಟು ಕೈಯನೆಟಿಲೆವಿಟ್ಟು ಪೊಡೆವಟ್ಟಿರ್ಪುದುಂ ಭರತನಾ ಗಜಮಂವೈದೇಹಿಯಂ ವಿಶಲ್ಯಾಸುಂದರಿಯಂ ಬೆರಸೇಱಿ ಮಹಾವಿಭವದಿಂ ರಾಜಭವನಮಂ ಪೊಕ್ಕು ಆನೆಯಿಂದಿೞಿದೆಲ್ಲರುಮೊಡನಾರೋಗಿಸಿ ಸುಖದಿನೊಡ್ಡೋಲಗಂಗೊಟ್ಟಿರೆ,

ನಿರುಜಂ ತ್ರಿಜಗದ್ಭೂಷಣ ।
ಕರಿ ಕವಳಂಗೊಳ್ಳದೆಂದು ಸಾಹಣದ ಮಹ- ॥
ತ್ತರನಱಿಪೆ ರಾಮಲಕ್ಷ್ಮೀ ।
ಧರರ್ಕಳಾ ನುಡಿಗೆ ಪಿರಿದು ವಿಸ್ಮಿತರಾದರ್ ॥೩೨॥

ಆ ಸಮಯದೊಳ್ ಋಷಿನಿರ್ವೇದಕನತಿತ್ವರಿತ ಗತಿಯಿಂ ಬಂದು ಸರ್ವಾಂಗ ಪ್ರಣತನಾಗಿ ದೇವ ಮಹೇಂದ್ರೋದ್ಯಾನವನಕ್ಕೆ ದೇಶಭೂಷಣ ಭಟ್ಟಾರಕರ್ ಬಿಜಯಂಗೆಯ್ದರೆಂದು ಬಿನ್ನವಿಸೆ ಸಿಂಹಾಸನದಿನೆೞ್ದಾ ದೆಸೆಗೆ ಕೈಗಳಂ ಮುಗಿದು,

ಅವನೀವಲ್ಲಭರಾರ್ ಧ ।
ರ್ಮವತ್ಸಲರ್ ತನ್ನ ತೆಱದಿನೆಂಬನ್ನಂರಾ- ॥
ಘವದೇವನಟ್ಟಿಱಿಂ ಋಷಿ ।
ನಿರ್ವೇದಕಂಗಮರಧೇನುವಿತ್ತಂತಿತ್ತಂ ॥೩೩॥

ಅಂತು ಮೆಚ್ಚಿತ್ತು ರಾಮಲಕ್ಷ್ಮಣರಂ ಭರತಶತ್ರುಘ್ನರುಂ ತ್ರಿಜಗದ್ಭೂಷಣ ಗಜಾರೂಢರಾಗಿ ಅಪರಾಜಿತಾದೇವಿಯರ್ ಮೊದಲಾಗೆ ನಾಲ್ವರ್ ಜನನಿಯರುಂ ಜಾನಕಿ ಮೊದಲಾಗೆ ಸಮಸ್ತಾಂತಃಪುರಮುಂ ಸುಗ್ರೀವಂ ಮೊದಲಾಗೆ ಸಕಲ ವಿದ್ಯಾಧರವಲ್ಲಭರುಂ ವಂದನಾ ಭಕ್ತಿಯಿಂದೊಡನೆ ಬರೆ ಬಂದು ವಾಹನದಿನಿೞಿದು ಗೆಂಟಱೊಳ್ ರಾಜಚಿಹ್ನಂಗಳನಿರಿಸಿ ಭಟ್ಟಾರಕರಂ ಮೂಱು ಸೂಟಿ ಬಲಗೊಂಡು ದಿವ್ಯಾರ್ಚನಂಗಳಿಂದರ್ಚಿಸಿ ಸರ್ವಾಂಗಪ್ರಣತರಾಗಿ ನಿಜನಿಯತ ಸ್ಥಾನದೊಳ್ ಕುಳ್ಳಿರ್ದು ಧರ್ಮಶ್ರವಣಾನಂತರಂ ನಾರಾಯಣನೆಂದನೀ ತ್ರಿಜಗದ್ಭೂಷಣದ್ವಿರದನಂ ಚತುರ್ದಿನಮೇಕಾರಣಂ ಕವಳಂಗೊಳ್ಳದೆಂಬುದಂ ಬೆಸಸಿಮೆನೆ,

ಅಪವರ್ಗಶ್ರೀಯ ಕಟಾ ।
ಕ್ಷಪಾತಮೆಂಬಂತು ದಂತರುಚಿ ನಿಮಿರ್ವಿನಮಿೂ ॥
ದ್ವಿಪಮನ್ಯ ಜನ್ಮಮಂ ತಿಳಿ ।
ದುಪಶಮಮಂ ತಳೆದು ಕವಳಮಂ ಕೊಳ್ಳದೆನಲ್ ॥೩೪॥

ಮುಗಿದ ಕರಕಿಸಲಯಂಗಳ್ ।
ಸೊಗಯಿಸೆ ಮತ್ತಂ ಮುನೀಂದ್ರವೃಂದಾರಕರಂ ॥
ಜಗದಧಿಪಂ ಗಜದ ಭವಾ ।
ಳಿಗಳಂ ವಿನಮಿತ ಶಿರೋಧರಂ ಬೆಸಗೊಂಡಂ ॥೩೫॥

ಅಂತು ಬೆಸಗೊಳ್ವುದುಂ ದೇಶಭೂಷಣಕೇವಲಿಗಳಿಂತೆಂದು ಬೆಸಸಿದರೀ ವಿನೀತಾನಗರದೊಳ್ ಸುಪ್ರಭಂಗಮಾತನರಸಿ ಪ್ರಹ್ಲಾದಿನಿಗಂ ಸೂರ್ಯೋದಯನುಂ

ಚಂದ್ರೋದಯಸುಮೆಂಬ ತನೂಜರಾಗಿ ವೃಷಭಸ್ವಾಮಿಗಳೊಡನೆ ಪೋಗಿ ತಪಸ್ಥರಾಗಿ ಸೈರಿಸಲಾಱದೆ ಪರೀಷಹಭಗ್ನಮನರಾಗಿ ಮರೀಚಿಯೊಡನೆ ಕೂಡಿ,

ತಾಪಸರಾಗಿ ಕುಧರ್ಮ ।
ವ್ಯಾಪಾರದೊಳೆಱಗಿ ಘೋರಸಂಸಾರ ಮಹಾ- ॥
ಕೂಪದೊಳಗಟ್ಟು ಪಿರಿದ ।
ಪ್ಪಾಪತ್ತಂ ಪೆತ್ತನೇಕಭವಮಂ ಬಂದರ್ ॥೩೬॥

ಅಂತು ಬಾರದ ಭವಮಂ ಬಂದೆಂತಾನುಂ ಕುರುಜಾಂಗಣ ವಿಷಯದ ಗಜಪುರಮನಾಳ್ವ ಹರಿಪತಿಗಮಾತನರಸಿ ಚಂದ್ರಾನನೆಗಂ ಮುಂಪೇೞ್ದ ಚಂದ್ರೋದಯಂ ಕುಲಂಕರನೆಂಬ ನಂದನನಾಗಿ ರಾಜ್ಯದೊಳ್ ನಿಂದನಾ ಪುರದೊಳ್ ಸೂರ್ಯೋದಯನುಂ ವಿಶ್ವಾವಸುವೆಂಬ ಪಾರ್ವಂಗೆ ಮೂಢಶ್ರುತಿಯೆಂಬ ಪುತ್ರನಾಗಿ ಕುಲಂಕರನೃಪತಿಗೆ ಪುರೋಹಿತ ನಾಗೆ ಕುಲಂಕರನುಂ ಹಿಂಸಾಹೇತುಗಳಪ್ಪ ಜನಂಗಳನಿರಿಸಿ ತಾಪಸರೂಪಧಾರಿಗಳೆ ಗುರುಗಳೆಂಬ ನಂಬುಗೆಯುಂ ಮಾಡಿ ನಡೆಯಿಸುತ್ತಿರ್ಪಿನಂ ಕುಲಂಕರನರಸಿ ಮುಃಶೀಲೆ ಶ್ರೀಮಾಲೆ ಎಂಬ ಪಾಪ್ತೆ ಮೆಚ್ಚಿದರೊಡನೆ ಮೆಚ್ಚಿದಂತೆ ವಿಷಯ ಸುಖಮನನುಭವಿಸಲೆಂದು,

ಜಾತಿಯ ನೀತಿಯ ನೃಪಿನ ।
ಮಾತಡಿಗಿಡೆ ಪತಿಯುಮಂ ಪುರೋಹಿತನುಮನಾ- ॥
ಪಾತಕಿ ವಿಷದಿಂ ಕೊಂದಳ್ ।
ಕೌತುಕಮೆ ವಿವೇಕವಿಕಲರೇನಂ ಮಾಡರ್ ॥೩೭॥

ಅಂತು ಸತ್ತು ಕುಲಂಕರನುಂ ಮೂಢಶ್ರುತಿಯುಮನುಕ್ರಮದಿಂ ಮೊಲನುಂ ಮುಂಗುರಿಯುಮಾಗಿ ಪುಟ್ಟಿ ಸತ್ತುಬೞಿಯಂ ಮೂಢಶ್ರುತಿ ಶುಂಡಾಲನಾಗಿ ಕುಲಂಕರಂ ದರ್ಮುರನಾಗಿ ಪುಟ್ಟೆ ತನ್ನನಾ ಶುಂಡಾಲಂ ಮೆಟ್ಟೆ ಸತ್ತೆಸಡಿಯಾಗಿ ಪುಟ್ಟಿ ಆ ಶುಂಡಾಲಂ ಸತ್ತು ಕಾಗೆಯಾಗಿ ತನ್ನಂ ತಿನೆ ಸತ್ತೆಸಡಿ ಕುಕ್ಕುಟನಾಯ್ತಾ ಕಾಗೆ ಸತ್ತು ಬಿಡಾಲನಾದುದಾ ಬಿಡಾಲಂ ಮುನ್ನಿನ ಕುಕ್ಕುಟನಂ ತಿಂದುದೀ ತೆಱದಿಂ ಕುಲಂಕರಂ ಮೂಱುಸೂಟಿ ಕುಕ್ಕುಟನಾಗಿ ಪುಟ್ಟೆ ಮೂಢಶ್ರುತಿಯುಂ ಬಿಡಾಲನಾಗಿ ಮೂಱು ಸೂಟಿ ಪುಟ್ಟಿ ತಿನೆ ಸತ್ತು ಕುಲಂಕರಂ ಮೀನಾದಂ ಮೂಢಶ್ರುತಿ ಸತ್ತು ಮೊಸಳೆಯಾದಂ,

ಅರತ್ತಜೀವರ್ ಕರ್ಮ ।
ಪ್ರೇರಣೆಯಿಂ ಪಗೆಯೆ ಕೆಳೆಯನಕ್ಕುಂ ಕೆಳೆಯುಂ ॥
ಕ್ರೂರರಿಪುವೆನಿಸಿ ಬರ್ಕುಂ ।
ಬಾರದ ಭವಮಂ ವಿಚಿತ್ರಮೀ ಸಂಸಾರಂ ॥೩೮॥

ಅಂತು ಮೊಸಳೆಯಾದ ಮೂಢಶ್ರುತಿಯುಮಂ ಮೀನಾದ ಕುಲಂಕರನುಮಂ ಮೀಂಗುಲಿ ಕೊಲೆ ಸತ್ತು ರಾಜಗೃಹದೊಳ್ ಜಲೂಕೆಯೆಂಬ ಪಾರ್ವಿತಿಗಂ ಬಹ್ವಾಶನೆಂಬ ಪಾರ್ವಂಗಂ

ಮೂಢಶ್ರುತಿ ವಿನೋದನೆಂಬ ಮಗನಾದನಾ ಮಿನಾಗಿ ಸತ್ತ ಕುಲಂಕರನುಮವರ್ಗೆ ರಮಣನೆಂಬ ನಂದನನಾಗಿ ಬಳೆದು ದೇಶಾಂತರಕ್ಕೆ ಪೋಗಿ ವೇದವಿದನಾಗಿ ಮಗುೞ್ದು ಬರುತ್ತುಂ ನಿಜಗ್ರಾಮಮಪ್ಪ ರಾಜಗೃಹದ ಪೊಱಪೊೞಲನೆಯ್ದುವರ್ಪ ಸಮಯದೊಳ್ ನೇಸರ್ ಪಡುವುದುಮಂಧಕಾರಮತಿ ಪ್ರಬಲಮಾಗೆ ಬರಲಱಿಯದೆ ಯಕ್ಷಗೃಹದೊಳಗ ವಸಿಯಿಸಿರ್ಪುದುಂ,

ಆ ರಮಣನಗ್ರಜಾತ ಮ ।
ನೋರಮೆ ಸಮಿತಾಭಿಧಾನೆ ಪಾೞ್ಬನ ಬರವಂ ॥
ಪಾರುತ್ತಡಂಗಿ ಯಕ್ಷಾ ।
ಗಾರಮನವಳಂಧಕಾರಮಂ ಪೊಕ್ಕಿರ್ದಳ್ ॥೭೯॥

ಅಂತಿರ್ಪುದುಮಾಕೆಯಲ್ಲಿಗೆ ಬರುತ್ತಿರ್ದ ಶೋಕದತ್ತನೆಂಬ ಪಾೞ್ಬನಂ ತಳಾಱರ್ ಪಿಡಿದು ಕೊಲ್ವುದುಂ, ವಿನೋದಂ ತನ್ನ ಪಾರ್ವಂತಿಯ ದುಶ್ಚರಿತ್ರಮನಱಿವನಪ್ಪುದಱಿನಾಕೆಯ ಬೞಿಯನ ಬಂದುೞಿದಿರ್ದು ಯಕ್ಷಾಗಾರದೊಳಿರ್ದಾಕೆಯೊಳ್ ನುಡಿಯುತ್ತಿರ್ದ ತನ್ನ ತಮ್ಮನಪ್ಪ ರಮಣನಂ ಪಾೞ್ಬನೆಂದೆ ಬಗೆದು ಕೊಂದಾಕೆಯಂ ಮನೆಗೆ ತಂದಾಳುತ್ತಿರ್ದು ತಾನುಮಾಕೆಯ ಕೈಯೊಳ್ ಸತ್ತು ಸಂಸಾರದೊಳ್ ತೊೞಲ್ದು ಮಹಾಗಹನದೊಳಿರ್ವರುಂ ಮಹಿಷಂಗಳಾಗಿ ಕಾದಿ ಸತ್ತು ಮತ್ತಂ ಕರಡಿಗಳಾಗಿ ಪುಟ್ಟಿ ಬೇಗೆಗಿರ್ಚಳ್ಕಿ ಸತ್ತು,

ಗಿರಿದರಿಗಳ ವನದೊಳ್ ಬೇ ।
ಡರ ಬಸಿಱೊಳ್ ಬಂದು ಪಾಪಮಂ ಸಾಲ್ವನಿತಂ ॥
ನೆರೆಪಿ ಕಡೆಗಾಲದೊಳ್ ವನ ।
ಚರರ್ಕಳಂದೊಡನೆ ಸತ್ತು ಪುಲ್ಲೆಗಳಾದರ್ ॥೮೦॥

ಮತ್ಸರಮಂ ಜಿನಮತದೊಳ್ ।
ವತ್ಸಲತೆಯನುಂಟುಮಾಡಿ ಕುಮತದೊಳಮವರ್ ॥
ಕುತ್ಸಿತ ಯೋನಿಗಳೊಳ್ ಬೀ ।
ಭತ್ಸ ಶರೀರಂಗಳಾಗಿ ತಿರಿತರುತಿರ್ದರ್ ॥೮೧॥

ಅಂತು ಪುಲ್ಲೆಗಳಾಗಿ ಪುಟ್ಟುವುದುಮವಂ ಬೇಡನೊರ್ವಂ ಪಿಡಿದು ನಡಪುತ್ತುಮಿರ್ದನನ್ನೆಗಮತ್ತ ಸ್ವಯಂಭೂತಿರತನೆಂಬ ಮಹೀನಾಥಂ ವಿಮಲ ಜಿನನಾಥರಂ ವಂದಿಸಿ ಬರುತ್ತುಮಾ ಪುಲ್ಲೆಗಳಂ ಬೇಡನಿಂ ಬೇಡಿಕೊಂಡು ನಿಜರಾಜಭವನದೊಳಗಣ ಜಿನಾಲಯದೊಳಿರಿಸಿ ನಡಪುತ್ತುಮಿರ್ಪುದುಮಲ್ಲಿ ರಮಣನಪ್ಪ ಪುಲ್ಲೆ ಋಷಿಯರ ಸಂಯೋಗದಿಂದುಪಶಮಚಿತ್ತನಾಗಿ ಸತ್ತು ದೇವಲೋಕಕ್ಕೆಪೋಯ್ತು ಮತ್ತಂ ವಿನೋದನಪ್ಪ ಪುಲ್ಲೆ ಸತ್ತು ತಿರ್ಯಗ್ಗತಿಯೊಳ್ ತಿರ್ರನೆ ತಿರಿದೆಂತಾನುಂ ಕರ್ಮೋಪಶಮದಿಂ ಕಾಂಪಿಲ್ಯ ನಗರದೊಳ್ ಧನದತ್ತನೆಂಬ ಪರದನಾಗಿ ಪುಟ್ಟಿ ಮೂವತ್ತೆರಡು ಕೋಟಿ ಧನಕ್ಕಧಿನಾಥನಾಗಿರ್ದನಾ

ಧನದತ್ತಂಗಮಾತನ ಕುಲಸ್ತ್ರೀ ವಾರುಣೆಗಂ ರಮಣನಪ್ಪ ದೇವಂ ದಿವದಿಂ ಬಂದು ಭೂಷಣನೆಂಬ ಮಗನಾಗ ನೈಮಿತ್ತಿಕರೀತನವಶ್ಯಂ ಜಿನಮುನಿಗಳಂ ಕಂಡಾಗಳ್ ತಪಂಬಡುವನೆನೆ ಧನದತ್ತನಾ ಮಾತಂ ಕೇಳ್ದು,

ತನುಜಸ್ನೇಹದಿನವನಂ ।
ಮುನಿಪತಿಗಳ್ ಕಾಣದಂತು ಮಾಡದ ಮೇಗಂ- ॥
ಗನೆವೆರಸು ಸುಖದಿನಿರಿಸಿದ ।
ನನೆ ಚಿತ್ರಮೆ ಸಹಜಮಲ್ತೆ ಪುತ್ರಸ್ನೇಹಂ ॥೪೨॥

ಅಂತು ಸುಖದಿನಿರ್ದೊಂದು ದಿವಸಂ ಭೂಷಣಂ ಶ್ರೀಧರಭಟ್ಟಾರಕರಂ ವಂದಿಸಲೆಂದು ಪೋಪ ದೇವರ್ಕಳನಾಕಾಶದೊಳ್ ಕಂಡು ಜಾತಿಸ್ಮರನಾಗಿ ಭಟ್ಟಾರಕರಂ ವಂದಿಸಲೆಂದು ಮಾಡದಿಂದಿೞಿದು ಬರುತ್ತಂ ಸರ್ಪದಷ್ಟನಾಗಿ ಸತ್ತು ಮಹೇಂದ್ರಕಲ್ಪಕ್ಕೆ ಪೋಗಿ ಮಗುೞ್ದು ಬಂದು ಪುಷ್ಕರ ದ್ವೀಪದ ಚಂದ್ರಾದಿತ್ಯಪುರಮನಾಳ್ವ ಪ್ರಕಾಶಯಶಂಗಮುದಿತೆಗಂ ಜಗದ್ಯುತಿವೆಸರ ಸುತನಾಗಿ ರಾಜ್ಯಂಗೆಯ್ಯುತ್ತುಂ,

ಜಿನಗದಿತ ಮಾರ್ಗದಿಂ ಜಿನ ।
ಮುನಿಗನ್ನಮನಿತ್ತು ದೇವಕುರು ಭೂತಲ ಸಂ- ॥
ಜನಿತಂ ತತ್ಸುಖದೊಳ್ ತ ।
ಣ್ಣನೆ ತಣಿದೀಶಾನ ಕಲ್ಪದೊಳ್ ಜನಿಯಿಸಿದಂ ॥೪೩॥

ಕಿಡದ ಪರಮಾತ್ಮ ಸುಖಮಂ ।
ಕುಡುವ ಮಹಾಮಹಿಮೆವಡೆದ ಸಾಧುಪದಂಗಳ್ ॥
ಕಿಡುವ ಸುರಲೋಕಸುಖಮಂ ।
ಕುಡುವುದದೇ ಗಹನಮೆನಿಸಿ ಕಲ್ಪಜನಾದಂ ॥೪೪॥

ಆ ಈಶಾನಕಲ್ಪದೊಳನಲ್ಪಸುಖಮನನುಭವಿಸಿ ಬಂದು ಜಂಬೂದ್ವೀಪದಪರವಿದೇಹದ ನಂದ್ಯಾವರ್ತಪುರಮನಾಳ್ವ ಚಲನೆಂಬ ಚಕ್ರವರ್ತಿಗಮಾತನ ಮಹಾದೇವಿ ಬಾಲಹರಿಣೆಗಮಭಿರಾಮನೆಂಬ ಮಗನಾಗಿ,

ಅೞಿದಾಂ ಸಂಸಾರದ ।
ತೆೞಿನಂ ತೊೞಿಯಲ್ಕೆ ಬಗೆಯೆ ಬಲ್ಲಾಳ್ತನದಿಂ ॥
ತುೞುಗೆಮಗಣ್ಣೊಳ್ವೆಂಡಿರ್ ।
ಸೞಿಗೊಂಡರ್ ಸುತ್ತಿ ಮುತ್ತಿ ಮೂಸಾಸಿರ್ವರ್ ॥೪೫॥

ಅಂತು ತನ್ನಂ ತಮ್ಮಯ್ಯನಪ್ಪ ಚಕ್ರವರ್ತಿಯ ಬೆಸದಿಂ ಬಳಸಿ ಕೊಂಡಿರ್ದ ಕನ್ನೆಯರಂ ಪುಲ್ಗೆಣೆಯಾಗಿ ಬಗೆದು,

ಜಿನಧರ್ಮದ ಪೆರ್ಮೆಯೆ ನಿಲೆ ।
ಮನದೊಳ್ ಬಾಲೆಯರ್ಗೆ ಧರ್ಮಮಂ ಪೇೞುತ್ತುಂ ॥
ಮನೆಯೊಳ್ ಮುನಿಯವೊಲಿರ್ದಂ ।
ತನಗಳವಡೆ ಋಷಿಗುಣಂಗಳೆನಿತೊಳವನಿತುಂ ॥೪೬॥

ಅಂತು ಸಮ್ಯಕ್ತ್ವಶುದ್ಧನಾಗಿ ಸಂನ್ಯಸನಂಗೆಯ್ದು ಪಂಚನಮಸ್ಕಾರ ಪರಿಣತಂ ಶರೀರ ಭಾರಮನಿೞಿಪಿ ಬ್ರಹ್ಮೋತ್ತರ ಕಲ್ಪದೊಳ್ ದೇವನಾಗಿ ಪುಟ್ಟುವುದುಂ,

ಇತ್ತಂ ಮುಂಪೇೞ್ದಘನ ।
ದತ್ತಂ ಸತ್ತಾಜವಂಜವೀ ಜಲಧಿಯೊಳಾ- ॥
ೞುತ್ತೇೞುತ್ತಿರ್ದಂ ದು ।
ರ್ವೃತ್ತಂಗೇ ದುರಿತ ದುಃಖಮಪ್ಪುದು ಪಿರಿದೇ ॥೪೭॥

ಅಂತಾತಂ ಸಂಸಾರದೊಳ್ತೊೞಲ್ದು ಬಂದು ಪೌದನಪುರದೊಳಗ್ನಿಮುಖನೆಂಬ ಪುರದಂ ಗಮಾತನ ಪರದಿತಿ ಶಕುನಿಗಂ ಮೃದುಮತಿವೆಸರ ಮಗನಾಗಿ ಕಿತವನಾಗೆ ಪೊಱಮಡಿಸಿ ಕೞೆಯೆ ಪೋಗಿ ಋಷಿಯರಂ ಸಾರ್ದು ಸಾಕ್ಷರಿಕನಾಗಿ ಮಗುೞ್ದು ಬಂದು ಮಾತಾಪಿತೃಗಳೊಳ್ ಕೂಡಿ ಸಂತೋಷದಿನಿರ್ದು ವಸಂತೆಯುಂ ರಮಣಿಯುಮೆಂಬಿರ್ವರ್ಗಣಿಕೆಯರ್ಗಾಸಕ್ತನಾಗಿ ಧನಮಂ ನಿಧುವನಕ್ಕೆ ಸಲಿಸಿ ವಿಕಲಮತಿಯಾದ ಮೃದುಮತಿ ಸ್ತೇಯಮೆ ತನಗೆ ಜೀವನೋಪಾಯಮಾಗ ನೆಗೞುತ್ತುಮೊಂದು ದಿವಸಂ ಶಶಾಂಕಪುರಮನಾಳ್ವ ನಂದಿವರ್ಧನನರಮನೆಯಂ ಪೊಕ್ಕು ಕೞಲೆಂದುೞಿದಿರ್ದ ಸಮಯದೊಳ್ ಆ ನಂದಿವರ್ಧನಂ ಶಶಾಂಕಮುಖ ಭಟ್ಟಾರಕರ್ ಭಸಸೆ ಧರ್ಮಮಂ ಕೇಳ್ದು ನಿರ್ವೇಗಪರನಾಗಿ ಮನೆಗೆವಂದು ತನ್ನರಸಿಗಾಂ ಪತಸ್ಥನಪ್ಪಂ ನೀನುಬ್ಬೆಗಂಬಡದಿರೆಂದು ನುಡಿವುದುಂ ಕೇಳ್ದು ಮೃದುಮತಿವೆರಸರನ್ವರ್ಥಮಾಗೆ ಸಂಸಾರಭೀರುವಾಗಿ ತತ್ತಪೋನಿಧಿಯ ಸನ್ನಿಧಿಯೊಳ್ ತೊಱೆದು ತಪಂ ಗೆಯ್ಯುತ್ತುಮಿರ್ಪುದುಮಿತ್ತ ಲಾಲೋಕಪುರದ ಪರಿಸರದ ಪರ್ವತದ ಮೇಲೆ,

ಗುಣನಿಧಿಗಳ್ ನಾಮದೊಳಂ ।
ಗುಣನಿಧಿಗಳ್ ಗಗನಚಾರಣರ್ ಶೈಲ ಶಿರೋ- ॥
ಮಣಿಯೆನೆ ಕೈಯೆತ್ತದೆ ಮುನಿ ।
ಗಣಪೂಜ್ಯರ್ ಪೂಣ್ದು ನಾಲ್ಕು ತಿಂಗಳನಿರ್ದರ್ ॥೪೮॥

ಅವರಂ ಪೂಜಿಸಿ ಪೋದರ್ ।
ದಿವಕ್ಕೆ ದಿವಿಜರ್ಕಳವರುಮಾ ಪರ್ವತದಿಂ ॥

ಪವನ ಪಥಾತಿಥಿಯಾಪರ್ ।
ದಿವಸಾವಧಿ ಪಿಂಗಿ ಪೋಗೆ ಪರಮಾತಿಥಿಗಳ್ ॥೪೯॥

ಮತ್ತಿತ್ತ ಮೃದುಮತಿಗಳ್ ತಪಂಗೆಯ್ವುತ್ತಿ ಕ್ಷಪಿತ ಕಾಯರಾಲೋಕನಗರಕ್ಕೆ ಚರಿಗಗೆ ಪೋದೊಡಾ ಪೊಟಿಲನಾಳ್ವರಸಂ ಮೊದಲಾಗೆ ಪಲಂಬರುಮಾ ಚಾರಣರ ಗೆತ್ತೀ ಋಷಿಯರ್ ನಾಲ್ಕು ತಿಂಗಳ್ವರಂ ಕೈಯಿಕ್ಕಿ ನಿಂದರಿವರತಪದ ಪೆರ್ಮೆಗ ದೇವರ್ಕಳ್ ಪೂಜಿಸಿದರೆಂದು ಕೊಂಡಾಡೆ ಮಾಯೆಯಿಂ ಪೂಜೆಗೊಡಂಬಟ್ಟು,

ಅಟೆಪಿಲ್ಲದ ಜಿನಧರ್ಮದೂ । .
ಳಟೆಪಿಂದಾಹಾರಕಾಂಕ್ಷೆಯಿಂ ಮಾಯೆಯ ಬೆಂ- ॥
ಬಟೆಗೊಂಡು ತಪಂಗೆಯ್ದೊಡ ।
ಲಟೆಪಿನೊಳಭಿರಾಮನಿರ್ದ ದಿವಮಂ ಪೊಕ್ಕಂ ॥೫೦॥

ಅಂತು ಪುಗುವುದುಂ ಮೃದುಮತಿಯನಭಿರಾಮ ಚರಾಮರಂ ಕಂಡತಿ ಸ್ನೇಹಿತನಾಗಿ ಸುಖದಿನಿರ್ದು,

ದಿವದಿಂ ಪರಮಾಯುಷ್ಯ ।
ತವೆ ಮಾಯಾತಪದ ಫಲದೆ ಮೃದುಮತಿ ಚರನಾ ॥
ದಿವಿಜಂ ಕುಂಜರಗಿರಿಸಾ ।
ನುವನನಿಕುಂಜಕ್ಕೆವಂದು ಕುಂಜರನಾದಂ ॥೫೧॥

ತದನಂತರಮಭಿರಾಮ ಚರಾಮರನುಂ ಬ್ರಹ್ಮೋತ್ತರ ಕಲ್ಪದಿಂ ಬಂದು ದಶರಥಂಗಳಂ ಕೈಕಾಮಹಾದೇವಿಗಂ ಭರತನೆಂಬ ಮಗನಾದನೀತನಂ ತ್ರಿಜಗದ್ಭೂಷಣ ಗಜಂ ಕಂಡು ಜಾತಿಸ್ಮರಂ ಸಂಸಾರಭೀರುವಾದುದಱಂ ಬ್ರತಂಗೊಂಡು ಸುಗತಿವುಗಲಿರ್ದುದೆಂದು,

ಆನೆಯ ಭರತನ ಭವಸಂ ।
ತಾನಂಗಳನಱೆಪೆ ದೇಶಭೂಷಣ ದಿವ್ಯ- ॥
ಜ್ಞಾನಗಳಾಲಿಸಿ ವಿಸ್ಮಿತ ।
ಮಾನಸರಾದರ್ ಬಲಾಚ್ಯುತ ಪ್ರಮುಖರ್ಕಳ್ ॥೫೨॥

ಆ ಸಮಯದೊಳ್,

ಪಸ್ತಿಯ ತನ್ನ ಮುನ್ನಿನ ಭವಾಂತರಮೆಲ್ಲಮನೆಯ್ದೆ ಪೇೞೆ ಲೋ-
ಕಸ್ತುತ ದೇಶಭೂಷಣ ಮಹಾಮುನಿ ಪುಂಗವರಾಜವಂಜವ-
ತ್ರಸ್ತಮನಂ ತಪಶ್ಚರಣ ಲೋಭರತಂ ಭರತಂ ಭವಾಬ್ಧಿಯಂ
ದುಸ್ತರಮಂ ಸಮುತ್ತರಿಸಲುತ್ಸುಕ ವೃತ್ತಿಯನುಂಟುಮಾಡಿದಂ ॥೫೩॥

ಬಾರದ ಭವಮೊಂದಿಲ್ಲೆನೆ ।
ನಾರಕ ತಿರ್ಯಙ್ಮನುಷ್ಯ ಭವದೊಳ್ ಬಂದೆಂ ॥
ಸಾರದೆ ಜಿನಚರಣಮನಿ ।
ನ್ನಾರಾಧಿಸಿ ಪಡಪೆನಮೃತ ಸುಖಸಂಪದಮಂ ॥೫೪॥

ಎಂದು ತಳೆಸಂದು ಭರತಂ ಸಹಸ್ರತ್ರಯ ರಾಜಪುತ್ರರ್ ಸಹಿತಂ ತಪಸ್ಥನಾದಂ. ಕೈಕೆಯುಂ ಮುನ್ನೂರ್ವರ್ಸ್ತ್ರೀಯರ್ವೆರಸು ಪೋಗಿ ಪೃಥುಮತಿ ಗಂತಿಯರ ಪಕ್ಕದೆ ಸಮ್ಯಕ್ತ್ವಪೂರ್ವಕಂ ತಪಂಗೊಂಳಾ ತ್ರಿಜಗದ್ಭೂಷಣಗಜಂ ಸಮ್ಯಕ್ತ್ವಪೂರ್ವಕಮಣುವ್ರತಮನಲ್ಲಿಯೆ ಕೈಕೊಂಡು ಪಲವು ನೋಂಪಿಗಳಂ ನೋಂತು ಸಂನ್ಯಸನದಿಂ ಮುಡಿಪು ಬ್ರಹ್ಮೋತ್ತರ ಕಲ್ಪಗತಮಾಯ್ತು. ಭರತಮುನಿಯುಂ ಚತುರಂಗುಲ ಚಾರಣ ಋದ್ಧಿಪ್ರಾಪ್ತನಾಗಿ ಮೋಕ್ಷಕ್ಕೆ ಪೋದನಿತ್ತ ಸಿದ್ಧಾರ್ಥನುಂ ರತಿವರ್ಧನನುಂ ಮೊದಲಾಗೆ ಭರತನೊಡನೆ ತಪಂಗೊಂಡ ಮೂಸಾಸಿರ್ವರುಂ ತಂತಮಗೆ ತಕ್ಕ ಸ್ಥಾನದೊಳ್ ಪುಟ್ಟಿಸುಖದಿನಿರ್ಪುದುಮಿತ್ತ ಕೈಕಾಗಣೆನಿಯರುಮನಶನದೆ ತಪದೊಳ್ ನೆಗಟ್ಟು ಜೀವಿತಾಂತ್ಯದೊಳ್ ಸೌಧರ್ಮಕಲ್ಪದೊಳ್ ಪುಟ್ಟಿದರ್,

ಪರಿಪಾಲಿಸಿ ಧರೆಯಂ ಖೇ ।
ಚರ ಭೂಚರ ಭೂಪರಾಳ್ವೆಸಂ ಗೆಯ್ಯೆ ನಿರಂ- ॥
ತರಸುಖದಿನಿತ್ತಲಮರೇ ।
ಶ್ವರ ವಿಭವಂಬಡೆದು ರಾಮಲಕ್ಷ್ಮಣರಿರ್ದರ್ ॥೫೫॥

ಅಂತು ಸುಖದಿನಿರ್ದೊಂದು ದಿವಸಂ ರಾಘವಂ ಶತ್ರುಘ್ನಂಗೆ ಸಾಕೇತಪುರದರ್ಧಮನಕ್ಕೆ ಪೌದನಪುರದರ್ಧಮನಕ್ಕೆ ಪುಂಡರೀಕ ಪುರಮನಕ್ಕೆ ರಾಜಗೃಹಪುರಮನಕ್ಕೆ ನೀಂ ಮೆಚ್ಚಿದುದಂ ಕೊಳ್ಳೆಂಬುದುಮಾವುದುಮನೊಲ್ಲೆನುತ್ತರ ಮಧುರೆಯಂ ದಯೆಗೆಯ್ಯಿಮೆಂದು ಬಿನ್ನವಿಸೆ ರಾಮದೇವರೆಂದರಾ ಮಧುರೆಯನಾಳ್ವ ಮಧುವಿಂಗಮರೇಂದ್ರನಿತ್ತ ಶೂಲಾಯುಧಂ ಮಱುವಕ್ಕದ ಮೇಲೆ ಬಿಟ್ಟಿಕ್ಕಿದೊಡೆ ಸಾಸಿರ್ವರಂ ಕೊಂದು ಕೈಗೆ ಮಗುಳ್ದುದಲ್ಲದೆಯಾತನ ತನೂಭವಂ ಲವಣಾರ್ಣವನೆಂಬಂ ರಾವಣನಳಿಯನವನನಾರ್ಗಂ ಗೆಲಲ್ ಬಾರದು ನೀನಾ ಪೊಱಲೊಳೆಂತಿರ್ದಪೆಯೆನೆ ಶತ್ರುಘ್ನನಾಗ್ರಹದಿನದದನೆ ಬೇಡಿಕೊಳ್ವುದುಂ ಲಕ್ಷ್ಮೀಧರಂ ತನ್ನ ವಜ್ರಕವಚಮುಮಂ ಸಾಗರಾವರ್ತ ಶರಾಸನಮುಮನಗ್ನಿಮುಖ ಶಿಲೀಮುಖಮುಮಂ ಕೊಟ್ಟು ಕಳಿಪುವುದುಂ ಮಹಾಬಲಸಮೇತನಾಗಿ ಪೋಗಿ ಪುಣ್ಯಭಾಗೆಯೆಂಬ ತೊಱೆಯನೆಯ್ದಿ ತನ್ನದೀತೀರದೊಳ್ ಬೀಡಂ ಬಿಟ್ಟಿರ್ಪುದುಂ ಗುಪ್ತಚರನೊರ್ವನತಿ ತ್ವರಿತಗತಿಯಿಂ ಬಂದು ದೂರಾವನತಮಸ್ತಕಂ,

ಮಧು ಮಧುರೆಯೊಳಿರೆ ಶೂಲಾ ।
ಯುಧಮಾ ಪುರವರದ ಪೂರ್ವನಂದನವನದೊಳ್ ॥

ವಧುವುಂ ತಾನುಂ ರತಿಸುಖ ।
ಮಧುಸೇವಾಮತ್ತನತ್ತ ಮೈಮಱೆದಿರ್ದಂ ॥೫೬॥

ಎಂದು ಬಿನ್ನವಿಸೆ ಶತ್ರುಘ್ನಂ ಮನದೆಗೊಂಡು ಲಕ್ಷ ಕುದುರೆವೆರಸು ದಾಳಿಯಿಟ್ಟು ಮಧುವಿರ್ದ ಬನಮಂ ಮುತ್ತಿಪೊಱಪೊೞಲೊಳಿರ್ದವರಂ ಪೇಸೇೞ್ ಕೊಲ್ವುದುಂ ಮಧು ಕೇಳ್ದು ಬನಮಂ ಪೊಱಮಟ್ಟು ಯುದ್ಧಂಗೆಯ್ವ ಸಮಯದೊಳ್ ಸೇನಾಪತಿ ಕೃತಾಂತವಕ್ತ್ರಂ ಮಧುತನೂಭವನಪ್ಪ ಲವಣಾರ್ಣವನ ಜೀವನಮಂ ಬಾಡಬಾನಲನಂತೆ ತವಿಸಿ ಕೃತಾಂತವಕ್ತ್ರಕ್ಕೆ ಸೋವತಂ ಮಾಱ್ಪುದುಮದಂ ಕಂಡು ಮಧು ಮುಳಿದು ಬರೆ ಶತ್ರುಘ್ನಂ ಕಾದಲೆಯ್ತರ್ಪುದುಂ ತನ್ನ ಶೂಲಾಯುಧಮತ್ತಲಿರ್ದುದುಮಂ ಸುತನ ಸುತ್ತುದುಮಂ ಬಗೆದು ತನ್ನ ಸಾವಂ ನಿಶ್ಚಯಿಸಿ ಕೈದುವಿಂಗೆ ಕೈಯನೊಯ್ಯದೆ ವಿರೋಧಿಬಲದಾಯುಧಕ್ಕೆ ಮೆಯ್ಯನೊಪ್ಪಿಸಿ ತನ್ನಸಹಸ್ರಕುಂತಲಮಂ ಪಂಚಮುಷ್ಟಿಯಿಂ ಪಱಿಮುಕೊಂಡು ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿತ್ಯಾಗಂಗೆಯ್ದು ಮಹಾವ್ರತಮನೇಱಿಸಿಕೊಂಡು ಸಂನ್ಯಸನದಿಂ ಪ್ರಾಣಪರಿತ್ಯಾಗಂಗೆಯ್ದು ಸನತ್ಕುಮಾರ ಕಲ್ಪಕ್ಕೆ ಸಂದನಿತ್ತಲ್,

ಪಗೆಯಂ ಸಾಧಿಸಿ ರಿಪುವನಿ ।
ತೆಗಿತ್ತು ವೈಧವ್ಯದೀಕ್ಷೆಯಂ ಶತ್ರುಘ್ನಂ ॥
ಬಗೆದ ಬಗೆ ಕೂಡೆ ಜಯಲ ।
ಕ್ಷ್ಮಿಗೆ ವಲ್ಲಭನಾಗಿ ಮಧುರೆಯೊಳ್ ಸುಖಮಿರ್ದಂ ॥೫೭॥

ಇತ್ತ ವಿಜಯಾರ್ಧಪರ್ವತದ ದಕ್ಷಿಣಶ್ರೇಣಿಯ ರತ್ನಪುರಮನಾಳ್ವ ರತ್ನರಥಂಗಳಂ ಚಂದ್ರಾನನೆಗಂ ಪುಟ್ಟಿದ ಕನ್ಯಾರತ್ನಮಂ ಮನೋರಮೆಯನಾರ್ಗೆ ಕುಡುವಮೆಂದು ನಾರದನಂ ಬೆಸಗೊಳ್ವುದುಂ ತ್ರಿಖಂಡಮಂಡಲಾಧಿಪತಿಯಪ್ಪ ಲಕ್ಷ್ಮೀಧರಂಗೆ ಕುಡುವುದೆನೆ ರತ್ನರಥನುಮವನ ಮಕ್ಕಳಪ್ಪ ಹರಿಯುಂ ಮನೋವೇಗನುಂ ಮೊದಲಾಗೆಲ್ಲರುಂ ಕೇಳ್ದು ಕಲುಷವಶಗತರಾಗಿ,

ಕೆಳೆಯ ಪಗೆಯೊಡನೆ ಪಗೆಯಂ ।
ಬಳೆಯಿಪುದಂ ಬಿಟ್ಟು ಕೂಸುಗೊಟ್ಟನುನಯಮಂ ॥
ಬಳೆಯಿಸುವುದೆಂದು ನುಡಿದೀ ।
ಗಜಪಂ ನಮ್ಮ ಳವನಱೆಯಲೊಡರಿಸಿ ನುಡಿದಂ ॥೫೮॥

ಎಂದು ಕಿಡೆನುಡಿದು ಪೊಱಮಡಿಸಿ ಕಳೆಯ ಕಡುಮುಳಿದು ನಾರದಂ ಮನೋರಮೆಯ ರೂಪಂ ಪಟದೊಳ್ ಬರೆದು ಲಕ್ಷ್ಮಣಂಗೆ ತೋಱೆ ತನ್ನಂ ಪರಿಭವಿಸಿದುದುಮಂ ಪೇೞೆ ಕೇಳ್ದು,

ನೆಲನೆಡೆ ನೆಱೆಯದು ಭೂಚರ ।
ಬಲಕ್ಕೆ ಖೇಚರಬಲಕ್ಕೆ ನಭಮೆಯ್ದದೆನಲ್ ॥

ಬಲಭದ್ರಯುತಂ ಲಕ್ಷ್ಮಣ ।
ನಲಂಘ್ಯಬಲಸೆತ್ತಿ ಮುತ್ತಿದಂ ತತ್ಪುರಮಂ ॥೫೯॥

ಅಂತು ರತ್ನಪುರಮಂ ಮುತ್ತುವುದುಂ ರತ್ನರಥಂ ತನ್ನ ಮಕ್ಕಳ್ವೆರಸು ಮಹಾಯುದ್ಧಂಗೆಯ್ದು ವಿರಥನಾಗಿ ಬೆನ್ನೀಯೆ ಬೆನ್ನನೆ ಪರಿತಂದು,

ಕಡುಗಲಿತನದಿಂದೆನ್ನಂ ।
ಬಿಡೆ ನುಡಿವ ಪೊಡರ್ಪನುಳಿಮು ಬೆಳ್ಳೆರಳೆಯವೋಲ್ ॥
ಕಡುಗಲಿಗಳಾದಿರೆನುತುಂ ।
ತೊಡೆಯಂ ಪೊಯ್ದಾರ್ದು ನಾರದಂ ನರ್ತಿಸಿದಂ ॥೬೦॥

ಅಂತು ಮುಟ್ಟಿ ಮೂದಲಿಸೆ ಪೋಗಲೆಡೆಗೆಟ್ಟು ಮುಗುಟ್ಟು ಬಂದು ಲಕ್ಷ್ಮಣಂಗೆ ಪೊಡೆವಟ್ಟು ಮನೋರಮೆಯುಂ ಕೊಟ್ಟು ರಾಮಂಗೆ ಶ್ರೀಧಾಮೆಯುಂ ಕೊಟ್ಟಾಜ್ಞೆಸನಸಪ್ಪುಕೆಯ್ವುದುಮಾತಂ ಬೆರಸು ದಕ್ಷಿಣ ಶ್ರೇಣಿಯೆಲ್ಲಮಂ ಬಾಯ್ಕೇಳಿಸಿ ನಿಖಿಳತ್ರಿಖಂಡವಲ್ಲಭನಾಗಿ ವಿಶಲ್ಯಾ ಸೌಂದರಿಯುಂ ರೂಪ ವತಿಯುಂ ವನಮಾಲೆಯುಂ ಕಲ್ಯಾಣಮಾಲೆಯುಂ ರತಿಮಾಲೆಯುಂ ಜಿತಪದ್ಮೆಯುಮಭಯಮತಿಯುಂ ಮನೋರಮೆಯುಮೆಂಬೆಣ್ಬರ್ಗಂ ಮಹಾ ದೇವೀಪಟ್ಟಮಂ ಕಟ್ಟಿ,

ಇವರಾದಿಯಾಗೆ ಲಕ್ಷ್ಮ ।
ಣವಾರ್ಯಶೌರ್ಯಂ ವಿವಾಹಮಾಂಗಲ್ಯಮಹೋ- ॥
ತ್ಸವದಿಂ ಪದಿನೆಣ್ಛಾಸಿರ ।
ಮವರೋಧವಧೂಜನಕ್ಕೆ ವಲ್ಲಭನಾದಂ ॥೬೧॥

ಆ ಮಹಾಬಲಪರಾಕ್ರಮಿಯಪ್ಪ ರಾಘವದೇವನುಂ ಜನಕಸುತೆಯುಂ ಪ್ರಭಾವತಿಯುಂ ರತಿಯುಂ ಶ್ರೀಕಾಂತೆಯುಮೆಂಬ ನಾಲ್ವರ್ ಮಹಾದೇವಿಯರ್ ಮೊದಲಾಗೆಣ್ಛಾಸಿರಮಂತಃ-ಪುರಕ್ಕಧಿಪತಿಯಾದಂ, ರಾಮಲಕ್ಷ್ಮಣರ್ ಪಲಕಾಲಂ ರಾಜ್ಯಮನನುಭವಿಸುತ್ತಿರೆ ಲಕ್ಷ್ಮಣರ ಮನೋವಲ್ಲಭೆ ವಿಶಲ್ಯಾ ಸುಂದರಿಗೆ ಶ್ರೀಧರಂ ರೂಪವತಿಗೆ ಪೃಥ್ವೀತಿಲಕ ವನಮಾಲೆಗರ್ಜುನಂ ಕಲ್ಯಾಣಮಾಲೆಗೆ ಮಂಗಲಂ ರತಿಮಾಲೆಗೆ ಶ್ರೀಕೇಳಿ ಜಿತಪದೆಗ ವಿಮಲಪ್ರಭಂ ಅಭಯಮತಿಗೆ ಸತ್ಯಕೀರ್ತಿ ಮನೋರಮೆಗೆ ಸುಪಾರ್ಶ್ವರೆಂಬ ಮಕ್ಕಳಾದರಿಂತರ್ಧ ಚಕ್ರವರ್ತಿಯ ಮಕ್ಕಳೆಣ್ಬರುಮನುದಿನ ಪ್ರವರ್ಧಮಾನ ಮನೋಹರಾಕಾರರಾಗಿ ಬಳೆಯುತ್ತುಮಿರೆ ಮತ್ತೊಂದು ದಿವಸಂ,

ಜನಕಸುತೆ ನಾಲ್ಕು ನೀರ್ ಮಿಂ ।
ದ ನಾಡೆ ಬೆಳ್ವಸವನಂ ಪಿರಾಜಿಸೆ ಕಾಂಚೀ- ॥

ನಿನದಂ ಕೈಮಿಗೆ ಲಕ್ಷ್ಮೀ ।
ವನಿತೆಯವೋಲ್ ಸಜ್ಜೆವನೆಗೆ ಬಿಜಯಂ ಗೆಯ್ದಳ್ ॥೬೨॥

ಅಂತು ಸೂಚಿಸಿವಂದು ನಿಶಾವಸಾನಸಮಯದೊಳ್,

ಶರಭದ್ವಿತಯಂ ನಿಜಮುಖ ।
ಸರೋಜಮಂ ಬಂದು ಪುಗುವುದಂ ಪುಷ್ಪಕದಿಂ ॥
ಧರಣಿಗೆ ಬೀೞ್ತರ್ಪುದನಾ ।
ಹರಿಣೇಕ್ಷಣೆ ಸೀತೆ ಕಂಡಳೆರಡಂ ಕನಸಂ ॥೬೩॥

ಅಂತು ಕಂಡ ಸ್ವಪ್ನಂಗಳಂ ರಾಮಸ್ವಾಮಿಗಱಿಪುವುದುಂ,

ಅಮಿತ ಪರಾಕ್ರಮರಿವರೆನಿ ।
ಪ ಮಕ್ಕಳಂ ಪಡೆವೆ ಶರಭಯುಗದರ್ಶನದಿಂ ॥
ಕಮಲಾನನೆ ಮತ್ತಿನ ಕನ ।
ಸು ಮನೋಹರಮಲ್ತು ಖೇದಮಂ ಪುಟ್ಟಿಸುಗುಂ ॥೬೪॥

ಎಂದು ಕನಸಿನ ಫಲಮಂ ಪೇೞ್ದಿರ್ವರುಮೇಪಯಿಸುತ್ತುಮಿರೆ ಕೆಲವು ದಿವಸಕ್ಕೆ ಸೀತೆಗೆ ಗರ್ಭಚಿಹ್ನಂಗಳ್ ತೋಱೆದುವಾ ಮಹಾನುಭಾವೆಗೆ ಜಿನಪೂಜೋತ್ಸವಮಂ ಮಾಡ್ಪ ಬಯಕೆ ಸಮನಿಸೆ ಜಿನಮಹಾಮಹಮಂ ಮಹೇಂದ್ರೋದ್ಯಾನದ ಜಿನಾಲಯಂಗಳೊಳೆಲ್ಲಮನುದಿನಂ ಮಾಡುತ್ತುಮಿರಲೊಂದು ದಿವಸಂ,

ಕಟ್ಟಿದುದಂ ಕಳೆವವರಾರ್ ।
ನೆಟ್ಟನೆ ಸತ್ಪಥದೊಳೆಸಗೆಯುಂ ಖೇದಸಮೆ- ॥
ಯ್ದಿಟ್ಟುವುದಂ ಸೂಚಿಪವೋಲ್ ।
ಪುಟ್ಟಿದುದಾ ಸತಿಗೆ ದಕ್ಷಿಣಾಸ್ಪಂದಂ ॥೬೫॥

ಆಗಳಾ ದುರ್ನಯಕ್ಕೆ ಸೀತೆ ಭಯಸ್ಥೆಯಾಗಿ ಗೃಹಮಹತ್ತರನಂ ಕರೆದಾರೇನಂ ಬೇಡಿದೊಡವರ್ಗದಂ ಕುಡುವುದೆಂದು ಪೇೞ್ದು ತಾನುಮನುದಿನಂ ಜಿನಾಭಿಷೇಕಮುಮಂ ಜಿನಪೂಜೆಗಳುಮಂ ಮಾಡುತ್ತುಮಿರಲೊಂದು ದಿವಸಂ ಜನಪದಜನಂ ಬಂದು ಬಿನ್ನವಿಸಲಣ್ಮದಿರೆ ರಾಮಸ್ವಾಮಿ ನಿಮ್ಮ ಬಂದ ಕಾರ್ಯಮನಂಜದೆ ಪೇೞಿಮೆಂಬುದುಂ ಪ್ರಜೆಗಳನುಮತದಿಂ ವಿಜಯನೆಂಬ ಮಹತ್ತರನಿಂತೆಂದಂ :

ವ್ಯಸನಿ ದುರಾತ್ಮನಪ್ಪ ದನುಜಂ ಕರಮೆಡ್ಡಮೆನಿಪ್ಪ ಸೀತೆಗಾ-
ಟಿಸಿ ಪಿಡಿದುಯ್ದೊಡಾ ಖಳ ನಿವಾಸದೊಳಿನ್ನೆಗಮಿರ್ದಳಂ ವಿಚಾ-

ರಿಸಮೊಡಗೂಡಿ ಮುನ್ನಿನಪೊಲಿರ್ಪುದು ಪಾಱಿಯೆ ಲೋಕಸೀಮೆಯಂ
ವಸುಧೆಗಧೀಶನೇಳಿಸುವುದುಂ ಪ್ರತಿಪಾಲಿಪರಾರೊ ಧರ್ಮಮಂ ॥೬೬॥

ಎಂಬುದುಂ ರಾಮನದಂ ಕೇಳ್ದು,

ಜನಮೆಂದಂತುಟೆ ಭಾವಿಸ ।
ದನಯಮನಾಂ ನೆಗೞ್ದೆನೆಂದು ಪಶ್ಚಾತ್ತಾಪಂ ॥
ತನಗಧಿಕಮಾಗೆ ರಘುನಂ ।
ದನನುಬ್ಬರಮೆನಿಸೆ ತಳೆದನಂದುಬ್ಬೆಗಮಂ ॥೬೭॥

ಜಸಮುಂ ಧರ್ಮಮುಮೞಿವಂ ।
ದೆಸಗುವುದೇಳಿದಿಕೆಯೆಂದು ವೈದೇಹಿಯುಮಂ ॥
ಬಿಸುಡಲ್ ಬಗೆದಂ ಮನುವಂ ।
ಶ ಸಮುದ್ಭವರಾರುಮುಚಿತಮಂ ವಿಜುವರೇ ॥೬೮॥

ಅಂತು ರಾಮಸ್ವಾಮಿ ಸೀತಾದೇವಿಗತಿಸ್ನೇಹಿತನಾಗಿಯುಂ ಜನಾಪವಾದಕ್ಕೆ ಸೆಡೆದು ಪರಿಹರಿಸಲೊಡರಿಸಿ ಲಕ್ಷ್ಮಣನಂ ಬರಿಸಿ ಕಟ್ಟೇಕಾಂತದೊಳಾ ವ್ಯತಿಕರಮನಱಿಪೆ ಸೌಮಿತ್ರಿ ಕೇಳ್ದು ಕಡುಮುಳಿದು ನಿಮ್ಮಡಿಗಳವಿವೇಕಿಗಳಂತರ್ಥನಾಶಾದಿವಚನಪಂಚಕಂಗಳಂ ನುಡಿಯಲಾಗದದನಿಂತೇಕೆ ನುಡಿವಿರೆಂದು ಮತ್ತಮಿಂತೆಂದಂ:

ಸತಿ ಸೀತಾದೇವಿ ಪತಿ ।
ವ್ರತಾದಿ ಗುಣರತ್ನ ಭೂಷಣಾಲಂಕೃತೆ ತ- ॥
ತ್ಸತಿಯೊಳವಗುಣಮನೂರ್ಜಿತ ।
ಮತಿಗಳ್ ನಿಮ್ಮನ್ನರುಸಿರ್ವುದನುಚಿತಮಲ್ತೇ ॥೬೯॥

ಎನೆ ಲಕ್ಷ್ಮಣಂಗೆ ರಾಮಸ್ವಾಮಿಯಿಂತೆಂದಂ:

ಪುರುದೇವಂ ಮೊದಲಾಗಿರೆ ।
ದೊರೆವೆತ್ತಿಕ್ಷ್ವಾಕುವಂಶದವನೀಶರೊಳಾಂ ॥
ಬರಮಿಲ್ಲದುಶ್ಚರಿತ್ರಂ ।
ದೊರೆಕೊಂಡಂದೆನ್ನ ಪೌರುಷಂ ದೊರೆಗಿಡದೇ ॥೭೦॥

ಅದಱಿಂ ನೀನಿದಂ ಮಾರ್ಕೊಳ್ಳದಿರೆಂಬುದುಂ ಲಕ್ಷ್ಮೀಧರನಿಂತೆಂದಂ :

ಸೀತೆ ಗುಣಂಗಿಡೆ ಸಕಲಧ ।
ರಾತಲಮೊಡನಱೆಗುಮಲ್ಲದಂದಾ ಸತಿಯಂ ॥

ಪ್ರೀತಿಯಿನರ್ಚಿಸಿ ದಿವಿಜ ।
ವ್ರಾತಂ ಕಱಿಗುಮ ನರೇಂದ್ರ ಪೂವಿನ ಮಱಿಯಂ ॥೭೦॥

ಎಂದೆನಿತಾನುಮಂ ರಾಮಸ್ವಾಮಿಗೆ ನುಡಿದೀ ಪೊಲ್ಲವಾತಂ ಪರೆಪಿದೊಕ್ಕಲಿಗನ ನಾಲಗೆಯಂ ಕಿಟ್ಟಿಕ್ಕುವೆನೆಂಬುದುಮಂ ಲಕ್ಷ್ಮಣನ ಕೈಯ್ಯಂ ಪಿಡಿದಿದೊಂದಂ ಮಾರ್ಕೊಳ್ಳದಿರೆಂದು ತನ್ನ ಮೇಲೆ ಸೂರುಳ್ವ ಮಾರ್ನುಡಿಯದಂತು ಮಾಡಿ ಕೃತಾಂತವಕ್ತ್ರನಂ ಕರೆದು ಸೀತೆಯನೊರ್ವಳನೇ ಬೇಗಮುಯ್ದು ಭೀಮಾಟವಿಯೊಳಿಕ್ಕಿ ಬಾ ಎಂಬುದುಮಾ ಮಾತಂ ಲಕ್ಷ್ಮಣಂ ಕೇಳ್ದು ತಲ್ಲಳಿಸಿ ರಾಮಸ್ವಾಮಿಯ ಪಾದಾರವಿಂದಕ್ಕೆ ವಿನಮಿತನಾಗಿ ಮತ್ತಮಿಂತೆಂದಂ:

ಜನಕತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು ಕಾ-
ನನಮತಿ ರೌದ್ರಮಲ್ಲಿ ಪಱಿಗಂಜದೆ ಪಾತಕಮಕ್ಕುಮೆಂಬಿದಂ
ನೆನೆಯದೆ ಬಾಯ್ಗೆ ಬಂದ ತೆಱದಿಂ ಪೆಱರೆಂದೊಡೆ ಕೇಳ್ದು ಬೆಟ್ಟವೆ-
ಟ್ಟನೆ ಬಿಸುಡೆಂದು ನಿಷ್ಕರುಣ ವೃತ್ತಿಯಿನಿಂತುಸಿರಲ್ಕೆ ತಕ್ಕುದೇ ॥೭೧॥

ಎಂದು ನುಡಿದಱಿಲ್ದು ಕಳೆಯದೆನಗೆ ಕ್ಷಮಿಯಿಸುವುದೆನೆ ರಾಮದೇವನಿಂತೆಂದಂ:

ಪಱಿಯಕ್ಕೆ ಪಾಪಮಕ್ಕೆಮ ।
ಪಱುಗಱಿಪುವನೆನಗೆ ಕೂರ್ಪೊಡುಸಿರದಿರಿನ್ನೆಂ- ॥
ದಱಲದೆ ಸೀತೆಯ ಪಂಬಲ ।
ನುಱಿದೇಂ ಲೋಕಾಪವಾದ ಭೀರುವೊ ರಾಮಂ ॥೭೨॥

ಅಂತು ಸೌಮಿತ್ರಿಯನುಚ್ಚೆಗಂಬಡದಿರೆಂದು ಬಾರಿಸಲೊಡಂ ಸಭೆಯಿನೆಟ್ಟು ಪೋಪುದುಮನಂತರಂ ಕೃತಾಂತವಕ್ತ್ರಂಗೆ ರಾಮಸ್ವಾಮಿಯೆಂದನಯೋಧ್ಯಾ ನಗರದ ಸಮ್ಮೇದ ಪರ್ವತದ ಸಮೀಪದೆಡೆಯ ಜಿನಾಲಯಂಗಳಂ ವಂದಿಸಿ ನಿಮ್ಮ ಬಯಕೆಯಂ ತೀರ್ಚಿ ಬರ್ಪಂ ಬನ್ನಿಮೆಂದು ಸೀತೆಯನೊಡಗೊಂಡು ಪೋಗಿ ಭೀಮಾಟವಿಯೊಳ್ ನಿರ್ಜನಮಪ್ಪಲ್ಲಿ ಬಿಟ್ಟುಬರ್ಪುದೆನೆ,

ಸೇವೆಯೆ ಕಷ್ಟಂ ಸೀತಾ ।
ದೇವಿಯನೀಡಾಡಿ ಬರ್ಪುದಡವಿಯೊಳೆನೆ ದೋ- ॥
ಷಾವಿಲಮನಳ್ಕಿ ರಾಘವ ।
ದೇವಂಗೆ ಕೃತಾಂತವಕ್ತ್ರನವನೇಗೊಂಡಂ ॥೭೪॥

ಅಂತು ಬೆಸನಂ ಕೈಕೊಂಡು ಸೀತಾದೇವಿಯ ಕೆಲಕ್ಕೆ ಬಂದು,

ರಾಮಂ ಕಲಿಸಿದ ತೆಱದಿಂ ।
ರಾಮೆಗೆ ಪುಸಿನುಡಿದು ರಥಮನೇಱಿಸಿಕೊಂಡಾ ॥

ಭೀಮಾಟವಿಯಂ ಕರಿಹರಿ ।
ಭೀಮಾಟನಮಂ ಕೃತಾಂತನಂತೆಯ್ತಂದಂ ॥೭೫॥

ಆ ಮಹಾಗಹನಮಂ ಪೊಕ್ಕು ತನ್ಮಧ್ಯನಿರ್ಝರವಾರಿಧಾರಾಪರೀತ ಗಿರಿದರೀ ಪ್ರದೇಶದೊಳ್ ಮಹಾಸತಿಯಂ ರಥದಿನಿೞಿಪಿ ಮನ್ಯುಗದ್ಗದ ಕಂಠನಾಗಿ ಕಣ್ಣೀರ್ಗಳಂ ನೆಗಪುವ ಕೃತಾಂತವಕ್ತ್ರನಂ ಸೀತಾದೇವಿ ಕಂಡಿದೇಕೆ ಶೋಕಂಗೆಯ್ವೆ ಪೇೞೆಂದೊಡಾತನೆಂದನಬ್ಬಾ ನಿಮ್ಮ ಮೇಲೆ ಲೋಕಮೆಲ್ಲಮಭಿಯೋಗಮನಿಟ್ಟೊಡರಸಂ ನಿಮ್ಮನಡವಿಯೊಳ್ ಬಿಸುಟ್ಟು ಬರವೇೞ್ದೊಡಿಲ್ಲಿಗೆ ತಂದೆನೆನೆ ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಱಿದುಂ ಬೇಗದಿಂ ಚೇತರಿಸಿ ಕೃತಾಂತವಕ್ತ್ರಂಗಿಂತೆಂದಳ್ ರಾಮದೇವರ್ ಸಕಲ ವಸುಧಾತಲಮಂ ನ್ಯಾಯದಿಂ ಪ್ರತಿಪಾಲಿಸುವುದು ದೇವ ಗುರುಪೂಜೆಯಂ ಮಱೆಯದಿರ್ಪುದು ಜನಾಪವಾದಭಯದಿನೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದರ್ಹತ್ಪರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪು ದೆನಗೆ ದಯೆಗೆಯ್ವರಪ್ಪೊಡೆಂದಳೆಂಬುದಂ ಮಱೆಯದೆ ಪೇೞೆಂದು ಬಾಷ್ಪಜಲಲುಳಿತ ಲೋಚನೆ ತಲೆಯಂ ಬಾಗಿ ನೆಲನಂ ಬರೆಯುತ್ತಿರ್ದಳಂ ಕೃತಾಂತವಕ್ತ್ರಂ ನೋಡಿ,

ತರುಣಿಯನಂತರ್ವತ್ನಿಯ ।
ನರಣ್ಯದೊಳ್ ಬಿಸುಡವೇೞ್ದೊಡೀ ಬೆಸನಂ ಕಾ- ॥
ಪುರುಷನನೇಗೊಂಡೆಂ ಕಿಂ ।
ಕರಭಾವದಿನಪ್ರಶಸ್ತಮಾವುದುಮುಂಟೇ ॥೭೬॥

ಎಂದು ತನ್ನಂ ನಿಂದಿಸಿಕೊಂಡು ಕಣ್ಣೀರ್ಗಳಂ ಸುರಿಯುತ್ತುಂ ಸೀತಾದೇವಿಗೆ ಪೊಡೆಮಟ್ಟು ಕ್ಷಮಿಸುವುದೆಂದು ಬೀೞ್ಕೊಂಡು ಕೃತಾಂತವಕ್ತ್ರನಯೋಧ್ಯೆಗೆ ಪೋದನಿತ್ತಲ್,

ಗುಣವತಿ ರಾಘವನಂ ಲ ।
ಕ್ಷ್ಮಣನಂ ನೆನೆನೆನೆದು ಶೋಕಪಾವಕನೆರ್ದೆಯೊಳ್ ॥
ಮಣೆಯದೆ ದಳ್ಳಿಸೆ ಕಣ್ಗಳ ।
ಪೊಣರಿಂ ಕಣ್ಬನಿಗಳುಣ್ಮೆ ದೆಸೆಗೆಟ್ಟಿರ್ದಳ್ ॥೭೭॥

ಅಂತಿಷ್ಟವಿಯೋಗವಿಕಲೆ ದಶದಿಶಾಮುಖದತ್ತದೃಷ್ಟಿ ಪೆಱರಾರುಮಂ ಕಾಣದೆ,

ಜಿನಮುನಿಯಂ ಪೆಱವುಂ ಪ್ರಾ ।
ಣಿ ನಿಕಾಯಮನಕ್ಕೆ ನಾಡೆ ನೋಯಿಸಿದೆಂ ಮು- ॥
ನ್ನಿನ್ನ ಜನ್ಮದೊಳಂತಲ್ಲದೊ ।
ಡೆನಗಿನಿವಿರಿದೊಂದವಸ್ಥೆ ಬಱಿದಾದಪುದೇ ॥೭೮॥

ಎಂದು ಜಿನಾಗಮ ಕುಶಲೆಯಪ್ಪುದಱಿಂ ತನ್ನಂ ತಾನೆ ನಿಂದಿಸಿಕೊಂಡು ಸಂತಯಿಸಿ,

ಅಪವಿಯೊಳೊರೊಳಾವೆಡೆಯೊಳಾದೊಡಮೆನ್ನರುಮಪ್ಪ ಕಾಲದೊಳ್
ಕಿಡುವರೆ ಕೇಡು ಮೂಡಿದವರಪ್ಪೊಡೆ ನಿರ್ಮಲ ಜೈನಧರ್ಮಮಂ
ಪಿಡಿದುಪಸರ್ಗಮಂ ಬಗೆಯದಾಗಮದಿಷ್ಟದಿನೆನ್ನ ಜೀವಮಂ
ಬಿಡುವೆನಮೋಘಮೆಂದು ತೊಱೆದಳ್ ಜನಕಾತ್ಮಜೆ ಶೋಕವೇಗಮಂ ॥೮೯॥

ಅಂತು ವಿಗತಶೋಕಾವೇಗ ಮಹಾಋಷಿಯರ್ಕಳ್ ಮಹಾಗಹನದೊಳ್ ತಪಂಗೆಯ್ದ-ಪವರ್ಗಮಂ ಸಾಧಿಸುವರದಱಿಂದೆನಗಮೀ ಪ್ರದೇಶಮೊಳ್ಳಿತ್ತು ಸಮನಿಸಿತ್ತು; ಸೋಂತುಂ ಪಸಿದು ಮನ್ನಪರಿತ್ಯಾಗದೊಳ್ ಸಂನ್ಯಸನದಿಂ ಪರತ್ರೆಯಂ ಸಾಧಿಸುವೆನೆಂದು ಪರಮಾಗಮ ಭಾವನೆಯಿಂದಿರ್ಪನ್ನೆಗಮಾ ಪ್ರಸ್ತಾವದೊಳ್,

ಜನಕತನೂಜೆಯ ಸುಕೃತಮೆ ।
ಮನುಷ್ಯರೂಪಾಗಿ ಬರ್ಪ ತೆಱದಿಂ ನೃಪನಂ- ॥
ದನನೊರ್ವನಾ ಮಹಾಕಾ ।
ನನಕ್ಕೆ ಬಲಸಹಿತಮಾನೇವೇಂಟೆಗೆ ಬಂದಂ ॥೯೦॥

ಅಂತು ಬಂದನತಿ ದೂರದೊಳ್,

ವನದೇವತೆಯೋ ಲಕ್ಷ್ಮೀ ।
ವನಿತೆಯೊ ದಿವದಿಂದಮಿೞಿದ ಮೇನಕೆಯೋ ಪೇ- ॥
ೞೆನುತುಂ ಜಾನಕಿಯಂ ಲೋ ।
ಚನ ಪಥದೊಳ್ ಮುಂದೆ ವಪ್ಪ[illegible] ಕಂಡಂ ॥೯೧॥

ಅಂತು ಕಂಡೆಯ್ದ[illegible]ಮ ವಿಸ್ಮಯಸ್ತಿಮಿತ ಲೋಚನನಕ್ಕೆ ನೀಮಾರ್ಗೆನಿತ್ತಮಿ ಕಾನನದೊಳಿರ್ದಿರೆಂಬುದು ಮಹಾಪದ್ಯಚರಿತನೆಂದಱಿದಿಂತೆಂದಳಾಂ ಜನಕತನೂಜೆಯೆಂ ಪ್ರಭಾಮಂಡಲನನುಜೆಯೆಂ ರಘುರಾಮನ ಭಾರ್ಯೆಯೆಂ ಸೀತಾದೇವಿಯೆಂಬೆನೆನ್ನಮೇಲೆ ಜನಪದ ಜನಂ ಪೊಲ್ಲನಪ್ಪ ರಾವಣನುಯ್ದುಳಂ ತಂದು ವಿಚಾರಿಸದೆ ಮಹಾದೇವೀ ಪಟ್ಟಂಗಟ್ಟುವುದಾವುಮುಚಿತಮೆಂದಿಟ್ಟಳವಿಟ್ಟು ನುಡಿಯೆ ಲೋಕಾಪವಾದಕ್ಕೆ ರಾಮಸ್ವಾಮಿ ನಾಣ್ಚಿ ಕೃತಾಂತವಕ್ತ್ರನೆಂಬ ಪಡೆವಳನಂ ಕರೆದು ಸಮ್ಮೇದಂ ಮೊದಲಾದ ತೀರ್ಥಸ್ಥಾನಂಗಳ ಜಿನಾಲಯಂಗಳಂ ವಂದಿಸಿ ಬರ್ಪಮೆಂದು ನಂಬೆ ನುಡಿದೊಡಗೊಂಡುಯ್ದು ಬಿಸುಟ್ಟು ಬರ್ಪುದೆಂದೊಡಾತನೆನ್ನಂ ನಿರಪರಾಧೆಯಂ ತಂದಿಲ್ಲಿ ಬಿಸುಟು ಪೋದನೆಂದು ಮಹಾದೇವಿ ಕಣ್ಣೀರ್ಗಳಂ ನೆಗಪೆ,

ಪವಣೆಲ್ಲದ ಸೀತೆಯ ಶೋ ।
ಕವಹ್ನಿಯಂ ಸೂಕ್ತಿಸಲಿಲದಿಂ ನಂದಿಸಿದಂ ॥

ಭವವಿಭವದ ಚಪಲತೆಯಂ ।
ಸವಿಸ್ತರಂ ತಿಳಿಪಿ ವಜ್ರಜಂಘನರೇಂದ್ರಂ ॥೮೨॥

ಅನಂತರಮಿಂತೆಂದನಾಂ ಸೋಮವಂಶದರಸಂ ದ್ವಿರದವಾಹನಂಗಂ ಸುಬಂಧೂ ಮಹಾದೇವಿಗಂ ಪುಟ್ಟಿದೆಂ ವಜ್ರಜಂಘನೆಂಬೆಂ ಪುಂಡರೀಕಿಣೀಪುರಮನಾಳ್ವೆಂ. ಜಿನಧರ್ಮದ ದೆಸೆಯಿಂ ನೀಮೆನಗೆ ತಂಗೆವಿರಪ್ಪಿರ್; ಬಿಜಯಂಗೆಯ್ಯಿಮೆಂದು ಸಿವಿಗೆಯನೇಱಿಸಿಕೊಂಡು ಪೋಗಿ ಕಾಂತಾರಮಂ ಕಳಿದನುಕ್ರಮದಿಂ ಪುಂಡರೀಕಿಣೀ ಪುರಮನೆಯ್ದಿ ನಿಜರಾಜಭವನಮಂ ಪೊಕ್ಕು ಶೀಲವತಿವೆಸರ ನಿಜಾಗ್ರಜೆಯ ಮಾಡಕ್ಕುಯ್ದು, ರಾಮದೇವರ ಭಾರ್ಯೆ ಜನಕತನೂಭವೆ ಪ್ರಭಾಮಂಡಲನ ತಂಗೆ ಸೀತಾದೇವಿ; ನಮಗಂ ಜಿನಧರ್ಮದ ದೆಸೆಯಿಂದೊಡವುಟ್ಟಿದಳೆಂದು ಸಮರ್ಪಿಸಿ, ಸೀತಾದೇವಿಯಂ ನಿಮಗೆ ಪ್ರಭಾಮಂಡಲನಿಂದಗ್ಗಳಮಾಗೆ ಬೆಸಕೆಯ್ವೆನೆಂದು ಸಂತೋಷಂಬಡೆ ನುಡಿದು ವಜ್ರಜಂಘಂ ತನ್ನ ಮಾಡಕ್ಕೆ ಪೋದನಿತ್ತಲ್,

ಜಿನಮುನಿಗಾಹಾರಮನನು ।
ದಿನಮಿತ್ತು ಜಿನೇಂದ್ರಪೂಜೆಯಂ ಮಾಡುತ್ತುಂ ॥
ಮನಮೊಸೆದು ಶೀಲವತಿಯುಂ ।
ಜನಕಜೆಯುಂ ಕೂಡಿ ದಿವಸಮಂ ನಡೆಯಿಸಿದರ್ ॥೮೩॥

ಇತ್ತಲಾ ಕೃತಾಂತವಕ್ತ್ರಂ ಪೋಗಿ ರಾಘವನಂ ಕಂಡು ಸೀತೆ ಕಲಿಸಿದ ಮಾತೆಲ್ಲಮಂ ಪೇೞೆ ಕೇಳ್ದು ಮೂರ್ಛೆವೋಗಿ ನೀಡಱಿಂದೆೞ್ಚತ್ತು ಮತ್ತಮತಿ ಪ್ರಲಾಪಂಗೆಯ್ಯೆ ಲಕ್ಷ್ಮಣನುಂ ಶೋಕವಿಕಲನಾಗೆ ಕೃತಾಂತವಕ್ತ್ರನವರ ಶೋಕಮನುಪಶಮಿಸೆ ರಾಮಚಂದ್ರಂ ಚಂದ್ರಕಲಶನೆಂಬ ಸೀತಾಮಹತ್ತರನುಂ ಕರೆದು,

ಜಿನಪತಿಪೂಜೆಯಂ ಮುನಿಜನಕ್ಕೆ ಚತುರ್ವಿಧಮಪ್ಪ ದಾನಮಂ
ಜನಕತನೂಜೆ ಪೇೞ್ದ ತೆಱದಿಂ ನೆಗೞೆಂದು ಪುರೋಹಿತಂಗೆ ಸ-
ಜ್ಜನ ಮಹಿತಂಗೆ ಪೇೞ್ದನಭಿರಾಮನಶೇಷ ಕಲಾಕಲಾಪ ಕೋ-
ಕನದ ಭವಂ ಪರಾರ್ಥಚರಿತಂ ಪ್ರಥಿತಂ ಕವಿತಾಮನೋಹರಂ ॥೮೪॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರಮುನೀದ್ರಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಸೀತಾಪರಿತ್ಯಾಗ ವರ್ಣನಂ
ಪಂಚದಶಾಶ್ವಾಸಂ



# ೧೬. ಪರಿನಿರ್ವಾಣಕಲ್ಯಾಣೋತ್ಸವ ವರ್ಣನಂ

ಶ್ರೀಕಾಂತಂ ವಿಶದಯಶಃ ।
ಶ್ರೀಕಾಂತಂ ಚಂದ್ರಕಲಶನಂ ನಿಯಮಿಸಿದಂ ॥
ಸ್ವೀಕೃತ ಸತ್ಸಂಗಂ ದೂ ।
ರೀಕೃತ ದೋಷಾನುಸಂಗನಭಿನವಪಂಪಂ ॥೧॥

ಅಂತು ನಿಯಮಿಸುವುಮಂ ಪುರೋಹಿತಂ ಚಂದ್ರಕಲಶನನುದಿನಮಾ ಮಾರ್ಗದಿಂ ನೆಗೞುತ್ತುಮಿರ್ಪುದುಮಿತ್ತಲ್,

ಆ ಸೀತೆ ಪೂರ್ಣಮೆನೆ ನವ ।
ಮಾಸಂ ಶ್ರವಣ ಪ್ರಸಕ್ತನೆನೆ ತುಹಿನಕರಂ ॥
ವಾಸವನಿಭರಂ ಶ್ರಾವಣ ।
ಮಾಸದೆ ಪೌರ್ಣಮಿಯ ಪಗಲೊಳಮಳಂ ಪೆತ್ತಳ್ ॥೨॥

ಅಂತವಳಂ ಪೆತ್ತು ಮಹಾವಿಭೂತಿಯಿಂ ಜಾತೋತ್ಸವಮಂ ಮಾಡಿ ಶುಭದಿನಮುಹೂರ್ತದೊಳಿರ್ವರ್ ತನೂಭವರ್ಗಂ ಲವನುಂ ಕುಶನುಮೆಂದು ಪೆಸರನಿಟ್ಟು ಶುಕ್ಲಪಕ್ಷದ ಚಂದ್ರಂತನುದಿನೋಪಚಯಮನಪ್ಪುಕೆಯ್ದು ಶೈಶವಮನಧಃಕರಿಸಿದಿಂ ಬೞಿಕ್ಕೆ,

ಅವರಂ ಸಿದ್ಧಾರ್ಥಂ ಕಲಿ ।
ಸುವುದುಂ ಕಲ್ತರ್ ನಿರಂಕುಶರ್ ತಮ್ಮನ್ನರ್ ॥
ಭುವನದೊಳಿಲ್ಲೆಂಬಿನೆಗಂ ।
ಲವಾಂಕುಶರ್ ಕಲೆಗಳಂ ಚತುಷ್ಷಷ್ಟಿಗಳಂ ॥೩॥

ಮತ್ತಂ ಶಸ್ತ್ರಾಸ್ತ್ರ ವಿದ್ಯೆಗಳೆಲ್ಲಮಮಂ ನೆಱೆಯೆ ಕಲ್ತು ನವಯೌವನ ಪ್ರಾಪ್ತರಪ್ಪುದುಂ ವಜ್ರಜಂಘಂ ಶಶಿಮಾಲೆಯೆಂಬ ತನ್ನ ಮಗಳ್ವೆರಸು ಮೂವತ್ತಿರ್ವರ್ ಕನ್ನೆಯರಂ ಲವಂಗೆ ಕಲ್ಯಾಣೋತ್ಸವದಿಂ ಮದುವೆಯಂ ಮಾಡಿ ಬೞಿಕ್ಕಂಕುಶಂಗಂ ಪೃಥ್ವೀಪುರಮನಾಳ್ವ ಪೃಥುವಿಗಮಾತನರಸಿಯಪ್ಪಮೃತಮತಿಗಂ ಪುಟ್ಟಿದ ಕನಕಮಾಲೆಯಂ ಬೇಡಿ ಪೆರ್ಗಡೆಗಳ ನಟ್ಟದೊಡಾತನಿಂತೆಂದಂ :

ಎನ್ನ ಮಗಳಂ ಮದೀಯ ಕು ।
ಲೋನ್ನತಿ ಪೆಜಪಿಂಗುವನ್ನಮಜ್ಞಾತಕುಲಂ- ॥
ಗೆನ್ನನೆರೆದಟ್ಟಿದಂ ಗಡ ।
ತನ್ನಳವಂ ವಜ್ರಜಂಘನೇಂ ನಚ್ಚಿದನೋ ॥೪॥

ಎಂದು ಬಂದ ಪೆರ್ಗಡೆಗಳಂ ಗರ್ಜಿಸಿ ವಿಸರ್ಜಿಸುವುದುಂ ಬಂದವನ ದುರ್ವಿನಯ ವಚನಮಂ ಜಿನ್ನಪಂಗೆಯ್ಯೆ ವಜ್ರಜಂಘನತಿಕುಪಿತನಾಗಿ ಮೇಲೆತ್ತಿ ಬರ್ಪುದುಂ ವ್ಯಾಘ್ರರಥನೆಂಬ ಪೃಥುವಿನ ಪರಮಬಂಧು ತಿಳಿದು ಮುಳಿದು ಪೊಣರ್ಕೆಗೆ ಬರ್ಪುದುಮವನವಯವದೊಳೆ ಕಾದಿ ಪಿಡಿದು ಕಡುಕೆಯ್ದು ಮೀಱಿ ಮೇಲೇೞ್ತರ್ಪುದುಮಂ ಪೃಥು ಕೇಳ್ದು ತಾನುಮಿದಿರೆತ್ತಿ ಬರ್ಪುದುಂ ವಜ್ರಜಂಘನಱೆದು ಪುಂಡರೀಕಿಣೀ ಪುರಕ್ಕೆ ತನ್ನ ಮಗಂಗೆ ಬಱೆಯನಟ್ಟುವುದುಮಾತನೊಡನೆ ಸಮಗ್ರ ಸಾಮಗ್ರಿಸಹಿತನಾಗಿ,

ಕನ್ನೆಯನೀಯದ ಪೃಥುವಂ ।
ಬನ್ನಮನೆಯ್ದಿಸಲೊಡರ್ಚಿ ಮುನಿಸನುವಿಸೆ ತೋ- ॥
ರ್ಪಂ ನಮ್ಮ ಕೂರ್ಪನೆಂದು ಸ ।
ಮುನ್ನತವೀರ್ಯರ್ ಲವಾಂಕುಶರ್ ತಱೆಸಂದರ್ ॥೫॥

ಅಂತು ತಱೆಸಂದು ಬಂದು ವಜ್ರಜಂಘನೊಳ್ ಕೂಡುವುದುಂ ಪೃಥು ಕೇಳ್ದು ವಂಗಮಗಧಾದಿ ವಿಷಯದರಸುಗಳಂ ಕೂಡಿಕೊಂಡಸಂಖ್ಯಾತ ಬಲಸಮೇತನಾಗಿ ಪೊಱಮಟ್ಟೊಡ್ಡಿ ನೆಱೆದಿ ಕಾದಿ ಲವಾಂಕುಶರ್ಗೆ ಸೋಲ್ತೋಡುವಾಗಳವರಱೆಯದ ಕುಲದವರ್ಗೆ ಬೆನ್ನೀವುದು ನಿಮಗೆ ಪಸುಗೆಯಲ್ಲೆಂದು ಮೂದಲಿಸುತ್ತುಂ ಮುಟ್ಟೆವರ್ಪುದುಂ ಪೃಥು ಪೋಗಲೆಡೆಗೆಟ್ಟು ಕೈಮುಗಿದೆನ್ನ ಗೆಯ್ದ ದೋಷಕ್ಕೆ ಸೈರಿಸಿಮೆಂದು ವಿನತನಾಗೆ ಲವಾಂಕುಶರ್ ಕ್ಷಮಿಯಿಸುವುದುಮಾತನವರಂ ತಮ್ಮ ಪೊೞಲ್ಗುಯ್ದು ಕುಶಂಗೆ ಕನಕಮಾಲೆಯಂ ಕೊಡುವುದುಮಾ ಪೊೞಲೊಳೊಂದು ದಿನಮಿರ್ದು ಮಱುದಿವಸಂ ವಜ್ರಜಂಘನಂ ಪುಂಡರೀಕಿಣೀ ಪುರಕ್ಕೆ ಕಳಿಪಿ ಲವಾಂಕುಶರ್ ದಿಗ್ವಿಜಯಪ್ರಯಾಣಭೇರಿಯಂ ಪೊಯ್ಸಿ ವಂಗಮಗಧ ವಿಷಯಂಗಳಾದಿಯಾಗೆ ಸಕಲ ವಿಷಯಂಗಳಂ ಬಾಯ್ಕೇಳಿಸಿ ಗಂಗೆಯಂ ದಾಂಟಿ ಕೈಲಾಸನಗ ದುತ್ತರ ದಿಗ್ಭಾಗಮನೆಯ್ದಿಸಿಂಧುವಂ ಮುಟ್ಟೆವಂದು ಪಶ್ಚಿಮ ಸಮುದ್ರ ತೀರಂಬಿಡಿದು ನಡೆದು ಕಪ್ಪಂಗೊಂಡು ಸಿದ್ಧ ದಿಗ್ವಿಜಯರ್ ಸಕಲರಾಜ ಸಮಾಜಂ ಬೆರಸಿ ಮಗುೞ್ದು ಬಂದು ಮಹಾ ವಿಭೂತಿಯಿಂ ಪುಂಡರೀಕಿಣಿಯಂ ಪೊಕ್ಕು ಸುಖದಿನಿರ್ಪುದುಮಿತ್ತಲ್,

ಜಾನಕಿಯಿರ್ದೆಡೆಯಂ ಹಿಂ ।
ಸಾನಂದಂ ತಿಳಿದು ನಾರದಂ ನಡೆದು ನಭೋ- ॥
ಯಾನದೊಳೆ ವಜ್ರಜಂಘ ಮ ।
ಹೀನಾಥನ ಪುಂಡರೀಕಪುರಮಂ ಪೊಕ್ಕಂ ॥೬॥

ಅಂತು ಪುರಮಂ ಪೊಕ್ಕು ಲವಾಂಕುಶರಂ ಕಾಣ್ಬುದುವರಿಜ್ಞಾಕಾರಮಂ ಗೆಯ್ದು ಮಣಿಮಯಾಸನಮಂ ಕುಡುವುದುಂ ರಾಮಲಕ್ಷ್ಮಣರಂತೆ ಮಹಾನುಭವರಾಗಿಮೆಂದು ಪರಸುವುದುಂ,

ಅವರ ಕುಲಮಾವುದವರಾ ।
ವವನೀವಲ್ಲಭ ತನೂಭವರ್ ಪೌರುಷಮೇ- ॥
ನವರ್ಗೆಂದತಿ ಕೌತುಕದಿಂ ।
ಲವಾಂಕುಶರ್ ಮಾಯಾಜೋಗಿಯಂ ಬೆಸಗೊಂಡರ್ ॥೭॥

ಅಂತು ಬೆಸಗೊಳ್ವುದುಂ ನಾರದನಿಂತೆಂದನವರಿಕ್ಷ್ವಾಕು ವಂಶದ ದಶರಥಮಹೀನಾಥನ ತನೂಭವರ್, ಜನಕನ ಮಗಳಪ್ಪ ಸೀತಾದೇವಿ ರಾಮದೇವರ ಮಹಾದೇವಿಯಾಗಿ ಸುಖಸಂಕಥಾವಿನೋದದೊಳಿರಲೊಂದು ದಿವಸಂ ದಶರಥ ಮಹಾರಾಜಂ ವೈರಾಗ್ಯಪರನಾಗಿ ದೀಕ್ಷೆಗೊಳಲುದ್ಯೋಗಂಗೆಯ್ದು ರಾಮನಂ ಕರೆದು ರಾಜ್ಯಪಟ್ಟಮಂ ಕಟ್ಟಲೆಂದಿರ್ಪುದುಮಾ ಸಮಯದೊಳ್ ಕೈಕಾಮಹಾದೇವಿಯದಂ ಕೇಳ್ದು ಬೇಗಂ ಬಂದು ದೇವರೆನಗೆ ಕಾರುಣ್ಯಂಗೆಯ್ದು ಮೆಚ್ಚಂ ದಯೆಗೆಯ್ವುದೆಂದು ಬಿನ್ನಪಂಗೆಯ್ವುದುಂ, ತಪೋವಿಘ್ನಮಪ್ಪುದು ಪೊಱಗಾಗೆ ನಿನ್ನ ಮೆಚ್ಚಿದುದಂ ಬೇಡಿಕೊಳ್ಳೆಂಬುದುಂ, ಭರತಂಗೆ ರಾಜ್ಯಮಂ ಕುಡುವುದೆನೆ ವಿಸ್ಮಯಚಿತ್ತನಾಗಿ ದಶರಥನೊಂದುಮಂ ನುಡಿಯಲಱೆಯದಿರ್ಪುದುಂ ತಂದೆಯ ನನ್ನಿಯಂ ಸಲಿಸಲೆಂದು ರಾಮಸ್ವಾಮಿ ಭರತಂಗೆ ರಾಜ್ಯಮನಿತ್ತು ದಂಡಕಾರಣ್ಯದೊಳಿರೆ ರಾವಣಂ ಸೀತಾದೇವಿಯಂ ಕಂಡಾಸಕ್ತನಾಗಿ ತನ್ನ ಕುಲಾಚರಣಂಗೆಟ್ಟು ಕಳ್ದುಕೊಂಡು ಪೋದನೆಂದಾ ವೃತ್ತಾಂತಮನಾದ್ಯಂತ ಮೆಱೆಯೆ ಪೇಳ್ದು ಮತ್ತಮಿಂತೆಂದಂ ರಾಮಲಕ್ಷ್ಮಣರಱೆದುಸಮಸ್ತ ವಿದ್ಯಾಧರ ಸಹಿತ ಸುಗ್ರೀವಪ್ರಭಾಮಂಡಲ ಹನುಮತ್ಸಹಿತರಾಗೆತ್ತಿ ಪೋಗಿ ರಾವಣನಂ ಕೊಂದು ತ್ರಿಖಂಡಮಂಡಲಾಧಿಪತಿಗಳಾಗಿ ವಿಭೀಷಣಂಗೆ ಲಂಕೆಯ ರಾಜ್ಯಪಟ್ಟಂಗಟ್ಟಿ ದಿಗ್ವಿಜಯಮಂ ಸಾಧಿಸಿ ಮಗುಳ್ದು ಬಂದು ಅಯೋಧ್ಯೆಯೊಳ್ ಸುಖದಿಂ ರಾಜ್ಯಂಗೆಯ್ಯುತ್ತುಮಿರಲೊಂದು ದಿವಸಂ ರಾಮಂಗೆ ಜನಪದ ಜನಂಗಳ್ ನೆರೆದು ಬಂದು ಸೀತಾದೇವಿಯನೊಳಕೊಂಡಿರಲಾಗದೆಂದಪವಾದಮಂ ಪೊರ್ದಿಸಿ ನುಡಿಯೆ ಲಕ್ಷ್ಮೀಧರನಂ ಕರೆದು ಕಟ್ಟೇಕಾಂತದೊಳ್ ಪೇಳೆ ಲಕ್ಷ್ಮೀಧರಂ ಸೀತಾದೇವಿ ಮಹಾಸತಿಯುಂ ಗುಣವತಿಯುಮಪ್ಪದಱೆಂದೀಗಳೀ ನುಡಿ ನಿಮಗುಸಿರಲ್ ತಕ್ಕುದಲ್ತೆಂದು ಕರಂ ಪ್ರಾರ್ಥಿಸಿ ದೇವರೆನಗೆ ಕಾರುಣ್ಯಂಗೆಯ್ದೊಡಿದೊಂದಂ ಕ್ಷಮಿಯಿಸುವುದೆಂದೊಡವಾಜ್ಞೆಯಂ ಮೀಱದಿರಿನ್ನುಮಿದರ್ಕೆ ನೀನೇನುಮಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿಯದಂತು ಮಾಡಿ ಜನಪದದ ಪೞಿಗೇವಯಿಸಿ ನೀವಾ ಪರಮೇಶ್ವರಿಯ ಗರ್ಭದೊಳಿರ್ದಂದು ತೊಱೆದು ಕೃತಾಂತವಕ್ತ್ರನೆಂಬ ತನ್ನ ಪಡೆವಳನಂ ಕರೆದು ಪೋಗಿ ಅರಣ್ಯದೊಳೀಡಾಡಿ ಬಾಯೆಂದು

ಪೇೞ್ವುದುಮಾತಂ ತಂದೀಡಾಡಿ ಪೋಪುದುಂ ವಜ್ರಜಂಘಂ ಕಂಡನುಬಂಧ ಸ್ನೇಹದಿಂದೊಡಗೊಂಡು ಬಂದು ಸೀತಾದೇವಿಗೆ ಬೆಸಕೆಯ್ಯುತ್ತಿರ್ಪುದುಂ ನೀಮುಂ ಪುಟ್ಟದಿರೆಂಬುದನಱಿದು ಬಂದೆವಾವದು ಕಾರಣದಿನವರ್ ನಿಮ್ಮ ತಂದೆವಿರಪ್ಪುದಱಿಂದವರ ಪರಾಕ್ರಮ ಸೌಂದರ್ಯಮಂ ಪೋಲ್ವರಾಗಿಮೆಂದು ಪರಸಿದೆವೆಂಬುದುಮದಂ ಕೇಳ್ದು ಕದನ ಕೇಳೀನಿರಂಕುಶನಂಕುಶನಿಂತೆಂದಂ :

ತಕ್ಕರ ಮಾತಂ ಕೇಳದೆ ।
ತಕ್ಕೊರ್ಮೆಯನುೞಿದು ತೊಱೆದು ಗುಣವತಿಯಂಪಾ- ॥
ಪಕ್ಕಂಜದ ಜಡಮತಿಯಂ ।
ತಕ್ಕುದೆ ಪೊಗೞಲ್ಕೆ ರಾಮನಂ ನಿರ್ಗುಣನಂ ॥೮॥

ಎಂದಯೋಧ್ಯಾಪುರಮಿಲ್ಲಿಗೆನಿತುಂಟೆಂಬುದುಂ ನಾರದಂ ನೂಱಯ್ವತ್ತು ಯೋಜನಮೆನೆ ಕೇಳ್ದಾಕ್ಷಣದೊಳೆ ಸಮಸ್ತ ಬಲಂ ಬೆರಸೆತ್ತಿ ನಡೆದು ಕತಿಪಯ ದಿನಕ್ಕಯೋಧ್ಯಾಪುರಮನೆಯ್ದಿ ಹಸ್ತ್ಯಶ್ವರಥಪದಾತಿ ಬಲಮನೊಡ್ಡಿ ಲವಾಂಕುಶರ್ ಸಿಂಧುರಾರೂಢರಾಗಿ ಬಹಿಃಪುರದೊಳ್ ಬೀಡಂ ಬಿಡುವುದುಮಿತ್ತ ಸಿದ್ಧಾರ್ಥ ಕ್ಷುಲ್ಲಕ ನಾರದಂ ಪ್ರಭಾಮಂಡಲನಲ್ಲಿಗೆ ಪೋಗಿ ಲವಾಂಕುಶರ ತೆಱನನೆಲ್ಲಮನಱಿಪುವುದುಮಾತಂ ವ್ಯಾಕುಲಚಿತ್ತನಾಗಿ ವಿದೇಹಿಗಳ್ವೆರಸು ಪುಂಡರೀಕಪುರಕ್ಕೆವರ್ಪುದುಂ ಸೀತಾದೇವಿ ಕಂಡಿದಿರೆಟ್ಟು ತಂದೆಗಂ ತಾಯ್ಗಮಣ್ಣಂಗಮೆಱಗಿ ಪೊಡೆಮಟ್ಟು ಮನ್ಯುಮಿಕ್ಕು ದುಃಖಂಗೆಯ್ದಿಂ ಬೞಿಯಂ ಪ್ರಭಾಮಂಡಲಂ ರಾಮಲಕ್ಷ್ಮಣರ ದೆಸೆಯಿಂ ಕೂಸುಗಳ್ಗೆ ಪ್ರಮಾದಮಾಗದಂತು ನಾಮಯೋಧ್ಯೆಗೆ ಪೋಪಂ ಬಿಜಯಂ ಗೆಯ್ಯಿಮೆಂದು ಸೀತಾದೇವಿಯಂ ಲವಾಂಕುಶರರಸಿಯರಂ ರತ್ನವಿಮಾನಮನೇಱಿಸಿಕೊಂಡು ನಭೋಮಾರ್ಗದಿಂ ಬಂದು ಲವಾಂಕುಶರೊಳ್ ಕೂಡುವುದುಮಿತ್ತಲ್,

ಪರಚಕ್ರಮೆಮ್ಮ ಬಾಹಾ ।
ಪರಿಘಕ್ಕಿದಿರೆತ್ತಿ ಬಂದುದೆಂದತಿ ಕುಪಿತರ್ ॥
ಸೆರಗಂ ಪಾರದಯೋಧ್ಯಾ ।
ಪುರಗೋಪುರಮಂ ಬಲಾಚ್ಯುತರ್ ಪೊಱಮಟ್ಟರ್ ॥೯॥

ಅಂತು ಪೊಱಮಟ್ಟು ಬಂದು ಕೈವೀಸುವುದುಂ,

ಕುಲವಾಹಿನಿಯೊಳ್ ತಾಗುವ ।
ಕುಲವಾಹಿನಿಯಂತೆ ತಾಗಿ ಕಳೆದುದು ಜಯಮಂ ॥
ಗೆಲೆ ಕಾದಿ ರಾಮಲಕ್ಷ್ಮಣ ।
ಬಲಮಂ ಸಂಗ್ರಾಮದೊಳ್ ಲವಾಂಕುಶರ ಬಲಂ ॥೧೦॥

ಲವನ ಬಲಕ್ಕೆ ರಾಘವಬಲಂ ಪೆಱಪಿಂಗೆ ಕಡಂಗಿ ರಾಘವಂ
ಲವನೊಳಿದಿರ್ಚೆ ರಾಘವನ ಕೇತನಮಂ ಧನುವಂ ವರೂಥಮಂ
ಲವನುಡಿಯೆಚ್ಚೊಡಿರ್ಮೆ ವಿರಥಂ ರಘುನಂದನನಾದನಾವನಾ-
ಹವದೊಳಿದಿರ್ಚಿ ಜೀವಿಸುವವಂ ಲವನಂ ಜವನಂ ಮಹೀಭುಜಂ ॥೧೧॥

ಆಗಳೆ ಮತ್ತಮೊಂದು ರಥಮಂ ರಘುನಂದನನೇಱೆ ಮಾರ್ಗಣ-
ಕ್ಕಾಗಸಮೆಯ್ದುದಂತಿಸುವುದುಂ ತಱಿದೊಟ್ಟಿದನಂತವಂ ಮನೋ-
ವೇಗದಿನಸ್ತ್ರಸಂತತಿಗಳಿಂ ಸುರ ಸಂತತಿ ರಾಘವಂಗೆ ಚಾ-
ಪಾಗಮದೊಳ್ ಲವಂ ಶತಸಹಸ್ರಗುಣಂ ಮಿಗಿಲಾದನೆಂಬಿನಂ ॥೧೨॥

ಅಂತು ಸಾಮಾನ್ಯಾಸ್ತ್ರಂಗಳಂ ಖಂಡಿಸೆ ರಾಘವಂ ದಿವ್ಯಾಸ್ತ್ರಂಗಳೊಳಂ ಕಾದಿ ಲವನಂ ಗೆಲಲ್ ನೆಱಿಯದೆ ವಿಸ್ಮಯಚಿತ್ತನಾಗಿರ್ಪಿನಮಿತ್ತಲ್,

ಭರವಶದಿಂದಕುಶನೊಳ್ ।
ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂ- ॥
ಧರನೊಳ್ ನೆಱಿವಂತಿರೆ ಶರ ।
ಪರಿಣತಿಯಂ ನೆಱಿಯೆ ಮೆಱಿದೆ ಕಾದುತ್ತಿರ್ದಂ ॥೧೩॥

ಅಂತಚಿಂತ್ಯಯುದ್ಧಂಗೆಯ್ವ ಸಮಯದೊಳ್,

ಪರಶುವಿನೊಳ್ ಲಕ್ಷ್ಮೀಧರ ।
ನುರಗೆಲನನನಂತೆ ವೀರ್ಯನಂಕುಶನಿಡೆ ಕಣ್ ॥
ತಿರಿದು ಬರೆ ಮಱಿದು ಮೆಯ್ಯಂ ।
ಪರವಶದಿಂ ಕೇತುದಂಡಮಂ ನೆಮ್ಮಿರ್ದಂ ॥೧೪॥

ಅಂತು ಮೂರ್ಛಿತನಾಗಿ,

ನೀಡಱಿನೆಚ್ಚಿತ್ತು ರಣ ।
ಕ್ರೀಡಾಸಕ್ತಂ ಸರಕ್ತಲೋಚನನಿವನಂ ॥
ನಾಡಾಡಿಯ ಕೈದುಗಳಿಂ ।
ಕೂಡದು ಗೆಲಲೆಂದು ಚಕ್ರಿ ಚಕ್ರದೊಳಿಟ್ಟಂ ॥೧೫॥

ಇಡೆ ಕಡುಪಿಂದಂಕುಶನಂ ।
ನಡಲೊಲ್ಲದೆ ಚಕ್ರರತ್ನಮಿರ್ದೆಸೆಗಮದೇ- ॥
ನೆಡೆಯಾಡುತಿರ್ದುದೋ ಸಾ ।
ಪೊಡರಿಸದರಸಾವ ಕೈದುಗಳುಮುರ್ಚುಗುಮೇ ॥೧೬॥

ಅಗಳಂಕುಶಂ ನಿರಂಕುಶನೆನಿಸಿ,

ಸವ್ಯಾಪಸವ್ಯಮೆಚ್ಚು ಪಿ ।
ತೃಪ್ಯನ ಕೈವಿಡಿದ ವಿಜಯವಧುವಂ ಕೈಕೊಂ- ॥
ಡವ್ಯಾಜಶೌರ್ಯಸಂಕುಶ ।
ನವ್ಯತ್ವನ್ನನವೊಲಿಂತು ಮೊರೆದಪ್ಪುವನೇ ॥ ॥೧೭॥

ಇಂತಂಕುಶಂ ಗೆಲೆ ಕಾವೆ ಲಕ್ಷ್ಮಣನಾತ್ಮಗತನೆಂದನೆಮ್ಮ ಪುಣ್ಯಪ್ರಭಾವಂ ತೊಲಗಿದುದೀಗಳಿವರ್ ಬಲದೇವ ವಾಸುದೇವರಾದರೆಮಗಜೇಯರೆಂದು ಮನದೊಳ್ ಸುರಗತಿಯಂ ನಿಶ್ಚಯಿಸಿ ಸರಸಂರಂಭಮನುಱಿದಿರ್ಪುದುಮತ್ತ ಸಿದ್ಧಾರ್ಥ ಕ್ಷುಲ್ಲಕನಾರದಂ ನೀರದಪಥದೊಳಿರ್ದು ಬಲದೇವ ವಾಸುದೇವರೆಂಬ ಮಹಿಮೆ ನಿಮಗಲ್ಲದೆ ಪೆಱರ್ಗೆ ಸಲ್ವುದೆ ಪೇೞಿಮೆಂದು ನಗುತ್ತುಂ ಲಕ್ಷ್ಮಣಂಗಿಂತೆಂದಂ ಇವರ್ ಸೀತಾದೇವಿಯ ತನೂಜರ್ ಲವಾಂಕುಶರೆಂಬರ್ ತಮ್ಮ ಜನನಿಯಂ ವಿಚಾರಮಿಲ್ಲದೆ ಪೊಱಮಡಿಸಿ ಕಳೆದರೆಂದದಕ್ಕೆ ಮುಳಿದು ನಿಮ್ಮನೀತೆಱದಿಂ ಕಾಣಲ್ ಬಂದರೆಂದಱೆಪುವುದುಮತಿ ಪ್ರಮೋದ ಮುದಿತ ಹೃದಯನಾಗಿ,

ಧನುವಂ ದಿವ್ಯೇಷುಗಳಂ ।
ತನುತ್ರಮಂ ಕಳೆದು ಲಕ್ಷ್ಮಣಂ ದಶರಥರಾ- ॥
ಮನನೆಯ್ದೆ ಬಂದು ಕೈಮುಗಿ ।
ದು ನಮನ್ಮಣಿ ಮಯಕಿರೀಟನಂದಿಂತೆಂದಂ ॥೧೮॥

ಈತಂಗಳಿರ್ವರುಂ ರೂ ।
ಪಾತಿಶಯದೊಳಸಮ ಶೌರ್ಯದೊಳ್ ನಿಮ್ಮನ್ನರ್ ॥
ಸೀತಾದೇವಿಯ ಸೂನುಗ ।
ಳೀ ತೆಱದಿಂ ಕಾಣಲೆಂದು ಬಂದರ್ ನಿಮ್ಮಂ ॥೧೯॥

ಎಂದು,

ತನಗೆ ಲವಾಂಕುಶಾಗಮನವೃತ್ತಕಮಂ ತಿಳಿವಂತು ಪೇೞೆ ತ-
ನುಜನವಕ್ಕೆ ವಿಸ್ಮಯಮುಮುತ್ಸುಕಭಾವಮುಮಾದಮಪ್ಪುದುಂ
ತನಯರನಾಗಳಂತೆ ಪಡೆದಂತನುರಾಗಮನಪ್ಪುಕೆಯ್ದು ಭೋಂ-
ಕನೆ ರಥದಿಂದಮಂದಿೞಿದು ಬಂದನುಪೇಂದ್ರಯುತಂ ರಘೂದ್ವಹಂ ॥೨೦॥

ಆ ಸಮಯದೊಳ್,

ಆನೆಯ ಮೇಗಣಿಂದಿೞಿಮು ಸಂಭ್ರದಿಂದಿದಿರ್ವಂದು ರಾಘವಂ
ಗಾನತರಾಗಿ ಮವಳಿಮಣಿ ದೀಪ್ತಿಜಲಂಗಳಿನೀಯೆ ಪಾದ್ಯಮಂ

ಸೂಸುಗಳಟ್ಟಿಜೆಂ ತೆಗೆದು ತಳ್ಕೈಸಿದಂ ನಿಜದೇಹಕಾಂತಿಸಂ-
ತಾನ ಮರುತ್ಪ್ರವಾಹಿನಿಯೊಳಿರ್ವರುಮಂದವಗಾಹಮಿರ್ಪಿನಂ ॥೨೦॥

ಕ್ರಮದಿಂ ಲವಾಂಕುಶರ್ವಿ ।
ಕ್ರಮಧನರತಿ ಹರ್ಷಧಾರದಿದೆಱಗೆ ನಿಜ- ॥
ಕ್ರಮಯುಗಳಕ್ಕಾಶೀರ್ವಾ ।
ದ ಮುಖರಮುಖನಾದನಾ ಸುಮಿತ್ರಾಪುತ್ರಂ ॥೨೧॥

ಅಂತು ರಾಮಲಕ್ಷ್ಮಣರ್ ತನೂಭವರಂಗ ಪರಿಷ್ವಂಗ ಸುಖಾನುಭವದಿಂ ತಣಿದು ಲವಾಂಕುಶರ ಪುರುಷಾಕಾರಮಂ ಮನದೆಗೊಂಡಾನಂದ ಬಾಷ್ಪಜಲಲುಳಿತ ಲೋಚನರುಂ ರೋಮಾಂಚ ಕಂಚುಕಿತ ಶರೀರರುಮಾಗಿರ್ಪಿನಮತ್ತ ಸೀತಾದೇವಿ ತನೂಭವರ ಭುಜಬಲಮುಮಂ ತಂದೆವಿರೊಳೊಂದಿದುಮಂ ವಿಮಾನಾರೂಢೆ ಕಂಡು ಸಂತೋಸಂಬಟ್ಟು ವಿಯನ್ಮಾರ್ಗದಿಂ ಪುಂಡರೀಕಪುರಕ್ಕೆ ಪೋದಳಿತ್ತ ರಾಮಲಕ್ಷ್ಮಣ ಲವಾಂಕುಶರ್ ಪುಷ್ಪಕವಿಮಾನಮನೇಱೆ ಸುಗ್ರೀವ ವಿರಾಧಿತ ವಿಭೀಷಣ ಹನುಮದಂಗದಾದಿ ವಿಯಚ್ಚರರಿಂ ಪೆಱರುಮಱೆಕೆಯ ಭೂಮಿಗೋಚರ ಮಹೀಭುಜರಿಂ ಪರಿವೃತರಾಗಿ ಕೈಗೆಯ್ದು ಸಾಕೇತ ಪುರಮಂ ಪೊಕ್ಕು ಸುಖದಿನಿರ್ಪುದುಮೊಂದು ದಿವಸಂ ಸುಗ್ರೀವ ಸುಷೇಣ ಜಾಂಬವ ಪ್ರಮುಖರಧಿರಾಜನಲ್ಲಿಗೆ ಬಂದವಸರಂ ಬಡೆದು,

ಪರವಿಷಯದೊಳಿರಿಪುದೆ ಸ ।
ಚ್ಚರಿತ್ರೆಯಂ ದೇವ ಜಾನಕೀದೇವಿಯನಿಂ ॥
ಬರಿಸುವುದಿದನೇಗೊಳ್ವುದು ।
ಕರುಣಿಪುದೆಮಗೆಂದು ವಿನಯಮಂ ಪ್ರಕಟಿಸಿದರ್ ॥೨೨॥

ಎಂದು ಬಿನ್ನವಿಸೆ ರಾಘವನಿಂತೆಂದಂ :

ಲೋಕಾಪವಾದ ಭಯದಿಂ ।
ದಾಕೆಯನಾಂ ಕಳೆದೆನವಗುಣಾರೋಪಣದಿಂ ॥
ಪೋ ಕಳೆದೆನೆ ಸಚ್ಚರಿತದೊ ।
ಳಾಕೆಗೆ ಸಮನಾರುಮಿಲ್ಲದುನನಾನಱಿವೆಂ ॥೨೪॥

ಅದಱಿನೆಲ್ಲರುಮಱಿವಂತು ದಿವ್ಯದಿನಪವಾದಮಂ ಕಳೆವಂತು ಮಾಳ್ಪುದೆನೆ ಅವರ್ ಮಹಾಪ್ರಸಾದಮೆಂದು ಬೀಳ್ಕೊಂಡು ಪುಂಡರೀಕಪುರಕ್ಕೆ ಬಂದು ಸೀತಾದೇವಿಯಂ ಕಂಡು ಕೈಮುಗಿದು ರಾಮದೇವರ್ ಕಾರುಣ್ಯಂಗೆಯ್ದು ತೆಱನನಱಿಪೆ ವೈದೇಹಿ ವಿಷಯವಿರಕ್ತೆ ವಿದ್ಯದೊಳ್ ಶುದ್ಧೆಯಾಗಿ ತಪಂಬಡುವೆನೆಂದು ಮನದೊಳ್ ಪರಿಚ್ಛೇದಿಸಿ ಪುಷ್ಪಕವಿಮಾನಮನೇಱೆ

ಗಗನಮಾರ್ಗದಿಂ ಬಂದಯೋಧ್ಯೆಯನೆಯ್ದಿ ನೇಸರ್ ಪಡುವುದುಂ ಮಹೇಂದ್ರೋದ್ಯಾನದೊಳಿರುಳಂ ಕಳಿಪಿ ಮಱುದಿವಸಂ ರಾಘವನಂ ಕಂಡು,

ಅವಿಚಾರಂ ಕಳೆದೆನ್ನನಿಂತಿನಿತು ನೋವಂ ಮಾಡಿದಿರ್ ದೇವರೆಂ-
ದು ವಿಷಾದಂ ಮಿಗೆ ನೊಂದು ಸೀತೆ ನುಡಿದಳ್ ತಾನಂತದಂ ಕೇಳ್ದ ರಾ-
ಘವದೇವಂ ಜನತಾಪವಾದಭಯದಿಂದೀ ಖೇದಮಂ ಮಾಡಿದೆಂ
ಭುವನಖ್ಯಾತಮೆನಿಪ್ಪ ನಿನ್ನ ಚರಿತಂ ಪೇೞರ್ಗಮಜ್ಞಾತಮೇ ॥೨೫॥

ಅದಱಿಂ ಲೋಕಪ್ರತ್ಯಯಮಪ್ಪಂತು ಮಾಡ್ಪುದೆನೆ ಮಹಾಪ್ರಸಾದಮೆಂದು ಪಿರಿದಪ್ಪುದೊಂದು ಕೊಂಡಮನಗುೞಿಸಿ ಚಂದನದಗರುವಿನಿಂ ಧನಂಗಳುಮಂ ಸುಗಂಧದ್ರವ್ಯಂಗಳುಮನಿಕ್ಕಿ ಕಿರ್ಚಂ ತಗುಳ್ಚುವುದುಮಾ ಸಮಯದೊಳ್ ಸಕಲಭೂಷಣ ಭಟ್ಟಾರಕರ ಕೇವಲಜ್ಞಾನಪೂಜೆಗೆ ಬರ್ಪ ದೇವನಿಕಾಯದೊಳ್ ದೇವೇಂದ್ರಂ ಸೀತಾದೇವಿಯ ಮಹೋಪಸರ್ಗಮನಱಿದು ಮೇಘಕೇತನನೆಂಬ ದೇವನಂ ನೀನೀ ಮಹಾಸತಿಯುಪಸರ್ಗಮಂ ಪಿಂಗಿಸಿ ಬರ್ಪುದೆಂದು ನಿಯಮಿಸಿ ಪೋದನಿತ್ತ ಮೇಘಕೇತನನುರಿಯುತ್ತಿರ್ದ ಕುಂಡದ ಸಮೀಪದ ವಿಯನ್ಮಂಡಲದೊಳ್ ವಿಮಾನಾರೂಢನವಲೋಕಿಸುತ್ತಿರ್ದನಾ ಪ್ರಸ್ತಾವದೊಳ್ ಸೀತಾದೇವಿ ತದಗ್ನಿಕುಂಡದೇಱೆಯಂ ಮೆಟ್ಟಿ,

ನೆರೆದ ವಿಯಚ್ಚರಾಮರನರ ಪ್ರಮುಖರ್ಕಳುಮೆಯ್ದೆ ಕೇಳೆ ಸು-
ಸ್ವರಮಿಱಿಕೆಯ್ಯ ಕೋಕಿಲ ಕಲಸ್ವರಮಂ ನುಡಿದಳ್ ವಸುಂಧರಾ-
ವರನನಿಸಿರ್ದ ರಾಘವನೊಳಲ್ಲದೆ ರಾವಣನಾದಿಯಾಗೆ ಮಿ-
ಕ್ಕರೊಳಱಿಪಂ ಮನಕ್ಕೆ ತರೆ ಮಾರಣಮಕ್ಕೆನಗೀ ಕೃಶಾನುವಿಂ ॥೨೬॥

ಎಂದತಿಪ್ರತಿಜ್ಞೆಗೆಯ್ದು ಪಂಚಪರಮೇಷ್ಠಿಗಳ್ಗೆ ನಮಸ್ಕಾರಂಗೆಯ್ದು ಧಗದ್ಧಗಿಸಿ ತಿಣ್ಣಮುರಿಯುತ್ತಿರ್ದ ಕುಂಡದೊಳಗೆ ಮೆಯ್ಯನೀಡಾಡೆ,

ಮರವಟ್ಟಿತ್ತು ಮರುದ್ಗಣಂ ಪರಿಜನಂ ಬೆರ್ಚಿತ್ತು ಶೋಕಾಗ್ನಿಯಿಂ-
ದುರಿದತ್ತಾಪ್ತಜನಂ ಲವಾಂಕುಶರೊಳಾದತ್ತಾಕುಲಂ ವಿಹ್ವಲಂ
ಪಿರಿದಾದತ್ತು ರಘೂದ್ವಹಂಗೆ ಪರಿತಾಪಂ ಲಕ್ಷ್ಮಣಂಗಾಗಳು-
ಬ್ಬರಮಾದತ್ತು ಲತಾಂಗಿ ಸೀತೆ ಪುಗೆ ತೇಜಃಪಿಂಡಮಂ ಕುಂಡಮಂ ॥೨೭॥

ಅಂತು ಮಹಾಸತಿ ನೀರಂ ಪುಗುವಂತೆ ಕಿರ್ಚಂ ಪುಗುವುದುಂ,

ಜಳದೇವತೆ ಕೋಡುವ ತಿಳಿ ।
ಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿ- ॥

ತ್ಸೆಳಮಿರೆ ಮನದೊಳ್ ಜಿನಪತಿ ।
ಚರಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ ॥೨೮॥

ಸತಿಯ ವಿಶುದ್ಧಾಚಾರಂ ।
ಹುತಾಶನಪ್ರಬಲ ದಾಹಿಕಾಶಕ್ತಿಯುಮಂ ॥
ಪ್ರತಿಬಂಧಿಸಿದುದು ಚೋದ್ಯಮೆ ।
ಪತಿವ್ರತಾಗುಣದ ಮಹಿಮೆ ಸಾಧಾರಣಮೇ ॥೨೯॥

ಜನಮೆಲ್ಲಮೊಂದೆ ಕೊರಲೊಳ್ ।
ಜನಕಾತ್ಮಜೆಯಂ ಪತಿವ್ರತಾಗುಣಮಣಿ ಮಂ- ॥
ಡನೆಯಂ ಪೊಗಟ್ಟುದು ಸನ್ಮಾ ।
ರ್ಗನಿರತರಂ ಮೆಚ್ಚಿ ಪೊಗಟದಿರ್ಪರುಮೊಳರೇ ॥೩೦॥

ಪೊಂಜಲಗೆಯಂತೆ ಕೀರ್ತಿಂ ।
ದಂ ಜಾನಕಿ ಶುದ್ಧೆಯಾಗೆ ಜನನಿಯ ಕೆಲದೊಳ್ ॥
ಸಂಜಾತ ಪುಲಕಕಲಿಕಾ ।
ರಂಚಿತ ತನುಗಳ್ ಲವಾಂಕುಶರ್ ಕುಳ್ಳಿರ್ದರ್ ॥೩೧॥

ರಾಮಂ ರೋಮಾಂಚಮಂ ತಾಳ್ದಿದನಣಮೊಸೆದಂ ಲಕ್ಷ್ಮಣಂ ಬಂಧುವರ್ಗಂ
ಪ್ರೇಮಕ್ಕಾವಾಸಮಾದತ್ತಖಿಲ ಪರಿಜನಂ ಹರ್ಷಮಂ ತಾಳ್ದಿದತ್ತು-
ದ್ದಾಮಂ ಪೊಣ್ಮೆತ್ತು ದೇವಾನಕರುತಿ ಕುಲವೃದ್ಧರ್ಕಳೆಟ್ಟಿಡಿದರ್ ದಿ-
ವ್ಯಾಮೋದಂ ಗಂಧವಾಹಂ ಸುಟಿದುದು ಪರಸಿತ್ತಟ್ಟಿಜೆಂ ರಾಜಲೋಕಂ ॥೩೨॥

ಆಗಳ್ ರಾಮಸ್ವಾಮಿ ಸೀತಾದೇವಿಯ ಸಮೀಪಕ್ಕೆ ಬಂದು,

ಕ್ಷಮಿಯಿಸುವುದೆನಗೆ ನೀಂ ಮು ।
ನ್ನಮಿರ್ದ ತೆಱದಿಂ ಮದೀಯ ವಲ್ಲಭೆಯಾಗಿ- ॥
ರ್ದಮೃತಾಂಶುವದನೆ ಸಾಮ್ರಾ ।
ಜ್ಯ ಮಹಿಮೆಯೊಳ್ ನೆರೆದು ಪಡೆಯೆ ಸುಖಸಂಪದಮಂ ॥೩೩॥

ಎಂದು ನುಡಿಯೆ ಸೀತಾದೇವಿ ರಾಮಸ್ವಾಮಿಗಿಂತೆಂದಳೆನ್ನ ಮುನ್ನುಪಾರ್ಜಿಸಿದ ಕರ್ಮಮೆನಗೆ ಪಿರಿದಪ್ಪ ದುಃಖಮಂ ಮಾಡಿದೊಡಾ ಕರ್ಮಕ್ಕೆ ಮುಳಿವೆನಲ್ಲದುೞಿದವರ್ಗೇಕೆ ಮುಳಿವೆಂ, ಕೇಡುಳ್ಳ ಸಂಸಾರದೊಳಪ್ಪುದೇಂ, ಕೇಡಿಲ್ಲದ ಮೋಕ್ಷಸುಖಕ್ಕೆ ಕಾರಣಮಪ್ಪ ತಪಮಂ ಕೈಕೊಳ್ವೆನೆಂದು ತನ್ನಸಹಸ್ರ ಕುಂತಲಂಗಳಂ ಮುಂದಿಕ್ಕುವುದುಮಂ,

ಸತಿಯ ಪರಿಚ್ಛೇದಮೆ ತನ ।
ಗತಿದುಃಖಮನುಂಟುಮಾಡೆ ಮೋಹಗ್ರಹಪೀ- ॥
ಡಿತನಾಗಿ ರಾಘವಂ ಮೂ ।
ರ್ಛಿತನಾದಂ ಪ್ರಿಯವಿಯೋಗಮಂ ಸೈರಿಪರಾರ್ ॥೩೪॥

ಅಂತು ಮೂರ್ಛಿತನಾಗಿ ಶೀತಲಕ್ರಿಯೆಗಳಿನೆಂತಾನುಮೆೞ್ಚತ್ತನನ್ನೆಗಮಿತ್ತ ವೈದೇಹಿ ಪೃಥುಮತಿ ಕಂತಿಯರ ಪಕ್ಕದೆ ತಪಂಗೊಂಡು ಮಹೇಂದ್ರೋದ್ಯಾನವನಕ್ಕೆ ಪೋಗಿ ಸಕಲಭೂಷಣ ಕೇವಲಿಭಟ್ಟಾರಕರ ಸಭೆಯೊಳಿರ್ಪುದುಂ,

ಮುಚ್ಚೆದಿಳಿದರಸಿಯೊಳ್ ಬಗೆ ।
ಬೆಚ್ಚಿರೆ ಶೀಲವತಿ ಸೀತೆ ಪೂಣ್ದುದನೆಂತುಂ ॥
ಪುಚ್ಚಟಿಯಳೆನ್ನದಱಿಪಿಂ ।
ಬೆಚ್ಚರಮಾ ಸಭೆಗೆ ರಾಘವಂ ಬಱಸಂದಂ ॥೩೫॥

ಅಂತತಿ ವ್ಯಾಮೋಹದಿಂ ಬಂದು ಸಕಲ ಲೋಕಾಧಿಪರಿಂ ಪರಿವೃತರಾಗಿರ್ದ ಸಕಲ ಭೂಷಣ ಕೇವಲಿಗಳ ಸಭೆಯನೆಯಲೊಡಂ ರಾಮನ ಮೋಹನೀಯ ಕರ್ಮಮುಪಶಮಕ್ಕೆ ಸಲ್ವುದುಮಾನೆಯಿಂದಿೞಿದು ಬಂದು ಬಲಗೊಂಡು ಪೊಡೆವಟ್ಟು ಕುಳ್ಳಿರ್ದನಾ ಸಭೆಯೊಳ್ ಪೃಥುಮತಿ ಗಂತಿಯರ ಸಮಕ್ಷದೊಳ್ ದೀಕ್ಷೆಗೊಂಡಿರ್ದ ಸೀತಾದೇವಿಯಂ ಕಂಡು,

ತ್ರಿದಶರ್ ಪೂಜಿಸೆ ಮಾನವರ್ ಪೊಗೞೆ ಶೌಚಾಚಾರಮಂ ದಿವ್ಯದಿಂ
ವಿದಿತಂ ಮಾಡಿದರಾರ್ ಮಹಾಸತಿಯರಾರ್ ನಿಮ್ಮಂದದಿಂ ಮೋಕ್ಷಸಂ-
ಪದಮಂ ಮಾಡುವ ದೀಕ್ಷೆಗೊಂಡರೆನುತುಂ ಕೈಕೊಂಡು ಲಕ್ಷ್ಮೀಧರಂ
ಮೊದಲಾಗೆಲ್ಲರುಮೞ್ಕಱಿಂದೆಱಗಿ ಸೀತಾಸಂಸ್ತವಂ ಮಾಡಿದರ್ ॥೩೬॥

ಅಂತು ಗುಣಸ್ತವನಂಗೆಯ್ದು ದಿವಿಜಸಭೆಯೊಳಿರ್ದು ಧರ್ಮಮಂ ಕೇಳ್ದ ಬೞಿಕ್ಕೆ ವಿಭೀಷಣಂ ಸಕಲಭೂಷಣ ಭಟ್ಟಾರಕರ್ಗೆ ಕರಕಮಲಮಂ ಮುಗಿದು ಪೂರ್ವಜನ್ಮದೊಳ್ ರಾಮನಾವುದೊಂದು ಪುಣ್ಯಮನುಪಾರ್ಜಿಸಿ ಸಕಲ ವಿದ್ಯೆಗಳಂ ಕಲ್ತು ಮಹಾವಿಭವಸಹಿತನಾದಂ ಮತ್ತಂ ಶೌಚಾಚಾರ ಪರಾಯಣನಪ್ಪ ವಿದ್ಯಾಧರ ವಲ್ಲಭಂ ರಾವಣನಾವ ಪಾಪಂಗೆಯ್ದನಾಗಿ ಸೀತಾದೇವಿಗೆ ಮರುಳ್ಗೊಂಡು ಪೋದನಾರ್ಗಮಸಾಧ್ಯನುಂ ಜಗದ್ವಿಜಯಿಯುಮಪ್ಪ ರಾವಣನಂ ಲಕ್ಷ್ಮಣನಾವುದೊಂದು ಪುಣ್ಯಂಗೆಯ್ದನಾಗಿ ಸಂಗ್ರಾಮದೊಳ್ ಕೊಂದು ಭರತತ್ರಿಖಂಡ ಮಂಡಲಾಧೀಪತಿಯಾದನದೆಲ್ಲಮಂ ಬೆಸಸಿಮೆನೆ,

ಮದನಫಣಿ ನಿರ್ವಿಷೀಕರ ।
ಣದಿವ್ಯ ಮಂತ್ರಸ್ವನಂ ಜರಾಮರಣ ಶಿಲಾ- ॥

ವಿದಳನ ಟಂಕಧ್ವನಿ ಪೊ ।
ಣ್ಮಿದತ್ತು ಕೇವಲಿಯ ಮಧುರಗಂಭೀರರವಂ ॥೩೭॥

ಈ ಭರತದ ಯಕ್ಷಪುರದ ನಯದತ್ತನೆಂಬ ಪರದಂಗಮಾತನ ಪರದಿತಿ ಸುನಂದೆಗಂ ಪ್ರಥಮ ಜನ್ಮದೊಳ್ ಧನದತ್ತನೆಂಬ ತನೂಜನಾಗಿ ಜಿನಧರ್ಮಮಂ ಪಿಡಿದು ನಡೆದು ಜೀವಿತಾವಧಿಯೊಳ್ ಸೌಧರ್ಮಕಲ್ಪಗತನಾಗಿ ತದಾಯುರವಸಾನದೊಳ್ ಶ್ರಾವಸ್ತಿಪುರದ ಪರದಂ ಸಮ್ಯಗ್ದೃಷ್ಟಿಮೇರುಮೆಂಬಂಗಮಾತನೆ ಪರದಿತಿ ಧಾರಿಣಿಗಂ ಪದ್ಮರುಚಿವೆಸರ ತನಯನಾಗಿ ಜೈನ ಮಾರ್ಗದೊಳ್ ನಡೆಯೆ ಕಡೆಯೊಳೀಶಾನಕಲ್ಪದೊಳ್ ಪುಟ್ಟಿ ತದಾಯುರಬ್ಧಿಯಂ ತವೆ ಪೀರ್ದಲ್ಲಿಂ ಬಂದಪರವಿದೇಹದ ವಿಜಯಾರ್ಧನಗದ ನಂದ್ಯಾವರ್ತ ಪುರಮನಾಳ್ವ ನಂದೀಶ್ವರನೆಂಬ ವಿದ್ಯಾಧರಂಗಮಾತನರಸಿ ಕನಕಾಭೆಗಂ ನಯನಾನಂದನೆಂಬ ನಂದನನಾಗಿ ವಿದ್ಯಾಧರರಾಜ್ಯಸುಖಮನನುಭವಿಸಿ ಭೋಗನಿರ್ವೇಗದಿಂ ತಪಸ್ಥನಾಗಿ ಪಲಕಾಲಂ ತಪಂಗೆಯ್ದು ಸಮಾಧಿಯಿಂ ಮುಡಿಪಿ ಮಾಹೇಂದ್ರಕಲ್ಪಕ್ಕೆ ಪೋಗಿ ಸುರಲೋಕ ಸುಖಮನನುಭವಿಸಿ ತದನಂತರಮಲ್ಲಿಂ ಬಂದು ಪೂರ್ವವಿದೇಹದ ಕ್ಷೇಮಪುರಮನಾಳ್ವ ವಿಮಲವಾಹನ ಮಹೀಭುಜಂಗಮಾತನಂತಃಪುರ ಪ್ರಧಾನೆ ಪದ್ಮಾವತಿಗಂ ಶ್ರೀಚಂದನೆಂಬ ಮಗನಾಗಿ ರಾಜ್ಯದೊಳ್ ನಿಂದು ಬಹುಸಹಸ್ರ ಸಂವತ್ಸರಂ ರಾಜ್ಯಂಗೆಯ್ದು ಸಮಾಧಿ ಗುಪ್ತಾಚಾರ್ಯರ ಸಮಕ್ಷದೊಳ್ ದೀಕ್ಷೆಗೊಂಡುಗ್ರೋಗ್ರ ತಪಶ್ಚರಣಂಗೆಯ್ದು ಬ್ರಹ್ಮಕಲ್ಪಕ್ಕೆ ಪೋಗಿ ಬಂದೀಗಳ್ ರಾಮದೇವನಾದನೆಂಬುದುಂ,

ಬಲಭದ್ರರಾಮ ಜನ್ಮಾ ।
ವಲಿಯಂ ತಿಳಿವಂತು ಪೇಳ್ದು ಲಕ್ಷ್ಮಣನ ಭವಾ- ॥
ವಲಿಯನಮೃತಾಬ್ಧಿವೀಚೀ ।
ಕಲ ಸ್ವರಂ ನೆಗಟೆ ಭವನ ಗುರುವಿಂತೆಂದಂ ॥೩೮॥

ಮುನ್ನಂ ಪೇಳ್ದ ಯಕ್ಷಪುರದ ನಯದತ್ತನೆಂಬ ಪರದಂಗೆ ವಸುದತ್ತನೆಂಬ ಮಗನಾಗಿ ಕಾಲಂಗೆಯ್ದು ಮೃಣಾಲಕುಂಡಲ ಪುರಮನಾಳ್ವ ವಿಜಯಸೇನ ಮಹೀನಾಥನ ಮಗಂ ಶಂಭುವೆಂಬವಂಗೆ ಶ್ರೀಭೂತಿಯೆಂಬ ಪುರೋಹಿತನಾಗಿ ಸನ್ಮಾರ್ಗದೊಳ್ ನಡೆದು ನಿಜಸ್ವಾಮಿಯಪ್ಪ ಶಂಭುವಿನ ಕೈಯೊಳ್ ಕನ್ಯಾನಿಮಿತ್ತಂ ಸುತ್ತು ದೇವಗತಿವಡೆದಲ್ಲಿಂ ಬಂದು ಪ್ರತಿಷ್ಠಾಪುರದೊಳ್ ಪುನರ್ವಸುವೆಸರ ವಿದ್ಯಾಧರನಾಗಿ ತಪಂಗೆಯ್ದು ದೇವಗತಿಯನಪ್ಪುಕೆಯ್ದಲ್ಲಿಂ ಬಂದೀಗಳ್ ಲಕ್ಷ್ಮಣನಾದನೆಂದು ಬೆಸಸಿ ಬಳಿಯಂ ರಾವಣನ ಭವಾವಳಿಯನಿಂತೆಂದು ಬೆಸಸಿದರಾ ಮೃಣಾಲಕುಂಡಲಪುರಮನಾಳ್ವ ವಿಜಯಸೇನಂಗಂ ರತ್ನಮಾಲೆಗಂ ಪುಟ್ಟಿ ಶಂಭುವೆಂಬ ದಾರಕನುಂ ಜಿನಧರ್ಮ ವಿರ್ಧಾಕನುಮಾಗಿ ಮದ್ಯ ಮಧು ಮಾಂಸ ಸೇವನೆಗೆಯ್ದು ನರಕ ತಿರ್ಯಗಾದಿ ಗತಿಗಳೊಳ್ ಪಲಕಾಲಂ ತಿರಿತಂದಂತಾನುಂ ಪಾಪೋಪಶಮಮಪ್ಪುದುಮಂ

ಕುಶಧ್ವಜನೆಂಬ ಪಾರ್ವಂಗಮಾತನ ಪಾರ್ವಿತಿಗಂ ಭಾಸಕುಂಡಲನೆಂಬ ಮಗನಾಗಿ ಚಿತ್ರಸೇನ ಮುನಿಸಮೀಪದೊಳ್ ಜಾತರೂಪಧರನಾಗಿ ನಿಷ್ಠೆಯಿಂದ ನೆಗಱುತ್ತುಂ ವಂದನಾನಿಮಿತ್ತಂ ಸಮ್ಮೇದಗಿರೀಂದ್ರದ ಜಿನೇಂದ್ರಭವನಂಗಳ್ಗೆ ಪೋಗುತ್ತುಂ ಕನಕನೆಂಬ ವಿದ್ಯಾಧರನ ವಿಭೂತಿಯಂ ಕಂಡು ವಿಸ್ಮಿತನಾಗಿ ಮದೀಯ ತಪಃಫಲದಿನೆನಗವೀ ವಿಭೂತಿ ಸಮನಿಸುವುದಕ್ಕೆಂದು ವಿಧಾನಪೂರ್ವಕಂ ತಪಂಗೆಯ್ದು ಕಾಲಪ್ರಾಪ್ತನಾಗಿ ಸನತ್ಕುಮಾರಕಲ್ಪಕ್ಕೆ ಪೋಗಿ ಬಂದೀಗಳ್ ತ್ರಿಖಂಡಮಂಡಲಾಧಿಪತಿಯಪ್ಪ ರಾವಣನಾದಂ,

ಎಂದಱೆಪಿ ದಶಾಸ್ಯನ ಭವ ।
ಸಂದೋಹಮನಖಿಲ ಭುವನವಂದ್ಯಂ ಸೀತಾ- ॥
ಸುಂದರಿಯ ಭವಮನಱೆಪಲ್ ।
ಮಂದರಧೈರ್ಯಂ ಮುನೀಂದ್ರನಂದಿಂತೆಂದಂ ॥೩೯॥

ಈ ಭರತದ ಯಕ್ಷಪುರದ ಸಾಗರದತ್ತನೆಂಬ ಪರದಂಗಮಾತನ ಪರದಿತಿ ರತ್ನಪ್ರಭೆಗಂ ಗುಣಮತಿಯೆಂಬ ಮಗಳಾಗಿ ಮಿಥ್ಯಾಭಾವನೆಯಿಂ ಕಾಲಂಗೆಯ್ದನಿತಾನುಂ ಕಾಲಂ ತಿರ್ಯಗ್ಗತಿಯೊಳ್ ಪೊಱಮಡಲಾಱದಿರ್ದ ಸಮಯದೊಳ್ ನಭೋಂಗಣದೊಳ್ ಪೋಗುತ್ತುಂ ತರಂಗತಮನೆಂಬ ವಿದ್ಯಾಧರಂ ಕಂಡು ಸಮೀಪಕ್ಕೆ ಬಂದು ಪಂಚ ನಮಸ್ಕಾರಮಂ ಪೇೞ್ದುದು ಮುಪಶಮಚಿತ್ತದಿಂ ಸತ್ತು ಶ್ರೀಭೂತಿ ಪುರೋಹಿತಂಗಮಾತನ ಭಾರ್ಯೆ ಸರಸ್ವತಿಗಂ ವೇದವತಿಯೆಂಬ ಮಗಳಾಗಿ ತಮ್ಮ ಮನೆಗೆ ಚರ್ಯಾಮಾರ್ಗದಿಂ ಬಂದ ಋಷಿಯರಂ ದೂಷಿಸಿ ನುಡಿಯೆ ತಂದೆ ಬಾರಿಸಿಜಿನಧರ್ಮಸ್ವರೂಪಮಂ ತಿಳಿಯೆ ಪೇೞೆಕೇಳ್ದು ಜೈನಮಾರ್ಗದಿಂ ನಡೆಯುತ್ತುಮಿರಲಾಕೆಯಂ ಮೂಱನೆಯ ಭವದೊಳ್ ರಾವಣನಾಗಿ ಪುಟ್ಟುವ ಶಂಭು ಕಂಡು ಕಣ್ಸೋಲ್ತು ಬೇಡಿಯಟ್ಟುವುದುಂ ಶ್ರೀಭೂತಿ ಮಿಥ್ಯಾದೃಷ್ಟಿಯೆಂದು ಕೂಸುಗುಡುಲೊಲ್ಲದಿರೆ ಮುಳಿದಾತನಂ ಕೊಲಿಸಿ ಮಗುೞ್ದುಮಾ ಶಂಭುವಾಕೆಯಂ ಬೇಡುವುದುಮೊಡಂಬಡದೆ ಜನಕಶೋಕವೇಗದಿನಾತಂಗೆ ಮಱುಮೆಯ್ಯೊಳಾದೊಡಂ ವಿನಾಶ ಹೇತುವಾಗಿ ಜನಿಯಿಸುವೆನಕ್ಕೆಂದು ವಿಧಾನಪೂರ್ವಕಂ ತಪಂಗೆಯ್ದು ಕೞಿದು ಬ್ರಹ್ಮ ಕಲ್ಪದೊಳ್ ಪುಟ್ಟಿ ಬಂದು ಚಿತ್ತೋತ್ಸವೆಯೆಂಬಳಾಗಿ ಪುಟ್ಟಿ ಕ್ರಮದಿನೀಗಳ್ ಸೀತೆಯಾದಳೆಂದು ಬೆಸಸಿ ಪ್ರಭಾಮಂಡಲನ ಭವಾವಳಿಯನಿಂತೆಂದು ಬೆಸಸಿದರ್ ಗುಣವರ್ಮನೆಂಬ ಪರದನಾಗಿ ಕುಂಡಲಮಂಡಿತನೆಂಬರಸ -ನಾಗಿ ಬೞೆಯಂ ಪ್ರಭಾಮಂಡಲನಾದಂ. ವಸುದತ್ತನಾದಂದಿನಕೆಳೆಯನಪ್ಪ ಯಾಜ್ಞವಲ್ಕಿ ವಿಭೀಷಣನಾಗಿ ಪುಟ್ಟಿ ಮುನ್ನಿನ ಕೆಳೆತನಂ ಕಾರಣಮಾಗೆ ಲಕ್ಷ್ಮಣನೊಳ್ ಬಂದು ಕೂಡಿದಂ. ಮುನ್ನೆ ಪೇೞ್ದ ಪದ್ಮ ರುಚಿಯ ಕೈಯೊಳ್ ಪಂಚನಮಸ್ಕಾರಮಂ ಕೇಳ್ದ ವೃಷಭಂ ರಾಜಪುತ್ರನಾಗಿ ಪುಟ್ಟಿ ತಪಂಗೊಂಡು ಸ್ವರ್ಗದೊಳ್ ಪುಟ್ಟಿ ಬಂದೀಗಳ್ ಸುಗ್ರೀವನಾಗಿ ಮುನ್ನಿನುಪಕಾರಂ ಕಾರಣಮಾಗೆ ರಾಮಂಗನುವಶನಾಗಿ ಬೆಸಕೆಯ್ದನೆಂದಿದೆಲ್ಲಮಂ ಸಕಲಭೂಷಣಕೇವಲಿಗಳ್

ಸವಿಸ್ತರಂ ರಾಮಂಗೆ ಪೇೞ್ದು ಮತ್ತಮಿಂತೆಂದರ್: ಶ್ರೀಭೂತಿಯೆಂಬ ಪುರೋಹಿತನಾದಂದು ರಾವಣನಪ್ಪ ಶಂಭುವಿನ ಕೈಯೊಳ್ ಸತ್ತುದರಿಂದಾ ಮುಳಿಸು ಕಾರಣಮಾಗೆ ಲಕ್ಷ್ಮಣಂ ರಾವಣನಂ ಕೊಂದಂ. ಸೀಥೆಯುಂ ವೇದವತಿಯಾದಂದು ಮಂಡಲಾಗ್ರಪುರದೊಳ್ ಋಷಿಯರ ಮಂಡಲಿಯೊಳಿರ್ದ ಸುದರ್ಶನ ಋಷಿಯರುಮನವರ ತಂಗೆವಿರಪ್ಪ ಸುದರ್ಶನೆಯರೆಂಬ ಕಂತಿಯರುಮಂ ತಮ್ಮೊಳ್ ಪೊರ್ದಿದರಸಿ ಪೊಲ್ಲದಂ ನುಡಿದು ನೆಗೞುತ್ತುಮಿರೆ ವೇದವತಿಯ ಮೊಗದೊಳೊಂದು ಬಾಪು ಪುಟ್ಟಿ ಪೊಲ್ಲರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾಮುದೆಂದೆಲ್ಲರ್ಗಮಾದ್ಯಂತಂ ತಿಳಿಯೆ ಪೇೞ್ದುಪ್ರಾಯಶ್ಚಿತ್ತಂ ಗೊಂಡೊಳ್ಳಿತ್ತಾಗಿ ನಡೆದು ಕಡೆಯೊಳ್ ದೇವಲೋಕಕ್ಕೆ ಪೋಗಿ ಬಂದು ತಾನುಮೀಗಳಭಿಯೋಗಕ್ಕೆ ಪಕ್ಕಾದಳೆಂದು ಮತ್ತಮಿಂತೆಂದರ್ :

ಜಿನಮುನಿಯಕ್ಕೆ ಜೈನನೆನಿಸಿರ್ದವನಕ್ಕಮ ಪಾಪಬುದ್ಧಿಯಿಂ
ತನಗೆ ಜಿನೇಂದ್ರಧರ್ಮದವರಾರುಮನಾಗದು ದೂಷಿಸಲ್ಕೆ ಕೆ-
ಮ್ಮನೆ ಮುನಿವಂಗೆ ಮಚ್ಚರಿಸುವಂಗಱಿವಿಲ್ಲದವಂಗೆ ದೂಷಿಪಂ-
ಗನಿತಿನಿತೆಂದು ಲೆಕ್ಕವಿಡಲೇಂಗಳ ಬರ್ಪುದೆ ಕರ್ಮಬಂಧಮಂ ॥೪೦॥

ಎಂದು ಪೇೞ್ದುದುಮನಂತರಂ ಕೃತಾಂತವಕ್ತ್ರನೆಂತಾನುಂ ರಾಮಸ್ವಾಮಿಯನೊಡಂಬಡಿಸಿ ಪಲಂಬರರಸುಮಕ್ಕಳ್ವೆರಸು ಸಕಲಭೂಷಣ ಬೋಧನಿಧಿಯ ಸನ್ನಿಧಿಯೊಳ್,

ಅಱಿದಂದೆ ತೋಱಿಯದಂದೇ ।
ತಱಿದಱಿವೆಂದಱಿವೆ ತನಗೆ ತೊಡವಾದುದೆನಲ್ ॥
ತೊಱಿದಾ ಕೃತಾಂತವಕ್ತ್ರಂ ।
ತಱಿಸಂದು ಕೃತಾಂತವಕ್ತ್ರಮಂ ಮುದ್ರಿಸಿದಂ ॥೪೧॥

ಅಂತು ಕೃತಾಂತವಕ್ತ್ರಂ ದೀಕ್ಷೆಗೊಳ್ವುದುಂ ರಾಮನಿಸ್ಸುಂ ಕೆಲದಿವಸಮಿರ್ದು ದೀಕ್ಷೆಗೊಳ್ವೆಮೆಂದು ನಿಶ್ಚಯಿಸಿ ಭಟ್ಟಾರಕರ್ಗೆ ಸರ್ವಾಂಗಪ್ರಣತನಾಗಿ ಸೀತಾಂಬಿಕೆಯರಲ್ಲಿಗೆ ಪೋಗಿ ಲಕ್ಷ್ಮಣಾದಿಗಳ್ವೆರಸು ನಿಶ್ಶಲ್ಯಂಗೆಯ್ದು ದಿವ್ಯಮುನಿಯ ಸಭಾಮಂಡಲಮಂ ಪೊಱಮಟ್ಟು,

ದಶದಿಙ್ಮಂಡಲಮಂ ಪಳಂಚಲೆಯ ಭೇರೀನಿಸ್ವನಂ ರಾಜಲೋ-
ಕಶಿರೋಭೂಷಣ ಪಂಚರತ್ನರುಚಿ ಲೇಖಾನೀಕದಿಂ ಶಕ್ರ ಚಾ- ॥
ಪಶತಂಗಳ್ ನೆಲಿವೆರ್ಚೆ ಲಕ್ಷ್ಮಣಸಮೇತಂ ರಾಮದೇವಂ ಲವಾಂ-
ಕುಶವಕ್ತ್ರಾಂಬುಜ ದತ್ತದೃಷ್ಟಿ ಪುರಮಂ ಪೊಕ್ಕಂ ಮಹೋತ್ಸಾಹದಿಂ ॥೪೨॥

ಅಂತಯೋಧ್ಯಾಪುರಮಂ ಪೊಕ್ಕು ಸುಖದಿಂ ಕೆಲವು ಕಾಲಮಿರ್ಪುದುಮತ್ತ ಸೀತಾರ್ಯಿಕೆ ಪಲವುಕಾಲಂ ತಪಂಗೆಯ್ದು ಮೂವತ್ತಾಱು ದಿವಸಂ ಸಂನ್ಯಸನಮಂ ಕೈಕೊಂಡಚ್ಯುತಕಲ್ಪದೊಳ್

ಸ್ವಯಂಪ್ರಭನೆಂಬ ಪ್ರತೀಂದ್ರನಾಗಿ ಪುಟ್ಟಿದಳ್, ಮತ್ತಮಿತ್ತ ಕಾಂಚನಪುರಮನಾಳ್ವ ಕಾಂಚನರಥಂಗಂ ವಿದ್ಯುನ್ಮಾಲೆಗಂ ಪುಟ್ಟಿದ ಮಂದಾಕಿನಿಯುಂ ಚಂದ್ರವಕ್ತ್ರೆಯುಮೆಂಬ ಕನ್ನೆಯರ್ ಸ್ವಯಂವರಕ್ಕೆ ನೆರೆದರಸುಮಕ್ಕಳೊಳೊರ್ವರುಮಂ ಮೆಚ್ಚದೆ ಲವಂಗೆ ಮಂದಾಕಿನಿ ಮಾಲೆಯಂ ಸೂಡಿದಳಂಕುಶಂಗೆ ಚಂದ್ರವಕ್ತ್ರೆ ಮಾಲೆಯಂ ಸೂಡಿದಳಾ ಸಭೆಯೊಳಿರ್ದ ಲಕ್ಷ್ಮಣನೆಣ್ಬರ್ ಕುಮಾರರುಮದಂ ಕಂಡು ನಿರ್ವೇಗಪರಾಯಣರಾಗಿ ಮಹಾಬಲಭಟ್ಟಾರಕರ ಪಕ್ಕದೆ ದೀಕ್ಷೆಯಂ ಕೈಕೊಂಡರಿತ್ತ ವಿದ್ಯಾಧರರಾಜ್ಯಸುಖಮನೆನಿತಾನುಂ ಕಾಲಂ ಪ್ರಭಾಮಂಡಲನನುಭವಿಸಿ ಕಜುಮಾಡದೇಜನೆಯ ನೆಲೆಯೊಳಿರ್ದಲ್ಲಿ ಸಿಡಿಲ್ ಪೊಡೆಯೆ ಸತ್ತು ದೇವಕುರುವಿನೊಳ್ ಪುಟ್ಟಿದನಿತ್ತ ಹನುಮಂ ಕರ್ಣಕುಂಡಲ ಪುರದೊಳಗರಸುಗೆಯ್ಯುತ್ತುಂ ಪಲಕಾಲಮಿರ್ದೊಂದು ದಿವಸಂ ಕೃಷ್ಣಪಕ್ಷದಿರುಳ್ ಮಣಿಮಾಡದೊಳಿರ್ದು ಗಗನತಲದಿಂ ಬೀಳ್ತಿರ್ಪುಲ್ಕಮಂ ಕಂಡು ಸಂಸಾರಿಗಳ ಧನಮುಂ ಜೀವನಮುಂ ಜವ್ವನಮುಮಿಂತೆ ಕ್ಷಣದಿಂದಧ್ರುವಂಗಳೆಂದು ಬಗೆದು ನಿರ್ವೇಗಪರನಾಗಿ ಸುಶ್ರುತನೆಂಬ ತನ್ನ ಮಗಂಗೆ ರಾಜ್ಯಮಂ ಕೊಟ್ಟು ವಿದ್ಯುದ್ಗ್ವತಿ ಮೊದಲಾಗೇೞ್ನೂಱೈವದಿಂಬರ್ ವಿದ್ಯಾಧರವಲ್ಲಭರ್ವೆರಸು ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷದೊಳ್ ದೀಕ್ಷೆಯಂ ಕೊಂಡಂ. ಹನುಮನರಸಿಯರೆಲ್ಲಂ ಸುಮತಿ ಗಂತಿಯರ ಪಕ್ಕದೊಳ್ ತಪಸ್ಥೆಯರಾದರ್. ಹನುಮಮುನಿ ಘಾತಿಯುಮನಘಾತಿಯುಮಂ ಕಿಡಿಸಿ ನಿರ್ವಾಣಪ್ರಾಪ್ತನಾದಂ.

ಇತ್ತ ಬಲದೇವನುಂ ಪುರು ।
ಷೋತ್ತಮನುಮನೇಕವತ್ಸರಂ ರಾಜ್ಯಸುಖಾ- ॥
ಯತ್ತಮನರ್ ನಿರವಧಿ ಸಂ ।
ಪತ್ತಿಗೆ ನೆಲೆಯೆನಿಸಿ ನಾಡೆ ನಲಿಯುತ್ತಿರ್ದರ್ ॥೪೩॥

ಅಂತಿರ್ಪುದುಮತ್ತಲೊರ್ವು ಸುರಪರಿಷನ್ಮಧ್ಯವರ್ತಿ ಸೌಧರ್ಮೇಂದ್ರಂ ಧರ್ಮನಿರೂಪಣ ಪ್ರವಣನಿಂತೆಂದಂ :

ಮನುಜಗತಿ ಗತಿಗಳೊಳ್ ಪಾ ।
ವನಮೆಂತೆನೆ ಮಿಕ್ಕಗತಿಗಳಪವರ್ಗ ಶ್ರೀ- ॥
ಸ್ತನಮಂಡಲ ಗಾಢಾಲಿಂ ।
ಗನ ಸೌಖ್ಯಮನೀಯಲಾಜಿವಪ್ಪುದಜೆಂದಂ ॥೪೪॥

ಎಂಬುದುಮಾ ಸಭೆಯೊಳಿರ್ದ ಸಮ್ಯಗ್ದೃಷ್ಟಿಯಪ್ಪ ವಿಭಾವಸುವೆಂಬ ದೇವಂ,

ಮಳರಹಿತಮಪ್ಪ ತಪಮಂ ।
ತಳೆದಪವರ್ಗಕ್ಕೆ ಸಲ್ವ ಮಾನವಗತಿಯಂ ॥

ತಳೆವೊಡೆ ದಿವಿಜಾಯುಷ್ಯಂ ।
ಗಳಿಯಿಸಿ ತಱನಾವುದೆಂದು ಸಂಭ್ರಮಿಸುವುಮಂ ॥೪೫॥

ಅದಂ ಕಂಡಾಗಳ್ ಮತ್ತೊರ್ವಂ ಗೀರ್ವಾಣನಿಂತೆಂದಂ:

ಮನುಜಗತಿವಡೆವುಮುತ್ತಮ ।
ಮನಿಸಿಯುಮಾ ಬ್ರಹ್ಮಕಲ್ಪದಿಂ ಬಂದುಂ ರಾ- ॥
ಮನವೇಕೆ ದೀಕ್ಷೆಗೊಳ್ಗಂ ।
ಮನುಷ್ಯಭವಮೊಂದೆ ದೀಕ್ಷೆಗೇಂ ಕಾರಣಮೇ ॥೪೬॥

ಎನೆ ವಿಭಾವಸುವೆಂಬಂ ಲಕ್ಷ್ಮಣನೊಳಾದ ಸ್ನೇಹಂ ಕಾರಣಮಾಗ ತಪಮನುಪೇಕ್ಷಿಸಿರ್ದಂ.

ಎಂತುಂ ಪೂರ್ವಭವ ಸ್ನೇ ।
ಹಂ ತೊಱೆಯಲ್ಬರ್ಪುದಲ್ತು ಲಕ್ಷ್ಮಣರ ವಿಯೋ- ॥
ಗಂ ತನಗಾದೊಡೆ ರಾಮಂ ।
ಸಂತಾಪಮನತಿ ವಿಷಾದಮಂ ಕೈಕೊಳ್ಗುಂ ॥೪೭॥

ಲಕ್ಷ್ಮಣನುಮಂತೆ ರಾಮಂಗತಿಸ್ನೇಹಿತನಾತನಗಲ್ದಾಗಳೆ ಸಾಗುವೆನೆ ನಿಸರ್ಗರಾಗಿಗಳಪ್ಪುದಱಿಂ ರಾಮಲಕ್ಷ್ಮಣರ ಸ್ನೇಹಮಂ ನೋಡಲರ್ಥಿಗಳಾಗಿ ರತ್ನಚೂಲನುಮಮೃತಚೂಲನುಮೆಂಬ ದೇವರಿರ್ವರುಮಯೋಧ್ಯಾಪುರಕ್ಕೆ ಬಂದು,

ಪರಲೋಕಪ್ರಾಪ್ತನಾದಂ ದಶರಥಸುತನೆಂಬಂತು ರಾಜಾಲಯಂ ಶೋ-
ಕರಸಾಂಭೋರಾಶಿಯೊಳ್ ಘೂಂಕನೆ ಮುಳುಗಿದುದೆಂಬಂತು ಹಸ್ತಚ್ಛಟಾ ಜ-
ರ್ಝರಮಧ್ವಂ ಪೆಂಡವಾಸಂ ಗಗನವಿವರಮಂ ರೋದನೋನ್ನಾದದಿಂದಂ
ಭರಿತಂ ಮಾಳ್ಪಂತು ವೈಕುರ್ವಣಪರಿಣತಿಯಂ ಬೀಱಿದಂ ರತ್ನಚೂಲಂ ॥೪೮॥

ಬಲದೇವಾಕೃತಿಯಂ ಸರಾಗನಮರಂ ನಿಷ್ಪ್ರಾಣಮಂ ವಿಕ್ರಿಯಾ-
ಬಲದಿಂ ನಿರ್ಮಿಸೆ ಕಂಡು ಲಕ್ಷ್ಮಣನದಂ ನಿಸ್ಸೀಮಶೋಕಂ ಭಯಾ-
ಕುಲಿತಂ ಹಾ ನಿನದಾ ನುಗಂ ಕ್ಷಣದೆ ಜೀವಂ ಪೋಗ ಬಿಟ್ಟಂ ಧರಾ-
ತಲದೊಳ್ ಹರ್ಷವಿಷಾದವೇಗದೊದವಿಂ ಸಾವಪ್ಪುದಾಶ್ಚರ್ಯಮೇ ॥೪೯॥

ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರ ಪುರಂಧ್ರಿಯರ್ ಕಂಡತಿಪ್ರಲಾಪಂ ಗೆಯ್ವುದುಂ ರಾಮಂ ಕೇಳ್ದು ಮೂರ್ಛೆವೋಗಿ ನೀಡಱಿಂದೆಚ್ಚತ್ತು ಗತಪ್ರಾಣನಾದ ಲಕ್ಷ್ಮಣನ ಕೆಲಕ್ಕೆ ಪೋಗಿ ಮಗುಳ್ದು ಮೂರ್ಛಿತನಾಗಿ ಮತ್ತಮೆಚ್ಚತ್ತು ಪಲತೆಱದಿಂ ಪ್ರಲಾಪಂಗೆಯ್ದು,

ಹಾ ತಮ್ಮನೆ ನಿನ್ನುಮನಾ ।
ಪಾತಕಿ ಬಿದಿ ಕೊಂಡು ಪೋದನೇವೆನೆನುತ್ತುಂ ॥
ಸೀತಾಪತಿ ಪೂರ್ವಭವ ।
ಪ್ರೀತಿಯಿನತಿ ಶೋಕ ಮೊಗಯೆ ವಿಪ್ವಲನಾದಂ ॥೫೦॥

ಅಂತಚಿಂತ್ಯ ದುಃಖಾಭಿಭೂತನಾಗಿ ಶೋಕಂಗೆಯ್ಯುತ್ತಿರೆ ಲವಾಂಕುಶರದುವೆ ನಿರ್ವೇಗಮಾಗೆ ಬಂದು ರಾಮಸ್ವಾಮಿಗೆ ಪೊಡೆವಟ್ಟು ಬೀಟಿಟ್ಕೊಂಡು ಮಹೇಂದ್ರೋದ್ಯಾನವನ ದಮೃತೇಶ್ವರ ಭಟ್ಟಾರಕರ ಪಕ್ಕದೆ ತಪಸ್ಥರಾದರಿತ್ತ ರಾಮನ ಶೋಕಮಂ ವಿಭೀಷಣಂ ಬಂದು ಸಂಸಾರದನಿತ್ಯತೆಯಂ ಪೇಟ್ದುಪಶಮಿಸಲಾಜದಿರೆ ಸುಗ್ರೀವಾದಿಗಳ್ ನೆರೆದು ಬಂದು ಲಕ್ಷ್ಮಣನ ಶವಮಂ ದಹಿಸುವಮೆಂಬುದುಂ,

ಅವರಂ ಪಲತೆಜದಿಂ ಬ ।
ಯ್ದು ಪೊಯ್ದು ಲಕ್ಷ್ಮಣನ ಪೆಣನನಾ ಕ್ಷಣದೊಳೆ ನಾ- ॥
ಮಿವರ ಸಮಿೂಪದೊಳಿರಲೆಂ ।
ತುವಾಗದೆಂದೆತ್ತಿಕೊಂಡು ರಾಮಂ ಪೋದಂ ॥೫೧॥

ಅಂತು ಶೋಕವಿಕಲನಾಗಿ ರಾಜಭವನಮಂ ಪೊಜಮಟ್ಟು ಪೋಗಿ,

ಮರುಳಾದಂ ವಾಸುದೇವಂ ಕಟಿದೊಡೆ ಬಲದೇವಣ ಶವಕ್ಕಿತ್ತು ವಸ್ತ್ರಾ-
ಭರಣಸ್ತಕ್ಚಂದನಾಲೇಪನ ಪರಿಕರಮಂ ಪೊತ್ತುಕೊಂಡಿರ್ದಪಂ ತ-
ಚ್ಚರಮಾಂಗಂ ವಿಶ್ವವಿದ್ಯಾವಿದನೆನೆ ವಿಕಲಂ ಮಾಟ್ಪುದಾಶ್ಚರ್ಯಮೇ ಮಿ-
ಕ್ಕರನಜ್ಞಾನಾಸವಾಸ್ವಾದಿತ ಜಡರನೆಲೇ ಮೋಹಮೂರ್ಛಾತಿರೇಕಂ ॥೫೨॥

ಬಗೆಗಿಡಿಸೆ ಮೋಹನೀಯಂ ।
ನಗಧರ ಶವಧಾರಿಯಾಗೆ ಷಣ್ಮಾಸಮಂದೇಂ ॥
ನೆಗಟ್ದುದೊ ಸಲೆ ಬಲದೇವನ ।
ಪೆಲಗ ಪೆಣಂ ಕುಂದದೆಂಬ ನಾಟ್ನುಡಿ ಜಗದೊಳ್ ॥೫೩॥

ಅಂತು ರಾಮಸ್ವಾಮಿ ರಾಜ್ಯರಕ್ಷಣಮಂ ಮಱೆದು ಲಕ್ಷ್ಮಣನ ವಿಯೋಗದಿಂ ವಿಕಲನಾಗಿರೆ ಕೆಲವ ನೆಲದರಸುಗಳ್ ಪೊಡರ್ಪುಗೆಟ್ಟು ಮಟ್ಟಮಿರ್ಪುದುಮತ್ತಲಿಂದಗಿಯ ಮಗನಪ್ಪ ವಜ್ರಮಾಲಿ ಸೌಂದರನ ಮಗ ಚಾರುರತ್ನಂ ಬೆರಸು ಪಲರುಮಂ ಕೂಡಿಕೊಂಡಯೋಧ್ಯೆಗಾಸನ್ನಮಾಗಿ ಬೀಡಂ ಬಿಟ್ಟುದಂ ರಾಮಂ ಜನಪರಂಪರೆಯಿಂ ಕೇಳ್ದು ಲಕ್ಷ್ಮಣನಂ ಬಿಟ್ಟು ಪೋಗಲಾಜದತಿದುಃಖಿತನುಂ ಕಲುಷವಶಗತನುಮಾಗಿ ನಿಜವಜ್ರಾವರ್ತ ಚಾಪಮುಮನಗ್ನಿಮುಖ ಶಿಲೀಮುಖಂಗಳುಮಂ ನೋಡುತ್ತುಮಿರೆ ದೇವಗತಿವಡೆದ

ಜಟಾಯುವುಂ ಕೃತಾಂತವಕ್ತ್ರನುಮಾಸನಕಂಪಮಪ್ಪುದುಮವಧಿಬೋಧದಿಂ ಲಕ್ಷ್ಮಣಂ ಮರಣಪ್ರಾಪ್ತನಪ್ಪುದುಮಂ ರಾಮಂ ಶೋಕಾಭಿಭೂತನಾಗಿರೆ ಪಗೆವಡೆಯಿಱಿಯಲೆಂದು ಬಂದಯೋಧ್ಯೆಯಂ ಬಳಸಿ ಬಿಟ್ಟಿರ್ದವನುಱಿದಿರ್ವರ್ ದೇವರುಂ ಬಂದು ಪಾರ್ಪಡೆಯನೋಡಿಸುವುದುಂ ವಜ್ರಮಾಲಿಯುಂ ಚಾರುರತ್ನನುಂ ತಮಗದುವೆ ನಿರ್ವೇಗ ಕಾರಣಮಾಗ ಪಲಬರರಸುಮಕ್ಕಳ್ವೆರಸು ರತಿವೇಗಭಟ್ಟಾರಕರ ಪಕ್ಕದೆ ತಪಃಸ್ಥರಾದರಿತ್ತ ಕೃತಾಂತವಕ್ತ್ರ ಜಟಾಯುದೇವರ್ಕಳಿರ್ವರುಂ ರಾಮನಲ್ಲಿಗೆ ಬಂದು,

ಎನಿತಾನುಂ ತೆಱದಿಂ ಧ ।
ರ್ಮನಿರೂಪಣೆಗೆಯ್ದುಮೆಂತುಮೇನಾರ್ತರೆ ರಾ- ॥
ಮನ ವಿಕಲತೆಗಿಡಿಸಲ್ ಮು ।
ನ್ನಿನ ಭವದನುಬಂಧಮಂ ಕೞಲ್ಚುವರೊಳರೇ ॥೫೪॥

ಅಂತು ಧರ್ಮವಾತ್ಸಲ್ಯದಿಂ ರಾಮನ ಮನೋವೈಕಲ್ಯಮಂ ಕಳೆಯಲೆಂದೋರೊಂದೆಡೆಯೊಳ್ ನಯನಪಥದೊಳಿರ್ದು,

ಕಲನೊಂದಂ ತೀವಿ ನೀರಂ ಪೊಸೆದು ಸಿಕತದೊಳ್ ಗಾಣಮಂ ಪೊಯ್ದು ಮತ್ತಂ
ಶಿಲೆಯೊಳ್ ಧಾನ್ಯಂಗಳಂ ಬಿತ್ತಿಯುಮೊಣಗಿದ ಭೂಜಕ್ಕೆ ನೀರ್ವೊಯ್ವುದುಂ ಕೋ-
ಟಲೆವಟ್ಟೀ ನಿಷ್ಫಲೋದ್ಯೋಗಮನೊಡರಿಪುದೇನೆಂಬುದುಂ ದೇವರೆಂದರ್
ಬಲದೇವಂಗಣ್ಣ ನೀನೀ ಪೆಣನನಱೆಪಿನಿಂ ಪೊತ್ತಿರಲ್ ಬರ್ಪುದುಂಟೇ ॥೫೫॥

ಎನೆ ಮುನಿದಮಾಂಗಲ್ಯವಚನಮನೇಕೆ ನುಡಿದಿರೆಂದು ಕೃತಾಂತವಕ್ತ್ರನೊಳ್ ನುಡಿಯುತ್ತುಮಿರ್ಪನ್ನೆಗಮತ್ತ ಜಟಾಯುದೇವನೊಂದು ಪೆಣನಂ ಪೊತ್ತು ಮುಂದಣ್ಗೆವರ್ಪುದುಂ ರಾಮದೇವಂ ಕಂಡೀ ಮೃತಕಮಂ ನಿಷ್ಪ್ರಯೋಜನಮಿಂತೇಕೆ ಪೊತ್ತು ತೊಟಿಲ್ವಪೆಯೆನೆ ಜಟಾಯುದೇವಂ ನೀನೀ ಪೆಣನಂ ಪೊತ್ತು ತೊೞಲ್ವುದೇನಿಮಿತ್ತಮೆಂದು ತೋಱೆ ನುಡಿವುದುಂ,

ಎಂತಾನುಂ ಪಲವುಂ ದೃ ।
ಷ್ಟಾಂತಮನೆನಿತಾನುಮುಪಮೆಯಂ ತದ್ದಿವಿಜರ್ ॥
ಮುಂತೋಱೆ ತೋಱೆ ಚಿತ್ತ ।
ಭ್ರಾಂತಿಯುಮಂ ಪಳಿಯ ಪೞಯುಮಂ ಪಿಂಗಿಸಿದರ್ ॥೫೬॥

ಅಂತಪಗತ ಮೋಹನಾದ ರಾಮಂಗೆ ದೇವರಿರ್ವರುಂ ತಮ್ಮ ದಿವ್ಯಸ್ವರೂಪಂ ತೋಱೆ ಮತ್ತಮಿಂತೆಂದರೆಮಗಾಸನಕಂಪಮಪ್ಪುದುಂ ನಿಮಗಾದುಪಸರ್ಗಮನಱೆದು ಬಂದು ನಿಮ್ಮ ಮೇಲೆತ್ತಿ ಬಂದ ಪಗೆವರನೋಡಿಸುವುದುಮವರದುವೆ ವೈರಾಗ್ಯಕಾರಣಮಾಗಿ ಪಲಂಬರರಸು ಮಕ್ಕಳ್ವೆರಸು ತಪಂಬಟ್ಟರೆಂಬುದುಂ,

ಮುಗಿಲ ಮಱೆಪೋದ ಚಂದ್ರಾಂ ।
ಶುಗೆ ಕಾಳಿಕೆ ಪೋದ ಪೊಂಗೆ ಪೊಗ ಪೋದ ಕೃಶಾ- ॥
ನುಗೆ ಸಮನಾದಂ ಮೋಹಂ ।
ಬಗೆಯಿಂ ಪೊಱಮಟ್ಟು ಪೋಗೆ ದಶರಥರಾಮಂ ॥೫೭॥

ಅಂತಕಲುಷಹೃದಯನಾಗಿ,

ಎನ್ನುಮನಾನಱೆಯದೆ ಜಿಃ ।
ಬನ್ನಕ್ಕೊಳಗಾದೆನೆಂದು ರಘುಕುಲತಿಲಕಂ ॥
ತನ್ನಂ ತಾನಱೆದೊಡಲಂ ।
ತನ್ನಿಂ ಬೇರ್ಪಡಿಸಲಾದಮುತ್ಸುಕನಾದಂ ॥೫೮॥

ಅಂತು ವೈರಾಗ್ಯಪರನಾಗಿ ವಿಭೀಷಣ ಸುಗ್ರೀವ ನಳನೀಳ ಜಾಂಬವ ಪ್ರಸನ್ನಕೀರ್ತಿ ವಿರಾಧಿತಾದಿಗಳುಮಂ ಪೆಱರುಂ ಪ್ರಧಾನಪುರುಷರೆಲ್ಲರುಮಂ ಬರವೇಳ್ದಟ್ಟುವುದುಮವರ್ ಬಂದು ಸರಯುವೆಂಬ ತೂಱೆಯ ತಡಿಯೊಳ್ ಲಕ್ಷ್ಮಣ ಶವಮಂ ಯಥಾವಿಧಿಯಿಂ ಸಂಸ್ಕಾರಿಸಿ ಬಳ್ಪುದುಮಾಗಳಂತೆ ರಾಮಸ್ವಾಮಿ ಲವನ ಪಿರಿಯ ಮಗಂಗೆ ರಾಜ್ಯಪಟ್ಟಮಂ ಕಟ್ಟಿ ಪಲಂಬರರಸುಮಕ್ಕಳ್ವೆರಸು ಸುಪ್ರತರೆಂಬ ಚಾರಣರ ಪಕ್ಕದೆ ತಪಸ್ಥನಾದಂ. ವಿಭೀಷಣಂ ನಿಜ ತನೂಜನಪ್ಪಸುಭೂಷಣಂಗೆ ಲಂಕೆಯ ರಾಜ್ಯಮುಂ ಕೊಟ್ಟು ದೀಕ್ಷೆಗೊಂಡಂ. ಸುಗ್ರೀವನುಮಂಗದಂಗೆ ರಾಜ್ಯಮಂ ಕೊಟ್ಟಲ್ಲಿಯೇ ದೀಕ್ಷೆಗೊಂಡಂ ಶತ್ರುಘ್ನ ನಳ ನೀಳ ವಿರಾಧಿತ ಚಂದ್ರರಶ್ಮಿ ಪ್ರಮುಖರುಂ ರಾಮನೊಡನೆ ಸುವ್ರತ ಚಾರಣರ ಸಮಕ್ಷದೊಳ್ ದೀಕ್ಷೆಯಂ ಕೈಕೊಂಡರಿಂತಿನಿಬರಂತಃಪುರದ ಕಾಂತೆಯರುಂ ಶ್ರೀಮತ್ಯಾರ್ಯಿಕಾ ಸವಕ್ಷದೊಳ್ ದೀಕ್ಷೆಗೊಂಡರ್ ಮತ್ತಮಾ ರಾಮಯತಿಪತಿ ಪರಮಾಗಮ ಪ್ರಣೀತ ಮಾರ್ಗದಿಂ,

ಮೂಲಗುಣೋತ್ತರ ಗುಣದಿಂ ।
ಶೀಲಮನಳವಡಿಸಿ ಸಮಿತಿಯಂ ಗುಪ್ತಿಗಳಂ ॥
ಪಾಲಿಸಿ ಪಂಚಮಹಾವ್ರತ ।
ಲೀಲೆಯಿನೆಸೆದಂ ಪ್ರಮಾದಮಿಲ್ಲೆಂಬಿನೆಗಂ ॥೫೯॥

ಪಿಡಿದು ದಶಧರ್ಮಮಂ ಗೆ ।
ಲ್ದೊಡತನುವಂ ಕುಸುಮಬಾಣಂ ಕರ್ವಿನ ಬಿ- ॥
ಲ್ವಿಡಿದನನದೇಕೆ ಲೋಕಂ ।
ಕಡಂಗಿ ಬಣ್ಣಿಪುದೊ ರಾಘವಪ್ರತಿಪತಿಯುಂ ॥೬೦॥

ಮೂಲಗುಣಂಗಳಿಂದೆ ದಶಧರ್ಮಮನೇಱಸಿ ಕೊಂಡಮೋಘ ಬಾ-
ಣಾಳಿಯನಲ್ಲಿ ತೊಟ್ಟು ನಿಲಲೀಯದೆ ತೂಳ್ದಿ ಪರೀಷಹಂಗಳಂ

ಮೇಳಿಸಿದಂ ಜಯಾಂಗನೆಯನೇಕ ವಿಹಾರದೊಳಾ ಮುನೀಶ್ವರಂ
ಮೇಳಿಸೆ ಕೀರ್ತಿ ಕೀರ್ತಿಮುಖದಂತ ದಿಶಾರದನೀರದಂಗಳಂ ॥೬೧॥

ಕೇವಲ ಬೋಧೋದಯಮೆಂ ।
ಬೀ ವಿಭವಂ ಬೆತ್ತು ಸಕಲ ರೂಪವ್ಯಾಪಾ- ॥
ರಾವಗಮ ಸಂಪದಂ ಸ
ರ್ವಾವಧಿ ಪುಟ್ಟಿತ್ತು ರಾಘವಪ್ರತಿಪತಿಯೊಳ್ ॥೬೨॥

ಅಂತು ಸರ್ವಾವಧಿಯಂ ಪಡೆದು ಲಕ್ಷ್ಮಣನ ತಮ್ಮ ಮುನ್ನಿನ ಭವಂಗಳುಮಂ ಲಕ್ಷ್ಮಣನಿರ್ಪತ್ತೊಂದು ವರ್ಷಂ ಕುಂದೆ ಪನ್ನಿರ್ಛಾಸಿರ ವರ್ಷಮುಂ ಜೀವಿಸಿ ಬಳಿಯಮಧೋಲೋಕಗತನಾದುದುಮಂ ಸ್ನೇಹಮಂ ಪರೀಕ್ಷಿಸಿಲ್ಬಂದ ದೇವಂ ಕಾರಣಮಾಗೆ ಲಕ್ಷ್ಮಣಂ ಸತ್ತನಲ್ಲದಾತಂಗೆ ಪರಮಾಯು ನೆಱಿಯೆ ಸತ್ತಸಲ್ಲೆಂಬುದುಮನಱಿದು ರಾಮಭಟ್ಟಾರಕರುಗ್ರೋಗ್ರ ತಪಶ್ಚರಣನಿರತರಾಗಿ ದ್ವಾದಶದಿನಂಬರಮಾಹಾರ ಪರಿತ್ಯಾಗ ಪ್ರತ್ಯಾಖ್ಯಾನಮಂ ಕೈಕೊಂಡು ಪಾರಣೆಯ ದಿನದೊಳ್,

ನಗರಾರಣ್ಯ ವಿಶೇಷಂ ।
ಬಗೆಗಿಲ್ಲೆನೆ ಕಾಲನಿಯಮದಿಂ ಬನದಿಂ ಚ- ॥
ರ್ಯೆಗೆ ಪೊಱಮಟ್ಟಂ ಮುನಿ ತ ।
ನ್ನಗಮನಮಂ ದ್ರುತವಿಲಂಬಿತಂ ಪೊರ್ದದನಲ್ ॥೬೩॥

ಅಂತು ಬಂದು ನಂದನ ಸ್ಥಳಿಯೆಂಬ ಪೊಟಿಲಂ ಪೊಗುವುದುಮಾ ಸಮಯದೊಳಾ ಪೊಟಿಲ ಜನಮವರ ಪತಂ ಪ್ರಭಾವಮಂ ದಿವ್ಯಶರೀರಮಂ ನೋಡಿ ಕೌವರೆಗೊಂಡು ಬಟೆಸಲ್ವುದು ಮದನಾ ಪೊಟಿಲನಾಳ್ವರಸಂ ಪ್ರತಿನಂದಿ ಕಂಡು ರಾಮಭಟ್ಟಾರಕರನಿದಿರ್ಗೊಳಲ್ ಮಣಿಮಾಡದಿನಿೞಿದು ಬರ್ಪನ್ನೆಗಂ ಮಾರ್ಗಮಱಿಯದ ಜನಮೆಮ್ಮ ಮನೆಗೇಟ್ಟಿನ್ನಿಮೆಂಬುದುಂ ಭಟ್ಟಾರಕರ್ಗೆ ಚರ್ಯಾವಿಘ್ನಮಾದೊಡಾಹಾರಂಗೊಂಡಂತೆ ಸಂತುಷ್ಟ ಚಿತ್ತರಾಗಿ ಪೊಟಿಲಂ ಪೊಱಮಟ್ಟು ಪೋಪುದುಮಿತ್ತ ಪ್ರತಿನಂದಿ ಭಟ್ಟಾರಕರ್ಗೆ ಚರ್ಯಾವಿಘ್ನಮಾದುದರ್ಕೆ ಮನದೊಳಸಂಭ್ರಮಿಸುತ್ತುಮಿರ್ಪಿನಮಿತ್ತಲ್,

ಅನಶನಮಂ ಪನ್ನೆರಡುಂ ।
ದಿನಂಬರಂ ಪೂಣ್ದು ಮಾಣ್ದನಿಲ್ಲಿನ್ನೆಂದುಂ ॥
ಜನಪದಮಂ ಪುಗೆನೆಂದಾ ।
ಮುನಿಪತಿ ಕಾಂತಾರ ಭಿಕ್ಷೆಯಂ ಕೈಕೊಂಡಂ ॥೬೪॥

ಅಂತವರ್ಕಾಂತಾರ ಭಿಕ್ಷೆಯಂ ಕೈಕೊಂಡು ಪೋಗಿ ಮಹಾಗಹನಮಂ ಪೊಕ್ಕಿರ್ಪುದುಂ,

ಒಂದು ದಿನಮಾ ಮಹಾಮುನಿ ।
ವೃಂದಾರಕನಿರ್ದ ಕಾನನಕ್ಕೆಬಿದುಯ್ದ- ॥
ತ್ತೊಂದು ವಿಷಮಾಶ್ವಮಾ ಪ್ರತಿ ।
ನಂದಿ ನೃಪಾಲಕನನುಚಿತ ಪರಿಪಾಲಕನ ॥೯೫॥

ಅಂತಾ ಸೂಕಳ ತುರಂಗಮಮತಿ ವಿಷಮ ಗಹನಮಂ ಪುಗುವುದುಂ ಪ್ರತಿನಂದಿ ಸೂಕಳಗುಮುರೆಯಿಂ ನೆಲಕ್ಕೆಪಾಯ್ದು ದಿಗವಲೋಕನಂಗೆಯ್ದು ಸಮೀಪದೊಳೊಂದು ಸರೋವರಮಂ ಕಂಡು ಪೊಕ್ಕು ಮಿಂದು ಪೊಂದಾವರೆಯ ಪೂಗಳಿಂ ಪೀಠಿಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿಯರ್ಚಿಸುತ್ತಿರ್ಪನ್ನೆಗಮಾತನಂತಃಪುರಪ್ರಧಾನೆ ಪ್ರಭಾವತಿಯೆಂಬಳಾ ಸೂಕಳಾಶ್ವದ ಪಜ್ಜೆವಿಡಿದು ಬಂದು ತನ್ನರಸನಂ ಕಂಡಾ ಸರೋವರದೊಳ್ ನೀರಾಟಮನಾಡಿ ಬೋನಮನಲ್ಲಿಗೆ ತರಿಸುವುದುಮಾ ಪ್ರಸ್ತಾವದೊಳ್ ರಾಮಭಟ್ಟಾರಕರಿಪ್ಪತ್ತುನಾಲ್ಕು ದಿವಸದ ಪಾರಣೆಗೆ ಕಾಂತಾರ ಭಿಕ್ಷಾಚರ್ಯೆಗಾ ಮಾರ್ಗದಿಂ ಬರ್ಪುದುಂ ಪ್ರತಿನಂದಿ ಭೋಂಕನೆ ಕಂಡು ಸಂಭ್ರಮದಿನೆೞ್ದು ಪೊಡೆವಟ್ಟು ನಿಲಿಸಿ ಪಲತೆಱದಿನರ್ಚಿಸಿ ದಿವ್ಯಾಹಾರಮಂ ಕುಡುವುದುಂ,

ರೈವಷ್ಟಿ ಕುಸುಮವರ್ಷಂ ।
ದೇವರಹೋದಾನ ಘೋಷಣಂ ಹಿಮಪವನಂ ॥
ದೇವಾನಕರವಮೊದವೆ ಮ ।
ಹಾ ವಿಸ್ಮಯಹೇತುವಾಯ್ತು ಪಂಚಾಶ್ಚರ್ಯಂ ॥೯೬॥

ಅಂತು ರಾಮಭಟ್ಟಾರಕರ್ ಪೂಜಾಪ್ರಾಪ್ತರಾಗಿ ದುರ್ಧರ ತಪೋಮಾರ್ಗದೊಳ್ ನಡೆಯುತ್ತಂ ಪೋಗಿ ಲಕ್ಷ್ಮಣನೆತ್ತಿದ ಸಿದ್ಧಶಿಲೆಯನೇಱೆ ಪ್ರತಿಮಾಯೋಗದಿಂ ಕರ್ಮಕ್ಷಯಂಗೆಯ್ವುದನವಧಿಬೋಧದಿಂ ಸೀತೇಂದ್ರನಱೆದಚ್ಯುತ ಕಲ್ಪದಿಂ ಬಂದು,

ತಾನೆಂತಾನುಂ ಪರಮಪದಮಂ ಸಾಧಿಪಂ ಮುಂದೆ ಶುಕ್ಲ-
ಧ್ಯಾನಕ್ಕೀವೆಂ ತವಿಲನೆನುತುಂ ರಾಮಯೋಗೀಂದ್ರನಿರ್ದಾ
ಸ್ಥಾನಂ ಬೊಕ್ಕಂ ಮಕುಟರುಚಿ ರೋದೋಂತಮಂ ತೀವೆ ತಟ್ಟೊ-
ಯ್ದೇನಂ ಮಾಡಂ ವಿನಯವಿಕಲಂ ರಾಗಯೋಗಪ್ರಮತ್ತಂ ॥೯೭॥

ಅಂತು ರಾಮತೀರ್ಥಯತಿಗಳಿರ್ದ ನಗೋಪರಿಯುಪವನಮಂ ಪೊಕ್ಕಾಱುಂ ಋತುಗಳನಲ್ಲಿ ವಿಗುರ್ವಿಸಿ ತಾನೆ ಸೀತೆಯ ರೂಪಾಗಿ ವಿದ್ಯಾಧರ ಕನ್ಯೆಯರ್ ಬಳಸಿ ಬರೆ ಸಮೀಪಕ್ಕೆ ಬಂದು ನಿಂದು ನೀಮಿನ್ನುಂ ಗತವಯಸ್ಕಶರೀರರಲ್ಲಿರೀ ಮನೋಹರಾಕಾರಮನಕಾರಣಂ ಕಿಡಿಸದಿರಿಮೆನ್ನೊಳಮೀ ವಿದ್ಯಾಧರ ಕನ್ಯೆಯರೊಳಂ ಕೂಡಿ ಸುಖಮನನುಭವಿಸಿ ಬೞಿಕ್ಕೆ ನೀಮುಮಾನುಮೀಕೆಗಳುಮೊಡನೆ ತಪಂಬಡುವಮೆಂದು ತಪೋವಿಘ್ನ ಹೇತುಗಳಂ ತೋಱೆ

ನುಡಿಯೆಯುಂ ರಾಮಭಟ್ಟಾರಕರೆಂತುಮಸ್ಖಲಿತ ಚಿತ್ತದಿಂ ಶುಕ್ಲಧ್ಯಾನಪ್ರವಿಷ್ಟರಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯ ಬೆಳಗಪ್ಪ ಜಾವದೊಳ್,

ಆವರಿಸಿರ್ದ ಘಾತಿ ಘನಕಾಂಡಪಟಂ ಪಱಪಿಂಗೆ ದಿವ್ಯ ಭಾ-
ಷಾವಧುವಿಂಗೆ ರಾಘವಯತಿಪ್ರವರಂ ವರನಾಗೆ ನಿರ್ಮಲಂ
ಕೇವಲಬೋಧಮೆಂಬ ಮಣಿದರ್ಪಣಮುಜ್ವಲಿಸಿತ್ತು ತೋರ್ಪಿನಂ
ಜೀವಮಜೀವಮೆಂಬಖಿಲ ವಸ್ತುಗಳುಂ ಗುಣಪರ್ಯಯಂಗಳುಂ ॥೬೮॥

ಅಂತು ರಾಮಸ್ವಾಮಿಯ ಕೇವಲ ಬೋಧೋದಯದೊಡನೆ ತಮಗಾಸನಕಂಪ-ಮಪ್ಪುದುಮವಧಿಬೋಧದಿಂದಱಿದು,

ದುಂದುಭಿನಾದಮಾವರಿಸೆ ದಿಕ್ತಟಮಂ ಚಲಕೇತನಂ ವಿಯ-
ನ್ನಂದನ ಶಂಕೆಯಂ ಪಡೆಯೆ ರತ್ನವಿಮಾನವಿತಾನದಂಶು ಜಾ-
ಲಂ ದಿವಿಜೇಂದ್ರಚಾಪದ ವಿಲಾಸಮನೇಳಿಸೆ ಕಣ್ಗೆವಂದದೇಂ
ಬಂದುದೊ ರಾಮಕೇವಲಿಯ ಕೇವಲ ಪೂಜೆಗೆ ದೇವ ಸಂಕುಲಂ ॥೬೯॥

ಭವನಾವಾಸದವರ್ ಪದಿಂಬರಮರೇಂದ್ರರ್ ವ್ಯಂತರಾವಾಸ ಸಂ-
ಭವರೆಣ್ಬರ್ ಶಶಿಸೂರ್ಯರಿರ್ವರುಱಿದರ್ ಪನ್ನಿರ್ವರಿಂದ್ರರ್ ನಭೋ-
ವಿವರಂ ತಮ್ಮ ಬಲಕ್ಕೆ ಸಾಲದೆನೆ ಮೂಱುಂ ಲೋಕಮೊಂದಾಗಿ ಬ-
ರ್ಪವೊಲೇಂ ಬಂದರೊ ಮಾಣ್ಬಿ ಕೌತುಕದಿನಾ ಕೈವಲ್ಯ ಮಾಂಗಲ್ಯಮಂ ॥೭೦॥

ಅಂತು ಬಂದ ಚತುರ್ನಿಕಾಯ ದೇವನಿಕಾಯದೊಡನೆ ಸೀತೇಂದ್ರನುಂ ರಾಮಭಟ್ಟಾರಕರ್ಗೆ ಕೇವಲ ಜ್ಞಾನಪೂಜೆಯಂ ಮಾಡಿ ಪೊಡೆವಟ್ಟು ತದನಂತರಂ ಲಕ್ಷ್ಮೀಧರಂಗೆ ಧರ್ಮಮಂ ಪ್ರತಿಬೋಧಿಸಲೆಂದು ಶರ್ಕರಾಪ್ರಭೆಯೆಂಬ ನರಕಕ್ಕೆ ಪೋಗಿ ನೋಟ್ಪಿನಮಲ್ಲಿ ತಮ್ಮೊಳ್ ಘೋರರೂರ್ವರನನೇಕವಿಧದಿಂ ಪೀಡಿಸುತ್ತಿರ್ಪ ನಾರಕರುಮಂ ತೀವ್ರವೇದನೆಯಿಂ ನವೆಯುತ್ತುಮಿರ್ದ ರಾವಣನುಮಂ ಲಕ್ಷ್ಮಣನುಮನವರಿರ್ವರಂ ಕಾಡಿಸುತ್ತಿರ್ದ ಶಂಭುಕನುಮಂ ಕಂಡು ಕರುಣದಿನವರ್ಗೆ ಧರ್ಮಶ್ರವಣಮಂ ಗೆಯ್ದೊಡಂಬಡಿಸಿ ಸಮ್ಯಕ್ತ್ವಮಂ ಮಱೆಯದಿರಿಮೆಂದು ಪೇಳ್ದವರ ದುಃಖಕ್ಕೆ ಕರಮುಮ್ಮೆಗಂಬಟ್ಟು ತನ್ನಿರ್ಪಚ್ಯುತ ಕಲ್ಪಕ್ಕೆ ಪೋಗಿ ಮತ್ತಮೊರ್ಮೆ ರಾಮಭಟ್ಟಾರಕರ ಸಮೀಪಕ್ಕೆ ಬಂದು ಪೂಜಿಸಿ ಪೊಡೆವಟ್ಟು ಧರ್ಮಶ್ರವಣಾನಂತರಂ ದಶರಥಾದಿಗಳ ಗತಿಯಂ ಬೆಸಗೊಳ್ವುದುಂ,

ಹಿಮಕರಮಂಡಲದಿಂದೊಸ ।
ರ್ವಮರ್ದನೆ ಮಧುರೋಕ್ತಿ ಬೆಸಸಿದರ್ ಕೇವಲಿಗಳ್ ॥
ಸಮನಿಸಿದತ್ತುತ್ತಮ ಸಂ ।
ಯಮ ಫಲದಿಂ ದಶರಥಂಗ ಕಲ್ಪಾವಾಸಂ ॥೭೧॥

ಮತ್ತಮಪರಾಜಿತೆಗಂ ಕೈಕೆಗಂ ಸುಮಿತ್ರೆಗಂ ಸುಪ್ರಭೆಗಂ ಜನಕಂಗಂ ಕರ್ಮೋಪಶಮದಿಂ ಸುಗತಿ ಸಮನಿಸಿದುದು. ಲವಾಂಕುಶರುಮೀ ಭವದೊಳೆ ಮುಕ್ತರಪ್ಪರ್, ಪ್ರಭಾಮಂಡಲಂ ಸುಕೌಶಲ ಪುರಕ್ಕೆ ಪೋಗುತ್ತುಮಾಕಾಶದೊಳೆ ನಾಲ್ಕು ತಿಂಗಳುಪವಾಸಮಿರ್ದ ಮೂವರ್ ಮಹಾಋಷಿಯರಂ ಕಂಡು ಧರಾಮಂಡಲಕ್ಕವತರಿಸಿ ವಿಧಿಪೂರ್ವಕಮವರ್ಗಾಹಾರದಾನಮಂ ಕೊಟ್ಟು ತನ್ನೂರ್ಗೆ ಪೋಗಿ ತಾನುಂ ತನ್ನ ಸುಂದರ ಮಾಲೆಯೆಂಬರಸಿಯುಂ ಕರುಮಾಡದೊಳಿರ್ದು ಸಿಡಿಲ್ ಪೊಡೆಯೆ ಸತ್ತಿರ್ವರುಂ ಮಂದರದ ತೆಂಕಣ ಕುರವದೊಳ್ ಮೂಱು ಪಳಿತೋಪಮಾಯುಷ್ಯರಾಗಿ ಪುಟ್ಟಿದರೆಂದು ಪೇೞ್ದು,

ರಾವಣ ಲಕ್ಷ್ಮಣ ಭಾವಿ ಭ ।
ವಾವಳಿಯಂ ರಾಮದಿವ್ಯಮುನಿಪಂ ಶ್ರುತಿ ಸೌ- ॥
ಖ್ಯಾವಹಮೆನೆ ಮೃದುಮಧುರಾ ।
ರಾವಂ ಸೀತಾಚರಾಮರಂಗಿಂತೆಂದಂ ॥೭೨॥

ರಾವಣನುಂ ಲಕ್ಷ್ಮಣನುಂ ನಿರಯವಾಸದಿಂ ಪೊಱಮಟ್ಟು ಬಂದು ಮಂದರದ ಪೂರ್ವದಿಗ್ಭಾಗದ ವಿಜಯಾವತೀ ಪುರದೊಳ್ ನಂದನೆಂಬೊಕ್ಕಲಿಗಂಗಮಾತಕ ಕುಲವಧೂ ರೋಹಿಣಿಗಮರ್ಹದ್ದಾಸನುಂ ಋಷಿದಾಸನುಮೆಂಬ ತನಯರಾಗಿ ಶ್ರಾವಕ ವ್ರತಂಗಳಂ ಕೈಕೊಂಡು ಕೊಂಡಾಡಿ ನಡೆದನುಕ್ರಮದಿಂ ಜೀವಿತಾವಸಾನದೊಳ್ ದೇವಲೋಕಕ್ಕೆ ಪೋಗಿ ಮಗುೞ್ದು ಬಂದು ವಿಜಯಪುರದೊಳ್ ಪುಟ್ಟಿ ಋಷಿಯರ್ಗಾಹಾರದಾನಮನಿತ್ತು ಕಾಲಂಗೆಯ್ದು ಹರಿವರ್ಷದೊಳ್ ಪುಟ್ಟಿ ದೇವಲೋಕಕ್ಕೆ ಪೋಗಿ ಬಂದು ಮುನ್ನೆ ಪೇೞ್ದ ವಿಜಯಪುರಮನಾಳ್ವ ಕುಮಾರಕೀರ್ತಿಗಮಾತನರಸಿ ಲಕ್ಷ್ಮೀಮತಿಗಂ ಜಯಕಾಂತನುಂ ಜಯಪ್ರಭನುಮೆಂಬ ಮಕ್ಕಳಾಗಿ ಪುಟ್ಟಿ,

ಅಂತವರತಿ ಚಿರಕಾಲಂ ।
ಸಂತಸದಿಂ ರಾಜ್ಯಸುಖಮನನುಭವಿಸಿ ಬೞಿ- ॥
ಕ್ಕಂ ತಪದೊಳೆಸಗಿ ಕಡೆಯೊಳ್ ।
ಲಾಂತವ ಕಲ್ಪದೊಳನಲ್ಪ ಸುಖದಿಂದಿರ್ಪರ್ ॥೭೩॥

ನೀನುಮಚ್ಯುತ ಕಲ್ಪದಿಂ ಬಂದು ಭರತಕ್ಷೇತ್ರದೊಳ್ ಸಕಲ ಚಕ್ರವರ್ತಿಯಾಗಿರ್ಪುದುಂ ಲಾಂತವ ಕಲ್ಪದಿಂದವರ್ ಬಂದು ನಿನಗಿಂದ್ರರಥನುಂ ಮೇಘರಥನುಮೆಂಬ ತನೂಭವರಪ್ಪರವರೊಳಗ್ರಸುತನಾಗಿ ಪುಟ್ಟಿದ ದಶಗ್ರೀವಂ ಸಂಸಾರಸುಖವಿಮುಖನಾಗಿ ತಪಂಗೊಂಡು ಷೋಡಶ ಭಾವನೆಗಳಂ ಭಾವಿಸಿ ಷೋಡಶ ಭವಿಷ್ಯತ್ತೀರ್ಥಕರ ನಾಮಕರ್ಮಮಂ ಕಟ್ಟಿ ವೈಜಯಂತೀವಿಮಾನದೊಳ್ ಪುಟ್ಟಿ ಮಗುೞ್ದು ಬಂದು ಭರತಕ್ಷೇತ್ರದ ರತ್ನಪುರದೊಳ್ ತೀರ್ಥಕರ ಕುಮಾರನುಂ ಚಕ್ರವರ್ತಿಯುಮಾಗಿ ಪುಟ್ಟಿ,

ಸಕಲೋರ್ವೀತಲ ಚಕ್ರವರ್ತಿ ಪದಮಂ ಕೈಕೊಂಡದಂ ಬಿಟ್ಟು ತೀ-
ರ್ಥಕರತ್ವಂ ಬಡೆದಿರ್ಪುದುಂ ಗಣಧರಂ ನೀನಪ್ಪೆ ತದ್ಭಾವಿ ತೀ-
ರ್ಥಕರಂಗಂದು ಬಟಿಕ್ಕೆ ಮುಕ್ತಿವಡೆವೈ ನೀನೆಂದು ಭಟ್ಟಾರಕರ್
ಸಕಲಜ್ಞರ್ ತಿಳಿವಂತು ಪೇಟೆ ತಳೆದಂ ಸೀತೇಂದ್ರನುತ್ಸಾಹಮಂ ॥೭೪॥

ಮತ್ತಂ ರಾಮಭಟ್ಟಾರಕರ್ ಲಕ್ಷ್ಮಣಂ ಮೋಕ್ಷಕ್ಕೆ ಪೋಪನ್ನೆಗಮಪ್ಪ ಭವಂಗಳನಿಂತೆಂದು ಬೆಸಸಿದರ್, ಮೇಘರಥಂ ತಪಂಬಟ್ಟು ದೇವಗತಿವಡೆದಲ್ಲಿಂ ಬಂದು ಪೃಥ್ವೀಪುರದೊಳ್ ಸುವ್ರತಕೀರ್ತಿಯೆಂಬರಸನಾಗಿ ಮತ್ತಂ ತಪಂಬಟ್ಟು ಷೋಡಶಭಾವನೆಗಳಂ ಭಾವಿಸಿ ದೇವಲೋಕಕ್ಕೆ ಪೋಗಿ ದಿವಿಜಸುಖಮನನುಭವಿಸಿ ಬಂದು ಪುಷ್ಕರವರ ದ್ವೀಪದ ಪೂರ್ವವಿದೇಹದ ಪದ್ಮಪುರದೊಳ್ ಚಕ್ರವರ್ತಿಯುಂ ತೀರ್ಥಕರ ಕುಮಾರನುಮಾಗಿ ಪುಟ್ಟಿ ರಾಜ್ಯಸುಖಮನೊಲ್ಲದೆ ತಪಂಬಟ್ಟು ತೀರ್ಥಕರ ಜಿನೇಶ್ವರನಾಗಿ ಮೋಕ್ಷಕ್ಕೆ ಪೋಪಂ. ನಾಮಿಂದಿಂಗೆರಡು ವರ್ಷಕ್ಕೆ ಮೋಕ್ಷಕ್ಕೆ ಪೋಪೆವೆಂದು ತಮ್ಮಮಂ ಪೇಟೆ ಕೇಳ್ದು ಸಂತೋಷದಂತಮನೆಯ್ದಿ,

ಜಳಗಂಧಾಕ್ಷತ ಪಾರಿಜಾತ ಸುಮನೋದಾಮಂಗಳಿಂ ರಾಮಕೇ-
ವಳಿಯಂ ಪೂಜಿಸಿ ಭಕ್ತಿಯಿಂದೆಱಗಿ ಸೀತೇಂದ್ರಂ ವಿಭೂಷಾಂಶು ಮಂ-
ಡಳಿಯುಂ ದೇಹಮರೀಚಿಯುಂ ಪುದಿಯೆ ರೋದೋಭಾಗಮಂ ಚೆಲ್ವನೀ-
ಟ್ಟುಳಿಗೊಂಡಚ್ಯುತ ಕಲ್ಪಮಂ ವಿವಿಧ ಕೇಳೀತಲ್ಪಮಂ ಮುಟ್ಟಿದಂ ॥೭೫॥

ಇತ್ತ ರಾಮಭಟ್ಟಾರಕರ್,

ತಮಗೆ ಪದಿನಾಱು ಬಿಲ್ಲು।
ದ್ದಮೆನಲ್ ಪದಿನೆಂಟು ಸಾಸಿರುಂ ಪರಮಾಯು- ॥
ಷ್ಯಮೆನಲ್ ವರ್ತಿಸಿ ಮುಕ್ತಿ।
ಪ್ರಮದಾ ಸಂಭೋಗಲೋಭರತರಾಗಿರ್ದರ್ ॥೭೬॥

ಅಂತು ಸಮಯಸ್ಥಿತಿಯಂ ಪರಿಪಾಲಿಸುತ್ತಿರ್ದು,

ಸತತಂ ಪೂಜಿಸೆ ದೇವ ಮರ್ತ್ಯಖಚರ ಕ್ಷ್ಮಾಪಾಲಕರ್ ಪಂಚಪಂ-
ಚಶತಿ ಸಂವತ್ಸರಮಿಂತೆ ಪೂಜೆವಡೆಯುತ್ತುಂ ಭವ್ಯಸಸ್ಯಕ್ಕೆ ನಿ-
ರ್ವೃತಿ ಧರ್ಮಾಮೃತ ವೃಷ್ಟಿಯಂ ಕಱೆಯುತುಂ ನಿರ್ಬಾಧ ಬೋಧಂ ಯಶೋ-
ಲತೆಯಿಂ ಮುದ್ರಿಸಿದಂ ಜಗತ್ರಿತಯಮಂ ಶ್ರೀರಾಮಭಟ್ಟಾರಕಂ ॥೭೭॥

ನೀಡುತ್ತುಂ ಕುಮತಕ್ಕೆ ತೇಜದಟೆವಂ ವಿಖ್ಯಾತಿಯಂ ತಾಳ್ದಿದೊ-
ಳ್ಪಾಡಂ ಕೂಡೆ ತೊಱಲ್ದು ಭವ್ಯಜನಮಂ ರತ್ನತ್ರಯಾಲಂಕೃತಂ

ಮಾಡುತ್ತುಂ ದೆಸೆವೆಣ್ಗೆ ಧರ್ಮವಿಜಯ ಶ್ರೀ ಕೇಕರಾಲೋಕನ
ಕ್ರೀಡಾ ನಂದನಮಾಗೆ ಕೇವಲಿ ಕುಬೇರಾದ್ರೀಂದ್ರಮಂ ಮುಟ್ಟಿದಂ ||೭೮||

ಕ್ಷಿತಿಭೃನ್ಮೂರ್ಧಾಭಿಷಿಕ್ತಂ ವಲಮೆನಿಸಿದ ಕೈಲಾಸಶೈಲೇಂದ್ರದೊಳ್ ಕ-
ಲ್ಪತರು ಸ್ತೋಮಂಗಳಿಂ ಮಂಡಲಿಸಿದ ಕನಕಾಂಭೋಜಷಂಡಂಗಳಿಂ ಮಂ-
ಡಿತಮಾದತ್ಯಂತ ಶುದ್ಧಸ್ಫಟಿಕಮಣಿ ಶಿಲಾಪಟ್ಟದೊಳ್ ರಾಮಚಂದ್ರಂ
ಪ್ರತಿಮಾಯೋಗಪ್ರಯೋಗಂ ಗುಣಭವನ ಮಣಿಸ್ತಂಭಮಿರ್ಪಂತಿರಿರ್ದಂ ||೭೯||

ಅಂತಿರ್ದು ಸೂಕ್ಷ್ಮಶರೀರಯೋಗದಿಂ ಸೂಕ್ಷ್ಮಕ್ರಿಯಾಪ್ರತಿಪಾತಿಯೆಂಬ ಪರಮಶುಕ್ಲ ಧ್ಯಾನದೊಳ್ ನೆಲಸಿ ಲಘುಕರ್ಮ ಪರಿಪಾತನಶಕ್ತಿ ಪ್ರಾಪ್ತಿನಿಮಿತ್ತಂ ದಂಡ ಕವಾಟ ಪ್ರತರ ಲೋಕಪೂರಣ ಕ್ರಿಯೆಗಳು ಪ್ರತಿಸಮಯಂ ಪ್ರಯೋಗಿಸಿ ನಾಲ್ಕು ಘಾತಿಕರ್ಮಸ್ಥಿತಿಯ ಕಾಲಮಂ ಸದೃಶಂ ಮಾಡಿ ಮೂಲ ಶರೀರಪ್ರಮಾಣದೊಳೆ ನಿಂದು ವಾಙ್ಮನಃಕಾಯ ಯೋಗಮ ನಡಂಗಿಸಿ ಸಕಲ ಬದ್ಧಾಶ್ರವ ನಿರೋಧದಿನಯೋಗಿ ಕೇವಲಿ ಗುಣಸ್ಥಾನಮಂ ಪೊರ್ದಿ ಸಮುಚ್ಛಿನ್ನ ಪ್ರಾಣಾಪಾನಪ್ರಚಾರಂ ಸಮುಚ್ಛಿನ್ನ ಕ್ರಿಯಾವೃತ್ತಿ ಧ್ಯಾನಪ್ರವರ್ತನಾಪರನಾಗಿ,

ಪರಿಪೂರ್ಣಮೆನಿಸೆ ಗುಣಪರಿ ।
ಕರಂ ಯಥಾಖ್ಯಾತ ಚರಿತನಾಗಿ ಜಿನಂ ಮು- ॥
ಕ್ತಿರಮಾ ಕಚಗ್ರಹ ಸ್ತನ ।
ಪರಿರಂಭಾರಂಭ ಕೇಳಿಗುತ್ಸುಕನಾದಂ ||೮೦||

ಆಗಿ ತದುಪಾಂತ ಸಮಯದೊಳ್ಯತರ ವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ್ಯೌದಾರಿಕ ಶರೀರ ತದ್ಬಂಧನ ಸಂಘಾತ ಸಂಸ್ಥಾನಾಂಗೋಪಾಂಗ ಸಂಹನನ ವರ್ಣಗಂಧ ರಸಸ್ಪರ್ಶ ಪ್ರಶಸ್ತಾಪ್ರಶಸ್ತ ವಿಹಾಯೋಗತಿ ಗುರುಲಘೂಪಘಾತ ಪರಘಾತಾತಪೋದ್ಯೋತೋಚ್ಛ್ವಾಸ ನಿಶ್ವಾಸ ಪರ್ಯಾಪ್ತಿ ಪ್ರತ್ಯೇಕಶರೀರಸ್ಥಿರಾಸ್ಥಿರ ಸುಭಗ ದುರ್ಭಗ ಸುಸ್ವರ ದುಸ್ಸ್ವರಾದೇಯಾನಾದೇಯ ಯಶಸ್ಕೀರ್ತ್ಯಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂಮಾಡಿ,

ಪ್ರಕೃತಿಗಳಗಲ್ಕೆಯಿಂ ಶು ।
ಕ್ತಿಕೆಯಿಂ ಪೊಱಮಟ್ಟ ಮೌಕ್ತಿಕಂ ನೀರದಮಾ- ॥
ಲಿಕೆಯಿಂ ತೊಲಗಿದ ಶಶಿಕಾ ।
ಲಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ ||೮೧||

ಅನಂತರಂ ಚರಸಮಯದೊಳ್ ಪರಿಶಿಷ್ಟಾನ್ಯತರ ವೇದನೀಯ ಮನುಷ್ಯಾಯುರ್ಮನುಷ್ಯಗತಿ ಪಂಚೇಂದ್ರಿಯ ಜಾತ್ಯಾನುಪೂರ್ವೀ ತ್ರಸನಾಮ ಬಾದರ

ಪರ್ಯಾಪ್ತಕ ಸುಭಗಾದೇಯ ಯಶಸ್ಕೀರ್ತಿ ತೀರ್ಥಂಕರ ನಾಮೋಚ್ಚೈರ್ಗೋತ್ರಂಗಳೆಂಬ ಪದಿಮೂಱುಂ ಪ್ರಕೃತಿಗಳುಮೊರ್ಮೆಯೆ ನಿರ್ಮೂಲಮಾಗೆ ಸಕಲ ಸಂಸಾರಭಾರ ದುಃಖಬಾರ ಭಂಜನನುಂ ನಿರಂಜನನುಮಾಗಿ,

ಕಿಡೆ ನಿಶ್ಶೇಷಮಘಾತಿ ಪಜ್ಜಳಿಸೆ ತನ್ನೆಂಟುಂ ಗುಣಂ ಕೂಡೆ ನೇ-
ರ್ಪಡೆ ದೀಪಾರ್ಚಿಗಳಂತಿರೂರ್ಧ್ವಗತಿ ಮೂಱುಂ ಲೋಕದಿಂ ಮೇಲೆ ಬೆ-
ಳ್ಗೊಡೆಯಿರ್ಪಂತಿರೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ ಕೈ-
ವಿಡಿದಂ ಶಾಶ್ವತಮಪ್ಪ ಮುಕ್ತಿ ವಧುವಂ ಶ್ರೀರಾಮಭಟ್ಟಾರಕಂ ॥೮೨॥

ಅಂತು ರಾಮಭಟ್ಟಾರಕಂ ಪರಮಪದಪ್ರಾಪ್ತನಪ್ಪುದುಂ,

ಪೂಮಱೆ ಕಱೆದತ್ತಖಿಲ ದಿ ।
ಶಾಮುಖಮಂ ದೇವದುಂದುಭಿಧ್ವನಿ ತೀವಿ- ॥
ತ್ತಾಮೋದಮತ್ತ ಮಧುಕರ ।
ದಾಮಂ ತೀಡಿತ್ತು ಬಂದು ಮಂದಸಮೀರಂ ॥೮೩॥

ಇನಿತಮರ ಪಟಹ ಪೇಟಕ ।
ಮಿನಿತಮರ ವಿಮಾನ ಪಟಲಮಿನಿತಮರ ಪತಾ- ॥
ಕಿನಿಯೆಂದು ನೆನೆಯಲರಿದೆನೆ ।
ಜಿನಪೂಜೆಗೆ ಬಂದರಮರ ಪರಿವೃಢರಾಗಳ್ ॥೮೪॥

ಚಿತ್ರಾತಪತ್ರದಿಂ ಶತ ।
ಪತ್ರವನಸ್ಥಲಿಯನಿೞಿಪಿ ನಭದೊಳೆ ದೆಸೆಯಂ ॥
ಚಿತ್ರಿಸೆ ಕಿರೀಟ ಕಿರಣಂ ।
ದ್ವಾತ್ರಿಂಶತ್ತ್ರಿದಶಪತಿಗಳಂದೇೞ್ತಂದರ್ ॥೮೫॥

ಅಂತು ನಿರ್ವಾಣ ಪೂಜೆಗೆ ನಿಖಿಲ ಗೀರ್ವಾಣಪತಿಗಳೇೞ್ತರ್ಪಾಗಳ್,

ಪಳಿಕಿನ ಕೊಡದೊಳ್ ಗಂಗಾ ।
ಜಳಂಗಳಂ ತೀವಿ ತರ್ಪ ಸುರವನಿತೆ ಘನೋ- ॥
ಪಳಮಂ ತಾಳ್ದಿದ ವಿದ್ಯು ।
ದ್ವಿಳಾಸಮಂ ನಿಜವಿಲಾಸದಿಂ ಮಸುಳಿಸಿದಳ್ ॥೮೬॥

ಚಂದನಕರ್ದಮ ಶುಕ್ತಿಕೆ ।
ಕೆಂದಳಮೊಳ್ ತಳಿರೊಳೆಸೆವ ಪೂಗೊಂಚಲೆನಲ್ ॥

ಬಂದರ್ ತಾರಾಂತಃಪುರ ।
ಸುಂದರಿಯರ್ ಪರಮಚರಮ ಪೂಜೋತ್ಸವದೊಳ್ ॥೮೭॥

ಸಿತವಿಕಸಿತಾಬ್ಜದೊಳ್ ತೀ ।
ವಿ ತಂದರೆಳವೆಱೆಯ ಕದಿರನೆಂದೆನಿಪ ಸಿತಾ- ॥
ಕ್ಷತಮಂ ದಿಗ್ದೇವತೆಯರ್ ।
ಸಿತಲೋಚನರುಚಿ ದಿಗಂತಮಮಂ ಬಳಸುವಿನಂ ॥೮೮॥

ಜ್ಞಾನಕೃಶಾನುವಿಂದಮಿರಿದಟ್ಟಿದ ಕಾಮನ ಮೋಹನಾಸ್ತ್ರ ಸಂ-
ತಾನ ಶರಾಸನಾವಳಿಯನೊಪ್ಪಿಸಲೀಕೆಗಳೀ ಜಿನೇಂದ್ರನಾ-
ಸ್ಥಾನಿಗೆ ತಂದರಕ್ಕುಮೆನೆ ರಂಜಿಸೆ ಕೆಂದಳದೊಳ್ ಲತಾಂತಮಾ-
ಲಾನಿಕುರುಂಬಮಿಕ್ಷುಲತೆ ಬಂದುದು ಕಿನ್ನರ ಕನ್ಯಕಾಜನಂ ॥೮೯॥

ಕರೆಗಣ್ಮುವ ನಿಜಲಾವ ।
ಣ್ಯರಸಂ ಪರಿನಾಳಮಿಕ್ಕಿದತ್ತೆನೆ ತಂದಳ್ ॥
ಸುರಸುಂದರಿ ಚಂದನರಸ ।
ಭರಿತಾಯತ ಕೇತಕೀದಲ ದ್ರೋಣಿಗಳಂ ॥೯೦॥

ತಳೆದನಿಮಿಷವಧುಗಳ್ ಕ ।
ಣ್ಗೊಳಿಸಿದರುನ್ಮಿಷಿತ ಕರ್ಣಿಕಾರಲತಾ ಸಂ- ॥
ಕುಳಮೆನೆ ಸುವರ್ಣಮಯ ಪರಿ ।
ಯಳಮಂ ಭಕ್ಷ್ಯೋಪದಂಶ ಚರುವಿಲಸಿತಮಂ ॥೯೧॥

ಪೆಡೆವರಾಲಾವುದೊ ರನ್ನದ ।
ಸೊಡರಾವುದೊ ಪೇಟಿಮೆಂಬಿನಂ ಸಂದೆಗದ- ॥
ಚ್ಚಿಡಿದಿರೆ ನಾಗಾಂಗನೆಯರ್ ।
ಗಡಣದೆ ಕೈಲಾಸ ಶೈಲಮಂ ಸಾರ್ತಂದರ್ ॥೯೨॥

ಒಗೆದ ಕುಚಂ ಮೊಗಂಗುಡದೆ ಚೆಲ್ವಿನೊಳೇಳಿಸೆ ತತ್ಸಮೀಪದೊಳ್
ಪೊಗೆಮೊಗವಾದವೋಲೆ ತಳೆದ ಧೂಮಘಟಂಗಳ ನುಣ್ಮೆ ಪೂಣ್ಮೆ ತ-
ಟ್ಟಿಗರುವ ಧೂಮಲೇಖೆ ಸುರಸುಂದರಿಯರ್ ನಡೆತಂದವರಂದು ಸು-
ಯ್ಗೊಗೆವಳಿಮಾಲೆ ತಮ್ಮ ಲುಲಿತಾಲಕದೊಳ್ ತಡವಾದುದೆಂಬಿನಂ ॥೯೩॥

ವಿವಿಧಫಲಮಾದುವೋರೊಂ ।
ದೆ ವಲ್ಲಿಗೆನೆ ಚೆಲ್ವುವೆತ್ತುವಮರೀ ಕರಪ- ॥

ಲ್ಲವದೊಳ್ ನವೀನ ಕದಲೀ ।
ನವಾಮ್ರ ನಾರಂಗ ನಾಲಿಕೇರ ಫಲಂಗಳ್ ॥೯೪॥

ನಿರತಿಶಯಮೆನಿಪ ಧರ್ಮಾ ।
ನುರಾಗಮೊ ತೋರ್ಪುದೆಂಬಿನಂ ಸುರವನಿತಾ ॥
ಕರಕಿಸಲಯದೊಳ್ ಕುಂಕುಮ ।
ಪರಿಪೂರ್ಣ ಸುವರ್ಣ ಭಾಜನಂ ರಂಜಿಸುಗುಂ ॥೯೫॥

ಜವನಂ ರಾಮಜಿನಂ ಜವಂಗಿಡಿಸಿ ಗೆಲ್ದುಂಗೊಂಡ ಕೈಲಾಸ ಶೈ-
ಲ ವಿಶಾಲ ಸ್ಫಟಿಕಸ್ಥಲೀ ನಿಕಟಮಂ ದ್ವಾತ್ರಿಂಶದಿಂದ್ರರ್ಕಳು-
ತ್ಸವದಿಂದರ್ಚಿಸುವಾಗಲೇಂ ಕಱೆದುದೋ ಕರ್ಣಾಮೃತಾಸಾರಮಂ
ವಿವಿಧಾತೋದ್ಯ ಲಯಾನುಗಂ ಸುರಸತೀ ಮಂಜೀರಿಕಾ ಶಿಂಜಿತಂ ॥೯೬॥

ಪಿರಿದೆನಿಸಿರ್ದ ರಾಮಕಥೆಯಂ ಕಿಱೆದಾಗಿರೆ ದೇಸಿ ಮಾರ್ಗಮೆಂ-
ಬೆರಡಱೊಳಂ ರಸಂಬಡೆದು ಪಂಡಿತ ಮಂಡಳಿ ಮೆಚ್ಚೆ ನೇರ್ಪುವೆ-
ತ್ತಿರಲವಿರೋಧಮಾಗೆ ಕೃತಿವೇೞ್ದೊಡೆ ಸತ್ಕವಿ ನಾಗಚಂದ್ರನಂ-
ತಿರೆ ಪೇೞರಾರ್ ಸರಸ್ವತಿ ಕುಡಲ್ ಪಡೆದರ್ ವರಮಂ ಕವೀಶ್ವರರ್ ॥೯೭॥

ಕೃತಪಿದ್ಯರ್ ಸಮುಚಿತ್ತರಾಗಿ ಪಡೆಪಿಂದಾರಯ್ಯೆ ಕರ್ಣಾಟ ಸಂ-
ಸ್ಕೃತಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟು ವಿದ್ವಜ್ಜಮ-
ತ್ಕೃತಿಯಪ್ಪಂತಿರೆ ನಾಗಚಂದ್ರ ಪಿಬುಧಂ ಪೇೞ್ದುಂದದಿಂದಾದ್ಯರ-
ದ್ಯತನಂ ಪೇೞ್ದಭಿರಾಮ ರಾಮ ಕಥೆಯಂ ಸೈಪಿಂಗಡರ್ಪಾಗನೇ ॥೯೮॥

ಇದು ಪರಮಜಿನಸಮಯ ಕುಮುದಿನೀಶರಚ್ಚಂದ್ರ ಬಾಳಚಂದ್ರ ಮುನೀಂದ್ರ ಚರಣನಖಕಿರಣ
ಚಂದ್ರಿಕಾಚಕೋರಂ ಭಾರತೀಕರ್ಣಪೂರಂ ಶ್ರೀಮದಭಿನವಪಂಪ
ವಿರಚಿತಮಪ್ಪ ರಾಮಚಂದ್ರಚರಿತ ಪುರಾಣದೊಳ್
ಪರಿನಿರ್ವಾಣಕಲ್ಯಾಣೋತ್ಸವ ವರ್ಣನಂ
ಷೋಡಶಾಶ್ವಾಸಂ



# ಅನುಬಂಧ-೧

## ವಿಮಲಸೂರಿಯ 'ಪಉಮಚರಿಯ'ದ ಕಥಾಸಾರ

ನಾಗಚಂದ್ರನು ತನ್ನ ರಾಮಚಂದ್ರ ಚರಿತ ಪುರಾಣಕ್ಕಾಗಿ ವಿಮಲ ಸೂರಿಯ ಪಉಮಚರಿಯ ಎಂಬ ಪ್ರಾಕೃತ ಕೃತಿಯ ನೆರವನ್ನು ಪಡೆದುಕೊಂಡಿದ್ದಾನೆ. ಕಾರಣ ಎರಡೂ ಕೃತಿಗಳ ತೌಲನಿಕ ಅಧ್ಯಯನಕ್ಕೆ ನೆರವಾಗಲಿ ಎಂಬ ದೃಷ್ಟಿಯಿಂದ ಪಉಮಚರಿಯದ ಕಥೆಯನ್ನು ಇಲ್ಲಿ ಸಂಕ್ಷಿಪ್ತವಾಗಿ ಸಂಗ್ರಹಿಸಿಕೊಡಲಾಗಿದೆ.

ಪಉಮಚರಿಯು ೯೪ ಪ್ರಕರಣಗಳಲ್ಲಿ ಹರಡಿಕೊಂಡಿದ್ದು, ನಾಗಚಂದ್ರನು ಮಹತ್ವದ ಪ್ರಸಂಗಗಳನ್ನು ಮಾತ್ರ ಹೊಂದಿಸಿಕೊಂಡಿದ್ದಾನೆ. ಪಉಮಚರಿಯದ ಆರಂಭದ ಪ್ರಕರಣಗಳು ಸಾಂಪ್ರದಾಯಿಕವಾದ ವಿಷಯಗಳನ್ನು ಒಳಗೊಂಡಿವೆ. ಗೌತಮ ಗಣಧರರು ಕುಂಭಕರ್ಣನ ೬ ತಿಂಗಳ ನಿದ್ರೆ, ಕಪಿಗಳು ಕಡಲಿಗೆ ಸೇತುವೆಕಟ್ಟುವುದು ಮೊದಲಾದ ಹಳೆಯ ನಂಬಿಕೆಗಳು ಅಬದ್ಧವಾಗಿವೆ ಎಂದು ತಿಳಿಸಿದರಲ್ಲದೆ ರಾಮಾಯಣದ ನಿಜಸ್ವರೂಪವನ್ನು ವಿವರಿಸಿದ್ದಾರೆ. ಆ ಸರಣಿಯಲ್ಲಿ ತಾನು ಕಥೆ ಹೇಳುತ್ತಿರುವುದಾಗಿ ವಿಮಲಸೂರಿ ತಿಳಿಸಿದ್ದಾನೆ. ೬ನೇ ಪ್ರಕರಣದ ವರೆಗೆ ಅಯೋಧ್ಯೆಯನ್ನು ಆಳಿದ ಇಕ್ಷ್ವಾಕುವಂಶದ ದೊರೆಗಳ ಚರಿತ್ರೆಯನ್ನು ತಿಳಿಸಲಾಗಿದೆ. ಅಲ್ಲಿ ಆದಿ ತೀರ್ಥಂಕರ, ಭರತ ಚಕ್ರವರ್ತಿ, ಇವರ ವಿವರಗಳು ಬರುತ್ತವೆ. ಹಾಗೂ ಲಂಕಾಧಿಪತಿಗಳ ರಾಕ್ಷಸ ವಂಶದ ಚರಿತ್ರೆ ಬರುತ್ತದೆ. ಆ ವಂಶದ ರತ್ನಶ್ರವ ಮತ್ತು ಕೈಕಸಿ ದಂಪತಿಗಳಿಗೆ ರಾವಣ-ಕುಂಭಕರ್ಣ ಚಂದ್ರನಖಿ ಮತ್ತು ವಿಭೀಷಣ ಎಂಬ ನಾಲ್ಕು ಜನ ಮಕ್ಕಳು, ರಾವಣನ ಕೊರಳಲ್ಲಿದ್ದ ನಾಗೇಂದ್ರ ರಕ್ಷಿತ ರತ್ನಹಾರದಲ್ಲಿ ಶಿಶು ರಾವಣನ ಮುಖದ ೯ ಪ್ರತಿಬಿಂಬಗಳು ಕಂಡ ಕಾರಣ ಅವನಿಗೆ ದಶಮುಖನೆಂಬ ಹೆಸರು ಬಂದಿತು. ಒಮ್ಮೆ ಅವನು ಮಾಯಾಶಕ್ತಿಯ ವಶೀಕರಣಕ್ಕಾಗಿ ತಪಸ್ಸು ಮಾಡಲು ಕಾಡಿಗೆ ಹೋಗುತ್ತಾನೆ. ಅಲ್ಲಿ ಒಬ್ಬ ಯಕ್ಷದೇವತೆ, ರಾವಣನಿಗೆ ಮನಸೋತು ಅವನನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ವಿಚಲಿತನಾಗದ ರಾವಣ ಘೋರ ತಪಸ್ಸನ್ನು ಮಾಡಿ ಮಾಯಾಶಕ್ತಿಯ ವಶೀಕರಣಮಾಡಿಕೊಂಡ ಅಸುರ ಸಂಗೀತ ನಗರದ ಮಯ ಮತ್ತು

ಹೇಮಾವತಿಯ ಮಗಳು ಮಂಡೋದರಿಯನ್ನು ರಾವಣನು ಮದುವೆಯಾಗುತ್ತಾನೆ. ಒಮ್ಮೆ ಖರದೂಷಣರು ರಾವಣನ ತಂಗಿ ಚಂದ್ರನಖಿಯನ್ನು ಅಪಹರಿಸುತ್ತಾರೆ. ಕುಪಿತನಾದ ರಾವಣ ಅವರ ಮೇಲೆ ಆಕ್ರಮಣಮಾಡಲು ಸಿದ್ಧನಾಗುತ್ತಾನೆ. ಕೊನೆಗೆ ಮಂಡೋದರಿಯ ಸೂಚನೆಯ ಮೇರೆಗೆ ಚಂದ್ರನಖಿಯನ್ನು ಅವರಿಗೆ ಕೊಟ್ಟು ವಿವಾಹ ಮಾಡುತ್ತಾನೆ. ಹೀಗಿದ್ದಾಗ ಒಂದು ದಿನ ರಾವಣನು ವಾಲಿಸುಗ್ರೀವರ ತಂಗಿ ಶ್ರೀಪ್ರಭೆಯನ್ನು ತಾನು ವರಿಸುವದಾಗಿ ಅವರಿಗೆ ಸಂದೇಶ ಕಳಿಸುತ್ತಾನೆ. ವಾಲಿ ಅದಕ್ಕೆ ಒಪ್ಪಲಿಲ್ಲ. ರಾವಣನು ಅವನ ಮೇಲೆ ಯುದ್ಧ ಸಾರುತ್ತಾನೆ. ರಾವಣನಿಗೆ ಸೋಲಾಗುತ್ತದೆ. ವೈರಾಗ್ಯ ತಾಳಿದ ವಾಲಿ ಸುಗ್ರೀವನಿಗೆ ರಾಜ್ಯವನ್ನು ಒಪ್ಪಿಸಿ ತಪಸ್ಸಿಗೆ ತೆರಳುತ್ತಾನೆ. ಸುಗ್ರೀವ ಶ್ರೀಪ್ರಭೆಯನ್ನು ರಾವಣನಿಗೆ ಕೊಟ್ಟು ಮದುವೆ ಮಾಡುತ್ತಾನೆ.

ಇದೇ ರೀತಿ ಒಮ್ಮೆ ವಿದ್ಯಾಧರ ಸುಂದರಿ ರತ್ನಾವಲಿಯನ್ನು ಮದುವೆಯಾಗಲು ರಾವಣನು ರಥದಲ್ಲಿ ಸಾಗುವಾಗ ಪರ್ವತ ಪ್ರದೇಶದಲ್ಲಿ ಅವನ ರಥ ಕುಂಠಿತವಾಗುತ್ತದೆ. ವಾಲಿಯಿಂದಲೆ ಹೀಗಾಗಿದೆ ಎಂಬುದನ್ನು ಅರಿತ ರಾವಣನು ಇಡೀ ಪರ್ವತವನ್ನೇ ಬುಡಸಹಿತ ಅಲ್ಲಾಡಿಸಿದನು. ಆದರೆ ವಾಲಿಯು ತನ್ನ ಕಾಲ ಹೆಬ್ಬೆರಳಿನಿಂದ ಪರ್ವತವನ್ನು ಒತ್ತಿ ಹಿಡಿದ ಕಾರಣ ರಾವಣನು ಅದರ ಕೆಳಗೆ ಸಿಕ್ಕು ಒದರಿದನು. ಅಂದಿನಿಂದ ಅವನಿಗೆ ರಾವಣನೆಂಬ ಹೆಸರು ರೂಢಿಗೆ ಬಂದಿತು. ಕೊನೆಗೆ ವಾಲಿಯ ಮಹಿಮೆಗೆ ಸೋತು ರಾವಣನು ಅವನಲ್ಲಿ ಕ್ಷಮೆಯಾಚಿಸುತ್ತಾನೆ.

ತಾರೆ ಎಂಬುವಳು ಸುಗ್ರೀವನ ಸತಿ. ಅವಳಿಗೆ ಅಂಗದ ಮತ್ತು ಜಯಾನಂದ ಎಂಬ ಇಬ್ಬರು ಮಕ್ಕಳು. ರಾಜಪುರದ ಅರಸ ಮರುತ್ತನೆಂಬವನು. ಅವನು ತುಂಬ ಅಹಂಕಾರಿ. ಯಜ್ಞಗಳಲ್ಲಿ ಪ್ರಾಣಿಬಲಿಕೊಡುತ್ತಿದ್ದ. ನಾರದರು ಅದನ್ನು ವಿರೋಧಿಸುತ್ತಾರೆ. ಆಗ ಮರುತ್ತನ ಕಡೆಯವರು ನಾರದರ ಮೇಲೆ ಆಕ್ರಮಣ ಮಾಡುತ್ತಾರೆ. ಅಹಿಂಸಾಧ್ವಜವನ್ನು ಎತ್ತಿಹಿಡಿದ ರಾವಣನು ಯಜ್ಞಭೂಮಿಗೆ ಬಂದು ನಾರದರನ್ನು ಕಾಪಾಡುತ್ತಾನೆ. ರಾವಣನಲ್ಲಿ ಕ್ಷಮೆಕೇಳಿದ ಮರುತ್ತ ತನ್ನ ತಂಗಿ ಕನಕ ಪ್ರಭೆಯನ್ನು ರಾವಣನಿಗೆ ಮದುವೆ ಮಾಡಿಕೊಡುತ್ತಾನೆ.

ನಲಕೂಬರನೆಂಬುವನು ದುರ್ಲಂಘ್ಯ ಪುರದ ದೊರೆಯು. ಒಂದು ದಿನ ರಾವಣನು ಜಿನಪೂಜೆಗೆಂದು ಅಷ್ಟಪಾದ ಪರ್ವತಕ್ಕೆ ಹೊರಟಾಗ ನಲಕೂಬರನು ಅವನಿಗೆ ಅಡ್ಡಿಯನ್ನುಂಟುಮಾಡುತ್ತಾನೆ. ಇಬ್ಬರಲ್ಲಿ ಯುದ್ಧ ನಡೆಯುತ್ತದೆ. ನಲಕೂಬರನು ರಾವಣನಿಗೂ ಅಭೇದ್ಯವಾದ ಒಂದು ಕೋಟೆಯನ್ನು ನಿರ್ಮಿಸುತ್ತಾನೆ. ಆ ಚಿಂತೆಯಲ್ಲಿ ರಾವಣನಿರುವಾಗ ಒಂದು ಪ್ರಸಂಗ ಜರುಗುತ್ತದೆ. ರಾವಣನ ಗುಣರೂಪಗಳಿಗೆ ಒಳಗೊಳಗೇ ಮನಸೋತಿದ್ದ ನಲಕೂಬರನ ಹೆಂಡತಿಯು ತನ್ನನ್ನು ಸ್ವೀಕರಿಸುವಂತೆ ರಾವಣನಲ್ಲಿ ತನ್ನ ದಾಸಿಯನ್ನು ಕಳಿಸುತ್ತಾಳೆ. ರಾವಣ ಅದಕ್ಕೆ ಒಪ್ಪುವುದಿಲ್ಲ. ಆದರೆ ಕೋಟೆಯನ್ನು ಭೇದಿಸುವ ಆಶಾಲಿಕ ಎಂಬ ರಹಸ್ಯವಿದ್ಯೆಯು ಅವಳಿಗೆ ಗೊತ್ತಿರುವುದನ್ನು ತಿಳಿದಿದ್ದ ರಾವಣನ ಮಂತ್ರಿಯು ಉಪರಂಭೆಯ ಜೊತೆಗೆ ಕೃತಕ ಪ್ರೀತಿಯ ನಾಟಕವನ್ನಾಡುವಂತೆ ರಾವಣನಿಗೆ ತಿಳಿಸುತ್ತಾನೆ. ಆ ಯೋಜನೆಯಂತೆ ನಲಕೂಬರನು

ಬಂಧಿತನಾಗುತ್ತಾನೆ. ವಿದ್ಯೆಯನ್ನು ಕಲಿಸಿಕೊಟ್ಟಕಾರಣ ನೀನು ನನಗೆ ಗುರುವಿಗೆ ಸಮಾನ ಎಂದು ಹೇಳಿ ರಾವಣನು ನೈತಿಕತೆಯಿಂದ ಬದುಕುವಂತೆ ಉಪರಂಭೆಗೆ ತಿಳಿಸುತ್ತಾನೆ. ಅಲ್ಲದೆ ನಲಕೂಬರನನ್ನು ಬಂಧ ಮುಕ್ತಗೊಳಿಸಿ ಅವನ ರಾಜ್ಯವನ್ನು ಅವನಿಗೆ ಒಪ್ಪಿಸುತ್ತಾನೆ. ಹೀಗೆ ೧೨ನೆಯ ಪ್ರಕರಣದವರೆಗೆ ರಾವಣನ ದಿಗ್ವಿಜಯದ ವರ್ಣನೆಗಳು ತುಂಬಿಕೊಂಡಿವೆ.

ಮತ್ತೊಮ್ಮೆ ರಥನೂಪುರ ರಾಜ್ಯದ ದೊರೆಯಾದ ಇಂದ್ರನನ್ನು ರಾವಣನು ಯುದ್ಧದಲ್ಲಿ ಸೋಲಿಸಿ ಬಂಧಿಸುತ್ತಾನೆ. ಇಂದ್ರನ ತಂದೆಯ ವಿನಂತಿಯ ಮೇರೆಗೆ, ಇಂದ್ರನನ್ನು ರಾವಣನು ಬಂಧಮುಕ್ತಗೊಳಿಸಿದನು. ಕೆಲದಿನಗಳಲ್ಲಿ ಇಂದ್ರನು ಸಂನ್ಯಾಸ ಸ್ವೀಕರಿಸಿದನು. ಧರ್ಮಪರನಾದ ರಾವಣನು ಮತ್ತೊಂದು ದಿನ ಜಿನದರ್ಶನಕ್ಕೆ ಹೋದಾಗ ಅಲ್ಲಿ ಅನಂತವೀರ್ಯಮುನಿಗಳ ದರ್ಶನವಾಗುತ್ತದೆ. ಅವರಲ್ಲಿ ರಾವಣನು ಪರಸ್ತ್ರೀಯು ಎಷ್ಟೇ ಸುಂದರಿಯಾಗಿರಲಿ ಅವಳ ಇಚ್ಛೆಯ ವಿರುದ್ಧ ಎಂದಿಗೂ ಬಲಾತ್ಕರಿಸಲಾರೆನೆಂದು ವ್ರತವನ್ನು ಸ್ವೀಕರಿಸಿ ಲಂಕೆಗೆ ಮರಳುತ್ತಾನೆ.

೧೫ ರಿಂದ ೧೯ನೆಯ ಪ್ರಕರಣಗಳ ವರೆಗೆ ಹನುಮಂತ ಮತ್ತು ಅವನ ಪೂರ್ವಜರ ವೃತ್ತಾಂತವಿದೆ. ಆದಿತ್ಯಪುರ ನಗರದ ಪ್ರಲ್ಹಾದ ದೊರೆಯ ಮಗ ಪವನಂಜಯ. ಅತ್ತ ಮಹೇಂದ್ರ ಪುರದ ದೊರೆಯಾಗಿದ್ದ ಮಹೇಂದ್ರನ ಮಗಳು ಅಂಜನ ಎಂಬುವಳು ತ್ರಿಲೋಕಸುಂದರಿಯಾಗಿದ್ದಳು. ಅವಳನ್ನು ರಾವಣನಿಗೆ ಕೊಡಬೇಕೊ ಅಥವಾ ಕನಕಪುರದ ರಾಜಕುಮಾರ ವಿದ್ಯುತ್‌ಪ್ರಭನಿಗೆ ಕೊಡಬೇಕೋ. ಎಂಬ ಚಿಂತೆಯಲ್ಲಿ ಮಹೇಂದ್ರ ಮುಳುಗುತ್ತಾನೆ. ಈ ನಡುವೆ ಅವಳನ್ನು ಪವನಂಜಯನಿಗೆ ಲಗ್ನಮಾಡಿ ಕೊಡಬೇಕಾಗಿ ಬರುತ್ತದೆ. ಲಗ್ನವಾದ ಮೇಲೆ ಅಂಜನಾದೇವಿಯು ವಿದ್ಯುತ್‌ಪ್ರಭನ ಜೊತೆಗೆ ಅನೈತಿಕಸಂಬಂಧ ಹೊಂದಿರುವಳೆಂಬ ಶಂಕೆಯಿಂದ ಪವನಂಜಯನು ಅವಳನ್ನು ದೂರವಿಡುತ್ತಾನೆ. ಹೀಗೆಯೇ ೨೨ ವರ್ಷ ಕಳೆಯುತ್ತದೆ. ಹೀಗಿದ್ದಾಗ ಪಾತಾಳನಗರದ ವರುಣನ ಮಕ್ಕಳು ಯುದ್ಧದಲ್ಲಿ ಖರದೂಷಣರನ್ನು ಸೆರೆಹಿಡಿಯುತ್ತಾರೆ. ಪವನಂಜಯ ಅವನನ್ನು ಸೆರೆಯಿಂದ ಬಿಡಿಸಲು ಹೋಗುತ್ತಾನೆ. ದಾರಿಯಲ್ಲಿ ಹೆಣ್ಣು ಚಕೋರಿಯೊಂದು ಪತಿಯ ವಿರಹದಲ್ಲಿ ಬಳಲುತ್ತಿರುವುದನ್ನು ನೋಡಿ ಪವನಂಜಯನಿಗೆ ತನ್ನ ಹೆಂಡತಿಯು ನೆನಪಾಗುತ್ತದೆ. ಒಂದು ದಿನ ಅವಳಲ್ಲಿ ತಂಗಿ ಪ್ರಯಾಣವನ್ನು ಮುಂದುವರೆಸುತ್ತಾನೆ. ಈ ಪ್ರಸಂಗ ಅವರಿಬ್ಬರನ್ನು ಬಿಟ್ಟು ಬೇರಾರಿಗೂ ಗೊತ್ತಿರುವುದಿಲ್ಲ

ಅಂಜನೆ ಗರ್ಭಿಣಿಯಾಗುತ್ತಾಳೆ. ಅವಳ ನಡತೆಯ ಬಗ್ಗೆ ಸಂಶಯತಾಳಿದ ಅವಳ ತಂದೆ ಅಂಜನೆಯನ್ನು ಮನೆಬಿಟ್ಟು ಹೊರಗೆ ಹಾಕುತ್ತಾನೆ. ಗುಹೆಯೊಂದರಲ್ಲಿ ಅವಳು ಒಂದು ಗಂಡು ಕೂಸಿಗೆ ಜನ್ಮವೀಯುತ್ತಾಳೆ. ಒಂದು ದಿನ ಅಂಜನೆಯ ಸೋದರ ಮಾವನಾದ ಪ್ರತಿಸೂರ್ಯನು ಆ ಗುಹೆಗೆ ಭೇಟಿನೀಡಿ ವಸಂತಮಾಲೆಯ ಮೂಲಕ ಅಂಜನೆಯ ವೃತ್ತಾಂತವನ್ನು ಕೇಳಿ ತಿಳಿಯುತ್ತಾನೆ. ಮನಸ್ಸು ಕರಗಿ ಅವಳನ್ನು ಹನೂರುಹ ದ್ವೀಪಕ್ಕೆ ಕರೆದೊಯ್ಯುತ್ತಾನೆ. ಆ ದ್ವೀಪದಲ್ಲಿ ತಾಯಿ ಮಕ್ಕಳಿಬ್ಬರು ವಾಸವಾಗುತ್ತಾರೆ. ಆ ಮಗುವೇ ಹನುಮಂತ.

ಪವನಂಜಯನಿಗೆ ಹೆಂಡತಿಯ ಮನಸ್ಥಿತಿಯ ವಿಷಯ ತಿಳಿದು ಅವನು ಹನೂರಹದ್ವೀಪಕ್ಕೆ ಧಾವಿಸುತ್ತಾನೆ. ಹನುಮಂತ ತಾರುಣ್ಯಕ್ಕೆ ಬರುತ್ತಾನೆ. ರಸಾತಲ ಪಟ್ಟಣದ ವರುಣನ ಜೊತೆಗೆ ನಡೆದ ಯುದ್ಧದಲ್ಲಿ ಹನುಮಂತನು ರಾವಣನಿಗೆ ನೆರವಾಗುತ್ತಾನೆ. ಇದರಿಂದ ಸಂತುಷ್ಟನಾದ ರಾವಣನು ಚಂದ್ರನಖಿಯ ಮಗಳಾದ ಅಂಗನಕುಸುಮೆಯನ್ನು ಹನುಮಂತನಿಗೆ ಕೊಟ್ಟು ವಿವಾಹ ಮಾಡುತ್ತಾನೆ.

೨೦ನೆಯ ಪ್ರಕರಣದಲ್ಲಿ ತ್ರಿಷಷ್ಟಿಶಲಾಕಾ ಪುರುಷರ ವಿವರಗಳಿವೆ. ೨೧ರಲ್ಲಿ ಜನಕನ ಹರಿವಂಶ ಮತ್ತು ದಶರಥನ ಇಕ್ಷ್ವಾಕು ವಂಶದ ವಿವರಗಳಿವೆ. ಪ್ರಕರಣ ೨೨ರ ನಂತರ ರಾಮಾಯಣದ ಕಥೆಯು ಚುರುಕಾಗಿ ಮುಂದುವರೆಯುತ್ತದೆ. ಇಕ್ಷ್ವಾಕುವಂಶದ 'ಕಕುತ್ಸ'ನಿಗೆ ರಘುವೆಂಬ ಮಗ ಹುಟ್ಟುತ್ತಾನೆ. ಅವನಿಂದ ಆ ವಂಶಕ್ಕೆ ರಘುವಂಶ ಎಂಬ ಹೆಸರು ಬರುತ್ತದೆ. ಅವನ ಮಗ ಅಣರಣ್ಯ. ಅವನ ಹೆಂಡತಿ ಪೃಥ್ವೀಮತಿ. ಅವರಿಗೆ ಅನಂತರಥ ಮತ್ತು ದಶರಥ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಅಣರಣ್ಯನ ಸ್ನೇಹಿತನಾದ ಮಾಹಿಷ್ಮತಿ ನಗರದ ಸಹಸ್ರರಷ್ಮಿ ದೊರೆಯು ಸಂನ್ಯಾಸಿಯಾದುದನ್ನು ಕಂಡು ಅಣರಣ್ಯನು ಸಂನ್ಯಾಸಿಯಾಗುತ್ತಾನೆ. ತಂದೆಯೊಡನೆ ಅನಂತರಥನು ದೀಕ್ಷೆಹೊಂದುತ್ತಾನೆ. ಕೆಲದಿನಗಳ ನಂತರ ದಶರಥನು ದರ್ಭಸ್ಥಲ ನಗರದ ಸುಕೋಶಲ ರಾಜನ ಪುತ್ರಿ ಅಪರಾಜಿತೆಯನ್ನು ಮದುವೆಯಾಗುತ್ತಾನೆ. ಇವಳೇ ಮುಂದೆ ಕೌಸಲ್ಯೆ ಎನ್ನಿಸುತ್ತಾಳೆ. ಜೊತೆಗೆ ಕಮಲಸಂಕಲ ಪುರದ ಸುಬಂಧು ತಿಲಕರಾಜನ ಮಗಳಾದ ಸುಮಿತ್ರಾ ಎಂಬುವಳನ್ನು ಮದುವೆಯಾಗುತ್ತಾನೆ. ಅವಳೇ ಮುಂದೆ ಕೈಕಯೆ ಎನಿಸುತ್ತಾಳೆ.

ದಶರಥನ ಮಗನು ಜನಕನ ಮಗಳನ್ನು ಮದುವೆಯಾದ ನಂತರ ತಮ್ಮನ್ನು ಕೊಲ್ಲುತ್ತಾನೆ ಎಂಬ ವಿಷಯ ಒಬ್ಬ ಜ್ಯೋತಿಷಿಯಿಂದ ರಾವಣ-ವಿಭೀಷಣರಿಗೆ ತಿಳಿದಿರುತ್ತದೆ. ಮುಂದಿನ ವಿಪತ್ತನ್ನು ಈಗಲೇ ಪರಿಹರಿಸಲು ವಿಚಾರಿಸಿ ವಿಭೀಷಣನು ದಶರಥ ಮತ್ತು ಜನಕರನ್ನು ಕೊಲ್ಲಲು ಮುಂದಾಗುತ್ತಾನೆ. ನಾರದನ ಉಪಾಯದ ಮೂಲಕ ತಯಾರಿಸಿ ಇಡಲಾದ ದಶರಥ ಜನಕರ ಮೇಣದ ಪ್ರತಿಮೆಗಳ ಶಿರಗಳನ್ನು ವಿಭೀಷಣನು ಕತ್ತರಿಸಿ ಹಾಕುತ್ತಾನೆ. ಅತ್ತ ದಶರಥ-ಜನಕರು ಅಜ್ಞಾತವಾಸದಲ್ಲಿ ಅಲೆದಾಡುತ್ತಾರೆ. ಸಂಚರಿಸುತ್ತ ಅವರು ಕೌತುಕ ಮಂಗಳಪುರಕ್ಕೆ ಬರುತ್ತಾರೆ. ಅಲ್ಲಿಯ ದೊರೆ ಶುಭಮತಿಯು ತನ್ನ ಮಗಳಾದ ಕೈಕೇಯಿಯ ಸ್ವಯಂವರವನ್ನು ನಡೆಸುತ್ತಿರುತ್ತಾನೆ. ದಶರಥ ಜನಕರು ಅದರಲ್ಲಿ ಭಾಗವಹಿಸುತ್ತಾರೆ. ದಶರಥನ ರೂಪಕ್ಕೆ ಮನಸೋತ ಕೈಕೇಯಿಯು ಅವನಿಗೆ ಮಾಲೆ ತೊಡಿಸುತ್ತಾಳೆ. ಅವಮಾನಿತರಾದ ರಾಜಕುಮಾರರು ದಶರಥನ ಮೇಲೆ ಆಕ್ರಮಣ ಮಾಡುತ್ತಾರೆ. ಕೈಕೇಯಿಯು ದಶರಥನ ರಥಕ್ಕೆ ಸಾರಥಿಯಾಗಿ ಅವನಿಗೆ ಗೆಲುವನ್ನು ತಂದು ಕೊಡುತ್ತಾಳೆ. ಸಂತುಷ್ಟನಾದ ದೊರೆ ಕೈಕೇಯಿಗೆ ಇಷ್ಟವಾದ ವರಗಳನ್ನು ಬೇಡಿಕೊಳ್ಳಲು ತಿಳಿಸುತ್ತಾನೆ. ಆಗ ಕೈಕೇಯಿ ನನಗೆ ಬೇಕೆನಿಸಿದಾಗ ಕೇಳುತ್ತೇನೆ ಎನ್ನುತ್ತಾಳೆ.

೨೫ನೆಯ ಪ್ರಕರಣದಲ್ಲಿ ಅಪರಾಜಿತೆಯಲ್ಲಿ ರಾಮ (ಪದ್ಮ) ಸುಮಿತ್ರೆಯಲ್ಲಿ ಲಕ್ಷ್ಮಣ, ಕೈಕೇಯೀಯಲ್ಲಿ ಭರತ, ಶತ್ರುಘ್ನರು ಜನಸಿದ ವಿವರಗಳು ಬರುತ್ತವೆ.

೨೬ರಲ್ಲಿ ಜನಕ ವೈದೇಹಿಯರಿಗೆ ಸೀತೆ ಮತ್ತು ಭಾಮಂಡಲರೆಂಬ ಅವಳಿಮಕ್ಕಳು ಹುಟ್ಟಿದ ಬಗ್ಗೆ ತಿಳಿಸಲಾಗಿದೆ. ಪೂರ್ವಜನ್ಮದ ವೈರದಿಂದ ಕೂಸಾಗಿದ್ದ ಭಾಮಂಡಲನನ್ನು ಅಪಹರಿಸಿಕೊಂಡು ಕಾಡಿನಲ್ಲಿ ಬಿಡುತ್ತಾನೆ. ಆ ಕೂಸನ್ನು ಚಂದ್ರಗತಿ ಎಂಬ ವಿದ್ಯಾಧರನು ತನ್ನ ಮಡದಿಗೆ ಒಪ್ಪಿಸುತ್ತಾನೆ.

ಬರ್ಬರ ದೇಶದ ಕಾಡು ಜನಾಂಗದವರು ಒಮ್ಮೆ ದಶರಥನ ಮೇಲೆ ದಂಡೆತ್ತಿ ಬರುತ್ತಾರೆ. ದಶರಥನ ಆದೇಶದ ಮೇರೆಗೆ ರಾಮ-ಲಕ್ಷ್ಮಣರು ಯುದ್ಧದಲ್ಲಿ ಜನಕನಿಗೆ ನೆರವಾಗುತ್ತಾರೆ. ರಾಮನ ಪರಾಕ್ರಮಕ್ಕೆ ಮೆಚ್ಚಿದ ಜನಕನು ಸೀತೆಯನ್ನು ಅವನಿಗೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸುತ್ತಾನೆ. ಹೀಗಿದ್ದಾಗ ಒಮ್ಮೆ ಸೀತೆಯನ್ನು ಕಾಣುವ ತವಕದಿಂದ ನಾರದನು ಮಿಥಿಲೆಗೆ ಬಂದಾಗ ದ್ವಾರಪಾಲಕನಿಂದ ಅಪಮಾನಿತನಾಗುತ್ತಾನೆ. ಸಿಟ್ಟಿಗೆದ್ದ ನಾರದನು ಸೀತೆಯ ಚಿತ್ರವೊಂದನ್ನು ಬರೆದು ಉಪವನದಲ್ಲಿ ಇರಿಸಿಹೋಗುತ್ತಾನೆ. ತನ್ನ ತಂಗಿ ಎಂದು ತಿಳಿಯದೆ ಭಾಮಂಡಲನು ಸೀತೆಯ ಮೋಹದಲ್ಲಿ ಬೀಳುತ್ತಾನೆ.

ಒಮ್ಮೆ ಚಂದ್ರಗತಿಯು ಕಳುಹಿದ ಒಬ್ಬ ವಿದ್ಯಾಧರನು ಕುದುರೆಯಾಗಿ ಬಂದು ಜನಕರಾಜನನ್ನು ಬೆನ್ನಮೇಲೆ ಇರಿಸಿಕೊಂಡು ಚಂದ್ರಗತಿಯ ಬಳಿಗೆ ಕರೆದೊಯ್ಯುತ್ತಾನೆ. ಜನಕನು ಸೀತೆಯನ್ನು ವಿದ್ಯಾಧರರಿಗೆ ಮದುವೆ ಮಾಡಿ ಕೊಡುವ ಬದಲು ಭೂಚರರಿಗೆ ಮದುವೆ (ರಾಮನಿಗೆ) ಕೊಡುತ್ತಿರುವುದನ್ನು ತಿಳಿದು ಚಂದ್ರಗತಿಯು ಜನಕನನ್ನು ಈ ರೀತಿ ಕೆಣಕಿರುತ್ತಾನೆ. ಮಾತಿಗೆ ಮಾತು ಬೆಳೆದು ರಾಮನು ಅಸಮಾನ ಪರಾಕ್ರಮಿ ಎಂದು ಜನಕನು ವಾದಿಸುತ್ತಾನೆ. ಹಾಗಿದ್ದರೆ ರಾಮನು ವಜ್ರಾವರ್ತನೆಂಬ ಈ ಬಿಲ್ಲನ್ನು ಮಣಿಸಿ ತೋರಿಸಲಿ ಎಂಬುದಾಗಿಯೂ. ಹಾಗೆ ಮಣಿಸಿದಲ್ಲಿ ಮಾತ್ರ ರಾಮನಿಗೆ ಸೀತೆಯನ್ನು ಕೊಡುವಂತೆಯೂ ಚಂದ್ರಗತಿಯು ತಿಳಿಸುತ್ತಾನೆ. ಆ ಕರಾರಿಗೆ ಒಪ್ಪಿಕೊಂಡು ಬಂದು ಜನಕನು ಸೀತೆಯ ಸ್ವಯಂವರವನ್ನು ಏರ್ಪಡಿಸುತ್ತಾನೆ. ವಜ್ರಾವರ್ತವನ್ನು ಮಣಿಸಿದ ರಾಮನು ಸೀತೆಯನ್ನು ವರಿಸುತ್ತಾನೆ.

ಸೀತಾರಾಮರ ಮದುವೆಯಾದುದನ್ನು ಕೇಳಿದ ಭಾಮಂಡಲನು ರಾಮನ ಮೇಲೆ ದಂಡೆತ್ತಿ ಹೋಗುತ್ತಾನೆ. ಸೀತೆ ತನ್ನ ತಂಗಿ ಎಂಬುದನ್ನು ತಿಳಿದ ಮೇಲೆ ಸಾಕುತಂದೆಯಾದ ಚಂದ್ರಗತಿಗೆ ಎಲ್ಲ ವಿವರಗಳನ್ನು ತಿಳಿಸುತ್ತಾನೆ.

ವೃದ್ಧನಾದ ದಶರಥನು ರಾಮನಿಗೆ ಪಟ್ಟಕಟ್ಟಿ ತಾನು ತಪಸ್ಸಿಗೆ ಹೊರಡಲು ನಿರ್ಧರಿಸುತ್ತಾನೆ. ತಂದೆಯೊಡನೆ ತಾನೂ ಹೊರಡುವುದಾಗಿ ಭರತನು ತಿಳಿಸುತ್ತಾನೆ. ತಾಯಿ ಕೈಕೇಯಿಗೆ ಇದರಿಂದ ಬೇಸರವಾಗುತ್ತದೆ. ಮಗನಿಗೆ ಬುದ್ಧಿವಾದ ಮಾಡುತ್ತಾಳೆ. ಭರತ ಒಪ್ಪುವುದಿಲ್ಲ. ವಿಧಿ ಇಲ್ಲದೆ ಕೈಕೇಯಿ ದಶರಥನಲ್ಲಿ ವರ ಕೇಳಲು ನಿರ್ಧರಿಸುತ್ತಾಳೆ. ಇದೇ ಯೋಗ್ಯ ಸಮಯವೆಂದು ಭಾವಿಸಿದ ಕೈಕೇಯಿ ಭರತನು ರಾಜನಾಗಬೇಕು ಮತ್ತು ೧೪ ವರ್ಷಗಳ ಕಾಲ

ರಾಮನು ವನವಾಸಕ್ಕೆ ಹೋಗಬೇಕು ಎಂದು ವರಗಳನ್ನು ಕೇಳಿಕೊಳುತ್ತಾಳೆ. ದಶರಥ ವಿಧಿ ಇಲ್ಲದೆ ಒಪ್ಪುತ್ತಾನೆ. ಇದನ್ನು ತಿಳಿದ ರಾಮ ವನವಾಸಕ್ಕೆ ಹೊರಟು ನಿಲ್ಲುತ್ತಾನೆ. ಸೀತೆ ಮತ್ತು ಲಕ್ಷ್ಮಣರು ಜೊತೆಗೆ ಹೊರಡುತ್ತಾರೆ. ಇದೆಲ್ಲ ನಡೆಯುವ ಹೊತ್ತಿಗೆ ಕೈಕೇಯಿಯ ಮನ ಪರಿವರ್ತನೆಯಾಗುತ್ತದೆ. ಭರತನಿಗಾದರೋ ರಾಮನ ಮನಸ್ಸನ್ನು ನೋಯಿಸುವುದಾಗಲಿ ಅಧಿಕಾರವನ್ನು ಅನುಭವಿಸುವುದಾಗಲಿ ಮೊದಲಿನಿಂದಲೂ ಬೇಡವಾಗಿದ್ದ ಸಂಗತಿಗಳಾಗಿದ್ದವು. ಹಿಂದಿರುಗಿ ಬರುವಂತೆ ಕೈಕೇಯಿ ರಾಮನನ್ನು ಕೇಳಿಕೊಳ್ಳುತ್ತಾಳೆ. ತಂದೆಯ ವಚನಕ್ಕೆ ಚ್ಯುತಿ ಬರಬಾರದೆಂದು ಭಾವಿಸಿದ ರಾಮನು ತನ್ನ ನಿರ್ಧಾರವನ್ನು ಬದಲಿಸುವುದಿಲ್ಲ.

೩೩ನೆಯ ಪ್ರಕರಣದಿಂದ ಮುಂದೆ ರಾಮನ ವನವಾಸದ ವಿವರಗಳು ಬರುತ್ತವೆ. ವನವಾಸದಲ್ಲಿ ರಾಮ ಲಕ್ಷ್ಮಣರು ಹಲವಾರು ಹಿತದ ಕಾರ್ಯಗಳನ್ನು ಮಾಡುತ್ತಾರೆ. ಇದರಿಂದಾಗಿ ಅವರ ಬೆಂಬಲಿಗರ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಸಂಚಾರ ಮಾಡುತ್ತ ರಾಮ-ಲಕ್ಷ್ಮಣರು ದಂಡಕಾರಣ್ಯವನ್ನು ಪ್ರವೇಶಿಸುತ್ತಾರೆ. ಅಲ್ಲಿ ಶುಭೋಕ್ತಿ ಎಂಬ ಮುನಿಯ ಮೂಲಕ ಜಲಾಯನ್ ಪಕ್ಷಿಯ ವೃತ್ತಾಂತವನ್ನು ತಿಳಿದುಕೊಳ್ಳುತ್ತಾರೆ. ಇದೇ ಪಕ್ಷಿ ಮುಂದೆ ಜಟಾಯುವಾಗಿ ರಾಮನ ಅನುಯಾಯಿಯಾಗುತ್ತದೆ.

ಖರದೂಷಣರಿಗೆ ಶಂಭೂಕ ಮತ್ತು ಸುಂದ ಎಂಬ ಇಬ್ಬರು ಮಕ್ಕಳು; ಸೂರ್ಯಹಾಸ ಎಂಬ ಖಡ್ಗ ಸಂಪಾದಿಸಲು ಶಂಭೂಕನು ಕಾಡಿನಲ್ಲಿ ೧೨ ವರ್ಷ ತಪಸ್ಸಿಗೆ ತೊಡಗುತ್ತಾನೆ. ಕರ್ಮವಶದಿಂದ ಆ ಕಾಡಿಗೆ ಬಂದ ಲಕ್ಷ್ಮಣನು ಬದಿಯಲ್ಲಿದ್ದ ಸೂರ್ಯಹಾಸ ಖಡ್ಗದಿಂದ ಬಿದಿರು ಮೆಳೆಯನ್ನು ಕತ್ತರಿಸುತ್ತಾನೆ. ಅದರಲ್ಲಿ ಶಂಭೂಕ ತಪಸ್ಸಿಗೆ ಕೂತಿರುವುದು ಅವನಿಗೆ ಗೊತ್ತಿರಲಿಲ್ಲ. ಶಂಭೂಕನ ಶಿರ ಹರಿದು ಬೀಳುತ್ತದೆ. ಮರಳಿಬಂದ ಲಕ್ಷ್ಮಣನು ವಿಷಯವನ್ನು ರಾಮನಿಗೆ ತಿಳಿಸುತ್ತಾನೆ. ಮಗನನ್ನು ಕಳೆದುಕೊಂಡ ಚಂದ್ರನಖಿಯು ಪುತ್ರ ಸಂಹಾರಕನನ್ನು ಶೋಧಿಸುತ್ತ ಕಾಡಿನಲ್ಲಿ ಅಲೆಯುತ್ತಾಳೆ. ರಾಮಲಕ್ಷ್ಮಣರನ್ನು ಕಂಡು ಮೋಹಿತಳಾಗಿ ಅವರಲ್ಲಿ ಪ್ರೇಮ ಭಿಕ್ಷೆ ಬೇಡುತ್ತಾಳೆ. ರಾಮಲಕ್ಷ್ಮಣರು ಅವಳನ್ನು ಮೂದಲಿಸಿ ಕಳಿಸುತ್ತಾರೆ. ಸಿಡಿಮಿಡಿಗೊಂಡು ಚಂದ್ರನಖಿ ಖರದೂಷಣರಲ್ಲಿ ವಿಷಯ ತಿಳಿಸುತ್ತಾಳೆ. ರಾವಣನ ಸಹಾಯದೊಂದಿಗೆ ಖರದೂಷಣರು ರಾಮ-ಲಕ್ಷ್ಮಣರಮೇಲೆ ಯುದ್ಧ ಸಾರುತ್ತಾರೆ. ಬೇರೆಡೆ ಯುದ್ಧಕ್ಕೆ ಹೊರಡುವ ಮುನ್ನ ಲಕ್ಷ್ಮಣನು ತನಗೇನಾದರೂ ಅಪಾಯ ಬಂದರೆ ಸಿಂಹನಾದವನ್ನು ಹೊರಡಿಸುವುದಾಗಿ ರಾಮನಿಗೆ ತಿಳಿಸಿ ಹೋದ. ಇದನ್ನರಿತ ರಾವಣನು ಉಪಾಯದಿಂದ ಸಿಂಹನಾದ ಹೊರಡಿಸುತ್ತಾನೆ. ಸಮಯ ನೋಡಿ ರಾವಣನು ಸೀತೆಯನ್ನು ಅಪಹರಿಸಲು ಬರುತ್ತಾನೆ. ಗಾಬರಿಗೊಂಡ ರಾಮನು ಲಕ್ಷ್ಮಣನನ್ನು ಹುಡುಕಿಕೊಂಡು ಹೋಗುತ್ತಾನೆ. ಆಗ ಜಲಾಯನ್ ಪಕ್ಷಿಯು ರಾವಣನಿಗೆ ಅಡ್ಡಬರುತ್ತದೆ. ರಾವಣನ ಹೊಡೆತದಿಂದ ಗಾಯಗೊಂಡು ನೆಲಕ್ಕೆ ಉರುಳುತ್ತದೆ.

ರಾಮ-ಲಕ್ಷ್ಮಣರು ಸಂಧಿಸಿ ರಾವಣನಿಂದ ತಮಗೆ ಮೋಸವಾಗಿದೆ ಎಂಬುದನ್ನು ಮನಗಂಡು ಧಾವಂತಕೊಳಗಾಗುತ್ತಾರೆ. ರಾಮ ಧಾವಿಸಿ ಬಂದು ನೋಡಿದಾಗ ಸೀತೆ ಅಲ್ಲಿರಲಿಲ್ಲ. ಅತ್ತ ರಾವಣನ ವೈರಿ ವಿರಾಧಿತನ ಸಹಾಯದಿಂದ ಲಕ್ಷ್ಮಣನು ಖರದೂಷಣರನ್ನು ಸೋಲಿಸುತ್ತಾನೆ. ಸೀತೆಯ ಆರ್ತನಾದವನ್ನು ಕೇಳಿದ ವಿರಾಧಿತನು ರಾವಣನನ್ನು ಎದುರಿಸುತ್ತಾನೆ. ರಾವಣನು ಅವನನ್ನು ಭೂಮಿಯತ್ತ ಎತ್ತಿ ಒಗೆಯುತ್ತಾನೆ. ಚಂದ್ರನಖಿ ಲಂಕೆಗೆ ತೆರಳುತ್ತಾಳೆ.

ಸೀತೆಯನ್ನು ಒಲಿಸಿಕೊಳ್ಳಲು ವಿಫಲನಾದ ರಾವಣನು ಅವಳನ್ನು ದೇವರಮಣ ಎಂಬ ಉದ್ಯಾನದಲ್ಲಿರಿಸುತ್ತಾನೆ. ಪತಿ ಮತ್ತು ಪುತ್ರರ ಮರಣದ ಸಂಗತಿಯನ್ನು ಚಂದ್ರನಖಿಯು ರಾವಣನಿಗೆ ತಿಳಿಸುತ್ತಾಳೆ. ರಾವಣನು ಅವಳನ್ನು ಸಂತೈಸಿ ರಾಮನ ಮೇಲೆ ತಾನೇ ಏರಿಹೋಗುವುದಾಗಿ ನಿರ್ಣಯಿಸುತ್ತಾನೆ. ಅಲ್ಲದೆ ಸೀತಾಪಹರಣದ ಸಂಗತಿಯನ್ನು ಮಂಡೋದರಿಗೆ ತಿಳಿಸಿ ವಿವಾಹಿತ ಸ್ತ್ರೀಯನ್ನು ತಾನು ಬಲಾತ್ಕರಿಸುವಂತಿಲ್ಲವಾದ್ದರಿಂದ ಅವಳ ಮನವೊಲಿಸಿ ದಾರಿಗೆ ತರುವಂತೆ ಮಂಡೋದರಿಯನ್ನು ಒತ್ತಾಯಿಸುತ್ತಾನೆ. ಮಂಡೋದರಿ ತನ್ನ ಪ್ರಯತ್ನದಲ್ಲಿ ವಿಫಲಳಾಗುತ್ತಾಳೆ. ಸೀತೆಯನ್ನು ಹಿಂದಿರುಗಿಸುವಂತೆ ವಿಭೀಷಣನು ರಾವಣನಿಗೆ ತಿಳಿಸುತ್ತಾನೆ. ರಾವಣ ಅದಕ್ಕೆ ಒಪ್ಪುವುದಿಲ್ಲ. ಮುಂದಿನ ಯುದ್ಧವನ್ನು ಕಲ್ಪಿಸಿಕೊಂಡು ವಿಭೀಷಣನು ಲಂಕೆಯ ಸುತ್ತ ಮಾಯಾದುರ್ಗವನ್ನು ನಿರ್ಮಿಸುತ್ತಾನೆ.

ಸೀತೆಯನ್ನು ಹುಡುಕುತ್ತ ಹೊರಟ ರಾಮಲಕ್ಷ್ಮಣರಿಗೆ ಸುಗ್ರೀವನ ಭೇಟಿಯಾಗುತ್ತದೆ. ಈ ನಡುವೆ ಸುಗ್ರೀವನ ಬದುಕಿನಲ್ಲಿ ಒಂದು ಕಹಿ ಪ್ರಸಂಗ ನಡೆದಿರುತ್ತದೆ. ಸಾಹಸಗತಿ ಎಂಬ ವಿದ್ಯಾಧರನು ಸುಗ್ರೀವನ ರೂಪಧರಿಸಿ, ಸುಗ್ರೀವನ ಹೆಂಡತಿ ತಾರೆಯನ್ನು ಅಪಹರಿಸಿರುತ್ತಾನೆ. ತಾರೆಯನ್ನು ಹುಡುಕಿ ನಿರಾಶನಾದ ಹನುಮಂತನು ಈ ವಿಷಯದಲ್ಲಿ ರಾಮ-ಲಕ್ಷ್ಮಣರ ನೆರವು ಪಡೆಯುವಂತೆ ಸುಗ್ರೀವನಿಗೆ ತಿಳಿಸುತ್ತಾನೆ. ಸರಿಯಾಗಿ ಅದೇ ಸಮಯಕ್ಕೆ ಈಗ ಸುಗ್ರೀವನಿಗೆ ರಾಮ-ಲಕ್ಷ್ಮಣರ ದರ್ಶನವಾಗುತ್ತದೆ. ರಾಮ-ಲಕ್ಷ್ಮಣರು ಸುಗ್ರೀವನಿಗೆ ನೆರವಾಗಲು ಒಪ್ಪಿಕೊಳ್ಳುತ್ತಾರೆ. ರಾಮನನ್ನು ಕಂಡಕೂಡಲೇ ಸಾಹಸಗತಿಯ ಮಾಯಸುಗ್ರೀವನ ರೂಪವು ಅಳಿಸಿಹೋಗುತ್ತದೆ. ರಾಮನು ಸಾಹಸಗತಿಯನ್ನು ಕೊಂದುಹಾಕಿ ತಾರೆಯನ್ನು ಸುಗ್ರೀವನಿಗೆ ಒಪ್ಪಿಸುತ್ತಾನೆ.

ರಾಮನು ತನಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಸುಗ್ರೀವನು ವಾನರ ಸೈನ್ಯದೊಂದಿಗೆ ಸೀತೆಯ ಶೋಧಕ್ಕೆ ಹೊರಡುತ್ತಾನೆ. ಸಮುದ್ರವನ್ನು ದಾಟಿ ಸೀತೆಯನ್ನು ಶೋಧಿಸುವ ಹೊಣೆಯನ್ನು ಹನುಮಂತನಿಗೆ ಒಪ್ಪಿಸಲಾಯಿತು. ಕೋಟಿ ಶಿಲೆಯನ್ನೆತ್ತಿದವನಿಂದ ರಾವಣನಿಗೆ ಮರಣವೆಂಬುದು ಭವಿಷ್ಯವಾಣಿ. ಅದರ ಪ್ರಕಾರ ಲಕ್ಷ್ಮಣನು ಮಕ್ಕಳಾಟಿಕೆ ವಸ್ತುವನ್ನು ಎತ್ತಿದಾಗ ರಾವಣನಿಗೆ ಮರಣ ಉಂಟಾಗುತ್ತದೆ. ಹನುಮಂತನು ಲಂಕೆಯತ್ತ ಪ್ರಯಾಣ ಬೆಳೆಸುತ್ತಾನೆ. ದಾರಿಯುದ್ದಕ್ಕೂ ಹನುಮಂತ ಕೆಲವು ಜನ ರಾಜರನ್ನು ಸೋಲಿಸುತ್ತಾ ಅವರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಳ್ಳುತ್ತಾ ಸಾಗಿದ.

ಹನುಮಂತನು ಆಕಾಶಮಾರ್ಗವಾಗಿ ಮಹೇಂದ್ರನಗರಿ, ದಧಿಮುಖ, ಚಿತ್ರಕೂಟ ಮೊದಲಾದ ದ್ವೀಪ ಗಿರಿದುರ್ಗಗಳನ್ನು ದಾಟುತ್ತ ನಡೆದ. ಕೊನೆಗೆ ಲಂಕೆಯನ್ನು ತಲುಪಿ ವಿಭೀಷಣನನ್ನು ಕಂಡು ಚರ್ಚಿಸಿದನು. ಅಲ್ಲಿಂದ ಪದ್ಮೋದ್ಯಾನಕ್ಕೆ ಹೋಗಿ ಸೀತೆಯನ್ನು ಕಂಡು ರಾಮನಿತ್ತ ಉಂಗುರವನ್ನು ಅವಳಿಗೆ ಒಪ್ಪಿಸಿದನು. ಮಧ್ಯೆ ಪ್ರವೇಶಿಸಿದ ಮಂಡೋದರಿ ರಾವಣನನ್ನು ಒಪ್ಪಿಕೊಳ್ಳುವಂತೆ ಸೀತೆಯನ್ನು ಒತ್ತಾಯಿಸುತ್ತಾಳೆ.

ರಾವಣನ ಕಡೆಯವರು ಹನುಮಂತನನ್ನು ಸದೆಬಡಿಯಲು ಬರುತ್ತಾರೆ. ಅವರ ಸೇನೆಯನ್ನು ಹನುಮಂತ ಹಿಮ್ಮೆಟ್ಟಿಸಿದನು. ರಾವಣನನ್ನು ಕಾಣಲಾರದೆ ಹಿಂದಿರುಗುವ ತರವಲ್ಲವೆಂದು ಹನುಮಂತನು ಇಂದ್ರಜಿತುವಿನ ಬಂಧನಕೊಳಗಾಗುತ್ತಾನೆ. ಇಂದ್ರಜಿತು ಅವನನ್ನು ರಾವಣನೆಡೆಗೆ ಕರೆದೊಯ್ಯುತ್ತಾನೆ. ಹನುಮಂತ ರಾವಣರೊಡನೆ ವಾಗ್ವಾದ ನಡೆಯುತ್ತದೆ. ಬಂಧನವನ್ನು ಕಿತ್ತೊಗೆದ ಹನುಮಂತ ರಭಸದಿಂದ ಆಕಾಶಕ್ಕೆ ನೆಗೆಯುತ್ತಾನೆ. ಅಲ್ಲಿಂದ ಕಿಷ್ಕಿಂಧೆಗೆ ಹೋಗುತ್ತಾನೆ. ಸೀತೆ ಕೊಟ್ಟ ಚೂಡಾಮಣಿಯನ್ನು ರಾಮನಿಗೆ ಒಪ್ಪಿಸಿ ಲಂಕೆಯ ವೃತ್ತಾಂತವನ್ನು ತಿಳಿಸುತ್ತಾನೆ.

ವಾನರ ಸೇನೆಯೊಂದಿಗೆ ರಾಮನು ಲಂಕೆಯ ಮೇಲೆ ದಂಡೆತ್ತಿ ಬರಲಿರುವ ಸಂಗತಿಯನ್ನು ತಿಳಿದ ವಿಭೀಷಣನು ಸೀತೆಯನ್ನು ರಾಮನಿಗೆ ಒಪ್ಪಿಸಿ ರಾಮನೊಂದಿಗೆ ಸಂಧಿ ಮಾಡಿಕೊಳ್ಳುವಂತೆ ಮತ್ತೊಮ್ಮೆ ಅಣ್ಣನನ್ನು ಆಗ್ರಹಿಸುತ್ತಾನೆ. ಇಂದ್ರಜಿತು ವಿಭೀಷಣನನ್ನು ಷಂಢನೆಂದು ಜರಿಯುತ್ತಾನೆ. ಕುಪಿತನಾದ ರಾವಣನು ಲಂಕೆಯನ್ನು ಬಿಟ್ಟು ತೊಲಗುವಂತೆ ವಿಭೀಷಣನಿಗೆ ಹೇಳುತ್ತಾನೆ. ಬೇಸತ್ತ ವಿಭೀಷಣನು ಪರಿವಾರ ಸಮೇತನಾಗಿ ಬಂದು ರಾಮನಲ್ಲಿ ಆಶ್ರಯ ಪಡೆಯುತ್ತಾನೆ. ಇನ್ನೊಂದೆಡೆಯಿಂದ ಸೀತೆಯ ಸಹೋದರ ಭಾಮಂಡಲನು ರಾಮನನ್ನು ಸೇರಿಕೊಳ್ಳುತ್ತಾನೆ.

ರಾಕ್ಷಸ ಸೇನೆ ರಾವಣನ ಆಜ್ಞೆಯಂತೆ ರಾಮನ ಮೇಲೆ ಎರಗುತ್ತದೆ. ಅತ್ತ ರಾಮನ ಬೆಂಬಲಕ್ಕೆ ವಾನರ ಸೇನೆ ನಿಲ್ಲುತ್ತದೆ. ಭೀಕರ ಯುದ್ಧ ನಡೆಯುತ್ತದೆ. ಇಂದ್ರಜಿತು ಸರ್ಪಾಸ್ತ್ರದಿಂದ ಲಕ್ಷ್ಮಣನನ್ನು ಬಂಧಿಸುತ್ತಾನೆ. ರಾವಣನು ಲಕ್ಷ್ಮಣನ ಎದೆಗೆ ಗುರಿಯಿಟ್ಟು ಹೊಡೆಯುತ್ತಾನೆ. ಲಕ್ಷ್ಮಣ ಮೂರ್ಛಿತನಾದಾಗ ಅವನು ಹತನಾದನೆಂದು ಭಾವಿಸಿ ರಾವಣನು ತೆರಳುತ್ತಾನೆ. ಭಾಮಂಡಲನಿಗೆ ದರ್ಶನ ನೀಡಿದ ಒಬ್ಬ ವಿದ್ಯಾಧರನು ಜಿನಗಂಧೋದಕದ ಸಿಂಚನದಿಂದ ಲಕ್ಷ್ಮಣ ಬದುಕುತ್ತಾನೆಂದು ಆ ವಿದ್ಯಾಧರ ತಿಳಿಸಿದನು. ವಿಶಲ್ಯಾ ಎಂಬ ಪವಿತ್ರಾಂಗನೆಯ ಸ್ನಾನ ಮಾಡಿದ ನೀರನ್ನು ಚಿಮುಕಿಸಿದರೆ ಲಕ್ಷ್ಮಣನು ಗುಣಮುಖನಾಗುತ್ತಾನೆಂದು ತಿಳಿಸುತ್ತಾನೆ. ವಿಶಲ್ಯಗೆ ಸಂಬಂಧಿಸಿದಂತೆ ವಿದ್ಯಾಧರನು ಮತ್ತೆ ಕೆಲವು ವಿವರಗಳನ್ನು ತಿಳಿಸುತ್ತಾನೆ. ಈ ವಿಶಲ್ಯಾ ಪೂರ್ವಜನ್ಮದಲ್ಲಿ ಅನಂಗಸಾರ ಚಕ್ರವರ್ತಿಯ ಮಗಳಾಗಿದ್ದ ಗುಣಶಾಲಿನಿಯಾಗಿದ್ದಳು. ಪುನರ್ವಸು ಎಂಬ ಅರಸನು ಅವಳನ್ನು ಓಡಿಸಿಕೊಂಡು ಹೋದನು. ಹಿಂದಿನ ಜನ್ಮದ ಆ ಪುನರ್ವಸುವೇ ಈಗಿನ ಲಕ್ಷ್ಮಣ. ಅಂದಿನ ಗುಣಶಾಲಿಯೇ ಇಂದಿನ ವಿಶಲ್ಯಾ. ಕಾರಣ ಇವಳ ಸ್ನಾನದ ನೀರಿನಿಂದ ಲಕ್ಷ್ಮಣನು ಬದುಕುವುದು ದಿಟವೆಂದು ವಿದ್ಯಾಧರನು ತಿಳಿಸಿದ.

ವಿಶಲ್ಯೆಯ ಸ್ನಾನದ ನೀರನ್ನು ತರಲು ಭಾಮಂಡಲನು ಭರತನಿಗೆ ತಿಳಿಸಿದ. ವಿಶಲ್ಯೆಯನ್ನೇ ಅಲ್ಲಿಗೆ ಕರೆದೊಯ್ಯುವುದು ಯೋಗ್ಯವೆಂದು ಭಾವಿಸಿದ ಭರತನು ಆ ಕುರಿತು ಅವಳ ತಂದೆ ದ್ರೋಣಮೇಘನಿಗ ಹೇಳಿಕಳಿಸುತ್ತಾನೆ. ದ್ರೋಣಮೇಘ ಅದಕ್ಕೆ ಒಪ್ಪಿದನು. ವಿಶಲ್ಯೆ ಬಂದು ಲಕ್ಷ್ಮಣನನ್ನು ಮುಟ್ಟಿದೊಡನೆ ಅವನು ರಾವಣನ ಮಾಯಾವಿದ್ಯೆಯ ಮುಸುಕಿನಿಂದ ಹೊರಬಂದನು. ಪೂರ್ವ ಜನ್ಮದ ಪ್ರಿಯೆಯಾದ ವಿಶಲ್ಯೆಯನ್ನು ಲಕ್ಷ್ಮಣನು ಮದುವೆಯಾದನು.

ಮೃಗಾಂಕನೆಂಬ ಮಂತ್ರಿಯು ಅಜೇಯನಾದ ರಾಮನೊಂದಿಗೆ ಒಪ್ಪಂದ ಮಾಡಿಕೊಳ್ಳುವುದು ಯೋಗ್ಯವೆಂದು ರಾವಣನಿಗೆ ತಿಳಿಸುತ್ತಾನೆ. ರಾವಣನು ಸಂಧಾನಕ್ಕಾಗಿ ಒಬ್ಬ ದೂತನನ್ನು ರಾಮನ ಬಳಿಗೆ ಕಳಿಸುತ್ತಾನೆ. ಸೀತೆಯನ್ನು ಗೌರವಪೂರ್ವಕವಾಗಿ ಕಳಿಸಿಕೊಡುವಂತೆ ತಿಳಿಸಿದ ರಾಮನು ರಾವಣನ ಕಡೆಯವರನ್ನು ಬಂಧಮುಕ್ತಗೊಳಿಸಲು ಸಿದ್ಧನಾಗುತ್ತಾನೆ. ಆದರೆ ದುರ್ದೈವದಿಂದ ಆ ಸಂಧಾನ ಮುರಿದು ಬೀಳುತ್ತದೆ.

ಯುದ್ಧಕ್ಕೆ ಮೊದಲು ಬಹುರೂಪಿ ವಿದ್ಯಾವಶೀಕರಣಕ್ಕಾಗಿ ರಾವಣನು ತಪಸ್ಸಿಗೆ ತೊಡಗುತ್ತಾನೆ. ವಾನರರು ಅವನ ಧ್ಯಾನವನ್ನು ಭಂಗಗೊಳಿಸಲು ಯತ್ನಿಸುತ್ತಾರೆ. ಆದರೆ ರಾಮ ಅವನ್ನು ತಡೆಯುತ್ತಾನೆ. ಸುಗ್ರೀವ ಸುತನಾದ ಅಂಗದನು ಲಂಕೆಗೆ ತೆರಳಿ ರಾವಣನ ದುಷ್ಟತನವನ್ನು ಖಂಡಿಸುತ್ತಾನೆ. ಅವನ ಒಂದು ಶಿರವನ್ನು ಕತ್ತರಿಸಿ ಹಾಕುತ್ತಾನೆ. ಮಂಡೋದರಿಯನ್ನು ಬಂಧಿಸುತ್ತಾನೆ. ಇಷ್ಟಾದರೂ ಧ್ಯಾನಸ್ಥನಾದ ರಾವಣನು ವಿಚಲಿತನಾಗಲಿಲ್ಲ. ಬಹುರೂಪಿಣಿ ವಿದ್ಯೆ ಅವನ ವಶವಾಯಿತು. ಸೀತೆಯಲ್ಲಿಗೆ ಹೋಗಿ ತನ್ನ ಬಯಕೆಯನ್ನು ಪೂರೈಸಲು ಪ್ರಾರ್ಥಿಸುತ್ತಾನೆ. ಸೀತೆ ಅವನ್ನು ನಿರಾಕರಿಸುತ್ತಾಳೆ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿದ ಸೀತೆ ಮೂರ್ಛಿತಳಾಗುತ್ತಾಳೆ. ಸೀತೆಯ ಅವಸ್ಥೆಯನ್ನು ಕಂಡ ರಾವಣ ಪ್ರಾಯಶ್ಚಿತ್ತ ಪಡುತ್ತಾನೆ. ಸೀತೆಯನ್ನು ರಾಮನಿಗೆ ಏಕೆ ಒಪ್ಪಿಸಬಾರದು ಎಂದು ಯೋಚಿಸುತ್ತಾನೆ. ಆದರೆ, ಸ್ವಾಭಿಮಾನ ಅಡ್ಡಬರುತ್ತದೆ. ಕಾರಣ ರಾವಣನು ಯುದ್ಧಕ್ಕೆ ಸಿದ್ಧನಾಗುತ್ತಾನೆ. ಸೀತೆಯನ್ನು ರಾಮನಿಗೆ ಒಪ್ಪಿಸುವಂತೆ ಮಂಡೋದರಿಯೂ ಒತ್ತಾಯಿಸುತ್ತಾಳೆ. ರಾವಣ ಅವನ್ನು ತಿರಸ್ಕರಿಸುತ್ತಾನೆ.

ಬಹುರೂಪಿಣಿಯ ವಿದ್ಯೆಯ ಬಲದಿಂದ ರಥವನ್ನೇರಿದ ರಾವಣ ಯುದ್ಧಕ್ಕೆ ಸನ್ನದ್ಧನಾದ. ಲಕ್ಷ್ಮಣನು ಅವನನ್ನು ಎದುರಿಸಿದ. ಯುದ್ಧದ ಈ ಕ್ಷಣದಲ್ಲಿಯೂ ವಿಭೀಷಣನು ಮತ್ತೊಮ್ಮೆ ರಾವಣನಿಗೆ ಬುದ್ಧಿವಾದ ಮಾಡಿದ. ರಾವಣ ಅದಕ್ಕೆ ಕಿವಿಗೊಡಲಿಲ್ಲ. ಲಕ್ಷ್ಮಣನ ಚಕ್ರರತ್ನವು ರಾವಣನ ಎದೆಯನ್ನು ಛೇದಿಸಿತು. ನೀಲಗಿರಿಯು ಕುಸಿಯುವಂತೆ ರಾವಣನು ನೆಲಕ್ಕುರುಳಿದನು. ದಾನವ ಸೇನೆ ದಿಕ್ಕುಗೆಟ್ಟು ಓಡಿತು.

ಅಣ್ಣನ ಮರಣದಿಂದ ವಿಭೀಷಣ ದುಃಖಿತನಾದ. ಆವೇಶದಲ್ಲಿ ಆತ್ಮಹತ್ಯೆಗೆ ಎಳಸಿದವನನ್ನು ರಾಮನು ಕಾಪಾಡಿದ. ಅವನಿಗೆ ಹುಟ್ಟುಸಾವಿನ ರಹಸ್ಯದ ಬಗ್ಗೆ ತಿಳಿಹೇಳಿದ. ರಾವಣನ ಮರಣದೊಂದಿಗೆ ಅವನ ಮೇಲಿನ ವೈರವನ್ನು ಮರೆತ ರಾಮನು ಉಚಿತರೀತಿಯಲ್ಲಿ

ರಾವಣನ ಶವಸಂಸ್ಕಾರಮಾಡಿಸುತ್ತಾನೆ. ಅಲ್ಲದೆ ಇಂದ್ರಜಿತು-ಕುಂಭಕರ್ಣ, ಮಾರೀಚ, ಮೇಘನಾದ ಮೊದಲಾದವರನ್ನು ಬಂಧಮುಕ್ತಗೊಳಿಸುತ್ತಾನೆ. ಇಂದ್ರಜಿತು ಮಂಡೋದರಿ ಚಂದ್ರನಖಿಯರೆಲ್ಲ ದೀಕ್ಷೆ ಪಡೆಯುತ್ತಾರೆ.

ವಿಜಯಿಗಳಾದ ರಾಮ-ಲಕ್ಷ್ಮಣರು ಲಂಕೆಗೆ ಬಂದು ಸೀತೆಯನ್ನು ಸಂಧಿಸುತ್ತಾರ ರಾವಣನ ಪರಿವಾರದವರಿಗೆ ಸಾಂತ್ವನ ಹೇಳುತ್ತಾರೆ. ಕೆಲದಿನ ಲಂಕೆಯಲ್ಲಿಯೇ ತಂಗುತ್ತಾರ. ಹೀಗಿದ್ದಾಗ ಒಂದು ದಿನ ನಾರದರು ಅಲ್ಲಿಗೆ ಬಂದು ಅಯೋಧ್ಯೆಯಲ್ಲಿರುವ ತಾಯಿ ಕೌಸಲ್ಯೆ ನಿಮ್ಮ ಆಗಮನಕ್ಕಾಗಿ ಕಾಯುತ್ತಿದ್ದಾರೆ ಎಂಬುದನ್ನು ತಿಳಿಸುತ್ತಾರೆ. ಆಗ ರಾಮ-ಲಕ್ಷ್ಮಣರು ದಂಡಕಾರಣ್ಯ ಮೇರು ಪರ್ವತ ಮತ್ತಿತರ ಪ್ರದೇಶಗಳ ಮೇಲೆ ಹಾಯ್ದು ಸಾಕೇತಪುರವನ್ನು ತಲುಪುತ್ತಾರೆ. ತಮ್ಮ ವನಪ್ರಯಾಣ ಮತ್ತು ರಾವಣನ ಜೊತೆಗಿನ ಯುದ್ಧದ ಸಮಸ್ತ ವಿವರಗಳನ್ನು ತಾಯಂದಿರಿಗೆ ಮತ್ತು ತಮ್ಮಂದಿರಿಗೆ ಅರುಹುತ್ತಾರೆ.

ಜಿನ ಮಂದಿರಗಳನ್ನು ಕಟ್ಟಿಸಿ ರಾಮನು ಜಿನಭಕ್ತಿಯಲ್ಲಿ ಮುಳುಗಿದ. ರಾವಣನು ಅಪಹರಿಸಿದ ಸೀತೆಯನ್ನು ಮತ್ತೆ ಒಪ್ಪಿಕೊಂಡಿರುವ ರಾಮನ ಕ್ರಮವು ಸರಿಯಾದುದಲ್ಲ ಎಂಬ ಪಿಸುಮಾತು ಜನತೆಯಲ್ಲಿ ಹುಟ್ಟಿಕೊಂಡಿರುವುದು ರಾಮನಿಗೆ ತಿಳಿಯುತ್ತದೆ. ಇನ್ನೊಂದೆಡೆ ಭರತನು ದೀಕ್ಷಾಬದ್ಧನಾಗುತ್ತಾನೆ. ಅದನ್ನು ಸೈರಿಸಲಾರದ ಕೈಕೇಯಿಯೂ ಸಂನ್ಯಾಸಿನಿಯಾಗುತ್ತಾಳೆ. ಕೆಲ ದಿನಗಳಲ್ಲಿ ಭರತನಿಗೆ ನಿಧನವುಂಟಾಗುತ್ತದೆ. ಅಯೋಧ್ಯಾಪುರದ ಪ್ರಮುಖರು ಆಗ್ರಹದಿಂದ ರಾಮನಿಗೆ ಪಟ್ಟಕಟ್ಟುತ್ತಾರೆ. ಎಲ್ಲರ ಸಂತೃಪ್ತಿಯನ್ನು ಬಯಸಿದ ರಾಮನು ಸುಗ್ರೀವನಿಗೆ ಕಿಷ್ಕಿಂದೆಯನ್ನು, ಹನುಮಂತನಿಗೆ ಶ್ರೀಪುರವನ್ನು ಬಿಟ್ಟುಕೊಡುತ್ತಾನೆ. ಮಥುರೆಯು ಶತ್ರುಘ್ನನ ಪಾಲಿಗೆ ಬಂದಿತು. ರಾಮ-ಲಕ್ಷ್ಮಣರ ಶೌರ್ಯದಿಂದ ಪ್ರಭಾವಿತರಾದ ಕಾಂಚನಪುರ, ಮೇಘಪುರ, ಅಮೃತಪುರ ಮೊದಲಾದ ಮಹಾಪುರಗಳ ವಿದ್ಯಾಧರರು, ರಾಮನ ಪ್ರಭುತ್ವ ಒಪ್ಪಿಕೊಂಡರು. ಒಂದು ದಿನ ಪಟ್ಟಮಹಿಷಿ ಸೀತೆಗೆ ದೇವಲೋಕದ ಆನೆಗಳೆರಡು ತನ್ನ ಮುಖವನ್ನು ಪ್ರವೇಶಿಸಿದಂತೆ ಸ್ವಪ್ನವು ಕಾಣಿಸಿಕೊಳ್ಳುತ್ತದೆ. ಕೆಲದಿನಗಳಲ್ಲಿ ಸೀತೆಗೆ ಇಬ್ಬರು ಗಂಡು ಮಕ್ಕಳು ಹುಟ್ಟುವುದರ ಸಂಕೇತ ಅದಾಗಿದ್ದಿತು. ಮತ್ತೊಂದು ದಿನ ಅವಳ ಬಲಗಣ್ಣು ಅದುರಿತು. ಫಲವನ್ನು ವಿಚಾರಿಸಿದಾಗ ಸೀತೆಯ ಪಾತಿವ್ರತ್ಯದ ಬಗ್ಗೆ ಜನತೆಯಲ್ಲಿ ಸಂಶಯಮೂಡಿರುವುದಾಗಿ ತಿಳಿದು ಬರುತ್ತದೆ. ಇದನ್ನು ತಿಳಿದ ಎಲ್ಲರೂ ಆಘಾತಕ್ಕೊಳಗಾಗುತ್ತಾರೆ. ಮತಿಭ್ರಾಂತನಾದ ರಾಮನು ಸೀತಾಪರಿತ್ಯಾಗದ ತನ್ನ ನಿರ್ಧಾರವನ್ನು ಲಕ್ಷ್ಮಣನಿಗೆ ತಿಳಿಸುತ್ತಾನೆ. ಲೋಕಾಪವಾದಕ್ಕೆ ಹೆದರದಂತೆ ರಾಮನಿಗೆ ಲಕ್ಷ್ಮಣನು ಧೈರ್ಯತುಂಬುತ್ತಾನೆ. ಆದರೆ ನಿರ್ಧಾರ ಬದಲಿಸದ ರಾಮನು ಕೃತಾಂತವದನನೆಂಬ ತನ್ನ ಸೇನಾಪತಿಯನ್ನು ಕರೆದು ಸೀತೆಯನ್ನು ಅರಣ್ಯದಲ್ಲಿ ಬಿಟ್ಟುಬರುವಂತೆ ಆದೇಶಿಸುತ್ತಾನೆ. (ಕಥೆ ಹೀಗೆಯೇ ಮುಂದುವರೆಯುತ್ತದೆ) ನಾಗಚಂದ್ರನು ಹೆಜ್ಜೆ ಹೆಜ್ಜೆಗೂ 'ಪಉಮಚರಿಯ' ಕೃತಿಯನ್ನು ಅನುಸರಿಸಿರುವುದನ್ನು ಸೂಕ್ಷ್ಮಾವಲೋಕನದಿಂದ ಗುರುತಿಸ ಬಹುದಾಗಿದೆ. ಕೆಲವು ಚಿಕ್ಕ-ಪುಟ್ಟ ವ್ಯತ್ಯಾಸಗಳನ್ನು ಮಾತ್ರ ನಾಗಚಂದ್ರ ಮಾಡಿಕೊಂಡಿದ್ದಾನೆ.

# ಅನುಬಂಧ-೨

## ಮಲ್ಲಿನಾಥಪುರಾಣಂ ಶಬ್ದಾರ್ಥಕೋಶ

| ಅ | ಆಶ್ವಾಸ | ಪದ್ಯ |
|---|---|---|
| ಅಕಾಂಡ-ಒಮ್ಮೆಲೆ, ಅಕಸ್ಮಾತ್ತಾಗಿ | ೫ | ೭೧ |
| ಅಕ್ಲಿಷ್ಟ-ಕಠಿಣವಲ್ಲದ | ೧ | ೪೩ |
| ಅಗುಂದಲೆ-ಹೆಚ್ಚಾಗಿ,ಅಧಿಕವಾಗಿ | ೬ | ೧೪೮ |
| ಅಘಕರ್ದಮ-ಪಾಪವೆಂಬ ಕೆಸರು | ೧ | ೧೮ |
| ಅಘತಮ-ಪಾಪವೆಂಬ ಕತ್ತಲೆ | ೧ | ೧೨ |
| ಅಘಪಾಂಸು-ಪಾಪಧೂಳಿ | ೧ | ೧೩ |
| ಅಂಗಭವ-ಮಗ | ೩ | ೯೭ |
| ಅಂಗುಳೀಯಕ-ಬೆರಳುಂಗುರ | ೫ | ೩ |
| ಅಂಗೋದ್ಭವ-ಕಾಮ | ೨ | ೨ |
| ಅಂಚೆ-ಹಂಸ | ೧ | ೪೨ |
| ಅಜಾಂಡ-ಬ್ರಹ್ಮಾಂಡ | ೭ | ೧೯ |
| ಅಡಪ-ಕೈಚೀಲ | ೩ | ೮೫ |
| ಅಡರ್ಪು-ಆಸರೆ, ನೆಮ್ಮುಗೆ | ೬ | ೧೨ |
| ಅಡಪಡಿಸು-ಅವಸರ ಮಾಡು | ೮ | ೮೦ |
| ಅಣಿ-ಪ್ರಹರಿಸು | ೫ | ೫೮ |
| ಅಣ್ಕೆ-ಲೇಪನ | ೩ | ೨೫ |
| ಅತನು-ಕಾಮ | ೩ | ೮೧ |
| ಅದ್ಯತನ-ಆಧುನಿಕ | ೧ | ೩೮ |
| ಅಧಃ-ಕೆಳಗೆ | ೧ | ೫೬ |
| ಅಧರ-ತುಟಿ | ೩ | ೫೯ |
| ಅನಘರ್-ಪಾಪರಹಿತರು | ೧ | ೧೦ |
| ಅನವದ್ಯ-ದೋಷರಹಿತ | ೧೪ | ೧೩೯ |
| ಅನವಧಿ-ಮೇರೆಮೀರಿದ | ೧ | ೪೩ |
| ಅನಶನ-ಅಶನವಿಲ್ಲದ, ಉಪವಾಸ | ೧೧ | ೧೫ |

| | ಆಶ್ವಾಸ | ಪದ್ಯ |
|---|---|---|
| ಅನಿಲ-ಗಾಳಿ | ೧ | ೬೨ |
| ಅನುಗ-ಅನುಯಾಯಿ | ೧ | ೪೩ |
| ಅನ್ಯಪುಷ್ಟ-ಕೋಗಿಲೆ | ೫ | ೨ |
| ಅಪರ-ಪಶ್ಚಿಮ | ೧ | ೨೮ |
| ಅಪವರ್ಗ-ಮೋಕ್ಷ | ೧೧ | ೧೪ |
| ಅಪ್ರಮಿತ-ಅಪರಿಮಿತ | ೪ | ೩೩ |
| ಅಪ್ರಶಸ್ತ-ಅಶುಭ | ೧ | ೫೦ |
| ಅಭಿಷವಣ-ಸ್ನಾನ | ೪ | ೧೪ |
| ಅಬ್ಧಿ-ಸಮುದ್ರ | ೧ | ೫೯ |
| ಅಂಬಿರಿವಿಡು-ಪ್ರವಹಿಸು | ೭ | ೨೧ |
| ಅಂಬು-ಬಾಣ | ೧ | ೧೯ |
| ಅಂಬುಧಿ-ಸಮುದ್ರ | ೧ | ೬೦ |
| ಅಂಭಸ್ಸೀಕರ-ನೀರಿನ ಕಣ | ೨ | ೭ |
| ಅಮರ್ದು-ಅಮೃತ | ೩ | ೪೦ |
| ಅಮೃತಾಂಶು-ಚಂದ್ರ | ೩ | ೮೧ |
| ಅರ್ಭಕ-ಮರಿ | ೩ | ೮೫ |
| ಅರ್ಥಿ-ಅಚ್ಚೆ-ಪ್ರೀತಿ | ೧ | ೨೬ |
| ಅರಲ-ಪುಷ್ಪ | ೩ | ೪೦ |
| ಅರ್ಜಿತ-ತಿಳುವಳಿಕೆ, ಜ್ಞಾನ | ೧ | ೩೨ |
| ಅರುಣಾಂಬುಜ-ಕೆಂದಾವರೆ | ೩ | ೪೩ |
| ಅಲಗಣಿಸು-ಮಿಕ್ಕು | ೩ | ೫೯ |
| ಅಲಂಘ್ಯ-ದಾಟಲಸಾಧ್ಯ | ೨ | ೪೧ |
| ಅಲಂಪು-ಪ್ರೀತಿ | ೩ | ೩೦ |
| ಅವಟಯಿಸು-ತಿಳಿಸು, ವಿದಿತಪಡಿಸು | ೬ | ೮೩ |

| | | |
|---|---|---|
| ಅವತಂಸ-ಕರ್ಣಾಭರಣ | ೧ | ೬ |
| ಅವಲೋಹಂ-ಸದೋಷಲೋಹ | ೧ | ೨ |
| ಅವಷ್ಟಂಭ-ಆಶ್ರಯ | ೧ | ೬೫ |
| ಅವ್ಯವಚ್ಛಿನ್ನ-ತಡೆಯಿಲ್ಲದ | ೪ | ೭೨ |
| ಅವ್ಯಾಕುಳ-ವಾಕುಲ(ಕಷ್ಟ)ವಿಲ್ಲದ | ೪ | ೪೭ |
| ಅವಿಚಲ-ಸ್ಥಿರ | ೩ | ೨೦ |
| ಅಸಿ-ಕತ್ತಿ | ೧ | ೯ |
| ಅಳಕ-ಕುರುಳು | ೨ | ೨೫ |
| ಅಳಜೆಸು-ಅಂಜಿಸು | ೬ | ೨೫ |
| ಅಳಿಪು-ಆಸೆ | ೨ | ೨೮ |
| ಅಳ್ಳಿಜೆ-ತಿವಿ | ೨ | ೪೩ವ |
| ಅಳುಂಬ-ಆಧಿಕ್ಯ | ೬ | ೭೬ |
| ಅಳುರ್ಕೆ-ಆಧಿಕ್ಯ | ೬ | ೫೭ |
| ಅಳುರ್ವ-ವ್ಯಾಪಿಸುವ | ೨ | ೨೫ವ |
| ಅಱೆ-ಮಜ್ಜಿಗೆ | ೪ | ೩೮ |
| ಅಕ್ಷಯಸುಖ-ನಾಶವಿಲ್ಲದ ಸುಖ ಸ್ಥಿರಸುಖ ಮೋಕ್ಷ ಸುಖ | ೧ | ೨೮ |

### ಆ

| | | |
|---|---|---|
| ಆಕೀರ್ಣ-ಹರವಿದ | ೬ | ೧೪ವ |
| ಆಗುಳಿ-ಆಕಳಿಕೆ | ೧೪ | ೧೪೩ |
| ಆಜಿರ-ಅಂಗಳ | ೧ | ೩೪ |
| ಆಣಕ-ವಾದ್ಯ ವಿಶೇಷ | ೩ | ೯೧ |
| ಆಣತಿ-ಆಜ್ಞೆ | ೮ | ೧೫ವ |
| ಆತ್ತ-ಅವನತ, ಅವಮಾನ ಹೊಂದಿದ | ೫ | ೫ |
| ಆತೋದ್ಯ-ವಾದ್ಯ ವಿಶೇಷ | ೪ | ೭ |
| ಆದಂ-ಹೆಚ್ಚಾಗಿ | ೧ | ೪೭ |
| ಆಂದೋಳ-ಉಯ್ಯಾಲೆ | ೭ | ೩೮ವ |
| ಆನುಷಂಗಿಕ-ಸಂಬಧಿಸಿ ಬರುವ | ೧ | ೪೮ |
| ಆಮ್ರಕುಜ-ಮಾವಿನ ಮರ | ೨ | ೨೦ |
| ಆಮುಷ್ಮಿಕ-ಪರಲೋಕ ಸಂಬಂಧಿ | ೧ | ೪೮ |
| ಆಮೋದ-ಸುಗಂಧ | ೧ | ೨೬ |
| ಆರಯ್-ವಿಚಾರಮಾಡು | ೧ | ೩೬ |
| ಆರವೆ-ಆರಾಮ | ೭ | ೨ವ |
| ಆಲಕ್ತಕ-ಮದರಂಗಿ | ೩ | ೨೧ |
| ಆವಾಪ್ತಿ-ಪ್ರಾಪ್ತಿ | ೪ | ೨೫ |
| ಆಸನ್ನ-ಸಮೀಪ, ಪ್ರಾಪ್ತ | ೨ | ೪೫ವ |
| ಆಸವ-ಮಧು | ೫ | ೧೪ |
| ಆಸ್ಫಾಲನ-ಆಘಾತ | ೨ | ೬ವ |
| ಆಸ್ಯಾನಿಲ-ಉಸಿರು | ೪ | ೩ |
| ಆಳವಾಳ-ಪಾತಿ | ೩ | ೪೭ |

### ಇ–ಈ

| | | |
|---|---|---|
| ಇಂಚರ-ಮಧುರನಾದ | ೧ | ೪೪ |
| ಇಟ್ಟಳ-ಸಂದಣಿ, ಕಿಕ್ಕಿರಿದಿರು | ೫ | ೩೨ |
| ಇಡುವಗೆ-ಕಡುವೈರಿ | ೬ | ೧೯ |
| ಇಂದೀವರ-ನೀಲಕಮಲ | ೭ | ೬೮ |
| ಇಂದು-ಚಂದ್ರ | ೨ | ೬ |
| ಇಂದೊಳ-ಭ್ರಮರ | ೫ | ೨೫ |
| ಇಸು-ಬಾಣ | ೩ | ೪೮ |
| ಇಱಿಕೆಯ್-ಕೀಳುಮಾಡು | ೧ | ೧೭ |
| ಇಕ್ಷುಯಂತ್ರ-ಗಾಣ | ೨ | ೩೫ |
| ಈಷತ್-ಸ್ವಲ್ಪ | ೪ | ೧೫ |

### ಉ–ಊ

| | | |
|---|---|---|
| ಉಕ್ಕಂದ-ತುಂಬಿ ಹರಿಯುವ | ೨ | ೫೬ |
| ಉಗಿಬಗಿ-ಬೇರೆ ಮಾಡು | ೧೩ | ೭೮ |
| ಉಂಡಿಗೆ-ಅಧಿಕಾರ ಮುದ್ರೆ | ೫ | ೨೩ |
| ಉತ್ಕರ-ಅಧಿಕ | ೩ | ೨೦ |
| ಉತ್ತಂಸ-ಕಿರೀಟ | ೧ | ೧ |
| ಉತ್ತಮಾಂಗ-ಮಸ್ತಕ | ೧ | ೧ |
| ಉತ್ಪಾತ-ಎಳೆಯಲ್ಪಟ್ಟ | ೩ | ೧೩ |
| ಉತ್ತಾನ-ಹರಡು | ೬ | ೭೩ |
| ಉತ್ತಾರರವ-ಎತ್ತರದ ಚೀರು ಧ್ವನಿ | ೫ | ೬೩ |
| ಉತ್ಸಂಗ-ತೊಡೆ | ೩ | ೯೧ |
| ಉತ್ಫುಲ್ಲ-ಅರಳಿದ | ೩ | ೩೦ವ |
| ಉದಧಿ-ಸಮುದ್ರ | ೧೨ | ೧೦೬ |
| ಉದ್ವೃತ್ತ-ಅಪಕಾರಿ | ೩ | ೨೨ |
| ಉದ್ಯೋತ-ಪ್ರಕಾಶ | ೧ | ೪ |
| ಉನ್ಮತ್ತ-ಗರ್ವಿಷ್ಠ | ೧ | ೨೭ |
| ಉನ್ನತಿ-ಎತ್ತರ | ೨ | ೧ |
| ಉನ್ಮೀಲನ-ತೆರೆಯುವುದು | ೧ | ೫ |

ಉಪಲ-ಶಿಲೆ ೩ ೨೧
ಉಪವಿದ್ಧ-ಮೋಲುವ ೧ ೪೯
ಉಪಾದೇಯ-ಗ್ರಾಹ್ಯ, ಅಂಗೀಕಾರ ಯೋಗ್ಯ
೧ ೪
ಉರ್ಚು-ನಾಟು ೧ ೩೫
ಉರಗ-ಸರ್ಪ ೩ ೭
ಉರುಳಿ-ಉಂಡೆ ೨ ೨೫ವ
ಊರ್ಧ್ವ-ಮೇಲೆ ೧ ೫೬

## ಎ-ಏ-ಐ

ಎಕ್ಕಲಗಾಣ-ಒಬ್ಬಂಟಿಗನಾಗಿ ಹಾಡುವವ
೬ ೬೯
ಎಕ್ಕೆಕ್ಕೆ-ಒಂದರಮೇಲೊಂದು ೫ ೪೭
ಎಗ್ಗು-ಮೌಢ್ಯ ೩ ೨೮
ಎಡವಜ಼ಿಯದೆ-ಎಡೆಬಿಡದೆ ೪ ೧೨
ಎಷ್ಟ-ಮನೋಹರ, ಸುಂದರ ೭ ೨೪
ಏೞಿವಟ್ಟೆ-ಪ್ರಭುತ್ವ, ಪರಿಣತಿ ೨ ೬೦
ಏಬಾರ್ತೆ-ಏನು ಪ್ರಯೋಜನ ೧ ೬
ಏಲಾ-ಏಲಕ್ಕಿ ೬ ೧೪ವ
ಏವುಮ-ಏನು ಮಾಡಬಲ್ಲುದು ೩ ೨೬
ಏಳಿದಿಕೆ-ತಿರಸ್ಕಾರ ೩ ೨೮
ಏಳಿಸು-ಹೀಯಾಳಿಸು ೫ ೭೨
ಐಸರ-ಪಂಚಶರ ೫ ೨೫

## ಒ-ಓ

ಒಗಡಿಸು-ಓಕರಿಕೆ ೫ ೭
ಒಗುಮಿಗು-ಅಧಿಕವಾಗು ೭ ೩೫
ಒದವು-ಪ್ರಾಪ್ತವಾಗು ೧೨ ೭
ಒಜಲ್-ಕೂಗು, ಗಟ್ಟಿಯಾಗಿ ಹೇಳು ೧ ೨೪
ಒಳ್ಪು-ಲೇಸು ೧ ೬೫
ಓಪರ್-ಪ್ರೀತಿಸುವವರು ೬ ೩೨

## ಕ

ಕಟಕ-ಸೈನ್ಯ ೩ ೨೩ವ
ಕಣಿಶ-ತೆನೆ ೨ ೧೪
ಕಂತು-ಕಾಮ ೧ ೧೯
ಕದಳೀಷಂಡ-ಬಾಳೆಗಿಡಗಳ ಗುಂಪು ೨ ೨೬
ಕದಂಬಕ-ಸಮೂಹ ೮ ೧೩
ಕಮನೀಯ-ಸುಂದರ ೩ ೫೮
ಕಮಲಾಕರ-ಸರೋವರ ೨ ೩೭
ಕಮಳಗರ್ಭ-ಬ್ರಹ್ಮ ೫ ೨೮ವ
ಕರ್ಚು-ತೊಳೆ ೩ ೧೦೩
ಕರ್ದುಂಕು-ಕಚ್ಚು, ಕುಕ್ಕು ೮ ೧೨
ಕರ್ಬುದ-ಬೂದಬಣ್ಣ ೫ ೩೧
ಕಜಿಂಗು-ಕಪ್ಪಾಗು ೫ ೬೧ವ
ಕಲಮಕ್ಷೇತ್ರ-ಭತ್ತದ ಗದ್ದೆ ೨ ೧೪ವ
ಕಲ್ಪಾಂತರ-ಚಿರಕಾಲ ೧ ೪೬
ಕಪಲ್ತು-ಕವಲಿಟ್ಟು ೭ ೩೯
ಕಳಕಂಠ-ಕೋಗಿಲೆ ೨ ೨೦
ಕಳಭ-ಆನೆಮರಿ ೩ ೨೩ವ
ಕಳರವ-ಸಪ್ಪಳ ೧೧ ೭೨ವ
ಕಳರುತಿ-ಇಂಪಾದ ಧ್ವನಿ ೧೨ ೫೯
ಕ್ವಣನ-ಶಬ್ಧ ೨ ೩೧
ಕಾಂಚಿ-ಕಾಂಚಿಯ ಹುಲ್ಲು ೧೧ ೯೦
ಕಾಂಡಪಟ-ಪರದೆ ೭ ೭೧
ಕಾಮ್ಯ-ಬಯಸುವ ೪ ೩೬ವ
ಕಾಲ್ಪಳ್ಳಿ-ಚಿಕ್ಕ ಹಳ್ಳಿ ೨ ೧೧
ಕಾವಣ-ಹಂದರ ೨ ೫೮ವ
ಕಿಸುಗಣ್ಣು-ಕೋಪಿಸು ೩ ೩೨
ಕೀರ-ಗಿಳಿ ೨ ೨೮
ಕೀಱು-ಚೀರು ೭ ೪೭
ಕುಟ್ಮಲ-ಮೊಗ್ಗು ೪ ೪
ಕುಟ್ಟಿಮ-ನೆಲಗಟ್ಟು ೧೩ ೧೩ವ
ಕುಡುಕು-ಗುಟುಕು ೫ ೨೯
ಕುತ್ತುರು-ಪೊದರು ೭ ೨ವ
ಕುರವಕ-ಮದರಂಗಿ ೫ ೨೧
ಕುರುಂಬ-ಕುಟುಂಬ ೨ ೨೫ವ
ಕಾಲವಾಹಿನಿ-ಕುಲನದಿ ೨ ೮
ಕೂರದರ್-ಪ್ರೀತಿಸದವರು ೪ ೧೬
ಕೆಂಬರಲ-ಕೆಂಪು ಹರಳು ೨ ೬೧
ಕೇಕರ-ಕುಡಿನೋಟ ೩ ೩೮
ಕೇಣ-ವೈರ, ಮತ್ಸರ ೬ ೫೫

ಕೇದಾರ-ಗದ್ದೆ ೨ ೧೫
ಕೇರ್ಗಟ್ಟು-ಗೋಡೆಕಟ್ಟು ೫ ೬೨
ಕೇಪೊಡಿ-ಕೆಂಪು ಅಕ್ಕಿ ೧೨ ೯
ಕೈಪೂಡೆ-ಬಾಣದ ಹಿಂಭಾಗ ೪ ೩
ಕೈವಲ್ಯ-ಮುಕ್ತಿ ೧ ೧೮
ಕೊಣಕಿದು-ಹಾರು, ಜಗಿ ೭ ೨ವ
ಕೋಣಮಣಿ-ಕೆಂಪುಮಣಿ ೮ ೧೦
ಕೋರಕ-ಮೊಗ್ಗೆ ೫ ೨
ಕೋಟ್ಟಳ್-ಕೋಡು ೧೨ ೧೭
ಕೌಮುದೀ-ಬೆಳದಿಂಗಳು ೩ ೨೬

## ಖ-ಗ-ಘ

ಖಚರ-ಖೇಚರ ೩ ೪೯
ಖಾತಿಗೆ-ಕಂದಕ ೨ ೩೯
ಗಂಡೂಷ-ಮುಕ್ಕುಳಿಕೆ ೬ ೧೨
ಗಣ-ಸಮೂಹ ೨ ೧೦
ಗಣಕ-ಜ್ಯೋತಿಷಿ ೪ ೬೩
ಗಭಸ್ತಿ-ಕಿರಣ ೨ ೪೧
ಗರ್ತ-ಹೊಂಡ ೧ ೬೨
ಗವಾಕ್ಷ-ಕಿಡಿಕಿ ೨ ೫೫
ಗಾಣ-ಗಾಯನ ೨ ೪೫
ಗಾದಿಗೆ-ಕಂದಕ ೨ ೪೨ವ
ಗಾವಿಲ-ಗ್ರಾಮೀಣ ೧ ೩೧
ಗುಣ್ಪು-ಆಳ ೧ ೬೧
ಗುಜ್ಜುಮೆಟ್ಟು-ಸಣ್ಣ ಹೆಜ್ಜೆಯಿಡು ೫ ೭೯
ಗೇನ-ಖಡ್ಗ ೩ ೬೩
ಗೊಂದಣ-ಗುಂಪು, ಸಮೂಹ ೧೨ ೩
ಘನಸಾರ-ಕರ್ಪೂರ ೨ ೬ವ
ಘರ್ಮವಾರಿ-ಬೆವರು ೨ ೫೫

## ಚ

ಚಂಚರೀಕ-ತುಂಬಿ ೨ ೩೧
ಚತುರಸ್ರ-ಚತುಷ್ಕೋಣ ೧ ೫೫
ಚರ್ಕೆ-ಚರಿಗೆ ೧೩ ೧೪೭
ಚಲ್ಲ-ವಿನೋದ, ಚಲ್ಲಾಟ ೫ ೫೮
ಚಾರು-ಸುಂದರ ೧ ೪೧
ಚಿತ್ತೋದ್ಭವ-ಕಾಮ ೨ ೩೧
ಚುನ್ನವಾಡು-ಅಪಹಾಸ್ಯ ಮಾಡು ೭ ೫೫
ಚೂಳಿಕೆ-ತುದಿ,ಅಗ್ರಭಾಗ ೫ ೨೦
ಚೈತ್ಯಗೇಹ-ಜಿನಾಲಯ ೨ ೨
ಚೋಹ-ವೇಷ: ಪ್ರಯೋಗ ೧ ೩೨

## ಜ-ಝ

ಜಕ್ಕವಕ್ಕಿ-ಚಕ್ರವಾಕ ಪಕ್ಷಿ ೬ ೭
ಜಗಳಿ-ಜಾಗಟೆ ೭ ೭೨
ಜಗುನೆ-ಯಮುನೆ ೧೧ ೪೩
ಜಡಾಶಯ-ಜಲಾಶಯ ೩ ೩೯ವ
ಜರ್ಬು-ಜರೆ, ಜಡಿ ೮ ೧೧
ಜರೆ-ವೃದ್ಧಾಪ್ಯ ೧೩ ೫೫
ಜಲಕ್ಕನೆ-ಒಮ್ಮೆಲೆ ೪ ೧೬ವ
ಜ್ಯಾ-ಬಿಲ್ಲಿನ ಹೆದೆ ೧ ೧೯
ಜಿತಾಮರಿ-ದೇವಸ್ತ್ರೀಯನ್ನು ಜಯಿಸಿದ೨ ೧೫
ಜೀರಕ-ಜೀರಿಗೆ ೨ ೩೭
ಜೊಂಪು-ಗುಂಪು, ಗೊಂಚಲು ೨ ೧೬
ಝುಕ್-ಕಿರಣ, ಪ್ರಕಾಶ ೫ ೫೧
ಝುಷ-ಮೀನ ೧೩ ೧೦೧
ಝುಳಂಬ-ಆಚ್ಛಾದನ, ಹೊದಿಕೆ ೫ ೨೭

## ಡ

ಡವಕೆ-ಕಾಳಂಜಿ ೧೧ ೬೪
ಡಾಮರ-ಕಾದಾಟ, ಕಲಹ ೫ ೯
ಡಿಂಡೀರ-ನೊರೆ ೩ ೮೪

## ತ

ತಕ್ಕು-ಹಿರಿದಾದ ೧೪ ೧೪೩
ತಟಿದ್ವಲ್ಲರೀ-ಮಿಂಚಿನ ಬಳ್ಳಿ ೨ ೫೮ವ
ತಡಂಗೋಡು-ಒಂದನ್ನೊಂದು ಹಿಂಬಾಲಿಸು
೭ ೪೯
ತಪನೀಯ-ಬಂಗಾರ ೪ ೩೪
ತಪ್ಪ-ಕೊನೆಗಾಣುವ ೭ ೬೬
ತರಳ-ಚಂಚಲ ೧ ೧
ತವು-ಕೆಡು, ಹಾಳಾಗು ೫ ೭೮

| | | |
|---|---|---|
| ನಿರ್ಗತ-ಪೊರಪೊಮ್ಮಿದ | ೨ | ೧೨ |
| ನಿರ್ಝರ-ಜಲಪ್ರಪಾತ | ೩ | ೩೬ |
| ನಿರ್ಯಾಸ-ಮರದ ಅಂಟು, ರಸ | ೨ | ೬ವ |
| ನಿರತಿಶಯ-ಅತ್ಯಧಿಕ | ೨ | ೧೬ |
| ನಿರ್ವರ್ತಿಸು-ಮುಗಿಸು,ಆಗುಮಾಡು | ೬ | ೯೫ವ |
| ನಿರ್ವೃತಿ-ನಿವೃತ್ತಿ | ೧೩ | ೭೪ |
| ನಿಜಸು-ಸೊಬಗು | ೧೩ | ೨೫ |
| ನೀರಜ-(ನಿರ್ಗತ-ರಜ)-ಶುದ್ಧ | ೧೨ | ೨ |
| ನೀರಾಜನ-ದೇವರ ಮುಂದೆ ತೂಗುಬಿಡುವ ದೀಪ | ೧೩ | ೧ವ |
| ನೂಪುರ-ಕಾಲಂದುಗೆ | ೨ | ೨ |
| ನೆಗಟ್ಚ್-ಮಾಡು | ೧ | ೨೩ |
| ನೆರಂ-ಸಹಾಯ | ೩ | ೨೬ |
| ನೆಱೆ-ಸಮರ್ಥನಾಗು | - | ೮ |
| ನೆಲೆಮಾಡು-ಉಪ್ಪರಿಗೆಯ ಮನೆ | ೨ | ೧೨ |
| ನೇವುರ-ಗೆಜ್ಜೆ | ೧೧ | ೫೦ |
| ನೊಸಲು-ಹಣೆ | ೩ | ೬೭ |

## ಪ-ಫ

| | | |
|---|---|---|
| ಪಕ್ವಬಿಂಬ-ಹಣ್ಣು ತೊಂಡೇಕಾಯಿ | ೪ | ೩ |
| ಪಜ್ಜಳಿಸು-ಪ್ರಜ್ವಲಿಸು | ೫ | ೫೭ |
| ಪಟವಾಸಚೂರ್ಣ-ಸುಗಂಧದ ಹುಡಿ | ೬ | ೫ |
| ಪಟಹ-ನಗಾರಿ | ೭ | ೧೪ |
| ಪಟ್ಟೆ-ದುಕೂಲ, ರೇಶ್ಮೆಯ ಬಟ್ಟೆ | ೬ | ೯೧ |
| ಪಡಿಯಜವಕ್ಕಿ-ಕೋಗಿಲೆ | ೬ | ೭ |
| ಪಂಡಿತವಕ್ಕಿ-ಗಿಳಿ | ೬ | ೭ |
| ಪಣ್ಣು-ರಚಿಸು | ೫ | ೫೫ |
| ಪತತ್ರ-ರೆಕ್ಕೆ | ೬ | ೮೨ |
| ಪತ್ತುಗೆ-ಸ್ನೇಹ, ಪ್ರೀತಿ | ೩ | ೭೨ |
| ಪದನ್ಯಸನ-ಪಾದವಿಡುವುದು | ೨ | ೨೮ |
| ಪದವು-ಸಂಭ್ರಮ | ೧೨ | ೭ |
| ಪದವಿಲ್ಲು-ಬಾಣಕ್ಕೆ ಅಣೆಗೊಳಿಸಿದ ಬಿಲ್ಲು | ೫ | ೧೯ |
| ಪದ್ಮಗರ್ಭ-ಬ್ರಹ್ಮ | ೪ | ೪೦ |
| ಪದ್ಮಜ-ಬ್ರಹ್ಮ | ೩ | ೪೧ |
| ಪದ್ಮರಾಗಮಣಿ-ಕೆಂಪುರತ್ನ | ೨ | ೧೪ |
| ಪದುಳ-ಕ್ಷೇಮ | ೧೩ | ೩೨ |
| ಪಯ-ಪಾದ | ೧೨ | ೨ |
| ಪಯಃ-ನೀರು | ೧ | ೧೭ |
| ಪಯೋಧಿ-ಸಮುದ್ರ | ೧ | ೧೭ |
| ಪರದ-ವ್ಯಾಪಾರಿ | ೨ | ೪೮ |
| ಪರಶು-ಕೊಡಲಿ | ೩ | ೨೧ವ |
| ಪರಿಘ-ಮೋಡ | ೪ | ೬೦ |
| ಪರಿಜೆ-ರೂಪು | ೭ | ೫೨ |
| ಪರಿಧಾನ-ವಸ್ತ್ರ, ಹೊದಿಕೆ | ೬ | ೨೯ವ |
| ಪರಿಭವ-ಸೋಲು,ಅವಮಾನ | ೩ | ೩೧ |
| ಪರಿರಂಭಣ-ಅಪ್ಪುಗೆ | ೫ | ೨೩ |
| ಪರಿವೇಷ-ಮಂಡಳ | ೧ | ೬೦ |
| ಪರಿಸ್ಪಂದ-ಅಲಂಕಾರ | ೧ | ೪೫ |
| ಪರಿಷ್ವಂಗ-ಅಲಿಂಗನ | ೬ | ೨೮ |
| ಪರೀತ-ಸುತ್ತುಗಟ್ಟಿದ | ೫ | ೪ |
| ಪರೀಷಹ-ಉಪದ್ರವ | ೧೪ | ೫೩ |
| ಪರುಷ-ರತ್ನವಿಶೇಷ | ೩ | ೯ |
| ಪವಣ-ಪ್ರಮಾಣ | ೨ | ೪೮ |
| ಪವಳ-ಹವಳ | ೧೨ | ೯೧ |
| ಪಸವಡು-ಆಶೆಪಡು | ೫ | ೪೬ |
| ಪಳಂಚಲೆ-ಸಂಘಟ್ಟನ, ತಾಗು | ೧೨ | ೯೬ |
| ಪಱಯಿಗೆ-ಧ್ವಜ | ೫ | ೧೯ |
| ಪಳುಕಿಂ-ಸ್ಫಟಿಕದ ನೀರಿನ ಪಾತ್ರೆ | ೧೧ | ೪೨ |
| ಪಳುವಂ-ಕಾಳ್ಗಿಚ್ಚು | ೧೪ | ೮ |
| ಪಕ್ಷ-ರೆಕ್ಕೆ | ೩ | ೮೫ವ |
| ಪಕ್ಷ್ಮ-ಕಣ್ಣಿನ ಎವೆ | ೩ | ೮೫ವ |
| ಪ್ರಗಲ್ಭ-ಪರಿಣತಿ, ಪ್ರಖ್ಯಾತ | ೮ | ೧೫ವ |
| ಪ್ರಘಣಂಗ-ಮೊಗಸಾಲೆ | ೧೪ | ೧೦೮ |
| ಪ್ರತಿಪಾದ್ಯ-ಹೇಳಲರ್ಹ | ೧ | ೫೪ |
| ಪ್ರಬೋಧ-ಎಚ್ಚರ | ೪ | ೪೨ |
| ಪ್ರಭಾ-ಅರವಟ್ಟಿಗೆ | ೨ | ೨೨ |
| ಪ್ರರೋಹ-ಅಂಕುರ | ೭ | ೨೬ |
| ಪ್ರವಣ-ಪ್ರವಹಿಸುವ | ೧ | ೩೭ |
| ಪ್ರವಾಳ-ಎಳೆಯ ಕೊನರು | ೬ | ೧೩ |
| ಪ್ರಸ್ಯಂದಿ-ಸುರಿಸುವ | ೧ | ೩೭ |
| ಪ್ರಸಾಧನ-ಶೃಂಗಾರ, ಅಲಂಕಾರ | ೪ | ೪೦ |

| | | |
|---|---|---|
| ಪಾಡಳ-ಸ್ಥಿತಿಗೆಡು | ೭ | ೩ |
| ಪಾಂಡು-ಬಿಳಿ | ೧ | ೧ |
| ಪಾಂಸು-ಪರಾಗ, ಧುಡಿ | ೫ | ೨೬ವ |
| ಪಾರಾವತ-ಪಾರಿವಾಳ | ೨ | ೨೯ |
| ಪ್ರಾಗಲ್ಭ್ಯ-ಚಾತುರ್ಯ | ೩ | ೩೩ವ |
| ಪಿಕ-ಕೋಗಿಲೆ | ೨ | ೧೫ |
| ಪಿಸದ್ಧ-ಆವರಿಸಿದ | ೭ | ೮ |
| ಪಿಯೂಷ-ಅಮೃತ | ೪ | ೪೯ |
| ಪಿಶಂಗ-ಕೆಂಪು ಕೂಡಿದ ಕಂದುಬಣ್ಣ | ೧೪ | ೯೮ |
| ಪಿಶುನ-ನೀಚ, ಪಿಸುಣ | ೧೩ | ೧ |
| ಪುಗಿಲು-ಆಗಮನ, ಪ್ರವೇಶ | ೫ | ೧೫ |
| ಪುಡುಕುನೀರ್-ಬಿಸಿನೀರು | ೬ | ೭೮ |
| ಪುದಿ-ತುಂಬು | ೨ | ೧೨ |
| ಪುದುವೊಗು-ಒಂದಾಗಿ ಹೊಂದಿಕೊಳ್ಳು | ೧ | ೪೯ |
| ಪುರಂಧ್ರಿ-ಗೌರವಸ್ಥ ಸ್ತ್ರೀ | ೭ | ೩೨ |
| ಪುರುಡಿಸು-ಸ್ಪರ್ಧಿಸು | ೬ | ೯ |
| ಪುರುಹೂತ-ಇಂದ್ರ | ೧೩ | ೩೧ |
| ಪುಳಿನ-ಮರಳು ದಿನ್ನೆ | ೨ | ೨೮ |
| ಪೂಗ-ಅಡಕೆಯ ಮರ | ೧೨ | ೩೮ |
| ಪೂರ-ನೆರೆ | ೨ | ೧೨ |
| ಪೆಂಪು-ದೊಡ್ಡ | ೧ | ೫೬ |
| ಪೆರ್ಮೆ-ಹೆಮ್ಮೆ | ೧ | ೬೪ |
| ಪೆಱಗಿಕ್ಕು-ಹಿಂದೆ ಸರಿಸು | ೭ | ೧೫ |
| ಪೆಱೆ-ಚಂದ್ರ | ೩ | ೬೭ |
| ಪೊಗರ-ಕಾಂತಿ, ಕಳೆ | ೩ | ೫೩ |
| ಪೊಂಗು-ಉಬ್ಬು, ಗರ್ವಪಡು | ೫ | ೧೮ |
| ಪೊಡರು-ಕಾಂತಿ | ೪ | ೩೭ |
| ಪೊಣರ್ವಕ್ಕಿ-ಚಕ್ರವಾಕ | ೬ | ೬೬ |
| ಪೊದೞ್-ಉಂಟಾಗು | ೪ | ೧೮ |
| ಪೊಂಪುಳಿವೋಗು-ಹರ್ಷಪುಲಕಿತನಾಗು | ೧೧ | ೭೬ |
| ಪೊರೆ-ಪೋಷಿಸು | ೪ | ೩೭ |
| ಪೋತ-ಹಡಗು | ೧ | ೬೨ |
| ಪೋತಕ-ಮರಿ | ೨ | ೬೧ |
| ಫುಲ್ಲಸರಳ್-ಹೂವಿನ ಬಾಣ | ೧ | ೪೪ |

## ಬ-ಭ

| | | |
|---|---|---|
| ಬಗ್ಗಣೆ-ಕೋಗಿಲೆಯ ಧ್ವನಿ | ೧ | ೪೪ |
| ಬದ್ದವಣ-ಮಂಗಳ ವಾದ್ಯ | ೧೨ | ೩ |
| ಬಧಿರ-ಕಿವುಡ | ೧ | ೩೬ |
| ಬನ್ನ-ಭಂಗ, ಭಗ್ನ | ೧೧ | ೫೯ |
| ಬವರ-ಯುದ್ಧ, ಕಾಳಗ | ೧೪ | ೨೪ |
| ಬಸವಲ್ಲದ-ವಶವಲ್ಲದ | ೭ | ೫೪ |
| ಬಹಿತ್ರ-ಹಡಗು | ೧ | ೩೮ |
| ಬೞಿಸಲ್-ಅನುಸರಿಸು | ೧ | ೩೨ |
| ಬಾರ್ತೆಗೆಯ್ಯಂ-ಲಕ್ಷ್ಯಮಾಡುವದಿಲ್ಲ | ೩ | ೨೬ |
| ಬಾಷ್ಪಾಂಬು-ಕಣ್ಣೀರು | ೪ | ೨ |
| ಬಾಸಣಿಸು-ಆಚ್ಛಾದಿಸು | ೫ | ೨೮ವ |
| ಬಾಳತೃಣ-ಎಳೆಹುಲ್ಲು | ೨ | ೬೧ |
| ಬಾೞ್ವೇಲಿ-ಬೇಲಿ | ೨ | ೨೫ವ |
| ಬಾಳ್ವೊಗರು-ಖಡ್ಗದ ಕಾಂತಿ | ೩ | ೧೭ |
| ಬಿಜ್ಜೋದರ-ವಿದ್ಯಾಧರ | ೮ | ೧೩ |
| ಬಿಣ್ಪು-ದೊಡ್ಡಿತೆ, ಗೌರವ | ೮ | ೧೦ |
| ಬಿರಹಿ-ವಿರಹಿ | ೨ | ೨೫ |
| ಬಿಸಕಾಂಡ-ಕಮಲದ ದೇಟು | ೫ | ೨೯ |
| ಬಿಸಲತೆ-ಕಮಲದ ಬಳ್ಳಿ | ೭ | ೩೨ |
| ಬಿಸವಂದ-ಆಶ್ಚರ್ಯ | ೭ | ೬೨ |
| ಬುಧ-ಪಂಡಿತ | ೧ | ೨೪ |
| ಬೆಂಚೆ-ಸಣ್ಣ ಸರೋವರ | ೨ | ೧೧ |
| ಬೆಳ್ಳಂಗೆಡೆ-ತುಂಬಿಹರಿ | ೫ | ೨೬ವ |
| ಬೇಟ-ವಿರಹ | ೩ | ೨೮ವ |
| ಬೇವಸ-ಉಮ್ಮಳ | ೭ | ೪೮ |
| ಬೋನ-ಪಾತ್ರೆ, ಬೋಗುಣಿ | ೧೧ | ೫೬ |
| ಭವ್ಯಕರ-ಭವ್ಯಸಮೂಹ | ೧ | ೧೬ |
| ಭಾವಜ-ಕಾಮ | ೧ | ೨೧ |
| ಭಾಸ್ವತ್-ಹೊಳೆಯುವ | ೫ | ೧ವ |
| ಭಿಷಗ್ಜನ-ವೈದ್ಯ | ೪ | ೬೩ |
| ಭುವನಾರಾಧ್ಯ-ಲೋಕಪೂಜ್ಯ | ೧ | ೪೮ |
| ಭೂಭುವನ-ಭೂಲೋಕ | ೧ | ೨೩ |
| ಭೂರುಹ-ವೃಕ್ಷ, ಮರ | ೨ | ೨೫ವ |

## ಮ

ಮಕರಧ್ವಜ-ಕಾಮ ೬ ೧೭ವ
ಮಗಿಲ್-ಪ್ರಾಕಾರ, ಸುತ್ತಿನ ಗೋಡೆ ೨ ೫೧
ಮಂಡನ-ಅಲಂಕಾರ ೩ ೭೦
ಮಣಿಮರೀಚಿ-ರತ್ನಕಿರಣ ೨ ೫೫
ಮಜ್ಜನಪೀಠ-ಅಭಿಷೇಕ ಪೀಠ ೧ ೬೪
ಮಂದ್ರ-ಗಂಭೀರ ೩ ೮೨ವ
ಮಂದುರ-ಕುದುರೆ ಲಾಯ ೨ ೫೩
ಮಧುವ್ರತ-ದುಂಬಿ ೧ ೫೨
ಮಧುವಿಕೃತಿ-ವಸಂತ ವಿಕಾರ ೨ ೨೦
ಮನ್ಯು-ದುಃಖ ೪ ೧೦
ಮನೋಜಾತ-ಕಾಮ ೨ ೪೪
ಮಯೂಖಲೇಖಾ-ಕಿರಣ ಪಂಕ್ತಿ ೨ ೪೯ವ
ಮರಕತ-ಪಚ್ಚೆ ೧೧ ೬೩
ಮರಾಳ-ಹಂಸ ೨ ೨೬
ಮಲಂಗು-ಆಸರೆ ಮಾಡಿಕೊಳ್ಳು ೭ ೫೨ವ
ಮಲಯೋದ್ಭವ-ಮಲಯಾದ್ರಿಯಲ್ಲಿ ಹುಟ್ಟಿದ ೪ ೭೮
ಮಸಕ-ಭಾವನಾವೇಶ ೭ ೫೬ವ
ಮಹಿತ-ಸನ್ಮಾನಿತ ೪ ೪೩
ಮಹೀರುಹ-ವೃಕ್ಷ ೨ ೨೫ವ
ಮಾದ್ಯತ್-ಮದವೇರಿದ ೪ ೪೯
ಮಾರ್ದವ-ಮೃದು ೧೧ ೯
ಮ್ಲಾನ-ಬಾಡಿದ ೨ ೨೪
ಮಿಡಿವಟ್ಟಂ-ಮಿಡಿಯಾಕಾರದ ತಿಲಕದ ಬೊಟ್ಟು ೬ ೪೬
ಮಿಥ್ಯಾತ್ವ-ಮಿಥ್ಯಾಶ್ರದ್ಧೆ ೨ ೫
ಮೀನಧ್ವಜ-ಕಾಮನ ಧ್ವಜ ೧ ೧೯
ಮುಕ್ತಾಫಲ-ಮುತ್ತು ೩ ೧೯
ಮುಕ್ತಾವತಂಸ-ಮುತ್ತಿನ ಆಭರಣ ೨ ೭
ಮುಕುರ-ದರ್ಪಣ ೧ ೪೩
ಮುದ್ಗ-ಹೆಸರು ೫ ೩೩
ಮುನ್ನೀರ್-ಸಮುದ್ರ ೧ ೬೨
ಮುಸುಂಬು-ಮುಖ ೫ ೩೫
ಮೆಯ್ಗರೆ-ಅಡಗು, ಮರೆಯಾಗು ೬ ೬೮
ಮೇಗಡಂಬರ-ಮೋಡಗಳ ಸಮೂಹ ೫ ೫೩
ಮೇಚಕ-ಪಚ್ಚವರ್ಣ ೨ ೫೮ವ
ಮೊಗಸು-ಮೇಲೆ ಬೀಳು, ಆಕ್ರಮಣ ಮಾಡು ೬ ೭೦
ಮೊಗ್ಗು-ಸಾಧ್ಯ ೨ ೬೦
ಮೋನ-ಮೌನ ೧೧ ೪೫
ಮೋಹಧ್ವಾಂತ-ಮೋಹವೆಂಬ ಕತ್ತಲೆ ೧ ೬

## ಯ-ರ-ಲ

ಯಾನ-ನಡಿಗೆ ೨ ೧೫
ರತ್ನತ್ರಯ-ದರ್ಶನ, ಜ್ಞಾನ, ಚಾರಿತ್ರ್ಯ ೧೧ ೨೪
ರತ್ನಾಂಶು-ರತ್ನಗಳ ಕಾಂತಿ ೧ ೬೦
ರಥಾಂಗ-ಚಕ್ರವಾಕ ೫ ೩೦
ರಯ್ಯ-ಮನೋಹರ ೭ ೪೦ವ
ರವ-ಧ್ವನಿ ೨ ೧೫
ರಾಗ-ಬಣ್ಣ ೩ ೪೨
ಱೆಕ್ಕಟ-ಸುಮ್ಮನೆ ೩ ೩೩
ರುಕ್-ಕಾಂತಿ ೧ ೮
ರೇಣು-ಹುಡಿ, ಪರಾಗ ೫ ೭೮
ರೈವೃಷ್ಟಿ-ಹೊನ್ನಿನ ಮಳೆ ೧೧ ೪೭ವ
ಱೋಡಿಸು-ಅಪಹಾಸ್ಯಕ್ಕೀಡು ಮಾಡು ೭ ೬೬
ಲಕ್ಕೆ-ಲಕ್ಷ ೧೪ ೧೧೬
ಲತಾಂತ-ಹೂ ೪ ೨೬
ಲಂಬಣ-ಸರ ೨ ೧೪
ಲಯ-ಕ್ಷಯ ೧ ೫೬
ಲಸತ್-ಹೊಳೆಯುವ ೪ ೪೯
ಲಾವಗೆ-ನಾಶಮಾಡು ೧೩ ೫೦
ಲಾಸಿಕೆ-ನರ್ತಕಿ ೪ ೩೯
ಲುಬ್ಧ-ಲೋಭಿ ೩ ೧೦
ಲುಲಾಯ-ಕೋಣ ೧೩ ೫೦
ಲುಲಿತ-ಕಂಪಿಸುವ ೪ ೧೮
ಲೆಪ್ಪ-ಲೇಪಿಸಿದ ೧೧ ೪೩
ಲೇಶ್ಯಾ-ಪ್ರಕಾಶ ೧೪ ೫೭ವ
ಲೋಲ-ಚಂಚಲ ೧ ೬೦

## ವ

ವಧೂಟೀ-ಯುವತಿ ೩ ೨೮
ವರ್ಧಮಾನ-ಔಡಲ ೫ ೩೬ವ

ವರದ-ಪರವನ್ನೀಯುವ ೧ ೯
ವಲ್ಗಣ-ಜಗಿತ, ನೆಗೆತ ೩ ೨೩ವ
ವಲ್ಲರಿ-ಬಳ್ಳಿ ೩ ೨೩
ವಂಶಸ್ವನ-ಕೊಳಲ ಧ್ವನಿ ೪ ೭
ವೃಷ-ಧರ್ಮ ೧ ೨೧
ವಾಗ್ದೇವತೆ-ಸರಸ್ವತಿ ೧ ೭
ವಾಙ್ಮಲಂ-ವಚನ ದೋಷ ೧ ೧೪
ವಾರಣ-ಆನೆ ೮ ೭
ವಾರವಿಲಾಸಿನೀ-ವೇಶ್ಯೆ ೨ ೪೩
ವಾರಾಶಿ-ಸಮುದ್ರ ೧ ೫
ವಾರುಣದಿಕ್-ಪಶ್ಚಿಮ ದಿಕ್ಕು ೬ ೬೪
ವಾಸವ-ಇಂದ್ರ ೧೩ ೩೭ವ
ವಾಳತಿ-ಬಾಣಂತಿ ೪ ೧೬ವ
ವ್ಯಾಳಗಜ-ಸೊಕ್ಕಿದ ಆನೆ ೫ ೫೧
ವಿಕಥಾ-ದೂಷಿತ ಕಥೆಗಳು ೧ ೪೮
ವಿಕಲ-ದೋಷಯುಕ್ತ ೧ ೪೭
ವಿಗುರ್ವಣೆ-ಆಧಿಕ್ಯ ೨ ೫೯
ವಿಘಟನೆ-ನಾಶಮಾಡು, ಒಡೆ ೧ ೧೨
ವಿಚಕಿಳ-ಒಂದು ಬಗೆಯ ಮಲ್ಲಿಗೆ ೫ ೨೧
ವಿಜುಗೀಷು-ನಿರಾಸೆ ೧೪ ೧೫ವ
ವಿತರಣ-ದಾನ ೩ ೨೩ವ
ವಿತಾನ-ಸಮೂಹ ೪ ೨೨
ವಿದಗ್ಧ-ಪಂಡಿತ ೩ ೨೩ವ
ವಿದಲಿತ-ಅರಳಿದ ೨ ೧೦
ವಿದ್ರಾವಣ-ಧ್ವಂಸಮಾಡು ೩ ೨
ವಿದ್ವಿಷ್ಟ-ಶತ್ರು ೩ ೧೫
ವಿದ್ರುಮ-ಹವಳ ೩ ೧೭
ವಿದ್ಧ-ಹೋಲಿಕೆ ೫ ೩೬ವ
ವಿಪಣಿ-ಅಂಗಡಿ ೨ ೪೫
ವಿಪಂಚಿ-ವೀಣೆ ೬ ೮೪
ವಿಯದ್ವಾಹಿನೀ-ಆಕಾಶ ಗಂಗೆ ೧ ೬೩
ವಿರಾಜಿತ-ಅಲಂಕರಿಸಿದ ೧೧ ೧
ವಿರುತಿ-ಧ್ವನಿ, ಗರ್ಜನೆ ೭ ೧೪
ವಿವರ-ತಗ್ಗು, ಗುಹೆ ೧ ೬೨
ವಿಶ್ರುತ-ವಿಖ್ಯಾತ ೩ ೨
ವಿಷ್ಪಾತಕ-ಸುಗಂಧಿತ ೨ ೨೫ವ
ವಿಹಗ-ಪಕ್ಷಿ ೨ ೨೫ವ
ವೀಚಿಮಾಲೆ-ತರಂಗಮಾಲೆ ೧ ೩
ವೀತ-ಕಳೆದು ಹೋದ ೨ ೨೪
ವೀರ್ಯ-ಶಕ್ತಿ ೧ ೪೬
ವೇಲೆ-ತರೆ ೧ ೩೮
ವೇಳಾವನ-ಸಮುದ್ರದ ತಡಿಯ ಬನ ೬ ೫೯
ವೈಜಯಂತಿ-ಧ್ವಜ ೫ ೨೬ವ

## ಶ

ಶಕ್ರ-ಇಂದ್ರ ೧೨ ೬೬
ಶಕುಂತಿಕಾ-ಪಕ್ಷಿ ವಿಶೇಷ ೭ ೭
ಶತಪತ್ರ-ಕಮಲ ೨ ೨೯
ಶತಮುಖ-ಇಂದ್ರ ೧೨ ೯೫
ಶಫರ-ಮೀನು ೪ ೫೧
ಶರದಭ್ರ-ಶರತ್ಕಾಲದ ಮೋಡ ೨ ೫೧
ಶರಜ್ಜ್ಯೋತ್ಸ್ನಾ-ಶರತ್ಕಾಲದ ಬೆಳದಿಂಗಳು ೧ ೧
ಶರಭ-ಒಂದು ಜಾತಿಯ ಮೃಗ ೧ ೯
ಶಾಳಿವನ-ಭತ್ತದ ಗದ್ದೆ ೨ ೧೨
ಶಿಲೀಮುಖ-ದುಂಬಿ ೨ ೩೨
ಶ್ಲಿಷ್ಟ-ಶ್ಲೇಷಯುಕ್ತ ೧ ೪೩
ಶ್ರೀಪದ-ಮೋಕ್ಷ ೧ ೪೮
ಶೀಕರ-ಬೆವರ ಹನಿ ೩ ೩೭
ಶೀತಾಂಶು-ಚಂದ್ರ ೨ ೨೮
ಶುಕಾಳಿ-ಗಿಳಿಹಿಂಡು ೨ ೧೪
ಶುಕ್ತಿಕಾ-ಚಿಪ್ಪು ೩ ೧೯
ಶ್ರುತ-ಖ್ಯಾತ ೩ ೬
ಶೇಖರ-ಅವತಂಸ ೫ ೧
ಶೈವಾಳ-ಹಾವಸೆ ೮ ೧೨
ಶೋಣ-ಕೆಂಪಾದ ೪ ೧೩
ಶ್ರೋತ-ಬುಗ್ಗೆ ೧ ೧೮

## ಷ – ಸ

ಷಟ್ಚರಣ-ಭ್ರಮರ ೬ ೧೨
ಸಕ್ಕಿ-ಸಾಕ್ಷಿ ೩ ೪೫
ಸತ್ತಿಗೆ-ಕೊಡೆ ೫ ೫೯

| | | |
|---|---|---|
| ಸದ್ಮ-ಗೃಹ | ೭ | ೩೯ |
| ಸಂಜನಿತ-ಉತ್ಪನ್ನ | ೨ | ೧೮ |
| ಸಂದೇಗ-ಸಂದೇಹ | ೭ | ೧೯ |
| ಸನ್ನಿದ-ಸಂಬಂಧ, ಸಾನ್ನಿಧ್ಯ | ೮ | ೧೦ವ |
| ಸಪರ್ಯೆ-ಪೂಜೆ | ೩ | ೨೩ವ |
| ಸಮನ್ವಿತ-ಕೂಡಿದ | ೫ | ೨೬ವ |
| ಸಮಸ್ತವೇದಿ-ಸರ್ವಜ್ಞ | ೧ | ೪೮ |
| ಸಮಾಹಿತಚಿತ್ತ-ಶಾಂತಚಿತ್ತ | ೭ | ೭೪ವ |
| ಸಮೀರ-ಗಾಳಿ | ೨ | ೩೧ |
| ಸರಲ-ಬಾಣ | ೩ | ೬೩ |
| ಸರಳ-ಭೂಜವೃಕ್ಷ | ೨ | ೨೫ವ |
| ಸಂರಂಭ-ಸಂವೇಗ, ಉತ್ಸಾಹ | ೫ | ೭೯ |
| ಸರ್ವತೋಭದ್ರ-ಬೇವು | ೫ | ೩೬ವ |
| ಸಹಕಾರ-ಮಾವಿನ ಮರ | ೨ | ೨೫ವ |
| ಸ್ತಬಕ-ಗೊಂಚಲು | ೪ | ೪೮ವ |
| ಸ್ತವನೀಯ-ಸ್ತುತ್ಯ | ೧ | ೨ |
| ಸ್ತಂಬೇರಮ-ಆನೆ | ೬ | ೨೦ |
| ಸ್ನಪನ-ಸ್ನಾನ | ೧೩ | ೨ |
| ಸಾಚಿ-ವಕ್ರವಾಗಿ | ೫ | ೩೬ |
| ಸಾನು-ತಪ್ಪಲು | ೧ | ೬೪ |
| ಸಾರಸ-ಮರಾಳ | ೫ | ೬೩ |
| ಸಾವಗಿಸು-ಸರಿಮಾಡು | ೫ | ೭೫ |
| ಸಾವದ್ಯ-ದೋಷಪೂರಿತ | ೧ | ೪ |
| ಸಾಸಿಗ-ಸಾಹಸಿಗ | ೧ | ೩೩ |
| ಸಿತ-ಬಿಳಿ | ೨ | ೧೨ |

| | | |
|---|---|---|
| ಸೀತ್ಕಾರ-ಧ್ವನಿ | ೧ | ೩೬ |
| ಸೀದ-ಸುಟ್ಟ | ೧ | ೧೯ |
| ಸೀರುಡು-ಜೀರುಂಡೆ | ೧ | ೩೦ |
| ಸೀವರ-ಶೀಕರ, ಜಲಕಣ | ೩ | ೯೨ |
| ಸುಧಾವರ್ಷ-ಅಮೃತ ವೃಷ್ಟಿ | ೩ | ೨೧ವ |
| ಸುಧಾಸೂಚಿ-ಚಂದ್ರ | ೭ | ೧೪ |
| ಸುಭಗೆ-ಸುಂದರಿ | ೨ | ೧೭ |
| ಸುಮನಸ-ದೇವತೆ | ೪ | ೨೮ |
| ಸುರಚಾಪ-ಕಾಮನ ಬಿಲ್ಲು | ೧ | ೮ |
| ಸುರಭಿ-ಪರಿಮಳ | ೩ | ೬೨ |
| ಸುರಭೂರುಹ-ಕಲ್ಪವೃಕ್ಷ | ೪ | ೭೧ |
| ಸುಸಿಲ್-ಸಂಭೋಗ | ೬ | ೩೨ |
| ಸೂಸಕ-ಆಭರಣ | ೨ | ೫೮ವ |
| ಸೂಜಿಜ್-ಸಮಯ | ೧೨ | ೧೫ |
| ಸೈತು-ಸರಿಯಾಗಿ | ೨ | ೨೨ |
| ಸೈಪು-ಪುಣ್ಯ | ೪ | ೧೭ |
| ಸೋ-ಹಾರಿಸು | ೨ | ೧೫ |
| ಸ್ತೋಮ-ಸಮೂಹ | ೨ | ೫೬ |

## ಹ

| | | |
|---|---|---|
| ಹತಿ-ಆಘಾತ ಗಾಯ | ೧ | ೨೬ |
| ಹೃತ್ಸಂಗ-ಹೃದಯದ ಸಂಬಂಧ | ೩ | ೧೯ |
| ಹಿರಣ್ಯ-ಬಂಗಾರ | ೩ | ೧೨ |
| ಹುತಾಶನ-ಬೆಂಕಿ | ೧ | ೨೯ |
| ಹೈಮಾಂಬುಜ-ಬಂಗಾರದ ಕಮಲ | ೧ | ೨೬ |

# ಅನುಬಂಧ-೩

## ರಾಮಚಂದ್ರಚರಿತ ಪುರಾಣಂ - ಶಬ್ದಾರ್ಥಕೋಶ

### (ಶಬ್ದಗಳ ಮುಂದಿನ ಅಂಕಿಗಳು ಆಶ್ವಾಸ ಪದ್ಯಗಳನ್ನು ಸೂಚಿಸುತ್ತವೆ)

ಅ

ಅಕ್ಷಯ = (ವಿ) ನಾಶವಿಲ್ಲದ ೯-೧ (ಗ)

ಅಕ್ಷೂಣ = (ವಿ) ಕಡಮೆಯಾಗದ ೧೧-೯, ೧೪-೧೨

ಅಕಳಂಕ = (ವಿ) ದೋಷವಿಲ್ಲದ, ಕೊಳೆಯಿಲ್ಲದ ೧-೧೩

ಅಕಾಂಡ = (ವಿ) ಅನಿರೀಕ್ಷಿತ, ಅವ್ಯವಸ್ಥಿತ ೯-೧೮೫, ೧೨-೨೪

ಅಕುಟಿಳ = (ವಿ) ಕೊಂಕು ಇಲ್ಲದ, ಕಪಟವಿಲ್ಲದ ೧-೧೮

ಅಗ್ನಿಶಿಖಾಮುಖ = (ನಾ) ಉರಿಯ ನಾಲಗೆ ೧೧-೧೫೫ (ಗ)

ಅಗ್ರಗ್ರಾಸ = (ನಾ) ಮೊದಲ ತುತ್ತು, ಪ್ರಥಮಾಹುತಿ ೯-೧೩೦ ೧೧-೧೦೧

ಅಗ್ರಮಹಿಷಿ = (ನಾ) ಪಟ್ಟದ ರಾಣಿ ೧೦-೬೯

ಅಗ್ಗದ = (ವಿ) ಶ್ರೇಷ್ಠವಾದ, ಹೆಚ್ಚಿನ ೧-೧೬

ಅಗುರು = (ನಾ) ಪರಿಮಳ ದ್ರವ್ಯ, ಅಗಿಲು ೧೬-೯೩

ಅಗಲ್ಚು = (ಕ್ರಿ) ಅಗಲಿಸು, ಬೇರೆ ಮಾಡು ೯-೧೮೫

ಅಗ್ಗಳ = (ದ್ಭ.ವಿ.) ಬಹಳ, ವಿಪುಲ ೯-೧೯೪

ಅಗಿ = (ಕ್ರಿ) ಅಂಜು, ಹೆದರು ೩-೫೭, ೯-೧೨,೧೦-೭೮,೧೩-೧೬

ಅಗುರ್ವಿಸು = (ಕ್ರಿ) ಅಂಜಿಸು, ಭೀತಿಗೊಳಿಸು ೯-೧೮೯ (ಗ), ೧೧-೧೦೭

ಅಗುರ್ವು = (ನಾ) ಭೀತಿ, ಅಂಜಿಕೆ; ೯-೧೨೭, ೧೧-೬೭, ೧೪-೧೬೫ ಸೊಕ್ಕು, ಗರ್ವ ೯-೪೬

ಅಗುಳಿಸು = (ಕ್ರಿ) ತೋಡಿಸು, ಅಗಿಸು ೧೬-೨೫ (ಗ)

ಅಗೆಯೆತ್ತು = (ಕ್ರಿ) ಬೇರುಸಹಿತ ಕೀಳು ೧೦-೧೨೯

ಅಘಮರ್ಷಣ = (ನಾ) ಪಾಪ ವಿಮೋಚನೆಗಾಗಿ ಆಚರಿಸುವ ಒಂದು ವೈದಿಕ ವಿಧಿ, ಒಬ್ಬ ಋಷಿಯ ಹೆಸರು ೧೨-೮೪, ೭-೧೧೭

ಅಂಕದಾನೆ = (ನಾ) ಯುದ್ಧದ ಆನೆ, ಯುದ್ಧಕ್ಕಾಗಿ ಪಳಗಿಸಿದ ಆನೆ ೧೧-೧೫೩

ಅಂಕಮಾನೆ = (ನಾ) ವೀರನ ಮಹಿಮಾ ಗೀತಗಳು, ಬಿರುದಾವಳಿ ೩-೧೫

ಅಂಗದ = (ನಾ) ತೋಳಬಳೆ, ಭುಜಕೀರ್ತಿ ೧೨-೩೦

ಅಂಗರಕ್ಕ = (ದ್ಭ.ನಾ.) ಅಂಗರಕ್ಷಕ, ಮೈಗಾಪಿಗ ೧೦-೬

ಅಚಳ = (ನಾ) ಬೆಟ್ಟ, ಪರ್ವತ ೧-೪೦

ಅಚ್ಚರಿ = (ದ್ಭ.ನಾ.) ಆಶ್ಚರ್ಯ, ಬೆರಗು ೧-೧೮

ಅಚ್ಚಿಗ = (ನಾ) ಕೇಡು, ಅನರ್ಥ, ದುಃಖ, ಸಂಕಟ, ಚಿಂತೆ, ತೊಂದರೆ ೯-೧೧೫,೯-೧೫೧, ೯-೧೫೯, ೧೦-೮೫,೧೨-೬೯, ೧೪-೧೦೦

ಅಚ್ಚಿಱಿ = (ಕ್ರಿ) ಮುದ್ರಿಸು, ಮೂಡಿಸು ೯-೧೫೩

ಅಜಗರ = (ನಾ) ಹೆಬ್ಬಾವು ೧೪-೫೭

ಅಜನಿಸು = (ಕ್ರಿ) ತಿರಸ್ಕರಿಸು, ಬೀಳುಗಳೆ ೧೫-೨
ಅಜಾ = (ನಾ) ಕುರಿ, ೯-೨೫
ಅಂಚಿತ = (ವಿ) ಗುರುತಿಸಿದ, ಹೊಂದಿಸಿದ ೧೨-೮
ಅಂಚೆ = (ದ್ಬ.ನಾ.) ಹಂಸ ೯-೧೭೬
ಅಂಜಮೆ = (ನಾ) ಭೀತಿ, ಹೆದರಿಕೆ ೪-೭
ಅಂಜಲಿ = (ನಾ) ಬೊಗಸೆ ೧೨-೧೦ (ಗ)
ಅಟ್ಟಟ್ಟಿಯ ಮಾತು = (ನಾ) ಆತುರದ ಸಂದೇಶ ೧೦-೨೩
ಅಟ್ಟಳೆ = (ನಾ) ಬುರುಜು ೫-೧೦೭
ಅಟ್ಟಾಸುರ = (ವಿ) ಅತ್ಯುಗ್ರ, ಭಯಂಕರ ೯-೮೪
ಅಟ್ಟಾಳಕ = (ನಾ) ಸೌಧ, ಉಪ್ಪರಿಗೆ ೧೦-೧೦೨
ಅಟ್ಟು = (ಕ್ರಿ) ದೂತನನ್ನು ಕಳುಹು ೧೨-೧೭
ಅಟ್ಟೆ = (ನಾ) ತಲೆಹೋದ ದೇಹ, ೯-೨೪, ೧೦-೨೩೩
ಅಟ್ಟೆ = (ಕ್ರಿ) ಕಳುಹಲು ೪-೯೮
ಅಡಂಗುಜುಬಾಡು = (ಕ್ರಿ) ಕಣ್ಣುಮುಚ್ಚಾಲೆಯಾಡು ೯-೧೨೦ (ಗ)
ಅಡಪ = (ನಾ) ತಾಂಬೂಲದ ಚೀಲ, ಸಂಚಿ ೩-೪೧
ಅವಡಿಸು = (ಕ್ರಿ) ಅಳವಡಿಸು,ಹೊಂದಿಸು ೨-೬೦
ಅಡಸು = (ಕ್ರಿ) ಎದುರಿಸು, ಗುಂಪುಗೂಡು, ಒಟ್ಟಾಗಿಸು, ಏರಿ ಹೋಗು ೪-೮೫, ೧೧-೨೬, ೧೪-೧೦೧
ಅಡಹರಿಸು = (ಕ್ರಿ) ಕಾತರಗೊಳ್ಳು, ಚಡಪಡಿಸು ೮-೬೧ (ಗ)
ಅಡುರ್ = (ಕ್ರಿ) ಆವರಿಸು, ತುಂಬು ೯-೧೦೫, ೧೦-೨೩೫, ೧೩-೪೮
ಅಡುವಳ್ಳಿ = (ನಾ) ಬೇತಿಸಿದ ಹುಗ್ಗಿ ೧೩-೯೬
ಅಡೆವೊತ್ತು = (ಕ್ರಿ) ಸಂಪೂರ್ಣವಾಗಿ ಪುಟಗೊಳ್ಳು ೧೧-೧೫೪
ಅಮಡಲೆ = (ಕ್ರಿ) ಪೀಡಿಸು, ಉಪದ್ರವ ಕೊಡು ೯-೧೨೭
ಅಣ್ಮು = (ಕ್ರಿ) ಎದುರಾಗು, ತಡೆದು ನಿಲ್ಲು ೧೦-೫೮,೯-೧೨೫,೧೧-೪
ಅಣಂ = (ಅ) ಸ್ವಲ್ಪವು ೧೧-೧೦೬, ೧೬-೩೭, ೧೦-೧೯೯, ೯-೧೦೭
ಅಣಕ = (ನಾ) ನಿಂದೆ,ಕೊರಚಾಟ, ತೆಗಳಿಕೆ ೯-೧೩
ಅಣುವ = (ದ್ಬ.ನಾ.) ಹನುಮಾನ್, ಮಾರುತಿ ೧೧-೪೬ (ಗ)
ಅಣುವ್ರತ = (ನಾ) ಜೈನಧರ್ಮದಲ್ಲಿಯ ಐದು ಅಣುವ್ರತಗಳು ೯-೧೫ (ಗ)
ಅಣೆ = (ಕಿ) ಬಲವಾಗಿ ಹೊಡೆ, ತಿವಿ ೧೦-೨೦೪ (ಗ), ೧೩-೭೨
ಆತನು = (ನಾ) ಕಾಮ, ಮನ್ಮಥ ೧-೧೦೫
ಆತನುವಿದ್ಯೆ = (ನಾ) ಕಾಮಶಾಸ್ತ್ರ ೧೦೧೯೨
ಅತಸೀ = (ನಾ) ಅಗಸೆ ೭-೧೦೪
ಅತಾಸನ್ನ = (ಅ) ಸಮೀಪ, ಹತ್ತಿರ ೧೨-೧೬ (ಗ)
ಅತಿಕ್ರಾಂತ = (ನಾ) ರಾವಣನ ಮಂತ್ರಿಯ ಹೆಸರು ೧-೭೭ (ಗ)
ಅತಿವರ್ತಿಯಾಗು = (ಕ್ರಿ) ಮೀರಿನಡೆ, ಮುಂದೆ ಹೋಗು ೧೧-೨೧
ಅತ್ರಿತನೂಜ = (ನಾ) ಅತ್ರಿ ಋಷಿಯ ಮಗ, ಚಂದ್ರ ೯-೧೮೨
ಅದಟ = (ನಾ) ದಿಟ್ಟ, ಶೂರ, ವೀರ ೧೦-೬೨
ಅದಟಲೆ = (ಕ್ರಿ) ಧಿಕ್ಕರಿಸು, ತೊಂದರೆಕೊಡು, ಸೋಲಿಸು ೧೦-೧೩೩ ೧೫-೨೩
ಅದವಟಲ್ = (ನಾ) ದುಃಖ, ಸಂತಾಪ ೧೪-೧೦೪ (ಗ)
ಅದ್ಯತನ = (ವಿ) ಇಂದಿನ ೧೬-೯೮
ಅದಿರ್ = (ಕ್ರಿ) ಅಲ್ಲಾಡು, ನಡುಗು, ಅಂಜು ೯-೫೭, ೧೧-೧೭೪, ೧೨-೭೨ (ಗ)
ಅಧರ = (ನಾ) ಕೆಳದುಟಿ ೯-೧೧೮
ಅಧರಿತ = (ವಿ) ಕೆಳಗೆ ಬಾಗಿದ ೧೧-೫೭
ಅಧ್ವಖೇದ = (ನಾ) ಮಾರ್ಗಶ್ರಮ, ದಾರಿಯ ದಣಿವು ೧-೧೧೬
ಅಧೋಕ್ಷಜ = (ನಾ) ವಿಷ್ಣು (ಇಲ್ಲಿ ಲಕ್ಷ್ಮಣ) ೧೪-೧೪೯
ಅಂತನ್ನೈದು = (ಕ್ರಿ) ಕೊನೆಮುಟ್ಟು ೧೦-೫೨ (ಗ)
ಅಂತರಿತ = (ವಿ) ಮರೆಯಲ್ಲಿದ್ದ. ಮುಚ್ಚಿದ. ಅಡಗಿದ ೯-೫೪ ೩-೨೭
ಅಂತಜೆಂ = (ಅ) ಅದಕ್ಕೋಸುಗ ೧೦-೧೬೯

ಅಂತೇವಾಸಿ = (ನಾ) ಶಿಷ್ಯ ೧೦-೯೫ (ಗ)
ಅಂದ = (ನಾ) ಸ್ವಭಾವ, ಕಾರ್ಯರೀತಿ ೯-೧೧೪ (ಗ)
ಅನ್ವಯ = (ನಾ) ವಂಶ೯-೮೬, ೧೧-೧೨೬
ಅನ್ವವಾಯ = (ನಾ) ವಂಶ, ಕುಲ ೧೦-೧೩೭
ಅನಘ = (ವಿ) ಪಾಪರಹಿತ ೧-೭
ಅನ್ನರ್ = (ವಿ) ಅಂಥವರು ೧೧-೧೭೫
ಅನರ್ಘ = (ವಿ) ಅಮೌಲ್ಯ, ಬೆಲೆಬಾಳುವ, ಶ್ರೇಷ್ಠ ೧೪-೨ (ಗ)
ಅನವದ್ಯ = (ವಿ) ಪಾಪರಹಿತ, ದೋಷವಿಲ್ಲದ ೧೧-೬೨
ಅನಶನ = (ನಾ) ನಿರಾಹಾರ ೨-೪೭, ೯-೧೫೦
ಅನಳ = (ನಾ) ಅಗ್ನಿ, ಬೆಂಕಿ ೯-೧೨
ಅನಾಕುಳಂ = (ಅ) ಚಿಂತೆಯಿಲ್ಲದೆ, ತೊಂದರೆಯಿಲ್ಲದೆ ೯-೨೦೦
ಅನುಜನ್ಮ = (ನಾ) ತಮ್ಮ, ಅನುಜ ೧೦-೧೧೪
ಅನುನಯ = (ನಾ) ಒಲಿಸುವಿಕೆ, ಮೆಚ್ಚಿಸುವಿಕೆ ೯-೧೭೯
ಅನುಬಂಧ = (ನಾ) ಸಂಬಂಧ, ಹೊಂದಿಕೆ ೯-೧೯೪(ಗ), ೧೦-೫೮ (ಗ)
ಅನುಮೇಯ = (ನಾ) ಊಹಿಸತಕ್ಕ ಮಾತು ೧-೪೬
ಅನುರಾಗಿ = (ನಾ) ಪ್ರೇಮಿ, ಪ್ರಣಯಿ ೩-೧೧
ಅನುಲೇಪನ = (ನಾ) ಮೈಗೆ ತೊಡೆಯಲು ಮಾಡಿದ ಸುಗಂಧ ದ್ರವ್ಯ, ಅಣ್ಪು ೧೨-೧೦ (ಗ)
ಅನುಮರ = (ನಾ) ಯುದ್ಧ, ಕಾಳಗ ೯-೧೪೯, ೧೨-೪೦, ೧೪-೧೩
ಅನುವಿಸು = (ಕ್ರಿ) ಹುಟ್ಟು, ತೋರ್ಪಡು ೧೦-೨೧೩
ಅನುಷಂಗ = (ನಾ) ಸಹವಾಸ, ಸಂಪರ್ಕ ೧೧-೧೮೨
ಅನುಷ್ಠಿಸು = (ಕ್ರಿ) ಆಚರಿಸು, ಮನಗೊಟ್ಟು ಮಾಡು ೩-೨೭
ಅನುಸರಣ = (ನಾ) ಬೆನ್ನು ಹತ್ತುವಿಕೆ ೧೦-೧೦೫
ಅನ್ನೆಯ = (ದ್ಭ. ನಾ.) ಅನ್ಯಾಯ ೯-೯೨
ಅನ್ನೆವರ = (ಅ) ಅಲ್ಲಿಯ ವರೆಗೆ ೧-೩೯
ಅನೇಕಪ = (ನಾ) ಆನೆ ೧೦-೧೫೮
ಅನೋಕಹ = (ನಾ) ಗಿಡ, ಮರ, ೧೦-೧೧೫, ೧೧-೮೯, ೧೪-೧೯೬
ಅಪಗತ = ಹೋದ, ಕಳೆದ, ೧೦-೯೮ (ಗ) ೧೪-೩ (ಗ)
ಅಪತ್ಯ = (ನಾ) ಮಗ ೧೦-೧೦೭ (ಗ)
ಅಪಚಯ = (ನಾ) ಆರಿಸುವಿಕೆ ಹೆಕ್ಕುವಿಕೆ, ೧-೧೯
ಅಪ್ರಮೇಯ = (ವಿ) ಅಳೆಯಲು ಬಾರದ, ವಿಚಾರಿಸಲಿಕ್ಕೆ ಸಾಧ್ಯವಿಲ್ಲದ, ಅಸಾಮಾನ್ಯ ೧೩-೩೧
ಅಪರಾಜಿತ = (ವಿ) ಸೋಲಿಲ್ಲದ ೧-೮
ಅಪವರ್ಗ = (ನಾ) ಮೋಕ್ಷ,ಮುಕ್ತಿ ೯-೧೮೨, ೧೦-೧೫೫ ೧೬-೪೪
ಅಪವರ್ತಿಸು = (ಕ್ರಿ) ತೊಲಗಿಸು, ದೂರಮಾಡು ೨-೩
ಅಪಹಾರ = (ವಿ) ಯುದ್ಧ ನಿಲ್ಲಿಸುವ ಸಂಕೇತ ೧೪-೩೩
ಅಪ್ರತಿಹತ = (ವಿ) ಎದುರಾಳಿ ಇಲ್ಲದವ, ವೈರಿಯ ಆಘಾತವಿಲ್ಲದವ ೧೦-೬೧
ಅಪ್ರಮತ್ತ = (ವಿ) ಮದವಿಲ್ಲದ, ದೋಷರಹಿತ ೧೦-೧೬೯, ೧೧-೧೮೮
ಅಂಬುಗಂಡಿ = (ನಾ) ಒಳಗಿನಿಂದ ಬಾಣ ಬಿಡುವುದಕ್ಕಾಗಿ ಕೋಟೆಯ ಗೋಡೆಯಲ್ಲಿ ರಚಿಸಿದ ಕಿಂಡಿ ೧೧-೧೧೬
ಅಪಾಂಗ = (ನಾ) ಕಡೆಗಣ್ಣು, ೧೨-೨೧
ಅಪ್ಪುಕೈ = (ಕ್ರಿ) ಅಂಗೀಕರಿಸು,ಸ್ವೀಕರಿಸು ೧-೫, ೨-೩೩, ೧೧-೧ , ೧೨-೩೮ (ಗ)
ಅಬ್ಜವಿಷ್ಟರ = (ನಾ) ಕಮಲಾಸನ, ಬ್ರಹ್ಮ ೧-೩೧
ಅಬ್ಜಾತ = (ನಾ) ನೀರಿನಲ್ಲಿ ಹುಟ್ಟಿದುದು, ಕಮಲ ೧೧-೧೦೩
ಅಭ್ಯರ್ಣ = (ಅ) ಹತ್ತಿರ. ಸಮೀಪ ೧೧-೫೧, ೧೩-೨
ಅಭಿಜನ = (ನಾ) ಹಿರಿಯರು, ಮರ್ಯಾದೆಗೆ ತಕ್ಕ ಜನರು ೧೨-೩೧
ಅಭಿಭವಿಸು = (ಕಿ) ಸೋಲಿಸು, ಪರಾಭವಗೊಳಿಸು ತಿರಸ್ಕರಿಸು
೧೦-೨೦೭ (ಗ), ೧೪-೩ (ಗ), ೧೪-೯೨

ಅಭಿಯೋಗ = (ನಾ) ಮುತ್ತಿಗೆ, ದಾಳಿ ೧೫-೭೫ (ಗ)

ಅಭಿರಾಮತೆ = (ನಾ) ಮನೋಹರತೆ, ಸೌಂದರ್ಯ ೩-೧೫೩

ಅಭಿವಾಂಛಿತ = (ನಾ) ಅಭೀಷ್ಟ, ಬಯಸಿದುದು ೧೦-೫೯, ೧೧-೧೬೨

ಅಭಿಷವ = (ನಾ) ಅಭಿಷೇಕ, ಸ್ನಾನ ೭-೧೩೩, ೧೧-೧೧, ೧೨-೨ (ಗ)

ಅಭೀಕ್ಷಿಸು = (ಕ್ರಿ) ನಿಟ್ಟಿಸಿ ನೋಡು ೧೦-೨೧೩ (ಗ)

ಅಂಬನಂಬಟ್ಟು = (ಕ್ರಿ) ಬಾಣವನ್ನು ಹಿಂಬಾಲಿಸಿ ಬಾಣ ಹೋಗುವಂತೆ ಹೊಡೆ ೩-೫೯

ಅಂಬರ = (ನಾ) ಆಕಾಶ, ಬಾನು ೯-೧೧೭

ಅಂಬಿಕಾಸ್ತನ್ಯ = (ನಾ) ತಾಯ ಮೊಲೆ ಹಾಲು ೧೧-೩೯

ಅಂಬುಜನಾಭ = (ನಾ) ನಾಭಿಯಲ್ಲಿ ಕಮಲವುಳ್ಳವ, ವಿಷ್ಣು ೩-೧೫೭

ಅಂಬುದ = (ನಾ) ಮೋಡ ೧೨-೭೨

ಅಂಬೇರು = (ನಾ) ಬಾಣದ ಗಾಯ ೪-೫೦

ಅಂಭೋನಿಧಾನ (ನಾ) ಸಮುದ್ರ ೩-೮

ಅಮ್ಮ = (ನಾ) ತಂದೆ, ೧೧-೧೩೨

ಅಮರ್ದು =(ದ್ಯ.ನಾ.) ಅಮೃತ, ಸುಧೆ ೧೦-೬೭, ೧೦-೮೦

ಅಮರಾನಕ = (ನಾ) ದೇವತೆಗಳ ವಾದ್ಯ ೯-೧೩೧

ಅಮರೇಂದ್ರ = (ನಾ) ಸುರಪತಿ, ಇಂದ್ರ ೨-೭೭

ಅಮಳ್ಗಳ್ = (ನಾ) ಅವಳಿ ಜವಳಿ ಮಕ್ಕಳು ೩-೧೪೪

ಅಮೇಯರ್ = (ನಾ) ಅಳತೆಗೆ ನಿಲುಕದವರು ೧-೪

ಅಮೋಘ = (ವಿ) ವ್ಯರ್ಥವಲ್ಲದ, ತಪ್ಪದ, ನಿಶ್ಚಿತವಾದ ೯-೧೫೩ ಗ ೧೧-೫, ೧೧-೧೦೫

ಅರ್ಕ = (ನಾ) ಸೂರ್ಯ ೧-೧೩೧

ಅರ್ಗಳ = (ವಿ) ಹಿರಿಮೆ, ಶಕ್ತಿ, ಯೋಗ್ಯತೆ ೯-೧೬೧

ಅರ್ಚಿಸ್ = (ನಾ) ಕಿರಣ ೧೬-೮೨

ಅರ್ಣವ = (ನಾ) ಸಮುದ್ರ ೨-೬೭, ೯-೧೩೩

ಅರ್ಥಿ = (ನಾ) ಬೇಡುವವ, ಯಾಚಕ ೧೩-೨೦

ಅರ್ವಿಸು = (ಕ್ರಿ) ಪಸರಿಸು, ಹರಡು, ತುಂಬು ೧-೭೧, ೯-೩೯, ೧೧-೧೪೬

ಅರಾತಿ = (ನಾ) ವೈರಿ, ಹಗೆ ೧೦-೭೩

ಅರಿದು = (ವಿ) ಅಸಾಧ್ಯ, ಅಶಕ್ಯ ೧೧-೩೧

ಅರಿಂಜಯು = (ನಾ) ವೈರಿಯನ್ನು ಗೆದ್ದವ ೧೧-೧೬೧

ಅರುಣಮಣಿ = (ನಾ) ಕೆಂಪುರತ್ನ, ಮಾಣಿಕ್ಯ ೯-೧೧೦

ಅರುಣಿತ = (ವಿ) ಕೆಂಬಣ್ಣದ ೧೨-೨ (ಗ)

ಅಱ = (ನಾ) ಧರ್ಮ ೧೧-೧೩೯

ಅಱಕೆ = (ನಾ) ತಿಳಿವಳಿಕೆ ೧೧-೧೭೬ (ಗ)

ಅಱಯಮೆ = (ನಾ) ಅಜ್ಞಾನ, ತಿಳಿಗೇಡಿತನ ೧೧-೫೪

ಅಱ = (ಕ್ರಿ) ನಾಶಗೊಳಿಸು, ಚುಚ್ಚು ೩-೨೫

ಅಱುಗುಲಿ = (ನಾ) ಧರ್ಮಹೀನ ೯-೧೧

ಅಱುನೀರ್ = (ನಾ) ಬತ್ತಿಹೋದ ನೀರು ೯-೧೮೩

ಅಱಯಟ್ಟು = (ಕ್ರಿ) ಬೆನ್ನಟ್ಟು ೯-೭೧

ಅಲಕ = (ನಾ) ಮುಂಗುರುಳು ೧೧-೬೫

ಅಲಘು = (ವಿ) ದೊಡ್ಡ, ಶ್ರೇಷ್ಠ, ದೃಢವಾದ ೧೦-೧೬೬;೧೪-೨

ಅಲತಾ = (ನಾ) ಜೈನ ಸಂಪ್ರದಾಯದಲ್ಲಿಯ ಒಂದು ಕಾಲಮಿತಿ ೧-೫೦

ಅಲಂಪು = (ನಾ) ಸೌಖ್ಯ, ಆನಂದ, ಸೊಗಸು ೧೦-೨೦೮

ಅಲರ್ಗಣ್ = (ನಾ) ಹೂವಿನಂತಹ ಕಣ್ಣು, ಅರಳಿದ ಕಣ್ಣು ೧-೧೦೩

ಅಲರ್ಚು ( ಕ್ರಿ) ಅರಳಿಸು, ಹೂಬಿಡು ೯-೧೬, ೧೧-೪೭

ಅಲರಂಬು = (ನಾ) ಹೂವಿನ ಬಾಣ ೧೦-೧೯೧

ಅಲಸು = (ಕ್ರಿ) ದಣಿ, ಬೇಸರು ೯-೧೧೮

ಅಲೆ = (ಕ್ರಿ) ಬೀಸು, ಸುಳಿದಾಡು ೧೦-೮೦

ಅಲೆಪು = (ಕ್ರಿ) ಬೀಸುವಿಕೆ (ಗಾಳಿ) ೯-೧೧೧

ಅವಕರ್ಣಿಸು = (ಕ್ರಿ) ಕೇಳದೆ ಇರು, ಕಿವುಡುಗೇಳು ೧೦-೧೮೭ (ಗ)

ಅವಕ್ರ = (ವಿ) ಕೊಂಕಿಲ್ಲದ, ನೇರವಾದ ೧೦-೧೬೯ (ಗ)
ಅವಗಮುಸಂಪದ = (ನಾ) ಜ್ಞಾನಸಂಪತ್ತು ೧೬-೬೨
ಅವಗಾಹ = (ನಾ) ಮುಳುಗುವಿಕೆ, ಸ್ನಾನ ೩-೧೧೭
ಅವಚರು = (ಕ್ರಿ) ಹೇಸು, ಜಿಗುಪ್ಸೆಪಡು ೬-೬೬ (ನಾ) ಹೇಸಿಕೆ, ಜಿಗುಪ್ಸೆ ೧೦-೧೨೧
ಅವತಂಸ = (ನಾ) ಆಭರಣ ೧-೯೮
ಅವದಾತ = (ವಿ) ಬಿಳಿಯದಾದ, ಪರಿಶುದ್ಧವಾದ ೧೦-೨೩೬
ಅವಂಧ್ಯ = (ವಿ) ಬಂಜೆಯಲ್ಲದ, ಹುಸಿಯೋಗದ ೯-೯೯, ೧೧-೧೦೫
ಅವರೋಧ = (ನಾ) ಅಂತಃಪುರ, ರಾಣಿವಾಸ ೧೪-೧೦೪
ಅವಷ್ಟಂಭ = (ನಾ) ಸ್ಥೈರ್ಯ, ಗರ್ವ ೪-೪೭, ೮-೩೩, ೧೦-೫೮
ಅವಸಥ = (ನಾ) ಮನೆ, ಬೀಡು ೧೦-೧೨, ೧೦-೧೭೭
ಅವಸರ = (ನಾ) ಸಂದರ್ಭ, ಸಮಯ, ಅವಕಾಶ ೧೦-೧೭ (ಗ), ೧೧-೨೮
ಅವಸಾನ = (ನಾ) ಕೊನೆ, ಮರಣ ೧೦-೧೦೫ (ಗ)
ಅವ್ವಳಿಸು = (ಕ್ರಿ) ವ್ಯಾಪಿಸು, ಗುಂಪುಗೂಡು ೫-೭೫, ೯-೧೮೯
ಅವಸರ್ಪಣ = (ನಾ) ಜೈನಧರ್ಮದ ಪರಭಾಷೆಯಲ್ಲಿ ಕಾಲದ ಅವನತ ಸ್ವರೂಪ
ಅವ್ಯಾಜ = (ವಿ) ಸಹಜ, ಕೊರತೆಯಿಲ್ಲದ ೧೬-೧೭
ಅವಿತಥ = (ನಾ) ನಿಶ್ಚಯ ೨-೬೨
ಅವಿನಾಣ = (ನಾ) (ದ್ವ) ಅಭಿಜ್ಞಾನ, ಸಂಕೇತ, ಕುರುಹು ೧೧-೪೬ (ಗ)
ಅವಿರಳ = (ವಿ) ದಟ್ಟವಾದ, ಅತಿಶಯ ೯-೧೨೧
ಅಂಶು = (ನಾ) ಕಿರಣ ೯-೫೩
ಅಶನಿ = (ನಾ) ವಜ್ರಾಯುಧ, ಸಿಡಿಲು ೧೨-೭೪ (ಗ), ೧೩-೨
ಅಶೀತಿ = (ನಾ) ಎಂಬತ್ತು ೧-೮೮
ಅಷ್ಟಾಪದ = (ನಾ) ಶರಭಮೃಗ ೭-೧೨೨
ಅಸಕಟಿ = (ಕ್ರಿ) ಕೈಮೀರು, ಅತಿಕ್ರಮಿಸು ೫-೫೭ (ಗ), ೬-೧೨೧ ೧೩-೧೦೯ (ಗ)
ಅಸಗ = (ನಾ) ಮಡಿವಳ, ಅಗಸ ೭-೫೭
ಅಸದಾಗ್ರಹ = (ನಾ) ದುರಾಗ್ರಹ, ಅಸಾಧುವಾದ ಹಟ ೧೨-೬೧
ಅಸ್ಖಲಿತ = (ವಿ) ಸಡಿಲಾಗದ, ತೊದಲಿಲ್ಲದ ೧೦-೨೩೬
ಅಸದಳ = (ವಿ) ಅಸಾಧ್ಯ ೧೧-೧೪೬
ಅಸಿ = (ನಾ) ಖಡ್ಗ, ಕತ್ತಿ ೯-೧೨೮
ಅಸಿಯಳ್ = (ನಾ) ತೆಳುವಾದ ದೇಹವುಳ್ಳವಳು, ಚೆಲುವೆ ೧೦-೬೯
ಅಸಿಯ ಬಾಸೆ = (ನಾ) ಸೂಕ್ಷ್ಮವಾದ ರೋಮಪಂಕ್ತಿ ೩-೧೩೩
ಅಸಿರತ್ನ = (ನಾ) ಶ್ರೇಷ್ಠವಾದ ಖಡ್ಗ ೯-೧೯೮
ಅಸುಗೆ = (ದ್ವ.ನಾ.) ಅಶೋಕ (ಒಂದು ಬಗೆಯ ಗಿಡ) ೧೧-೧೧೮
ಅಸುಂಗೊಳ್ = (ಕ್ರಿ) ಕೊಲ್ಲು, ಜೀವಹೀರು ೧೦-೨೧೭
ಅಸುವಿಯೋಗ = (ನಾ) ಪ್ರಾಣೋತ್ಕ್ರಮಣ, ಸಾವು ೯-೧೧೭ (ಗ)
ಅಸ್ಸೃಕ್ = (ನಾ) ರಕ್ತ ೯-೨೪
ಅಸ್ಸೃಗ್ಜಲ = (ನಾ) ಕಣ್ಣೀರು, ರಕ್ತ ೧೧-೧೨೭
ಅಹಿತ = (ನಾ) ವೈರಿ ೧೦-೩೩
ಅಳ್ಗು = (ಕ್ರಿ) ಕ್ಷೀಣವಾಗು, ನಾಶವಾಗು ೧೬-೮೯
ಅಳಜ್ = (ಕ್ರಿ) ಅಂಜು, ಭಯಪಡು, ನಾಶವಾಗು ೧೧-೬೯
ಅಲವಡು = (ಕ್ರಿ) ಹೊಂದಿಕೆಯಾಗು ೧೫-೪೬
ಅಳವು = (ನಾ) ಸಾಮರ್ಥ್ಯ ೯-೧೪೭, ಅಳತೆ, ಪ್ರಮಾಣ ೮-೪೧
ಅಳಜಿಸು = (ಕ್ರಿ) ಅಂಜಿಸು ೭-೪೪
ಅಳವಿಗಟಿದು = (ಕ್ರಿ) ಸಾಮಾರ್ಥ್ಯವನ್ನು ಕಡಿಮೆ ಮಾಡಿ ೭-೧೧೫ (ಗ)
ಅಳಿ = (ನಾ) ಭ್ರಮರ ೯-೨
ಅಟ್ಟಿಗ = (ನಾ) ಪ್ರೀತಿಸುವವ, ನಲ್ಲ ೪-೫೦

ಅಳುಂಬಂ = (ವಿ) ಅತಿಶಯ, ಬಹಳ ೭-೧೨, ೧೧-೫೫

ಅಳ್ಕು = (ಕ್ರಿ) ಅಂಜು ೧೧-೧೫೭

ಅಳುರ್ = (ಕ್ರಿ) ಸುಡು, ೧೩,೧೦೭; ಆವರಿಸು, ವ್ಯಾಪಿಸು, ಸುತ್ತು ಗಟ್ಟು ೧೦-೭೯, ೧೧-೫೯, ೧೧-೧೪೯

ಅಳುರ್ಕೆ = (ನಾ) ಉತ್ಸಾಹ, ರಭಸ, ವ್ಯಾಪ್ತಿ ೭-೫೮, ೧೧-೨೧೪

ಅಳ್ಳೆ = (ನಾ) ಪಕ್ಕೆ, ಮರ್ಮಸ್ಥಳ ೭-೯೩

ಅಳ್ಳೆರ್ದೆ = (ನಾ) ಹೆದರುಗುಳಿತನ ಪುಕ್ಕತನ ೧-೧೦೮

ಅಱಲ್ = (ನಾ) ದುಃಖ, ಶೋಕ ೯-೩೩, ೧೦-೧೦೬

(ಕ್ರಿ) ದುಃಖಿಸು, ಶೋಕಿಸು ೩-೨೫

ಅಱ್ಕಱ್ = (ನಾ) ಪ್ರೀತಿ, ವಾತ್ಸಲ್ಯ ೪-೯೨

ಅಱಿಗೆಯ್ತ = (ನಾ) ಕ್ಷುದ್ರಕಾರ್ಯ, ಹೀನವಾದ ಕೆಲಸ ೯-೧೪೮ (ಗ)

ಅಱಿಪು = (ನಾ) ದುರಾಶೆ ೧೦-೧೭೩

ಅಱ್ಕುರೆ = (ಅ) ಅಂಜುವಂತೆ, ಭಯಪಡುವಂತೆ ೧೦-೬೩

ಅಱ್ಗು = (ಕ್ರಿ) ಕ್ಷೀಣವಾಗು, ಸೊರಗು ೯-೧೨೪

ಅಱುಪು (ಕ್ರಿ) ದುರಾಶಪಡು ೯-೧೪೫, ೧೨-೬೬

ಅಱ್ಕೆ = (ನಾ) ದುಃಖ, ಶೋಕ ೯-೧೫೩ (ಗ)

## ಆ

ಆಕೀರ್ಣ = (ವಿ) ತುಂಬಿದ, ವ್ಯಾಪಿಸಿದ, ಹೊಂದಿಕೊಂಡ ೧-೧, ೧-೧೩೩, ೧೧-೧೦

ಆಕುಲ = (ವಿ) ತುಂಬಿದ, ವ್ಯಾಪಿಸಿದ ೧೦-೮೩

ಆಕುಲತೆ = (ನಾ) ಕಂಗೆಡುವಿಕೆ, ಕಳವಳ ೧೧-೪೭

ಆಕುಳ = (ವಿ) ದುಃಖಿತ, ೯-೧೫೬

ಆಖಂಡಲ = (ನಾ) ಇಂದ್ರ ೧೦-೪೮

ಆಗಸ = (ದ್ಭ.ನಾ.) ಆಕಾಶ ೯-೧೪೦ (ಗ)

ಆಗುಳಿಕೆ = (ನಾ) ಆಕಳಿಕೆ ೧೦-೧೪೧

ಆಂಕೆಗೊಳ್ = (ಕ್ರಿ) ಎದುರಿಸು, ಸಹಿಸು ೧೦-೨೦೫

ಆಜಿ = (ನಾ) ಯುದ್ಧ, ಕಾಳೆಗ ೪-೬೧, ೯-೫೮, ೧೧-೫೪

ಆಟವಿಕರ್ = (ನಾ) ಬೇಡರು, ಕಾಡು ಜನರು ೪-೪೭

ಆಟಿಸು = (ಕ್ರಿ) ಅಪೇಕ್ಷಿಸು, ಬಯಸು ೧೦-೫, ೧೨-೭೭

ಆಟೋಪ = (ನಾ) ಸಾಮರ್ಥ್ಯ, ಗರ್ವ, ಉದ್ದಾಮತನ ೧೦-೧೬೨ (ಗ)

ಆಡುಂಬೊಲ = (ನಾ) ವಿಹಾರಸ್ಥಳ, ಆಟದ ಬಯಲು, ೧-೧೦೧

ಆಣೆ = (ದ್ಭ.ನಾ.) ಆಜ್ಞೆ, ಪ್ರತಿಜ್ಞೆ ೯-೧೬೭

ಆತತಕೀರ್ತಿ = (ನಾ) ವಿಸ್ತಾರವಾದ ಯಶಸ್ಸನ್ನು ಪಡೆದವನು ೧೧-೧೦೩

ಆತಪ = (ನಾ) ಬಿಸಿಲು ೧-೧೨೪

ಆತಪಯೋಗ = (ನಾ) ಬೇಸಗೆ, ಬಿಸಿಲುಗಾಲ ೧೧-೧೭೮

ಆತಪವಾರಣ = (ನಾ) ಛತ್ರ, ಕೊಡೆ ೧೨-೮

ಆತೋದ್ಯ = (ಜಾ) ಗುಣಿಯಿಂದ ಬಾರಿಸುವ ವಾದ್ಯ ೧೨-೫೯, ೧೬-೯೬

ಆದವ್ = (ಅ) ಚೆನ್ನಾಗಿ, ವಿಶೇಷವಾಗಿ, ವಿಪುಲವಾಗಿ ೯-೪೬, ೧೦-೮೬, ೧೧-೧೬೫, ೧೩-೩೫

ಆದೇಯ = (ನಾ) ಕಾಣಿಕೆ, ಉಡುಗೊರೆ ೭-೧೨೫

ಆನ್ = (ಕ್ರಿ) ಎದುರಾಗು, ಧರಿಸು ೯-೧೯೫, ೧೧-೩೭

ಆನಕ = (ನಾ) ಒಂದು ಬಗೆಯ ಚರ್ಮ ವಾದ್ಯ ೫-೩೭, ೧೧-೧೫೯, ೧೪-೨೯ (ಗ)

ಆನಂದಸ್ಯಂದಿ = (ವಿ) ಸಂತೋಷವನ್ನು ಸ್ರವಿಸುವ ೪-೮೭

ಆಪ = (ನಾ) ನೀರು ೯-೧೨೬

ಆಪಗ = (ನಾ) ನದಿ ೧೨-೩೨

ಆಪನ್ನ = (ವಿ) ಹೊಂದಿದವ ೯-೧೪೭

ಆಮ್ರಕುಜ = (ನಾ) ಮಾವಿನ ಮರ ೧-೧೦೫

ಆಮೋದ = (ನಾ) ಸುವಾಸನೆ, ಸಂತೋಷ ೯-೧೭, ೯-೧೧೮

ಆಯತ = (ವಿ) ಹರವಾದ, ವಿಶಾಲವಾದ, ಉದ್ದವಾದ ೧೦-೫೮ ೧೦-೧೫೯ (ಗ)
ಆಯತ್ತ = (ವಿ) ಒದವಿದ, ಬಂದ ೯-೯೬
ಆಯತಿ = (ನಾ) ವಿಸ್ತಾರ ೧೧-೧೩೮
ಆರ್ = ಕ್ರಿ) ಕೂಗು, ಕಿರಿಚು ೧೧-೭೧, ೧೩-೩೯
ಆಱ್ = (ಕ್ರಿ) ಸಮರ್ಥನಾಗು ೯-೩೭, ೧೦-೨೩೫, ೧೩-೧೦, ೧೪-೧೯
ಆರ್ತ = (ವಿ) ಹಂಬಲಿಸುವ, ದುಃಖಿಸುವ ೯-೧೯೭
ಆರ್ತಿತ್ತು = (ಕ್ರಿ) ಪ್ರೀತಿಯಿಂದ ಕೊಟ್ಟು ೩-೧೩೭
ಆರ್ಪ = (ವಿ) ಸಮರ್ಥ, ಬಲಿಷ್ಠ, ೯-೧೪೧
ಆರಂಬ = (ನಾ) ಬೇಸಾಯ, ಕೃಷಿ ೯-೪
ಆರಯ್ = (ಕ್ರಿ) ವಿಚಾರಿಸು,ಉಪಚರಿಸು ೯-೯೦
ಆರಾತೀಯ = (ವಿ) ಹಿಂದಿನ ಕಾಲದ, ಪ್ರಾಚೀನ ೧-೯೧
ಆರಾವ = (ನಾ) ಧ್ವನಿ ೧೦-೧೦೯
ಆರುಣಿತ = (ವಿ) ಕೆಂಪು ಛಾಯೆಯಿಂದ ಕೂಡಿದ ೧೧-೧೮೭
ಆರೂಢ = (ವಿ) ಮೇಲಕ್ಕೇರಿದ, ಹತ್ತಿದ ೯-೨ (ಗ)
ಆರಾತಿ = (ನಾ) ವೈರಿ ೧೧-೪೪
ಆವಲಿ (ನಾ) ಸಾಲು, ಸಮೂಹ ೧೦-೯೧
ಆವಳಿ = (ನಾ) ಜೈನ ಪಾರಿಭಾಷೆಯಂತೆ ಅಸಂಖ್ಯಾತ-ಸಮಯ ಸಮೂಹ ೧-೪೯
ಆವರ್ತನ ಪರಿವರ್ತನ = (ನಾ) ಹೋಗಿ ಮರಳಿ ಬರುವಿಕೆ ೯-೩೪ (ಗ)
ಆವಾಸ = (ನಾ) ಮನೆ, ಬೀಡು, ನೆಲೆ ೧೧-೧
ಆವಿಲ = (ವಿ) ತುಂಬಿದ, ಮುಸುಕಿದ ೯-೧೮೮
ಆವಿಷ್ಕೃತ = (ವಿ) ವ್ಯಕ್ತಗೊಳಿಸಿದ ೧೦-೧೪೮
ಆಶಾ = (ನಾ) ದಿಕ್ಕು ೧-೮೦
ಆಶಾದಂತಿ = (ನಾ) ದಿಗ್ಗಜ ೧೦-೧೫೨
ಆಶೀವಿಷ = (ನಾ) ಸರ್ಪ (ಹಲ್ಲಿನಲ್ಲಿ ವಿಷವಿದ್ದುದು) ೧೪-೨೦
ಆಸನ್ನ = (ಅ) ಸಾಮೀಪ್ಯ, ಹತ್ತಿರ ೧೦-೭೮
ಆಸರ್ = (ನಾ) ದಣಿವು ೧೦-೭೮
ಆಸವ = (ನಾ) ಸವಿರಸ, ಮಧು, ಪುಷ್ಪರಸ ೧೨-೪೪
ಆಸ್ಥಾಯಿ(ನಿ)ಕ = (ನಾ) ಸಭಾಸದ ೧೦-೧೪೪ (ಗ)
ಆಸ್ಯ = (ನಾ) ಮುಖ, ಮೋರೆ ೯-೧೧೮
ಆಸಾರ = (ನಾ) ಮಳೆ ೯-೩೭
ಆಸುರ = (ವಿ) ಅಸುರರಿಗೆ ಸಂಬಂಧಿಸಿದ, ಭೀಕರ, ಉಗ್ರ, ಭಯಂಕರ ೪-೫೫, ೯-೭೧, ೧೦-೧೦, ೧೧-೧೦೭
ಆಹತಿ = (ನಾ) ಪೆಟ್ಟು, ಆಘಾತ ೧೧-೧೪೨
ಆಹವ = (ನಾ) ಯುದ್ಧ೯-೧೩೦, ೧೦-೧೧೬, ೧೨-೪೮
ಆಳಂಬಿನಿ = (ವಿ) ಆಶ್ರಯಿಸಿದವಳು, ಅವಲಂಬಿಸಿದವಳು ೭-೧೫೧
ಆಳ್ತನ = (ನಾ) ಸೇವೆ, ಮಾನ್ಯ ೧೧-೫೬ (ಗ), ೧೨-೭೩
ಆಳ್ವಸನ = (ನಾ) ಸೇವಾಕಾರ್ಯ ೯-೧೩೬
ಆಳ್ವಸಗೈ = (ಕ್ರಿ) ಸೇವೆಯನ್ನು ಮಾಡು ೧೦-೩೭
ಆಟಂದು = (ಅ) ಎದುರಿಸಿ, ಕಾದಿ ೧೧-೪೫
ಆಡಂಬರ = (ನಾ) ಗರ್ಜನೆ, ಆರ್ಭಟೆ ೧೧-೧೩೨

## ಇ

ಇಕ್ಕು = (ಕ್ರಿ) ಕೊಲ್ಲು, ಹೊಡೆ ೧೧-೪೬
ಇಕ್ಕಲಿರ್ದ = (ಅ) ನಾಶಮಾಡಲಿದ್ದ ೧೪-೨೧
ಇಟ್ಟಳ = (ನಾ) ಸಮೂಹ, ಗುಂಪು, ಸಂದಣಿ ೧೦-೯೨
ಇಟ್ಟಳಂ = (ವಿ) ಮನೋಹರ, ಸುಂದರ ೪-೨೭
ಇಟ್ಟಳವಿಡು = (ಕ್ರಿ) ಆಕ್ಷೇಪಿಸು, ಅಪವಾದಿಸು ೧೫-೮೧ (ಗ)
ಇಟ್ಟೆಡೆ = (ನಾ) ಇಕ್ಕಟ್ಟಾದ ಸ್ಥಳ ೧೨-೯೫
ಇಡಿ = (ಕ್ರಿ) ತುಂಬು, ವ್ಯಾಪಿಸು, ಮುಸುಕು ೧೧-೫೩
ಇಡು = (ಕ್ರಿ) ಹೊಡೆ ೧೦-೨೧೮
ಇಂಗಡಲ್ = (ನಾ) ಕ್ಷೀರಸಮುದ್ರ ೩-೧೫೪
ಇದಿರಿಕ್ಕಿ = (ಕ್ರಿ) ಎದುರಿಸಿ ೧೧-೧೮
ಇನಿವಿರಿದು = (ವಿ, ಇನಿತು + ಪಿರಿದು) ಇಷ್ಟು

ದೊಡ್ಡದು ೧೦-೫೧ (ಗ), ೧೫-೭೮

ಇನಿಸಾನುಂ = (ಅ) ಒಂದಿಷ್ಟೂ, ಸ್ವಲ್ಪವೂ ೧೧-೧೮೬ (ಗ)

ಇದಿರ್ಚು = (ಕ್ರಿ) ಎದುರಿಸು, ಪ್ರತಿಭಟಿಸು ೯-೮೯

ಇದಿರಾಂಪವರ್ = ಎದುರಿಸಿ ನಿಲ್ಲುವವರು ೪-೪೨

ಇಂದಗಿ = (ನಾ) ಇಂದ್ರಜಿತು, ರಾವಣನ ಮಗ ೧೦-೧೫೧, ೧೧-೧೩೦(ಗ)

ಇಂದುಪ್ರಭೆ = (ನಾ) ಚಂದ್ರನ ಕಾಂತಿ, ಬೆಳುದಿಂಗಳು ೯-೨೭

ಇಂದ್ರಸಿಂಧುರ = (ನಾ) ಐರಾವತ ೯-೧೭೬

ಇಂಬುಕೈ = (ಕ್ರಿ) ಅವಕಾಶ ಕಲ್ಪಿಸು, ಅನುಕೂಲ ಮಾಡಿಕೊಡು ೧೪-೧೯೩.

ಇನ = (ನಾ) ಸೂರ್ಯ ೧-೮೦, ೯-೭೪

ಇನಿವಿಲ್ = (ನಾ) ಕಬ್ಬಿನ ಬಿಲ್ಲು ೧-೧೬

ಇರ್ಕಡಿ = (ನಾ) ಎರಡು ಭಾಗ ೩-೫೫

ಇರ್ಮೆ = (ಅ) ಎರಡು ಸಲ ೧೬-೧೧

ಇರ್ವಲ = (ನಾ) ಇಬ್ಬದಿಯ ಸೈನ್ಯ ೧೦-೨೧

ಇರಿಸೆ = (ದ್ವ.ನಾ.) ಈರ್ಷೆ ೩-೧೪೮

ಇಱ್ = (ಕ್ರಿ) ಕಡಿ. ಚುಚ್ಚು ೧೧-೧೪೯

ಇಱ್‌ವಿಟ್ಟಿ = (ನಾ) ಬಿಟ್ಟಿಯ ಕೆಲಸ, ಊಳಿಗ ೮-೨೬, ೧೨-೩೯

ಇಱ್‌ವಿಡು = (ಕ್ರಿ) ಚುಚ್ಚುವಂತೆ ಬಾಣಬಿಡು ೯-೧೮೫

ಇಷು = (ನಾ) ಬಾಣ ೧೦-೧೮

ಇಸು = (ಕ್ರಿ) ಬಾಣಬಿಡು,ಎಸೆ ೯-೧೨೬ (ಗ), ೯-೧೬೭

ಇಸುವೆಸ = (ನಾ) ಬಾಣಪ್ರಯೋಗಕ್ಕೆ ಆಜ್ಞೆ ೯-೧೬೭

ಇಳಾ = (ನಾ) ಭೂಮಿ ೧೧-೯

ಇಳಾತಳ = (ನಾ) ನೆಲ, ಭೂಮಿ ೯-೧೦೪

ಇೞ್ಕೈ = (ಕ್ರಿ) ಹೀಯಾಳಿಸು, ತಿರಸ್ಕರಿಸು ೧-೧೪, ೧೧-೧೭೧, ೧೬-೨೬

ಇೞ್ಕುಳಿಗೊಳ್ = (ಕ್ರಿ) ಆಕರ್ಷಿಸು, ಸೆಳೆ ೧೬-೭೫

ಇಕ್ಷು = (ನಾ) ಕಬ್ಬು ೧-೮೪

## ಈ

ಈಕ್ಷಣ = (ನಾ) ಕಣ್ಣು ೯-೧೨೦, ೧೨-೪೨

ಈಟ್ = (ಕ್ರಿ) ಎಳೆ, ಸೆಳೆ ೧೦-೧೨೫

ಈಟ್ಬು = (ಅ) ಜಗ್ಗಿ ೧೪-೧೦೩

ಈೞ್ಕುಳಿಗೊಳ್ = (ಕ್ರಿ) ಸೆಳೆ, ಜಗ್ಗು, ಆಕರ್ಷಿಸು ೧೪-೧೪೩

## ಉ

ಉಕ್ಕೆವ = (ನಾ) ಠಕ್ಕುತನ, ಮೋಸ ೯-೧೮೫

ಉಗಿ = (ಕ್ರಿ) ಬಿಸುಡು ೧೩-೧೬; ಅಡಗು, ಇಲ್ಲದಂತಾಗು ೧೦-೭೮

ಉಗು = (ಕ್ರಿ) ಹುಟ್ಟು, ಹೊರಹೊಮ್ಮು, ಉಂಟಾಗು ೯-೧೦೭, ೧೩-೭೬

ಉಚ್ಚಳಿಸು = (ಕ್ರಿ) ನಟ್ಟು ಪಾರಾಗು ೧೨-೮೭

ಉಚ್ಛ್ವಾಸ = (ನಾ) ಒಂದು ಕಾಲದ ಪರಿಮಿತಿ ೧-೪೯

ಉಡಿ = (ಕ್ರಿ) ಮುರಿ ೯-೧೨೮, ೯-೧೭೬, ೧೦-೧೮೩ (ಗ)

ಉಡುಪತಿ = (ನಾ) ನಕ್ಷತ್ರಗಳ ಒಡೆಯ-ಚಂದ್ರ ೧-೭೯

ಉಡೆನೂಲ್ = (ನಾ) ಕಟಿಸೂತ್ರ, ಮೇಖಲೆ ೧೨-೨೭

ಉಂಡಿಗೆ = (ನಾ) ಮುದ್ರೆ, ಅಚ್ಚು ೧೧-೩೫

ಉಣ್ಮು = (ಕ್ರಿ) ಹೊರಬೀಳು, ಹುಟ್ಟು, ಉಗಮ ಹೊಂದು ೧೧-೧೩, ೧೬-೯೩

ಉತ್ಕಂಠ = (ವಿ) ಲವಲವಿಕೆಯಿಂದ ಕೂಡಿದ, ಆತುರನಾದ ೧೦-೧೧೧, ೧೨-೬೫

ಉತ್ಕಳಿಕಾ = (ನಾ) ಅರೆ ಅರಳಿದ ಮೊಗ್ಗೆ ೭-೧೦೬

ಉತ್ತಂಸ = (ನಾ) ಶಿರೋಭೂಷಣ, ಕಿರೀಟ ೧-೧, ೬-೧೭೫ (ಗ)

ಉತ್ತರಲಿತ = (ವಿ) ತುಂಬ ಚಂಚಲವಾದ ೧೦-೫೬

ಉತ್ತರಿಸು = (ಕ್ರಿ) ದಾಟು, ದಂಡೆಗೆ ತಲ್ಪು ೯-೧೬ (ಗ)

ಉತ್ಸಂಗ = (ನಾ) ತೊಡೆ, ೩-೭೯

ಉತ್ಸರ್ಪಣ = (ನಾ) ಜೈನಪರಿಭಾಷೆಯಂತೆ ಕಾಲಚಕ್ರದ ಉನ್ನತ ಸ್ಥಿತಿ ೧-೪೫ (ಗ)
ಉತ್ತಾನ = (ವಿ) ತೆರೆತೆರೆಯಾಗಿ ಹರಡಿದ ೧೦-೧೧೦; ಏಳುವಿಕೆ ೧೧-೧೮೬
ಉತ್ತಾನಪಾದ = (ನಾ) ಪಾದಗಳಂತೆ ಕಾಣುವ ಕಿರಣಗಳನ್ನು ಮೇಲೆ ಮಾಡಿದವ, ಪಶ್ಚಿಮದ ಸೂರ್ಯ ೭-೩
ಉತ್ತಾನಿತ = (ವಿ) ಮುಖ ಮೇಲಕ್ಕೆತ್ತಿದ
ಉತ್ತಾರ = (ನಾ) ಉಚ್ಚಸ್ವರ ೧೧-೧೮೬
ಉತ್ಸೇಧ = (ವಿ) ಉನ್ನತ, ಎತ್ತರ ೧-೮೯ (ಗ), ೧೦-೧೮೬ (ಗ)
ಉಂತೆ = (ಅ) ನಿಷ್ಕಾರಣವಾಗಿ, ಹೇಗೋ ಏನೊ ೨-೬೯, ೧೧-೧೨೬
ಉದ = (ನಾ) ನೀರು ೭-೯೬
ಉದಂಚಿತ = (ವಿ) ಮೇಲಕ್ಕೆತ್ತಿದ, ಎತ್ತರವಾದ, ಶ್ರೇಷ್ಠ ೯-೧೦೬, ೧೧-೨೩, ೧೧-೧೭೩
ಉದ್ಗತಾಂಶು = (ನಾ) ಮೇಲಕ್ಕೇರಿದ ಕಿರಣ ೧೨-೧೦
ಉದ್ಯತ್ = (ವಿ) ಪ್ರಸಿದ್ಧವಾದ, ಶ್ರೇಷ್ಠವಾದ ೧೦-೧೦೨
ಉದ್ಯತ = (ವಿ) ಸಿದ್ಧನಾದ, ತೊಡಗಿದ ೧೦-೧೦, ೧೦-೬೬
ಉದ್ದಾನಿ = (ವಿ) ಶ್ರೇಷ್ಠ ೯-೧೬೫
ಉದ್ಧತ = (ವಿ) ಗರ್ವಿತ, ಹುಂಬ ೧೦-೧೧೬
ಉದ್ಧರಿಸು = (ಕ್ರಿ) ಮೇಲಕ್ಕೆತ್ತು ೧೧-೧೧
ಉದ್ಭಾಸಿ = (ವಿ) ಹೊಳೆಯುವ ೧೧-೪
ಉದ್ಭವ = (ವಿ) ಹುಟ್ಟಿದವ ೧೨-೧೫
ಉದ್ವೃತ್ತ = (ವಿ) ಮೇರೆಮೀರಿ ವರ್ತಿಸುವ, ಸೊಕ್ಕಿನ ೧೦-೭೩ ೧೨-೭೬
ಉದ್ವೃತ್ತತೆ = (ನಾ) ಚಂಡಿತನ, ಹಟ ೧೨-೭೭ (ಗ)
ಉದ್ಗ್ರೀವ = (ವಿ) ಎತ್ತಿದ ಕುತ್ತಿಗೆಯುಳ್ಳ ೧೧-೧೭೪
ಉನ್ನಾದ = (ನಾ) ಉಚ್ಚಸ್ವರ ೧೬-೪೮
ಉನ್ಮಾದ = ಹುಚ್ಚು ೯-೧೪೮
ಉನ್ಮೀಲನ = (ನಾ) ಅರಳಿಕೆ ೧೦-೮೩
ಉನ್ಮೀಲಿಸು = (ಕ್ರಿ) ಹೆಚ್ಚಾಗು, ಅತಿಯಾಗು ೧೦-೧೩೫
ಉನ್ಮುಖ = (ವಿ) ಮೇಲೆ ಮುಖಮಾಡಿದ ೧೨-೨ (ಗ) (ನಾ) ದುಷ್ಟ, ಉದ್ದಾಮ ೯-೧೦೨
ಉಪಕಂಠ = (ಅ) ಸಮೀಪ ೧೨-೩೬
ಉಪಘಾತ = (ನಾ) ಕೊಲೆ, ವಧೆ ೧೦-೯೬ (ಗ)
ಉಪಚಯ = (ನಾ) ಪ್ರಗತಿ, ಹೆಚ್ಚಳ ೧೬-೨ (ಗ)
ಉಪತ್ಯಕ = (ನಾ) ಪರ್ವತ ಸಮೀಪದ ಭೂಮಿ ೬-೧೫೪
ಉಪದಂಶ = (ನಾ) ನಂಜಿಕೊಳ್ಳುವ ಪದಾರ್ಥ ೧೨-೨ (ಗ), ೧೬-೯೧
ಉಪನತ = (ವಿ) ಶರಣಾಗತ ೧೨-೪೦
ಉಪರಾಗ = (ನಾ) ಗ್ರಹಣ ೧೩-೬೨
ಉಪ್ಪವಡಿಸು = (ಕ್ರಿ) ಹಾಸಿಗೆಯಿಂದ ಏಳು ೧೦-೧೩೯ (ಗ)
ಉಪಶಮ = (ನಾ) ಶಾಂತಿ, ಸಮಾಧಾನ ೪-೧೮
ಉಪಶಾಂತ ಚೇತಸ = (ವಿ) ಪ್ರಶಾಂತವಾದ ಚಿತ್ತವುಳ್ಳ ೯-೩೬
ಉಪಸರ್ಗ = (ನಾ) ವಿಪ್ಲವ, ಪಿಡುಗು, ಆಪತ್ತು ೪-೫, ೯-೩ (ಗ) ೧೦-೧೦೫ (ಗ), ೧೧-೫೯ (ಗ), ೧೧-೧೬೭
ಉಪಹತಿ = (ನಾ) ಗಾಯ, ಪೆಟ್ಟು ೯-೧೯೦
ಉಪಾಂತ = (ಅ) ಸಮೀಪ, ಹತ್ತಿರ ೧೩-೭, ೧೧-೧೬೦
ಉಪಾದೇಯ = (ನಾ) ಅಂಗೀಕರಿಸತಕ್ಕುದು ೬-೧೨೭
ಉಪಾಯನ = (ನಾ) ಕಾಣಿಕೆ ೧೦-೧೧೩ (ಗ), ೧೧-೩೪ (ಗ)
ಉಪಾರ್ಜನೆ (ನಾ) ಸಂಪಾದನೆ, ಗಳಿಕೆ ೯-೧
ಉಪಾಶ್ರಯ = (ವಿ) ಆಧಾರ, ಅವಲಂಬನೆ, ಆಶ್ರಯ ೩-೫, ೧೨-೧೭೨
ಉಪೇಂದ್ರ = (ನಾ) ವಿಷ್ಣು (ಇಲ್ಲಿ ಲಕ್ಷ್ಮಣ) ೧೪-೧೯ (ಗ)
ಉಬ್ಬರ = (ವಿ) ಹೆಚ್ಚಳ, ಆಧಿಕ್ಯ ೧೦-೮೫
ಉಬ್ಬೆಗ (ದ್ಭ.ನಾ.) ಉದ್ವೇಗ, ಚಿಂತೆ ಕಳವಳ

೯-೪೦, ೯-೧೧೭ (ಗ)
೧೦-೮೫, ೧೬-೭೦ (ಗ)
ಉಮ್ಮಚ್ಚ = (ಧ್ವ.ನಾ.) ಉನ್ಮತ್ತ, ಬುದ್ಧಿಭ್ರಮೆ ೬-೧೦೦
ಉಮ್ಮಳ = (ನಾ) ದುಃಖ, ಸಂತಾಪ, ಚಿಂತೆ ೧-೮೧, ೯-೧೦೬, ೧೦-೯
ಉಯ್ = (ಕ್ರಿ) ಒಯ್ಯಿ, ತೆಗೆದುಕೊಂಡು ಹೋಗು ೯-೫೫, ೧೧-೪೪
ಉರ್ಕು = (ಕ್ರಿ) ಉದ್ಧಟನಾಗು ೧೧-೨೩
ಉರ್ಚು = (ಕ್ರಿ) ನೆಟ್ಟು ಪಾರಾಗಿ ಹೋಗು. ಆಕರ್ಷಿಸು ೧೬-೧೬, ೯-೬೬, ೧೦-೧೯೧
ಉರ್ವರಾ = (ನಾ) ಭೂಮಿ ೯-೫೯, ೧೩-೧೯
ಉರ್ವಿ = (ನಾ) ಭೂಮಿ ೧೧-೨
ಉರ್ವೀಜ = (ನಾ) ವೃಕ್ಷ, ೧೧-೧೩೬
ಉರ್ವೀರುಹ = (ನಾ) ಗಿಡ, ಮರ ೨-೧೬
ಉರವಣಿಸು = (ಕ್ರಿ) ಉಪದ್ರವ ಕೊಡು, ಉದ್ರೇಕಗೊಳ್ಳು ೧೩-೩೬
ಉರವಣೆ = (ನಾ) ಉದ್ಧಟತನ, ಔದ್ಧತ್ಯ ೧-೨೭, ೧೦-೨೩
ಉರುಪಿಡಿ = (ಕ್ರಿ) ಉರಿಯಿಂದ ತುಂಬು, ಸುಡು ೯-೧೩
ಉಱದೆ = (ಅ) ರಭಸದಿಂದ. ವೇಗವಾಗಿ ೧೩-೧೨, ೧೪-೮೮
ಉಲಿ = (ನಾ) ಧ್ವನಿ ೧೨-೪೪ (ಕ್ರಿ) ಕೂಗು, ಧ್ವನಿ ಮಾಡು
ಉಲಿಪು = (ನಾ) ಸದ್ದು, ಸಪ್ಪುಳ ೧೨-೮೦
ಉಸಿರ್‌ಪಿಂಗು = (ಕ್ರಿ) ಉಸಿರಾಟ ನಿಂತುಹೋಗು ೧೦-೧೦೪ (ಗ)
ಉಳ್ಕ = (ನಾ) ಕೊಳ್ಳಿ, ಉರಿಯುವ ಕೊಳ್ಳಿ ೪-೬೦
ಉಳ್ಳಲರ್ = (ನಾ) ಅರ್ಧ ಅರಳಿದ ಹೂವು ೯-೧೧೭
ಉಳ್ಳಳ್ಕು = (ಕ್ರಿ) ಹೆಚ್ಚಾಗಿ ಹೆದರು ೯-೧೮೧
ಉಳ್ಕಾಪಾತ = (ನಾ) ನಕ್ಷತ್ರ ಪತನ ೯-೨೭
ಉಳ್ಕು = (ಕ್ರಿ) ಹೊಳೆ, ಪ್ರಕಾಶಿಸು ೯-೧೨೬
ಉಳ್ಕೊಳ = (ನಾ) ಬಡವಾಗ್ನಿ, ಅಂತರ್‌ವಹ್ನಿ ೧೦-೧೫೭

## ಊ

ಊರ್ಜಿತ = (ನಾ) ಮೇಲ್ಮೆ, ಹೆಚ್ಚಳ ೧೧-೬೪
ಊಡು = (ಕ್ರಿ) ಉಣ್ಣು, ಉಣಿಸು ೧೧-೧೨೭
ಊನ = (ವಿ) ಕಡಮೆ, ಕೊರತೆ ೧-೯೫
ಊಳ್ = (ಕ್ರಿ) ಕೂಗು, ಧ್ವನಿಮಾಡು, ದೂರದಿಂದ ಕರೆ ೧೩-೧೯

## ಋ

ಋಜು = (ವಿ) ನೇರ, ಸರಳ ೯-೭೭
ಋದ್ಧಿ = (ನಾ) ಏಳಿಗೆ, ಕ್ಷೇಮ ೧-೧೨; ಪರಿಪೂರ್ಣತೆ, ಶ್ರೇಯಸ್ಸು ೧೦-೧೭೩ (ಗ) ೧೫-೫೫ (ಗ)
ಋಕ್ಷ = (ನಾ) ಕರಡಿ ೧೦-೮೩

## ಎ

ಎಕ್ಕತುಳ = (ಧ್ವ. ವಿ.) ಏಕತುಲ, ಒಂದೆಸಮ ೯-೧೦೫ ಒಂಟಿಗ ೯-೧೦೫, ೯-೧೮೪
ಎಕ್ಕೆ = (ವಿ) ಒಟ್ಟು, ಒಂದು ೧೩-೨೧
ಎಕ್ಕೆಯಿಂ = (ಅ) ಒಂದುಗೂಡಿ, ಒಟ್ಟಾಗಿ ೭-೧೦೬, ೮-೩೯
ಎಗ್ಗಳ = (ವಿ) ಬಹಳ, ಹೆಚ್ಚು ೧-೬೬
ಎಚ್ಚ = (ಕ್ರಿ) ಬಾಣವನ್ನು ಬಿಟ್ಟ ೩-೫೪
ಎಡ್ಡಂ = (ವಿ) ಸುಂದರ, ಮನೋಹರ ೩-೩೯, ೧೫-೬೬
ಎಡಱ್ = (ಕ್ರಿ) ಮೋಸಮಾಡು, ವಂಚಿಸು ೯-೩೧
ಎಡಱ್ಕೊತ್ತು = (ಕ್ರಿ) ವಿಘ್ನವನ್ನುಂಟುಮಾಡು, ಅಡ್ಡಿಮಾಡು ೧೩-೩೮
ಎಡೆ = (ನಾ) ಅವಕಾಶ, ಸ್ಥಳ ೯-೬೦, ೧೦-೨೧೫; (ಅ) ನಡುವೆ ೧೦-೧೭೧
ಎಡೆವೊಗು = (ಕ್ರಿ) ನಡುವೆ ಪ್ರವೇಶಿಸು, ಮಧ್ಯಸ್ಥನಾಗು ೧೨-೭೨ (ಗ)
ಎಣೆ = (ವಿ) ಸಮಾನ ೧-೨೬
ಎತ್ತಾನುಂ = (ಅ) ಎಲ್ಲಿಯಾದರೂ, ಹೇಗಾದರೂ

೧೪-೧೪೪
ಎಂತಾನುಂ = (ಅ) ಹೇಗೊ ಏನೊ, ಹೇಗಾದರು ೯-೮೪
ಎತ್ತಿಸು = (ಕ್ರಿ) ರಚಿಸು, ನಿರ್ಮಿಸು, ಸ್ಥಾಪಿಸು ೧೦-೧೭೯ (ಗ)
ಎನಸುಂ = (ಅ) ಎಷ್ಟೊ ೯-೧೦೭, ೧೧-೧೨೪
ಎನ್ನರ್ = (ವಿ) ನನ್ನವರು ೯-೧೫೫
ಎನ್ನ = (ಅ) ಎಂತಹದು ೧೧-೧೬೭
ಎನ್ನರುಮಂ = (ಅ) ಎಂತಹರನ್ನಾದರು ೧೦-೧೯೩
ಎಮೆ = (ನಾ) ಎವೆ (ಕಣ್ಣರೆಪ್ಪೆಯ ಕೂದಲು) ೧೧-೧೮೪, ೧೫-೪೫
ಎಯ್ದು = (ಕ್ರಿ) ಹೊಂದು, ಸಮೀಪಿಸು ೧-೧೨೬, ೧೦-೧೫೫
ಎಯ್ದುವರು = (ಕ್ರಿ) ಹತ್ತಿರ ಬರು ೯-೧೫೦ (ಗ)
ಎರ್ದೆಗೆಡು = (ಕ್ರಿ) ಧೈರ್ಯಗುಂದು, ಹೆದರು ೯-೧೦೭
ಎರ್ದೆವಟಿಲ್ = (ನಾ) ಹೃದಯದ ದುಃಖ ೧೨-೮೬
ಎರೆ = (ಕಿ) ಬೇಡು, ಯಾಚಿಸು, ಬಿನ್ನವಿಸು ೧೨-೭೯
(ನಾ) ಕ್ಷುದ್ರ ಪ್ರಾಣಿಗಳಿಗೆ ಹಾಕುವ ಆಹಾರ ೧೦-೯
ಎಱಂಕೆ = (ನಾ) ರೆಕ್ಕೆ, ಪಕ್ಕ ೪-೮೭, ೯-೧೦೪
ಎಱಕೆ = (ನಾ) ರೆಕ್ಕೆ, ಪಕ್ಕ ೯-೧೪೭
ಎಱಗಿಸು = (ಕ್ರಿ) ಎರಕಹೊಯ್ ೧೨-೧೨
ಎಱಗಿಸು = (ಕ್ರಿ) ತಲೆಬಾಗಿಸಿಕೊಳ್ಳು, ನಮಸ್ಕರಿಸಿಕೊಳ್ಳು ೧-೧೭; ಮನವಲಿಸು ೯-೧೮೦
ಎಱಗು = (ಕ್ರಿ) ಕೆಲಸಕ್ಕೆ ತೊಡಗು, ಪ್ರವೃತ್ತನಾಗು ೯-೯೧
ಎಱೆಯ = (ನಾ) ಒಡೆಯ, ಪತಿ ೧೦-೮
ಎಱೆವೆಟ್ಟು = (ನಾ) ಆಶ್ರಯ, ಅವಕಾಶ ೪-೪೧, ೧೧-೧೩೯
ಎಲರ್ = (ನಾ) ಗಾಳಿ ೯-೧೧೧, ೯-೧೫೧, ೧೦-೮೦
ಎಲೆಯಿಕ್ಕು = (ಕ್ರಿ) ಎಲೆಗಳನ್ನು ಬಿಡು ೧೩-೪೬
ಎಸಕ = (ನಾ) ಕರ್ಮ, ಕಾರ್ಯ ೯-೯೬,
೧೧-೪೨
ಎಳದು = (ವಿ) ಚಂಚಲ ೯-೮೬ (ಗ)
ಎಳಲಿಡು = (ಕ್ರಿ) ನೇತುಹಾಕು, ಇಳಿಬಿಡು ೧-೧೨೭
ಎಳಲವಿಡು = (ಕ್ರಿ) ಜೋಲು ಬಿಡು, ಇಳಿಯೆಬಿಡು ೧೫-೩೧ (ಗ)
ಎಳವಸಿಱ್ (ನಾ) ಗರ್ಭಿಣಿಯ ಪ್ರಾರಂಭದ ಸಮಯ ೧೦-೧೩೩ (ಗ)
ಎಟ್ಟಿರ = (ನಾ) ಎತ್ತರ, ಉನ್ನತ ಸ್ಥಾನ ೯-೭೦
ಎಟ್ಟಿಟ್ಟು = (ಕ್ರಿ) ಬೆನ್ನು ಹತ್ತು, ಹಿಂಬಾಲಿಸು ೧೧-೧೨೦, ೧೧-೧೪೩
ಎಬ್ಬು = (ಕ್ರಿ) ಎಬ್ಬಿಸು ೯-೧೭೬
ಎಳಸು = (ಕ್ರಿ) ಇಚ್ಛಿಸು, ಆಶೆಪಡು ೯-೧೨೦ (ಗ), ೯-೧೭೧

ಏ

ಏಕವಿಹಾರಿ = (ನಾ) ಒಂಟಿಗನಾಗಿ ತಿರುಗುವವ ೯-೧೧ (ಗ)
ಏರ್ಬೆಸನ = (ನಾ) ಯುದ್ಧದ ಕಾರ್ಯ, ೯-೧೨೩
ಏರಂಡ = (ನಾ) ಔಡಲ ೫-೮೬ (ಗ)
ಏಱಿಸು = (ಕ್ರಿ) ಹೊರಿಸು ೯-೯
ಏವ = (ನಾ) ಹೇವ, ಅಭಿಮಾನ,ಗರ್ವ ೬-೨, ೮-೫೬
ಏವಂ = (ಕ್ರಿ) ಏನು ಮಾಡುವನು ೧೦-೧೮೬
ಏವಮುಂ = (ಅ) ಈರ್ಷೆ, ಛಲ ೧೦-೨೦೯
ಏವಯಿಸು = (ಕ್ರಿ) ಜಿಗುಪ್ಸೆಪಡು
ಏವುದು = (ಕ್ರಿ) ಏನು ಮಾಡುವುದು ೧೧-೪
ಏಸಾಡು = (ಕ್ರಿ) ಬಾಣಬಿಡು, ಬಾಣ ಹೊಡೆ ೯-೬೮, ೧೦-೩೩, ೧೦-೨೦೨, ೧೩-೩೮
ಏಸುವೆರು = (ಕ್ರಿ) ಬಾಣದ ಏಟನ್ನು ತಿನ್ನು, ಗಾಯಗೊಳ್ಳು ೯-೮೩
ಏಳಿದ = (ನಾ) ಅಣಕ, ನಿಂದೆ, ಹಳಿವು ೯-೮೫, ೧೧-೧೦೪
ಏಳಿದರ್ = (ಕ್ರಿ) ಅಣಕಿಸಿದರು, ನಿಂದಿಸಿದರು ೬-೧೭೯

ಏಳಿದನಾಗು = (ಕ್ರಿ) ನಿಂದೆಗೆ ಒಳಗಾಗು ೧೦-೧೩

ಏಳಿದಿಕೆ = (ನಾ) ತಿರಸ್ಕಾರ, ನಿಂದೆ ೧೫-೬೮

ಏಳಿಸು = (ಕ್ರಿ) ನಿಂದಿಸು, ತಿರಸ್ಕರಿಸು, ಅಣಕಿಸು ೯-೫೧ (ಗ) ೯-೧೯೩, ೧೦-೧೧೩, ೧೨-೭೦

ಏಳ್ತರ = (ವಿ) ಎತ್ತರ, ಔನ್ನತ್ಯ ೧೧-೧೬೨

ಐ

ಐತರು = (ಕ್ರಿ) ನಡೆದು ಬರು, ಹತ್ತಿರ ಬರು ೧೧-೭೦

ಐರಾವಣ =(ನಾ) ಐರಾವತ, ಇಂದ್ರನ ಆನೆ ೧೦-೧೩೪ (ಗ)

ಐಸರ = (ನಾ) ಐದು ಎಳೆಗಳ ಸರ, ಕಂಠಿ ೧೧-೧೬೧

ಒ

ಒಕ್ಕಲಿಕ್ಕು = (ಕ್ರಿ) ನಾಶಗೊಳಿಸು, ಕೊಲ್ಲು, ಹಾಳು ಮಾಡು ೧೦-೬೩

ಒಕ್ಕು = (ಕ್ರಿ) ಹಾಕು, ಚೆಲ್ಲು ೯-೪೨

ಒಕ್ಕುಬಿಡು = (ಕ್ರಿ) ತೂರಿಬಿಡು ೧೧-೧೩೬

ಒಗು = (ಕ್ರಿ) ಹುಟ್ಟು, ಹೊರಹೊಮ್ಮು ೧೧-೧೩

ಒಗೆ = (ಕ್ರಿ) ಮೂಡು, ಹುಟ್ಟು ೧೨-೬

ಒಟ್ಟಜೆ = (ನಾ) ಗುಂಪು, ಸಮೂಹ ೪-೧೧೫, ೧೪-೧೬೬

ಒಡ್ಡಣ = (ನಾ) ಸೈನ್ಯವ್ಯೂಹ ೧೦-೧೯, ೧೦-೧೯೯, ೧೪-೯

ಒಡರಿಪು = (ಕ್ರಿ) ಮಾಡು, ಪ್ರಾರಂಭಿಸು ೧೬-೫೫

ಒಡರಿಸು = (ಕ್ರಿ) ತೊಡಗು, ಪ್ರಾರಂಭಿಸು ೧೦-೧೧, ೧೧-೫೯; ಉಂಟಾಗಿಸು, ಒಟ್ಟುಗೂಡು ೯-೭೦, ೪-೧೨೨

ಒಡ್ಡು = (ಕ್ರಿ) ಎದುರಾಗಿ ನಿಲ್ಲು, ಸೈನ್ಯವನ್ನು ನಿಲ್ಲಿಸು ೧೩-೧೨; (ನಾ) ಸೈನ್ಯರಚನೆ, ವ್ಯೂಹ ೧೪-೪ (ಗ) ೯-೨೫೩ (ಗ)

ಒದವು = (ಕ್ರಿ) ಒದಗು, ಪ್ರಾಪ್ತವಾಗು ೧೧-೧೫೪, ೭-೧೦೭

(ನಾ) ಪ್ರಾಪ್ತಿ, ಲಾಭ ೧೨-೨೬

ಒನಲ್ = (ಕ್ರಿ) ಕೆರಳು, ಕೋಪಗೊಳ್ಳು ೯-೧೨೧, ೧೪-೯೧

ಒಪ್ಪವಿಡು = (ಕ್ರಿ) ಮೆರುಗನ್ನು ಕೊಡು, ಒಪ್ಪಹಾಕು ೧೧-೮೮

ಒಯ್ಯನೆ = (ಅ) ಸಮ್ಮನೆ, ಹಠಾತ್ತಾಗಿ ೧೧-೭೭

ಒಯ್ಯನೆ = (ಅ) ಮೆಲ್ಲನೆ, ಸಾವಕಾಶ ೯-೧೧೨

ಒರ್ಚವಡಿಯಕುಪ್ಪಸ= (ನಾ) ಒಳಗೊಂದು ಹೊರಗೊಂದು ಬಗೆಯ ಅಂಗಿ ೪-೧೩

ಒರ್ಪ್ಪು = (ನಾ) ಸಾಮರ್ಥ್ಯ, ಸತ್ವ ೧೦-೫೮

ಒರ್ಮೊದಲ್ = (ಅ) ಒಮ್ಮೆಲೆ ೯-೨೩

ಒಲ್ಗಲಿ = (ನಾ) ಸಮಾನವೀರ, ಮೆಚ್ಚಿದ ವೀರ ೯-೧೨೩

ಒಲ್ಲನು = (ನಾ) ಅಸಮ್ಮತಿಯನ್ನು ೧೦-೨೦೦ (ಗ)

ಒಸೆ = (ಕ್ರಿ) ಮೆಚ್ಚು. ಪ್ರಸನ್ನನಾಗು, ಆನಂದಹೊಂದು ೧೦-೧೫೦ ೧೪-೧

ಒಳ್ಪು = (ನಾ) ಒಳ್ಳೇ ಮಾತು, ಸಭ್ಯತೆ ೧೧-೨೨, ೧೧-೧೩೯

ಒಳ್ಮಾತು = (ನಾ) ಸವಿನುಡಿ, ಒಳ್ಳೆಯ ಮಾತು ೯-೧೫೫

ಒಳಸೋರ್ = (ಕ್ರಿ) ಇಂಗಿಹೋಗು, ೧೧-೫೧ (ಗ)

ಒಳರ್ = (ಕ್ರಿ) ಇರುವರು ೯-೧೯

ಒಳರ್ = (ಕ್ರಿ) ಒರಲು, ದುಃಖದಿಂದ ಕೂಗಿಕೊಳ್ಳು, ಹಂಬಲಿಸು

ಓ

ಓಜೆ = (ನಾ) ಕ್ರಮ, ರೀತಿ ೧-೧೧, ೯-೪೭

ಓಪಳ್ = (ನಾ) ಪ್ರಿಯೆ, ಹೆಂಡತಿ ೯-೯೯, ೯-೧೧೯

ಓರನ್ನ = (ವಿ) ಸರಿಸಮಾನ ೧೧-೧೦೩ (ಗ)

ಓರೊಂದು = (ವಿ) ಒಂದೇ ಒಂದು ೧೦-೧೦೬ (ಗ)

ಓಲಗಿಸು = (ಕ್ರಿ) ಶೃಂಗರಿಸು, ಅಲಂಕರಿಸು ೧೨-೧

ಓವದೆ = (ಅ) ಸಂರಕ್ಷಿಸದೆ, ಉಳಿಸದೆ ೧೧-೪೪

ಓವರಿ = (ನಾ) ಕಿರುಮನೆ, ಕೋಣೆ ೧೦-೮
ಓಸರಿಸು = (ಕ್ರಿ) ಹಿಂಜರಿ, ಪಕ್ಕಕ್ಕೆ ಸರಿಸು ೯-೮೯, ೧೧-೪೨

## ಕ

ಕ್ಷಪಣೆ = (ನಾ) ಅಭಾವ, ಕೊರತೆ ೭-೯೫
ಕ್ಷಪಿತ = (ವಿ) ಸೊರಗಿದ, ಕ್ಷೀಣವಾದ ೧೫-೪೯ (ಗ)
ಕ್ಷಮ = (ವಿ) ಯೋಗ್ಯ, ತಕ್ಕ ೧೧-೩೯, ೧೧-೯೧
ಕ್ಷಿತಿಧರ = (ನಾ) ಪರ್ವತ ೧೦-೨೩೬
ಕ್ಷೋಣಿ = (ನಾ) ಪೃಥ್ವಿ, ಭೂಮಿ ೧-೪೫, ೯-೪೨, ೧೩-೨೨
ಕಂಗಸ = (ಅ) ವಿಶೇಷವಾಗಿ, ಬಹಳ (ಕಸಲ್ ಎಂಬ ಕ್ರಿಯಾಸೂಚಕ ಅನುಕರಣ ಶಬ್ದ) ೯-೫೨
ಕಚ = (ನಾ) ತಲೆಗೂದಲು ೧೦-೯೨ ೧೨-೬೦
ಕಚ್ಚುಟ = (ನಾ) ಕಚ್ಚೆ. ಲಂಗೋಟಿ ೪-೮೧
ಕಂಚುಕ = (ನಾ) ಅಂಗಿ, ಕುಪ್ಪಸ ೨-೨
ಕಂಚುಕಿತ = (ವಿ) ಕವಚವನ್ನು ಧರಿಸಿದ, ಪರೆಬಿಟ್ಟ ೯-೨ (ಗ)
ಕಟಕ = (ನಾ) ಸೈನ್ಯ, ಸಮೂಹ ೧-೧೨
ಕಟಿಸೂತ್ರ = (ನಾ) ಉಡೆದಾರ ೩-೧೯
ಕಟ್ಟುಕಡೆ = (ಕ್ರಿ) ವ್ಯಾಕುಲಗೊಳ್ಳು, ಕಳವಳಿಸು ೯-೧೩೬ (ಗ)
ಕಟ್ಟುಗಡೆ = (ಕ್ರಿ) ಸಂಯಮತಪ್ಪು, ಕಳವಳಗೊಳ್ಳು ೯-೨೫
ಕಡಂಗು = (ನಾ) ರಭಸ, ಉತ್ಸಾಹ ೧೧-೫೧ (ಗ), ೧೧-೭೧
(ಕ್ರಿ) ಬಯಸು, ಇಚ್ಛಿಸು, ಉತ್ಸಾಹಿತನಾಗು ೧೦-೫೬ ೧೦-೧೨೫
ಕಂಟಕ = (ನಾ) ಮುಳ್ಳು, ಆಪತ್ತು ೧-೧೩೦
ಕಡವ = (ಧ್ವ. ನಾ.) ಕದಂಬ, ತಾಳೆಮರ ೧೧-೫೬
ಕಡಿಕಂಡ = (ವಿ) ತುಂಡು-ತುಂಡು ೩-೬೦
ಕಡಿಖಂಡಮಾಗು = (ಕ್ರಿ) ತುಂಡು ತುಂಡಾಗು ೯-೧೨೯
ಕಡುಕೆಯ್ = (ಕ್ರಿ) ಪರಾಕ್ರಮ ತೋರು ೯-೪೯; ಅಬ್ಬರಿಸು, ಉತ್ಸಾಹ ತೋರು ೯-೬೧; ಅವಸರವಮಾಡು, ಏರಿಹೋಗು ೧೧-೫೨ (ಗ)
ಕಡುಗಾಯ್ಪು = (ನಾ) ಅತಿಶಯವಾದ ಕಾವು, ಅಧಿಕ ಕೋಪ ೯-೭೦
ಕಡೆದೋಱು = (ಕ್ರಿ) ಕೊನೆಯನ್ನು ಕಾಣು ೧-೪೨
ಕಡುಪು = (ನಾ) ಉತ್ಸಾಹ ೧೦-೨೨; ರಭಸ ೧೧-೭೮; ಸಾಮರ್ಥ್ಯ, ಆವೇಶ ೧೦-೧೫೮
ಕಡ್ಡೆ = (ವಿ) ತುಂಟೆ, ದುಷ್ಟೆ ೧೨-೬೦
ಕಂಡರಣೆ (ನಾ) ಕೆತ್ತನೆಯ ಕೆಲಸ ೯-೧೫೯
ಕಂಡೂಯನ = (ನಾ) ತುರಿ, ತಿನಿಸು, ತಿಂಡಿ ೧೨-೭೩, ೧೩-೩
ಕಣ್ಣಲೆ = (ಅ) ತೆರೆದ ಕಣ್ಣು ತೆರೆದಂತೆಯ, ಕಣ್ಣಿಗೆ ಕಣ್ಣು ಹಚ್ಚದೆ ೧೩-೯೩
ಕಣ್ಬೇಲಿ = (ನಾ) ನವಿಲುಗರಿ ೪-೧೧೬
ಕಣ್ಬೊನರ್ = (ನಾ) ಕಣ್ಣುಗಳ ಜೊತೆ; ಎರಡು ಕಣ್ಣು ೧೨-೧೪
ಕಣೆ = (ನಾ) ಬಾಣ, ಅಂಬು ೯-೯೧
ಕತಿಪಯ = (ವಿ) ಕೆಲವು, ಹಲವು ೨-೪
ಕದಕ್ಕದಿಸು = (ಕ್ರಿ) ನಡುಗು, ಗದಗದಿಸು ೧೧-೮೮, ೧೨-೨೭
ಕದನಕ್ಷೋಣಿ = (ನಾ) ಯುದ್ಧಭೂಮಿ, ರಣಾಂಗಣ ೧೦-೨೨೬
ಕದಂಪು = (ನಾ) ಕೆನ್ನೆ, ಗಲ್ಲ ೧೪-೧೭೫
ಕದಂಬ = (ನಾ) ಸಮೂಹ, ಗುಂಪು ೧೨-೧೧
ಕದಂಬಕ = (ನಾ) ಹೂಮಾಲೆ ೯-೧೮೧
ಕದುಷ್ಣ = (ವಿ) ಸ್ವಲ್ಪ ಬಿಸಿಯಾದ, ಬೆಚ್ಚಗಿನ ೪-೨೧, ೬-೧೬೧
ಕಂತಿ = (ನಾ) ಜೈನ ಸಂನ್ಯಾಸಿನಿ ೧೬-೩೯ (ಗ)
ಕಂತು = (ನಾ) ಕಾಮ ೯-೩೪ (ಗ)
ಕಂದಳ = (ನಾ) ದೇಟು ೧-೭೨೮; ನಾ: ೧೧-೯
ಕ್ರಂದನ = (ನಾ) ರೋದನ, ಅಳುವಿಕೆ ೯-೧೪೩
ಕಂಬು = (ನಾ) ಶಂಖ ೯-೧೮೬ (ಗ)
ಕನಕಾಚಲ = (ನಾ) ಮೇರು ಪರ್ವತ ೯-೫೧ (ಗ)
ಕನ್ನಡಿಸು = (ಕ್ರಿ) ಪ್ರತಿಬಿಂಬಿಸು, ಸ್ಪಷ್ಟವಾಗಿ ತಿಳಿಸು ೯-೧೯೪, ೧೧-೮೭

ಕನತ್ಕನಕೋಪಲಾಕ್ಷಿ = (ನಾ) ಹೊಳೆಯುವ ಹೊಂಬಣ್ಣದ ರತ್ನದಂತಿರುವ ಕಣ್ಣುಳ್ಳವಳು ೧೪-೫
ಕನಲ್ = (ಕ್ರಿ) ಸಿಟ್ಟಿಗೇಳು, ಕೋಪಿಸು ೯-೫೨, ೯-೯೬, ೧೧-೧೦೪ (ಗ)
ಕನವನಿಪ (ವಿ) ಬಡಬಡಿಸುವ ೬-೯೮
ಕನ್ನೆಮಾಡ = (ನಾ) ಅಂತಃಪುರ, ರಾಣಿವಾಸ ೧೦-೧೦೯ (ಗ)
ಕನ್ನೈದಿಲು = (ನಾ) ನೀಲಕಮಲ, ಇಂದೀವರ ೯-೧೧೮
ಕರ್ಕೇತನ = ಒಂದು ಪ್ರಕಾರದ ಮಿಶ್ರವರ್ಣದ ರತ್ನ ೫-೩೪ (ಗ)
ಕರ್ಚು = (ಕ್ರಿ) ತೊಳೆ ೧-೧೧೫
ಕರ್ಣೇಜಪ = (ನಾ) ಚಾಡಿಕೋರ, ಕೊಂಡೆಗಾರ ೯-೧೦
ಕರ್ಣತಾಳ = (ನಾ) ಆನೆಯ ಕಿವಿ ೧೦-೧೫೯
ಕರ್ಣಿಕಾರ = (ನಾ) ಬೆಟ್ಟದಾವರೆ ೩-೬೧, ೧೨-೪, ೧೬-೯೧
ಕರ್ದಮ = (ನಾ) ಕೆಸರು, ಲೇಪನದ ಅಣ್ಪು ೧-೧೪, ೩-೭೬, ೯-೧೬೮
ಕರ್ಪುಗೊಳ್ಳು = (ಕ್ರಿ) ಕಲಂಕಿತವಾಗು, ಕಿಲುಬು ೧೨-೫೬
ಕರ್ವು = (ನಾ) ಕಬ್ಬು ೧೧-೧೦೪
ಕರ್ವುರ = (ದ್ಭ.ನಾ.) ಕರ್ಬುರ, ಮಿಶ್ರಿತ ವರ್ಣ
ಕರಗ = (ನಾ) ಪಾತ್ರೆ, ಮಡಕೆ ೧೧-೯೭
ಕರಟಿ = (ನಾ) ಆನೆ ೬-೧೪೮
ಕರಂಡಕ = (ನಾ) ಕರಡಿಗೆ, ಬುಟ್ಟಿ ೧೨-೨ (ಗ)
ಕರಣೀಯ = (ವಿ) ಮಾಡಬೇಕಾದುದು ೪-೧೦೧
ಕರಭ = (ನಾ) ಮರಿ ಆನೆ ೪-೧೦೯
ಕರವಾಳ = (ನಾ) ಖಡ್ಗ, ಕತ್ತಿ ೯-೩೪
ಕರಿಂಕು = (ವಿ) ಕರುಕು ೧-೧೩೯
ಕರುತ್ತು = (ಅ) ಕುರಿತು, ಉದೇಶಿಸಿ ೧೩-೯೦
ಕರುಮಾಡು = (ನಾ) ಉಪ್ಪರಿಗೆ, ನೆಲೆಮನೆ, ಸೌಧ ೧-೧೨೫, ೩-೧೭,
೯-೧೫೧ (ಗ)
ಕರುವಿಡಿಸು = (ಕ್ರಿ) ಎರಕಹೊಯ್ಯು, ಲೆಪ್ಪವಿಡು ೩-೨೫
ಕರೆ = (ನಾ) ದಂಡೆ, ಅಂಚು, ೯-೩೦, ೯-೧೦೭
ಕರೆಗಣ್ಮು = (ಕ್ರಿ) ದಂಡೆಗೆ ಮುಟ್ಟು,ಉಕ್ಕೇರು ೧೬-೯೦
ಕರುಷ = (ದ್ಭ.ನಾ.) ಕರ್ಷ, ಸೆಳೆತ, ಜಗ್ಗುವಿಕೆ ೭-೯೩
ಕರೇಣು = (ನಾ) ಹೆಣ್ಣಾನೆ ೧-೧೨೮
ಕಱಂಗು = (ಕ್ರಿ) ಕಪ್ಪಾಗು, ಕಂದಿಹೋಗು ೭-೧೧೪, ೯-೭೧, ೧೦-೮೦
ಕಱುತ್ತು = (ಅ) ಕುರಿತು, ಉದ್ದೇಶಿಸಿ ೯-೧೦೪, ೧೪-೧೩೩
ಕಱಿ = (ಕ್ರಿ) ಸುರಿಸು ೧೨-೭೨
ಕಲ್ಪಪಾದಪ = (ನಾ) ಸ್ವರ್ಗದ ಮರ, ಕಲ್ಪವೃಕ್ಷ ೧೪-೧
ಕಲತ್ರ = (ನಾ) ಪತ್ನಿ, ಹೆಂಡತಿ ೧೨-೫೬
ಕಲಧೌತ = (ನಾ) ಬೆಳ್ಳಿ, ಬಂಗಾರ ೧೨-೨ (ಗ)
ಕಲ್ಪಾಂತ ಕೃಶಾನು = (ನಾ) ಪ್ರಳಯಕಾಲದ ಬೆಂಕಿ ೪-೫೪
ಕಲುಂಬು = (ನಾ) ಹೊಲಸು, ಕೊಳೆ,ಕಲಂಕ ೧೨-೫೬
ಕಲುಷ = (ನಾ) ಪಾಪ, ಕಷ್ಟ ೯-೧೧ (ಗ), ೧೦-೨೦೩, ೧೧-೧೦೫
ಕಲ್ಲೋಲ = (ನಾ) ತೆರೆ, ತರಂಗ ೭-೧೧೭
ಕವರ್ತೆಗೊಂಡು = (ಕ್ರಿ) ಸುಲಿಗೆಯನ್ನು ತೆಗೆದುಕೊಂಡು ೪-೩೮
ಕವ್ವರೆ = (ನಾ) ಸಡಗರ, ಸಂಭ್ರಮ ೬-೧೭೭ (ಗ)
ಕವಲ್ = (ಕ್ರಿ) ಟಿಸಿಲೊಡೆ ೯-೧೬
ಕವಾಟ = (ನಾ) ಬಾಗಿಲು, ಕದ ೧೨-೭೧
ಕವಿಲ್ = (ವಿ) ಕಪಿಲ ವರ್ಣ, ಬಿಳಿಗೆಂದು ಬಣ್ಣ ೧೩-೪೬
ಕವಿತರು = (ಕ್ರಿ) ಮುಸುಕಿ ಬರು, ಏರಿಬರು ೯-೧೫೩
ಕಷಾಯ = (ವಿ) ಒಗರು, ಕಾವಿಬಣ್ಣ ೭-೨೦
ಕಸವರ = (ನಾ) ಬಂಗಾರ, ಚಿನ್ನ ೧೦-೯೩ (ಗ)
ಕಳ = (ದ್ಭ.ವಿ) ಕಲ, ಇಂಪಾದ, ಮಧುರವಾದ ೫-೬೩
ಕಳಕಂಠ = (ನಾ) ಕೋಗಿಲೆ ೧-೧೦೫, ೧೦-೪೩

ಕಳತ್ರ = (ನಾ) ಹೆಂಡತಿ ೯-೯
ಕಳಮ = (ನಾ) ಬತ್ತ, ನೆಲ್ಲು ೧೨-೨ (ಗ)
ಕಳರುತಿ = (ನಾ) ಮಧುರವಾದ ಧ್ವನಿ ೯-೧೨೦
ಕಳಲ್ಚು = (ಕ್ರಿ) ಅಗಲಿಸು, ಕಳೆ ೧೩-೩
ಕಳಾಧಾರ = (ನಾ) ಚಂದ್ರ ೨-೬೫
ಕಳಾಪಿನಿ = (ನಾ) ಗರಿಗಳುಳ್ಳದ್ದು, ನವಿಲು ೧೨-೨೦
ಕಳಿಕೆ = (ನಾ) ಮೊಗ್ಗೆ ೧೦-೪೩, ೧೨-೮೮
ಕಳೆ = (ಕ್ರಿ) ಇಲ್ಲದಂತೆ ಮಾಡು, ನಾಶಮಾಡು ೧೨-೭೪
ಕಳೇವರ = (ನಾ) ದೇಹ, ಶರೀರ ೧೧-೧೧೯
ಕಟಿಲ್ = (ಅ) ಕದಿಯಲು ೧೫-೪೭ (ಗ)
ಕಟಿಲ್ಚು = (ಕ್ರಿ) ಅಗಲಿಸು, ಬೇರೆ ಮಾಡು ೧೦-೫೬
ಕಟಿಲೆ = (ನಾ) ಕೋಮಲವಾದ ಎಲೆ, ಚಿಗುರೆಲೆ ೭-೮೬
ಕಟಿ = (ಕ್ರಿ) ತ್ಯಜಿಸು, ಸಾಯಿ ೧೦-೯೬; ನಾಶವಾಗು, ಇಲ್ಲವಾಗು ೯-೧೯೫
ಕಟಿಪೂ = (ನಾ) ಬಾಡಿದ ಹೂ ೩-೪
ಕ್ರಕಚ = (ನಾ) ಕರಗಸ ೭-೨
ಕ್ರಮವಿಕ್ಷೇಪ = (ನಾ) ಅಡಿಮುಂದಿಟ್ಟು ನಡೆವುದು ೭-೧೦೮

## ಕಾ

ಕಾಕ = (ನಾ) ಕಾಗೆ ೪-೫೫
ಕಾಶ = (ನಾ) ಕಾಚಿಯ ಹುಲ್ಲು ೭-೧೬೯
ಕಾಜು = (ನಾ) ಕಾಚು ೭-೯೭
ಕಾಂಚನ = (ನಾ) ಬಂಗಾರ ೯-೫೨
ಕಾಂಚಿ = (ನಾ) ನಡುಪಟ್ಟಿ, ಡಾಬು, ಮೇಖಲೆ ೧೦-೧೧೦
ಕಾಂಡಪಟ = (ನಾ) ತೆರೆ, ಪರದೆ ೧೬-೬೮
ಕಾಂತ = (ವಿ) ಹೊಳೆಯುವ, ಮಿರುಗುವ ೧೨-೨೭
ಕಾತರ = (ವಿ) ಅಂಜುಗುಳಿ ೧೦-೧೨೫
ಕಾಪಟಿ = (ಕ್ರಿ) ರಕ್ಷಣೆ ಇಲ್ಲದಂತೆ ಮಾಡು ೯-೧೦
ಕಾಪು = (ನಾ) ಕಾವಲು, ರಕ್ಷಣೆ ೧೨-೩೧ (ಗ)
ಕಾಪುವೇಟ್ = (ಕ್ರಿ) ರಕ್ಷಿಸೆಂದು ವಿಧಿಸು ೯-೧೦೩
ಕಾಯ್ = (ಕಿ) ಸಿಟ್ಟಿಗೇಳು ೯-೭೨
ಕಾರ್ = (ನಾ) ಮಳೆ ೨-೫೨
ಕಾರ್ತಸ್ವರ = (ನಾ) ಚಿನ್ನ, ಬಂಗಾರ
ಕಾಳ್ಪುರ = (ನಾ) ಕಾಡಿನಲ್ಲಿಯ ಸಣ್ಣ ಪ್ರವಾಹ ೧-೧೭
ಕಾರ್ಬೊನ್ನು = (ನಾ) ಕಬ್ಬಿಣ ೪-೧೨
ಕಾರಿರುಳು = (ನಾ) ಮಳೆಗಾಲದ ರಾತ್ರಿ ೯-೭೧
ಕಾಸಾರ = (ನಾ) ಕೆರೆ, ಸರೋವರ ೯-೧೨೦ (ಗ), ೯-೧೩೭
ಕಾಪಳ = (ವಿ) ಕಪಳೆಯಿಂದ ಹೊರಟ ೧೩-೨
ಕಾಳಾಗರು = (ನಾ) ಒಂದು ಸುಗಂಧದ್ರವ್ಯ ೧೨-೨ (ಗ)
ಕಾಳಾಯಸ = (ನಾ) ಕಬ್ಬಿಣ ೧-೩೭
ಕಾಳಾಹಿ = (ನಾ) ಕೃಷ್ಣಸರ್ಪ, ಕರಿನಾಗರ ೧೨-೫೦
ಕಾಂಸ್ಯ = (ನಾ) ಕಂಚು ೧೧-೧೫೨
ಕಾಶ್ಮೀರ = (ನಾ) ಕೇಸರಿ ೧೨-೫
ಕಾಲ್ಗರ್ಚು = (ಕ್ರಿ) ಕಾಲುತೊಳೆ ೧೫-೯

## ಕಿ–ಕೀ

ಕಿಡು = (ಕ್ರಿ) ನಾಶವಾಗು, ಅಳಿ ೧-೨
ಕಿಣ = (ನಾ) ದಡ್ಡು, ಗಾಯ ೭-೪೩, ೧೨-೧೬ (ಗ)
ಕಿತವ = (ನಾ) ಜೂಜುಗಾರ, ಮೋಸಗಾರ ೧೫-೪೭
ಕಿತ್ತಡ = (ವಿ) ಕೀಳುತರದ, ವ್ಯರ್ಥ ೭-೮೧
ಕಿಂಕಿಣಿ = (ನಾ) ಕಿರುಗಂಟೆ ೩-೧೨೬
ಕಿಂಕಿರಾತ = (ನಾ) ಗೋರಂಟೆ ಗಿಡ ೪-೪೯
ಕಿಂಪಾಕ (ನಾ) ಕಾಳಜೀರಿಗೆ, ಕಾಂಜೀರಕ ೯-೧೧ (ಗ)
ಕಿವುಡುವೀಳ್ = (ಕ್ರಿ) ಕಿವುಡಾಗು ೧೦-೧೫೭
ಕಿಸಲಯ = (ನಾ) ಎಳದಳಿರು, ಚಿಗುರು, ಪಲ್ಲವ ೧೧-೮೬, ೧೬-೯೫
ಕಿಸು = (ವಿ) ಕೆಂಪು ೯-೭೧
ಕಿಸುಗಣ್ಚು = (ಕ್ರಿ) ಕಣ್ಣು ಕೆಂಪಗೆ ಮಾಡು,

ಕೋಪದಿಂದ ನೋಡು ೧೧-೧೧೫

ಕಿಸುರ್ = (ನಾ) ಮನಸ್ತಾಪ, ಕಲಹ, ಜಗಳ ೯-೨೧

ಕೀನಾಶ =(ನಾ) ಯಮ ೧೧-೧೦೧

ಕೀರು = (ಕ್ರಿ) ಒದರು, ಚೀರು, ಹೆದರಿ ಕೂಗು ೯-೯೫, ೯-೧೪೮; ಕಟ್ಟುಮೀರಿ ನುಗ್ಗು ೧೦-೧೩೫

ಕೀಟ್ = (ನಾ) ಕಡಿವಾಣ ೧೧-೧೧೫, ೪-೧೧೩

ಕೀಟಿಲ್ = (ಅಸ) ಕೀಳುವುದಕ್ಕೆ ೧೧-೧೨೩

ಕೀೞ್ಪಡು = (ಕ್ರಿ) ಪತಿತನಾಗು ೧೪-೧೧

ಕೀೞ್ಮನೆ = (ನಾ) ಕೆಳಮನೆ ೧೧-೧೨೬

## ಕು

ಕುಜ = (ನಾ) ವೃಕ್ಷ, ಮರ, ಗಿಡ ೧೧-೧೨೨

ಕುಂಚ = (ನಾ) ಒಂದು ಬಗೆಯ ಚಾಮರ ೩-೮೧

ಕುಂಜರ = (ನಾ) ಆನೆ ೧೫-೫೧

ಕುಟ್ಮಲ = (ನಾ) ಮೊಗ್ಗೆ ೧೨-೪೭

ಕುಟ್ಮಳಿತ = (ವಿ) ಮುಚ್ಚಿದ, ಮುಗಿದ ೧೨-೧೦ (ಗ)

ಕುಟಿಲ =(ವಿ) ಡೊಂಕು, ವಕ್ರ ೯-೧೨೦ (ಗ), ೧೦-೮೧

ಕುಟಿಳಾಶ್ವ = (ನಾ) ಕೃತಕ ಕುದುರೆ ೪-೧೧೪

ಕುಟ್ಟಿಮ = (ನಾ) ನೆಲಗಟ್ಟು ೩-೧೨೮

ಕುಠಾರ = (ನಾ) ಕೊಡಲಿ ೪-೪೦

ಕುಡುವುರ್ವು = (ನಾ) ಬಾಗಿದ ಹುಬ್ಬು, ಕೊಂಕಿದ ಹುಬ್ಬು ೪-೩೪

ಕುಂಡಲ = (ನಾ) ಕಿವಿಯ ಆಭರಣ ೧೧-೧೬೧

ಕುಂಡಲಿತ = (ವಿ) ವರ್ತುಳಾಕಾರದ, ಸರ್ಪದಂತೆ ಭೀಕರವಾಗಿರುವ, ೯-೬೩ (ಗ)

ಕುತ್ಕೀಲ = (ನಾ) ಪರ್ವತ, ಬೆಟ್ಟ ೧೧-೧೦, ೧೨-೪೫

ಕುಧರ = (ನಾ) ಪರ್ವತ, ಬೆಟ್ಟ ೨-೨೯

ಕುಭೃತ್ = (ನಾ) ಪರ್ವತ, ಬೆಟ್ಟ ೨-೨೦

ಕುಮುದ = (ನಾ) ರಾತ್ರಿಯಲ್ಲಿ ಅರಳುವ ಕಮಲ ೧೧-೧೮೧

ಕುರವ = (ನಾ) ಪ್ರದೇಶ ೧೬-೭೧ (ಗ)

ಕುಲಕ್ಷ್ಮಾಭೃತ್ = (ನಾ) ಕುಲಪರ್ವತ ೧೧-೧೬೮

ಕುಲನಗ = (ನಾ) ಕುಲಪರ್ವತ ೧೧-೮

ಕುವಲಯ = (ನಾ) ನೀಲಕಮಲ ೧೦-೭೯

ಕುಶೇಶಯ = (ನಾ) ಕಮಲ ೧೦-೪

ಕುಸುಮದಾಮ = (ನಾ) ಹೂಮಾಲೆ ೧೨-೧೦ (ಗ)

ಕುಹರ = (ನಾ) ರಂಧ್ರ, ಹೊದರು ೭-೧೩೩, ೯-೧೩೭

ಕುಳಿಕ = (ನಾ) ಉಗ್ರಜಾತಿಯ ಸರ್ಪ ೧೪-೨೭

ಕುಳೀರ = (ನಾ) ಏಡಿ ೧-೩೦, ೭-೯೨

ಕುೞ್ = (ನಾ) ತಗ್ಗು ೧-೮೧ (ಗ)

ಕುೞು = (ನಾ) ಕುಡ, ಕಬ್ಬಿಣದ ಕಂಬಿ ೯-೧೦೧

## ಕೂ

ಕೂಂಕು = (ಕಿ) ತಳ್ಳು, ಒಳಹೊಗಿಸು ೧೦-೨೨೩

ಕೂಟಪಾಕಳ = (ನಾ) ಆನೆಗೆ ಬರುವ ಒಂದು ರೋಗ ೪-೬೬

ಕೂರ್ = (ಕ್ರಿ) ಪ್ರೀತಿಸು ೯-೩೪

ಕೂರ್ಗಣೆ = (ನಾ) ಹದನವಾದ ಬಾಣ ೯-೫೬

ಕೂರ್ಚ = (ನಾ) ಗಡ್ಡ, ಹುಲ್ಲಿನ ಸಿವುಡು ೨-೨

ಕೂರ್ಪು = (ನಾ) ಹದನ ೯-೨೨ (ಗ); ಶೌರ್ಯ, ಪರಾಕ್ರಮ ೭-೫೯

ಕೂರ್ತಿತ್ತು = (ಅ) ಪ್ರೀತಿಯಿಂದ ಕೊಟ್ಟು ೩-೧೩೭

ಕೂರಸಿ = (ನಾ) ಹರಿತವಾದ ಕತ್ತಿ ೧೦-೧೪೨

ಕೂರಿದ = (ವಿ) ಹದನುಗೊಳಿಸಿದ ೧೧-೧೭೬

## ಕೃ

ಕೃತಕ = (ನಾ) ಕಪಟ, ಮೋಸ ೯-೩೬

ಕೃತಕಾಶ್ವ = (ನಾ) ಮೋಸಗಾರಿಕೆಯ ಕುದುರೆ ೪-೧೦೭

ಕೃತಾಂತ = (ನಾ) ಯಮ ೧೦-೨೫ (ಗ)

ಕೃಪಾಣ = (ನಾ) ಖಡ್ಗ ೯-೨೫, ೯-೧೨೯, ೧೦-೧೧೬, ೧೨-೭೨

ಕೃಶಾನು = (ನಾ) ಅಗ್ನಿ ೯-೭೨, ೧೧-೧೫೪

## ಕೆ

ಕೆಂಕ = (ವಿ) ಕೆಂಪು ಬಣ್ಣದವ ೯-೧೨
ಕೆಂಗಱ್ = (ನಾ) ಕೆಂಪು ರೆಕ್ಕೆ ೧೪-೧೦೬
ಕೆಡೆ = (ಕ್ರಿ) ಬೀಳು ೯-೬೭, ೯-೧೦೪, ೯-೧೨೮, ೧೪-೧೪
ಕೆಂಡವಱ್ = (ನಾ) ಬೆಂಕಿಯ ಮಳೆ ೯-೩೨
ಕೆತ್ತಳ್ = (ಕ್ರಿ) ಮುಚ್ಚಿದಳು, ಹೆಣೆದಳು ೧೦-೮
ಕೆತ್ತಿಸು = (ಕ್ರಿ) ಜೋಡಿಸು, ಹೊಂದಿಸು ೧೦-೮೯
ಕೆತ್ತು = (ಕ್ರಿ) ಅದುರು, ಅಲುಗಾಡು ೩-೩೬
ಕೆದಱು = (ಕ್ರಿ) ಹರಡು ೯-೧೨೫
ಕೆಮ್ಮನೆ = (ಅ) ಸುಮ್ಮನೆ, ಮಾತಿಲ್ಲದೆ ೧೬-೪೦
ಕೆಯ್ = (ಕ್ರಿ) ಮಾಡು ೧೧-೫
ಕೆಯ್ಗೆಯ್ = (ಕ್ರಿ) ಕೈಮಾಡು, ಯುದ್ಧಪ್ರಾರಂಭಿಸು ೮-೨೮
ಕೆಯ್ಮಿಗು = (ಕ್ರಿ) ಕೈಮೀರು, ಹೆಚ್ಚಾಗು ೯-೧೪೯
ಕೆಯ್ವಂದ = (ವಿ) ಫಲಿಸಿದ ೩-೬೫
ಕೆಯ್ವೊಲ = (ನಾ) ಚಿಕ್ಕ ತೋಟ, ಉಪವನ ೧-೧೦೭
ಕೆಳರ್ = (ಕ್ರಿ) ಕೆರಳು, ಸಿಟ್ಟಿಗೇಳು ೧೦-೧೩೦, ೧೪-೧೨೮; ಚಾಚು, ನೀಡು ೧೩-೮೫
ಕೆಳವಾಡಿ = (ನಾ) ಒಂದು ಜಾತಿಯ ಕಬ್ಬಿನ ಹೆಸರು ೮-೧೪

## ಕೇ

ಕೇಕರ = (ನಾ) ಕಡೆಗಣ್ಣು ೧೬-೭೮
ಕೇತನ = (ನಾ) ಧ್ವಜ, ನಿಶಾನೆ ೧೧-೧೫೯
ಕೇಯೂರ = (ನಾ) ತೋಳಬಳೆ, ಭುಜ ಕೀರ್ತಿ ೧೦-೬೮
ಕೇರ್ = (ನಾ) ಗೋಡೆ ೫-೧೧೩
ಕೇವಳಬೋಧ = (ನಾ) ಕೇವಲ ಜ್ಞಾನ, ಜೈನ ಪರಿಭಾಷೆಯಂತೆ ಸಂಪೂರ್ಣ ಜ್ಞಾನ ೫-೨, ೧೬-೬೨
ಕೇವಲಿ = (ನಾ) ಕೇವಲಜ್ಞಾನಿ ೧-೮
ಕೇಸಡಿ = (ನಾ) ಕೆಂಬಣ್ಣದ ಪಾದ ೩-೧೧೬, ೧೨-೧೬
ಕೇಸರ = (ನಾ) ಆಯಾಲು, ಕುತ್ತಿಗೆಯ ಮೇಲಿನ ಕೂದಲು ೯-೫೨
ಕೇಸರಿ ಪೀಠ (ನಾ) ಸಿಂಹಾಸನ ೧೨-೧೦
ಕೇಸುರಿ = (ನಾ) ಕೆಂಪು ಬಣ್ಣದ ಉರಿ ೧೧-೫೯, ೧೧-೧೦೭
ಕೇಳೀ = (ನಾ) ಆಟ ೧-೧
ಕೇಳೀಗೃಹ = (ನಾ) ಆಟದ ಮನೆ ೧೧-೧

## ಕೈ

ಕೈ = (ನಾ) ಆನೆಯ ಸೊಂಡಿಲು ೧-೯೫
ಕೈಗಣ್ಮು = (ಕ್ರಿ) ಕೈಗೆ ನಿಲುಕು ೯-೪೫
ಕೈಗೇಱಿವು = (ವಿ) ಅತಿಶಯ, ಬಹಳ ೯-೧೬೦ (ಗ)
ಕೈಗಾಯ್ = (ಕ್ರಿ) ಸಂರಕ್ಷಿಸು, ಕಾಪಾಡು ೯-೮೬
ಕೈಗೊಳಿಸು = (ಕ್ರಿ) ಅಂಗೀಕರಿಸುವಂತೆ ಮಾಡು ೧೧-೨೧
ಕೈತ = (ನಾ) ಕೃತ್ರಿಮ ೭-೨೮, ೧೦-೭
ಕೈತವ = (ನಾ) ಜೂಜುಗಾರಿಕೆ. ಮೋಸ, ಕಪಟ ೬-೧೬೬, ೧೧-೧೨೦ (ಗ)
ಕೈದು = (ನಾ) ಆಯುಧ ೯-೧೩೧
ಕೈದುಗೈ = (ಕ್ರಿ) ಆಯುಧವನ್ನು ಬಳಸು ೧೦-೨೧೮
ಕೂನಿಜೆ = (ಕ್ರಿ) ಕೈಎತ್ತು, ಕೈಚಾಚು ೪-೨೬
ಕೈಪಿಡಿ = (ನಾ) ಕನ್ನಡಿ ೭-೧೦೫ (ಗ)
ಕೈಪೆ = (ವಿ) ಕಹಿ ೭-೧೨೬
ಕೈಮಿಗು = (ಕ್ರಿ) ಮೇರೆ ಮೀರು, ಹೆಚ್ಚಾಗು ೧೨-೨೭
ಕೈಯಾಂತಂ = (ನಾ) ಕೈಯೊಡ್ಡಿದವನು ೧೨-೬೦
ಕೈಯಾನ್ = (ಕ್ರಿ) ಬೇಡು, ಯಾಚಿಸು ೧೦-೭೩
ಕೈರವ = (ನಾ) ಚಂದ್ರಕಮಲ, ರಾತ್ರಿಯಲ್ಲಿ ಅರಳುವ ಕಮಲ ೯-೧೧೮, ೧೦-೯೮
ಕೈವಂದು = (ಅ) ಫಲಬಿಟ್ಟು ೩-೧೩೭
ಕೈವಾರ್ದನಿಲ್ಲ = (ಕ್ರಿ) ಕೈಕೊಳ್ಳಲಿಲ್ಲ ೭-೪೮
ಕೈವಾರ = (ನಾ) ಸ್ತುತಿ, ಹೊಗಳಿಕೆ ೧೨-೫೦
ಕೈಸಾರ್ = (ಕ್ರಿ) ಕೈಗೆ ಬರು, ದೊರಕು, ಸಾಧ್ಯವಾಗು ೯-೧೨೨, ೧೦-೨೩೦

ಕೊ

ಕೊಂಡ = (ದ್ಭ. ನಾ.) ಕುಂಡ, ಅಗ್ನಿಕುಂಡ, ಜಲಕುಂಡ ೧೦-೧೮೩ (ಗ)

ಕೊಂಡುಕೊನೆ = (ಕ್ರಿ) ಎತ್ತಿ ಹೊಗಳು, ಸ್ತುತಿಸು ೧೧-೧೭೦ (ಗ)

ಕೊಂತ = (ದ್ಭ. ನಾ.) ಕುಂತ, ಭಲ್ಲೆಯ, ಬರ್ಜಿ ೧೩-೩೮

ಕೊಂಬು = (ನಾ) ಆನೆಯ ಕೋರೆ ೪-೧೧೬

ಕೊರ್ವು = (ಕ್ರಿ) ಕೊಬ್ಬು, ಸೊಕ್ಕಿಗೆ ಏರು ೧೧-೧೦೩

ಕೊರ (ಜ) ಚಾಡು = (ಕ್ರಿ) ಅಣಕಿಸು, ನಿಂದಿಸು, ಚುಚ್ಚು ಮಾತನಾಡು ೧೨-೧೬, ೧೪-೧೦೬

ಕೊಲ್ = (ನಾ) ಕೊಲೆ, ಹಿಂಸೆ ೯-೮೪

ಕೊಳ್ಕೊಡೆ = (ನಾ) ಕೊಳ್ಳುವುದು-ಕೊಡುವುದು, ನಂಟುತನ ೪-೯೮

ಕೋ

ಕೋಕ = (ನಾ) ಚಕ್ರವಾಕ ಪಕ್ಷಿ, ಜಕ್ಕವಕ್ಕಿ ೧೦-೪೧, ೧೧-೧೮೨

ಕೋಕನದ = (ನಾ) ಕೆಂದಾವರೆ, ಕೆಂಪು ಕಮಲ ೬-೪೧

ಕೋಟರ = (ನಾ) ಹೊದರು ೧-೩೧

ಕೋಟಿಕ = (ವಿ) ತುಟ್ಟ ತುದಿಯ ೧೨-೬೮

ಕೋಡು = (ನಾ) ಸ್ಪರ್ಧೆ, ಹುರುಡು ೧-೨೩

(ಕ್ರಿ) ತಂಪಾಗು ೧೬-೨೮

(ನಾ) ಚಳಿ, ಹಿಮ ೧೬-೨೮

ಕೋಡಕಾಳೆ (ನಾ) ಕೊಂಬು ಮತ್ತು ಕಹಳೆ ೪-೫೬

ಕೋಣ = (ನಾ) ವಾದ್ಯಗಳನ್ನು ಬಾರಿಸುವ ಗುಣೆ, ವಾದನದಂಡ ೧೨-೨೦

ಕೋದಂಡ = (ನಾ) ಬಿಲ್ಲು ೯-೮೪, ೧೪-೨೨

ಕೋರಕಿತ = (ವಿ) ಮೊಗ್ಗು ಬಿಟ್ಟ ೬-೪೮ (ಗ)

ಕೋವಣ = (ನಾ.ದ್ಭ.) ಕೌಪೀನ, ಲಂಗೋಟಿ ೩-೧೯

ಕೋವರ = (ದ್ಭ. ನಾ.) ಕುಂಭಕಾರ, ಕುಂಬಾರ ೧೪-೧೭೪ (ಗ)

ಕೋಳ್ = (ನಾ) ಹೊಡೆತ, ಪೆಟ್ಟು ೯-೬೮

ಕೋಳು = (ನಾ) ಏಟು, ದಾಳಿ ೯-೬೯

ಕೋಟ್ = (ಕ್ರಿ) ಕೊಂಬಿನಿಂದ ತಿವಿ ೧೩-೭೪
(ವಿ) ತಂಪು ೧೨-೩

ಕೋಟ್ಮೃಗ =(ನಾ) ಖಡ್ಗಮೃಗ, ಗಂಡಕ ೧-೭೩

ಕೋಟ್ಮಿದುಳು = (ನಾ) ಹಸಿಯ ಮಿದುಳು ೧೪-೭

ಕೌ

ಕೌಕ್ಷೇಯಕ = (ನಾ) ಖಡ್ಗ, ಕತ್ತಿ ೯-೨೫ (ಗ), ೧೧-೧೩೧

ಕೌಮುದಿ = (ನಾ) ಬೆಳದಿಂಗಳು ೬-೧೮೧ (ಗ)

ಕೌವರೆಗೊಳ್ಳು = (ಕ್ರಿ) ಸಂಭ್ರಾಂತನಾಗು, ಗೊಂದಲಕ್ಕೊಳಗಾಗು ೧೬-೬೩ (ಗ)

ಕೌಶಿಕ = (ನಾ) ಗೂಗೆ ೧-೩೧

ಖ

ಖಚರ = (ನಾ) ಆಕಾಶಗಾಮಿ, ವಿದ್ಯಾಧರ ೧೧-೨

ಖರ್ಪರ = (ನಾ) ಚಿಪ್ಪು, ಹಂಚು ೫-೮೭

ಖರ = (ವಿ) ಹದನವಾದ, ಉಗ್ರ ೯-೧೦೪

ಖರಕರ (ನಾ) ಸೂರ್ಯ ೧೦-೧೩೯

ಖಲೀನ = (ನಾ) ಕಡಿವಾಣ ೪-೧೧೩

ಖಾತ = (ನಾ) ತಗ್ಗು, ಕಂದಕ ೯-೧೬ (ಗ)

ಖೇಚರ = (ನಾ) ಆಕಾಶದಲ್ಲಿ ತಿರುಗಾಡುವವ, ಸುರ ೧೧-೨

ಗ

ಗಗನೋದರ = (ನಾ) ಆಕಾಶದ ಒಳಬದಿ ೧೦-೧೦೯

ಗಜರು = (ಕ್ರಿ) ಗರ್ಜಿಸು, ಗಟ್ಟಿಯಾಗಿ ಕೂಗು ೧೦-೧೮ (ಗ)

ಗಟ್ಟಿ = (ನಾ) ಶ್ರೀಗಂಧ ೭-೪೭ (ಗ)

ಗಂಡ = (ನಾ) ಕೆನ್ನೆ, ಗಲ್ಲ ೧-೧೦, ೧೨-೧೩

(ವಿ) ದೊಡ್ಡ, ಬಲವುಳ್ಳ ೧೦-೨೧೮

ಗಂಡಗರ್ವ = (ನಾ) ವೀರತನದ ಹೆಮ್ಮೆ, ಪೌರುಷದ ಅಹಂಕಾರ ೧೦-೨೩೩, ೧೧-೧೩೪

ಗಂಡಗುಣ = (ನಾ) ಪೌರುಷ, ಪರಾಕ್ರಮ ೯-೧೨೫, ೯-೧೫೬
ಗಂಡಮಂಡಳ = (ನಾ) ಕೆನ್ನೆ, ಕಪೋಲ ೪-೯
ಗಂಡವಚ್ಚ = (ನಾ) ಪುರುಷವೇಷ ೭-೧೦೬ (ಗ)
ಗಂಡವರಿಜು = (ನಾ) ಪುರುಷರೂಪ ೩-೩೮, ೧೧-೯೭
ಗಂಡೋದ್ಗಾರಿ = (ವಿ) ಗಲ್ಲಗಳ ಮೇಲೆ ಕಾಣುವ ೧೧-೧೭೩
ಗಣಿತಿಗ = (ನಾ) ಲೆಕ್ಕವನ್ನು ಮಾಡುವವ, ಜ್ಯೋತಿಷಿ ೧೩-೯
ಗಣೆ = (ನಾ) ಕಣೆ, ಬಾಣ ೯-೬೬
ಗದಿತ = (ವಿ) ಹೇಳಿದ ೧೫-೪೩
ಗಂಧವಾಹ = (ನಾ) ಕಿರಣ ೧೨-೯೪
ಗರಿಮ = (ವಿ) ಗುರುತ್ವ, ಹೆಚ್ಚಳ ೮-೬೧
ಗರುಡೋದ್ಗಾರಮಣಿ = (ನಾ) ಹಸುರು ರತ್ನ, ಪಚ್ಚೆ ೫-೯೯
ಗಱಿಸನ್ನೆ = (ನಾ) ಗರಿಯಿಂದ ಮಾಡುವ ಸಂಕೇತ ೧೩-೯೭ (ಗ)
ಗಱಿಸೋಂಕು = (ಕ್ರಿ) ಬಾಣತಾಗು, ೯-೧೪೯
ಗಳಕಂದಳ = (ನಾ) ಗೋಣನಾಳ ೯-೧೦೭
ಗಳೆವಳಿ = (ವಿ) ಸುತ್ತು ಹಾಕಿದ, ತೆಕ್ಕೆ ಹಾಕಿಕೊಂಡಿರುವ ೧೦-೯೧ (ಗ)
ಗಹನ = (ನಾ) ಅರಣ್ಯ, ಅಡವಿ ೯-೩ (ಗ)
(ವಿ) ದೊಡ್ಡದು, ಹಿರಿಯದು, ಜಟಿಲವಾದುದು ೧೧-೮
ಗಬಿಪು = (ಕ್ರಿ) ಹರಟೆ ಹೊಡೆ, ಗಳಹು ೧೫-೫೮

ಗಾ

ಗಾಡಿ = (ನಾ) ಬೆಡಗು, ಸೌಂದರ್ಯ ೯-೩೪
ಗಾಂಪ = (ನಾ) ಹಳ್ಳಿಗ, ಮಂದಮತಿ, ಮೂಢ ೧-೧೨೫, ೯-೮೮
ಗಾಯಿನಿ = (ನಾ) ಹಾಡುವವಳು, ಗಾಯಕಿ ೧೨-೨೬
ಗಾತ್ರ = (ನಾ) ದೇಹ ೧೨-೨
(ವಿ) ಗಡುತರ, ಪಿಂಡ

ಗ್ರಾಮಣಿ = (ನಾ) ಮುಖ್ಯಸ್ಥ, ನಾಯಕ, ಗ್ರಾಮಾಧಿಕಾರಿ ೯-೧೦೬ ೧೧-೧೦೧
ಗಾವಿಲ = (ದ್ಭ.ನಾ.) ಗ್ರಾಮೀಣ, ಹಳ್ಳಿಗ, ಹುಂಬ ೧೨-೬೨
ಗುಡಿ = (ನಾ) ಪತಾಕೆ, ಧ್ವಜ೩-೧೩೪
ಗುಹಾಸನ = (ನಾ) ಗವಿಯ ಮುಖ ೧೪-೫
ಗೃಹದೀರ್ಘಿಕೆ = (ನಾ) ಮನೆಯ ಬಳಿಯ ಚಿಕ್ಕ ಕೆರೆ ೧೨-೯೮
ಗೆಂಟು = (ಅ) ಹತ್ತಿರ, ಅನತಿದೂರ ೧೫-೨೭ (ಗ)
ಗೆಡೆವಕ್ಕಿ = (ನಾ) ಚಕ್ರವಾಕ ೪-೬
ಗೆಡೆವೆಚ್ಚಲು = (ಅ) ಸ್ನೇಹವು ಹೆಚ್ಚಲು ೩-೧೪೩
ಗೆತ್ತು = (ಅ) ತಿಳಿದು, ಭಾವಿಸಿ ೯-೧೫೬
ಗೆಲ್ಲಂಗೊಳ್ = (ಕ್ರಿ) ವಿಜಯಿಯಾಗು, ಜಯಶೀಲನಾಗು ೯-೧೩೧ (ಗ) ೧೦-೧೩೭ (ಗ)
ಗೇಹ = (ನಾ) ಮನೆ, ಮಂದಿರ ೯-೧೬ (ಗ) ೧೦-೧೦೨
ಗೊಡ್ಡ = (ನಾ) ಕುಚೇಷ್ಟೆ, ದುಶ್ಚೇಷ್ಟೆ ೯-೧೫೮, ೧೦-೧೦
ಗೊಲೆ = (ನಾ) ಬಿಲ್ಲಿನ ಹಿಂಬದಿ ೭-೧೧೫, ೧೪-೧೮೦
ಗೋರಿಯ ಮೃಗ = (ನಾ) ಬೇಟೆಯಾಡಲು ಆಕರ್ಷಿಸಲ್ಪಟ್ಟ ಮೃಗ ೧೦-೧೧೧ (ಗ)
ಗೋಸಣೆ = (ದ್ಭ.ನಾ) ಘೋಷಣೆ, ಡಂಗುರ ೯-೧೬೭
ಗೋಸಣೆಗಳೆ = (ಕ್ರಿ) ಡಂಗುರ ಹೊಡೆ, ಕೂಗಿ ಹೇಳು ೧೧-೧೪೧
ಗೋತ್ರ ಭೂಭೃತ್ = ಕುಲಪರ್ವತ ೧೦-೨೨೫
ಗೋಟಾಯ್ಲ = (ನಾ) ಕುದುರೆ ಸವಾರ ೧೩-೫೭

ಘ

ಘಟಿಕಾ = (ನಾ) ಗಡಿಗೆ, ಗಳಿಗೆ ೭-೧೦೫
ಘಟಿತ = (ವಿ) ರಚಿಸಿದ, ನಿರ್ಮಿಸಿದ ೧೨-೧೦ (ಗ)
ಘಟ್ಟಿವಳ್ತಿ = (ನಾ) ಗಂಧತೇಯುವವಳು ೧-೧೧೯
ಘಟೆ = (ನಾ) ಆನೆಗಳ ಗುಂಪು ೧೪-೮

ಘನ = (ನಾ) ಮೋಡ ೧೧-೯೮

ಘನರುತಿ = (ನಾ) ಮೇಘಧ್ವನಿ, ಗುಡುಗು ೩-೯೨, ೧೦-೧೦೭

ಘನಸಮಯ = (ನಾ) ಮಳೆಗಾಲ ೧೧-೧೬೬

ಘನಸಾರ = (ನಾ) ಪಚ್ಚೆಕಪ್ಪುರ ೧೧-೧೨೫, ೧೨-೫

ಘನಾಘನ = (ನಾ) ಮಹಾಮೇಘ, ದೊಡ್ಡ ಮೋಡ ೧೦-೭೭ (ಗ)

ಘನೋಪಲ = (ನಾ) ಆಲಿಕಲ್ಲು ೧೦-೧೨೭

ಘರ್ಮೋದಕ = (ನಾ) ಬೆವರು ೧೧-೧೭೩

ಘಾತ = (ವಿ) ತಗ್ಗು, ಆಳ ೯-೧೬ (ಗ)

ಘಾತಿಕರ್ಮ = (ನಾ) ಜೈನಧರ್ಮದಲ್ಲಿ; ಜ್ಞಾನಾವರಣೀಯು, ದರ್ಶನಾವರಣೀಯು, ಮೋಹನೀಯು, ಅಂತರಾಯು ಇವು ನಾಲ್ಕು ಘಾತಿಕರ್ಮಗಳು ೫-೪.

ಘೂರ್ಣಿಸು = (ಕ್ರಿ) ಗರ್ಜಿಸು, ಘೋಷಿಸು ೧೨-೧೮, ೧೪-೨೯ (ಗ)

ಘೋಣ = (ನಾ) ಮೂಗು ೪-೧೦೮

ಘೋಳಾಯ್ತ = (ನಾ) ರಾವುತ, ಕುದುರೆ ಸವಾರ ೧೩-೨೯ (ಗ)

## ಚ

ಚಕ್ರ = (ನಾ) ಒಂದು ಆಯುಧ, ಆಕಾಶ, ದೇಶ ಮತ್ತು ಸೇನೆ ೧೦-೯೦, ೧೨-೬೫

ಚಂಕಸತ್ = (ವಿ) ಬಹಳ ಹೊಳೆಯುವ ೭-೧೦೪

ಚಂಚರೀಕ = (ನಾ) ಭ್ರಮರ, ತುಂಬಿ ೩-೬

ಚಟುಲ = (ವಿ) ಚಂಚಲ, ಚುರುಕಾದ ೧೦-೨೧ (ಗ), ೧೧-೧೪೯

ಚಂಡ = (ವಿ) ಉಗ್ರ, ತೀಕ್ಷ್ಣ ೧೨-೬೦

ಚಂಡಕರ = (ನಾ) ಸೂರ್ಯ ೧೦-೧೦೮

ಚಂಡಕಿರಣ =(ನಾ) ಸೂರ್ಯ ೯-೬೨

ಚಂಡಮರೀಚ = (ನಾ) ತೀಕ್ಷ್ಣವಾದ ಕಿರಣಗಳುಳ್ಳವ, ಸೂರ್ಯ ೯-೧೧೭

ಚಂಡಾಂಶಿ = (ನಾ) ಸೂರ್ಯ ೧೨-೭೩

ಚಂಡಾಂಶು = (ನಾ) ಸೂರ್ಯ ೨-೩೧

ಚತುರ್ಗತಿ = (ನಾ) ಜೈನ ಸಿದ್ಧಾಂತದ ನಾಲ್ಕು ಗತಿಗಳು

೧. ದೇವಗತಿ ೨. ನಾರಕಗತಿ ೩. ಮನುಷ್ಯ ಗತಿ ೪. ತಿರ್ಯಕ್ ಗತಿ ೪-೧೨೭, ೬-೫೫

ಚತುರ್ಥಸ್ನಪನ = (ನಾ) ಋತುಮತಿಯ ನಾಲ್ಕನೆಯ ದಿನದ ಸ್ನಾನ ೩-೭೨

ಚತುಷ್ಷಷ್ಟಿಕ = (ವಿ) ಅರುವತ್ತು ನಾಲ್ಕು ೩-೧೪೪

ಚಂದ್ರಾತಪ = (ನಾ) ಬೆಳುದಿಂಗಳು ೧೨-೧೧

ಚಂದ್ರಿಕಾ = (ನಾ) ಬೆಳುದಿಂಗಳು ೧-೯, ೯-೧೧೯

ಚದುರ್ = (ವಿ) ಜಾಣ್ಮೆ ೧೦-೧೬೮ (ಗ)

ಚಪಳ = (ವಿ) ಅಸ್ಥಿರಭಾವದವ, ೧೨-೭೪

ಚಂಪಕ = (ನಾ) ಸಂಪಿಗೆ ೧೨-೪

ಚಮರರುಹ = (ನಾ) ಚಮರೀ ಮೃಗದ ಕೂದಲು ೧೨-೧೬

ಚರ್ಯ = (ನಾ) ಜೈನ ಸನ್ಯಾಸಿಗಳ ಭಿಕ್ಷೆ ೧೬-೩೯ (ಗ)

ಚರಮ = (ವಿ) ಕಡೆಯ, ಕೊನೆಯ ೬-೧೨೫, ೧೬-೮೭

ಚರು = (ನಾ) ನೈವೇದ್ಯಕ್ಕೆ ಅಣಗೊಳಿಸಿದ ಅನ್ನ ೧೨-೨ (ಗ)

ಚಲ = (ನಾ) ಹಟ ೧೧-೭೭

ಚವುಪಳಿಗೆ = (ನಾ) ದೊಡ್ಡ ಪಡಸಾಲೆ, ಹಜಾರು ೧೨-೧೦ (ಗ)

ಚಳ = (ವಿ) ತರಲವಾದ, ಚಂಚಲವಾದ ೯-೧೬ (ಗ) ೯-೭೯

ಚಳನ = (ನಾ) ಪಾದ, ಅಡಿ ೧೬-೨೮

ಚರಿತಾರ್ಥ (ನಾ) ಕೃತಾರ್ಥ, ಮಾಡಬೇಕಾದುದನ್ನು ಮಾಡಿದವ ೯-೧೩೬

ಚಾಗ = (ದ್ಭ.ನಾ.) ತ್ಯಾಗ, ದಾನ ೨-೫೭

ಚಾತುರ್ದಂತ = (ನಾ) ಐರಾವತ, ಇಂದ್ರನ ಆನೆ ೯-೧೨

ಚಾದಗೆ = (ದ್ಭ.ನಾ.) ಚಾತಕ, ಒಂದು ಪಕ್ಷಿ ೧೧-೧೬೬

ಚಾಪ = (ನಾ) ಬಿಲ್ಲು ೯-೫೬, ೯-೧೨೬

ಚಾಪಳತೆ = (ವಿ) ಚಪಲತನ, ಬಿಲ್ಲಿನ ಹೆದೆ ೧-೧೦೫

ಚಾಪಾಗಮಪ್ರೌಢಿ = (ನಾ) ಧನುರ್ವಿದ್ಯೆಯ ಜಾಣ್ಮೆ ೧೦-೩೬

ಚಾರಣ = (ನಾ) ಸ್ತುತಿಪಾಠಕ, ಬಿರುದಾವಳಿಗಳನ್ನು ಹಾಡುವವ ೧೧-೫೮; ಒಂದು ವಿಧದ ಜೈನಮುನಿ ೯-೩ (ಗ)

ಚಾರಣೆ = (ನಾ) ಏರಿ ಹೋಗುವಿಕೆ ೧೦-೨೧ (ಗ)

ಚಾರಿಸು (ಕ್ರಿ) ಪ್ರಯೋಗಿಸು ೧೩-೭೩

ಚಾವಳಿಸು = (ಕ್ರಿ) ಅಲ್ಲಗಳೆ ೩-೧೦೨

ಚಾಳಿಸು (ಕ್ರಿ) ಅಲ್ಲಾಡಿಸು, ನಡುಗಿಸು, ಸೋಲಿಸು ೯-೧೭೭ ೧೨-೬೪

ಚಿತ್ತೋದ್ಭವ = (ನಾ) ಮನಸಿಜ, ಕಾಮ ೧೨-೧೯೧

ಚಿನ್ನ = (ನಾ) ಬಂಗಾರ

(ವಿ) ಚಿಕ್ಕ, ಸಣ್ಣ ೯-೧೨೦ (ಗ)

ಚೀರಿಕಾ = (ನಾ) ಜೀರುಂಡೆ ೭-೮೫

ಚ್ಯುತ = (ವಿ) ಬಿದ್ದ, ಭ್ರಷ್ಟನಾದ ೧೦-೧೧೬ (ಗ)

ಚೂಡಾಮಣಿ = (ನಾ) ತಲೆಯ ಮೇಲೆ ಧರಿಸುವ ರತ್ನ ೧೧-೪೭ (ಗ)

ಚೂಡಾರತ್ನ = (ನಾ) ತಲೆಯ ಮೇಲೆ ಧರಿಸುವ ರತ್ನ ೧೨-೫

ಚೂಳಿಕಾಪರ್ವನ = (ನಾ) ಗರ್ಭಿಣಿಯರಿಗೆ ಮಾಡುವ ಸೀಮಂತ ಸಂಸ್ಕಾರ ೭-೧೫೦

ಚೂಳಿಕೆ = (ನಾ) ಅಗ್ರಭಾಗ, ತುದಿ ೭-೧೫೦: ಶಿಖರ ೯-೫೨

ಚೆಚ್ಚರ = (ಧ್ವ. ಅ) ಸತ್ವರ, ಬೇಗನೆ ೪-೧೧೨; ಎಚ್ಚರಿಕೆ, ಜಾಗರೂಕತೆ ೧೬-೩೫

ಚೆನ್ನೈದಿಲು = (ನಾ) ಕೆಂಪು ಕಮಲ, ರಾತ್ರಿ ಅರಳುವ ಕೆಂಪು ಕಮಲ, ಕುಮುದ ೯-೧೨೦ (ಗ)

ಚೇತೋರಾಗ = (ನಾ) ಮನಸ್ಸಿನ ಆತುರ ೧೧-೧೬೫

ಚೇಲಾಂಚಲ = (ನಾ) ಬಟ್ಟೆಯ ಕೊನೆ, ಸೆರಗು ೯-೧೭೬

ಚೋದಿಸು = (ಕ್ರಿ) ನಡೆಯಿಸು, ಸಾಗಿಸು ೩-೫೨

ಚೌಳೋಪನಯನ = (ನಾ) ಜಾವಳ, ಮುಂಜಿ ೩-೧೪೨

## ಛ

ಛಲ = (ನಾ) ನೆಪ, ಹಟ ೧-೨೮

ಛವಿ = (ನಾ) ಪ್ರಭೆ, ಕಾಂತಿ ೯-೭೭

ಛೇದ = (ನಾ) ಕಡಿಯುವಿಕೆ, ಕತ್ತರಿಸುವಿಕೆ ೧೨-೫೯

## ಜ

ಜಕ್ಕೆ = (ದ್ಭ.ನಾ) ಯಕ್ಷ, ದೇವಕುಲಕ್ಕೆ ಸೇರಿದ ಒಂದು ವರ್ಗ ೧೪-೯೫

ಜಕ್ಕುಲಿಸು = (ಕ್ರಿ) ಕೆಣಕು, ಸೋಂಕು, ಕಚಕುಳಿ ಇಡು ೬-೪

ಜಂಗಮ = (ವಿ) ಚಲಿಸುವ ೧೧-೧೫೩

ಜಂಘಾಬಲ = (ನಾ) ಮೊಣಕಾಲಿನ ಶಕ್ತಿ ೪-೬೮

ಜಟಿಲಿತ = (ವಿ) ಸಮಸ್ತಾತ್ಮಕ, ತೊಡಕಾಗಿರುವ ೧೨-೨ (ಗ); ಹೆಣೆದ, ಜಡೆಹಾಕಿದ ೧೦-೫೪

ಜಡ = (ನಾ) ನೀರು ೧೨-೫೬ ಅಜ್ಞಾನಿ ೧೧-೧೮೦

ಜಡಜಜ = (ನಾ) ಕಮಲದಲ್ಲಿ ಹುಟ್ಟಿದವ, ಬ್ರಹ್ಮ ೩-೫

ಜಡಾಶಯ = (ನಾ) ಜಲಾಶಯ ೭-೯೧

ಜಡಿ = (ಕ್ರಿ) ಝಳಪಿಸು, ಅಲ್ಲಾಡಿಸು ೯-೭೨, ೯-೧೭೧ ಹೊಡೆದೋಡಿಸು, ಬೈಯು ೧೦-೧೮೩ (ಗ)

ಜಂತ್ರ = (ದ್ಭ.ನಾ) ಯಂತ್ರ ೧೦-೧೮೦ (ಗ)

ಜನ್ನ = (ದ್ಭ.ನಾ.) ಯಜ್ಞ, ಯಾಗ ೧೦-೧೮೩ (ಗ)

ಜರ್ವು = (ಕ್ರಿ) ಹಳಿ, ನಿಂದಿಸು, ಜಂಕಿಸು ೯-೪೮

ಜರಗು = (ನಾ) ಚಿನ್ನ, ಬೆಳ್ಳಿ ಮೊದಲಾದವು ಸೇರಿರುವ ಮಣ್ಣು, ಅದಿರು ೫-೨೦

ಜಲ್ಪ = (ನಾ) ಹರಟೆ, ಬಡಬಡಿಕೆ ೯-೧೬೯

ಜಲಜಲಿಸು = (ಕ್ರಿ) ಹೊಳೆ, ಮಿಂಚು ೧೦-೮೦, ೧೧-೮೮

ಜವ = (ದ್ಭ.ನಾ) ಯಮ ೧೦-೧೬೨

ಜವಂಗೆಡಿಸು = (ಕ್ರಿ) ವೇಗವನ್ನು ತಡೆ, ಸಾಮರ್ಥ್ಯವನ್ನು ನಿಲ್ಲಿಸು ೧೦-೧೬೨

ಜಳಧರ = (ನಾ) ಮೋಡ ೩-೫೧ (ಗ)

ಜಾತರೂಪ = (ವಿ) ದಿಗಂಬರ, ಬತ್ತಲೆ ೧೦-೧೨೭ (ಗ)

ಜಾತಾನುಜಾತರ್ = (ನಾ) ಮಗ ಮತ್ತು ತಮ್ಮದಿರು ೯-೧೬೯

ಜಾತಿಸ್ಮರ = (ನಾ) ಪೂರ್ವಜನ್ಮದ ಸ್ಮರಣೆಯುಳ್ಳವ ೯-೧೦೩ ೧೧-೧೬೮

ಜಾಳಕ = (ನಾ) ಜಾಳಿಗೆ, ಬಲೆ ೧೨-೬

ಜ್ಯಾ = (ನಾ) ಬಿಲ್ಲಿನ ಹೆದೆ, ತಿರುವು ೧-೧೬

ಜ್ಯಾಯಾ = (ನಾ) ಶ್ರೇಷ್ಠ, ಹಿರಿಯ ೭-೪೬

ಜೇವೊಡೆ = (ಕ್ರಿ) ಬಿಲ್ಲಿನ ಹೆದೆಯನ್ನು ಬಾಜಿಸು ೯-೫೭

ಜೇನೆಯ್ = (ನಾ) ಜೇನುತುಪ್ಪ ೨-೧೮

ಜೈತ್ರಯಾತ್ರೆ = (ನಾ) ವಿಜಯ ಯಾತ್ರೆ ೧೧-೧೮೬

ಜೊನ್ನ = (ದ್ಭ.ನಾ) ಜ್ಯೋತ್ಸ್ನಾ, ಬೆಳುದಿಂಗಳು ೪-೪೪

ಜೊಂಪ = (ನಾ) ಗೊಂಚಲು, ಕುಂಜ ೧-೧೧೦

ಜೋದ = (ನಾ) ಮಾವುತ ೧೪-೮

ಜೋಳವಾಳಿ = (ನಾ) ಒಡೆಯನ ಅನ್ನದ ಋಣ ೧೩-೫೭

## ಝ

ಝುಂಕೃತ = (ವಿ) ಗುಂಜಾರವ, ತುಂಬಿಗಳ ಧ್ವನಿ ೧೦-೧೧೦

## ಟ

ಟಂಕಧ್ವನಿ = (ನಾ) ಬಾಣದ ಸಪ್ಪುಳ ೧೬-೩೭

ಡವಕೆ = (ನಾ) ಉಗುಳುವ ಪಾತ್ರೆ, ಕಾಳಂಜಿ ೫-೪೭ (ಗ)

ಡಿಂಡಿಮ = (ನಾ) ಒಂದು ಮಹಾ ವಾದ್ಯ ೪-೩೧

## ತ

ತಕ್ಕಟ್ = (ಕ್ರಿ) ಯೋಗ್ಯತೆ ಅಡಗು, ಸಾಮರ್ಥ್ಯ ಕುಂದಿಹೋಗು ೯-೫೪, ೯-೫೮

ತಕ್ಕಿನ = (ವಿ) ಯೋಗ್ಯವಾದ, ತಕ್ಕುದಾದ ೧೪-೨೪

ತಕ್ಕುಗಿಡು = (ಕ್ರಿ) ಯೋಗ್ಯತೆಯನ್ನು ಕಳೆದುಕೊಳ್ಳು ೧೧-೫೨, ೧೪-೧೧

ತಕ್ಕು = (ನಾ) ಯೋಗ್ಯತೆ, ಸಾಮರ್ಥ್ಯ, ಹುರುಪು ೯-೧೫೨, ೧೦-೫೮ ೧೧-೧೦೯, ೧೩-೨೧

ತಕ್ಕೂರ್ಮೆ = (ನಾ) ಯೋಗ್ಯತೆ, ಶುದ್ಧಪ್ರೀತಿ ೫೧-೨೧೨

ತಗದು = (ವಿ) ಅಯೋಗ್ಯವಾದುದು ೧೦-೧೭೦

ತಗುಳ್ = (ಕ್ರಿ) ತಿರಸ್ಕರಿಸು, ಬೀಳುಗಳೆ ೧೧-೪೧

ತಗುಳ್ಚು = (ಕ್ರಿ) ಜೋಡಿಸು, ಹೊಂದಿಸು, ಅಂಟಿಸು ೧೬-೨೫ (ಗ)

ತಟ = (ನಾ) ದಂಡೆ, ಅಂಚು ೧೦-೫೪

ತಟಿಲ್ಲದೆ = (ನಾ) ಮಿಂಚಿನ ಬಳ್ಳಿ ೯-೪೧

ತಟೀದೇಶ = (ನಾ) ತೀರಪ್ರದೇಶ, ಕರಾವಳಿ ೯-೧೩೭

ತಟ್ಟೊತ್ತು = (ಕ್ರಿ) ರಭಸದಿಂದ ಹಿಂಜರಿಸು ೧೦-೨೩೨

ತಡಿ = (ನಾ) ನದಿಯ ದಂಡೆ ೯-೧೨೦ (ಗ), ೯-೧೩೭, ೧೨-೯೬

ತಣ್ಣಸ = (ವಿ) ತೇವ, ತಂಪು ೧೧-೧೫೩

ತತಿ = (ವಿ) ಸಮೂಹ ೧೦-೧೮೫

ತಂದಲ್ = (ನಾ) ಮಳೆ ಹನಿ ೪-೨೯

ತನಿಗಿರ್ಚು = (ನಾ) ಅತಿ ಹೆಚ್ಚು ಕಾವು ಇರುವ ಕೆಂಡ ೧೧-೧೪೪

ತನುತ್ರ = (ನಾ) ದೇಹವನ್ನು ರಕ್ಷಿಸುವುದು, ಕವಚ, ಚಿಲಖತ್ತು ೧೧-೬೮, ೧೪-೨೩ (ಗ), ೧೬-೧೮ (ಗ)

ತನೂದರಿ = (ವಿ) ತೆಳುವಾದ ಶರೀರವುಳ್ಳವಳು, ಸುಂದರಿ ೧೧-೧೧೦

ತಪನ = (ನಾ) ಸೂರ್ಯ ೧೧-೧೨೮

ತಪ್ತಾಯಸ = (ನಾ) ಕಾಯ್ದ ಕಬ್ಬಿಣ ೯-೪೬ (ಗ)

ತರ್ಜಿತ = (ವಿ) ನಿಂದಿಸಿದ, ಹೀಗಳೆದ ೧೦-೧೧೦

ತರಂಗಿಣಿ = (ನಾ) ತೆರೆಗಳಿಂದ ಕೂಡಿದುದು, ನದಿ ೯-೧೨೦ (ಗ)

ತರಳತೆ = (ವಿ) ಚಾಂಚಲ್ಯ ೧೧-೧೦೪

ತರುಣಾರ್ಕ = (ನಾ) ಎಳನೇಸರು, ಬಾಲಸೂರ್ಯ ೪-೪೮

ತರ್ಜಿ = (ಕಿ) ಕತ್ತರಿಸು ೯-೬೨

ತಜಿ'ಸಂದು = (ಅ) ನಿಶ್ಚಯವಾಗಿ ೩-೨೪ (ಗ), ೧೪-೫೬

ತಜಿ'ಸಲ್ = (ಕ್ರಿ) ನಿಶ್ಚಯಿಸು ೯-೧೨೨ (ಗ), ೧೦-೪೮, ೧೨-೬೪

ತಲ್ಪ = (ನಾ) ಹಾಸಿಗೆ ೯-೧೭೬

ತಲ್ಪತಲ = (ನಾ) ಹಾಸಿಗೆ ೧೧-೧೮೫ (ಗ)

ತಲೆಗರೆ = (ಕ್ರಿ) ಅಡಗಿಕೊಳ್ಳು ೩-೨೭

ತಲೆವಿಲ್ = (ನಾ) ಹಿರಿಯದಾದ ಬಿಲ್ಲು ೧೨-೩೮

ತವಿಲ್ = (ನಾ) ನಾಶ, ವಿನಾಶ, ಪ್ರಳಯ ೧೨-೬೭, ೧೪-೮೫, ೧೬-೬೭

ತವಿಸು = (ಕ್ರಿ) ನಾಶಗೊಳಿಸು, ಸಂಹರಿಸು, ಇಲ್ಲದಂತೆ ಮಾಡು, ಸವೆಯಿಸು ೨-೬೨, ೯-೭, ೯-೯೯, ೧೦-೨೧೯ (ಗ)

ತವು = (ಕ್ರಿ) ಸವೆ, ನಾಶವಾಗು ೧೩-೯೯

ತವೆ = (ಅ) ಹೆಚ್ಚಾಗಿ, ಚೆನ್ನಾಗಿ ೧-೮೨

ತಳ್ = (ಕ್ರಿ) ಒಂದಕ್ಕೊಂದು ಅಂಟಿಕೊಳ್ಳು, ಮುತ್ತು, ಕವಿ ೧೦-೧೦೨ ೧೨-೯೦

ಕಳ್ತಿಜಿ' = (ಕ್ರಿ) ಮುತ್ತಿ ಯುದ್ಧಮಾಡು ೧೩-೨೪

ತಳ್ತು = (ಅ) ಗುಂಪುಗೂಡಿ, ಒಟ್ಟಾಗಿ ೧೨-೬೪

ತಳ್ಪ = (ನಾ) ಹಾಸಿಗೆ ೩-೭೯

ತಳ್ಪೊಯ್ = (ಕ್ರಿ) ತಡೆಗಟ್ಟು, ಅಡ್ಡಗಟ್ಟು, ರಭಸದಿಂದ ಹೊಡೆ, ೧೦-೨೦೪, ೧೨-೯೨, ೧೩-೧೮

ತಳ = (ನಾ) ಅಂಗಾಲು, ಅಂಗೈ ೯-೧೨೦

ತಳರ್ = (ಕ್ರಿ) ತೆರಳು, ಹೋಗು ೧೨-೧೫ (ಗ) ೧೨-೨೩

ತಳರ್ಚು = (ಕ್ರಿ) ತೆರಳಿಸು, ಹೊರಡಿಸು ೧೧-೯

ತಳರಡಿ = (ನಾ) ತಪ್ಪು ಹೆಜ್ಜೆ, ದಟ್ಟಡಿ ೩-೧೪೦

ತಳಾಜಿ = (ನಾ) ನಗರರಕ್ಷಕ ೧೫-೩೯ (ಗ)

ತಳಿರ್ವಾಸು = (ನಾ) ಚಿಗುರಲೆಗಳಿಂದ ಮಾಡಿದ ಹಾಸಿಗೆ ೯-೧೨೦ (ಗ)

ತಳೆ = (ಕ್ರಿ) ಹೊಂದು, ಧರಿಸು ೧-೨೦

ತಟ್ಟಿ = (ಕ್ರಿ) ದಟ್ಟವಾದ ೧೧-೧೮೪

ತಟ್ಟು = (ಕ್ರಿ) ತಗ್ಗು, ಕಡಮೆಯಾಗು ೯-೧೨೪

ತಟ್ಟು = (ನಾ) ಅಪ್ಪುಗೆ, ಆಲಿಂಗನ ೯-೧೬೭

ತಟಿ = (ನಾ) ಛತ್ರಿ, ಕೊಡೆ ೧೨-೯೦

ತಟ್ಟೈಸು = (ಕ್ರಿ) ಅಪ್ಪಿಕೊಳ್ಳು, ಆಲಂಗಿಸು ೧೨-೮೩

## ತಾ

ತಾಂಗು (ಕ್ರಿ) ಮುಟ್ಟು, ಸೋಂಕು, ತಾಗು ೭-೧೧೪, ೧೧-೨೨

ತಾಣ = (ದ್ವ.ನಾ.) ಸ್ಥಾನ, ಸ್ಥಳ ೯-೧೨೦ (ಗ)

ತಾಮರಸ = (ನಾ) ಕಮಲ ೯-೧೨೦ (ಗ), ೧೧-೧೧೩

ತಾರ್ಮುಟ್ಟು = (ಕ್ರಿ) ದಡಕ್ಕೆ ತೆರಗಳು ತಾಗು ೧೩-೨೨

ತಾರಗೆ = (ದ್ವ.ನಾ.) ತಾರಕಾ, ನಕ್ಷತ್ರ, ಚಿಕ್ಕೆ ೧೧-೧೮೩

ತಾರಲ್ = (ನಾ) ಪೊದರು, ಹೊದರು, ಪೊದೆ, ಮೆಳೆ ೭-೧೫೭

ತಾರಾದ್ರಿ = (ನಾ) ರಜತಾಚಲ, ಬೆಳ್ಳಿಬೆಟ್ಟ ೧೨-೩೦

ತಾರಾಪತಿ = (ನಾ) ಚಂದ್ರ ೨-೪೦

ತಾರಾಭ್ರ = (ನಾ) ನಕ್ಷತ್ರಗಳಿಂದ ಕೂಡಿದ ಆಕಾಶ ೧೩-೩೨

ತಾರುಂತಟ್ಟುಂ = (ಅ) ಅಸ್ತವ್ಯಸ್ತ ೧೩-೧೦೬

ತಾಱು = (ಕ್ರಿ) ಒಣಗು ೧೪-೫೬ (ಗ)

ತ್ರಾಸ = (ನಾ) ತೊಂದರೆ, ಸಂಕಟ ೧-೪

## ತಿ

ತಿಣ್ಣ = (ವಿ) ಭಾರ ೯-೧೦೬, ೧೧-೧೭೮

ತಿರ್ಯಕ್ = (ವಿ) ಕೀಳು, ಕೆಳಗಿನ ೧೬-೩೮ (ಗ)

ತಿರುವಾಯ್ = (ನಾ) ಬಿಲ್ಲಿನ ಹಗ್ಗದ ಮಧ್ಯಭಾಗ ೯-೧೨೭

ತಿರುವು = (ನಾ) ಬಿಲ್ಲಿನ ಹಗ್ಗ, ಹೆದೆ ೧೩-೧೪೨

ತಿಜಿ'ಕಲ್ಗಳ್ = (ನಾ) (ಆಟದ) ಅಣೆಕಲ್ಲುಗಳು ೩-೭೭

ತಿವಳಿ = (ದ್ವ. ನಾ.) ತ್ರಿವಳಿ, ಸುಂದರಿಯರ ಹೊಟ್ಟೆಯು ಮೇಲಿನ ಮೂರು ಮಡಿಕೆಗಳು ೯-೧೫೩

ತ್ರಿಖಂಡ = (ನಾ) ಜೈನಧರ್ಮದಲ್ಲಿ ಹೇಳಿದ ಮೂರು ಭೂಖಂಡಗಳು ೯-೧೫ (ಗ)

ತ್ರಿದಶ = (ನಾ) ದೇವತೆ ೧೬-೮೫

ತ್ರಿಂಶತ್ = (ವಿ) ಮೂವತ್ತು ೧೦-೧೦೩

## ತೀ

ತೀಕ್ಷ್ಣಕರ = (ನಾ) ಸೂರ್ಯ ೧೧-೩೫

ತೀಡು = (ಕ್ರಿ) ಬೀಸು ೧೨-೨೮

ತೀಸ್ = (ನಾ) ತಿಂಡಿ, ತುರಿ ೧೦-೬೩

ತೀರ್ಚು = (ಕ್ರಿ) ಮುಗಿಸು, ಕೊಲ್ಲು ೧೨-೨ (ಗ)

ತೀರ್ತರು = (ಕ್ರಿ) ಕೊನೆಗೊಳ್ಳು, ಸಂಪೂರ್ಣವಾಗು ೯-೧೩೫

## ತು

ತುಂಡಾಹತಿ = (ನಾ) ಚಂಚುವಿನ ಹೊಡೆತ ೯-೧೦೩

ತುರಿಪ = (ವಿ) ವೇಗ, ಬೇಗ ೪-೧೧೩, ೭-೯೪

ತುಱುಗು = (ಕ್ರಿ) ತುಂಬು, ದಟ್ಟವಾಗಿರು ೧೫-೪೫

ತುಱುಗಲ್ = (ನಾ) ಸಮೂಹ, ಗುಂಪು ೧೧-೧೮೩

ತುಬಿ್‌ಲ್ ಗೈ = (ಕ್ರಿ) ನಮಸ್ಕರಿಸು ೮-೪೫ (ಗ), ೧೧-೧೬೩ (ಗ)

ತುಹಿನ = (ನಾ) ಹಿಮ, ಚಳಿ ೧೧-೧೮೪

ತುಹಿನಾಂಶು = (ನಾ) ಶೀತಾಂಶು, ಚಂದ್ರ ೧೧-೧೮೪

## ತೂ

ತೂಣೀರ = (ನಾ) ಬತ್ತಳಿಕೆ, ಮೂಡಿಗೆ ೯-೪೬, ೧೪-೨೨ (ಗ)

ತೂಂತು = (ಕ್ರಿ) ಗಟ್ಟಿಯಾಗಿ ತುರುಕು ೧೦-೨೨೩, ೧೧-೭೦, ೧೧-೧೪೨

ತೂರ್ಯ = (ನಾ) ತುತೂರಿ, ಮಂಗಳವಾದ್ಯ ೧೦-೧೩೬ (ಗ)

ತೂಱುಂಬು = (ನಾ) ಹಾರಿಬರುವ ಬಾಣ ೯-೬೯

ತೂಳ್ದಿ = (ಕ್ರಿ) ಬೆನ್ನಟ್ಟಿ ಓಡಿಸಿ ೧೬-೬೧

## ತೃ

ತೃಣಪುರುಷ = (ನಾ) ಹುಲುಮಾನವ, ಕ್ಷುದ್ರ ಮನುಷ್ಯ ೧೧-೬

## ತೆ

ತೆಕ್ಕೆ = (ನಾ) ಸಮೂಹ, ಗುಂಪು ೧೧-೧೨೦

ತೆಗಳಿಗೆ = (ನಾ) ಹುಗುಳು, ಬೊಕ್ಕೆ ೭-೯೩

ತೆಗಟು = (ಕ್ರಿ) ನಿಂದಿಸು

(ನಾ) ನಿಂದೆ ೧೦-೧೭೦

ತೆಂಕಣ = (ನಾ) ದಕ್ಷಿಣ ದಿಕ್ಕು ೪-೧೦೪

ತೆಂಕಮೊಗ = (ನಾ) ದಕ್ಷಿಣ ದಿಕ್ಕಿಗೆ ಮಾಡಿದ ಮುಖ ೧೧-೫೪ (ಗ)

ತೆಣಱ್ = (ಕ್ರಿ) ನೋವಿನಿಂದ ನರಳು ೧೨-೩೫

ತೆರಳ್ಚು = (ಕ್ರಿ) ಓಡಿಸು, ಹೊರಡಿಸು ೯-೧೩೩

ತೆಱಿಯೆ = (ಅ) ತಿಳಿಯುವಂತೆ, ಸ್ಪಷ್ಟವಾಗುವಂತೆ ೧೫-೧೪

ತೆವಳುಗಾಣ್ = (ಕ್ರಿ) ದುರ್ಲಕ್ಷಿಸು, ಅಲಕ್ಷಿಸು ೯-೧೪೪

ತೆಱಪು = (ಅ) ಅವಕಾಶ, ಸಮಯ, ಎಡೆ, ಬಿಡುವು ೧೦-೨೬

ತೆಱಂಬೊಳೆ = (ಕ್ರಿ) ಪ್ರಕಾಶಿಸು, ಹೊಳೆ ೫-೧೦೯, ೯-೨೯, ೧೦-೮೧

ತೆಱು = (ಕ್ರಿ) ಕೊಡು ೧೨-೬೮

ತೆಳ್ಪಸೀಱ್ = (ನಾ) ತೆಳುವಾದ ಹೊಟ್ಟೆ ೯-೨೯

## ತೊ

ತೊಡರ್ಪಱ್ = (ಕ್ರಿ) ಸರಪಣಿಯನ್ನು ಹರಿ ೧೧-೧೫೩

ತೊಡರ್ಪು = (ನಾ) ಹೊಂದಿಕೆ, ಸಂಬಂಧ ೧೨-೫೬

ತೊಡವು = (ನಾ) ಆಭರಣ, ಅಲಂಕಾರ ೨-೪೮

ತೊಡಂಬೆ = (ನಾ) ಗೊಂಚಲು ೧-೮೩

ತೊಂಡು = (ನಾ) ದುಷ್ಟತನ, ಉದ್ಧಟತನ ೭-೧೧೫

ತೊದಳ್ = (ವಿ) ಸುಳ್ಳು, ಹುಸಿ ೧೦-೨೪

ತೊಂಗಲ್ = (ನಾ) ಮಂಜರಿ, ಗೊಂಚಲು ೯-೧೫೧

ತೊಱೆ = (ಕ್ರಿ) ಬಿಡು, ತ್ಯಾಗಮಾಡು ೧೦-೧೭೩ (ಗ)

ತೊಲೆ = (ನಾ) ತಕ್ಕಡಿ, ತುಲಾರಾಶಿ ೭-೧೬೬, ೧೦-೨೩೨

ತೊಟಿಲ್ = (ಕ್ರಿ) ಅಲೆದಾಡು, ತಿರುಗಾಡು ೯-೧೫ (ಗ) ೯-೧೩೨ (ಗ)

## ತೋ

ತೋಯ = (ನಾ) ನೀರು ೧-೧೦೩

ತೋಯದವಾಹನ = (ನಾ) ಮೇಘವಾಹನ (ಒಬ್ಬ ರಾಜಪುತ್ರ ೧೧-೧೩೮

ತೋರ = (ವಿ) ದೊಡ್ಡ, ಭಾರವಾದ ೯-೧೨೦ (ಗ)

## ದ

ದಕ್ಷ = (ವಿ) ಆಸಕ್ತ, ತೊಡಗಿದ, ಚತುರ ೯-೧೪೩

ದಧಿ = (ನಾ) ಮೊಸರು ೧೨-೨೨

ದಂತಶಲ್ಕ = (ನಾ) ಕೋರೆದಾಡೆಯ ತುಂಡು ೪-೬೦

ದಂತುರಿತ = (ವಿ) ದಟ್ಟವಾದ ೧೨-೨ (ಗ)

ದಂದಶೂಕ = (ನಾ) ಸರ್ಪ, ಹಾವು ೭-೧೨೨, ೧೦-೯

ದಂದುಗ = (ನಾ) ಶ್ರಮದ ಕೆಲಸ, ತೊಂದರೆ ೧೩-೧೦ (ಗ)

ದನುಜ = (ನಾ) ದೈತ್ಯ, ರಾಕ್ಷಸ ೧೧-೩

ದಂಭೋಳಿ = (ನಾ) ವಜ್ರಾಯುಧ ೧೪-೧೭೪

ದಯಿತ = (ನಾ) ಒಡೆಯ, ಪ್ರಿಯ ೯-೧೮೭, ೧೪-೪೪

ದರ್ಪಕ = (ನಾ) ಕಾಮ, ಮನ್ಮಥ ೯-೧೪೮

ದರ್ದುರ = (ನಾ) ಕಪ್ಪೆ ೧೫-೩೭ (ಗ)

ದರ = (ವಿ) ಸ್ವಲ್ಪ, ನಸು ೭-೯೧

ದರಸ್ಮಿತ = ಮುಗುಳು ನಗೆ ೧೨-೨೨

ದರಹಾಸ = (ನಾ) ಮೆಲುನಗೆ ೯-೧೦೯

ದಶಾಸ್ಯ = (ನಾ) ಹತ್ತು ಮುಖಗಳುಳ್ಳವ, ರಾವಣ ೧೧-೫

ದಶೆ = (ನಾ) ಅವಸ್ಥೆ, ಪರಿಣಾಮ ೯-೭೩

ದವಾಗ್ನಿ = (ನಾ) ಕಾಳ್ಗಿಚ್ಚು ೧೦-೧೩೦

ದಳ್ಳಿಸು = (ಕ್ರಿ) ಉರಿ, ಸುಡು ೧೦-೧೧೩, ೧೧-೧೪೨

## ದಾ

ದಾಘ = (ವಿ) ಉಷ್ಣ, ತಾಪ ೭-೧೦೦

ದಾನದ್ವಿರದ = (ನಾ) ಮದಬಂದ ಆನೆ ೩-೮೧

ದಾನಲೇಖೆ = (ನಾ) ಮದೋದಕದ ಗುರುತು ೩-೧೦

ದಾನಾಂಬು = (ನಾ) ಮದೋದಕ ೧೧-೧೮೩

ದಾಯಿಗತನ = (ನಾ) ಭಾಗಾದಿತನ ೧೨-೭೩

ದಾಮ = (ನಾ) ಮಾಲೆ, ಹಗ್ಗದ ಕಣ್ಣಿ ೧೬-೭೫, ೧೬-೮೩

ದಾರಕ = (ನಾ) ಮಗ ೯-೬೪, ೧೬-೩೮ (ಗ)

ದಾರುಣ = (ವಿ) ಭಯಂಕರ, ಉಗ್ರ ೧೧-೫೯

ದಾವ = (ದ್ಭ.ನಾ.) ದಾಮ, ನಡುಪಟ್ಟಿ ಒಡ್ಯಾಣ ೯-೧೨೦ (ಗ)

ದ್ರಾಘಿಮ = (ವಿ) ಅಧಿಕವಾದ, ಅತಿಶಯವಾದ ೭-೯೭

## ದಿ

ದಿಕ್ಕುಂಭಿ = (ನಾ) ದಿಗ್ಗಜ ೩-೧೩

ದಿಗ್ವಾರಣ = (ನಾ) ದಿಗ್ಗಜ ೧-೯

ದಿತ = (ವಿ) ಕಟ್ಟಲ್ಪಟ್ಟ, ಬದ್ಧ ೧೦-೯೭

ದಿವ್ಯ = (ನಾ) ಸ್ವರ್ಗ, ದಿವ್ಯ, ಸತ್ಯದ ಪರೀಕ್ಷೆಗಾಗಿ ನಡೆಯುವ ಕ್ರಿಯೆ ೯-೧೦೧

ದಿವ್ಯಭಾಷೆ = (ನಾ) (ತೀರ್ಥಂಕರರ ದೈವೀ ಭಾಷೆ) ೫-೮

ದ್ವಿಪ = (ನಾ) ಆನೆ ೨-೬೧

ದ್ವಿರದ = (ನಾ) ಆನೆ ೪-೧೧ (ಗ), ೧೧-೧೨೩

ದ್ವಿಷತ್ = (ನಾ) ವೈರಿ, ಹಗೆ ೯-೧೮೩, ೧೨-೯೧

## ದೀ

ದೀಧಿತಿ = (ವಿ) ಕಿರಣ, ಪ್ರಕಾಶ, ಕಾಂತಿ ೪-೪೪

ದೀಪಕಳಿಕಾ = (ನಾ) ಮೊಗ್ಗೆಯಂತಿರುವ ದೀಪ ೩-೯ ಗದ್ಯ

ದೀರ್ಘಿಕಾ = (ನಾ) ಅಗಲವಾದ ಬಾವಿ, ಸಣ್ಣ ಕೆರೆ ೧೧-೧೫೧

ದೀಪದ = (ವಿ) ಬೇಟೆಗಾಗಿ ಸಾಕಿದ ೩-೭೫ (ಗ)

### ದು

ದುಗ್ಧಕಂಠ = (ನಾ) ಹಾಲು ಹಸುಳೆ, ಹಸುಮಗು ೧೨-೬೫

ದ್ಯುಮಣಿ = (ನಾ) ಸೂರ್ಯ ೧೨-೭೯ (ಗ)

ದುರ್ಗ = (ನಾ) ಕೋಟೆ ೯-೧೩೩ (ಗ)

ದುರ್ಜಯ = (ವಿ) ಜಯಿಸಲಿಕ್ಕೆ ಬಾರದ ೯-೯೮

ದುರ್ಣಯ = (ನಾ) ದುರ್ನೀತಿ, ಕೆಟ್ಟ ರೀತಿ ೯-೧೯೨, ೧೩-೧೯

ದುರ್ಧರ = (ವಿ) ತಡೆಯಲಸಾಧ್ಯವಾದ ೯-೧೨

ದುರ್ವಿಳಸಿತ = (ವಿ) ಅಸಹನೀಯವಾದ ಕೃತ್ಯ ೧೧-೧೫೭

ದುಷ್ಕೃತ = (ನಾ) ಪಾಪ ೧೦-೮೩

### ದೂ

ದೂದವಿ = (ನಾ) ದೂತೆ, ದಾಸಿ ೧೦-೧೯೨ (ಗ)

ದೂರಿಸು = (ಕ್ರಿ) ದೂರಮಾಡು ೧೦-೪೦, ೧೦-೫೭

ದೂಸರು = (ನಾ) ಉದ್ದೇಶ, ನೆವ, ಕಾರಣ ೯-೧೫ (ಗ) ೯-೧೬೦ ೧೧-೯೧

### ದೃ

ದೃಗ್‌ವನರುಹ = (ನಾ) ಕಮಲದಂತಿರುವ ಕಣ್ಣು, ನೇತ್ರಕಮಲ ೯-೧೬

ದೃಪ್ತ = (ವಿ) ದರ್ಪದಿಂದ ಕೂಡಿದ ೭-೧೦೪, ೧೦-೨೧೬

### ದೆ

ದೆಸೆಬಿದ್ದಂ = (ದ್ವ.ವಿ) ದಿಶಾವಿದ್ಧ, ದಿಕ್ಕನ್ನು ತಗುಲಿದ ೧೧-೧೫೪

ದೆಸೆವಡು = (ಕ್ರಿ) ಒಳ್ಳೆಯ ಗತಿಯನ್ನು ಕಾಣು ೧೦-೧೬೮ (ಗ)

ದೆಸೆವಲಿ = (ದ್ವ.ನಾ) ದಿಶಾಬಲಿ, ದಿಕ್ಕುಗಳಿಗೆ ನೀಡುವ ಆಹುತಿ ೯-೫೦, ೧೧-೫

ದೆಸೆವೆಣ್ಣು = (ನಾ) ದಿಕ್ಕೆಂಬ ಕನ್ನೆ ೧೦-೧೫೬

ದೇಸಿ = (ನಾ) ಸೌಂದರ್ಯ ೧-೨೬

ದೇಸಿಗ = (ನಾ) ಪರದೇಶದವನು, ದಿಕ್ಕಿಲ್ಲದವನು ೩-೪೭

### ದೊ

ದೊಣೆ = (ನಾ) ಬತ್ತಳಿಕೆ ೧-೧೦೭ (ಗ), ೧೦-೩೩

ದೊಮ್ಮಳಿಸು = (ಕ್ರಿ) ಗುಂಪುಗೂಡು, ಗಾಬರಿಯಾಗು ೧೧-೧೫೫ (ಗ)

ದೊರೆ = ಸಾಮ್ಯ, ಹೋಲಿಕೆ ೧೧-೮೫

ದೊರೆಕೊಳ್ = (ಕ್ರಿ) ಲಭಿಸು, ಸಿಗು ೧೧-೧೧, ೧೪-೫೫

ದೊರೆಗಿಡು = (ಕ್ರಿ) ಹಾಳಾಗು, ನಾಶವಾಗು, ನೀತಿ ತಪ್ಪು ೯-೧೪೩, ೧೫-೭೦

### ದೋ

ದೋಣೆವೀಳ್ = (ಕ್ರಿ) ತಗ್ಗು ಬೀಳು ೧೩-೮೧

ದೋಃ = (ನಾ) ಭುಜ, ತೋಳು ೧೩-೩

ದೋಃಪರಿಘ = (ನಾ) ಪರಿಘಾಯುಧದಂತೆ ಅಂದರೆ ಲೋಡಿನಂತೆ ಇರುವ ಭುಜ ೧೧-೩೫

ದೋರ್ದರ್ಪ = (ನಾ) ಬಾಹುಬಲ ೧-೨೧

ದೋರ್ಮಂಡಲ = (ನಾ) ಭುಜಪ್ರದೇಶ ೧೦-೬೮

ದೋರ್ವಲ್ಲರಿ = (ನಾ) ಬಳ್ಳಿಯಂತಿರುವ ತೋಳು ೯-೮೦

ದೋರ್ವಳ = (ನಾ) ಭುಜಬಲ ೨-೬೨, ೯-೫೯

ದೋಃಶ್ಯಾಲಿ = (ನಾ) ತೋಳಬಲವುಳ್ಳವ ೧೦-೧೯೭

ದೋಷ = (ನಾ) ರಾತ್ರಿ, ಅಪರಾಧ ೧೧-೧೮೨

ದೋಹಳ = (ದ್ವ.ನಾ.) ದೋಹದ,ಬಯಕೆ (ಬಸಿರೆಯರ) ೯-೧೮೫

ದ್ರೋಣಿ = (ನಾ) ದೊನ್ನೆ ೧೬-೯೦

### ಧ

ಧನುರ್ಗುಣ = (ನಾ) ಬಿಲ್ಲಿಗೆ ಕಟ್ಟಿದ ದಾರ, ಹೆದೆ ೧೪-೧೫

ಧನುರ್ಜ್ಯಾ = (ನಾ) ಬಿಲ್ಲಿನ ಹಗ್ಗ, ಹೆದೆ ೧೨-೧೬ (ಗ)

ಧವಳಿಸು = (ಕ್ರಿ) ಬೆಳ್ಳಗೆ ಮಾಡು, ಶುಭ್ರ ಮಾಡು ೧೦-೧೦೮

ಧವಳಚ್ಛತ್ರ = (ನಾ) ಬೆಳ್ಗೊಡೆ, ಶ್ವೇತಛತ್ರ ೧೦-೧೦೮

ಧ್ವಜಿನಿ = (ನಾ) ಪತಾಕಿನಿ, ಸೈನ್ಯ ೧೦-೧೮೧

ಧಾರಾಗೃಹ = (ನಾ) ಮೇಲಿನಿಂದ ಧಾರಾಕಾರವಾಗಿ ನೀರು ಬೀಳುವ ಏರ್ಪಾಡು ಮಾಡಿದ ಸ್ನಾನಗೃಹ ೧೧-೧೫೧

ಧ್ವಾನ = (ನಾ) ಧ್ವನಿ, ಸಪ್ಪುಳ ೮-೪೩, ೧೧-೧೦

ಧೀಂಕಿಡು = (ಕ್ರಿ) ದಾಳಿಯಿಕ್ಕು, ಹಾರಿಹೋಗು ೧೨-೧೭

ಧುರ = (ನಾ) ಯುದ್ಧ, ಕಾಳಗ ೯-೫೬ (ಗ)

ಧೂಮಭಾಜನ = (ನಾ) ಧೂಪವನ್ನು ಹಾಕುವ ಪಾತ್ರೆ ೧೨-೭

ಧೂಮಲೇಖ = ಹೊಗೆಯ ರೇಖೆ ೯-೨೨

ಧೋರಣ = (ನಾ) ವಾಮನ, ಆನೆ ೧೦-೨೦೯ (ಗ)

ಧೋರಣರ್ = (ನಾ) ಮಾವುತರು ೧೩-೭೩

## ನ

ನಕ್ತಂಚರಿ = (ನಾ) ರಾತ್ರಿಯಲ್ಲಿ ಅಡ್ಡಾಡುವವಳು, ನಿಶಾಚರಿ, ರಾಕ್ಷಸಿ ೧೦-೨೨೩

ನಖ = (ನಾ) ಉಗುರು ೧-೯

ನಖರ = (ನಾ) ಉಗುರು ೧೧-೩೫

ನಗ = (ನಾ) ಪರ್ವತ, ಬೆಟ್ಟ ೧೧-೧೫೩

ನಗಧರ = (ನಾ) ವಿಷ್ಣು (ಇಲ್ಲಿ ಲಕ್ಷ್ಮಣ) ೯-೬೦

ನಂಜು = (ನಾ) ವಿಷ ೯-೬೯

ನಡಪು = (ಕ್ರಿ) ಸಾಕು, ಜೋಪಾನ ಮಾಡು ೧೫-೪೧ (ಗ)

ನಡೆ = (ಅ) ಚೆನ್ನಾಗಿ ೧೦-೨೩೩

ನಣ್ಪು = (ನಾ) ಸ್ನೇಹ, ಪ್ರೀತಿ, ಪ್ರೇಮ ೧೦-೧೫೩ (ಗ), ೧೧-೨೩

ನದದ್ಭೃಂಗ = (ನಾ) ನಾದ ಮಾಡುವ ಭ್ರಮರ ೧೧-೧೦

ನಂದನ = (ನಾ) ತೋಟ ೧೦-೧೦೨

ನನೆಗಣೆಯ = (ನಾ) ಕುಸುಮಬಾಣ, ಕಾಮ ೯-೪೬

ನನೆಯಂಬ = (ನಾ) ಹೂವಿನ ಬಾಣ ಹಿಡಿದವ, ಕಾಮ ೪-೯೨

ನಮೆ = (ಕ್ರಿ) ನವೆ, ಸವೆ, ಸೊರಗು ೧೪-೫೧

ನಮೇರು = (ನಾ) ಸುರಗಿಯ ಗಿಡ ೮-೫೦, ೯-೧೬೦ (ಗ), ೧೧-೧೨೨

ನಯ = (ನಾ) ರಾಜನೀತಿ ೧೦-೧೧೩ (ಗ)

ನಯನಾಂಬು = (ನಾ) ಕಂಬನಿ, ಕಣ್ಣೀರು ೧೧-೮೭

ನರ್ಮಸಚಿವ = (ನಾ) ವಿದೂಷಕ (ವಿನೋದಕ್ಕಾಗಿ ಇರಿಸಿಕೊಂಡಮಂತ್ರಿ) ೧೫-೫೧ (ಗ)

ನಸುಗುತ್ತು = (ಕ್ರಿ) ಮೆಲ್ಲಗೆ ತಿವಿ ೪-೧೦೮

## ನಾ

ನಾಗಪಾಶ = (ನಾ) ಹಾವಿನಂತೆ ಇರುವ ಹಗ್ಗ ೧೦-೧೪೯ (ಗ)

ನಾಡಾಡಿ = (ನಾ) ದೇಶ ತಿರುಗುವವ, ಸಾಮಾನ್ಯ ವ್ಯಕ್ತಿ ೧-೯೯

ನಾರಂಗ = (ನಾ) ಕಿತ್ತಿಳೆ ೧೬-೯೪

ನಾರಾಚ = (ನಾ) ಬಾಣ ೯-೬೫, ೧೩-೮೦

ನಾಳಿಕೇರ = (ನಾ) ತೆಂಗು ೧೬-೯೪

ನಾಲ್ಕು ನೀರ್ಮಿಂದು = (ನಾ) ಋತುಮತಿಯು ನಾಲ್ಕನೆಯ ದಿನ ಸ್ನಾನ ಮಾಡಿ ೩-೨೩೨

ನಾಳಿಕೆ = (ನಾ) ಒಂದು ಕಾಲ ಪರಿಮಿತಿ (೩೮॥ ಅಲತಾ ಕಾಲಗಳು)

ನಾಟ್ = (ನಾ) ನಾಡು ೧೧-೧೩೬

ನಾಟ್ಕಡೆವೋಗು = (ಕ್ರಿ) ಅಡಗು, ಕಾಣದಂತಾಗು ೧೧-೧೩೬

ನಿಕಾಮ = (ವಿ) ಅತ್ಯಂತ, ಬಹಳ ೧೦-೧೦೧

ನಿಕಾಯ = (ನಾ) ಸಮೂಹ ೧೧-೧೨೫

ನಿಕುಂಜ = (ನಾ) ಪೊದೆ, ಮಳೆ ೯-೧೨೦ (ಗ)

ನಿಗ್ಗವ = (ನಾ) ಆನೆಯ ಕೋರೆ ೧೦-೧೫೨

ನಿಗ್ಗಡಿ (ದ್ಭ. ನಾ) ನಿರ್ಗಡಿ, ವಿಚಾರಶೂನ್ಯ ೬-೩೫

ನಿಚಯ = (ನಾ) ಸಮೂಹ ೧೨-೫

ನಿಚ್ಚಂ = (ದ್ಭ. ಅ) ನಿತ್ಯಂ, ದಿನಾಲು ಯಾವಾಗಲೂ ೧೧-೧೪೩

ನಿಚ್ಚವಯಣ = (ದ್ಭ.ನಾ.) ನಿತ್ಯಪ್ರಯಾಣ ೧೦-೧೭ (ಗ)

ನಿಚೋಳಕ = (ನಾ) ಕವಚ ೫-೮೫

ನಿಟಿಲ = (ನಾ) ಹಣೆ ೧೨-೧೦ (ಗ)
ನಿಟ್ಟೆ = (ದ್ಭ.ನಾ) ನಿಷ್ಠೆ ೯-೨೬
ನಿಟ್ಟೆಲ್ವು = (ನಾ) ನಿಡಿದಾದ ಎಲುಬು ೧೧-೧೪೩
ನಿತಂಬ = (ನಾ) ಬೆಟ್ಟದ ಓರೆ ೧೨-೩೬
ನಿತ್ತರಿಸು = (ದ್ಭ.ಕ್ರಿ) ನಿಸ್ತರಿಸು, ತಾಳು, ತಡೆ, ಹೊಣೆ ಹೊತ್ತು ಕೆಲಸಮಾಡು ೧೧-೧೦೭ (ಗ)
ನಿದಾಘ = (ನಾ) ಬಿಸಿಲುಗಾಲ, ಬೇಸಗೆ ೭-೯೭
ನಿಧಾನಂಗೆಯ್ = (ಕ್ರಿ) ಹಣವನ್ನು ಹೂತಿಡು ೧೦-೧೦೫ (ಗ)
ನಿಧಿ = (ನಾ) ಹೂತಿಟ್ಟ ದ್ರವ್ಯ ೭-೬೯ (ಗ)
ನಿನ್ನನ್ನ = (ವಿ) ನಿನ್ನಂತಹ ೨-೭೫
ನಿಬ್ಬರಿಸು = (ಕ್ರಿ) ಕಂದಿಹೋಗು,ಬಾಡು ೯-೧೧೨
ನಿಬಿಡ = (ವಿ) ದಟ್ಟವಾದ, ಗಾಢವಾದ ೧೦-೧
ನಿಭ = (ಅ) ಸಮಾನ, ಹೋಲುವ ೧೨-೪೦
ನಿಮಿರ್ = (ಕ್ರಿ) ಸೆಡೆದು ನಿಲ್ಲು ೧೧-೯೧
ನಿಮಿರ್ಚು = (ಕ್ರಿ) ಹಬ್ಬು, ವ್ಯಾಪಿಸು, ಚಾಚು ೨-೩೮, ೨-೫೯
ನಿಯಮಿಸು = (ಕ್ರಿ) ತಡೆದು ನಿಲ್ಲಿಸು, ನಿಯಂತ್ರಿಸು ೯-೯೨
ನಿರ್ಯೋಗ = (ನಾ) ರಾಯಭಾರ, ರಾಜಸೇವೆ ೧೧-೪೫
ನಿರ್ಜಿತ = (ವಿ) ಸೋಲಿಸಿದ ೧೦-೧೮೪
ನಿರ್ಝರ = (ನಾ) ಜಲಪ್ರವಾಹ, ಸೆಲೆ, ಅಬ್ಬಿ ೯-೧೩೭
ನಿರ್ಬುದ್ಧಿ = (ವಿ) ಬುದ್ಧಿಗೇಡಿತನ ೧೧-೫೦
ನಿರ್ಭರ = (ವಿ) ಅತಿಶಯ, ಬಹಳ ೧೪-೨ (ಗ)
ನಿರ್ಯತ್ = (ವಿ) ಹೊರಹೊಮ್ಮುವ ೧೨-೩೫
ನಿರ್ವರ್ತಿತ = (ವಿ) ಸಂಪೂರ್ಣ ಮಾಡಿದ, ಮುಗಿಸಿದ ೧೧-೧೮೫ (ಗ)
ನಿರ್ವೃತಿ = (ನಾ) ಮೋಕ್ಷ ೧೬-೭೭
ನಿವೃತ್ತಿ = (ನಾ) ಮೋಕ್ಷ ೨-೪೬
ನಿರ್ವಾಣ = (ನಾ) ಮುಕ್ತಿ, ಕೊನೆ ೨-೭೫
ನಿರ್ವೇಗ = (ನಾ) ವೈರಾಗ್ಯಕ್ಕೆ ಕಾರಣ ೧೦-೧೧೪ (ಗ), ೧೬-೩೭ (ಗ)
ನಿರಯ = (ನಾ) ನರಕ ೯-೧೧
ನಿರವದ್ಯ = (ವಿ) ಪರಿಶುದ್ಧ, ಪಾವನ ೯-೧ (ಗ)
ನಿರವಧಿ = (ಅ) ಅಳತೆ ಇಲ್ಲದಷ್ಟು ೧೦-೧೪೦ (ಗ)
ನಿರಾಲೋಚಂ = (ಅ) ಯೋಚನೆ ಮಾಡದೆ ೧೦-೧೧೪
ನಿರುಜಂ = (ನಾ) ರೋಗವಿಲ್ಲದವನು ೧೫-೩೨
ನಿಱಿಸು = (ಕ್ರಿ) ಇಡು ೧೦-೬೦
ನಿಲ್ಕು = (ಕ್ರಿ) ಮುಟ್ಟು, ತಲ್ಪು ೯-೧೬೧
ನಿವೇದಿಸು = (ಕ್ರಿ) ತಿಳಿಸು, ಬಿನ್ನವಿಸು ೯-೧೦೯
ನಿಶ್ಶಲ್ಯ = (ವಿ) ನಿಷ್ಕಂಟಕವಾಗಿ, ಕಷ್ಟವಿಲ್ಲದೆ ೧೦-೧೭೩ (ಗ), ೧೦-೨೧೨
(ಗ), ೧೬-೪೧ (ಗ)
ನಿಶಾಟ = (ನಾ) ರಾತ್ರಿಯಲ್ಲಿ ತಿರುಗುವವ, ರಾಕ್ಷಸ, ದೈತ್ಯ ೧೧-೧೭೫
ನಿಃಶ್ವಾಸ = (ನಾ) ಉಸಿರಾಟ ೯-೨೨, ೯-೧೧೮
ನಿಶಾತ = (ವಿ) ಸಾಣೆ ಹಿಡಿದ ಮಸೆದ ೧೦-೧೩೬, ೧೪-೧೬
ನಶಿತ = ಹರಿತವಾದ, ಮೊನೆಯಾದ ೯-೧೦೪
ನಿಷ್ಕಷಾಯಂ = (ಅ) ಕಷಾಯವಿಲ್ಲದೆ, ಕಹಿಯಿಲ್ಲದೆ ೧೦-೨೧೨ (ಗ)
ನಿಷ್ಕೃಪಂ = (ನಾ) ಕರುಣೆಯಿಲ್ಲದವನು, ನಿರ್ದಯಿ ೯-೧೧ (ಗ)
ನಿಷಾದಿ = (ನಾ) ಮಾವುತ, ಮಾವಟಿಕ ೧೩-೭೪
ನಿಸಕ್ತರಾಗಿ = (ವಿ) ಸ್ವಾಭಾವಿಕ ಆಸಕ್ತ ೯-೧೪೮ (ಗ)
ನಿಸ್ತುಲ = (ವಿ) ಸರಿತೂಕವಿಲ್ಲದ, ಅಪ್ರಮೇಯ ೧೨-೧೫
ನಿಸ್ವನ = (ನಾ) ಧ್ವನಿ, ನಾದ ೯-೧೦೮, ೧೦-೪೧

## ನೀ

ನೀಡುಂ = (ಅ) ಅಧಿಕವಾಗಿ, ಹೆಚ್ಚಾಗಿ ೭-೩೯ (ಗ), ೯-೧೭೮, ೧೦-೮೧(ಗ)
ನೀಡಱ್ = ಅಲ್ಪಕಾಲ ೧೫-೮೩ (ಗ), ೧೬-೪೯ (ಗ) ೧೬-೧೫
ನೀರ್ಗಾದಿ = (ನಾ) ಕಂದಕ, ಅಗಳ್ತೆ ೧-೧೧೩
ನೀರ್ಪೊನಲ್ = (ನಾ) ನೀರಿನ ಪ್ರವಾಹ ೧-೧೧೨
ನೀರಂಧ್ರ = (ವಿ) ಛಿದ್ರವಿಲ್ಲದ,ಸಾಂದ್ರವಾದ ೭-೧೪೩, ೧೦-೧೨೬

ನೀರಾಗ = (ನಾ) ಆಶಾರಾಹಿತ್ಯ, ನಿರ್ಮೋಹ ೭-೫
ನೀಱ = (ನಾ) ಸುಂದರ, ಇನಿಯ ೧-೧೨೦
ನೀಱೆ = (ನಾ) ಸುಂದರಿ, ಸೊಗಸುಗಾರ್ತಿ, ೯-೧೬೪, ೧೦-೬೯
ನೀವಿ = (ನಾ) ನಿರುಗೆ ೫-೪೨
ನೀಳನಗ = (ನಾ) ನೀಲಾಚಲ, ನೀಲಗಿರಿ ೧೧-೧೫೯

## ನೆ

ನೆಗಪು = (ಕ್ರಿ) ಎತ್ತು ೧೦-೧೬೧ (ಗ), ೧೧-೮
ನೆಗಟ್ತೆ = (ನಾ) ಪ್ರಖ್ಯಾತಿ, ಕೀರ್ತಿ ೧೧-೭೮
ನೆಗಟ್ = (ಕ್ರಿ) ಪ್ರಸಿದ್ಧವಾಗು, ಪ್ರಕಟವಾಗು ೯-೨, ಉದ್ಭವಿಸು, ಹುಟ್ಟು ೯-೪೨
ನೆಗೆ = (ಕ್ರಿ) ಜಿಗಿ, ಮೇಲಕ್ಕೆ ಹಾರು ೧೦-೨೦
ನೆರಬಲ = (ನಾ) ಸಹಾಯಕ ಸೈನ್ಯ ೧೦-೬
ನೆನೆಯಿಸು = (ಕ್ರಿ) ಸ್ಮರಣೆಗೆ ತಂದುಕೊಡು ೧೧-೧೮೫
ನೆಯ್ದಿಲ್ = (ನಾ) ನೀಲಕಮಲ ೧೦-೮೧
ನೆರ = (ನಾ) ಸಹಾಯ, ೯-೧೨೨
ನೆಱ = (ನಾ) ಮರ್ಮಸ್ಥಾನ ೧೦-೨೩೩, ೧೧-೧೪೦ (ಗ), ೧೩-೪೨
ನೆಱೆ = (ಕ್ರಿ) ತುಂಬು, ಪೂರ್ಣವಾಗು ೧೧-೪ (ಅ) ಚೆನ್ನಾಗಿ, ಹೆಚ್ಚಾಗಿ ೯-೧೬೦
ನೆಱೆಯದು = (ಕ್ರಿ) ಸಾಲದು ೧೨-೩೩
ನೆಲಮುಕ್ಕು = (ನಾ) ಒಂದು ಬಗೆಯ ಪಕ್ಷಿ, ನೆಲಗುಮ್ಮ ೯-೧೨೩ (ಗ)
ನೆಲೆವೆರ್ಚು = (ಕ್ರಿ) ತುಂಬ ಹೆಚ್ಚಾಗು ೧೪-೨; ಎತ್ತರವಾಗು, ಎಲ್ಲೆಯನ್ನು ಮೀರು ೯-೧೦೯

## ನೇ

ನೇತ್ರಪುತ್ರಿಕೆ = (ನಾ) ಕಣ್ಣಗೊಂಬೆ ೧೧-೧೬೪
ನೇತ್ರಾಧ್ವ = (ನಾ) ದೃಷ್ಟಿಪಥ, ಕಣ್ಬೊಲ ೧೦-೨೭೯
ನೇಮಿ = (ನಾ) ಗಾಲಿಯ ಹಲ್ಲು ೧೩-೧೦೨
ನೇರ್ಗಿಱಿಯ = (ನಾ) ತಮ್ಮ, ಒಡಹುಟ್ಟಿದವ ೧-೧೫
ನೇರ್ಪಡು = (ಕ್ರಿ) ಅಂದವಾಗಿರು, ಓರಣ ವಾಗಿರು ೧೬-೯೮, ಕ್ರಮಗೊಳ್ಳು, ಹೊಂದಿಕೆಯಾಗು ೧೦-೬೭
ನೇರ್ಪೆಡುಗಿಡು = (ಕ್ರಿ) ವ್ಯವಸ್ಥೆ ತಪ್ಪಿಹೋಗು ೯-೮೫, ೧೧-೧೩೧
ನೇರ್ಪು = (ವಿ) ಔಚಿತ್ಯ, ಓರಣ
ನೇರಿತು = (ವಿ) ಸಕಲ, ಒಳ್ಳೆಯ ರೀತಿ ೧೧-೧೭೬
ನೇವಾಳ = (ನಾ) ಕೊರಳಸರ, ಕಂಠಿ ೭-೪೧
ನೇವುರ = (ನಾ) ಕಾಲಗೆಜ್ಜೆ, ನೂಪುರ, ಪೈಜಣ ೩-೬೪
ನೇಸಱು (ನಾ) ಸೂರ್ಯ ೯-೧೧೨

## ನೈ

ನೈಮಿತ್ತಿಕ = (ನಾ) ಶಕುನ ಹೇಳುವವ, ಜೋಯಿಸ ೪-೧೨೨
ನೈಮಿತ್ತಿಕಾದೇಶ = (ನಾ) ಶುಭ ಶಕುನಗಳ ಸೂಚನೆ ೧೦-೧೪೯ (ಗ)

## ನೊ

ನೊಚ್ಚಿತು = (ವಿ) ಸಾರ್ಥಕ, ಕೃತಾರ್ಥಕ ೧೦-೧೫೩
ನೊಣೆ = (ಕ್ರಿ) ನುಂಗು ೧೩-೪೦
ನೋನ್ = (ಕ್ರಿ) ಪೂಜಿಸು, ವ್ರತ ಮಾಡು ೧೫-೫೫ (ಗ)
ನೋಂತರ್ = (ವಿ) ಪೂಜೆ ಮಾಡಿದವರು, ವ್ರತ ಮಾಡಿದವರು ೩-೯೧

## ಪ

ಪಂಕರುಹ = (ನಾ) ಕೆಸರಲ್ಲಿ ಹುಟ್ಟಿದುದು, ಕಮಲ ೧-೧೩೦
ಪಕ್ಷ = (ನಾ) ತಿಂಗಳ ಅರ್ಧ, ೧೫ ದಿವಸಗಳು (ಶುಕ್ಲಪಕ್ಷ, ಕೃಷ್ಣ ಪಕ್ಷ) ೧-೫೧
ಪಗಂಡುಗೊಳ್ = (ಕ್ರಿ) ಪ್ರಕಟಿಸಿಕೊಳ್ಳು, ಚೆನ್ನಾಗಿ ತೋರಿಸಿಕೊಳ್ಳು ೯-೭೩
ಪಗಿಲ್ = (ಕ್ರಿ) ಅಂಟಿಕೊಳ್ಳು, ಹೊಂದಿಕೊಳ್ಳು ೭-೧೬೫
ಪಗೆವ = (ನಾ) ವೈರಿ ೧೧-೭೫, ೧೨-೨೮

ಪಂಕಿಲತಾ = (ವಿ) ಕೆಸರು ಮೆತ್ತುವಿಕೆ ೭-೧೧೭
ಪಚ್ಚೆಗರ್ಬುನ = (ನಾ) ಅಶುದ್ಧ ಕಬ್ಬಿಣ, ಬೀಡುಗಬ್ಬಿಣ ೪-೮೩
ಪಂಚುಪಜಿ = (ಕ್ರಿ) ಚೂರುಚೂರು ಮಾಡು, ಹರಿಹಂಚು ೧೩-೧೪೨
ಪಂಚೇಷು = (ನಾ) ಪಂಚಬಾಣ, ಮನ್ಮಥ ೩-೮೪
ಪಟಚ್ಛದೆ = (ನಾ) ರೇಶಿಮೆಯ ಬಟ್ಟೆಯನ್ನುಟ್ಟುಕೊಂಡವಳು ೧೦-೧೮೯
ಪಟಲ = (ನಾ) ಸಮೂಹ, ಪರದೆ, ತೆರೆ, ಪಕ್ಕ, ರೆಕ್ಕೆ ೧೨-೨ (ಗ) ೧೨-೩೨, ೧೬-೮೪
ಪಟಲಿಕೆ = (ನಾ) ಸಣ್ಣ ಬುಟ್ಟಿ, ಹಡಲಿಗೆ ೧೨-೨ (ಗ)
ಪಟವಾಸ = (ನಾ) ಗಂಧದ ಹುಡಿ ೪-೨೭
ಪಟಹ = ಭೇರಿ, ನಗಾರಿ ೧೨-೬೭
ಪಟಳ = (ನಾ) ರೆಕ್ಕೆ, ಪಕ್ಕ ೯-೧೨೦ (ಗ)
ಪಟ್ಟಿತ್ತಲ್ = (ಅ) ಮಲಗಿರುವಾಗಲೆ ೩-೧
ಪಟು = (ವಿ) ಬಿರುಸಿನ, ರಭಸದ ೧೧-೩೩
ನಿಪುಣ, ಪ್ರವೀಣ ೧೦-೧೪೮
ಪಡಲ್ವಡಿಸು - (ಕ್ರಿ) ಕೆಳಕ್ಕೆ ಬೀಳಿಸು ೧೪-೧೪೧ (ಗ)
ಪಡಲಿಟ್ಟರ್ = (ಕ್ರಿ) ಮನಬಂದಂತೆ ಓಡಿದರು ೪-೬೪
ಪಡಿ = (ದ್ಛ.ನಾ) ಪ್ರತಿ, ಕದ, ಕವಾಟ ೧೦-೮
ಪಡಿದೆರೆ = (ಕ್ರಿ) ಕದವನ್ನು ತೆರೆ ೧೦-೮
ಪಡಿಯರ = (ದ್ಛ.ನಾ.) ಪ್ರತಿಹಾರ, ದ್ವಾರಪಾಲಕ ೧೦-೬
ಪಡಿಯಿಡು = (ಕ್ರಿ) ಹೋಲಿಸಿನೋಡು ೧೧-೯೫
ಪಡು = (ಕ್ರಿ) ಮಲಗು, ಬೀಳು ೯-೧೮೦ (ಗ)
ಪಡೆಮಾತು = (ನಾ) ನಾಡನುಡಿ, ಲೋಕೋಕ್ತಿ, ೯-೧೫, ೧೨-೫೬
ಪಡೆವಳ = (ನಾ) ಸೇನಾಪತಿ, ೧೦-೧೩೪ (ಗ)
ಪತತ್ರಿ = (ನಾ) ಪಕ್ಷಿ ೫-೯
ಪತಾಕೆ = (ನಾ) ಧ್ವಜ ೧-೧೩೧
ಪತಾಕಿನಿ = (ನಾ) ಸೈನ್ಯಭಾಗ ೪-೫೧
ಪತ್ತಿ = (ನಾ) ಒಂದು ರಥ, ಒಂದು ಆನೆ, ಮೂರು ಕುದುರೆ, ಐದು ಕಾಲಾಳುಗಳ ಗುಂಪು ಸೈನ್ಯಭಾಗ ೯-೬೪
ಪತ್ತು = (ಕ್ರಿ) ತೊಡಗು, ಆರಂಭಿಸು ೯-೬೪
ಪತ್ತುವಿಡಿಸು = (ಕ್ರಿ) ಸಂಬಂಧ ಬಿಡಿಸು, ಅಗಲಿಸು, ದೂರಮಾಡು ೧೦-೧೯೫ (ಗ)
ಪಥ = (ನಾ) ಮಾರ್ಗ, ಹಾದಿ ೧-೫
ಪದ್ಮರಾಗ = (ನಾ) ಕೆಂಪುರತ್ನ, ಮಾಣಿಕ ೧೨-೮೮
ಪದ್ಮಷಂಡ = (ನಾ) ಕಮಲಾಕರ, ಸರೋವರ ೧೬-೨೯ (ಗ)
ಪದಘಾತ = (ನಾ) ಹೆಜ್ಜೆಯ ಏಟು ೧೧-೯
ಪದಪಾಂಸು = (ನಾ) ಪಾದಧೂಳಿ ೧-೧೦
ಪದಪು = (ನಾ) ಆನಂದ, ಆತುರ ೧೦-೧೧೪
ಪದಿಂಬರ್ = (ನಾ) ಹತ್ತು ಜನರು ೧೦-೧೦೬ (ಗ)
ಪದಿರ್ಮಡಿಸು = (ಕ್ರಿ) ಪದರು ಪದರಾಗಿ ಮಡಿಸು ೯-೧೮೬
ಪದಿರು = (ನಾ) ಒಂದು ಬಗೆಯ ವಾದ್ಯ ೧೩-೩೪ (ಗ)
ಪದೆ = (ಕ್ರಿ) ಆಶಿಸು, ಬಯಸು ೯-೮೭
ಪದೆಪು = (ನಾ) ಕುತೂಹಲ ಆನಂದ, ಇಚ್ಛೆ ೧೬-೯೮
ಪಂದಲೆ = (ನಾ) ಹಸಿಯ ತಲೆ (ಆಗತಾನೆ ಕಡಿದ ತಲೆ) ೯-೨೪
ಪಂದೆ = (ನಾ) ಹೇಡಿ, ೧೨-೭೪
ಪಯೋಜನ = (ನಾ) ಕಮಲ ೧-೨೮
ಪಯೋಧಿ = (ನಾ) ಸಾಗರ, ಸಮುದ್ರ ೧-೧೪
ಪಂಬಲಿಸು = (ಕ್ರಿ) ಹಲುಬು, ದುಃಖದಿಂದ ಕೂಗು ೯-೧೫೪
ಪರ್ದು = (ನಾ) ಹದ್ದು ೯-೩
ಪರ್ಯಂಕ = (ನಾ) ಮಂಚ ೯-೧೩೩ (ಗ)
ಪರ್ಯಣ = (ನಾ) ಪರಿವಾಣ, ತಟ್ಟೆ ೧೨-೭
ಪರ್ಯಯ = (ವಿ) ವಿವಿಧ ರೀತಿಯ ೧೬-೬೮
ಪರ್ಯಪ್ತಿ = (ನಾ) ಉಪಚಾರ, ಸತ್ಕಾರ ೭-೨೯
ಪರ್ವು = (ಕ್ರಿ) ಹಬ್ಬು, ವ್ಯಾಪಿಸು ೨-೧೨೩
ಪರದ = (ನಾ) ವರ್ತಕ, ವ್ಯಾಪಾರಿ ೧೦-೯೩ (ಗ), ೧೦-೧೧೬ (ಗ) ೧೬-೩೭ (ಗ)
ಪರದುವೋಗು = (ಕ್ರಿ) ವ್ಯಾಪಾರಕ್ಕೆ ಹೋಗು ೧೦-೯೩ (ಗ)

ಪರವಿದ್ಧ = (ನಾ) ಪ್ರತಿಬಿಂಬ ೩-೨೬ (ಗ)
ಪರಶು = (ನಾ) ಗಂಡುಗೊಡಲಿ, ಚಪ್ಪಗೊಡಲಿ ೧೧-೧೨೩
ಪರಾಯಣ = (ವಿ) ಆಸಕ್ತ, ಮಗ್ನ ೧೦-೧೧೬ (ಗ)
ಪರಾವರ್ತನ = (ನಾ) ಬದಲು ಮಾಡುವಿಕೆ, ಮಾರ್ಪಡಿಸುವಿಕೆ ೯-೩೫
ಪರಿಕರ = (ನಾ) ಸಾಧನ, ಸಲಕರಣೆ, ಸಮೂಹ ೧೬-೮೦
ಪರಿಗ್ರಹ = (ನಾ) ಕುಟುಂಬ, ಪರಿವಾರ ೧೦-೧೦೩ (ಗ) ಕಾದಿಟ್ಟ ಸೈನ್ಯ ೯-೧೫೨
ಪರಿಘ = (ನಾ) ಒಂದು ಆಯುಧ, ದೊಣ್ಣೆ ೧೦-೧೩೧
ಪರಿಚ್ಛದ = (ನಾ) ಹಚ್ಚಡ, ಹೊದ್ದಿಕೆ ೧೨-೧೧
ಪರಿಚ್ಛೇದ = (ನಾ) ಭಾಗ, ಖಂಡ ೧೨-೫೨
ಪರಿಜ = (ನಾ) ವೇಷ, ರೂಪ, ಸೋಗು ೯-೧೫೯, ೧೨-೨೯
ಪರಿಜನ = (ನಾ) ಪರಿವಾರದ ಜನ ೨-೪
ಪರಿಣಯನ = (ನಾ) ಮದುವೆ ೧೦-೧೬೭
ಪರಿತಂದು = (ಅ) ಓಡಿಬಂದು ೧೧-೧೧೬
ಪರಿನಾಳ = (ನಾ) ಹರಿನಾಳಿಗೆ ೧೬-೯೦
ಪರಿವೃಢ = (ನಾ) ದೊರೆ, ಯಜಮಾನ ೧೬-೮೪
ಪರಿಭವ = (ನಾ) ಸೋಲು, ಅಪಜಯ, ೯-೧೫೬
ಪರಿಮರಿಯಾಡು = (ಕ್ರಿ) ಅತ್ತಿತ್ತ ಓಡಾಡು, ಸುತ್ತಲೂ ಹಾರಾಡು ೯-೮೦
ಪರಿಮ್ಲಾನತೆ = (ನಾ) ಕೊರಗು, ದುಃಖ ೧೧-೧೨೮
ಪರಿಯಟ್ಟು = (ಕ್ರಿ) ಓಡುತ್ತ ಬೆಂಬತ್ತು ೮-೨೨ (ಗ)
ಪರಿಯಳ = (ನಾ) ಹರಿವಾಣ ೧೬-೯೧
ಪರಿರಂಭ = (ನಾ) ಆಲಿಂಗನ ೧೦-೨೧೩, ೧೫-೩೦, ೧೬-೮೦
ಪರಿವೇಷ = (ನಾ) ಸೂರ್ಯಚಂದ್ರರಿಗೆ ಸುತ್ತುಗಟ್ಟುವ ಬೆಳಕಿನ ಮಂಡಲ ೯-೬೨ (ಗ)
ಪರಿಸ್ಖಲಿತ = (ವಿ) ಸಡಿಲುಬಿದ್ದ, ತಪ್ಪು ತಪ್ಪಾದ ೯-೧೨೦ (ಗ)

ಪರಿಹರಣ = (ನಾ) ಏಟು, ಹೊಡೆತ ೧೦-೨೩
ಪರಿಹಾಸ = (ನಾ) ಕುಚೇಷ್ಟೆ, ೧೦-೨೩೧ (ಗ)
ಪರೀತ = (ವಿ) ಸುತ್ತುಗಟ್ಟಿದ ೧-೨೮
ಪರೀಷಹ = (ನಾ) (ಜೈನಸಿದ್ಧಾಂತದ ಒಂದು ಪರಿಭಾಷೆ) ಶೀತ-ಉಷ್ಣ ದಂಶ-ಮಶಕ ಮೊದಲಾದ ಕಷ್ಟಗಳು
ಪರೆ = (ಕ್ರಿ) ಹಬ್ಬು, ಪ್ರಸಾರವಾಗು ೧-೭೧ (ಗ), ೧೦-೪೭, ೧೨-೭೪
ಪಱಪಡು = (ಕ್ರಿ) ಇಲ್ಲದಂತಾಗು, ನಾಶವಾಗು ೮-೫೩
ಪಱಯಿಸು = (ಕ್ರಿ) ಕತ್ತರಿಸಿ ಬೀಳುವಂತೆ ಹೊಡೆ ೧೧-೫೨
ಪಱುಗೋಲ್ = (ನಾ) ಹರುಗೋಲು, ನಾವೆ ೯-೮೧
ಪಱೆ = (ನಾ) ಒಂದು ಬಗೆಯ ವಾದ್ಯ, ತಮ್ಮಟ, ಹಲಗೆ ೧೨-೮೦ ೧೩-೩೪ (ಗ)
ಪಱೆಗುಟ್ಟು = (ಕ್ರಿ) ಹಲಗೆಯನ್ನು ಬಾರಿಸು ೧೦-೧೪೪
ಪಲ್ಯಂಕ = (ನಾ) ಮಂಚ, ಪಲ್ಲಂಗ ೯-೧೭೬, ೧೧-೪೮
ಪಲ್ಲಣ = (ನಾ) ಕುದುರೆಯ ಥಡಿ ೪-೧೧೫
ಪಲ್ಲಣಿಸು = (ಕ್ರಿ) ಕುದುರೆಯನ್ನು ಸಿದ್ಧಗೊಳಿಸು ೪-೧೧೯ (ಗ)
ಪಲ್ಲವ = (ನಾ) ಚಿಗುರು,ತಳಿರು ೧೬-೯೪
ಪಲಾಲ = (ನಾ) ಜೊಳ್ಳುಕಾಳು ೧೧-೮
ಪವಣ = (ದ್ಭ.ವಿ) ಪ್ರಮಾಣ, ಅಳತೆ. ಜೋಡಿ, ಸಮಾನ ೧೨-೭
ಪವಣ್ಬುಗಿಸು = (ಕ್ರಿ) ಪ್ರಮಾಣಕ್ಕೆ ಒಳಪಡಿಸು, ಲೆಕ್ಕಕ್ಕೆ ಹಚ್ಚು ೧೩-೧೧
ಪವಣಿಸು = (ಕ್ರಿ) ಅಳತೆಮಾಡು ೧-೫೪
ಪಸದನ = (ದ್ಭ.ನಾ) ಪ್ರಸಾಧನ, ಉಡಿಗೆತೊಡಿಗೆ, ಅಲಂಕಾರ ೯-೧೨೦ (ಗ)
ಪಸರಿಗಂ = (ನಾ) ಹಬ್ಬಿಸುವವನು, ಪೇಟೆಯಲ್ಲಿ ಹರಡಿ ಮಾರಾಟ ಮಾಡುವವನು ೩-೧೯
ಪಸಲೆ = (ನಾ) ಹಸಿರು ಹುಲ್ಲು ಬೆಳೆದ ಬಯಲು ೭-೩೧ (ಗ)

ಪಸವಡು = (ಕ್ರಿ) ಆಸೆಪಡು ೭-೧೪೧
ಪಸು = (ದ್ಭ.ನಾ) ಪಶು ೧೦-೧೮೩ (ಗ)
ಪಸುಗೆ = (ನಾ) ಭಾಗ, ಪಾಲು ೧೧-೧೩೬
ಪಸೆ = (ನಾ) ಮಂಗಲಪೀಠ, ಹಸೆ ೮-೩
ಪಳಂಚಲೆ = (ಕ್ರಿ) ತಾಗು, ಸೋಂಕು ೯-೧೨೦ (ಗ), ೧೧-೫೧, ೧೨-೧೧, ೧೬-೪೨
ಪಳಂಚು = (ಕ್ರಿ) ಕಾದಾಡು, ಹೋರಾಡು, ತಾಗು ೧೦-೨೪, ೧೩-೩೮
ಪಳಯಿಗೆ = (ನಾ) ಧ್ವಜ ೧೩-೩೪ (ಗ)
ಪಳಿಕು = (ದ್ಭ.ನಾ) ಸ್ಫಟಿಕ ೧೨-೩
ಪಳಿತ = (ನಾ) ಕಾಲಪರಿಮಿತಿ,ವೇಳೆಯ ಒಂದು ಪ್ರಮಾಣ ೧-೮೫ ೧೬-೭೧ (ಗ)
ಪಟ್ಟಿವೆಟ್ಟ = (ನಾ) ಪಶ್ಚಿಮ ದಿಕ್ಕಿನ ಪರ್ವತ ೧೧-೧೭೭
ಪಱಿಯಿಗೆ = (ನಾ) ಬಾವುಟ, ಧ್ವಜಪಟ ೧-೧೧೬, ೩-೬೦
ಪಱೆ = (ನಾ) ನಿಂದೆ ೧೨-೫೪, ೧೨-೭೦ (ಕ್ರಿ) ನಿಂದಿಸು ೯-೧೯೨
ಪಱೆಗಟ್ = ವನವನ್ನು ದಾಟು ೯-೧೬೦ (ಗ)
ಪ್ರಸ್ಖಲಿತ = (ವಿ) ತಡೆಹಿಡಿದ, ನಿಲ್ಲಿಸಿದ ೧೦-೧೧೯
ಪ್ರಕೋಷ್ಠ = (ನಾ) ಮೊಳಕೈಯಿಂದ ಮಣಿಕಟ್ಟಿನ ವರೆಗೆ ಇರುವ ಕೈಯಭಾಗ ೫-೧೩೬ ೧೨-೧೬ (ಗ)
ಪ್ರಗ್ರಹ = (ನಾ) ಹಗ್ಗ, ಕಡಿವಾಣ, ೪-೧೨೯
ಪ್ರಚ್ಛದ = (ನಾ) ಹಚ್ಚಡ, ಹೊದಿಕೆ ೧೧-೧೮೫ (ಗ)
ಪ್ರಚುರ - (ವಿ) ಶ್ರೇಷ್ಠ, ವಿಪುಲ ೧೨-೨ (ಗ)
ಪ್ರತ್ಯಂತ = (ನಾ) ಮೇರೆ ೧೨-೪೫
ಪ್ರತ್ಯಯ = (ನಾ) ನಿದರ್ಶನ ೧೬-೨೫ (ಗ)
ಪ್ರತಾನ = (ನಾ) ಸಮೂಹ ೭-೨೬
ಪ್ರತ್ಯಾಖ್ಯಾನ = (ನಾ) ತ್ಯಾಗ, ತಿರಸ್ಕಾರ ೧೬-೬೨ (ಗ)
ಪ್ರತಿಪತ್ತಿ = (ನಾ) ಮರ್ಯಾದೆ, ಗೌರವ, ಕಾಣಿಕೆ ೪-೫೩, ೧೦-೨೧೧ (ಗ), ೧೧-೩೩ (ಗ)
ಪ್ರತಿಪನ್ನಿಕೆ = (ನಾ) ವಿವೇಕ, ತಿಳುವಳಿಕೆ ೧೦-೪೭
ಪ್ರತಿಬದ್ಧ = (ವಿ) ಕಟ್ಟಿಹಾಕಿದ, ಬಂಧಿಸಿದ ೯-೧೫೩
ಪ್ರತೀಹಾರ = (ನಾ) ಕಾಣಿಕೆ ೧೨-೭೬ (ಗ)
ಪ್ರಥನ = (ವಿ) ದೊಡ್ಡ, ವಿಸ್ತಾರವಾದ ೧೩-೨೯ (ಗ)
ಪ್ರಥಿತ = (ವಿ) ಹೆಸರಾದ, ಪ್ರಸಿದ್ಧವಾದ ೧೨-೯೯
ಪ್ರದೀಪಿಕೆ = (ನಾ) ಹೊಳೆಯುವ ದೀಪ, ನೀರಾಜನ ೧೨-೭
ಪ್ರದ್ಯೋತ = (ನಾ) ಹೊಳಪು, ಪ್ರಕಾಶ ೧೨-೩೨
ಪ್ರಧ್ವಾನ = (ನಾ) ದೊಡ್ಡ ಧ್ವನಿ ೭-೧೦೨
ಪ್ರಪಾಂಗನೆ = (ನಾ) ಅರವಟ್ಟಿಗೆಯಲ್ಲಿ ನೀರು ನೀಡುವ ಹೆಣ್ಣು ೧-೧೦೩
ಪ್ರಭಂಜನ = (ನಾ) ಬಿರುಗಾಳಿ, ವಾಯುದೇವನ ಹೆಸರು ೬-೮೫
ಪ್ರಮಿತ = (ವಿ) ಅಳತೆಮಾಡಿದ ೧೦-೧೦೧ (ಗ)
ಪ್ರಮೋದ = (ನಾ) ಆನಂದ, ಸಂತೋಷ ೨-೭೭
ಪ್ರವಣ = (ವಿ) ಪ್ರಸಿದ್ಧ, ಶ್ರೇಷ್ಠ ೧೬-೪೩ (ಗ)
ಪ್ರವರ್ಧಮಾನ = (ವಿ) ಬೆಳೆಯುತ್ತಿರುವ ೩-೧೩೮
ಪ್ರವರ = (ನಾ) ಮುಖ್ಯಸ್ಥ, ನಾಯಕ ೫-೧೬
ಪ್ರವಾದ = (ನಾ) ಮಾತುಕತೆ, ಚರ್ಚೆ ೧೨-೭೯ (ಗ)
ಪ್ರವಾಹಿನಿ = (ನಾ) ನದಿ ೧೨-೨ (ಗ)
ಪ್ರವೀರ = (ನಾ) ಪರಾಕ್ರಮಿ, ಸತ್ವಶಾಲಿ ೧೧-೧೩೪
ಪ್ರಸಂಗ = (ನಾ) ಅವಸರ, ಸಮಯ ೯-೨ (ಗ)
ಪ್ರಸವ = (ನಾ) ಫಲ ೧೨-೬೨ (ಗ)
ಪ್ರಸ್ಯಂದಿ = (ವಿ) ಹೆಚ್ಚಾಗಿ ಸುರಿಯುವ, ಹರಿಯುವ ೯-೧೨೧
ಪ್ರಸ್ಥಾನ = (ನಾ) ಒಳ್ಳೆಯ ಸ್ಥಳ, ಉನ್ನತ ಸ್ಥಾನ ೧-೫
ಪ್ರಸುಪ್ತ = (ವಿ) ಮಲಗಿದ, ನಿದ್ದೆ ಮಾಡುತ್ತಿರುವ ೧೧-೧೮೫ (ಗ)
ಪ್ರಸೂನ = (ನಾ) ಹೂ, ಪುಷ್ಪ ೧೧-೧೨೮, ೧೨-೨ (ಗ)
ಪ್ಲವಗ = (ನಾ) ಮಂಗ, ಕಪಿ ೧೩-೨೬

## ಪಾ

ಪಾಠಕರು = (ನಾ) ಹೊಗಳುವ ಭಟರು, ಸ್ತುತಿಪಾಠಕರು ೩-೧೧೫

ಪಾಡಱ್ = (ಕ್ರಿ) ಮೈಮರೆ, ಕಂಗಡು ೧೦-೧೧೧, ೧೦-೧೯೧

ಪಾಂಡುರ = (ವಿ) ಬಿಳಿಯ ಬಣ್ಣದ ೧೨-೨೯

ಪಾಣ್ಬ = (ನಾ) ವಿಟ, ಕಾಮಿ, ಸಿತಗ ೯-೮೦

ಪಾಣ್ಬೆ = (ನಾ) ಜಾರೆ ೧೫-೩೬ (ಗ)

ಪಾತ್ರೀಭೂತ = (ವಿ) ಒಳಗೊಂಡ, ಆಧಾರವಾದ ೧-೪

ಪಾಥೇಯ = (ನಾ) ದಾರಿಯ ಬುತ್ತಿ ೭-೨೯

ಪಾಂಥ = (ನಾ) ದಾರಿಕಾರ ೧-೧೦೩

ಪಾಪರ್ಧಿ = (ನಾ) ಪಾಪಕರ್ಮಗಳಿಂದ ಜೀವಿಸುವವನು, ಬೇಂಟೆಗಾರ ೭-೧೨೨

ಪಾಪೆ = (ನಾ) ಗೊಂಬೆ ೪-೧೨

ಪಾರ್ಶ್ವ = (ಅ) ಬದಿ, ಪಕ್ಕ ೧-೧

ಪಾರ್ = (ಕ್ರಿ) ಬಯಸು, ಅಪೇಕ್ಷಿಸು ೪-೬೫

ಪಾರಾವಾರ = (ನಾ) ಸಮುದ್ರ ೧೦-೧೪೪ (ಗ)

ಪಾರಿಹಾರ್ಯ = (ನಾ) ಕಡಗ ೩-೬೪, ೯-೧೫೩

ಪಾರು = (ಕ್ರಿ) ಬಯಸು, ಅಪೇಕ್ಷಿಸು ೧೧-೭, ೧೩-೧೨

ಪಾಱುಂಬಳೆ = (ನಾ) ಚಕ್ರಾಯುಧ ೫-೩೨

ಪಾಸಱೆ = (ನಾ) ಹಾಸುಗಲ್ಲು ೪-೧೭, ೧೦-೧೫೯

ಪಾಟಿ = (ನಾ) ಕ್ರಮ, ನಿಯಮ ೯-೪೯, ೧೧-೧೩೬

ಪಾಟಿಗೆದಪ್ಪು = (ಕ್ರಿ) ಕ್ರಮವನ್ನು ಮೀರು ೧೧-೧೦೩ (ಗ)

ಪಾಟಿ ಕೇತನ = (ನಾ) ಒಂದು ವಿಶಿಷ್ಟ ರೀತಿಯ ಧ್ವಜ, ಬಿರುದಿನ ಧ್ವಜ ೧೦-೧೭೮ (ಗ)

ಪಾಟಿಯೆ = (ನಾ) ಸರಿಯೆ? ಯೋಗ್ಯವೆ? ೪-೮೧

ಪ್ರಾಕಾರ = (ನಾ) ಸುತ್ತುಗೋಡೆ, ಕೋಟೆಯ ಗೋಡೆ ೧೦-೧೦೨, ೧೧-೧೭೯

ಪಾವನಿ = (ನಾ) ಹನುಮಂತ, ವಾಯುಸುತ, ಪವನಸುತ ೧೧-೮೪

## ಪಿ-ಪೀ

ಪಿಕ = (ನಾ) ಕೋಗಿಲೆ ೯-೧೧೮, ೧೦-೪೧

ಪಿಂಗು = (ಕ್ರಿ) ಹಿಂಗು, ಹಿಂಜರಿ ೨-೧೭

ಪಿಂಜರಿತ = (ವಿ) ಹೊಂಬಣ್ಣದ ೧೨-೨ (ಗ)

ಪಿಡಿಗೆ = (ನಾ) ಹೆಣ್ಣಾನೆ ೧೪-೧೨೧

ಪಿಡಿಪು = (ನಾ) ಹಿಡಿತ ೧೦-೧೫೯ (ಗ) ಕೈಸರ, ಬಂಧನ ೧೧-೧೩೩

ಪಿಂಡುಗಂಕಣ = (ನಾ) ಒಂದು ಬಗೆಯ ಕೈಬಳೆ ೧೨-೪೪

ಪಿತೃವ್ಯ = (ನಾ) ಚಿಕ್ಕಪ್ಪ, ಕಕ್ಕ ೧೬-೧೩

ಪಿರಿಯ = (ಧ್ವ.ನಾ) ಪ್ರಿಯ, ನಲ್ಲ, ಓಪ ೧೨-೫೪

ಪಿಷ್ಟಾತಕ = (ನಾ) ರಂಗವಲ್ಲಿಯ ಹಿಟ್ಟು ೪-೨೭

ಪಿಸುಣ = (ವಿ) ಚಾಡಿಕೋರ ೩-೧೯

ಪಿಳಿಗು = (ಕ್ರಿ) ಅಲ್ಲಾಡು, ಕಂಪಿಸು ೧೩-೩೫

ಪಿೞ್ = (ಕ್ರಿ) ಹಿಂಡು ೧-೯೪

ಪಿಳ್ಕು = (ನಾ) ಬಾಣದ ಹಿಂಬದಿ, ಹಿಳುಕು ೧೪-೧೭೫

ಪೀನ = (ವಿ) ಪುಷ್ಟವಾದ, ತೋರವಾದ ೧೦-೧೯೦

ಪೀಯೂಷ = (ನಾ) ಅಮೃತ ೧೦-೭೨

ಪೀಱ್ = (ಕ್ರಿ) ಹೀರು, ಶೋಷಣೆ ಮಾಡು ೯-೧೨೪

ಪೀಲಿ = (ನಾ) ನವಿಲುಗರಿ ೧-೧೦೭ (ಗ)

ಪೀವರ = (ವಿ) ದೊಡ್ಡ, ಸ್ಥೂಲ ೫-೪೨ (ಗ)

## ಪು

ಪುಂಸವನ = (ನಾ) ಗರ್ಭಿಣಿಗೆ ಮಾಡುವ ಒಂದು ಸಂಸ್ಕಾರ ೭-೧೫೦

ಪುಗಿಲ್ = (ಅ) ಕೋಗಿಲೆಯ ಕೂಗು ೯-೧೮೬ (ಗ)

ಪುಚ್ಚಱ್ = (ಕ್ರಿ) ಕೇಡುಮಾಡು ೧೬-೩೫

ಪುಟ = (ನಾ) ಬಾಗಿಲು, ಕದ ೯-೧೧

ಪುಂಡರೀಕ = (ನಾ) ಬಿಳಿಯ ತಾವರೆ ೩-೧೫೫

ಪುಣ್ಪೆಱ್ = (ಕ್ರಿ) ಗಾಯಗೊಳ್ಳು ೯-೬೪

ಪುಣ್ಬಡಿಸು = (ಕ್ರಿ) ಗಾಯಗೊಳಿಸು ೧೦-೧೬೧

ಪುತ್ರಿಕೆ = (ನಾ) ಗೊಂಬೆ ೯-೧೦೯, ೧೨-೨ (ಗ)

ಪುದಿ = (ಕ್ರಿ) ತುಂಬು, ವ್ಯಾಪಿಸು ೯-೫೩, ೯-೧೧೬, ೧೧-೧೫೯, ೧೫-೨೮

ಪುದು = (ನಾ) ಸತ್ವ, ಸಾಮರ್ಥ್ಯ ೧೧-೪೫

ಪುದುವಾಟ್ = (ಕ್ರಿ) ಕೂಡಿಬಾಳು, ಸ್ನೇಹದಿಂದ ಬೆರ ೧೨-೮೪

ಪುಯಲ್ಗೆವರು = (ಕ್ರಿ) ಪುಯಿಲೆಬ್ಬಿಸುತ್ತ ಬರು ೧೧-೨೭ (ಗ)

ಪುಯ್ಯಲ್ = (ನಾ) ಮೊರೆ, ಆರ್ತಧ್ವನಿ ೯-೧೯೮

ಪುಯಲ್ಲು = (ಕ್ರಿ) ಆಕ್ರೋಶಿಸು, ಚೀರು, ಒದರು ೯-೧೪೧

ಪುರಂಧ್ರಿ = (ನಾ) ಸ್ತ್ರೀ, ೧೧-೧೫೯ (ಗ)

ಪುರಸ್ಸರ = (ಅ) ಮುಂದಿರಿಸಿಕೊಂಡು, ಕೂಡಿಕೊಂಡು ೧೧-೩೩ (ಗ)

ಪುರುಡು = (ನಾ) ಸ್ಪರ್ಧೆ, ಮೇಲಾಟ ೩-೪೫

ಪುರುಹೂತ = (ನಾ) ಇಂದ್ರ ೧-೯೯, ೧೧-೩೫

ಪುರೋಭಾಗ = (ಅ) ಮುಂಗಡೆ, ಎದುರು ೧೨-೧೦ (ಗ)

ಪುಲ್ಗೋಡ = (ನಾ) ಹುಲ್ಲಿನಂತೆ ಅಲ್ಪವಾದ ಕೋತಿ ೮-೩೨

ಪುಷ್ಕರ = (ನಾ) ಒಂದು ಮೇಘದ ಹೆಸರು ೧೪-೧೫೩

ಪುಷ್ಪಲಾವಿ = (ನಾ) ಹೂವಾಡಿಗಿತ್ತಿ, ಮಾಲೆಗಾರ್ತಿ ೧-೧೨೦

ಪುಟಿ್ಲ್ = ಮರಳು, ಉಸುಕು ೯-೭೫ (ಗ) ೯-೧೨೦ (ಗ)

## ಪೂ

ಪೂಣ್ = (ಕ್ರಿ) ಪ್ರತಿಜ್ಞೆಮಾಡು ೧೧-೪೪ (ಗ), ೧೨-೭೩

ಪೂಣ್ಕೆ = (ನಾ) ಪ್ರತಿಜ್ಞೆ, ಆಣೆ ೨-೩೬

ಪೂಗ = (ನಾ) ಅಡಕೆ ೧೧-೧೨೪

ಪೂತಂತೆ = (ಅ) ಹೂಬಿಟ್ಟಂತೆ ೪-೪೯

ಪೂವಲಿ = (ನಾ) ರಂಗವಲ್ಲಿ ೩-೧೩೪

ಪೃಥು = (ವಿ) ದೊಡ್ಡದಾದ, ಹರವಾದ ೧೦-೨೧೮

## ಪೆ-ಪೇ

ಪೆಟ್ಟುವೆಳೆ = (ಕ್ರಿ) ಹೆಟ್ಟಕಟ್ಟಿ ಎಳೆ ೧-೨೦

ಪೆಡತಲೆ = (ನಾ) ತಲೆಯ ಹಿಂಭಾಗ ೯-೪೯

ಪೆಡಂಮಗುಟ್ = (ಕ್ರಿ) ಹಿಂದಿರುಗು ೧೨-೧೮

ಪೆಂಡವಾಸ = (ನಾ) ಅಂತಃಪುರ, ರಾಣಿವಾಸ ೯-೧೭೪, ೧೧-೯೧ (ಗ)

ಪೆಣೆ = (ಕ್ರಿ) ಹೆಣೆ, ಹೊಂದಿಸು ೧೧-೧೬೪

ಪೆಂಪು = (ನಾ) ಘನತೆ, ಹಿರಿಮೆ, ಮಹಿಮೆ ೧೧-೧೩೭

ಪೆರ್ಗಡೆ = (ನಾ) ರಾಜದೂತ ೧೬-೩ (ಗ)

ಪೆರ್ಮಗ = (ನಾ) ಹಿರಿಯಮಗ ೯-೪೩

ಪೆರ್ಮಾರಿ = (ನಾ) ಹಿರಿಯ ಮಾರಿದೇವತೆ,ಉಗ್ರದೇವಿ ೪-೧೦೮

ಪೆರ್ವಡೆ = (ನಾ) ದೊಡ್ಡ ಸೈನ್ಯ ೧೧-೧೭೪

ಪೆರ್ವಿದಿರ್ = (ನಾ) ದೊಡ್ಡ ಬಿದಿರು ೯-೧೯

ಪೆಱಗು = (ಅ) ಹಿಂಬದಿ ೪-೮೭

ಪೆಱಗಿಕ್ಕು = (ಕ್ರಿ) ಹಿಂದೆಹಾಕು, ಹೊರಗೆ ಹಾಕು ೩-೪೭ ೧೦-೨೦೦ (ಗ)

ಪೆರೆ = (ನಾ) ಹಾವಿನ ಪರೆ ೧೦-೩೧

ಪೆಱತು = (ವಿ) ಎರಡನೆಯದು,ಬೇರೆಯದು ೨-೨೧

ಪೆಱಪಿಂಗು = (ಕ್ರಿ) ಹಿಮ್ಮೆಟ್ಟು, ಹಿಂದೆಸರಿ ೧೬-೪

ಪೆಱೆ = (ನಾ) ಚಂದ್ರ ೪-೧೧೯

ಪೆಳ್ಪಳಿಸು =(ಕ್ರಿ) ಹೆದರಿ ನಡುಗು ೧೨-೧೮ ೧೪-೧೪೧

ಪೆಳ್ಚನೆ = (ಅ) ಒಮ್ಮೆಲೆ, ಹಠಾತ್ತಾಗಿ ೧೧-೧೫೬

ಪೆಳಱ್ = (ಕ್ರಿ) ಅಂಜು, ಭಯಪಡು ೧೩-೮೦

ಪೇಟಕ = (ನಾ) ಮೇಳ ೧೬-೮೪

ಪೇರರ್ವಿ = (ನಾ) ದೊಡ್ಡದಾದ ಸೆಲೆ, ಬೆಟ್ಟದಿಂದ ಪ್ರವಹಿಸುವ ಪ್ರವಾಹ ೭-೩೧

ಪೇರುರ = (ನಾ) ಹರವಾದ ಎದೆ ೧೧-೧, ೧೨-೧೫

ಪೇಶಲ = (ವಿ) ನಯವಾದ, ಚೆಲುವಾದ ೧೧-೮೭

ಪೇಸೇಱ್ = (ಕ್ರಿ) ಹೇಸಿಕೆ ಉಂಟಾಗು ೧೧-೧೩೨ (ಗ)

ಪೇಱ್ವನ್ನಂ = (ಅ) ಹೇಳುವವರೆಗೆ ೧೧-೧೭೧

## ಪೊ-ಪೋ

ಪೊಕ್ಕಿಸು = (ಕ್ರಿ) ಒಳಪೊಕ್ಕು ಬಾಣವನ್ನು ಪ್ರಯೋಗಿಸು ೯-೫೮
ಪೊಗರು = (ನಾ) ಕಾಂತಿ, ಹೊಳಪು ೯-೨೧
ಪೊಂಕ = (ನಾ) ಹಿಗ್ಗು, ಉತ್ಸಾಹ ೭-೧೩೧
ಪೊಂಗು = (ಕ್ರಿ) ಉಬ್ಬು (ಉತ್ಸಾಹದಿಂದ), ಹಿಗ್ಗು ೧೦-೧೨೫
ಪೊಂಜಲಗೆ = (ನಾ) ಹೊನ್ನಸಲಾಕೆ ೧೬-೩೧
ಪೊಡಪು = (ನಾ) ಸಾಮರ್ಥ್ಯ ೧೧-೧೪೧
ಪೊಡರ್ = (ಕ್ರಿ) ಹರಡು ೧೧-೧೩೫
ಪೊಡರ್ಪು = (ಕ್ರಿ) ಹುಟ್ಟು, ಉದ್ಭವಿಸು ೯-೧೨
ಪೊಡರ್ಪು = (ನಾ) ಪರಾಕ್ರಮ, ಸಾಮರ್ಥ್ಯ, ಕೀರ್ತಿ, ಕಾಂತಿ ೧೦-೧೮೬ (ಗ) ೧೧-೧೭೭, ೧೬-೫೩ (ಗ)
ಪೊಡೆವಡು = (ಕ್ರಿ) ನಮಸ್ಕರಿಸು ೯-೧೪೯ ಹೊಡೆತವನ್ನು ತಿನ್ನು ೧೦-೧೭೧
ಪೊಣ್ಮು = (ಕ್ರಿ) ಹೊರಹೊಮ್ಮು, ಮೇಲೇಳು ೧೬-೯೩
ಪೊಣರ್ = (ಕ್ರಿ) ಎದುರಿಸು, ಹೋರಾಡು ೧೩-೪ (ನಾ) ಜೊತೆ, ಜೋಡು ೧೫-೭೭
ಪೊಣರ್ಚು = (ಕ್ರಿ) ಯುದ್ಧಮಾಡು, ಜೋಡಿಸು, ಹೊಂದಿಸು, ೧೧-೯
ಪೊದಱು = (ನಾ) ಹೊದರು, ಗುಂಪು ೯-೧೬ (ಗ)
ಪೊದಟ್ಟು = (ಅ) ಹುಟ್ಟಿ, ೭-೧೦೬
ಪೊದಟ್ = (ಕ್ರಿ) ಹೊರಹೊಮ್ಮು ೧೧-೧೫೪ ಒದಗು, ಉಂಟಾಗು, ಹುಟ್ಟು ೧೨-೭೪, ೧೦-೧೩೮
ಪೊದೆ = (ನಾ) ಮೆಳೆ, ಗುಂಪು ಸಮೂಹ ೯-೨೩
ಪೊಂದಾವರೆ = (ನಾ) ಹೊಂದಾವರೆ, ಹಳದಿ ಬಣ್ಣದ ಕಮಲ ೯-೨೪
ಪೊನಲ್ = (ನಾ) ಪ್ರವಾಹ ೯-೩೭, ೧೦-೧೮೦ (ಗ)
ಪೊಯ್ = (ಕ್ರಿ) ಹೊಯ್, ಹೊಡೆ ೯-೫೬
ಪೊರ್ದು = (ಕ್ರಿ) ಹೊಂದು ೨-೧೯
ಪೊಱಪೊಣ್ಮು = (ಕ್ರಿ) ಹೊರಹೊಮ್ಮು ೧೧-೮೪
ಪೊಱಮುಯ್ಯು = (ನಾ) ಹೆಗಲಿನ ಹಿಂಬದಿ ೧೩-೪೭
ಪೊಲ್ಲಕೆಯ್ = (ಕ್ರಿ) ಅಕಾರ್ಯವನ್ನು ಆಚರಿಸು ೯-೯
ಪೊಲ್ಲಮೆ = (ನಾ) ಅಯೋಗ್ಯ ಕಾರ್ಯ, ಕೀಳು ಕೆಲಸ ೧೦-೧೭೬ (ಗ)
ಪೊಸಮಸೆಯ = (ವಿ) ಹೊಸತಾಗಿ ಸಾಣೆಹಿಡಿಸಿದ ೯-೬೦
ಪೊಸಯಿಸು = (ಕ್ರಿ) ಹೊಂದಿಸು, ಕೂಡಿಸು ೯-೧೬೭
ಪೊಟ್ಟಱ = (ನಾ) ಬೆಳಗು, ಉದಯಕಾಲ ೧೦-೯೪
ಪೊಱಲ್ = (ನಾ) ಪಟ್ಟಣ ೨-೪೨, ೯-೧೦, ೧೦-೨೧೩ (ಗ)
ಪೋಡುಗಾರ = (ನಾ) ಭೇದಿಸುವವ, ಕಟ್ಟಿಗೆ ಒಡೆಯುವವ ೪-೪೦, ೧೩-೧೦೪
ಪೋರ್ಕುಳಿ = (ನಾ) ಯುದ್ಧ, ಹೋರಾಟ ೭-೧೪೬, ೧೨-೬೧
ಪೋರ್ = (ಕ್ರಿ) ಜಗಳಾಡು, ಯುದ್ಧಮಾಡು ೯-೧೭೬
ಪ್ರೋದ್ವೃತ್ತ = (ವಿ) ಸೊಕ್ಕೇರಿದ, ಮದಿಸಿದ ೧೧-೧೪೩
ಪೌಲಸ್ತ್ಯ = (ನಾ) ಪುಲಸ್ತ್ಯ ಋಷಿಯ ಮೊಮ್ಮಗ ರಾವಣ ೧೧-೧೭೦

## ಫ

ಫಣಾಮಣಿ = (ನಾ) ಹೆಡೆಯಲ್ಲಿರುವ ರತ್ನ ೧೧-೧೨
ಫಣಿಪ = (ನಾ) ಆದಿಶೇಷ ೧೦-೧೭೮
ಫಣಿಲೋಕ = (ನಾ) ನಾಗಲೋಕ, ಪಾತಾಳ ೧೦-೧೭೮

## ಬ

ಬಕ್ಕೆಪಲಸು = (ನಾ) ಒಂದು ಬಗೆಯ ರುಚಿಕರವಾದ ಹಲಸು ೧೧-೧೨೦
ಬಗ್ಗಿಸು = (ಕ್ರಿ) ಗಳಹು, ಬಡಬಡಿಸು, ಕೆಣಕಿನುಡಿ

೧೨-೭೭
ಬಗೆ = (ನಾ) ಮನಸ್ಸು, ಆಲೋಚನೆ ೯-೧೩೫
ಬಗೆಗೊಳ್ = (ಕ್ರಿ) ಭಾವಿಸು ೯-೧೩೬
ಬಟ್ಟಾಡು = (ಕ್ರಿ) ಗೋಲಿ ಆಟವನ್ನು ಆಡು ೧೨-೬೮
ಬಡಗಣ = (ನಾ) ಉತ್ತರ ದಿಕ್ಕು ೪-೧೦೪, ೧೦-೧೫೬
ಬಡೆಕೂಳೆ = (ಅ) ಏಟನ್ನು ತಿನ್ನಲು ೧-೮೩
ಬದ್ದವಣ = (ನಾ) ಮಂಗಲವಾದ್ಯ ೪-೨೮, ೬-೪೭, ೧೩-೧೦೦
ಬಂಧುರ = (ವಿ) ಭದ್ರವಾದ, ಸುಂದರವಾದ ೯-೧೧೯
ಬನ್ನ = (ನಾ) ಭಂಗ, ಕೇಡು, ದುಃಖ ೨-೨೪, ೧೦-೬೩, ೧೧-೭೮
ಬಂಭಾರವ = (ನಾ) ವಾದ್ಯಗಳ ಧ್ವನಿ ೧೫-೨೮
ಬಯ್ = (ಕ್ರಿ) ಅಡಗು ೯-೧೩೩
ಬಲ್ಪು = (ನಾ) ಸಾಮರ್ಥ್ಯ, ಶಕ್ತಿ ೧೨-೬೪
ಬಲಗೊಳ್ = (ಕ್ರಿ) ಪ್ರದಕ್ಷಿಣೆ ಹಾಕು ೧೦-೧೭೭
ಬಲವಂದು = (ಕ್ರಿ) ಪ್ರದಕ್ಷಿಣೆ ಮಾಡಿ ೧೧-೮ (ಗ)
ಬಲ್ಲಣೆ = (ನಾ) ಬಲವಾದ ಸೈನಿಕರ ಗುಂಪು ೧೩-೭೯
ಬಲ್ಲಾಳ್ = (ನಾ) ಸಮರ್ಥ, ಶೂರ ೧೧-೩೬
ಬಲಿದು = (ಕ್ರಿ) ಬಂಧಿಸಿ, ಕಟ್ಟಿ ೧೦-೧೨ (ಗ)
ಬವರ = (ನಾ) ಯುದ್ಧ ೯-೧೧೪ (ಗ) ೧೨೩ (ಗ)
ಬಸದಾಗಿಸು = (ಕ್ರಿ) ವಶಪಡಿಸಿಕೊಳ್ಳು ೧೦-೪೦
ಬಸವಱ = (ಕ್ರಿ) ಸ್ವಾಧೀನ ತಪ್ಪು, ಪರವಶನಾಗು ೧೦-೨೬ (ಗ)
ಬಳ್ಳವಳ್ಳಿ = (ನಾ) ಪರಂಪರೆ ೧೨-೮೭
ಬಳಾಕ = (ನಾ) ಹಂಸ, ನೀರ್ವಕ್ಕಿ, ಕೊಕ್ಕರೆ ೭-೧೫೦
ಬಱಲ್ಮುಡಿ = (ನಾ) ಸಡಿಲು ಬಿದ್ದ ಹೆಳಲು ೩-೬೭ (ಗ)
ಬಱ = (ಅ) ತರುವಾಯ ೧-೭೭ (ಗ) (ನಾ) ದೂತ, ದೌತ್ಯ ೧೨-೪೦ (ಗ)
ಬಱಯಂ = (ಅ) ಬಳಿಕ, ಆಮೇಲೆ ೧೪-೮೬
ಬಱವಳಿ = (ನಾ) ಮದುಮಗಳಿಗೆ ಕೊಡುವ ಉಡುಗೊರೆ, ಕಾಣಿಕೆ, ೯-೧೯
ಬಱಸಲ್ = (ಕ್ರಿ) ಹಿಂಬಾಲಿಸು, ಬೆನ್ನುಹತ್ತು ೯-೧೮, ೧೦-೨೨೩

## ಬಾ

ಬಾಜಿಸು = (ದ್ಭ.ಕ್ರಿ) ವಾದಿಸು, ನುಡಿಸು, ಬಾರಿಸು ೧೦-೧೭೭
ಬಾಣಸು = (ನಾ) ಅಡಿಗೆ ೧೩-೨೮
ಬಾಣಾಸಾರ = (ನಾ) ಬಾಣಗಳ ಮಳೆ ೧೩-೩೭
ಬಾಧಾಕರ = (ವಿ) ಹಿಂಸೆಯನ್ನುಂಟುಮಾಡುವ, ಪೀಡಿಸುವ ೧೧-೮೦
ಬಾಯ್ಕೇಳಿಸು = (ಕ್ರಿ) ಬೆದರಿಸು, ಬಾಯ್ಮಾಡು ೧೦-೧೩೪ (ಗ)
ಬಾಯ್ದಾರೆ = (ನಾ) ಹದನವಾದ ಅಲಗು ೯-೨೩
ಬಾರ್ತೆ = (ನಾ) ಬಾಳ್ವೆ, ಜೀವನ ೯-೮೫
ಬಾರಿ = (ಅ) ಸಾರೆ, ಸರತಿ ೯-೧೩೩
ಬಾರಿಸು = (ಕ್ರಿ) ನಡುಗಿಸು, ಬೆದರಿಸು ೯-೧೨ ನಿವಾರಿಸು, ತಡೆ ೯-೧೧೩
ಬಾಸಣಿಸು = (ಕ್ರಿ) ಹೊಂದಿಸು, ಮುಚ್ಚು ೪-೧೨
ಬಾಸೆ = (ನಾ) ಸುಂದರಿಯರ ಕೆಳಹೊಟ್ಟೆಯ ಮೇಲೆ ಇರುವ ಕಿರುಗೂದಲ ಸಾಲು, ರೋಮಾವಲಿ ೪-೩
ಬಾಳ್ = (ನಾ) ಕತ್ತಿ, ಖಡ್ಗ ೯-೧೬ (ಗ), ೯-೭೪
ಬಾಳತೃಣ = (ನಾ) ಎಳೆಯ ಹುಲ್ಲು ೧-೧೨೭
ಬಾಳಾಯತ = (ನಾ) ದೊಡ್ಡದಾದ ಕತ್ತಿ ೯-೨೨
ಬಾಳರ್ಕ = (ನಾ) ಎಳನೇಸರು, ಬಾಲಸೂರ್ಯ ೩-೧೩೬
ಬಾಳೆ = (ನಾ) ಒಂದು ಜಾತಿಯ ಮೀನು ೨-೫೦
ಬಾೞ್ದಲೆ = (ನಾ) ಜೀವಂತ ತಲೆ ೧೦-೨೧೦ (ಗ)
ಬಾೞ್ತೆಯಾಗು (ಕ್ರಿ) ಬಾಳು, ಬದುಕು ೧೨-೭೨

## ಬಿ

ಬಿಗುರ್ = (ಕ್ರಿ) ಭಯಗೊಳ್ಳು, ಅಂಜು ೧೦-೨೧
ಬಿಚ್ಚತಂ = (ಅ) ಸ್ವೇಚ್ಛೆಯಾಗಿ, ಆತಂಕವಿಲ್ಲದೆ ೧೦-೧೨೯ (ಗ) ೧೦-೧೪೪

ಬಿಜಯಂಗೆಯ್ = (ಕ್ರಿ) ಹೊರಡು, ಬರು (ಮಾನ್ಯರಿಗಾಗಿ ಬಳಸುವ ಮಾತು) ೯-೧೧ (ಗ)

ಬಿಂಜ = (ದ್ಭ.ನಾ) ವಿಂಧ್ಯ, ವಿಂಧ್ಯಾದ್ರಿ, ಅರಣ್ಯ ೯-೫೩

ಬಿಡೆನುಡಿ = (ಕ್ರಿ) ನಿಷ್ಠುರವಾಗಿ ಮಾತಾಡು ೯-೧೮೬

ಬಿಣ್ಪು = (ನಾ) ಭಾರ, ಹೊರೆ ೩-೧೨೯

ಬಿತ್ತರಿಸು = (ಕ್ರಿ) ವಿಸ್ತರಿಸಿ ಹೇಳು, ವಿವರಿಸು ೧೨-೪೧

ಬಿತ್ತು = (ನಾ) ಬೀಜ ೧-೧೦೭ (ಗ)

ಬಿದಿರ್ = (ಕ್ರಿ) ಚೆಲ್ಲಾಪಿಲ್ಲಿಗೊಳಿಸು, ಹರಡು ೧೧-೧೪೩

ಬಿನ್ನಣ = (ನಾ) ಜಾಣ್ಮೆ, ಚಾತುರಿ ೧೦-೨೨

ಬಿನ್ನಾಣ = (ದ್ಭ.ನಾ) ವಿಜ್ಞಾನ, ವಿಶೇಷವಾದ ತಿಳಿವಳಿಕೆ ೧೧-೪೬ (ಗ)

ಬಿನ್ನಪ = (ದ್ಭ.ನಾ) ವಿಜ್ಞಾಪನ

ಬಿಂಬ = (ನಾ) ತೊಂಡೆಯ ಹಣ್ಣು ೩-೮೬

ಬಿರ್ದು = (ನಾ) ಔತಣ ೧೫-೧೦

ಬಿರಿ = (ಕ್ರಿ) ಅರಳು ೧೨-೪

ಬಿಜ್ = (ಕ್ರಿ) ಅಚ್ಚರಿಗೊಳ್ಳು ೧೦-೧೩೬ (ಗ)

ಬಿಱುಬಿದ್ದ = (ನಾ) ದೊಡ್ಡದಾದ ಛಿದ್ರ ೮-೨೯

ಬಿಲ್ವಡೆ = (ನಾ) ಬಿಲ್ಲುಗಾರರ ಸೈನ್ಯ ೧೩-೩೯

ಬಿಲ್ಲಣೆ = ಬಿಲ್ಲುಗಾರ ೧೩-೪೧

ಬಿಲ್ಲಬಿತ್ತಿಗ = (ನಾ) ಬಿಲ್ಲು ಹೊಡೆಯುವವ ೧೩-೪೨

ಬಿಸವಂದ = (ನಾ) ಆಶ್ಚರ್ಯ, ವಿಸ್ಮಯ, ೯-೭೭

ಬಿಸಸೂತ್ರ = (ನಾ) ಕಮಲದ ನಾಳದ ಎಳೆ, ಮೃಣಾಲತಂತು, ೩-೧೯

ಬಿೞ್ತಾಗು = (ಕ್ರಿ) ಬೀಳುವಂತೆ ತಾಕು ೧೧-೧೪೩

## ಬೀ

ಬೀಡೆವರಿ = (ಕ್ರಿ) ಬಿರುಕು ಬಿಡು ೭-೮೮

ಬೀಱು = (ಕ್ರಿ) ಒಗೆ, ಚೆಲ್ಲು, ಕೊಡು ೯-೧೨೬

ಬೀೞ್ತರ್ = (ಕ್ರಿ) ಬೀಳು ೧೩-೩೮

ಬೀಱುಡೆ = (ನಾ) ಉಟ್ಟುಬಿಟ್ಟ ಬಟ್ಟೆ ೯-೧೮೧

ಬೃಂಹಿತ = (ನಾ) ಆನೆಗಳ ಕೂಗು ೯-೧೨೦ (ಗ) ೧೦-೧೫೭

## ಬೆ

ಬೆಕ್ಕಸ = (ಅ) ಬೆರಗಿನ ಅತಿಶಯತೆಯನ್ನು ಸೂಚಿಸುವ ಮಾತು ೧-೭೧

ಬೆಗಡು = (ನಾ) ಭೀತಿ, ಅಂಜಿಕೆ ೭-೧೧೫ (ಗ)

ಬೆಂಕೊಳ್ = (ಕ್ರಿ) ಬೆನ್ನಟ್ಟು, ಬೆನ್ನುಹತ್ತು ೧೦-೭೨

ಬೆಂಗುಡು = (ಕ್ರಿ) ಬೆನ್ನನ್ನು ತೋರಿಸು, ಓಡಿಹೋಗು ೧೨-೨೮

ಬೆಂಗೆವರು = (ಕ್ರಿ) ಬೆನ್ನಟ್ಟಿಬರು ೪-೧೨೦ (ಗ)

ಬೆಚ್ಚು = (ಕ್ರಿ) ಅಂಜು, ಬೆದರು ೧೦-೧೦೭ (ಗ)

ಬೆಟ್ಟವೆಟ್ಟನೆ = (ಅ) ನಿಷ್ಠುರವಾಗಿ, ಬಿರುಸಾಗಿ ೧೧-೨೩

ಬೆಟ್ಟು = (ನಾ) ಬೆರಳು, ಅಂಗುಲಿ ೯-೧೩; ಬೆಟ್ಟ, ಪರ್ವತ ೯-೧೦೪

ಬೆಂಡಾಗು = (ಕ್ರಿ) ಸತ್ವಹೀನವಾಗು, ಬಲಹೀನವಾಗು ೯-೧೫೭

ಬೆಂಡುನೆಗೆ = (ಕ್ರಿ) ಸತ್ವಹೀನವಾಗು ೯-೩೭

ಬೆಂದಗುಳ್ = (ಕ್ರಿ) ಬೆಂಬತ್ತು, ಬೆನ್ನುಹತ್ತು ೪-೮೭

ಬೆನ್ನೀರ್ = (ನಾ) ಬಿಸಿನೀರು ೯-೩೨, ೯-೯೨

ಬೆಮರ್ಗಳ್ = (ನಾ) ಬೆವರ ಹನಿಗಳು ೧೧-೮೮

ಬೆರ್ಚು = (ಕ್ರಿ) ಅಂಜು, ಹೆದರು ೯-೫೩ (ಗ), ೧೨-೧೮

ಬೆರಗು = (ನಾ) ಸಹಾಯ, ಸಹಕಾರ, ನೆರವು ೧೨-೧೯

ಬೆಸ = (ನಾ) ಕರ್ತವ್ಯ, ಆಜ್ಞೆ ೯-೯೧

ಬೆಸಕೆಯ್ = (ಕ್ರಿ) ವಿನಯದಿಂದ ಕೇಳು ೧೧-೬೧

ಬೆಸನ = (ನಾ) ಅಪ್ಪಣೆ, ಆಜ್ಞೆ ೧೦-೨೧೩

ಬೆಸಸು = (ಕ್ರಿ) ಹೇಳು ೧೧-೭ (ಗ)

ಬೆಳ್ವಯಲ್ = (ನಾ) ಬೆಳಕಿನಿಂದ ಕೂಡಿದ ಬಯಲು ೭-೮೬

ಬೆಳ್ವಸದನ = (ನಾ) ಬಿಳಿಯ ಉಡುಗೆ ೩-೭೨, ೧೫-೬೨

ಬೆಳರ್ = (ಕ್ರಿ) ಬೆಳ್ಳಗಾಗು ೧೧-೧೮೪

ಬೆಳ್ಳೆರಳೆ = (ನಾ) ಮುಗ್ಧವಾದ ಚಿಗರೆ ೯-೧೪೦
ಬೆಬ್ಬುಕ್ಕುತ್ತರ್ = (ಕ್ರಿ) ಮಂಕುಪಡೆದರು, ಭ್ರಾಂತರಾದರು ೧-೭೧
ಬೆಬ್ಬುಕ್ಕುತ್ತಂ = (ಕ್ರಿ) ಬೇಸತ್ತನು, ಹೆದರಿದನು ೧೫-೩೦
ಬೆಬ್ಬುಱಿ = (ಅ) ಭಯಪಟ್ಟವನಾಗಿ ೯-೪

## ಬೇ

ಬೇಡವಡೆ = (ನಾ) ಬೇಡರ ದಂಡು ೪-೬೫ (ಗ)
ಬೇವಸ = (ನಾ) ದುಃಖ, ದುಮ್ಮಾನ, ಕಳವಳ ೨-೪೫, ೯-೧೫೬ (ಗ)
ಬೇಳ್ = (ಕ್ರಿ) ಬಲಿಕೊಡು, ಆಹುತಿಕೊಡು ೧೦-೧೮೩ (ಗ)
ಬೇಟಿ್ = (ಕ್ರಿ) ಬೇಡು ೩-೧೧೮
ಬೈಕೆಗೊಡು = (ಕ್ರಿ) ನಿಧಿಯನ್ನಾಗಿ ಕೊಡು ೩-೬೭

## ಭ

ಭಗಣ = (ನಾ) ನಕ್ಷತ್ರ ಸಮೂಹ ೧೩-೧೧
ಭರ್ತಾರ = (ನಾ) ಪತಿ, ಒಡೆಯ ೧೧-೬೩ (ಗ)
ಭರಂಗೆಯ್ = (ಕ್ರಿ) ಅವಸರ ಮಾಡು ೯-೯೩
ಭವ್ಯಾಳಿ = (ನಾ) ಭವ್ಯ ಜನರು (ಜೈನ ಪರಿಭಾಷೆಯಂತೆ) ೧-೩
ಭಾಜನ = (ನಾ) ಪಾತ್ರ ೧೬-೯೫
ಭಾವಜ = (ನಾ) ಮನ್ಮಥ, ಕಾಮ ೧-೨೦
ಭಾಸುರ = (ವಿ) ಪ್ರಕಾಶಮಾನವಾದ ೧೧-೧೫೦
ಭಿತ್ತಿ = (ನಾ) ಗೋಡೆ ೧-೧೨೮
ಭುಜಾಸಿ = (ನಾ) ತೋಳೆಂಬ ಕತ್ತಿ, ಭುಜವೇ ಒಂದು ಕತ್ತಿ ೧೦-೧೭
ಭೂಗೋಚರ = (ನಾ) ಮಾನವ ೧೪-೧೧
ಭೂಭುಜ = (ನಾ) ದೊರೆ, ಅರಸು ೧೦-೧೮೩
ಭೂಷಾ = (ನಾ) ಅಲಂಕಾರ, ತೊಡಿಗೆ ೧೦-೧೪೫
ಭೃಂಗಾರ = (ನಾ) ಬಂಗಾರದ ಪಾತ್ರೆ ೧೨-೨ (ಗ)
ಭೃಂಗಾರಿ = (ನಾ) ಬಂಗಾರದ ಬಿಂದಿಗೆ ೩-೯೫
ಭೈರವಿ = (ನಾ) ದುರ್ಗೆಯ ಒಂದು ರೂಪ ೧೧-೧೪೭

ಭೌಮ = (ವಿ) ಭೂಮಿಗೆ ಸಂಬಂಧಿಸಿದ, ವಿಸ್ತಾರವಾದ ೧೦-೧೪೭ (ಗ)
ಭಾರತಿಕ = (ನಾ) ನಟ, ನರ್ತನಕಾರ ೪-೨೬
ಭ್ರಾಮಕ = (ನಾ) ಲೋಹಚುಂಬಕ ೪-೮೩

## ಮ

ಮಗುಟ್ = (ಕ್ರಿ) ತಿರುಗು, ಮರಳು ೯-೧೧, ೯-೧೧೫
ಮಗುಬ್ಬು = (ಕ್ರಿ) ಅರೆ, ತೇಯು ೯-೧೩೩
ಮಚ್ಚರ = (ದ್ಭ.ನಾ) ಮತ್ಸರ, ಹೊಟ್ಟೆಕಿಚ್ಚು ೯-೧೨೫
ಮಂಜರಿ = (ನಾ) ಗೊಂಚಲು ೧೧-೯೪, ೧೨-೭
ಮಂಜೀರಿಕಾ = (ನಾ) ಕಾಲಗೆಜ್ಜೆ, ನೂಪುರ ೧೬-೯೬
ಮಟ್ಟಂ = (ಅ) ಸುಮ್ಮನೆ ೧೬-೫೩ (ಗ)
ಮಡಗು = (ಕ್ರಿ) ಅಡಗಿಸಿ ಇಡು, ೯-೧೫೧
ಮಡಗೂಟ್ = (ನಾ) ತಂಗುಳನ್ನ, ಎಂಜಲು, ೯-೧೮೧
ಮಡಲ್ = (ಅ) ಸಾಂದ್ರವಾದ, ದಟ್ಟವಾದ ೯-೧೦೭, ೯-೧೮೫; ಕುಡಿಬಿಡು, ಹಬ್ಬು ೯-೧೬
ಮಡಿ = (ಕ್ರಿ) ಸಾಯು ೯-೧೨೮
ಮಂಡನ = (ನಾ) ಆಭರಣ, ಅಲಂಕಾರ ೯-೧೬, ೯-೧೧೦, ೧೧-೧೮೪ (ಗ)
ಮಂಡಲಾಗ್ರ = (ನಾ) ಒಂದು ಬಗೆಯ ಆಯುಧ, ಅಡ್ಡಾಯುಧ ೯-೧೨೬ (ಗ)
ಮಂಡಳಿಸು = (ಕ್ರಿ) ಸುತ್ತುಗಟ್ಟು, ಮುತ್ತಿಗೆ ಹಾಕು ೧೨-೨೪
ಮಣಿ = (ಕ್ರಿ) ನಮಸ್ಕರಿಸು, ಸೋಲು ೧೧-೧೬೪
ಮಣಿಕುಟ್ಟಿಮ = (ನಾ) ರತ್ನದ ನೆಲಗಟ್ಟು ೩-೧೪೦
ಮಣಿದರ್ಪಣ = (ನಾ) ರನ್ನಗನ್ನಡಿ ೯-೧೧೦
ಮಣಿನೇವುರ = (ನಾ) ರತ್ನಖಚಿತಪೈಜಣ ೩-೬೪
ಮತ್ತಚೇತಸ = (ವಿ) ಉನ್ಮತ್ತವಾದ ಚಿತ್ತವುಳ್ಳವ, ೯-೩೪
ಮದವಟ್ಟೆ = (ನಾ) ಆನೆಯ ಗಂಡಸ್ಥಲ ೪-೧೧೯, ೧೨-೧೧

ಮದಾಂಬು = (ನಾ) ಮದೋದಕ ೧೧-೧೫೩
ಮದಾಳಿ = (ನಾ) ಸೊಕ್ಕಿದ ಭ್ರಮರ ೩-೧೭ (ಗ)
ಮದೇಭ = (ನಾ) ಮದ್ದಾನೆ ೧೦-೮೩
ಮಧು = (ನಾ) ಪುಷ್ಪರಸ, ಜೇನತುಪ್ಪ ೧೨-೨ (ಗ)
ಮಧುಪರ್ಕ = (ನಾ) ಅತಿಥಿಗಳಿಗೆ ಜೇನುತುಪ್ಪವನ್ನು ಅರ್ಪಿಸಿ ಸ್ವಾಗತಿಸುವ ಒಂದು ಪ್ರಾಚೀನ ಸಂಪ್ರದಾಯ, ಮಧುಸಂಸ್ಕಾರ ೧೦-೩೬ (ಗ)
ಮಧುವ್ರತ = (ನಾ) ಭ್ರಮರ, ತುಂಬಿ ೧೧-೫೮
ಮಧುವ್ರಜ = (ನಾ) ಭೃಂಗ, ಭ್ರಮರ ೯-೮೭
ಮಂತಣ = (ದ್ಭ.ನಾ) ಮಂತ್ರಣ, ಆಲೋಚನೆ ೧೧-೧೭೬ (ಗ)
ಮಂತ್ರ = (ನಾ) ಆಲೋಚನೆ ೧೧-೧೭೬ (ಗ)
ಮಂತ್ರಶಾಲೆ = (ನಾ) ಅರಮನೆಯಲ್ಲಿಯ ಆಲೋಚನಾಗೃಹ ೧೦-೧೬೯ (ಗ)
ಮಂಥರ = (ವಿ) ಮಂದ, ಆಲಸ ೭-೧೧೩
ಮಂದ್ರಧ್ವಾನ = (ನಾ) ದಪ್ಪಗಿನ ಕೆಳದನಿ, ಖರಜಸ್ವರ ೮-೪೩
ಮಂದುರ = (ನಾ) ಕುದುರೆಕಟ್ಟುವ ಸ್ಥಳ, ಲಾಯ ೪-೧೧೫ (ಗ)
ಮಂದೈಸು = (ಕ್ರಿ) ಒಟ್ಟುಗೂಡು, ಗುಂಪುಗೂಡು ೧೦-೨೦೪
ಮನಂಗೈ = (ಕ್ರಿ) ಮನಸು ಮಾಡು ೧೧-೧೧೬
ಮನಂಗೊಳಿಸು = (ಕ್ರಿ) ತಣಿಸು, ತೃಪ್ತಿಪಡಿಸು ೧೧-೨
ಮನದೆಗೊಳ್ = (ಕ್ರಿ) ಪರಿಭಾವಿಸು, ವಿಚಾರಮಾಡು ೩-೨೬ (ಗ) ೧೦-೧ (ಗ); ಒಪ್ಪು, ಸ್ವೀಕರಿಸು ೯-೫೧ (ಗ)
ಮನಮಱ್ = (ಕ್ರಿ) ಅಂಜು,ಬೆದರು ೧೦-೧೦೭
ಮನುಜೇಂದ್ರ = (ನಾ) ದೊರೆ,ರಾಜ ೧-೧೩೧
ಮನ್ಯು = (ನಾ) ದುಃಖ, ಶೋಕ, ೬-೫೦; ಕೋಪ ಹಟ ೧೧-೧೧೦ (ಗ)
ಮಮ್ಮಳಿ = (ನಾ) (ಮಣ್ಮಳಿ) ಮಣ್ಣಾಗುವಿಕೆ, ಸಾವು ೧೩-೯೨
ಮಯ = (ನಾ) ಪುರಾಣಕಾಲದ ಒಬ್ಬ ಶಿಲ್ಪಿ ೧-೧೨೯
ಮಯೂಖ = (ನಾ) ಕಿರಣ ೬-೨೧, ೧೨-೨ (ಗ), ೧೩-೨೯
ಮರ್ಯಾದೆ = (ನಾ) ಎಲ್ಲೆ, ಮೇರೆ ೯-೮೬
ಮರಕತ = (ನಾ) ಹಸುರು ಬಣ್ಣದ ರತ್ನ, ಪಚ್ಚೆ ೧೧-೧೬೧
ಮರವಡು = (ಕ್ರಿ) ಮೂರ್ಛೆಹೋಗು, ಮೈಮರೆ ೧೬-೨೭
ಮರವಾನಸ = (ನಾ) ಕಟ್ಟಿಗೆಯ ಗೊಂಬೆ ೭-೧೦೯, ೯-೧೬೫
ಮರಾಳ = (ನಾ) ಹಂಸಪಕ್ಷಿ ೧೧-೧೨೪
ಮರೀಚಿ = (ನಾ) ಕಿರಣ ೫-೧ (ಗ)
ಮರುನ್ನದಿ = (ನಾ) ಸುರನದಿ, ಗಂಗೆ ೧೧-೧೨೨
ಮರುಮರೀಚಿಕಾವಾಹ = (ನಾ) ಬಿಸಿಲುಗುದುರೆ ೭-೮೬
ಮರುಳ್ವಡೆ = (ನಾ) ಪಿಶಾಚಿಗಳ ದಂಡು ೧೦-೨೩೩
ಮಱುಪಕ್ಕ = (ನಾ) ಪ್ರತಿಪಕ್ಷ, ಎದುರಾಳಿ ೧೧-೫೧ (ಗ), ೧೫-೫೫ (ಗ)
ಮಱೆ = (ನಾ) ಆಶ್ರಯ ೧೨-೭೯
ಮಲಯಜ = (ನಾ) ಶ್ರೀಗಂಧ, ಚಂದನ ೧೨-೫
ಮಲಯರುಹ = (ನಾ) ಮಲಯ ಪರ್ವತದ ಮೇಲೆ ಹುಟ್ಟಿದುದು, ಶ್ರೀಗಂಧದ ಮರ, ೧೨-೨ (ಗ)
ಮಲರ್ = (ನಾ) ಪುಷ್ಪ ೯-೧೦೭, ೧೦-೮೧
ಮಸಕ = (ನಾ) ಉಗ್ರತೆ, ಆರ್ಭಟ, ಕ್ರೋಧ, ತಿಕ್ಕಾಟ ೯-೭೦, ೯-೩೩, ೧೧-೫೮ (ಗ)
ಮಸಗು = (ಕ್ರಿ) ಸಿಟ್ಟಾಗು, ಆರ್ಭಟಿಸು, ಹೋರಾಡು ೧೦-೧೦೮, ೧೨-೭೧ (ಗ)
ಮಸ್ಕರಿ = (ನಾ) ಸಂನ್ಯಾಸಿ ೯-೩ (ಗ)
ಮಸಿಯಾಗು = (ಕ್ರಿ) ಇದ್ದಲಿಯಾಗು, ಸುಟ್ಟುಹೋಗು ೯-೮೫
ಮಸ್ತಿಷ್ಕ = (ನಾ) ಮೆದುಳು ೭-೬೨
ಮಸುಳ್ = (ಕ್ರಿ) ಕಾಂತಿಹೀನವಾಗು, ಕಂದು ೯-೮೯, ೧೧-೧೩೬
ಮಸೆದೋಱು = (ಕ್ರಿ) ಖಡ್ಗದ ಹದನವನ್ನು ತೋರಿಸು (ಕತ್ತಿಯಿಂದ ಹೊಡೆ) ೧೩-೧೩೯

ಮಹತ್ತರ = (ನಾ) ಮುಖ್ಯಸ್ಥ, ಹಿರಿಯ ಮನುಷ್ಯ ೧೫-೩೨

ಮಹಿತ = (ವಿ) ಸನ್ಮಾನ್ಯ, ಪೂಜ್ಯ೧೫-೮೪

ಮಹೀಭೃತ್ = (ನಾ) ಪರ್ವತ, ಬೆಟ್ಟ ೧೦-೧೮೬

ಮಳಯಜ = (ನಾ) ಶ್ರೀಗಂಧ ೯-೧೧೯

ಮಟ್ಗಿಸು = (ಕ್ರಿ) ನಾಶಗೊಳಿಸು, ಹಾಳುಮಾಡು ೧೧-೫೯

ಮಟ್ಗು = (ಕ್ರಿ) ನಾಶವಾಗು, ಕಣ್ಮರೆಯಾಗು ೧೦-೧೭೩, ೧೨-೭೩

## ಮಾ

ಮಾಕಂದ = (ನಾ) ಮಾವು, ಆಮ್ರ ೪-೧೨೮ (ಗ)

ಮಾಡ = (ನಾ) ಮನೆಯ ಮಾಳಿಗೆ ೧೫-೮೨ (ಗ) ೧೬-೬೩ (ಗ)

ಮಾಣ್ = (ಕ್ರಿ) ಬಿಡು ೧-೨೨, ೧೧-೧೧೨

ಮಾತರಿಶ್ವ = (ನಾ) ವಾಯು, ಗಾಳಿ ೮-೪೭

ಮಾದ್ಯತ್ = (ವಿ) ಮದವೇರಿದ ೧೦-೧೮೧

ಮಾನಕಷಾಯ = (ನಾ) ಅಭಿಮಾನ ಭಾವದ ಒಗರು ೧೦-೧೧೯, (ಗ)

ಮಾನಸಿಕೆ = (ನಾ) ಉನ್ನತ ಭಾವ ೧೧-೧೦೪ (ಗ)

ಮಾಮಸಕ = (ನಾ) ಅತಿಶಯವಾದ ಕ್ರೋಧ ೯-೧೨೪ (ಗ) ೧೧-೧೪೩ (ಗ)

ಮಾರ್ಕೊಳ್ = (ಕ್ರಿ) ಎದುರಿಸು ೯-೧೪೨

ಮಾರ್ಗಣೆ = (ನಾ) ಪ್ರತಿಬಾಣ ೯-೫೮

ಮಾರ್ತಲೆ = (ನಾ) ಇನ್ನೊಂದು ತಲೆ, ಮರುದಲೆ ೧೦-೨೩೫

ಮಾರ್ಪಡೆ = (ನಾ) ವೈರಿಯ ಸೈನ್ಯ ೧೧-೧೭೪

ಮಾರ್ಮಲೆ = (ಕ್ರಿ) ಕದನಕ್ಕೆ ಎದುರಾಗು ೯-೧೨೫

ಮಾರ್ವಟ್ಟೆ = (ನಾ) ಎದುರು ಸೈನ್ಯ ೨-೬೨

ಮಾರಣ = (ವಿ) ಮರಣಕ್ಕೆ ಸಂಬಂಧಿಸಿದ ೧೧-೧೭೬

ಮಾರ್ = (ಕ್ರಿ) ಯುದ್ಧದಲ್ಲಿ ಎದುರಾಗು ೧೨-೬೫

ಮಾಸರ = (ಧ್ವ.ನಾ) ಮಹಾಸ್ವರ, ದೊಡ್ಡ ಧ್ವನಿ ೧೦-೧೭೮

ಮಾಟಕ್ಕೆ = (ಅ) ರೀತಿ, ತೆರ ೧೧-೮೭

ಮ್ಲಾನತೆ = (ನಾ) ಕೊಳೆಯಾಗುವಿಕೆ. ಬಾಡುವಿಕೆ ೪-೯೮

## ಮಿ

ಮಿಡಿದನಿತು = (ಅ) ಕೈಬೆರಳಿನಿಂದ ಚುಟಿಕೆ ಬಾರಿಸಿದಷ್ಟು ೪-೧೨೨

ಮಿಹಿರೆ = (ನಾ) ಸೂರ್ಯ ೧೧-೧೪೫

ಮಿಹಿರಾಧ್ವ = (ನಾ) ಆಕಾಶ, ಗಗನ ೧೧-೧೪೫

ಮಿಳ್ಳಿಸು = (ಕ್ರಿ) ಅಲುಗಾಡು, ಹಾರಾಡು ೧೦-೪೯

## ಮು

ಮುಕ್ತಿಶ್ರೀ = (ನಾ) ಮೋಕ್ಷ ಸಂಪತ್ತಿ ೯-೧

ಮುಕುಳಿತ = (ವಿ) ಮೊಗ್ಗೆಯಾದ, ಮುಚ್ಚಿಕೊಂಡ ೧೨-೨ (ಗ)

ಮುಕುಳಿತಾಂಜಲಿ = (ನಾ) ಕೈಗಳನ್ನು ಜೋಡಿಸಿದವ, ಮುಗಿದ ಕೈಯುಳ್ಳವ ೧೧-೩೮ (ಗ)

ಮುಖರ = (ನಾ) ಮಾತನಾಡುವವ, ಧ್ವನಿ, ಶಬ್ದ ೯-೧೩೨ (ಗ), ೧೨-೨೨

ಮುಖರತೆ = (ವಿ) ಬಾಯ್ಬಡಕತನ ೧೨-೭೭ (ಗ)

ಮುಗಿಲ್ = (ನಾ) ಮೋಡ ೧೨-೭೧ (ಗ)

ಮುಗಿಲ್ವಟ್ಟೆ = (ನಾ) ಆಕಾಶ, ಅಂತರಿಕ್ಷ ೧೨-೯೬

ಮುಂಗುರಿ = (ನಾ) ಮುಂಗಲಿ ೧೫-೩೭ (ಗ)

ಮುಚ್ಚೆ = (ಧ್ವ.ನಾ) ಮೂರ್ಚೆ ೯-೧೧೧

ಮುಟ್ಟು = (ಕ್ರಿ) ಮರ್ಮಸ್ಥಾನಕ್ಕೆ ನಾಟು ೧೦-೨೦೫ (ಗ)

(ನಾ) ಆಯುಧ, ಉಪಕರಣ ೧೦-೧೧೯ (ಗ)

ಮುಟ್ಟೆವರ್ = (ಕ್ರಿ) ಹತ್ತಿರ ಬರು, ಸಮೀಪಿಸು ೧೧-೧೩೨ (ಗ)

ಮುಡಿಪು = (ಕ್ರಿ) ಬಲಿಕೊಡು, ಸಾಯು ೧೫-೧೨ (ಗ)

ಮುದ್ರಿಸು = (ಕ್ರಿ) ಅಂಕಿತಗೊಳಿಸು, ಮೂಡಿಸು ೧೬-೪೧

ಮುಂತಣ = (ಅ) ಎದುರು ಬದಿಯ ೧೪-೧೩ (ಗ)

ಮುನ್ನೀರ್ = (ನಾ) ಸಾಗರ, ಸಮುದ್ರ ೯-೯೨
ಮುಮ್ = (ಅ) ಮೊದಲು ೧೧-೭
ಮುಮುಕ್ಷು = (ನಾ) ಮೋಕ್ಷಾರ್ಥಿ, ಮುಕ್ತಿಯನ್ನು ಬಯಸುವವ ೨-೫೦ (ಗ)
ಮುಯ್ಪು = (ನಾ) ಭುಜದ ಮೇಲ್ಭಾಗ, ಹೆಗಲು ೮-೩೫
ಮುಸುಂಬು = (ನಾ) ಮುಸುಕು, ತೆರೆ, ಮುಖವಾಡ ೮-೨೯
ಮುಸುಱ್ = (ಕ್ರಿ) ಮುತ್ತು, ಮುಸುಕು, ಗುಂಪುಗೂಡು ೮-೪೬ (ಗ) ೧೦-೨೦೧ (ಗ)
ಮುಹುರ್ಮುಹು = (ಅ) ಪುನಃ ಪುನಃ ೯-೧೪೩ (ಗ)
ಮುಪ್ಕಾಡು = (ಕ್ರಿ) ಮುಳುಗಾಡು ೧೪-೫೯

## ಮೂ

ಮೂದಲಿಸು = (ಕ್ರಿ) ಕೆಣಕಿ ನುಡಿ, ಹಂಗಿಸು ೧೦-೫೮ (ಗ)
ಮೂರ್ಧಪಿಂಡ = (ನಾ) (ಆನೆಯ) ಕುಂಭಸ್ಥಳದ ಮಧ್ಯಭಾಗ ೧೦-೧೫೯
ಮೂರಿ = (ನಾ) ಉಗ್ರವಾದ ಮುಖ ೧೩-೧೧೯
ಮೂವಳಸು = (ನಾ) ಮೂರು ಸುತ್ತು ೧೦-೯೧ (ಗ)
ಮುಹೂರ್ತ = (ನಾ) ಎರಡು ಗಳಿಗೆಗಳ ಕಾಲ ೧-೫೧

## ಮೃ

ಮೃಗನಾಭಿ = (ನಾ) ಕಸ್ತೂರಿ ೪-೧೧೬, ೯-೧೨೦ (ಗ)
ಮೃಗೀಬಾಲಕ = (ನಾ) ಚಿಗರಿ ಮರಿ ೧-೧೨೭
ಮೃಣಾಳ = (ನಾ) ಕಮಲದ ದೇಟು ೧-೧೨೭

## ಮೆ

ಮೆಯ್ಗರೆ = (ಕ್ರಿ) ಅಡಗು, ಕಣ್ಮರೆಯಾಗು ೧೦-೯, ೧೧-೯೨
ಮೆಯ್ಗಲಿ = (ನಾ) ಶೂರ, ಪರಾಕ್ರಮಿ ೧೩-೧೪
ಮೆಯ್ಗಾಪು = (ನಾ) ಅಂಗರಕ್ಷಣೆ ೧೨-೩೧ (ಗ)
ಮೆಯ್ದರು = (ಕ್ರಿ) ಬರು, ಮೈಗೂಡು ೧೦-೧೭೨
ಮೆಯ್ಯಿಕ್ಕು = (ಕ್ರಿ) ವಂದಿಸು, ನಮಸ್ಕರಿಸು ೧೨-೪, ೧೨-೮೯
ಮೆಯ್ವೆರ್ಚು = (ಕ್ರಿ) ಮೈಯುಬ್ಬು, ಹೊಂಗು ೯-೫೬, ೧೨-೮೫
ಮೆಯ್ಸಿರಿ = (ನಾ) ದೇಹದ ಸೌಂದರ್ಯ ೯-೧೮೦
ಮೆಱ್ = (ಕ್ರಿ) ತೋರಿಸು, ಪ್ರಕಟಿಸು ೧೨-೬೦
ಮೆಲ್ಪು = (ನಾ) ವಿನಯ, ಮೃದುತ್ವ ೧೦-೨೩೨

## ಮೇ

ಮೇಖಲೆ = (ನಾ) ಗುಡ್ಡದ ಓರೆ, ಕಾಂಚೀ, ಒಡ್ಯಾಣ ೧-೪೪, ೧೦-೭೪
ಮೇಗಸೆ = (ಅ) ಮೇಲಿಂದಲೆ ೧೦-೧೦೯ (ಗ)
ಮೇಲುದು = (ನಾ) ಸೆರಗು, ಅಂಚಲ ೩-೫೧
ಮೇಳಿಸು = (ಕ್ರಿ) ನೆರೆ, ಕೂಡು ೯-೧೫೪, ೧೦-೨೬
ಮೈಗರೆ = (ಕ್ರಿ) ಅಡಗು ೯-೧೨೦

## ಮೊ

ಮೊಗಸು = (ಕ್ರಿ) ಇಚ್ಛಿಸು, ಆಶಿಸು ೧೨-೯
ಮೊಗಮಿಕ್ಕು = (ಕ್ರಿ) ಹೋರಾಡು, ಕಾದಾಡು ೧೩-೩೮
ಮೊಗವಡ = (ನಾ) ಮುಖವಾಡ ೧೩-೭೪
ಮೊಗೆ = (ಕ್ರಿ) (ನೀರು) ಸ್ವೀಕರಿಸು, ಬೊಗಸೆಯಲ್ಲಿ ನೀರು ತೆಗೆ; (ನಾ) ನೀರು ತೆಗೆಯುವ ಪಾತ್ರೆ ೭-೧೦೫
ಮೊಗ್ಗು = (ಅ) ಸಾಧ್ಯ ೧೩-೮೯
ಮೊದಲ್ಗಿಡು = (ಕ್ರಿ) ಸ್ಥಾನಭ್ರಷ್ಟನಾಗು ೯-೮೫
ಮೊನೆ = (ನಾ) ಯುದ್ಧ, ಕಾಳಗ ೯-೫೦, ೧೦-೨೦೪ (ಗ)
ಮೊನೆಯಂಬು = (ನಾ) ಹದನವಾದ ಬಾಣ ೯-೬೯
ಮೊಮ್ಮ = (ನಾ) ಮೊಮ್ಮಗ ೧೧-೫೩
ಮೊಱಗು = (ನಾ) ಗುಡುಗು, ಘೋಷ, ಗರ್ಜನೆ ೯-೩೨, ೯-೧೨೬

## ಮೋ

ಮೋದಿಕೊಳ್ = (ಕ್ರಿ) ಹೊಸೆ, ತಿಕ್ಕು, ಹೊಡೆದುಕೊಳ್ಳು ೯-೧೫೩

ಮೌಹೂರ್ತಿಕರ್ = (ನಾ) ಜೋಯಿಸರು ೪-೨೪ (ಗ)

## ಯ

ಯಷ್ಟಿ = (ನಾ) ಕೈಗೋಲು, ಕೋಲು ೧-೬

ಯೂಪಸ್ತಂಬ = (ನಾ) ಯಜ್ಞದಲ್ಲಿ ಪಶುವನ್ನು ಕಟ್ಟುವ ಕಂಬ ೧೦-೧೮೩ (ಗ)

## ರ

ರಜ = (ನಾ) ಧೂಳಿ ೯-೧೩೨ (ಗ)

ರಜ್ಜು = (ನಾ) ಹಗ್ಗ, ಜೈನ ಪರಿಭಾಷೆಯಂತೆ ಲೋಕದ ಅಳತೆಯ ಏಳನೆಯ ಅಂಶ

ರಣಾಜಿರ = (ನಾ) ಯುದ್ಧರಂಗ ೧೦-೨೪, ೧೧-೭೨

ರತ್ನಕಟಕ = (ನಾ) ರನ್ನದ ಕಡಗ ೧೨-೩೮

ರಥಾಂಗ = (ನಾ) ಚಕ್ರವಾಕಪಕ್ಷಿ ೧-೧೨೭

ರದನ = (ನಾ) ಹಲ್ಲು, ಆನೆಯ ಕೋರೆ ೧೧-೩೫

ರಶ್ಮಿ = (ನಾ) ಕಿರಣ, ಪ್ರಭೆ ೧-೭೩

ರಸಾವಿಲೆ = (ನಾ) ರಸದಿಂದ ಕೂಡಿದವಳು ೧೦-೧೦೯

ರಸೆ = (ನಾ) ಕೆಳಲೋಕ ೧೦-೪೪

ರಹಟಘಟಿಕಾ = (ನಾ) ಘಟಿಯಂತ್ರ (ಬಾವಿಯಿಂದ ನೀರೆತ್ತುವುದಕ್ಕಾಗಿ ಮಾಡಿದ ಗಡಿಗೆಯ ಸರದ ರಾಟಳ) ೧-೫೭

ರಾಗ = (ನಾ) ವ್ಯಾಮೋಹ, ಆಸಕ್ತಿ, ಪ್ರೀತಿ ೧-೪ (ವಿ) ಕೆಂಪುಛಾಯೆ ೧೨-೧

ರಾಜಕ = (ನಾ) ಅರಸರ ಸಮೂಹ ೧೦-೧೦೭

ರಾಜನ್ಯಕ = (ನಾ) ಕ್ಷತ್ರಿಯರ ಸಮುದಾಯ ೩-೪೫, ೧೨-೮೯

ರಾರಾಜಿತ = (ವಿ) ಶೋಭಿಸುವ, ಹೊಳೆಯುವ ೧೨-೮೮

ರುಕ್ = (ನಾ) ಹೊಳಪು, ಕಾಂತಿ ೧೪-೧೮೧

ರುಚಿ = (ವಿ) ಪ್ರಕಾಶ, ಕಾಂತಿ ೪-೯೦

ರುಂಜೆ = (ನಾ) ಒಂದು ಬಗೆಯ ರಣವಾದ್ಯ ೪-೫೬

ರುತಿ = (ನಾ) ಧ್ವನಿ ೩-೧೫, ೯-೧೫೩

ರುಧಿರಾಂಬು = (ನಾ) ರಕ್ತ, ಕೆನ್ನೀರು ೧೧-೧೮೭

ರುಂದ್ರ = (ವಿ) ದಟ್ಟ ೧೦-೧೯೯

ರೈ = (ನಾ) ಸುವರ್ಣ, ಐಶ್ವರ್ಯ ೯-೨, ೧೬-೫೬

ರೋದಸ್ = (ನಾ) ಬಾನು, ಆಕಾಶ ೧೬-೭೫

ರೋಮಂಥ = (ನಾ) ಮೆಲುಕು ಹಾಕುವಿಕೆ ೭-೧೧೩

ರೋಮೋದ್ಗತಿ = (ನಾ) ಪುಳಕ, ರೋಮಾಂಚ ೧೦-೧೧೦

ರೋಹಣಗಿರಿ = (ನಾ) ಮೇರು ಪರ್ವತ ೧೨-೮೨

ರೌದ್ರೇಷು = (ನಾ) ಉಗ್ರವಾದ ಬಾಣ ೧೨-೭೧

ಱಿಕ್ಕಟಂ = (ಅ) ಬರಿದೆ, ವ್ಯರ್ಥವಾಗಿ ೧-೧೦೭

ಱಿೋಡಾಡು = (ಕ್ರಿ) ಅಪಹಾಸ್ಯ ಮಾಡು, ನಿಂದಿಸು ೮-೩೨

## ಲ

ಲಕ್ಷ್ಯಿತ = (ವಿ) ಗುರಿಯಿಟ್ಟ, ಗುರುತಿಸಲ್ಪಟ್ಟ ೯-೧೩೨ (ಗ)

ಲಂಘನ = (ನಾ) ದಾಟುವಿಕೆ, ಹಾರಿಕೆ ೧೧-೯೧

ಲಬ್ಧಿ = (ನಾ) ಆತ್ಮಶುದ್ಧಿಯಿಂದ ದೊರೆಯುವ ಲಾಭ ೯-೧೫ (ಗ)

ಲಂಪಟ = (ವಿ) ಆಕಸ್ತನಾದವ, ಮಗ್ನ ೧೦-೨೧೬

ಲಯಸಮಯ = (ನಾ) ಪ್ರಳಯಕಾಲ ೧೧-೫೮ (ಗ)

ಲವ = (ವಿ) ಅಲ್ಪ (ನಾ) ಕಾಲದ ಅತಿ ಸೂಕ್ಷ್ಮಭಾಗ ೧-೧೩೨

ಲಲಾಟಪಟ್ಟ = (ನಾ) ಹಣೆಬರೆಹ, ಕುದುರೆ ಮತ್ತು ಎತ್ತುಗಳಿಗೆ ಹಾಕುವ ಹಣೆಪಟ್ಟೆ, ೯-೧೬೪

ಲವಲಿ = (ನಾ) ರಾಯನೆಲ್ಲಿ ೭-೧೧೩

## ಲಾ

ಲಾಕ್ಷಾರಸ = (ನಾ) ಅರಗು ಮತ್ತು ಪಾದರಸ ೩-೨೫ (ಗ)

ಲಾಘವ = (ವಿ) ಲಘುತ್ವ, ಸಣ್ಣತನ ೬-೧೦೯
ಲಾಂಗಲ = (ನಾ) ನೇಗಿಲು ೪-೧೮
ಲಾಯ = (ನಾ) ಕುದುರೆಕಟ್ಟುವ ಮನೆ ೧೧-೧೫೪
ಲಾಲಾಜಳ = (ನಾ) ಜೊಲ್ಲು ೩-೧೩೯

## ಲು

ಲುಂಟಾಕ = (ನಾ) ಲೂಟಿ ಮಾಡುವವ, ಕಳ್ಳ ೪-೩೫, ೫-೭೨
ಲುಬ್ಧಕ = (ನಾ) ಬೇಟೆಗಾರ, ಬೇಡ ೪-೫೫
ಲುಲಿತ = (ವಿ) ಚಂಚಲವಾದ, ಹೊಯ್ದಾಡುವ ೧೬-೯೩
ಲುಳಿತಾಳಕ = (ನಾ) ಅಲ್ಲಾಡುವ ಕುರುಳು ೩-೯೩

## ಲೆ-ಲೇ-ಲೋ

ಲೆಕ್ಕಂಗೊಳ್ = (ಕ್ರಿ) ಎಣಿಕೆಗೊಳಗಾಗು ೯-೧೨೪ (ಗ)
ಲೇಖೆ = (ನಾ) ಗೆರೆ ೧೧-೧೪೫
ಲೆಪ್ಪ = (ನಾ) ಬಣ್ಣದ ಚಿತ್ರ, ಬಣ್ಣ ೩-೨೬
ಲೋಧ್ರ = (ನಾ) ಒಂದು ಬಗೆಯ ಮರ ೭-೧೪೧
ಲೋಲ = (ವಿ) ತರಲ, ಚಂಚಲ ೧೦-೭೯
ಲೋಲೇಕ್ಷಣೆ = (ನಾ) ಚಂಚಲಾಕ್ಷಿ ೧೦-೧೮೯

## ವ

ವಕ್ರವಚನ = (ನಾ) ಕೊಂಕುನುಡಿ, ಚುಚ್ಚು ಮಾತು ೯-೧೮೬ (ಗ)
ವಕ್ತ್ರ = (ನಾ) ಮುಖ ೧೦-೭೨
ವಜ್ರಾವರ್ತ = (ನಾ) ಒಂದು ಬಿಲ್ಲಿನ ಹೆಸರು ೫-೨೬
ವಟ = (ನಾ) ಆಲದ ಮರ ೯-೮೭
ವಟ್ಟ = (ನಾ) ಬಡ್ಡಿ ೧೨-೬೮
ವಣಿಗ್ವಾಟ = (ನಾ) ವರ್ತಕರ ಬೀದಿ ೧-೧೨೨
ವತ್ಸರ = (ನಾ) ವರ್ಷ ೧೬-೪೩
ವದಾನ್ಯ = (ನಾ) ಪಂಡಿತ, ಜ್ಞಾನಿ ೭-೨೨ (ಗ)
ವಂದನಮಾಲೆ = (ನಾ) ತೋರಣ ೧೦-೩೫ (ಗ)
ವನಜ = (ನಾ) ಕಮಲ ೧-೧೧೧
ವರ್ಷಧರ = (ನಾ) ಮೋಡ, ಒಂದು ಪರ್ವತದ ಹೆಸರು ೧೦-೩
ವರುಣಾನಿ = (ನಾ) ವರುಣನ ಹೆಂಡತಿ ೮-೨
ವರೂಥ = (ನಾ) ರಥದ ಒಳಭಾಗ ೧೪-೩೧
ವರೂಥಿನಿ = (ನಾ) ಸೈನ್ಯಭಾಗ ೧೧-೭೩
ವಲಂ = (ಅ) ನಿಶ್ಚಯವಾಗಿ ೧೪-೧
ವಲ್ಲರಿ = (ನಾ) ಬಳ್ಳೀ ೩-೧೩೯
ವಲ್ಲಿ = (ನಾ) ಬಳ್ಳಿ ೯-೧೦೭
ವಂಶ = (ನಾ) ಬಿದಿರು ೯-೨೩
ವಸಿಯಿಸು = (ಕ್ರಿ) ವಶಗೊಳಿಸು ೯-೧೬೭
ವಸುಮತಿ = (ನಾ) ಸಂಪತ್ತಿನಿಂದ ಕೂಡಿದವಳು, ಭೂಮಿ ೩-೧೪೨
ವಳಯ = (ನಾ) ಸುತ್ತು, ವರ್ತುಲ, ಮಂಡಲ ೯-೧೬
ವಳಿರೇಖೆ = (ನಾ) ತ್ರಿವಳಿ ೪-೪
ವ್ಯತಿಕರ = (ನಾ) ಕುತ್ತ, ಆಪತ್ತು, ಸಂಕಟ ೧೫-೬೮ (ಗ)
ವ್ಯಂತರ = (ನಾ) ಬೆಂತರ, ಭೂತ,ದೆವ್ವ ೧೬-೭೦
ವ್ಯವಹೃತಿ = (ನಾ) ವ್ಯವಹಾರ, ವ್ಯಾಪಾರ ೧-೯೩
ವ್ರಜ = (ನಾ) ಸಮೂಹ ೧೧-೧೨೪
ವ್ರಣ = (ನಾ) ಹುಣ್ಣು,ಗಾಯ ೯-೧೪೨ (ಗ)

## ವಾ

ವಾಙ್ಮಳ = (ನಾ) ಮಾತಿನ ಮಲಿನತೆ ೧-೧೧
ವಾಂಛಿತ = (ನಾ) ಅಭೀಷ್ಟ, ಬಯಕೆ, ೯-೧೨೨
ವಾನ = (ವಿ) ವನಕ್ಕೆ ಸಂಬಂಧಿಸಿದ ೯-೧೪೨
ವಾರ್ಮಾನುಷಿ = (ನಾ) ಜಲಕನ್ಯೆ ೧೦-೭೩
ವಾರಣ = (ನಾ) ಆನೆ ೧-೯
ವಾರನಾರಿ = (ನಾ) ವೇಶ್ಯೆ ೧-೧೦೯
ವಾರಾಶಿ = (ನಾ) ಜಲಧಿ, ಸಮುದ್ರ ೧-೩೦
ವಾರುಣಿ = (ನಾ) ಹೆಂಡ ೭-೯೦; ಪಶ್ಚಿಮ ದಿಕ್ಕು ೧೧-೧೭೯
ವಾಸಂತಿ = (ನಾ) ಮಾಧವಿ ಪುಷ್ಪ, ಅತಿಮುಕ್ತಕ ೧೨-೪
ವಾಸುಗಿ = (ನಾ) ಆದಿಶೇಷ ೧೧-೧೫೦
ವಾಹ = (ನಾ) ಕುದುರೆ, ವಾಹನ ೧೩-೧೦

ವಾಹಿನಿ = (ನಾ) ಸೈನ್ಯ, ನದಿ ೯-೧೩೧ (ಗ), ೧೧-೫೧ (ಗ)

ವ್ರಾತ = (ನಾ) ಸಮೂಹ, ಗುಂಪು ೧೨-೯೨

ವಿ

ವಿಕಟ = (ವಿ) ವಿಕಾರವಾದ, ದೊಡ್ಡದಾದ ಎತ್ತರವಾದ ೧೦-೨೧, ೧೦-೧೦೨

ವಿಕಥೆ = (ನಾ) ಕೀಳು ಕಥೆ ೩-೬

ವಿಕಳ = (ವಿ) ಕಳೆದುಕೊಂಡ ೯-೩ (ಗ)

ವಿಕಳಭಾಷೆ = (ನಾ) ಅಸ್ಪಷ್ಟವಾದ ಮಾತು ೧೧-೯೧

ವಿಕಳೆ = (ನಾ) ದುಃಖಿತೆ ೬-೮೮ (ಗ)

ವಿಕ್ರಾಂತ = (ನಾ) ವೀರ, ಪರಾಕ್ರಮಿ ೧೦-೨೩೧

ವಿಕ್ರಯ = (ನಾ) ಮಾರಾಟ ೧೦-೯೫ (ಗ)

ವಿಕ್ರಿಯೆ = (ನಾ) ರೂಪಾಂತರ, ಬದಲಾವಣೆ ೧೬-೪೯

ವಿಕೀರ್ಣ = (ವಿ) ಚೆದರಿದ, ಹರಡಿದ ೯-೩ (ಗ)

ವಿಕುರ್ವಣ = (ನಾ) ವಿಕಾರಗೊಳಿಸುವಿಕೆ ೯-೧೮೭

ವಿಗ್ರಹ = (ನಾ) ಯುದ್ಧ, ಜಗಳ, ೪-೪೭, ೧೦-೧೮

ವಿಗುರ್ವಿಸು = (ಕ್ರಿ) ಭಯವನ್ನುಂಟುಮಾಡು ೧೦-೧೪೭ (ಗ)

ವಿಘಟನ = (ನಾ) ನಾಶ, ಮುರಿಯುವಿಕೆ ೧-೯

ವಿಘಟಿಸು = (ಕ್ರಿ) ತುಂಡುಮಾಡು, ಭೇದಿಸು ೨-೬೫

ವಿಚಕಿಲ = (ನಾ) ಮಲ್ಲಿಗೆ ೧೨-೪

ವಿಚುಂಬಿ = (ವಿ) ಮುದ್ದಿಸುವ ೧೧-೫೭

ವಿಜಿಗೀಷು ವೃತ್ತಿ = (ನಾ) ಜಯುವನ್ನು ಗಳಿಸಬೇಕೆಂಬ ಸ್ವಭಾವ ೧-೧೩೫

ವಿತ್ತ = (ನಾ) ಧನ, ಸಂಪತ್ತು ೨-೭೦

ವಿತತ = (ವಿ) ಶ್ರೇಷ್ಠ, ಪ್ರಸಿದ್ಧ ೧೦-೨೦೧ (ಗ)

ವಿತರ್ದಿಕೆ = (ನಾ) ಪೀಠ, ಆಸನ ೩-೭೦

ವಿತರಣ = (ನಾ) ದಾನ ೨-೧

ವಿತಾನ = (ನಾ) ಹಂದರೆ, ಮಂಟಪ, ೯-೧೨೦ (ಗ)

ವಿದಳನ = (ನಾ) ಸೀಳುವಿಕೆ ೧೬-೩೭

ವಿದಳಿತ = (ವಿ) ಅರಳಿದ ೧೧-೧೬೩

ವಿದ್ಯಾಚ್ಛೇದ = (ನಾ) ಪಕ್ಷಗಳನ್ನು ಕಡಿಯುವಿಕೆ ೯-೧೪೬

ವಿದ್ಯಾಧರ = (ನಾ) ದೇವತೆಗಳಲ್ಲಿಯ ಒಂದುವರ್ಗ ೧೪-೩

ವಿದ್ಯಾಪ್ರಾಕಾರ = (ನಾ) ಕುಶಲತನದಿಂದ ರಚಿಸಿದ ಕೋಟೆಯ ಗೋಡೆ ೧೧-೨೫

ವಿದ್ರಾವಣ = (ವಿ) ವಿನಾಶಕಾರಿ, ಪೀಡಿಸುವವ ೧೦-೨೨೬, ೧೨-೬೩

ವಿದ್ವಿಟ್ = (ನಾ) ವೈರಿ ೧೦-೧೪೮

ವಿದ್ವಿಷ್ಟ = (ನಾ) ವೈರಿ, ಹಗೆ ೧೧-೪೪

ವಿದ್ರುಮ = (ನಾ) ಹವಳ ೩-೧೩, ೧೨-೮೭

ವಿಧುರ = (ನಾ) ಸತಿಯನ್ನು ಕಳೆದುಕೊಂಡವ ೧೦-೪೧

ವಿಧುವದನೆ = (ನಾ) ಚಂದ್ರಮುಖಿ ೧೨-೨೨

ವಿನ್ಯಾಸ = (ನಾ) ರಚನೆ, ಇಡುವಿಕೆ ೯-೧೧೨

ವಿಪ್ರತಿಪತ್ತಿ = (ನಾ) ಪರಸ್ಪರ ವಿರೋಧ, ಜಗಳ ೧೨-೭೯ (ಗ)

ವಿಪಕ್ಷ = (ನಾ) ವೈರಿ, ಎದುರಾಳಿ ೯-೬೮

ವಿಪಂಚಿ = (ನಾ) ವೀಣೆ ೫-೬೩

ವಿಪಣಿ = (ನಾ) ಅಂಗಡಿಬೀದಿ ೬-೧೭೭ (ಗ)

ವಿಭವ = (ನಾ) ಐಶ್ವರ್ಯ ಸಂಪತ್ತು ೧೧-೧

ವಿಭ್ರಾಜಿತ = (ವಿ) ಹೆಚ್ಚುಗಿ ಹೊಳೆಯುವ ೫-೧

ವಿಭೂತಿ = (ನಾ) ಐಶ್ವರ್ಯ, ಸಂಪತ್ತು ೧೦-೧೦೫ (ಗ). ೧೧-೧೦೩ (ಗ)

ವಿಭೂಷಣ =(ನಾ) ಅಲಂಕಾರ, ಒಡವೆ ೯-೭೩

ವಿಯಚ್ಚರ = (ನಾ) ಆಕಾಶಗಾಮಿ, ಖೇಚರ ೯-೧೫೮

ವಿಯತ್ = (ನಾ) ಆಕಾಶ ೧೧-೧೪

ವಿಯನ್ಮಾರ್ಗ = (ನಾ) ಆಕಾಶ ಮಾರ್ಗ, ಅಂತರಿಕ್ಷ ೧೧-೮ (ಗ)

ವಿರಹಕೃಶಾನು = (ನಾ) ವಿರಹಾಗ್ನಿ ೯-೧೫೬

ವಿರೂಕ್ಷಿಸು = (ಕ್ರಿ) ಜುಗುಪ್ಸೆಪಟ್ಟುಕೊಳ್ಳು, ಹೇಸು ೯-೧೯೪

ವಿರೋಧಿಸಾಧನ = (ನಾ) ವೈರಿಗಳ ಸೈನ್ಯ ೪-೬೭

ವಿಲಾಸ = (ನಾ) ಶೋಭೆ, ಸೌಂದರ್ಯ, ಕ್ರೀಡೆ ೧೦-೮೧
ವಿಲೀನ = (ವಿ) ಮಗ್ನ, ಕೂಡಿದ ೧೨-೨ (ಗ)
ವಿಲೋಚನ = (ನಾ) ಕಣ್ಣು, ನೇತ್ರ ೧೨-೧೦ (ಗ)
ವಿವರ = (ವಿ) ರಂಧ್ರ, ತೂತು ೧೬-೪೮
ವಿವಶ = (ವಿ) ಸ್ವಾಧೀನ ತಪ್ಪಿದ, ಮೈಮರೆದ, ೯೦-೧೪೨
ವಿಶದ = (ವಿ) ವಿಸ್ತಾರವಾದ ೧೨-೫೩
ವಿಶಿಖ = (ನಾ) ಬಾಣ ೯-೧೨೬ (ಗ), ೧೪-೧೬೨
ವಿಶ್ರುತ = (ವಿ) ವಿಖ್ಯಾತವಾದ, ಪ್ರಸಿದ್ಧವಾದ ೧-೧೨
ವಿಷ್ಟರ = (ನಾ) ಆಸನ, ಪೀಠ ೧೨-೨೨ (ಗ)
ವಿಷಮ = (ವಿ) ಸಮತೆಯಿಲ್ಲದ, ಅಸಾಧಾರಣ, ಉಗ್ರ ೯-೯೮
ವಿಷಯ = (ನಾ) ದೇಶ, ಭೂಭಾಗ ೧೦-೧೧೯ (ಗ)
ವಿಷಾಹಿ = (ನಾ) ವಿಷಸರ್ಪ ೯-೬೫
ವಿಸ್ಮಯ = (ನಾ) ಆಶ್ಚರ್ಯ, ಬೆರಗು ೯-೮೬, ೯-೯೮
ವಿಸಟಂಬರಿ = (ಕ್ರಿ) ಮನಬಂದಂತೆ ವರ್ತಿಸು ೧-೧೦೭ (ಗ)
ವಿಸ್ಫಾರಿತ = (ವಿ) ಪೂರ್ಣವಾಗಿ ತೆರೆದ, ಅಗಲವಾದ ೩-೬೫ (ಗ)
ವಿಸ್ಫುಲಿಂಗ = (ನಾ) ಕಿಡಿ ೯-೧೦೨ (ಗ)
ವಿಹ್ವಲ = (ನಾ) ಚಿಂತೆ, ಕಳವಳ ೯-೧೫೨
ವಿಹಗ = (ನಾ) ಪಕ್ಷಿ ೧-೧೧೧
ವಿಳಯ = (ನಾ) ಪ್ರಳಯ, ವಿನಾಶಕಾಲ ೧೨-೭೨
ವಿಳಯವಹ್ನಿ = (ನಾ) ಪ್ರಳಯಕಾಲದ ಅಗ್ನಿ ೯-೧೪
ವಿಳಯಾನಳ = (ನಾ) ಪ್ರಳಯಾಗ್ನಿ ೧೨-೯೧
ವಿಳಯಾಂಬುದ = (ನಾ) ಪ್ರಳಯಕಾಲದ ಮೇಘ ೯-೧೩೯
ವಿಳಸತ್ = (ವಿ) ಹೊಳೆಯುವ, ಶೋಭಿಸುವ ೧೦-೧೦೨
ವಿಳಾಸ = (ನಾ) ಬೆಡಗು, ಸೌಂದರ್ಯ ೧೦-೨೩೭೧ (ಗ)
ವಿಳೋಚನ = (ನಾ) ದೃಷ್ಟಿ, ನೇತ್ರ, ಕಣ್ಣು ೯-೧೪೯

## ವೀ

ವೀಚಿ = (ನಾ) ತೆರೆ, ತರಂಗ ೯-೧೬ (ಗ), ೧೧-೧೬೩, ೧೨-೩೨
ವೀಜನ = (ನಾ) ಬೀಸಣಿ ೬-೮೫, ೭-೨೬
ವೀತಾಂಕುಶ - (ವಿ) ನಿರಂಕುಶ, ಅಂಜಿಕೆ ಇಲ್ಲದ ೧೦-೧೫೩

## ವೃ

ವೃಕ = (ನಾ) ತೋಳ ೪-೫೫
ವೃಜಿನ = (ನಾ) ಪಾಪ ೭-೪೦
ವೃತ್ತಕ = (ನಾ) ಸುದ್ದಿ, ವರ್ತಮಾನ ೧೬-೨೦
ವೃತ್ತಾಂತ = ವೃತ್ತಾಂತ, ಸುದ್ದಿ ೮-೫೨ (ಗ)
ವೃಂದಾರಕ = (ನಾ) ದೇವತೆಗಳು ೧೧-೧೬೮
ವೃಷ್ಟಿ = (ನಾ) ಮಳೆ ೧-೬

## ವೇ

ವೇಧಸ್ = (ನಾ) ಸೃಷ್ಟಿಕರ್ತ, ಬ್ರಹ್ಮ, ೯-೨೫
ವೇಲಾವನ = (ನಾ) ಸಮುದ್ರದ ತಡಿಯ ಅರಣ್ಯ ೧೨-೩೬
ವೇಳೆ = (ನಾ) ಬೇಲೆ, ಸಮುದ್ರದ ದಂಡೆಯ ಉಸುಕಿನ ಪ್ರದೇಶ ೯-೧೩೨

## ವೈ

ವೈಕುಲ್ಯ = (ನಾ) ದುಃಖ ವ್ಯಥೆ ೯-೯೮
ವೈಕುರ್ವಣ = (ನಾ) ದೇಹವನ್ನು ವಿಕಾರಗೊಳಿಸುವ ಶಕ್ತಿ ೧೧-೬೭
ವೈಜಯಂತಿ = (ನಾ) ಧ್ವಜ, ಪತಾಕೆ ೧೦-೨
ವೈರಸ್ಯ = (ನಾ) ವಿರಸತನ, ವೈಮನಸ್ಯ ೧೦-೯೭ (ಗ)
ವೈಶ್ರವಣ = (ನಾ) ಕುಬೇರ ೧೦-೧೪೫

## ಶ

ಶಕ್ರ = (ನಾ) ದೇವೇಂದ್ರ ೧೦-೧೨೩
ಶಕ್ರಚಾಪ = (ನಾ) ಇಂದ್ರಧನುಷ್ಯ, ಕಾಮಲ ಬಿಲ್ಲು ೧೬-೪೨

ಶಕಲ = (ನಾ) ತುಂಡು, ತುಣುಕು ೧೩-೩೮

ಶಂಕಾಕುಲ = (ವಿ) ಸಂಶಯದಿಂದ ಕೂಡಿದ ೧೨-೭೪

ಶತಮಖ = (ನಾ) ನೂರು ಯಜ್ಞ ಮಾಡಿದವನು ಇಂದ್ರ ೫-೧೩೨

ಶತ್ರುಂದಮನ = (ನಾ) ವೈರಿಗಳನ್ನು ನಿಗ್ರಹಿಸುವವನು, ರಾವಣನ ಮಗನ ಹೆಸರು ೧೦-೧೫೧

ಶಬಲ = (ವಿ) ಅನೇಕ ವರ್ಣಗಳಿಂದ ಕೂಡಿದ ೭-೧೪೫

ಶರಧಿ = (ನಾ) ಬತ್ತಳಿಕೆ. ದೊಣೆ ೧೪-೧೯; ಸಮುದ್ರ

ಶರಾಸನ = (ನಾ) ಬಿಲ್ಲು ೯-೪೬, ೯-೫೫

ಶಲಭ = (ನಾ) ಚಿಟ್ಟೆ, ಪತಂಗ ೪-೮೫

ಶಲಾಕೆ = (ನಾ) ಕಿರಣ, ಬೆಳಕಿನ ಸೆಳೆ ೯-೮೮

ಶಶಿಕಾಂತ = (ನಾ) ಚಂದ್ರಕಾಂತ ಶಿಲೆ ೧೨-೨೭

ಶಶಿಖಂಡ = (ನಾ) ಚಂದ್ರನ ಭಾಗ, ಅರ್ಧಚಂದ್ರ ೧-೪೫

ಶ್ರವಣ ವಿಭೂಷಣ = (ವಿ) ಕಿವಿಗಳಿಗೆ ಅಲಂಕಾರವಾದ ೧೨-೯೯

ಶ್ರವಣಪ್ರಸಕ್ತ = (ನಾ) ಶ್ರವಣಾ ನಕ್ಷತ್ರದಲ್ಲಿ ಹುಟ್ಟಿದವನು ೧೨-೨

## ಶಾ

ಶಾತ = (ವಿ) ಮಸೆದ, ಸಾಣೆ ಹಿಡಿದ ೧೩-೧೭

ಶಾತಕುಂಭ = (ನಾ) ಬಂಗಾರ (ನೂರು ಸಲ ಪುಟವಿಟ್ಟು ಪರಿಶುದ್ಧಗೊಂಡ ಬಂಗಾರ) ೧೨-೨ (ಗ)

ಶ್ಯಾಮಲಿತ = (ವಿ) ನೀಲವರ್ಣದ ೧೨-೨ (ಗ)

ಶಾರ್ದೂಲ = (ನಾ) ಹುಲಿ ೧೦-೮೩

ಶಾರ್ವರಿ = (ನಾ) ರಾತ್ರಿ ೩-೧೦೯

ಶಾಳದ್ರುಮ = (ನಾ) ಸಾಲವೃಕ್ಷ ೯-೨ (ಗ)

ಶಿಖಂಡ = (ನಾ) ಶಿಖರ, ತುದಿ ೯-೧೯ (ಗ), ೧೨-೧೬ (ಗ)

ಶಿಖಿಮುಖ = (ನಾ) ಅಗ್ನಿ, ಬೆಂಕಿ ೯-೧೧೫ (ಗ)

ಶಿಶಿರೋಪಚಾರ = (ನಾ) ಶೀತೋಪಚಾರ, ತಂಪು ಮಾಡುವುದು ೪-೯೪

ಶಿಳಾನಿಕ್ಷಿಪ್ತ = (ವಿ) ಕಲ್ಲಮೇಲೆ ಬರೆದ ೩-೨೩

ಶಿಳೀಮುಖ = (ನಾ) ಬಾಣ, ಭೃಂಗ ೨-೬೩, ೯-೮೫

## ಶೀ

ಶೀತಾಂಶು = (ನಾ) ಚಂದ್ರ ೧-೮೦

ಶ್ರೀಪದ = (ನಾ) ಮೋಕ್ಷ, ಐಶ್ವರ್ಯ ಸ್ಥಿತಿ, ೯-೧

ಶ್ರೀವಧು = (ನಾ) ಲಕ್ಷ್ಮಿ ೧೧-೧

## ಶು

ಶುಕ್ಲಧ್ಯಾನ = (ನಾ) ನಾಲ್ಕು ಧ್ಯಾನಗಳಲ್ಲಿ ಶ್ರೇಷ್ಠಧ್ಯಾನ ೧೦-೧೭೬ ೧೬-೬೭

ಶುಕ್ತಿಕೆ = (ನಾ) ಸಿಂಪು ೧೨-೨ (ಗ), ೧೬-೮೭

ಶುಂಡಾಲ = (ನಾ) ಆನೆ ೧೫-೩೭ (ಗ)

ಶ್ರುತಾರಾಧನ = (ನಾ) ಶಾಸ್ತ್ರೋಪಾಸನೆ ೧-೭

ಶ್ರುತಿಪಥ = (ನಾ) ಕಿವಿದೆರೆ ೩-೫೧

## ಶೃ

ಶೃಗಾಳ = (ನಾ) ನರಿ ೪-೫೫

ಶೃಂಗ = (ನಾ) ಶಿಖರ, ತುದಿ, ಕೋಡು ೧೦-೨೧

ಶೈಳ = (ನಾ) ಬೆಟ್ಟ, ಪರ್ವತ ೩-೧೫೪

ಶೋಣ = (ವಿ) ಕೆಂಪುಬಣ್ಣದ, ರಕ್ತವರ್ಣದ ೧೨-೨ (ಗ)

ಶೋಷಣ = (ನಾ) ಹೀರುವಿಕೆ, ಎಳೆಯುವಿಕೆ ೧೦-೨೨೮

## ಷ

ಷಟ್ಚರಣ = (ನಾ) ಆರಡಿ, ಭ್ರಮರ ೧೦-೧೦೫

ಷಂಚ = (ನಾ) ಸಮೂಹ, ಗುಂಪು ೧-೮೩, ೯-೧೨೦ (ಗ)

## ಸ

ಸಂಕಲೆ = (ದ್ಭ.ನಾ) ಶೃಂಖಲಾ, ಬೇಡಿ, ಸರಪಣಿ ೯-೭೬

ಸಚ್ಛನ್ನ = (ವಿ) ಪೂರ್ಣವಾಗಿ ಮುಚ್ಚಿದ ೭-೧೨೨

ಸಟಾ = (ನಾ) ಜಟೆ, ಜಡೆ ೭-೧೨೭

ಸತತ ಗತಿ = (ನಾ) ವಾಯು, ಗಾಳಿ ೧೧-೬೦
ಸದ್ಮ = (ನಾ) ಮನೆ ೫-೧೨
ಸದ್ವೃತ್ತ = (ನಾ) ಒಳ್ಳೆಯ ನಡತೆ ೧೨-೭೬
ಸಂತಾನ = (ನಾ) ಸಮೂಹ ೧೧-೮೬
ಸಂತ್ರಾಸಿ = (ನಾ) ಪೀಡೆ ಕೊಡುವವ ೯-೧೧೨
ಸಂದತ್ತು = (ಕ್ರಿ) ಪೂರೈಸಿತ್ತು ೧೦-೫೨
ಸಂದಿಸು = (ಕ್ರಿ) ಕೂಡಿಸು, ಮುಚ್ಚು ೯-೧೧೭
ಸಂದೆಗ = (ದ್ಭ.ನಾ.) ಸಂದೇಹ, ಸಂಶಯ ೧೦-೧೨ (ಗ)
ಸಂದೋಹ = (ನಾ) ಸಮೂಹ, ಗುಂಪು ೧೪-೧೯
ಸಪ್ತಗುಪ್ತಿ = (ನಾ) ಏಳಯ ಸುತ್ತಿನ ಕೋಟೆ ೧೪-೩೫
ಸಪ್ತಚ್ಛದ = (ನಾ) ವೃಕ್ಷವಿಶೇಷ ೯-೧೨೦ (ಗ)
ಸಪ್ತಸಪ್ತಿ = (ನಾ) ಏಳು ಕುದುರೆಗಳುಳ್ಳವನು, ಸೂರ್ಯ ೪-೧೨೯
ಸಪತ್ನ = (ನಾ) ದಾಯಾದಿ ವೈರಿ ೬-೧೭೦, ೧೦-೬೦ (ಗ)
ಸಂಭೃತ = (ವಿ) ಚೆನ್ನಾಗಿ ತುಂಬಿದ ೧೨-೨ (ಗ)
ಸಂಭ್ರಮ = (ನಾ) ಮಂಕು, ಭ್ರಮೆ ೧೬-೪೫
ಸಮ್ಯಕ್ತ್ವ = (ನಾ) ತತ್ತ್ವಗಳಲ್ಲಿ ಶ್ರದ್ಧೆ ೧೬-೭೦ (ಗ)
ಸಮಕಕ್ಷ = (ನಾ) ಸರಿಸಮಾನನಾದ ಎದುರಾಳಿ ೧೧-೧೩೬
ಸಮಕಟ್ಟು = (ನಾ) ವ್ಯೂಹರಚನೆ, ಶಿಸ್ತು, ಕ್ರಮ ೧೧-೭೪
ಸಮ್ಮದ = (ನಾ) ಸಂಭ್ರಮ, ವಿಜೃಂಭಣೆ ೧೧-೪೪
ಸಮ್ಮನ = (ನಾ) ಒಳ್ಳೇ ಮನಸ್ಸು ೧೨-೮೫
ಸಮನ್ವಿತ = (ವಿ) ಕೂಡಿಕೊಂಡ ೯-೧೩೧
ಸಮನಿಸು = (ಕ್ರಿ) ಒದಗು, ದೊರಕು, ಉಂಟಾಗು ೧೧-೬೦ (ಗ) ೧೪-೧೧
ಸಮಯ = (ನಾ) ದೀಕ್ಷೆ, ತತ್ತ್ವಜ್ಞಾನ ೯-೩ (ಗ)
ಸಮುಸ್ಕಂದ = (ನಾ) ಸಮಾನವಾದ ಸಾಮರ್ಥ್ಯವುಳ್ಳವ ೧೨-೭೦
ಸಮೀರ = (ನಾ) ವಾಯು, ಗಾಳಿ ೧-೧೦೮, ೯-೧೨೦ (ಗ)
ಸಮೆ = (ಕ್ರಿ) ರಚಿಸು, ಕಟ್ಟು, ಮಾಡು ೮-೩, ೧೨-೯೮

ಸಯ್ತರ್ = (ನಾ) ಸಾಧುಗಳು ೯-೧೫೦
ಸಯ್ತು = (ವಿ) ನೇರವಾಗಿ, ಸರಳವಾಗಿ ೧೩-೮೫
ಸಂರಂಭ = (ನಾ) ಉತ್ಸಾಹ ೧೧-೧೩೨ (ಗ)
ಸರಂಗೈ = (ಕ್ರಿ) ಧ್ವನಿಮಾಡು, ಕೂಗು ೯-೧೧೭ (ಗ)
ಸರಲ್ = (ನಾ) ಬಾಣ ೯-೬೦
ಸರಿ = (ನಾ) ಮಳೆ, ವೃಷ್ಟಿ ೧೦-೨೪, ೧೦-೬೭
ಸರಿತ್ = (ನಾ) ನದಿ ೯-೧೩೭
ಸರಿವಟಿ = (ನಾ) ದೊಡ್ಡ ಮಳೆ, ೯-೬೧
ಸಲ್ಲಕೀ = (ನಾ) ಆನೆ, ಬೇಲದ ಮರ ೯-೧೨೦ (ಗ)
ಸಲಗು = (ದ್ಭ.ನಾ) ಶಲಾಕಾ, ಕಿರಣ ಸೆಲೆ ೭-೧೬೨
ಸಂವರ್ತ = (ನಾ) ಪ್ರಳಯ, ವಿನಾಶಕಾಲ ೯-೭೨ (ಗ)
ಸಂಸರಣ = (ನಾ) ಸಂಸಾರ, ಬದುಕು ೨-೧೬
ಸಂಸ್ತವ = (ನಾ) ಸ್ತುತಿ, ಕೊಂಡಾಟ ೧-೨೯
ಸವಣ = (ದ್ಭ.ನಾ) ಶ್ರವಣ, ಜೈನಮುನಿ ೯-೧೩
ಸವನ = (ನಾ) ಅಭಿಷೇಕ, ಪೂಜೆ ೯-೧೬೮, ೧೨-೨ (ಗ)
ಸವ್ಯಾಪಸವ್ಯ = (ನಾ) ಎಡ-ಬಲ, ಶುಭ ಮತ್ತು ಅಶುಭ ಕರ್ಮಗಳು ೧೬-೧೭
ಸವಿತೃ = (ನಾ) ಸೂರ್ಯ ೯-೧೯೦ (ಗ)
ಸಹಕಾರ = (ನಾ) ಮಾವಿನ ಮರ ೧-೧೦೯
ಸಹಸ್ರಾಕ್ಷ = (ನಾ) ಇಂದ್ರ ೧೦-೧೦
ಸಂಸೃತಿ = (ನಾ) ಸಂಸಾರ, ಭವ ೧೦-೧೨೨
ಸ್ಕಂಧಾವಾರ = (ನಾ) ಸೇನೆ ೧೨-೩೬
ಸ್ತಬಕ = (ನಾ) ಮಂಡಲ, ಗುಂಪು, ಗೊಂಚಲು ೧೨-೯೪
ಸ್ತಂಭ = (ನಾ) ತಡೆಗಟ್ಟುವಿಕೆ ೧೦-೧೧೦
ಸ್ತಂಭೇರ = (ನಾ) ಆನೆ ೧೧-೧೮೩, ೧೫-೪
ಸ್ತವನ = (ನಾ) ಸ್ತೋತ್ರ, ಸ್ತುತಿ ೧-೧೧
ಸ್ಥಪತಿ = (ನಾ) ವಾಸ್ತು ಶಿಲ್ಪ ೧೨-೯೭
ಸ್ಥಗಿತ = (ವಿ) ನಿಂತ, ತಡೆದ ೧೦-೧೦೩
ಸ್ನಪನ = (ನಾ) ಸ್ನಾನ ೧೨-೨
ಸ್ಪೃಹೆ = (ನಾ) ಆಶೆ, ಅಪೇಕ್ಷೆ ೯-೮೬
ಸ್ಯಂದನ = (ನಾ) ರಥ ೫-೪೭ (ಗ)

ಸ್ಯಾದ್ವಾದ = (ನಾ) ಜೈನ ಸಿದ್ಧಾಂತದಲ್ಲಿಯ ಒಂದು ನಿರೂಪಣ ಪದ್ಧತಿ ೧-೨೪

ಸ್ರಕ್ = (ನಾ) ಹೂಮಾಲೆ ೧೬-೫೨

ಸ್ವರ್ಣಿಲಯ = (ನಾ) ಸ್ವರ್ಗ, ದೇವಲೋಕ ೧೧-೯೧

ಸ್ವರ್ಭಾನು = (ನಾ) ರಾಹು ೪-೧೬

ಸಾ

ಸಾಗರಾವರ್ತ = (ನಾ) ಒಂದು ಬಿಲ್ಲಿನ ಹೆಸರು ೫-೨೬ (ಗ), ೧೨-೧೬ (ಗ)

ಸಾಜೆ = (ಅ) ಓರೆ, ಪಕ್ಕ ೫-೬೫

ಸಾಧಿಸು = (ಕ್ರಿ) ಜಯಿಸು, ವಶಮಾಡಿಕೊಳ್ಳು ೧೦-೧೮೩

ಸಾನು = (ನಾ) ಬೆಟ್ಟದ ತಪ್ಪಲು ೧೧-೪೮, ೧೨-೭೫

ಸಾಮಜ = (ನಾ) ಆನೆ ೧೦-೧೮೧

ಸಾಯಕ = (ನಾ) ಬಾಣ ೧೩-೨೬ (ಗ)

ಸಾರ್ಕೆ = (ನಾ) ಸಾಮೀಪ್ಯ, ಸನ್ನಿಧಿ ೧೦-೧೯೦

ಸಾರ್ಚು = (ಕ್ರಿ) ಚಾಚು, ಮುಂದೆ ಮಾಡು ೧೧-೯

ಸಾರ್ತರು = (ಕ್ರಿ) ಹತ್ತಿರ ಬರು ೯-೧೦೪

ಸಾರ್ವರ್ತುಕ = (ವಿ) ಎಲ್ಲ ಋತುಗಳಲ್ಲಿಯೂ ಸಮಾನವಾಗಿರುವ ೧೦-೧೦

ಸಾರವಣೆ = (ನಾ) ಸಾರಣೆ, ಸಾರಿಸುವಿಕೆ ೧೨-೩

ಸಾರಸ = (ನಾ) ನೀರ್ವಕ್ಕಿ, ಕೊಕ್ಕರೆ ೧೧-೧೮೬

ಸಾವಗಿಸು = (ಕ್ರಿ) ಸಾವರಿಸು, ಸರಿಪಡಿಸು ೭-೨೮, ೧೦-೮೬

ಸಾರ್ದಣ್ = (ಅ) ಸಮೀಪ ೯-೩೮

ಸಾಸ = (ದ್ಭ.ನಾ) ಸಾಹಸ ೯-೧೦೧

ಸಾಹಣ = (ನಾ) ಕುದುರೆಗಳನ್ನು ಪಳಗಿಸುವವ ೧೫-೩೨

ಸಿ

ಸಿಗ್ಗಾಗು = (ಕ್ರಿ) ನಾಚಿಕೆಪಡು ೯-೩೯ (ಗ)

ಸಿಂಗ = (ದ್ಭ.ನಾ) ಸಿಂಹ ೯-೧೦೭

ಸಿಂಜಿತ = (ವಿ) ಮಧುರಧ್ವನಿಯುಳ್ಳ ೧೦-೧೧೦ (ನಾ) ಝಣತ್ಕಾರ, ಬಿಲ್ಲಿನ ಹೆದೆಯ ಧ್ವನಿ ೧೬-೯೬

ಸಿಡಿಲ್ = (ಕ್ರಿ) ದಿಕ್ಕುದಿಕ್ಕಿಗೆ ಹರಡು ೯-೧೨೮

ಸಿತಾತಪತ್ರ = (ನಾ) ಬೆಳ್ಗೊಡೆ, ಶ್ವೇತ ಛತ್ರ

ಸಿತಾಂಶುಕೆ = (ನಾ) ಬಿಳಿಯ ಬಟ್ಟೆಯನ್ನುಟ್ಟವಳು ೧೧-೫೮

ಸಿದ್ಧಶೈಲ = (ನಾ) ಸಿದ್ಧಜನರಿರುವ ಪರ್ವತ ೧೧-೭ (ಗ)

ಸಿಂದ = (ನಾ) ಒಂದು ಪ್ರಕಾರದ ರಾಜಚ್ಛತ್ರ ೧೫-೨

ಸಿಂಧುರ = (ನಾ) ಆನೆ ೧-೧೧ ೯-೧೨೪, ೧೨-೭೫

ಸಿಬ್ಬ = (ನಾ-) ಚಿಬ್ಬು ೧೧-೧೮೩

ಸಿಂಪಿಣಿ = (ನಾ) ಸಿಂಪಡಿಸುವಿಕೆ ೭-೧೫೯

ಸಿರಿಕಂಡ = (ದ್ಭ.ನಾ) ಶ್ರೀಖಂಡ, ಚಂದನ, ಶ್ರೀಗಂಧ ೧೨-೩

ಸಿರಿಸ = (ದ್ಭ.ನಾ) ಸಿರೀಷ, ಸಿರಸಲಹೂ ೯-೮೦

ಸಿವಿಗೆ = (ದ್ಭ.ನಾ) ಸಿಬಿಕಾ, ಪಲ್ಲಕ್ಕಿ ೩-೪೦, ೧೫-೮೨ (ಗ)

ಸಿಂಹವಾಹಿನಿ = (ನಾ) ದುರ್ಗಾದೇವಿ ೧೪-೫

ಸಿಂಹವಿಷ್ಟರ = (ನಾ) ಸಿಂಹಾಸನ ೫-೬

ಸಿಂಹಾಸಂದಿ = (ನಾ) ಸಿಂಹಾಸನ ೧೧-೧೫೨

ಸೀ

ಸೀಕರಿವೋಗು = (ಕ್ರಿ) ಸುಟ್ಟು ಕರಕಾಗು,ಕಮರಿಹೋಗು ೧-೧೬

ಸೀಂಟು = (ಕ್ರಿ) ಒರಸು,ತಿಕ್ಕು ೧೩-೭೧

ಸೀದ = (ವಿ) ಅರೆಮರೆಯಾಗಿ ಸುಟ್ಟ ೧-೧೬

ಸೀಮಂತಿನಿ = (ನಾ) ಬೈತಲೆಯುಳ್ಳವಳು, ಸುಮಂಗಲೆ ೧-೧೯೪ (ಗ)

ಸೀರಪಾಣಿ = (ನಾ) ಬಲರಾಮ (ಇಲ್ಲಿ ಶ್ರೀರಾಮ) ೬-೧೩೪

ಸು

ಸುಕೃತ = (ನಾ) ಪುಣ್ಯ ೧೨-೭೫, ೧೩-೧

ಸುಗಿ = (ಕ್ರಿ) ಅಂಜು, ಹೆದರು ೧೦-೧೬೨ (ಗ)

ಸುಟ್ಟು = (ಕ್ರಿ) ಬೆರಳುಮಾಡಿ ತೋರಿಸು ೧೫-೨೫

ಸುಟ್ಟುರೆ = (ನಾ) ಸುಂಟರಗಾಳಿ ೪-೬೦, ೧೩-೪೮

ಸುಧಾರಸ = (ನಾ) ಅಮೃತ ೯-೮೨
ಸುಧಾವಾರ್ಧಿ = (ನಾ) ಕ್ಷೀರಸಾಗರ ೧೧-೧೪೯
ಸುಧಾಂಶು = (ನಾ) ಚಂದ್ರ ೯-೮೨
ಸುಬಗು = (ದ್ಭ.ನಾ) ಸುಭಗ, ಸೌಂದರ್ಯ, ಐಶ್ವಯ ೯೯-೮೩
ಸುಮನ = (ನಾ) ಪುಷ್ಪ, ಹೂವು ೯-೧೩೧
ಸುಮನಸ್ = (ನಾ) ಪುಷ್ಪ ದೇವತೆಗಳು, ೧೦-೧೧೫
ಸುಮನೋವರ್ಷ = (ನಾ) ಹೂ ಮಳೆ ೧೧-೧೦
ಸುಯ್ಯು = (ನಾ) ಉಸಿರು, ಶ್ವಾಸ ೯-೧೨೦ (ಗ)
ಸುರ್ಕುಸಿರು = (ನಾ) ಕುತ್ತುಸಿರು, ಉಬ್ಬಸ ೧೧-೮೮
ಸುರಗಜ = (ನಾ) ಸ್ವರ್ಗದ ಆನೆ, ಐರಾವತ ೧೨-೧೧
ಸುರಚಾಪ = (ನಾ) ಇಂದ್ರಧನುಸ್ಸು, ಮಳೆಬಿಲ್ಲು ೧-೬೪, ೧೨-೧೨
ಸುರಪ = (ನಾ) ದೇವತೆಗಳ ಒಡೆಯ, ಇಂದ್ರ ೧-೧೨೧
ಸುರಭೂಜ = (ನಾ) ಕಲ್ಪವೃಕ್ಷ, ೧-೬೦
ಸುರಯಿ = ಸುರಗಿಯ ಹೂ ೧೨-೪

## ಸೂ

ಸೂಕಳ = (ವಿ) ಕೃತಕ, ತುಂಟ ೪-೧೧೪, ೧೬-೬೫ (ಗ)
ಸೂಕಳಾಶ್ವ = (ನಾ) ತುಂಟ ಕುದುರೆ, ಮೋಸದ ಕುದುರೆ ೪-೧೩
ಸೂಡು = (ಕ್ರಿ) ತಲೆಯಲ್ಲಿ ಧರಿಸು ೩-೪೬, ೫-೯೫ (ನಾ) ಸುಡುವಿಕೆ, ಉಷ್ಣತೆ ೯-೧೦೯
ಸೂನೃತ = (ನಾ) ಸತ್ಯ ೧೨-೧
ಸೂರ್ಯಹಾಸ = (ನಾ) ಒಂದು ಖಡ್ಗದ ಹೆಸರು ೧೧-೨೭ (ಗ)
ಸೂರಿ = (ನಾ) ವಿದ್ವಾಂಸ, ಪಂಡಿತ ೧೨-೫೩
ಸೂರುಳ್ = (ಕ್ರಿ) ಆಣೆಮಾಡು, ಪ್ರತಿಜ್ಞೆಮಾಡು ೧೫-೭೧ (ಗ)
ಸೂಳ್ = (ನಾ) ಸರದಿ, ಕ್ರಮ ೧೪-೩೧ (ಗ)
ಸೂೞ್ಗೆವರ್ = (ಕ್ರಿ) ಹತ್ತಿರ ಬರು ೧೦-೧೩೮ (ಗ)
ಸೃಕ್ವ = (ನಾ) ಕಟವಾಯಿ ೭-೧೫೭

## ಸೆ

ಸೆಜ್ಜೆ = (ದ್ಭ.ನಾ) ಶಯ್ಯಾ, ಹಾಸಿಗೆ ೧೦-೯
ಸೆಡೆ = (ಕ್ರಿ) ವಕ್ರವಾಗು, ಕೊಂಕು, ಮುದುಡು,ಬಾಡು ೯-೭೪
ಸೆಣಸು = (ಕ್ರಿ) ಸ್ಪರ್ಧಿಸು, ಹೋರಾಡು ೧೦-೩೬
ಸೆರಗು = (ನಾ) ಅಪರಾಧ, ಪಾತಕ ೯-೧೯೯ ಸಹಾಯ, ಸೆರವು ೧೩-೪೭
ಸೆರೆ = (ದ್ಭ.ನಾ) ಶಿರಾ, ನರ, ನಾಳ ೧೧-೧೩೫

## ಸೇ

ಸೇಕ = (ನಾ) ಸಿಂಪಡಿಸುವಿಕೆ, ಸಿಂಚನ ೧೦-೬೩
ಸೇದೆ = (ನಾ) ಆಯಾಸ, ಬಾಯಾರಿಕೆ ೬-೧೭೬
ಸೇಪಾಳ = (ದ್ಭ.ನಾ) ಶೈವಾಲ, ಹಾವಸೆ ೧೨-೧೩
ಸ್ಮೇರ = (ನಾ) ಮುಗುಳ್ನಗೆ ೧-೧೭, ೭-೨೯

## ಸೈ

ಸೈತಂ = (ಅ) ಸುಮ್ಮನೆ, ವ್ಯರ್ಥವಾಗಿ ೧೧-೧೭೬ (ನಾ) ಶಾಂತಿ, ಸಮಾಧಾನ ೧೨-೬೨
ಸೈಪು = (ನಾ) ಪುಣ್ಯ ೫-೨೮, ೧೨-೬೩
ಸ್ವೈರ = (ವಿ) ಮನಬಂದಂತೆ ವರ್ತಿಸುವ ೧೦-೫೭
ಸೈಂಹಿಕೇಯ = (ನಾ) ರಾಹು ೯-೧೦೨

## ಸೊ-ಸೋ

ಸೊಡರ್ = (ನಾ) ದೀಪ ೧೨-೩
ಸೋ = (ಕ್ರಿ) ಬೆನ್ನಟ್ಟು, ಹೊಡೆದೋಡಿಸು ೯-೧೯೪ (ಗ)
ಸೋಗೆನವಿಲ್ = (ನಾ) ಗರಿಯುಳ್ಳ ನವಿಲು ೧-೧೦೭ (ಗ)
ಸೋರ್ಮುಡಿ = (ನಾ) ಸಡಿಲವಾದ ಜಡೆ ೩-೧೦೮
ಸೋವತ = (ನಾ) ಬಲಿದ್ರವ್ಯ ೧೦-೩೪, ೧೪-೨೦೧
ಸೋವು = (ಕ್ರಿ) ಬೆದರಿಸು ೧-೧೦೭
ಸ್ತೋಕ = (ನಾ) ಜೈನಸಿದ್ಧಾಂತದಂತೆ ಒಂದು ಕಾಲ ಪರಿಮಿತಿ, ಏಳು ಉಚ್ಛ್ವಾಸಗಳ ಕಾಲ
ಸ್ತೋಮ = (ನಾ) ಸಮೂಹ, ಗುಂಪು ೧೧-೧೪೬
ಸ್ರೋತಸ್ = (ನಾ) ಪ್ರವಾಹ, ಧಾರೆ ೯-೧೨೪

ಸೌಧರ್ಮಿಕೆ = (ನಾ) ಸದ್ಧರ್ಮನಿಷ್ಠೆ ೧೪-೧೩ (ಗ)
ಸೌರಭ = (ನಾ) ಪರಿಮಳ, ಸುವಾಸನೆ, ೯-೧೮
ಸೌಳನೆ = (ಅ) ಸುಲಭವಾಗಿ, ಹಗುರಾಗಿ ೭-೫೮

## ಹ-ಹೊ

ಹಟತ್ = (ವಿ) ಪ್ರಕಾಶಿಸುವ, ಹೊಳೆಯುವ ೧೦-೧೦೨, ೧೨-೧೨
ಹತಿ = (ನಾ) ಏಟು, ಹೊಡೆತ ೪-೬೭
ಹರ್ಮ್ಯ = (ನಾ) ಉಪ್ಪರಿಗೆ,ಸೌಧ ೧-೧೨೨, ೧೦-೧೦೩
ಹರಿಣ = (ನಾ) ಚಿಗರಿ ೯-೧೦೭
ಹರಿನೀಲ = (ನಾ) ಇಂದ್ರ ನೀಲರತ್ನ ೧೨-೨ (ಗ)
ಹರಿಬಾಳಕ = (ನಾ) ಸಿಂಹದ ಮರಿ ೪-೪೮
ಹಸ್ತಚ್ಛಟಾ = (ನಾ) ಕೈಗಳ ಹೊಡೆತ, ಚಪ್ಪಾಳೆ ೧೬-೪೮
ಹಳಾಯುಧ = (ನಾ) ಬಲರಾಮ (ಇಲ್ಲಿ ರಾಮಚಂದ್ರ) ೪-೬೬
ಹ್ರದ = (ನಾ) ಮಡು, ೧೪-೬
ಹಾರಯಷ್ಟಿ = (ನಾ) ಉದ್ದವಾಗಿರುವ ಮಾಲೆ ೧೨-೧೫
ಹಾರೀತಕ = (ವಿ) ತಿಳಿಹಸುರು ಬಣ್ಣದ ೫-೧೨೫
ಹಿಮಪ್ರಭ = (ನಾ) ಚಂದ್ರ ೯-೭೪
ಹಿಮಾನಿಳ = (ನಾ) ತಂಗಾಳಿ ೯-೨
ಹುಗಿಲು = (ನಾ) ರಂಧ್ರ, ತೂತು ೯-೮೪
ಹೂಣೆಹೊಗು = (ಕ್ರಿ) ಒಳನುಗ್ಗು ೧೩-೩೯
ಹೃದ್ಭವ = (ನಾ) ಕಾಮ, ಮನ್ಮಥ ೯-೮೨
ಹೇಮಾಚಳ = (ನಾ) ಪೊಂಬೆಟ್ಟ, ಮೇರು ಪರ್ವತ ೨-೬೪
ಹೊಗೆ = (ಕ್ರಿ) ಹೊಗೆಯಿಂದ ತುಂಬು ೧೩-೧೯

# ಅನುಬಂಧ - ೪

## ಜೈನ ಪಾರಿಭಾಷಿಕ ಪದಕೋಶ
## (ಇದು ಎರಡೂ ಕೃತಿಗಳ ಅಧ್ಯಯನಕ್ಕೆ ಸಹಕಾರಿ)

ಆಶ್ವಾಸ ಪದ್ಯ

ಅನುಪ್ರೇಕ್ಷೆ - (೧೨) ಅನುಪ್ರೇಕ್ಷೆ ಎಂದರೆ ಸತ್ ಚಿಂತನೆ ೧೧-೩೬

೧) **ಅಧ್ರುವಾನುಪ್ರೇಕ್ಷಾ** -ಗಂಡ ಹೆಂಡತಿ ಮಕ್ಕಳು ಮೊದಲಾದವರು ನಿಶ್ಚಯವಲ್ಲ, ನಿಜ ಶುದ್ಧಾತ್ಮವೇ ನಿಶ್ಚಯವೆನ್ನುವದು.

೨) **ಅಶರಣಾನುಪ್ರೇಕ್ಷೆ** - ಧನಕನಕ ವಸ್ತು ಪತ್ನೀಪುತ್ರ ಬಂಧು ಮೊದಲಾದವು ಶರಣಲ್ಲ. ಪಂಚಪರಮೇಷ್ಠಿಗಳು, ಜಿನಧರ್ಮ ಮತ್ತು ಆತ್ಮದ್ರವ್ಯವೇ ತನಗೆ ಶರಣೆಂದು ತಿಳಿಯುವುದು.

೩) **ಸಂಸಾರಾನುಪ್ರೇಕ್ಷೆ** - ಸಂಸಾರದಲ್ಲಿ ವಿರಕ್ತರಾಗಿ ವ್ರತಾದಿಗಳನ್ನು ಆಚರಿಸುವ ಜೀವಿಗಳಿಗೆ ರತ್ನತ್ರಯಾತ್ಮಕ ಸ್ವರ್ಗವನ್ನು ಹೊಂದಲು ಅಪವರ್ಗವು ಪ್ರಾಪ್ತಿಯಾಗುವದು ಎಂದು ಚಿಂತಿಸುವದೇ ಸಂಸಾರಾನುಪ್ರೇಕ್ಷೆ

೪) **ಏಕತ್ವಾನುಪ್ರೇಕ್ಷೆ** - ತನ್ನ ಜೊತೆಗೆ ಇನ್ನಾರು ಬರುವದಿಲ್ಲ ಎಂದು ಭಾವಿಸುವದು

೫) **ಅನ್ಯತ್ವಾನುಪ್ರೇಕ್ಷೆ** - ಶರೀರ, ಪುತ್ರ ದಾರಾದಿ ಪರಿಗ್ರಹ ಇವುಗಳಿಂದ ಆತ್ಮನು ಭಿನ್ನವೆಂದು ಭಾವಿಸುವುದು

೬) **ಅಶುಚಿತ್ವಾನುಪ್ರೇಕ್ಷೆ** - ಶರೀರವು ಅತ್ಯಂತ ಅಪವಿತ್ರ ಎಂದು ಭಾವಿಸುವದು.

೭) **ಆಸ್ರವಾನುಪ್ರೇಕ್ಷೆ** - ಮಿಥ್ಯಾತ್ವ, ಅವಿರತಿ, ಕಷಾಯುಗಳಿಂದ ಕರ್ಮಾಸ್ರವವುಂಟಾಗುವುದೆಂದೂ ಆ ಆಸ್ರವವೇ ಸಂಸಾರಕಾರಣವೆಂದೂ, ಆತ್ಮಗುಣಘಾತುಕವೆಂದೂ ಭಾವಿಸುವುದು

೮) **ಸಂವರಾನುಪ್ರೇಕ್ಷೆ** - ಆತ್ಮನಲ್ಲಿ ಕರ್ಮಪುದ್ಗಲಗಳು ಬಂದು ಸೇರುವ ಮಾರ್ಗಗಳಾದ ಕಷಾಯಾದಿಗಳನ್ನು ತಡೆದರೆ ಶ್ರೇಯಸ್ಸಾಗುವದೆಂದು ಭಾವಿಸುವುದು.

೯) **ನಿರ್ಜರಾನುಪ್ರೇಕ್ಷೆ** - ಕರ್ಮನಿರ್ಜರೆಯು ಏತರಿಂದಾದೀತೆಂದು ಭಾವಿಸುವುದು.

೧೦) **ಲೋಕಾನುಪ್ರೇಕ್ಷೆ** - ಲೋಕವು ಎಷ್ಟು ದೊಡ್ಡದು, ಅದರಲ್ಲಿರುವ ಜೀವಗಳು ಯಾವುವು? ಇವು ಆದಿಯೋ ಅನಾದಿಯೋ ಮೊದಲಾದುವನ್ನು ಭಾವಿಸುವುದು.

೧೧) **ಬೋಧಿದುರ್ಲಭಾನುಪ್ರೇಕ್ಷೆ** - ಸಮ್ಯಗ್ದರ್ಶನ ಜ್ಞಾನ ಚಾರಿತ್ರ್ಯಗಳು ದುರ್ಲಭ ಎಂದು ಭಾವಿಸುವುದು.

೧೨) **ಧರ್ಮಾನುಪ್ರೇಕ್ಷೆ** - ಧರ್ಮ ಪ್ರಾಪ್ತಿಯಿಂದ ಅಭ್ಯುದಯ ನಿಶ್ರೇಯಸಗಳು ದೊರೆವುವೆಂದು ಭಾವಿಸುವುದು.

**ಆಶ್ವಾಸ ಪದ್ಯ**

**ಅನುಯೋಗ** - ಜೈನಾಶಾಸ್ತ್ರದ ಅಂಗೋಪಾಂಗಗಳನ್ನು ವಿವರಿಸುವ ಆಗಮ. ೧ ೫೨
ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗ.

**ಅವಧಿಜ್ಞಾನ** - ಅವಧಿಜ್ಞಾನದ ಕ್ಷಯೋಪಶಮ ಆದ ಮೇಲೆ ದ್ರವ್ಯ, ಕ್ಷೇತ್ರ. ೧೨ ೧೪

ಕಾಲ ಮತ್ತು ಭಾವ ಇವುಗಳಿಂದ ಮರ್ಯಾದಿತವಾದ ಪದಾರ್ಥಗಳನ್ನು ಮತ್ತು ಕರ್ಮಬದ್ಧ ಜೀವಿಗಳ ಅನೇಕ ಭವಗಳನ್ನು ತಿಳಿದುಕೊಳ್ಳುವ ಕಾಲ.

**ಆಕಿಂಚನ್ಯ** - ಶರೀರಾದಿಗಳ ಮೇಲಿನ ಮಮತ್ವವನ್ನು ಬಿಡುವದು. ೧೧ ೩೦

**ಆರ್ಜವ** - ನಿಷ್ಕಪಟ ಪ್ರವೃತ್ತಿ ೧೧ ೧೦

**ಆಸ್ರವ** - ಜೀವನಲ್ಲಿ ಶುಭಾಶುಭ ಕರ್ಮಗಳ ಆಗಮನ ಉಂಟಾಗುವುದು. ೧೪ ೫೧

**ಈರಾಜು ತಪ** - ದ್ವಾದಶ ತಪ-ಅನಶನ, ಅವಮೋದರ್ಯ (ಅಲ್ಪಾಹಾರ) ೧ ೫
ವೃತ್ತಿ ಪರಿಸಂಖ್ಯಾನ (ಇಂತಿಂಥ ವಸ್ತುಗಳನ್ನು ಉಣ್ಣುವೆನು, ಇಂತಿಂಥವರು ಈ ರೀತಿಯಿಂದ ನಿಲ್ಲಿಸಿದರೆ ನಿಲ್ಲುವೆನು, ಈ ಸ್ಥಳಗಳಿಂದ ಆಚೆಗೆ ಹೋಗೆನು ಎಂದು ಮನದೊಳು ನೆನೆದು ಚರಿಗೆಗೆ ಹೋಗುವುದು), ರಸಪರಿತ್ಯಾಗ ವಿವಿಕ್ತಶಯ್ಯಾಸನ (ವಿಶಿಷ್ಟವಾದ ಸ್ಥಾನದಲ್ಲಿ ಆಸನ ಹಾಕಿ ಸ್ತ್ರೀ, ಪಶು, ಷಂಡಕ ವರ್ಜಿತ ಸ್ಥಳದಲ್ಲಿ ತಪಸ್ಸು ಮಾಡುವುದು). ಕಾಯಕ್ಲೇಶ, ಪ್ರಾಯಶ್ಚಿತ್ತ, ವಿನಯ, ವೈಯಾವತ್ಯ (ಮುನಿಗಳ ಸೇವೆ), ಸ್ವಾಧ್ಯಾಯ, ಉತ್ಸರ್ಗ (ಕರ್ಮಬಂಧನಕ್ಕೆ ಕಾರಣವಾದ ದೋಷ ಗಳನ್ನು ತೊರೆಯುವದು), ಧ್ಯಾನ.

**ಉತ್ತಮ ತಪ** - ಐಹಿಕ ಸುಖ ಕೀರ್ತಿ ಬಯಸದೆ ಸಂಯಮ ಪ್ರಾಪ್ತಿ, ೧೧ ೧೪
ರಾಗ ವಿನಾಶ, ಕರ್ಮನಾಶ, ಶಾಸ್ತ್ರಾಭ್ಯಾಸಗಳಿಗಾಗಿ ಮಾಡುವ ತಪಸ್ಸು.

**ಉತ್ತಮ ಮಾರ್ದವ** - ಜ್ಞಾನ, ಆದರ ಸತ್ಕಾರ, ಕುಲಜಾತಿ, ಬಲ, ೧೧ ೯

ಐಶ್ವರ್ಯ, ತಪ ಮತ್ತು ಶರೀರ ಸೌಂದರ್ಯ ಇವುಗಳ ಅಭಿಮಾನವಿಲ್ಲದೆ ಇರುವದು.

**ಉತ್ತಮ ಶೌಚ** - ಅತಿಶಯವಾದ ಲೋಭವನ್ನು ನಾಶಗೊಳಿಸುವುದು. ೧೧ ೧೧

**ಎಂಟು ಕರ್ಮ** - ಜೀವನನ್ನು ಪರತಂತ್ರಗೊಳಿಸುವ ಪಾಪ ಪುಣ್ಯಗಳು ೧ ೨
ಕರ್ಮಗಳು ಅವು ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ, ಆಯುಃಕರ್ಮ, ನಾಮಕರ್ಮ, ಗೋತ್ರಕರ್ಮ, ಅಂತರಾಯ ಕರ್ಮ, ದಾನ, ಲಾಭ, ಭೋಗ, ಉಪಭೋಗ, ಉಪಯೋಗಕ್ಕೆ ವಿಘ್ನಮಾಡುವ ಕರ್ಮ.

**ಎಂಟು ಗುಣ**-ಎಂಟು ಕರ್ಮಗಳ ನಾಶದಿಂದ ಜೀವನು ಶುದ್ಧನಾಗುತ್ತಾನೆ. ೧ ೨
ಆಗ ಜ್ಞಾನಾವರಣ ಕರ್ಮನಾಶದಿಂದ ಅನಂತ ಜ್ಞಾನ-ಕೇವಲ ಜ್ಞಾನವು ದೊರಕುತ್ತದೆ. ದರ್ಶನಾವರಣ ಕರ್ಮನಾಶದಿಂದ ಅನಂತದರ್ಶನಗುಣ. ವೇದನೀಯ ಕರ್ಮನಾಶದಿಂದ ಅವ್ಯಾಬಾಧಗುಣ, ಮೋಹನೀಯ ಕರ್ಮನಾಶದಿಂದ ಸಮ್ಯಕ್ತ್ವ. ಆಯುಃಕರ್ಮದ ನಾಶದಿಂದ ಅವಗಾಹನ ಗುಣ. ನಾಮಕರ್ಮದ ನಾಶದಿಂದ ಸೂಕ್ಷ್ಮತ್ವ ಗುಣವು, ಗೋತ್ರಕರ್ಮನಾಶದಿಂದ ಅಗುರುಲಘುತ್ವವು ಅಂತರಾಯ ಕರ್ಮನಾಶದಿಂದ ಅನಂತವೀರ್ಯವು ದೊರಕುತ್ತದೆ. ಇವು ಸಿದ್ಧರ ಗುಣಗಳು.

**ಕಷಾಯ** - ಕ್ರೋಧ. ಮಾನ, ಮಾಯ, ಲೋಭ ೧೧ ೧೩

**ಕಾಯಕ್ಲೇಶ** - ಜಿನಮಾರ್ಗವನ್ನು ಅನುಸರಿಸಿ ಅನೇಕ ಆಸನಗಳನ್ನು ಹಾಕಿ ೧೧ ೨೦
ತಪಸ್ಸು ಮಾಡುವದು

**ಕುಬೇರಯಕ್ಷ**- ಮಲ್ಲಿ ತೀರ್ಥಂಕರರ ಯಕ್ಷ ೧ ೮

**ಕೇವಲಿಗಳು**-ಜ್ಞಾನಾವರಣಾದಿ ಘಾತಿಕರ್ಮಗಳ ನಾಶದಿಂದ ಲೋಕಾಲೋಕ ೧ ೧೦
ಗಳನ್ನು ತಿಳಿಯುವ ಜ್ಞಾನ ಪಡೆದ ಮಹಾತ್ಮರು

**ಗರ್ಭಾವತರಣ**- ಜಿನಮಾತೆಯ ಗರ್ಭದಲ್ಲಿ ತೀರ್ಥಂಕರನ ಆಗಮನ ೧೧ ೪೭ವ

**ಗುಣಸ್ಥಾನ**-(೧೪) ಮಿಥ್ಯಾದೃಷ್ಟಿ, ಸಾಸಾದನ (ಅಂತಸ್ಸಮ್ಯಕ್ತ್ವ ಮಿಥ್ಯಾತ್ವ ೧೧ ೨೬
ಈ ಎರಡು ಇರುವ ಜೀವನು), ಮಿಶ್ರ (ವೀತರಾಗ ಸರ್ವಜ್ಞರಿಂದ ಹೇಳಲ್ಪಟ್ಟ ನಿಜಶುದ್ಧಾತ್ಮಾದಿ ತತ್ವವನ್ನು ತಿಳಿಯುವದು), ಅಸಂಯತ ಸಮ್ಯಗ್ದೃಷ್ಟಿ (ಆತ್ಮನಿಂದಾಪರನಾಗಿ ಇಂದ್ರಿಯ ಸುಖವನ್ನು ಅನುಭವಿಸುವಾತ), ಸಂಯತಾಸಂಯತ (ಪಂಚಾಣುವ್ರತಗಳನ್ನು ಆಚರಿಸುವ ಶ್ರಾವಕ), ಪ್ರಮತ್ತ ಸಂಯತ (ಮಹಾವ್ರತಗಳನ್ನು ಆಚರಿಸುವವ), ಅಪ್ರಮತ್ತ ಸಂಯತ (ಪ್ರಮಾದ ರಹಿತನಾಗಿ ಇರುವಂಥವನು), ಅಪೂರ್ವಕರಣ (ಕಷಾಯಗಳು ಮಂದವಾಗಿ ಅಪೂರ್ವಕರಣಭಾವಗಳಲ್ಲಿ ಔಪಷಮಿತವಾದ ಕ್ಷಪಕನಾಮವುಳ್ಳವನು), ಅನಿವೃತ್ತಿಕರಣ (೧೯ ಭೇದ ಭಿನ್ನ ಚಾರಿತ್ರ ಮೋಹ ಪ್ರಕೃತಿ ನಾಮ ಉಪಶಮಕ್ಷಪಣ ಸಮರ್ಥನಾದವನು

(ಸೂಕ್ಷ್ಮಲೋಭ) ಉಪಶಮ ಮತ್ತು ಕ್ಷಪಕವುಳ್ಳವನು) ಉಪಶಾಂತ (ಜ್ಞಾನ ಬಲದಿಂದ ಮೋಹವನ್ನು ಸಂಪೂರ್ಣವಾಗಿ ಉಪಶಾಂತ ಮಾಡಿದವನು), ಕ್ಷೀಣಕಷಾಯ (ಶುದ್ಧ ಆತ್ಮಬಲದಿಂದ ನಷ್ಟ ಕಷಾಯವುಳ್ಳವನು) ಸಂಯೋಗಕೇವಲಿ (ದ್ವಿತೀಯ ಶುಕ್ಲಧ್ಯಾನದಲ್ಲಿ ಇರುತ್ತ ಅಂತ್ಯಕಾಲದಲ್ಲಿ ಜ್ಞಾನಾವರಣ, ದರ್ಶನಾವರಣ, ಅಂತರಾಯ ಇವನ್ನು ಒಂದೇ ಕಾಲದಲ್ಲಿ ಸಂಪೂರ್ಣವಾಗಿ ಕಳೆದು ನಿರ್ಮಲವಾದ ಕೇವಲ ಜ್ಞಾನವೆಂಬ ಸೂರ್ಯಕಿರಣಗಳಿಂದ ಲೋಕಾಲೋಕ ಪ್ರಕಾಶರಾದವರು). ಆಯೋಗ ಕೇವಲಿ (-ಜಿನ ಎಂದರೆ ಮನ ವಚನ ಕಾಯ ಸಂಬಂಧಗಳಾದ ಕರ್ಮಗಳನ್ನು ಗ್ರಹಿಸಿರುವ ಸಯ್ಯೋಗಿಯ ಪರಿಸ್ಪಂದರೂಪವಾದ ಯೋಗದಿಂದ ದೋಷರಹಿತವಾಗಿ ೧೪ನೆಯ ಗುಣಸ್ಥಾನದಲ್ಲಿರುವವ).

**ಗುಪ್ತಿ**-೧) ಮನೋಗುಪ್ತಿ- (ಸುಖದುಃಖಗಳಿಗೆ ಅಮಿತವಾಗಿ ವಶನಾಗದೆ ಸಮತಾಭಾವವನ್ನು ಸರ್ವರಲ್ಲಿಯೂ ತೋರಿ ತನ್ನ ಆತ್ಮಕಲ್ಯಾಣವನ್ನು ನೆನೆಯುವುದು) ೨) ವಚನಗುಪ್ತಿ (ಮೌನದಿಂದಿರುವುದು ಅಥವಾ ಮಿತವಾಗಿ ಮಾತಾಡುವುದು) ೩) ಕಾಯಗುಪ್ತಿ (ಆಗಮಗಳಲ್ಲಿ ಆಪ್ತರು ಹೇಳಿರುವ ಆಚರಣೆಗಳನ್ನು ಆಚರಿಸುವುದು.) ೧೧ ೭

**ಚತುರ್ಗತಿ**-ದೇವಗತಿ, ನಾರಕಗತಿ, ಮನುಷ್ಯಗತಿ, ತಿರ್ಯಗ್ಗತಿ, ಈ ನಾಲ್ಕು ಗತಿಗಳ ಉದಯದಿಂದ ಜೀವನು ದೇವಾದಿ ಜನ್ಮ ಪಡೆಯುತ್ತಾನೆ. ೧ ೫೪

**ಚತುರ್ವಿಧ ದಾನ**-ಅಭಯ ದಾನ, ಶಾಸ್ತ್ರದಾನ, ಔಷಧ ದಾನ, ಆಹಾರ ದಾನ ೪ ೩೫

**ಚತುರ್ವಿಧ ವಿಕಲ್ಪಗಳು**-ದರ್ಶನ, ಜ್ಞಾನ, ಚಾರಿತ್ರ, ಉಪಚಾರ ೧೧ ೨೩ವ

**ಚೈತ್ಯಗೇಹ**-ಚೈತ್ಯಗೃಹ-ಬಸದಿ, ಇವು ಕೃತ್ರಿಮ ಅಕೃತ್ರಿಮ ಎಂದು ಎರಡು ವಿಧವಾಗಿವೆ. ಕುಲಪರ್ವತಗಳ ಮೇಲಿರುವ ಬಸದಿಗಳು ಬಹಳ ದೊಡ್ಡವು ಆಕೃತಿಮಗಳು ಆಗಿವೆ. ೨ ೨

**ಜನ್ಮಾಭಿಷವಣ**-ಜನ್ಮಾಭಿಷೇಕ-ಸೌಧರ್ಮೇಂದ್ರನು ದೇವತೆಗಳನ್ನು ಕೂಡಿಕೊಂಡು ಬಂದು ಜಿನ ಬಾಲಕನನ್ನು ಮೇರು ಪರ್ವತದ ಪಾಂಡುಕ ಶಿಲೆಯ ಮೇಲೆ ಒಯ್ದು ಅಭಿಷೇಕ ಮಾಡಿಸಿ; ಹೆಸರಿಟ್ಟು ತಿರುಗಿ ಜಿನಮಾತೆಯ ತೊಡೆಯ ಮೇಲೆ ಇಡುತ್ತಾನೆ. ೧೨ ೧೫ವ

**ಜಿನಪತಿ**-ಜಿನೇಂದ್ರ-ಜಿನೇಶ್ವರ ೧ ೪೧

**ಜಿನಪತಿ ಸಭೆ**-ಸಮವಸರಣ ೧ ೪೧

**ಜಿನಶಾಸನ ದೇವಿ**-ಯಕ್ಷಿಣಿ ೪ ೩೧

**ಜಿನಾಗಮ**-ಜಿನಶಾಸ್ತ್ರ ೧ ೪೦

**ತಿರ್ಯಕ್ ಜಾತಿ**-ಪಶು ಪರ್ಯಾಯದೊಳಗಿನ ಜೀವ ೧೦ ೭೫ ವ

**ತ್ರಸನಾಳ**-ರಸಜೀವಿಗಳ ಉತ್ಪತ್ತಿ ಸ್ಥಾನ ೧ ೫೭

**ತ್ರಿಪಲ್ಯೋಪಮ**-ಉತ್ತಮ ಭೋಗಭೂಮಿಜರ ಆಯುಷ್ಯವು ಮೂರು ೧೩ ೭೮
ಪಲ್ಯೋಪಮವಾಗಿರುತ್ತದೆ. ಪಲ್ಯವೆಂದರೆ ಎರಡು ಸಾವಿರ ಕ್ರೋಶ ಆಳವಾದ ವರ್ತುಲಾಕಾರದ ತಗ್ಗು ತೆಗೆದು ಕತ್ತರಿಯಿಂದ ಕತ್ತರಿಸಲ್ಬಾರದಷ್ಟು ಚೂರು ಮಾಡಿದ ಕುರಿಯ ಕೂದಲುಗಳನ್ನು ಅದರಲ್ಲಿ ತುಂಬಿ, ಆ ಕೂದಲ ಚೂರುಗಳನ್ನು ನೂರು ವರ್ಷಕ್ಕೆ ಒಂದೊಂದರಂತೆ ಹೊರದೆಗೆಯಬೇಕು. ಆ ಕೂದಲುಗಳನ್ನೆಲ್ಲ ಹೊರದೆಗೆಯಲು ಎಷ್ಟು ವರ್ಷಗಳು ಬೇಕಾಗುತ್ತವೆಯೊ ಅಷ್ಟು ಸಮಯಕ್ಕೆ ಒಂದು ವ್ಯವಹಾರ ಪಲ್ಯವೆನ್ನುತ್ತಾರೆ, ಇದರ ಅಸಂಖ್ಯಾತ ಗಣಿತವು ಉದ್ಧಾರ ಪಲ್ಯವು, ಉದ್ಧಾರ ಪಲ್ಯದ ಅಸಂಖ್ಯಾತ ಗಣಿತವು ಪಲ್ಯೋಪಮವು.

**ದಶಧರ್ಮಗಳು**-ಕ್ಷಮಾ ಮಾರ್ದವ ಆರ್ಜವ,ಶೌಚ, ಸತ್ಯ, ಸಂಯಮ, ೧೧ ೩೪
ತಪ, ತ್ಯಾಗ, ಆಕಿಂಚನ್ಯ, ಬ್ರಹ್ಮಚರ್ಯ

**ದಿವ್ಯಭಾಷಾ** : ದಿವ್ಯಧ್ವನಿ ಕೇವಲಜ್ಞಾನ ಉಂಟಾದ ಮೇಲೆ ತೀರ್ಥಂಕರರ ೧ ೧
ಮುಖದೊಳಗಿಂದ ಹುಟ್ಟುವ ಭಾಷೆಗೆ ದಿವ್ಯಧ್ವನಿ ಎನ್ನುತ್ತಾರೆ.

**ನವಪದಾರ್ಥ** : (ಸಪ್ತತತ್ವ+ಪಾಪ ಪುಣ್ಯ) ಸಪತತ್ವ ೧) ಜೀವ, ೧೪ ೪೨
೨) ಅಜೀವ೩) ಆಸ್ರವ. ೪) ಬಂಧ, ೫) ಸಂವರ, ೬) ನಿರ್ಜರಾ, ೭) ಮೋಕ್ಷ. ಇವುಗಳಲ್ಲಿ ಪಾಪ ಮತ್ತು ಪುಣ್ಯ ಇವು ಎರಡು ಕೂಡಿದರೆ ಒಂಬತ್ತು ಪದಾರ್ಥಗಳು

ನಿರ್ಜರೆ: ಬದ್ಧಕರ್ಮಗಳು ತುಸು ಉದಯವಾಗಿ ಉರುಳಿ ಹೋಗು ೧೪ ೫೩
ವುದು

**ಪಂಚಪದ** : ಪಂಚಪರಮೇಷ್ಠಿಗಳ ಮಂತ್ರಕ್ಕೆ ಪಂಚಪದವೆನ್ನುತ್ತಾರೆ. ೧೧ ೬

ಣಮೋ ಅರಹಂತಾಣಂ

ಣಮೋ ಸಿದ್ಧಾಣಂ

ಣಮೋ ಆಯರಿಯಾಣಂ

ಣಮೋ ಉವಜ್ಝಾಯಾಣಂ

ಣಮೋ ಲೋಏ ಸವ್ವ ಸಾಹೂಣಂ

**ಪಂಚಮಹಾವ್ರತ** : ಸಾಧುವು ಪಾಲಿಸಲು ಯೋಗ್ಯವಾದ ಅಹಿಂಸೆ, ಸತ್ಯ. ೧೧ ೭
ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳೆಂಬ ಐದು ವ್ರತಗಳು

**ಪಂಚಾಶ್ಚರ್ಯ**-ತಿರ್ಥಂಕರರಂಥ ಸತ್ಪಾತ್ರರಿಗೆ ಆಹಾರದಾನ ಮಾಡಿದಾಗ ೧೪ ೭
ದೇವರುಗಳು ಮಾಡುವ ೧) ದೇವದುಂದುಭಿ ೨) ರೈವೃಷ್ಟಿ ೩) ಸುರಭಿಶೀತಲ ವಾಯು ೪) ಕುಸುಮ ವೃಷ್ಟಿ ೫) ದಾನ, ದಾನಿ ಮತ್ತು ಪಾತ್ರಸ್ತುತಿ.

**ಪರಿನಿಷ್ಕ್ರಮಣಕಲ್ಯಾಣ**-ತೀರ್ಥಂಕರರು ದೀಕ್ಷೆ ತೆಗೆದುಕೊಳ್ಳುವುದಕ್ಕೆ ೧೩ ೧೩೦ವ
ವನಕ್ಕೆ ಹೋಗುವುದು ಪರಿನಿಷ್ಕ್ರಮಣವು. ಆ ಸಮಯದಲ್ಲಿ ದೇವತೆಗಳು
ಮಾಡುವ ಉತ್ಸವವು ಪರಿನಿಷ್ಕ್ರಮಣ ಕಲ್ಯಾಣವು.

**ಪರೀಷಹಗಳು**-ಹಸಿವು, ನೀರಡಿಕೆ, ಚಳಿ, ಬಿಸಿಲು ಮುಂತಾದ ಇಪ್ಪತ್ತೆರಡು ೧೧ ೩೪
ಉಪದ್ರವಗಳು.

**ಪುದ್ಗಲ**-ಸ್ಪರ್ಶ, ಸರ, ಗಂಧ, ವರ್ಣಗಳುಳ್ಳ ದ್ರವ್ಯ ೧ ೬೨

**ಪ್ರತಿಮಾಯೋಗ**-ಆಹಾರ ತ್ಯಾಗ ಮಾಡಿ ಒಂದು ವರ್ಷದವರೆಗೆ ಒಂದೇ ೪ ೩೩
ಸ್ಥಳದಲ್ಲಿ ನಿಂತುಕೊಂಡು ತಪಮಾಡುವುದು. ಅದರೊಳಗೆ ಅಭ್ರಾವಕಾಶಯೋಗ,
ಆತಾಪನಯೋಗ, ವರ್ಷಾಯೋಗವೆಂದು ಮೂರು ಭೇದಗಳಿವೆ.

**ಭವ್ಯ**-ಸಮ್ಯಕ್ ಜ್ಞಾನ, ಸಮ್ಯಕ್ ದರ್ಶನ, ಸಮ್ಯಕ್ ಚಾರಿತ್ರಗಳಿಂದ ೧ ೪೫
ಪರಿಣತನಾಗುವವನು.

**ಮೂವತ್ತಾಱು ಗುಣ** : ಆಚಾರ್ಯರ ಗುಣಗಳು ಮೂವತ್ತಾರು ಅನಶನಾದಿ ೧ ೨೧
೧೨ ತಪಗಳು, ಸಾಮಾಯಿಕ ಪ್ರತಿಕ್ರಮಣಾದಿ ೬ ಅವಶ್ಯಕಗಳು, ಉತ್ತಮಕ್ಷಮಾದಿ
೧೦ ಧರ್ಮಗಳು, ಜ್ಞಾನಾಚಾರಾದಿ ೫ ಆಚಾರಗಳು ಮತ್ತು ಮನೋಗುಪ್ತಿ ಆದಿ
ಮೂರು ಗುಪ್ತಿಗಳು ಇವೆಲ್ಲ ಕೂಡಿ ಆಚಾರ್ಯರ ೩೬ ಗುಣಗಳು ಆಗುತ್ತವೆ.

**ರಜ್ಜು**-ಜಗತ್‌ಶ್ರೇಣಿಯ ಏಳರಲ್ಲೊಂದು ಭಾಗಕ್ಕೆ ರಜ್ಜುವೆನ್ನುತ್ತಾರೆ. ಪಲ್ಯದ ೧ ೫೫
ಅರ್ಧಚ್ಛೇದಗಳಿಗೆ ಅಸಮಖ್ಯಾತಗಳಿಂದ ಭಾಗಿಸಲು ಬರುವ ಲಬ್ಧದಷ್ಟು
ಘನಾಂಗುಲಗಳನ್ನು ಬರೆದು ಪರಸ್ಪರ ಗುಣಾಕಾರ ಮಾಡಬೇಕು. ಹೀಗೆ
ಬಂದ ಗುಣಾಕಾರವು ಜಗತ್ ಶ್ರೇಣಿಯ ಅಳತೆ.

**ರತ್ನತ್ರಯ** - ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ. ಈ ೧ ೬
ಮೂರು ಗುಣಗಳು ಸರ್ವೋತ್ಕೃಷ್ಟವಾಗಿವೆ.

**ಲೇಶ್ಯ**-ಕೃಷ್ಣ. ನೀಲ, ಕಪೋತ, ಪೀತ, ಪದ್ಮ, ಶುಕ್ಲ ೧೩ ೯೪

**ವೀತರಾಗ**-ಎಲ್ಲ ಮೋಹಕರ್ಮಗಳು ನಾಶವಾಗಿರುವ ಅಥವಾ ಉಪಶಾಂತ ೧ ೩೯
ವಾಗಿರುವ ಯಥಾಖ್ಯಾತ ಚಾರಿತ್ರಧಾರಕರಾದ ಮತ್ತು ಕೇವಲ ಜ್ಞಾನವುಂಟಾಗದಿರುವ ಮುನಿಗಳು

**ವೃತ್ತಿಪರಿಸಂಖ್ಯಾನ** - ಈ ಹೊತ್ತು ಇಂಥವರು ಇಂಥಲ್ಲಿ ನಿಲ್ಲಿಸಿದರೆ ಮಾತ್ರ ೧೧ ೧೭
ಆಹಾರ ಸ್ವೀಕರಿಸುತ್ತೇನೆಂದು ನಿಯಮಮಾಡಿಕೊಂಡು. ಹಾಗೆ ನಿಲ್ಲಿಸಿದರೆ ಮಾತ್ರ
ಆಹಾರ ಸ್ವೀಕಾರ ಮಾಡುವುದು.

**ಶುಕ್ಲ ಧ್ಯಾನ** : ಅತ್ಯಂತ ನಿರ್ಮಲವಾದ ಧ್ಯಾನ ೧೧ ೩೬ವ

**ಶ್ರುತಸ್ಕಂದ**-ತೀರ್ಥಂಕರರ ದಿವ್ಯಧ್ವನಿಯನ್ನು ಹೃದಯದಲ್ಲಿ ಧರಿಸಿಕೊಂಡು ೧ ೫೨
ಗಣಧರರು ರಚಿಸಿದ ದ್ವಾದಶಾಂಗ ರೂಪದ ಸೂತ್ರಗಳಿಗೆ ಶ್ರುತಸ್ಕಂಧವೆನ್ನುತ್ತಾರೆ.

**ಷಡ್ರವ್ಯ**-ಜೀವದ್ರವ್ಯ, ಪುದ್ಗಲದ್ರವ್ಯ. ಧರ್ಮದ್ರವ್ಯ, ಅಧರ್ಮದ್ರವ್ಯ. ೧ ೫೬
ಆಕಾಶದ್ರವ್ಯ, ಕಾಲದ್ರವ್ಯ.

**ಷೋಡಶ ಕಲ್ಪ**-೧೬ ಸ್ವರ್ಗಗಳು, ಸೌಧರ್ಮ, ಈಶಾನ, ಸನತ್ಕುಮಾರ, ೧೨ ೫೮
ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಟ, ಶುಕ್ರ. ಮಹಾಶುಕ್ರ. ಶತಾರ,
ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ

**ಷೋಡಶ ಭಾವನೆ**-ತೀರ್ಥಂಕರ ನಾಮಕರ್ಮದ ಉದಯಕ್ಕೆ ಕಾರಣವಾದ ೧೧ ೩೫
೧೬ ಭಾವನೆಗಳನ್ನು ತಾಳುವುದು.

೧) **ದರ್ಶನವಿಶುದ್ಧಿ**-ಸಮ್ಯಗ್ ದರ್ಶನವನ್ನು ದೋಷರಹಿತವಾಗಿ ಪಾಲಿಸಲು ಸದಾ ಚಿಂತನೆ ಮಾಡುವುದು

೨) **ವಿನಯ ಸಂಪನ್ನತೆ**-ವಿನಯ ಭಾವನೆ

೩) **ಶೀಲೆಷ್ವೇನತಿಚಾರ**- ಅಹಿಂಸೆ ಮುಂತಾದ ಶೀಲವ್ರತಾದಿಗಳಲ್ಲಿ ದೋಷ ಬರದಂತೆ ಭಾವಿಸುವುದು.

೪) **ಅಭೀಕ್ಷ್ಣ ಜ್ಞಾನೋಪಯೋಗ**- ಪ್ರತಿಕ್ಷಣವೂ ಸಮ್ಯಗ್ ದರ್ಶನವನ್ನು ಭಾವಿಸುವುದು.

೫) **ಸಂವೇಗ**-ಧರ್ಮಾನುರಾಗ, ಸಂಸಾರ ಭೋಗಗಳಲ್ಲಿ ವೈರಾಗ್ಯ ತಾಳುವುದು.

೬) **ಶಕ್ತಿತಃ ತ್ಯಾಗ**-ಶಕ್ತಿಗೆ ತಕ್ಕ ತ್ಯಾಗ (ದಾನ) ಮಾಡುವುದು.

೭) **ಶಕ್ತಿತಃ ತಪ**-ಶಕ್ತಿಗೆ ತಕ್ಕ ತಪ ಮಾಡುವುದು.

೮) **ಸಾಧು ಸಮಾಧಿ**-ಸಾಧುಗಳಿಗೆ ಸಮಚಿತ್ತವನ್ನು ಒದಗಿಸುವುದು.

೯) **ವೈಯಾವೃತ್ಯಕರಣ**-ಗುಣವಂತರ ಕಷ್ಟಗಳನ್ನು ಪರಿಹರಿಸಿ ಸೇವೆ ಸಲ್ಲಿಸುವುದು.

೧೦) **ಅರ್ಹದ್ಭಕ್ತಿ**-ಅರ್ಹಂತರ ಗುಣಗಳನ್ನು ಸ್ಮರಿಸುವುದು, ಸ್ತುತಿಸುವುದು. ಪೂಜಿಸುವುದು.

೧೧) **ಆಚಾರ್ಯ ಭಕ್ತಿ**

೧೨) **ಉಪಾಧ್ಯಾಯ ಭಕ್ತಿ**

೧೩) **ಪ್ರವಚನ ಭಕ್ತಿ**-ಜಿನವಾಣಿಯಲ್ಲಿ ಭಕ್ತಿಯಿಟ್ಟು ಅದನ್ನು ತಿಳಿಯುವುದು.

೧೪) **ಆವಶ್ಯಕಾ ಪರಿಹಾಣಿ**-ಆರು ಆವಶ್ಯಕ ಕ್ರಿಯೆಗಳನ್ನು ಪಾಲಿಸುತ್ತಿರುವುದು. (ಮುನಿಗಳು-ಸಾಮಾಯಿಕ, ತೀರ್ಥಂಕರ ಸ್ತವನ, ಪಂಚಪರಮೇಷ್ಠಿವಂದನ, ಪ್ರತಿಕ್ರಮಣ,

ಪ್ರತ್ಯಾಖ್ಯಾನ ಕಾಯೋತ್ಸರ್ಗ; ಶ್ರಾವಕರು-ದೇವಪೂಜೆ, ಗುರುಭಕ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸು, ದಾನ.)

೧೫) **ಮಾರ್ಗಪ್ರಭಾವನೆ**-ಮೋಕ್ಷಮಾರ್ಗದ ವೃದ್ಧಿಯನ್ನು ಭಾವಿಸುವುದು.

೧೬) **ಪ್ರವಚನ ವಾತ್ಸಲ್ಯ**-ಸಧರ್ಮೀಯರಲ್ಲಿ ವಾತ್ಸಲ್ಯವಿಡುವದು.

**ಸಮವಸರಣ**-ತೀರ್ಥಂಕರರಿಗೆ ಕೇವಲ ಜ್ಞಾನ ಉಂಟಾದಾಗ ಧರ್ಮೋ- ೧೪ ೮೧ವ
ಪದೇಶಕ್ಕಾಗಿ ದೇವೇಂದ್ರನ ಅಪ್ಪಣೆಯಂತೆ ಕುಬೇರನಿಂದ ನಿರ್ಮಿಸಲ್ಪಟ್ಟ ಸಭೆ. ಈ ಸಮವಸರಣದಲ್ಲಿ ಮನುಷ್ಯರೂ, ದೇವತೆಗಳೂ ಎಲ್ಲ ಪ್ರಾಣಿಗಳೂ ಸೇರಿ ತೀರ್ಥಂಕರರ ದಿವ್ಯಬೋಧೆಯನ್ನು ಕೇಳುತ್ತಾರೆ. ವೈರಭಾವನೆ ನಾಶವಾಗಿ ಸರ್ವಪ್ರಾಣಿಮಾತ್ರಗಳಲ್ಲಿ ಪ್ರೇಮಭಾವನೆ ಉಕ್ಕುತ್ತದೆ. ದಿವ್ಯಧ್ವನಿ ಸಕಲ ಪ್ರಾಣಿ ಮಾತ್ರಗಳಿಗೂ ಅರ್ಥವಾಗುತ್ತದೆ.

**ಸಮಿತಿ(ಪಂಚ)**-ತನ್ನ ಶರೀರದಿಂದ ಬೇರೆ ಜೀವಗಳಿಗೆ ಪೀಡೆಯಾಗಬಾರ- ೧- ೯೨
ದೆಂದು ಎಚ್ಚರಿಕೆಯಿಂದ ಕ್ರಿಯೆಗಳನ್ನು ಮಾಡುವುದು ಸಮಿತಿಯು. ೧) ಈರ್ಯಾ-ಸಮಿತಿ - ನಡೆಯುವಾಗ ಜೀವಹಿಂಸೆಯಾಗದಂತೆ ಒಂದು ಮಾರು ದಾರಿಯನ್ನು ನೋಡುತ್ತ ನಡೆಯುವುದು. ೨) ಭಾಷಾಸಮಿತಿ- ತನಗೂ, ಪರರಿಗೂ ಹಿತಮಿತವಾದ ನಿರ್ದೋಷಯುಕ್ತವಾದ ಪ್ರಿಯ ವಚನಗಳನ್ನಾಡುವುದು. ೩) ಏಷಣಾ ಸಮಿತಿ-ದಾತೃಗಳು ವಿಧಿಪೂರ್ವಕವಾಗಿ ಕೊಡುವ ಆಹಾರವನ್ನು ಹರ್ಷ-ವಿಷಾದಗಳಿಲ್ಲದೆ ಸ್ವೀಕರಿಸುವುದು ೪) ಆದಾನ ನಿಕ್ಷೇಪ ಸಮಿತಿ-ಶರೀರ ಮತ್ತು ಪುಸ್ತಕ, ಕಮಂಡಲ ಮುಂತಾದವುಗಳನ್ನು ಇಡುವಾಗ ಹಿಂಸೆಯಾಗದಂತೆ ಪಿಂಛದಿಂದ ಸ್ವಚ್ಛಮಾಡಿ ತೆಗೆದುಕೊಳ್ಳುವುದು ೫) ಉತ್ಸರ್ಗಸಮಿತಿ-ಮಲಮೂತ್ರ ವಿಸರ್ಜನೆ ಮಾಡುವಾಗಲೂ ಜೀವಹಿಂಸೆಯಾಗದಂತೆ ದಕ್ಷತೆವಹಿಸುವುದು.

**ಸಂವರ** : ಜೀವನ ಗುಪ್ತಿ ಸಮಿತಿಗಳ ರೂಪ ಪರಿಣಾಮದಿಂದ ಜೀವನಲ್ಲಿ ೧೪ ೫೨
ಕರ್ಮಗಳು ಬೆರೆತುಕೊಳ್ಳುವುದಿಲ್ಲ. ಈ ಸ್ಥಿತಿಗೆ ಸಂವರವೆನ್ನುತ್ತಾರೆ.

**ಸಾಧುಗಳು** - ಎಲ್ಲ ಕರ್ಮಗಳನ್ನು ನಾಶಮಾಡುವುದಕ್ಕೆಂದು ಧ್ಯಾನಮಗ್ನ ೧ ೫
ನಾಗಿರುವ, ರತ್ನತ್ರಯವನ್ನು ಆರಾಧಿಸುವ ಮತ್ತು ಸಿದ್ಧಿಯನ್ನು ಸಾಧಿಸುತ್ತಿರುವ ಜಿನಮುನಿಗಳಿಗೆ ಸಾಧುಗಳೆನ್ನುತ್ತಾರೆ.

**ಸ್ಯಾದ್ವಾದ**-ಪದಾರ್ಥಗಳಿಗೆ ಅನೇಕ ಗುಣಗಳಿರುತ್ತವೆ. ಅವನ್ನು ಹಲವು ೧೧ ೧೨
ರೀತಿಯಲ್ಲಿ ವರ್ಣಿಸಬಹುದು. ಒಂದು ವಸ್ತುವನ್ನು ನಿರೂಪಿಸುವ ಎಲ್ಲ ರೀತಿಗಳನ್ನು ಎಣಿಸಿದರೆ ಅವು ಏಳು ಎಂದು ಕಂಡುಬರುವುದು. ಯಾವದೊಂದು ಗುಣವನ್ನು ಒಂದು ಪದಾರ್ಥದಲ್ಲಿ ಆರೋಪಿಸಲು ಆ ಪದಾರ್ಥವನ್ನು ಯಾವ ಏಳು ಪ್ರಕಾರದಿಂದ ನಿರೂಪಿಸಬಹುದೋ ಆ ಏಳು ಪ್ರಕಾರಗಳನ್ನೇ ಸಪ್ತಭಂಗಗಳೆಂದು ಹೇಳುವರು.

೧) ಸ್ಯಾದಸ್ತಿ. ೨) ಸ್ಯಾನ್ನಾಸ್ತಿ. ೩) ಸ್ಯಾದಸ್ತಿನಾಸ್ತಿ. ೪) ಸ್ಯಾದವಕ್ತವ್ಯಂ ೫) ಸ್ಯಾದಸ್ತ್ಯವಕ್ತವ್ಯಂ ೬) ಸ್ಯಾನ್ನಾಸ್ತ್ಯವಕ್ತವ್ಯಂ ೭) ಸ್ಯಾದಸ್ತಿನಾಸ್ತ್ಯವಕ್ತವ್ಯಂ ಎಂಬಿವು ಸಪ್ತ ಭಂಗಿಗಳು.

**ಸ್ವಾಧ್ಯಾಯ**-ಆತ್ಮಕಲ್ಯಾಣಕ್ಕಾಗಿ ಆಗಮಗಳ ಪಠಣ, ಮನನ ಮಾಡುವುದು. ೧ ೩

**ಹದಿನಾರು ಸ್ವಪ್ನಗಳು** - ಜಿನಮಾತೆಯು ಜಿನಗರ್ಭಾವತರಣ ೧೧ ೮೭
ಕನಸಿನಲ್ಲಿ ೧೬ ಸ್ವಪ್ನಗಳು ಕಾಣುತ್ತಾಳೆ. ಅವು ೧) ಐರಾವತ ೨) ಬಿಳಿ ಎತ್ತು
೩) ಸಿಂಹ ೪) ಲಕ್ಷ್ಮಿ ೫) ಎರಡು ಹೂವಿನ ಮಾಲೆಗಳು ೬) ಚಂದ್ರ
೭) ಸೂರ್ಯ ೮) ಎರಡು ಮೀನುಗಳು ೯) ಎರಡು ಕುಂಭಗಳು
೧೦) ಕಮಲಾಕರ ೧೧) ಸಮುದ್ರ ೧೨) ಸಿಂಹಾಸನ ೧೩) ದೇವ ವಿಮಾನ
೧೪) ನಾಗವಿಮಾನ ೧೫) ರತ್ನವೃಷ್ಟಿ ೧೬) ನಿರ್ಧೂಮ ಅಗ್ನಿ.

ಸಮಗ್ರ ಜೈನ ಸಾಹಿತ್ಯ



ಕನ್ನಡ ವಿಶ್ವವಿದ್ಯಾಲಯವು ಕರ್ನಾಟಕ ಸರಕಾರದ ಆರ್ಥಿಕ ನೆರವಿನಿಂದ ರೂಪಿಸಿ, ಪ್ರಕಟಿಸುತ್ತಿರುವ ಸಮಗ್ರ ಕನ್ನಡ ಜೈನಸಾಹಿತ್ಯ ಸಂಪುಟಗಳ ಯೋಜನೆಯು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಮಹತ್ವಪೂರ್ಣವಾದದ್ದು. ೨೦೦೬ರ ಶ್ರವಣಬೆಳಗೊಳದ ಐತಿಹಾಸಿಕ ಗೊಮ್ಮಟ ಮಹಾಮಸ್ತಕಾಭಿಷೇಕದ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ ಹಂಪಿಯು ಈ ಸಮಗ್ರ ಕನ್ನಡ ಜೈನಸಾಹಿತ್ಯ ಸಂಪುಟಗಳ ಯೋಜನೆಯನ್ನು ರೂಪಿಸಿ ಕರ್ನಾಟಕ ಸರಕಾರಕ್ಕೆ ಸಲ್ಲಿಸಿತು. ಕರ್ನಾಟಕ ಸರಕಾರವು ಈಗಾಗಲೇ ಸಮಗ್ರ ವಚನಸಾಹಿತ್ಯ ಮತ್ತು ದಾಸಸಾಹಿತ್ಯ ಸಂಪುಟಗಳನ್ನು ಹೊರತಂದಿದ್ದು, ಈಗ ಸಮಗ್ರ ಜೈನಸಾಹಿತ್ಯ ಸಂಪುಟಗಳ ಪ್ರಕಟಣೆಯ ಮೂಲಕ ಪ್ರಾಚೀನ ಕನ್ನಡ ಸಾಹಿತ್ಯದ ಬಹಳ ಮಹತ್ವದ ಶರೀರವೊಂದನ್ನು ಪೂರ್ಣಗೊಳಿಸುತ್ತಿದೆ. ಈ ಸಮಗ್ರ ಜೈನಸಾಹಿತ್ಯ ಸಂಪುಟದ ಯೋಜನೆಯನ್ನು ೨೦೦೬ರ ಶ್ರವಣಬೆಳಗೊಳದ ಮಹಾ ಮಸ್ತಕಾಭಿಷೇಕದ ಭಾಗವಾಗಿ ಕರ್ನಾಟಕ ಸರಕಾರ ಅಂಗೀಕರಿಸಿ ಸಾರಸ್ವತ ಮಹಾಮಸ್ತಕಾಭಿಷೇಕ ಮಾಡಿದ ಪುಣ್ಯಕ್ಕೆ ಪಾತ್ರವಾಗಿದೆ.

ಪ್ರಾಚೀನ ಕನ್ನಡ ಜೈನಕಾವ್ಯ ಪರಂಪರೆಯಲ್ಲಿ ನಾಗಚಂದ್ರನ ಮಲ್ಲಿನಾಥ ಪುರಾಣಂ ಮತ್ತು ರಾಮಚಂದ್ರ ಚರಿತ ಪುರಾಣಂ ಪಂಪನ ಕಾವ್ಯಮಾರ್ಗವನ್ನು ಪಾರ್ಶ್ವಿಕವಾಗಿ ಪಲ್ಲಟ ಮಾಡಿದ ರಚನೆಗಳು. ಜನಪದ ಪರಂಪರೆಯ ರಾಮಾಯಣದ ವಸ್ತುವನ್ನು ಒಪ್ಪಿಕೊಂಡೇ ವೈದಿಕ ರಾಮಾಯಣದ ಆಶಯವನ್ನು ನಿರಾಕರಿಸುವ ಪ್ರತಿರೋಧದ ಕಾರ್ಯತಂತ್ರವನ್ನು ಪಂಪರಾಮಾಯಣದಲ್ಲಿ ಗುರುತಿಸಬಹುದಾಗಿದೆ. ಪ್ರತಿವಾಸುದೇವನಾಗಿ ರಾವಣನನ್ನು ಸಚ್ಚಾರಿತ್ರ್ಯದ ಪಾತ್ರವನ್ನಾಗಿ ಕಲ್ಪಿಸಿ ಸಣ್ಣ ಲೋಪದಿಂದ ದುರಂತ ಸಂಭವಿಸುವ, ಕ್ಷಮೆ ಹಾಗೂ ಪ್ರಾಯಶ್ಚಿತ್ತದಿಂದ ಪರಿಶುದ್ಧವಾಗುವ ಜೈನದಾರ್ಶನಿಕತೆಯ ತತ್ತ್ವ ಇಲ್ಲಿ ಮುಖ್ಯವಾಗುತ್ತದೆ. ಒಂದರ್ಥದಲ್ಲಿ ರಾವಣನೇ ಹಂತಹಂತವಾಗಿ ಪರಿಪಕ್ವವಾಗುವ ಪರಿಕಲ್ಪನೆ ಜೈನಪುರಾಣಗಳ ಭವಾವಳಿಗಳ ಮಾದರಿಯನ್ನು ಹೊಂದಿದೆ. ಲೌಕಿಕ ಕಾವ್ಯಗಳ ರಾಗ, ದ್ವೇಷ, ಆಸೆ, ಪ್ರಾಯಶ್ಚಿತ್ತಗಳ ಮೂಲಕವೇ ಶಾಂತತೆಯ ಸ್ಥಿತಿಯೊಂದಕ್ಕೆ ತಲುಪುವ ಆದರ್ಶ ಈ ಕಾವ್ಯದಲ್ಲಿದೆ. ಹತ್ತೊಂಬತ್ತನೆಯ ತೀರ್ಥಂಕರನ ಕಥಾನಕವುಳ್ಳ ನಾಗಚಂದ್ರನ ಮಲ್ಲಿನಾಥ ಪುರಾಣಂ ಒಬ್ಬ ಜೈನಕವಿಯಾಗಿ ಮತ್ತು ಶಾಸ್ತ್ರಕವಿಯಾಗಿ ನಾಗಚಂದ್ರನ ಪಾಂಡಿತ್ಯದ ನಿರ್ಮಾಣವಾಗಿದೆ. ಜೈನಪುರಾಣ ಕಾವ್ಯದ ಎಲ್ಲ ಅವಯವಗಳನ್ನು ಅವಸ್ಥಾಂತರಗಳನ್ನು ಶ್ರದ್ಧೆ-ಭಕ್ತಿಗಳಿಂದ ಮೈಮರೆಸುವಂತೆ ವಿಸ್ತರಿಸುವ ಕಲೆಗಾರಿಕೆ ನಾಗಚಂದ್ರನಿಗೆ ಸಿದ್ಧಿಸಿದೆ. ಮಹಾಕಾವ್ಯವೊಂದರ ನಿರ್ಮಾಣದ ಸ್ಥೂಲ ಸಿದ್ಧ ಮಾದರಿಯನ್ನು ಇಟ್ಟುಕೊಂಡು ಅದರೊಳಗೆ ತನ್ನ ಅನನ್ಯವಾದ ಶೈಲಿಯನ್ನು ನಾಗಚಂದ್ರ ಆವಾಹನೆ ಮಾಡಿದ್ದಾನೆ.

ಡಾ. ಶಾಂತಿನಾಥ ದಿಬ್ಬದ ಅವರು ಉತ್ತಮ ಪ್ರಾಧ್ಯಾಪಕರು. ಹಳಗನ್ನಡ, ಅದರಲ್ಲೂ ಜೈನ ಸಾಹಿತ್ಯವನ್ನು ಕುರಿತು ವಿಶೇಷ ಒಲವು ಹೊಂದಿದವರು. ತಮ್ಮ 'ಪಂಪ : ಒಂದು ಸಾಂಸ್ಕೃತಿಕ ಅಧ್ಯಯನ', 'ವಾಗ್ದೇವಿ ಭಂಡಾರದ ಮುದ್ರೆ' 'ಆಗಮಿಕ', 'ಜೀವಪರ-ಜನಪರ' ಮೊದಲಾದ ಕೃತಿಗಳಿಂದ ವಿದ್ವಾಂಸ ವಲಯದಲ್ಲಿ ಗುರುತಿಸಲ್ಪಟ್ಟವರು. ನಾಗಚಂದ್ರನ ಮಲ್ಲಿನಾಥ ಪುರಾಣ ಮತ್ತು ರಾಮಚಂದ್ರ ಚರಿತ ಪುರಾಣಗಳ ಪೂರ್ಣ ಸಂಪಾದನೆಯ ಹಾಗೂ ಸಂಗ್ರಹ ಸಂಪಾದನೆಯ ಪತ್ರಗಳನ್ನು ಪರಿಶೀಲಿಸಿ ಮತ್ತು ನಾಗಚಂದ್ರನನ್ನು ಕುರಿತು ಈವರೆಗೆ ಬಂದಿರುವ ಸಂಶೋಧನೆಯ ಬರೆಹಗಳನ್ನು ಸಮಗ್ರವಾಗಿ ಅವಲೋಕಿಸಿ ವಿದ್ವತ್‌ಪೂರ್ಣವಾಗಿ ಈ ಎರಡು ಕಾವ್ಯಗಳನ್ನು ಸಂಪಾದಿಸಿದ್ದಾರೆ ಮತ್ತು ವಿಸ್ತೃತವಾದ ಅಧ್ಯಯನಪೂರ್ಣವಾದ ಪ್ರಸ್ತಾವನೆಯೊಂದಿಗೆ ನಾಗಚಂದ್ರ ಸಂಪುಟವನ್ನು ಸಿದ್ಧಪಡಿಸಿಕೊಟ್ಟಿದ್ದು ಅಭಿನಂದನೆಗೆ ಅರ್ಹರಾಗಿದ್ದಾರೆ. ಅವರಿಗೆ ಕನ್ನಡ ವಿಶ್ವವಿದ್ಯಾಲಯದ ಪರವಾಗಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಬಿ.ಎ. ವಿವೇಕ ರೈ
ಕುಲಪತಿ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ

